ನೆಮ್ಮದಿಯ ನಾಳೆ ನಮ್ಮದು

# ಹೊಸತು

ಜನವರಿ ೨೦೦೪
ಬೆಲೆ : ರೂ. ೨೫







ಹೊಸ ವರ್ಷದ
ಶುಭಾಶಯಗಳು

ಹೊಸ ವರುಷ ಹೊಸತು ವಾಚಕರಿಗೆ ಶಾಂತಿ, ನೆಮ್ಮದಿ ತರಲಿ

# ಡಾ। ಬಸವರಾಜ ನಾಗೂರ ಮೆಮೋರಿಯಲ್ ಎಜ್ಯುಕೇಷನ್ ಟ್ರಸ್ಟ್

## ವಿಜಾಪೂರ




ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ೨೦೦ ಹಾಸಿಗೆಗಳ ಸುಸಜ್ಜಿತ ಆಸ್ಪತ್ರೆ

ಸೌಲಭ್ಯಗಳು : ನ್ಯೂರೋ ಸರ್ಜರಿ, ಮೂತ್ರಪಿಂಡ (ಹರಳು) ಚಿಕಿತ್ಸೆ, ಪಂಚಕರ್ಮ ಚಿಕಿತ್ಸೆ

### ಆಡಳಿತ ಮಂಡಳಿ


ಡಾ|| ಕೆ. ಬಿ. ನಾಗೂರ (ಬಾಬು)
ಚೇರ್‌ಮನ್


ಶ್ರೀ ಬಿ. ಎ. ಪಾಟೀಲ
ಅಧ್ಯಕ್ಷರು


ಶ್ರೀ ಕೆ. ಬಿ. ತುಂಗಳ
ಕಾರ್ಯದರ್ಶಿ


ಶ್ರೀ ಎಂ. ಎಸ್. ಹುಲಮನಿ
ಸಹ ಕಾರ್ಯದರ್ಶಿ


ಶ್ರೀ ಎನ್. ಎಸ್. ಪಾಟೀಲ
ನಿರ್ದೇಶಕ


ಡಾ|| ಜಿ. ಎನ್. ಬಿರಾದಾರ್
ಆಡಳಿತಾಧಿಕಾರಿ

### ನಮ್ಮ ಹೆಮ್ಮೆಯ ವಿದ್ಯಾಸಂಸ್ಥೆಗಳು

1. ಡಾ|| ಬಸವರಾಜ ನಾಗೂರ ಮೆಮೋರಿಯಲ್ ರೂರಲ್ ಆಯುರ್ವೇದಿಕ್ ಮೆಡಿಕಲ್ ಕಾಲೇಜ್ ಆ್ಯಂಡ್ ಹಾಸ್ಪಿಟಲ್
2. ಶ್ರೀ ಮಲ್ಲಿಕಾರ್ಜುನ ಸ್ವಾಮೀಜಿ ಪೋಸ್ಟ್ ಗ್ರ್ಯಾಜುಯೇಟ್ ಆ್ಯಂಡ್ ರಿಸರ್ಚ್ ಸೆಂಟರ್
3. ಶ್ರೀಮತಿ ಸುಶೀಲಾದೇವಿ ನಾಗೂರ ಸ್ಕೂಲ್ ಆಫ್ ನರ್ಸಿಂಗ್
4. ಶ್ರೀ ಸಿದ್ದೇಶ್ವರ ಲಾ ಕಾಲೇಜ್
5. ಶ್ರೀ ಸಂಗಮೇಶ್ವರ ಪ್ರೈಮರಿ ಸ್ಕೂಲ್
6. ಶ್ರೀ ತುಳಜಾ ಭವಾನಿ ಕಾಲೇಜ್ ಆಫ್ ನರ್ಸಿಂಗ್

# ನಮ್ಮೆಲ್ಲ ಗ್ರಾಹಕರಿಗೆ ಹೊಸ ವರ್ಷದ ಹಾರ್ದಿಕ ಶುಭಾಷಯಗಳು



Rs. 60-00



Rs. 65-00



Rs. 40-00



Rs. 45-00



Rs. 25-00



Rs. 65-00



Rs. 80-00

## ನಮ್ಮ ಇತ್ತೀಚಿನ ಪ್ರಕಟಣೆಗಳು



Rs. 80-00

**ಪುಸ್ತಕ ಕೊಳ್ಳಿ !**
**ಪುಸ್ತಕ ಉಡುಗೊರೆಯಾಗಿ ನೀಡಿ !**
**ಓದುವ ಹವ್ಯಾಸ ಬೆಳೆಸಿ !**



Rs. 80-00

ಪುಸ್ತಕ ಪ್ರಿಯರಿಗೆ
ಸುಲಭ ಬೆಲೆಯ
ಉತ್ತಮ ಪುಸ್ತಕಗಳು

ಎನ್‌ಬಿಟಿ ಬುಕ್ ಕ್ಲಬ್
ಸದಸ್ಯರಾಗಿ 20%
ರಿಯಾಯಿತಿ ಪಡೆಯಿರಿ.
ವಿವರಗಳಿಗೆ ಸಂಪರ್ಕಿಸಿ



ರೂ. 65-00



Rs. 40-00

ನಿಮ್ಮ ಹತ್ತಿರದ ಪುಸ್ತಕ ವ್ಯಾಪಾರಿಗಳನ್ನು ಸಂದರ್ಶಿಸಿ ಅಥವಾ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ




**ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ**
ಹಾಲ್ ನಂ. 1, ಬಿ.ಡಿ.ಎ. ವಾಣಿಜ್ಯ ಸಂಕೀರ್ಣ, ಬನಶಂಕರಿ ಎರಡನೇ ಹಂತ
ಬೆಂಗಳೂರು - 560 070 ದೂರವಾಣಿ / ಫ್ಯಾಕ್ಸ್ : 6711994


ರೂ. 100-00



ರೂ. 75-00



Rs. 20-00



Rs. 30-00



Rs. 30-00



Rs. 35-00



ರೂ. 25-00

# ನಮ್ಮ ಕನ್ನಡ ಪ್ರಕಟಣೆಗಳು




ರೂ. 120




ರೂ. 30




ರೂ. 100




ರೂ. 50




ರೂ. 30




ರೂ. 40




ರೂ. 35



## ಸುರಾ ಬುಕ್ಸ್ ಪ್ರೈವೇಟ್ ಲಿಮಿಟೆಡ್
## ಸುರಾ ಕಾಲೇಜ್ ಆಫ್ ಕಾಂಪಿಟಿಶನ್

❑ ಚೆನ್ನೈ ❑ ಬೆಂಗಳೂರು ❑ ಕೊಲ್ಕತ್ತಾ

**SURA BOOKS PVT. LTD.,**

1620, 'J' BLOCK, 16TH MAIN ROAD, ANNA NAGAR, CHENNAI - 600 041

Phone : 044-26162173, 26161099 e-mail : surabooks@eth.net




ರೂ. 125

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಸಂಪುಟ-೫ ಸಂಚಿಕೆ - ೬ ಜನವರಿ ೨೦೦೪

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**

# ಸಂಪಾದಕೀಯ

ಇರಾನಿನ ಭೂಕಂಪದಲ್ಲಿ ಮಡಿದ ಸಹಸ್ರಾರು ಮಂದಿಯನ್ನು ನೆನೆದರೆ ಹೊಸವರ್ಷದ ಶುಭಾಶಯಗಳನ್ನು ಹೇಳಲು ಸಂಕೋಚವೆನಿಸುತ್ತದೆ. ವರ್ಷವು ಕೊನೆಗೊಳ್ಳುತ್ತಿದ್ದಂತೆ ಅನನ್ಯ ಕನ್ನಡ ಕವಿ ಕೆ. ಎಸ್. ನರಸಿಂಹಸ್ವಾಮಿ ತೀರಿಕೊಂಡಿದ್ದಾರೆ. ಅವರಿಗಾಗಿ 'ಹೊಸತು' ಕಂಬನಿ ಮಿಡಿಯುತ್ತದೆ.

ಪತ್ರಿಕೆಯ ನಾಲ್ಕನೆಯ ವಿಶೇಷಾಂಕವನ್ನು ಓದುಗರಿಗೆ ಸಮರ್ಪಿಸಲು 'ಹೊಸತು' ಹರ್ಷಿಸುತ್ತದೆ. ಹಿಂದಿನ ಸಂಚಿಕೆಗಳಂತೆ ಇದೂ ಮೆಚ್ಚುಗೆಗೆ ಪಾತ್ರವಾಗುತ್ತದೆಂದು ಆಶಿಸುತ್ತೇವೆ. ಮೌಲಿಕವಾದ ಅನೇಕ ಲೇಖನಗಳು, ಸಂದರ್ಶನಗಳು, ಕವಿತೆಗಳು ಹಾಗೂ ಕತೆಗಳು ಈ ಸಂಚಿಕೆಯಲ್ಲಿವೆ. ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಗತ್ಯವಾಗಿ ಆಗಬೇಕಾಗಿರುವ ಚರ್ಚೆ ಹಾಗೂ ಕ್ರಿಯೆಗಳಿಗೆ ಇವು ಸಾಮಗ್ರಿಯನ್ನೊದಗಿಸುತ್ತವೆಂಬ ಭಾವನೆ ನಮ್ಮದು. ಎಂದಿನಂತೆ ನಮ್ಮ ಲೇಖಕರು ಮತ್ತು ಜಾಹಿರಾತುದಾರರು ಅಪಾರ ಸಹಕಾರ ನೀಡಿದ್ದಾರೆ. ಅವರೆಲ್ಲರಿಗೆ ಹಾಗೂ ನಮ್ಮ ಓದುಗರ ಬಳಗಕ್ಕೆ ನಾವು ಕೃತಜ್ಞರಾಗಿದ್ದೇವೆ.

* * *

ಡಿಸೆಂಬರ್ ೮ ಮತ್ತು ಡಿಸೆಂಬರ್ ೨೮ ನಮ್ಮ ರಾಜ್ಯದ ಎರಡು ತೆರನಾದ ಮುಖಗಳನ್ನು ತೆರೆದಿಟ್ಟಿವೆ. ಅತ್ಯಂತ ಪ್ರಮುಖವಾದ ಒಂದು ವಿಚಾರ ಸಂಘರ್ಷ ಆ ಎರಡು ದಿನಗಳ ಘಟನೆಗಳಲ್ಲಿ ಮೂರ್ತೀಭವಿಸಿವೆ. ಸಾಂಕ್ರಾಮಿಕ ರೋಗದಂತೆ ಕೋಮುದ್ವೇಷ ಹರಡಲು ಒಂದು (ಅ) ವಿಚಾರವಾದರೆ, ಅದನ್ನು ಹಿಮ್ಮೆಟ್ಟಿಸಿ ಆರೋಗ್ಯಕರ ಮನಸ್ಸುಗಳ ನಿರ್ಮಾಣ ಇನ್ನೊಂದು ವಿಚಾರದ ಉದ್ದೇಶ. ಚಿಕ್ಕಮಗಳೂರಿನಲ್ಲಿ ಮತೀಯ ಭಾವನೆಗಳನ್ನು ಕೆರಳಿಸಿ ತನ್ನ ರಾಜಕೀಯ ಭವಿಷ್ಯವನ್ನು ರೂಪಿಸಿಕೊಳ್ಳಲು ಭಾರತೀಯ ಜನತಾ ಪಕ್ಷವು ಹಿಂದೆಂದಿಗಿಂತಲೂ ಪ್ರಚಂಡವಾದ ರೀತಿಯಲ್ಲಿ ಇಂದು ಯತ್ನಿಸುತ್ತಿದೆ. ದತ್ತಾತ್ರೇಯನ ಸ್ತೋತ್ರದಲ್ಲಿ ಅವನನ್ನು ಆದಿಗುರುವೆಂದು ಕರೆಯಲಾಗಿದೆ ಮತ್ತು ವಿವೇಕದ ಕಣ್ಣನ್ನು ತೆರೆಸಬೇಕೆಂದು ಪ್ರಾರ್ಥಿಸಲಾಗಿದೆ. ಅದನ್ನು ಕೇಳಿಸಿಕೊಳ್ಳಲು ದತ್ತಾತ್ರೇಯನಿಗೆ ಸಾಧ್ಯವಾಗದಷ್ಟು ಪ್ರಮಾಣದಲ್ಲಿ ಭಾಜಪದ ಅಂಗವಾದ ಬಜರಂಗದಳ ಬಾಬಾಬುಡನ್‌ಗಿರಿಯಲ್ಲಿ ಬೊಬ್ಬೆ ಹಾಕಿ ಡಿಸೆಂಬರ್ ೮ ನಮ್ಮ ಸಾಂಸ್ಕೃತಿಕ ಚರಿತ್ರೆಯಲ್ಲಿ ಒಂದು ಕೆಟ್ಟ ನೆನಪಾಗಿ ಉಳಿಯುವಂತೆ ಮಾಡುತ್ತಿರುವಾಗ ತಾವೇಕೆ ಹಿಂದುಳಿಯಬೇಕೆಂದು ನಮ್ಮ ರಾಜ್ಯದ ಭಾಜಪ-ವಿಶ್ವ ಹಿಂದು ಪರಿಷತ್ತು ಸಮರೋತ್ಸಾಹದಿಂದ ಬಾಬಾಬುಡನ್‌ಗಿರಿಗೆ ಬೆಂಕಿ ಹೊತ್ತಿಸುವ ಕೆಲಸದಲ್ಲಿ ಮಗ್ನರಾಗಿರುವುದು ಒಂದು ಕೇಡಿನ ಪ್ರಸಂಗ. ಅಂದು ಬಾಬಾಬುಡನ್‌ಗಿರಿಯಲ್ಲಿ ಬಜರಂಗಿಗಳು ಹಾಗೂ ಭಾಜಪ ನಾಯಕರು ಬಳಸಿದ ಭಾಷೆ ಮತ್ತು ಪ್ರಕಟಿಸಿದ ದ್ವೇಷದ ಭಾವನೆಗಳು ಯಾರಿಗೂ ಶೋಭಿಸುವಂಥದಲ್ಲ. ಆದರೂ ಅದಕ್ಕವರು 'ಶೋಭಾಯಾತ್ರೆ' ಎಂಬ ಹೆಸರು ಕೊಟ್ಟಿದ್ದರು. ನಿಜವಾಗಿಯೂ ಉಂಟಾದ್ದು ಕ್ಷೋಭೆ ಮಾತ್ರ. ಭಾರತೀಯ ಸಂಸ್ಕೃತಿಯ ಪ್ರತಿಪಾದಕನೆಂದು ತನ್ನನ್ನು ತಾನು ಬಣ್ಣಿಸಿಕೊಳ್ಳುವ ಭಾಜಪ ಎಂದಾದರೂ ಆತ್ಮಾವಲೋಕನದಲ್ಲಿ ತೊಡಗುತ್ತದೆಯೆಂದು ಆಶಿಸಬೇಕಾಗಿದೆ. 'ನಾಲಿಗೆ ಕತ್ತರಿಸುತ್ತೇವೆ', 'ಕೈಗಳನ್ನು ಮುರಿಯುತ್ತೇವೆ', 'ಕೆಲವು ಬುದ್ಧಿಜೀವಿಗಳು ಜನ್ಮ ತಾಳಿದ ಹಿನ್ನೆಲೆಯನ್ನು ಶೋಧಿಸಿ ತೆಗೆಯುತ್ತೇವೆ', 'ಮುಸಲ್ಮಾನರ ಅಂಗಡಿಗಳಿಗೆ ಹೋಗುವುದು ಅಕ್ಷಮ್ಯ', ಇತ್ಯಾದಿಯಾಗಿ ದೌರ್ಜನ್ಯದ ಕೆನ್ನಾಲಿಗೆ ಹರಿಯಬಿಟ್ಟವರು ದತ್ತಾತ್ರೇಯನಿಗೆ ಪೂಜೆ ಸಲ್ಲಿಸಲು ಭಕ್ತಿಭಾವದಿಂದ ತೆರಳಿದ್ದರೆಂದು ಯಾರು ತಾನೆ ನಂಬಲು ಸಾಧ್ಯ?



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೪೨೪೩೦೨

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





















# ಪರಿವಿಡಿ

# ಪರಿವಿಡಿ







ಮುಖಚಿತ್ರ : ಡಿ. ಟಿ. ಲೋಹಿತ್
*ವಿನ್ಯಾಸ :* ನವಕರ್ನಾಟಕ ವಿನ್ಯಾಸ
*ಒಳಚಿತ್ರಗಳು :* ಆರ್. ಎಂ. ಹಡಪದ್, ಸತೀಶ್ ಕುಮಾರ್
ಸತೀಶ್ ಯಲ್ಲಾಪುರ, ವಸಂತ ಹೊಸಬೆಟ್ಟು, ಶ್ರೀಹರಿ,
ರವಿಕುಮಾರ್ ಅಜ್ಜೀಪುರ, ಹರಿಣಿ, ಎನ್. ಆರ್. ಬೊಮ್ಮಳ್ಳಿ
*ಕಚೇರಿ ಸಹಕಾರ :* ಜಿ. ವಿ. ತೇಜೋವತಿ



















ಜಯಂತ ಕಾಯ್ಕಿಣಿಯವರ 'ಬೊಗಸೆಯಲ್ಲಿ ಮಳೆ' ನಿಜಕ್ಕೂ ಹೃದಯಕ್ಕೆ ತಟ್ಟುವ ಅಂಕಣ ಬರಹವಾಗಿದೆ. ಇನ್ನು ಕೆ. ಎಮ್. ವಿಜಯಲಕ್ಷ್ಮಿಯವರ 'ಇತಿಹಾಸದಲ್ಲಿ ಸ್ತ್ರೀಯ ಸ್ಥಾನಮಾನಗಳು': ಆಡಳಿತ, ಶಿಕ್ಷಣ, ಸಾಹಿತ್ಯ, ಸತಿ, ಬಹುಪತ್ನಿತ್ವ ಇಲ್ಲಿ ಹೇಗೆ ಹೆಣ್ಣಿನ ಬಳಕೆಯಾಗಿದೆ ಎಂದು ತಿಳಿಸಿದ್ದಾರೆ. ಓದಲೇಬೇಕಾದ್ದು ಮತ್ತು ತಿಳಿದುಕೊಳ್ಳಲೇಬೇಕಾದದ್ದು ಬಹಳಷ್ಟಿದೆ. ಗಣೇಶ ಹೊಸ್ಮನೆ, ನಾನು-ನೀವೆಲ್ಲ ಪದ್ಯ, ಮಾಲತಿ, ಎಸ್.ರವರ ಪದ್ಯವೂ ಉತ್ತಮವಾಗಿದ್ದು ಇವೆಲ್ಲಾ ಹೊಸತು ಪತ್ರಿಕೆಗೆ ಗರಿ ಮೂಡಿಸಿವೆ.

*ಕಡೂರು* — ***ಜಿ. ಎಚ್. ತ್ರಿವೇಣಿ ಶಿವಕುಮಾರ್***

ಹೌದು, ಬಂದಗದ್ದೆ ರಾಧಾಕೃಷ್ಣರ 'ಸುಖಸಂಸಾರ' ಕಿರು ಲೇಖನ ಓದಿದ್ಮೇಲೆ ಮನಸ್ ಚಿಂತನೆಗ್ಬಿತ್ತು; ಒಬ್ಬ ಹೆಂಡತಿಯೊಂದಿಗೆ ಮನುಜ ಸುಖವಾಗಿರಬಲ್ಲನೇ? ಅಥವಾ 'ಹೆಣ್ಣು' ಬರಿ 'ಆ' ದೃಷ್ಟಿಗಷ್ಟೇ ಸೀಮಿತವೇ? ಇಂಥಾ ತಾಕಲಾಟಗಳ ನಡುವೆ ಸಾಧ್ಯವೆಷ್ಟೋ ಅಷ್ಟು ದಿನ ಸುಖ ಅರಸಬಹುದೇ? ಬರೀ ಪ್ರಶ್ನಾಗೂಡಾದ ಈ ಸಂಸಾರದಲ್ಲಿ ಪ್ರಾಮಾಣಿಕತೆ ಮಾತ್ರ ನೈಜ ಸುಖ ನೀಡಬಲ್ಲದೇನೋ!?

*ಕಣವೆಬಿಳಚಿ* — ***ಸಂತೇಬೆನ್ನೂರು ಫೈಜ್ನಟ್ರಾಜ್***

ಡಿಸೆಂಬರ್ ತಿಂಗಳ 'ಹೊಸತು' ಸರ್ವಾಂಗ ಸುಂದರವಾಗಿ ಕಂಗೊಳಿಸಿತು. ಆಕರ್ಷಕ ಮುಖಚಿತ್ರ ಕಣ್ಣನ್ನ ಸೆಳೆಯಿತು. ಉತ್ತಮ ಲೇಖನಗಳು, ಮನಕ್ಕೆ ತಂಪೆರೆದ ಕಾವ್ಯಧಾರೆ... ಎಲ್ಲವೂ ಪುನಃ ಪುನಃ ಓದಿಸಿಕೊಂಡುವು. 'ತಿಳಿವು' ವಿಭಾಗದಲ್ಲಿ ಬಂದ 'ಆತ್ಮ ಪರಮಾತ್ಮ' ಚಿಂತನೆಗೆ ಗ್ರಾಸ ಒದಗಿಸಿತು. 'ಜೀವಿ ಕಂಡ ಅಮೆರಿಕಾ'ದ ಕುರಿತು ಓದಿದಾಗ ಆ ಪುಸ್ತಕವನ್ನು ಓದಲೇಬೇಕೆಂದೆನ್ನಿಸಿತು. ಒಟ್ಟಿನಲ್ಲಿ ಉತ್ತಮ ಸಂಚಿಕೆ. ಹೊಸವರ್ಷ ಎಲ್ಲರಿಗೂ ನೆಮ್ಮದಿಯನ್ನು ಹೊತ್ತು ತರಲಿ ಎಂದು ಆಶಿಸುತ್ತಾ –

*ಕಳನಾಡು* — ***ಮಾಲತಿ ಕಮಲಾಕ್ಷ***

'ಹೊಸತು' ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಪ್ರೊ|| ಬಿ. ಎಸ್. ಪಾಟೀಲರ ಜನಿವಾರ-ಉಡುದಾರ (ಅಥವಾ ಉಡಿದಾರ) ಶಿವದಾರಗಳ ವಿವರಣೆ ಸಮಂಜಸವೆನಿಸುತ್ತದೆ. ಈ ಮೂರನ್ನೂ ಒಟ್ಟಾಗಿ ಅದರಲ್ಲೂ, ಜನಿವಾರ-ಶಿವದಾರಗಳನ್ನು ಕುರಿತು ಮಾತಾಡುವಾಗ ಅಂತ್ಯಪ್ರಾಸವನ್ನು ಗಮನಿಸುತ್ತೇವೆಯೇ ಹೊರತು ವಾರ, ದಾರಗಳ ವ್ಯತ್ಯಾಸವನ್ನು ಗಮನಿಸುವುದಿಲ್ಲ. ಬಸವರಾಜ ಕಟ್ಟೀಮನಿಯವರು 'ಜನಿವಾರ-ಶಿವದಾರ' ಕಾದಂಬರಿಯಲ್ಲಿ ಬ್ರಾಹ್ಮಣ-ಲಿಂಗಾಯತ ಮತಗಳನ್ನು ಉದ್ದೇಶಿಸಿದರು. ಸಂದರ್ಶನಕ್ಕೆ ಹೋಗಿದ್ದ ಅಭ್ಯರ್ಥಿಯೊಬ್ಬನ ಹೆಗಲ ಮೇಲೆ ಎದ್ದು ಕಾಣುತ್ತಿದ್ದ ದಾರವನ್ನು ಗಮನಿಸಿದ ಸಂದರ್ಶಕ ಮಹಾಶಯರು 'ಬರಿಯ ದಾರವೋ ಭಾರವೂ ಉಂಟೋ?' ಎಂದು ಪ್ರಶ್ನಿಸಿದರಂತೆ. ಇದು ಹೇಗೂ ಇರಲಿ.

ಜನಿವಾರದ ಕಲ್ಪನೆ ಮೂಲತಃ ಚರ್ಮದ ಪಟ್ಟಿಯಿಂದ ಬಂದಿರಬೇಕೆಂಬುದಕ್ಕೆ ಈಗಲೂ ಬ್ರಾಹ್ಮಣ ವಟುವಿಗೆ ಉಪನಯನ ಕಾಲದಲ್ಲಿ – ಕಟ್ಟಾ ಸಂಪ್ರದಾಯಸ್ಥರಲ್ಲಿ ಉಪಾಕರ್ಮಗಳಲ್ಲಿ ಕೂಡ – ಮೂರೆಳೆದಾರದ ಜೊತೆಗೆ ಕೃಷ್ಣಾಜಿನ (ಜಿಂಕೆಯ ಚರ್ಮ)ವನ್ನೂ ಕಟ್ಟುವ ರೂಢಿಯಿರುವುದು ಮೇಲಿನ




ಅಭಿಪ್ರಾಯಕ್ಕೆ ಸಮರ್ಥನೆ ನೀಡುತ್ತದೆಯಲ್ಲವೆ?

*ಬೆಂಗಳೂರು* — ***ಕೆ. ಎಲ್. ಗೋಪಾಲಕೃಷ್ಣಯ್ಯ***

ತಮ್ಮ ಪತ್ರಿಕೆಯಲ್ಲಿ ಬಹಳ ಮೆಚ್ಚುಗೆಯಾದದ್ದು ತಮ್ಮ ಸಂಪಾದಕೀಯ. ಇಂದಿನ ವಿದ್ಯಮಾನಗಳ ಬಗ್ಗೆ ಬಹಳ ಸೂಕ್ಷ್ಮವಾಗಿ ವಿಶ್ಲೇಷಿಸುತ್ತಿದ್ದೀರಿ. ತಮ್ಮ ಪತ್ರಿಕೆ ಹೀಗೆಯೇ ಯಶಸ್ಸಿನ ಹಾದಿಯಲ್ಲಿ ಮುನ್ನಡೆಯಲಿ ಎಂದು ಆಶಿಸುತ್ತೇನೆ.

*ಬೆಂಗಳೂರು* — ***ಕೆ. ಎಸ್. ನೀಳಾ***

'ಹೊಸತು' ಗಮನಿಸುತ್ತಿದ್ದೇನೆ. ತುಂಬಾ ಗಂಭೀರವಾಗಿ ಮೂಡಿಬರುತ್ತಿದೆ. ಆದರೆ, ಪುಟಪುಟಕ್ಕೂ ಸಿದ್ಧಾಂತ, ವೈಚಾರಿಕತೆ, ಚರ್ಚೆ, ವಿಮರ್ಶೆ, ಎನ್ನುವಾಗ ನಮ್ಮಂಥ ಓದುಗನಿಗೆ 'ಇದೇನಪ್ಪ ಇಷ್ಟೊಂದು ಗಂಭೀರತೆ ಬೇಕಾ' ಎನ್ನಿಸುವುದುಂಟು. ಹಾಗೆಂದು ಧಾರಾವಾಹಿ ಪ್ರಕಟಿಸಿ ಎಂತಲ್ಲ ಓದುಗನಿಗೆ ನಡುವೆ ಸ್ವಲ್ಪ 'ಹಗುರತೆ' ಬೇಕೆನ್ನುವುದು ನನ್ನ ಅನಿಸಿಕೆ. ಅದು ನಿಮಗೆ ಗೊತ್ತಿಲ್ಲವೆಂತಲ್ಲ. ಪ್ರಯತ್ನಿಸಿ. ಯಾಕೆಂದರೆ ಉಂಡೆ ತೀರಾ ಗಟ್ಟಿಯಾದರೆ ತಿನ್ನುವುದು ಕಷ್ಟ, ಅರಗಿಸಿಕೊಳ್ಳುವುದೂ ಕಷ್ಟ.

*ಬೆಂಗಳೂರು* — ***ಕೆಂಡಗಣ್ಣ***

'ಕ್ಲೋನಿಂಗ್' ವಿಧಾನದಿಂದ ಒಂದು ಕುರಿಮರಿಯಂಥ ಪ್ರಾಣಿಯನ್ನು ಮಾತ್ರ ಸೃಷ್ಟಿ ಮಾಡಲಾಯಿತು ವಿನಹ ಆ ವಿಧಾನದಿಂದ ಈ ತನಕ ಮಾನವನ ಸೃಷ್ಟಿಯ ಬಗ್ಗೆ ಖಚಿತ ಮಾಹಿತಿ ಇಲ್ಲ ಎಂಬುದು ಸಿದ್ದರಾಜು ಕೊತ್ತತ್ತಿ ಇವರ ಲೇಖನದಲ್ಲಿ ಕಂಡುಬರುತ್ತಿರುವುದು ಗಮನಾರ್ಹ.

ಆಸ್ಟ್ರೇಲಿಯಾ ದೇಶದಲ್ಲಿ ಮನೆ ಮಾಡಿರುವ ಹಾವಿನ ಗಾತ್ರದ ಆ ಎರೆಹುಳಕ್ಕೆ ಕೃಷಿಪ್ರಧಾನವಾದ ನಮ್ಮ ನಾಡಿನಲ್ಲಿ ಆತಿಥ್ಯವನ್ನು ನೀಡಿ ಅದನ್ನು ಎರೆಗೊಬ್ಬರ ತಜ್ಞರಾದ ತಿಮ್ಮಯ್ಯರಂತಹ ರೈತರ ಗೆಳೆಯನನ್ನಾಗಿಸಬಹುದಲ್ಲವೇ!

*ಸುರತ್ಕಲ್* — ***ಟಿ. ಸಿ. ಶ್ರೀಯಾನ್***

ಡಿಸೆಂಬರ್ ೨೦೦೩ರ ವಿಶೇಷ ಲೇಖನ ''ಜಾತಿ ಪದ್ಧತಿಯು ಹಿಂದೂಧರ್ಮದ ಸ್ವಭಾವಜನ್ಯ ಭಾಗವೇ?'' (ಡಾ|| ಎಂ. ವಿ. ನಾಡಕರ್ಣಿ) ಸಕಾಲಿಕ, ವಿಚಾರ ಪ್ರಚೋದಕ. ಜಾತಿ ಪದ್ಧತಿಯು ನಮ್ಮ ವ್ಯವಸ್ಥೆಯ ನರನಾಡಿಗಳನ್ನೇ ಕಿತ್ತು ತಿನ್ನುತ್ತಿದೆ. ಆರ್ಥಿಕ ಬೆಳವಣಿಗೆಯಲ್ಲಿ ಅಡ್ಡಿಯೊಡ್ಡುತ್ತಿರುವ ಸಾಮಾಜಿಕ ಅಂಶಗಳಲ್ಲಿ ಈ ಮಹಾಮಾರಿಯದೆ ಕಾರುಬಾರು. ಬಿಲಿಯನ್ನುಗಟ್ಟಲೆ-ಟ್ರಿಲಿಯನ್ನುಗಟ್ಟಲೆ ಹಣ ಯೋಜನೆಗಳ ಮೂಲಕ ಹಣ ಹರಿದು ಹಳ್ಳ ಸೇರುತ್ತಿರುವುದು ಈ ಅನಿಷ್ಟ-ಅರಿಷ್ಟ ಪದ್ಧತಿಯಿಂದ. ಇದನ್ನು ಯಾವ ಶಾಸ್ತ್ರವೂ ಒಪ್ಪುವುದಿಲ್ಲ – ಪಟ್ಟಭದ್ರ ಹಿತಾಸಕ್ತಿಗಳ ''ಕಲ್ಪನೆಯ ಕೂಸು'' ಎನ್ನುವುದು ಸ್ಪಷ್ಟ. ಇದನ್ನರಿತೂ ಕೆಲ ಸ್ವಹಿತಾಸಕ್ತಿಯ ಶಕ್ತಿಗಳು ಇದನ್ನು ನಿರಂತರತೆಗೆ ಒಳಪಡಿಸಲು ಯತ್ನಿಸುತ್ತಿವೆ.

ವೈಜ್ಞಾನಿಕ ಮನೋಭಾವನೆ ಬೆಳೆಸುತ್ತಿರುವಲ್ಲಿ 'ಹೊಸತು' ಇಟ್ಟಿರುವ ನವೀನ ಹೆಜ್ಜೆ ಅಭಿನಂದನೀಯ.

*ಸೇಡಂ* — ***ಅಣ್ಣಾಸಾಗರ್ ಬಿ. ಆರ್.***

ಈ ದೇಶದ ಜನ ಮೂಢನಂಬಿಕೆಯ ಕತ್ತಲಲ್ಲಿ, ಶೋಷಣೆಯ ಬಲೆಯಲ್ಲಿ ಬದುಕಿ ಬಾಳಿದವರು. ಪುರೋಹಿತಶಾಹಿಗಳ ಧಾರ್ಮಿಕ ಜೈಲಿನ ಬಂಧಿಗಳು ಕಣ್ಣಪಟ್ಟಿಯಂತೆ ಕತ್ತಲಲ್ಲಿ ಸುಳಿದಾಡುವವರು. ಇಂಥ ಜನರಿಗೆ ಸೂರ್ಯಪ್ರಕಾಶ ಮತ್ತು ಜ್ಞಾನ ಅಲರ್ಜಿ, ವೈಜ್ಞಾನಿಕ ವಿಚಾರಗಳು ಹಿಡಿಸಲಾರವು. ಇಂಥ ಕತ್ತಲಲ್ಲಿ ಈ ವೈಚಾರಿಕ ಪತ್ರಿಕೆಯನ್ನು ಹೊರತಂದ ವ್ಯವಸ್ಥಾಪಕರು, ಸಂಪಾದಕರು, ಸಂಪಾದಕ ಮಂಡಲಿಯವರು, ಪ್ರಗತಿಪರ ಲೇಖಕರು ಶ್ರೇಷ್ಠತೆಯ ಮೊಟ್ಟ ಮೊದಲ ಸಾಲಿನವರು. ವೈಜ್ಞಾನಿಕ, ವೈಚಾರಿಕ ತಳಹದಿಯ ಮೇಲೆ ಜನ ಎದ್ದು ನಿಲ್ಲಬೇಕೆನ್ನುವ ಕಳಕಳಿಯ ಪತ್ರಿಕೆಗಳಲ್ಲಿ 'ಹೊಸತು' ಪತ್ರಿಕೆಯೇ ಮೊದಲು ಎನ್ನಬಹುದು. ಈ ಪತ್ರಿಕೆಯ ಬಳಗದಿಂದಲೇ ಪ್ರಗತಿಪರ ನಾಯಕನ ಉದಯವಾಗಬಹುದು. ಜನತೆ ಬೆಳಕು ಕಾಣಬಹುದು. ಅಲ್ಲಿಯ ತನಕ ನಮ್ಮ ಆತಂಕ ದೂರವಾಗುವುದಿಲ್ಲ. ಅಂಥ ಮನುಷ್ಯ ಬಂದಾಗ ಹೊಸತು ಮನುಷ್ಯ, ಹೊಸತು ಮನಸ್ಸು, ಹೊಸತು ಮನೆ, ಮನೆಮನೆಗೆ ಹೊಸತು ಪತ್ರಿಕೆ, ಎಲ್ಲೆಲ್ಲೂ ಹೊಸತು ಹೊಸತು.

*ಮುಧೋಳ* — ***ಮುತ್ತೂರ ಕೆ. ಡಿ.***

ಬಿ. ಎನ್. ನಾರಾಯಣ ಎಂಬ ಹೆಸರೂ ಇದ್ದ ನಮ್ಮ ನಾಣಿ - ಮೇಕಪ್ ನಾಣಿ - ಇತ್ತೀಚೆಗೆ ತೀರಿಹೋದನಲ್ಲವೆ? ನಟ, ನಾಟಕ - ಸಿನಿಮಾ, ಮೇಕಪ್, ಸುಚಿತ್ರ, ಬಿಎಲ್‌ಟಿಗಳು ಎಲ್ಲರಿಗೂ ತಿಳಿದುವೇ. ನಾಣಿ ತೀರಿಹೋದ ನಂತರ - ನಾಣಿಯ ದೇಹ ವೈದ್ಯಕೀಯ ವಿದ್ಯಾರ್ಥಿಗಳ ಶರೀರ ಶಾಸ್ತ್ರ, ಶರೀರ ಅಂಗಶಾಸ್ತ್ರಗಳ ಅಧ್ಯಯನಕ್ಕೆ ನೆರವಾಯಿತು. ಮನೆಯಲ್ಲಿ ('ಗ್ರೀನ್‌ರೂಂ'ನಲ್ಲಿ) ಯಾವ ಕರ್ಮಾಂತರವೂ ನಡೆಯಲಿಲ್ಲ. ನಾಣಿ ಇದ್ದ, ಈಗ ಇಲ್ಲ. ಮಿಕ್ಕ ಎಲ್ಲವೂ ಯಥಾಪ್ರಕಾರ. ಎಲ್ಲವೂ 'ನಾಣಿ' ಬಲು ಹಿಂದೆಯೇ ನಿರ್ಧರಿಸಿದ್ದಂತೆಯೇ. ಹೆಂಡತಿ ಭಾರ್ಗವಿ, ಮಕ್ಕಳು ಸುಜಾತ, ಸುಧಾ, ಪ್ರದೀಪ ಮತ್ತು ಪ್ರಕಾಶ - ನಿಷ್ಠೆಯಿಂದ ನಾಣಿಯ ಇಚ್ಛೆಯಂತೆ ನಡೆದುಕೊಂಡರು. ಮುಂದೆಯೂ ಹಾಗೆಯೇ... ಅವರು ಅಭಿನಂದನಾರ್ಹರು. ಅವರ 'ಧೃತಿ' ಅನುಕರಣೀಯ.

ಇದೇ ರೀತಿ ನ್ಯಾಯಮೂರ್ತಿ ಚಂದ್ರಶೇಖರ ಅವರ ಮನೆಯಲ್ಲೂ ನಡೆಯಿತೆಂದು ತಿಳಿದುಬಂದಿದೆ. ಆದರೆ ಎಷ್ಟೋ ಇತರ ಪ್ರಗತಿಪರ ನಾಯಕರ ನಂತರ, ಅವರ ಯೋಜನೆಗಳಿಗೆ, ನಿಲುವುಗಳಿಗೆ ಕುಟುಂಬದವರು ಅಪವಾದವಾಗಿ ನಡೆದುಕೊಂಡಿರುವುದು ಆ ನಾಯಕರ ದೌರ್ಭಾಗ್ಯ.

*ಬೆಂಗಳೂರು* — ***ಯು. ಎಸ್. ಶ್ರೀನಿವಾಸನ್***

**ತಿದ್ದುಪಡಿ**

ಕಳೆದ ಸಂಚಿಕೆಯಲ್ಲಿ ಪ್ರಕಟವಾಗಿದ್ದ ಶ್ರೀ ಸಿ. ಬಿ. ಮೋಟಯ್ಯನವರ ನಿಧನ ವಾರ್ತೆಯನ್ನು ೨೦ ಅಕ್ಟೋಬರ್ ೨೦೦೩ ಎಂದು ಓದಿಕೊಳ್ಳಬೇಕಾಗಿ ವಿನಂತಿ. ಪ್ರಮಾದಕ್ಕಾಗಿ ವಿಷಾದಿಸುತ್ತೇವೆ.

**– ಸಂಪಾದಕ**

# ಜಾಗತೀಕರಣ – ಭಾರತೀಯ ಸಾಂಸ್ಕೃತಿಕ ಸಂದರ್ಭ



## ಒಂದು ಚರ್ಚೆ

ಜಾಗತೀಕರಣ ಒಂದು ಪೆಡಂಭೂತದಂತೆ ಬಂದೆರಗಿತು. ಆರ್ಥಿಕ ಸಂಗತಿಗಳು, ವಾಣಿಜ್ಯ ಇವುಗಳ ಆಚೆಗೂ ಅದರ ಬಾಹುಗಳು ಚಾಚಿಕೊಳ್ಳುತ್ತಿವೆ. ನಮ್ಮ ಖಾಸಗಿ ಲೋಕ... ಒಳಜಗತ್ತನ್ನೂ ಅದು ಆಕ್ರಮಿಸುತ್ತಿದೆ. ಪ್ರತಿಯೊಂದು ರಾಷ್ಟ್ರಕ್ಕೆ ಅದರ ಒಳಗಿನ ಬೇರೆ ಬೇರೆ ಪ್ರದೇಶಗಳಿಗೆ ಅದರದೇ ಆದ ಸಂಸ್ಕೃತಿ ವೈಶಿಷ್ಟ್ಯ ಇರುತ್ತದೆ. ಅದು ತನ್ನ ಸಮಾಜ, ವ್ಯಕ್ತಿ, ಬದುಕನ್ನು ಶ್ರೀಮಂತವಾಗಿಡುವ ಶಕ್ತಿಯೂ ಹೌದು. ಆದರೆ ಜಾಗತೀಕರಣ ತರುತ್ತಿರುವ ಏಕರೂಪತೆ ಈ ಎಲ್ಲ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನೂ ತನ್ನೊಳಗೆ ಕರಗಿಹೋಗುವಂತೆ ಮಾಡುತ್ತಿದೆ. ಇದು ಏಕಕಾಲಕ್ಕೆ ನಮ್ಮ ಬದುಕಿನ ಸಂತೋಷವನ್ನು ಮತ್ತು ನಮ್ಮ ಮುಂದಿನ ಪೀಳಿಗೆಗೆ ಅಪರೂಪದ ಆಸ್ತಿಯಾಗಿ ಹರಿದು ಬರಬೇಕಾದ ಸಂಸ್ಕೃತಿಯನ್ನು ಮುಖಹೀನಗೊಳಿಸುತ್ತಿದೆ.

ಈಗ ನಮ್ಮ ಹೋರಾಟದ ಸ್ವರೂಪ ಬದಲಾಗಬೇಕಾಗಿದೆ. ಕಲೆಯ ಎಲ್ಲ ಪ್ರಕಾರಗಳೂ ತಕ್ಷಣದ ವಾಣಿಜ್ಯ-ಲಾಭದ ಆಕರ್ಷಣೆಗೆ ಒಡ್ಡಿಕೊಳ್ಳುವ ಮೂಲಕ ತನ್ನತನವನ್ನೇ ಕಳೆದುಕೊಳ್ಳುವ ಅಪಾಯವನ್ನು ಎಚ್ಚರದಿಂದ ಗುರುತಿಸಿಕೊಳ್ಳಬೇಕಾಗಿದೆ. ಭೋರ್ಗರೆದು ಬರುತ್ತಿರುವ ಹೊರಗಿನ ಗಾಳಿಯ ಜೊತೆ ತೂರಿಹೋಗುವ ಬದಲು ನಮ್ಮ ದೇಸೀಯ ಕಲೆಗಳನ್ನು ಅಸ್ತ್ರವಾಗಿಸಿಕೊಂಡು ಉತ್ತರಿಸಬೇಕಾಗಿದೆ. ಒಂದು ಅರ್ಥದಲ್ಲಿ ದೇಸೀಯತೆ ಎನ್ನುವುದೇ ಪ್ರತಿಭಟನೆ. ಆದರೆ ಇಂಥ ಪ್ರತಿಭಟನೆಯ ದಾರಿಯಲ್ಲೂ ಅನೇಕ ಪ್ರಶ್ನೆಗಳು ಏಳುತ್ತಿವೆ. ಮತ್ತು ಜಾಗತೀಕರಣ ಕೊಡಮಾಡುತ್ತದೆಂದು ಭಾವಿಸುವ 'ಸೌಲಭ್ಯ'ಗಳನ್ನು ಒಪ್ಪಿಕೊಳ್ಳಬೇಕೆನ್ನುವ, ಐತಿಹಾಸಿಕವಾದ ಕೆಲವು ಸಂಗತಿಗಳನ್ನು ಹೋಲಿಸುವ ಪ್ರತಿವಾದವೂ ನಮ್ಮ ಒಳಗಿನ ಲೋಕದಲ್ಲಿ ಹುಟ್ಟಿಕೊಳ್ಳುತ್ತಿದೆ. ಈ ಹಿನ್ನೆಲೆಯಲ್ಲಿ ನಾವು ಆಯ್ದುಕೊಳ್ಳುವ ಪರ್ಯಾಯ ಮಾರ್ಗಗಳು, ಅವು ಮುಂದುವರಿಯಬೇಕಾದ ಹಾದಿ ಕೂಡ ಸರಳವಾಗಿಲ್ಲ. ಭ್ರಮೆ-ವಾಸ್ತವಗಳ ಮಧ್ಯೆ ಸತ್ಯವನ್ನು ಹಿಡಿಯುವುದು ಕಷ್ಟವಾಗುತ್ತಿದೆ. ಒಂದು ವರ್ಗಕ್ಕೆ ಸತ್ಯವೆನ್ನಿಸಿದ್ದು ಇನ್ನೊಂದು ವರ್ಗಕ್ಕೆ ಹುಸಿ ಎನ್ನಿಸಿಬಿಡುತ್ತಿದೆ. ಜಾತಿ ವ್ಯವಸ್ಥೆಯೇ ಪ್ರಧಾನವಾಗಿ ಚಾಲನೆಯಲ್ಲಿರುವ ಭಾರತೀಯ ಸಂದರ್ಭದಲ್ಲಿ ಜಾಗತೀಕರಣದ ಪರಿಣಾಮ, ಅದನ್ನೆದುರಿಸುವ ಪರ್ಯಾಯ ಮಾರ್ಗಗಳು ಹೇಗಿರಬೇಕೆಂಬುದನ್ನು ಸರಳ ಸೂತ್ರದಲ್ಲಿ ಹಿಡಿದಿಡುವುದು ಅಸಾಧ್ಯ.

ಈ ಹಿನ್ನೆಲೆಯಲ್ಲಿ 'ಹೊಸತು' ವಿಶೇಷಾಂಕಕ್ಕೆಂದು ನಡೆಸಲಾದ ಚರ್ಚೆಯಲ್ಲಿ ರಂಗಭೂಮಿ, ಸಿನಿಮಾ, ಕಿರುತೆರೆ, ಚಿತ್ರಕಲೆ, ನೃತ್ಯ-ಸಂಗೀತ, ಸಮಾಜಸೇವೆ, ಸಾಹಿತ್ಯ, ವಿಮರ್ಶೆ ಮೊದಲಾದ ಹಲವು ಪ್ರಕಾರಗಳಲ್ಲಿ ಶ್ರಮಿಸುತ್ತಿರುವ ಮಾಧ್ಯಮ ತಜ್ಞರು ಭಾಗವಹಿಸಿದರು.

ಸಮಗ್ರ ಎನ್ನಲಾಗದಿದ್ದರೂ ಪರ್ಯಾಯ ಮಾರ್ಗದ ವಿವಿಧ ಮಗ್ಗುಲುಗಳನ್ನು ಕುರಿತು ಈ ಚರ್ಚೆ ಬೆಳಕು ಚೆಲ್ಲುತ್ತದೆ. ಇದು ಒಂದು ಮಾತ್ರ.... ಇಲ್ಲಿಂದಾಚೆಗೆ ಮತ್ತಷ್ಟು ವ್ಯಾಪಕವಾದ ಮುಕ್ತವಾದ ಚರ್ಚೆ ನಡೆಯಲಿ ಎಂಬುದು 'ಹೊಸತು' ಪತ್ರಿಕೆಯ ಆಶಯ.

ಚರ್ಚೆಯನ್ನು ಸಂಯೋಜಿಸಿ ನಡೆಸಿಕೊಟ್ಟವರು ಹಾಗೂ ಲೇಖನವನ್ನು ಸಿದ್ಧಗೊಳಿಸಿಕೊಟ್ಟವರು ಡಾ॥ ವಿಜಯಾ.

ಜಾಗತೀಕರಣದ ಹಿನ್ನೆಲೆಯಲ್ಲಿ ನಮ್ಮ ಸಾಂಸ್ಕೃತಿಕ ಸಂದರ್ಭ ಕುರಿತಂತೆ ಕೆಲವು ಮೂಲಭೂತ ಪ್ರಶ್ನೆಗಳಿಗೆ ಸಮಾಧಾನ ಕಂಡುಕೊಳ್ಳುವ ಪ್ರಯತ್ನವಾಗಿ ವಿವಿಧ ಮಾಧ್ಯಮಗಳ ತಜ್ಞರೊಂದಿಗೆ ಒಂದು ಚರ್ಚೆಯನ್ನು ಏರ್ಪಡಿಸಲಾಯಿತು. ಈ ಚರ್ಚೆಯಲ್ಲಿ ಭಾಗವಹಿಸಿದ್ದ ತಜ್ಞರು :

- **ಮನು ಚಕ್ರವರ್ತಿ** (ಕಲೆ - ಸಾಹಿತ್ಯ ವಿಮರ್ಶಕರು, ಪ್ರಾಧ್ಯಾಪಕರು)
- **ದೀಪಾ ಧನರಾಜ್** (ಸಮಾಜ ಸೇವೆಯಲ್ಲಿ ತೊಡಗಿಕೊಂಡವರು, ಅಭಿನೇತ್ರಿ, ಕಿರುಚಿತ್ರ ನಿರ್ಮಾಪಕಿ)
- **ರವಿಕುಮಾರ್ ಕಾಶಿ** (ಚಿತ್ರಕಲೆ, ವಿಮರ್ಶೆಯಲ್ಲಿ ಆಸಕ್ತರು, ಪ್ರಾಧ್ಯಾಪಕರು)
- **ಕೆ. ರಾಮಯ್ಯ** (ಪತ್ರಕರ್ತರು, ಕವಿ, ನಾಟಕಕಾರರು, ಕಿರುತೆರೆ, ಹಿರಿತೆರೆಗಳಿಗೆ ಸಾಹಿತ್ಯ ನಿರ್ವಹಿಸಿದವರು. 'ದಲಿತ ಲೇಖಕರು ಕಲಾವಿದರು ಬಳಗ'ದ ಮುಖ್ಯಸ್ಥರು, ಸಂಘಟಕರು)
- **ಗಿರೀಶ್ ಕಾಸರವಳ್ಳಿ** (ಚಲನಚಿತ್ರ ನಿರ್ದೇಶಕರು, ಪ್ರಗತಿಪರ ಚಿಂತಕರು)
- **ಸತ್ಯನಾರಾಯಣರಾವ್ ಅಣತಿ** (ಕವಿ, ನಿವೃತ್ತ ಪ್ರಾಧ್ಯಾಪಕರು)

ಅಲ್ಲದೆ 'ಹೊಸತು' ಪತ್ರಿಕೆಯ ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಡಾ|| ಎನ್. ಗಾಯತ್ರಿ ಹಾಗೂ ಪತ್ರಿಕೆಯ ಸಮಾಲೋಚಕ ಬಳಗದ ಡಾ|| ವಿಜಯಾ

ಚಿತ್ರಗಳು :: ಡಿ. ಸಿ. ನಾಗೇಶ್, ನೆರವು : ಬಿ. ಸುರೇಶ, ಡಾ|| ಕಶ್ಯಪ

**ಮನು ಚಕ್ರವರ್ತಿ** : ಒಂದು ಸ್ಪಷ್ಟನೆಯೊಂದಿಗೆ ನನ್ನ ವಾದವನ್ನು ನಿಮ್ಮ ಮುಂದೆ ಇಡಲು ಬಯಸುತ್ತೇನೆ. ಇತಿಹಾಸದ ಪ್ರವಾಹವನ್ನು ಗಟ್ಟಿಯಾಗಿ ಮುಖಾಮುಖಿ ಮಾಡಿ ಅನುಸಂಧಾನ ಮಾಡಿಕೊಳ್ಳಬಹುದೇ ಹೊರತು ತಡೆಗಟ್ಟಲಾಗುವುದಿಲ್ಲ. ಜಾಗತೀಕರಣದ ವಿಷಯದಲ್ಲೂ ಇದನ್ನು ಹೇಳಬೇಕು. ಜಾಗತೀಕರಣವನ್ನು ಸರಿ-ತಪ್ಪುಗಳ, ಬೇಕು-ಬೇಡಗಳ ನೆಲೆಗಳಲ್ಲಿ ಅರ್ಥ ಮಾಡಿಕೊಳ್ಳಲಾಗುವುದಿಲ್ಲ. ಆದ್ದರಿಂದ ಅದರ ಬಗ್ಗೆ ಪರ-ವಿರೋಧದ ಮಾತುಗಳು ಅಸಂಬದ್ಧವಾಗಿಬಿಡುತ್ತವೆ. ಅದನ್ನು ಹೇಳುತ್ತಲೇ ಜಾಗತೀಕರಣ ಉಂಟುಮಾಡಿರುವ ಪಲ್ಲಟಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳಲು ಬಯಸುತ್ತೇನೆ. ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳ ಬಗ್ಗೆ ಇತರರು ಮಾತನಾಡಲಿರುವುದರಿಂದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಆಗಿರುವ ಪರಿಣಾಮಗಳನ್ನು ಸಂಗೀತ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಚರ್ಚಿಸುತ್ತೇನೆ.

ಇಪ್ಪತ್ತು - ಮೂವತ್ತು ವರ್ಷಗಳ ಹಿಂದೆ ಭಾರತೀಯ ಸಂಗೀತ ಪರಂಪರೆಯಲ್ಲಿ (ಅಂದರೆ ಹಿಂದೂಸ್ಥಾನಿ ಮತ್ತು ಕರ್ನಾಟಕ ಪದ್ಧತಿಗಳು) ಬಹುಸ್ತರೀಯ ಬಹುಮುಖಿ ನೆಲೆಗಳನ್ನು, ಸಂಪ್ರದಾಯಗಳನ್ನು, ಮನೋಧರ್ಮಗಳನ್ನು ಅಭಿವ್ಯಕ್ತಿಗೊಳಿಸುತ್ತಿದ್ದವು. ಒಂದೇ ಪದ್ಧತಿಯೊಳಗೆ ವಿವಿಧ ರೀತಿಯ ಮನೋಧರ್ಮಗಳು ವ್ಯಕ್ತವಾಗುತ್ತಿದ್ದವು. ದೇಶದ ಮೂಲೆಗಳಲ್ಲಿ ಸಂಗೀತದ ಜಗತ್ತು ಅನಾವರಣಗೊಳ್ಳುತ್ತಿತ್ತು. ಸಂಗೀತದ ಆಯಾಮಗಳ ಬಗ್ಗೆ ಪ್ರೌಢ ಜಿಜ್ಞಾಸೆ ಆಯಾ ಸ್ಥಳಗಳಲ್ಲಿ ಆಗುತ್ತಿದ್ದವು. ಶ್ರೋತೃಗಳು, ವಿಮರ್ಶಕರು, ಮೀಮಾಂಸಕರು ಸಂಗೀತದ ಅನುಭವವನ್ನು ಅದು ಘಟಿಸುತ್ತಿದ್ದ ನಿರ್ದಿಷ್ಟ ಸ್ಥಳವನ್ನು ಹುಡುಕಿಕೊಂಡು ಹೋಗಿ ಪಡೆದುಕೊಳ್ಳುತ್ತಿದ್ದರು. ಅಂದರೆ, ಇವತ್ತಿನ ಅರ್ಥದ ಪ್ರಸಿದ್ಧಿ, ಖ್ಯಾತಿ ಅಥವಾ ಅಂತರರಾಷ್ಟ್ರೀಯ ನೆಲೆ ಮತ್ತು ಸನ್ಮಾನಗಳ ಅಗತ್ಯ ಆಗಿನ ಸಂಗೀತಗಾರರಿಗಾಗಲಿ, ಗುರುಗಳಿಗಾಗಲಿ ಇರಲಿಲ್ಲ. ಸಂಗೀತದ ಅನುಭವದ ರೂಪುರೇಷೆಗಳನ್ನು ನಿರ್ಧರಿಸುತ್ತಿದ್ದವರು ಅದನ್ನು ಕಠೋರವಾಗಿ ಅಭ್ಯಾಸ ಮಾಡಿದ ಸಂಗೀತಗಾರರೆ ಹೊರತು ಇತರರಲ್ಲ. ಮಾರುಕಟ್ಟೆಯ ಬೇಡಿಕೆ ಮತ್ತು ಪೂರೈಕೆಗಳ ನಿಯಮಗಳು ಕೆಲಸ ಮಾಡುತ್ತಿರಲಿಲ್ಲ. ಬೌದ್ಧಿಕ ಶಿಸ್ತು ಮತ್ತು ಕಠೋರತೆ ಸಂಗೀತದ ಮೌಲ್ಯವನ್ನು ನಿರ್ಧರಿಸುತ್ತಿದ್ದ ಕಾಲ ಅದು. ೧೯೬೦ರ ದಶಕದಲ್ಲೇ ವಿಶೇಷವಾಗಿ ರವಿಶಂಕರ್ ಮೂಲಕ ಒಂದು ರೀತಿಯ ಅಂತರರಾಷ್ಟ್ರೀಯತೆ ನಮ್ಮ ಸಂಗೀತ ಸಂಪ್ರದಾಯದೊಳಗೆ ಬರುವುದನ್ನು ಕಾಣಬಹುದು. ಪ್ರಯೋಗದ ಹೆಸರಿನಲ್ಲಿ ಶಿಸ್ತಿನ ಸಂಪ್ರದಾಯವು ಸಡಿಲವಾಗಿ ಪಾಶ್ಚಿಮಾತ್ಯರಿಗೆ ದಕ್ಕಬೇಕೆಂಬ ಏಕೈಕ ಉದ್ದೇಶದಿಂದ ತನ್ನ ಗಟ್ಟಿ ನೆಲೆಯನ್ನು ಕಳೆದುಕೊಂಡಿತು. ಒಂದು ರೀತಿಯ ಉಪಭೋಗವಾದ ಇಲ್ಲಿ ಕೆಲಸ ಮಾಡಿರುವುದನ್ನು ನಾವು ಗ್ರಹಿಸಬೇಕು. ಪ್ರಾಯೋಗಿಕ ಸಂಗೀತ ಎಂದು ಇದು ಗುರುತಿಸಲ್ಪಟ್ಟಿದ್ದರೆ ಅನಾಹುತವಾಗುತ್ತಿರಲಿಲ್ಲ. ಆದರೆ ಈ ಪ್ರಾಯೋಗಿಕ ಸಂಗೀತವೇ ಶಾಸ್ತ್ರೀಯ ಸಂಗೀತದ ಸ್ಥಾನವನ್ನು ಪಡೆದುಕೊಂಡದ್ದು ದುರಂತ. ಈ ಕಾರಣಕ್ಕಾಗಿಯೇ ಗಟ್ಟಿಯಾದ ಶಾಸ್ತ್ರೀಯ ನೆಲೆಯನ್ನು ಹಿಡಿದವರು ಮೂಲೆಗುಂಪಾದರು. ಅಷ್ಟೇ ಅಲ್ಲದೆ ಈ ರೀತಿಯ ಶಾಸ್ತ್ರೀಯ ನೆಲೆಯನ್ನು ಕಲ್ಪನಾರಹಿತವಾದದ್ದೆಂದು ಬಣ್ಣಿಸಲಾಯಿತು. ಇಲ್ಲೊಂದು ವಿಪರ್ಯಾಸವನ್ನು ಗಮನಿಸಲೇಬೇಕು. ಇಲ್ಲೊಂದು ಪ್ರಬಲವಾದ ಮಾರುಕಟ್ಟೆಯ ಅಧಿಕಾರದ ದರ್ಪವನ್ನೂ ಕಾಣಬಹುದು. ಸುಲಭವಾದ ಭಾರತೀಯ ಸಂಗೀತವನ್ನು ಆಮದು ಮಾಡಿಕೊಂಡ ಪಾಶ್ಚಿಮಾತ್ಯದ ಸಂವೇದನೆಯು ನಮ್ಮ ಗಟ್ಟಿ ಸಂವೇದನೆಯನ್ನೂ ಕೆಡಿಸಿತು. ಆದರೆ ತಮ್ಮ ಶಾಸ್ತ್ರೀಯ ಸಂಗೀತದ ಬಿಗಿಯನ್ನು ಕಠೋರತೆಯನ್ನು ಕೆಡಿಸಿಕೊಳ್ಳಲಿಲ್ಲ. ಬಿಟೊವನ್, ಬ್ರಾಮ್ಸ್ ಅಥವಾ ಬಾಕ್‌ನನ್ನು ಪ್ರಸ್ತುತಪಡಿಸುವಾಗ ಕಲ್ಪನೆಯಲ್ಲಾಗಲಿ, ಶಾಸ್ತ್ರದಲ್ಲಾಗಲಿ ತೀಕ್ಷ್ಣವಾದ ಮನೋಧರ್ಮವನ್ನು ನಾಶಮಾಡಿಕೊಳ್ಳಲಿಲ್ಲ. ಇವತ್ತಿಗೂ ಕೂಡ ಪಾಶ್ಚಿಮಾತ್ಯ ಶಾಸ್ತ್ರೀಯ ಸಂಗೀತ ತನ್ನ ಸಂಕೀರ್ಣತೆಯನ್ನು ಮಾರುಕಟ್ಟೆಯ ನಿಯಮಗಳಿಗಾಗಿ ಹಾಳುಮಾಡಿಕೊಂಡಿಲ್ಲ. ಆದರೆ ಜಾಗತೀಕರಣದ ಪ್ರಬಲವಾದ ಆರ್ಥಿಕ ನಿಯಮಗಳು ನಮ್ಮಂತಹ ಸಂಸ್ಕೃತಿಗಳ ಮೇಲೆ ಬೀರುವ ಕೆಟ್ಟ ಪ್ರಭಾವಕ್ಕೆ ಮೇಲಿನ ಸಂಗತಿ ಒಂದು ನಿದರ್ಶನ.

**ಗಿರೀಶ್ ಕಾಸರವಳ್ಳಿ** : ಯೂರೋಪಿನ ಕಲಾಶಾಲೆಗಳಲ್ಲಿ ಮಾನವಾಕೃತಿ ಸುಂದರವಾಗಿ ಇರಬೇಕಾದರೆ ಹೀಗೆ ಇಂತಿಂಥ ಅಳತೆಗಳಿರಬೇಕು ಅಂತ ಸೂತ್ರೀಕರಿಸಿ, ಅದನ್ನೇ ಜನಪ್ರಿಯಗೊಳಿಸಿದಾರೆ. ಕಲಾಶಾಲೆಗಳಲ್ಲಿ ಇವತ್ತಿಗೂ ಇದು ಆಚರಣೆಯಲಿದೆ. ಸೆನೆಗಲ್‌ನ ಖ್ಯಾತ ಸಿನಿಮಾ ನಿರ್ದೇಶಕ ಒಂದು ಕತೆ ಹೇಳುತ್ತಾನೆ: ಈ ವ್ಯಾಕರಣ ಕಲಿತು ಬಂದ ಒಬ್ಬ ಆಫ್ರಿಕನ್ ಕಲಾವಿದ ಚಿತ್ರಕ್ಕೆ ರೂಪದರ್ಶಿಯನ್ನು ಹುಡುಕಲಾರಂಭಿಸಿದ. ತನ್ನ ಊರಾದ ಸೆನೆಗಲ್‌ನಲ್ಲಿ ಸಿಗಲಿಲ್ಲ, ಪಕ್ಕದ ದೇಶಕ್ಕೆ ಹೋದ, ಇಡೀ ಆಫ್ರಿಕಾಖಂಡವನ್ನೇ ಸುತ್ತಿದ. ರೂಪದರ್ಶಿ ಸಿಗಲಿಲ್ಲ. ಆಗ ಅವನಿಗೆ ಈ ಸೂತ್ರ ಎಷ್ಟು ಅಪಾಯಕಾರಿ ಅಂತ ಅರ್ಥ ಆಯ್ತು. ಇಂಥ ಮಾನದಂಡ ಹಿಡಿದು ಹೊರಟರೆ ಆಫ್ರಿಕಾ ಖಂಡದಲ್ಲಿ ಸುಂದರಿಯರೇ ಇಲ್ಲ ಅಥವಾ ಸೌಂದರ್ಯವೇ ಇಲ್ಲ ಅಂತಾಗುತ್ತೆ. ಕಡೆಗೆ ಆ ಕಲಾವಿದ ಆ ಸೂತ್ರ ತಿರಸ್ಕರಿಸಿ ತನ್ನ ನೆಲಕ್ಕೆ ಹೊಂದುವ ಸೌಂದರ್ಯ ಸಿದ್ಧಾಂತ ಹುಡುಕಬೇಕಾದ ಅನಿವಾರ್ಯತೆ ಕಂಡುಕೊಂಡ. ಇವತ್ತು ನಮ್ಮ ಸಿನಿಮಾಗಳು ಒಂದು ರೀತಿಯ ಕಾರ್ಪೋರೇಟೈಜೇಷನ್‌ಗೆ ಒಳಗಾಗ್ತಾ ಇವೆ. ಹಾಗಾದಾಗ ಭಾರತದ ಲಕ್ಷಣ ತೀರ್ಮಾನಿಸೋರು ಬೇರೆ ಯಾರೋ ! ನಮ್ಮ ಕಲ್ಪನೆಯನ್ನೇ ನಿರಾಕರಿಸಿ ಅವರ ಕಲ್ಪನೆಗೆ ತಕ್ಕ ಹಾಗೆ ನಮ್ಮ ವಾಸ್ತವವನ್ನೂ ಬಿಂಬಿಸುವ ವೈಚಿತ್ರ್ಯ ಬಂದರೂ ಬರಬಹುದು. ತೃತೀಯ ಜಗತ್ತಿನ ಸಿನಿಮಾಗಳಿಗೆ ಇಂಥ – Co-productionನಿಂದಾಗಿ ಅಪಾಯ ಹೆಚ್ಚು. ೬೦ರ ದಶಕದವರೆಗೆ ಪ್ರತಿ ದೇಶದ ಸಿನಿಮಾಕ್ಕೂ ಪ್ರಾದೇಶಿಕವಾದ ಲಕ್ಷಣಗಳಿದ್ದವು. ಜಪಾನ್ ಸಿನಿಮಾಕ್ಕೆ ಅದರದ್ದೇ ಆದ ಅಭಿವ್ಯಕ್ತಿ ಇತ್ತು, ಫ್ರಾನ್ಸ್ ಸಿನಿಮಾಕ್ಕೆ ಅದರದ್ದೇ ಆದ ಲಕ್ಷಣವಿತ್ತು, ತೃತೀಯ ಜಗತ್ತಿಗೂ ಅದರದೇ ಆದ ರೂಪುರೇಖೆಗಳಿದ್ದವು. ಇವತ್ತು ಆ ಅಸ್ಮಿತೆ ಕಳಚಿ ಸಪಾಟಾದ ಒಂದು ರಚನಾಕ್ರಮ ಬರ್ತಾ ಇದೆ. ಅದನ್ನು ವಿರೋಧಿಸುವಂಥದ್ದನ್ನು ನಮ್ಮ ಸಂಸ್ಕೃತಿಯಲ್ಲಿ ಹುಡುಕೋದೂ ಕಷ್ಟ ಆಗ್ತದೆ. ಯಾಕೆಂದರೆ ಬಹುರಾಷ್ಟ್ರೀಯ ಬಂಡವಾಳದ ನಿರೀಕ್ಷೆಗೆ ತಕ್ಕಂತೆ ಸಿನಿಮಾ ಮಾಡಲು ಪ್ರೇರೇಪಿಸುವ ನಮ್ಮ ಸಂಸ್ಥೆಗಳು ನಮ್ಮ ಬದುಕಿನ ವೈಶಿಷ್ಟ್ಯಗಳನ್ನು ಹುಡುಕುವ ಕೆಲಸಕ್ಕೆ ತಡೆ ಮಾಡುತ್ತವೆ.

**ರವಿ ಕಾಶಿ:** ನಾನು ಎರಡು ವರ್ಷದ ಕೆಳಗೆ ಸ್ಕಾಟ್‌ಲ್ಯಾಂಡ್‌ನಲ್ಲಿ ಗ್ಲಾಸ್ಗೋಗೆ ಹೋದಾಗ ನನ್ನ ಚಿತ್ರಗಳನ್ನು ಸ್ಲೈಡ್‌ಗಳಲ್ಲಿ ಪ್ರದರ್ಶಿಸಿದ್ದೆ. ಚರ್ಚೆಯಲ್ಲಿ ಮುಖ್ಯವಾಗಿ ಎದ್ದ ಪ್ರಶ್ನೆ ಎಂದರೆ, ಇದೆಷ್ಟು ಭಾರತೀಯ ಅಂತ. ನನ್ನ ಚಿತ್ರಗಳಲ್ಲಿ ಅವರಿಗೆ ಭಾರತೀಯತೆ ಸಿಗಲಿಲ್ಲ.... ನನ್ನ ಚಿತ್ರಗಳಲ್ಲಿ ನಗರದ ಪ್ರತಿಮೆಗಳಿದ್ದವು. ನಾನು ನೋಡೋ ನಗರದಲ್ಲಿ ಕೋಕ್ ಇದೆ. ಪಾಪ್ ಇದೆ.... ಅವರಿಗೆ ಇನ್ನೂ ಭಾರತೀಯ ಹಳ್ಳಿಗಳ ಬಗ್ಗೆ ಏನೇನೋ ಕಲ್ಪನೆಗಳಿವೆ. ಇವತ್ತಿನ ಭಾರತದ ಹಳ್ಳೀನೇ ಬೇರೆ. ಕಡೆಗೆ ಭಾರತೀಯತೆ ಅನ್ನೋದನ್ನು ನಾನು ಬಳಸಿದ ತೀಕ್ಷ್ಣ ಬಣ್ಣಗಳಿಂದ ಕಂಡುಕೊಳ್ಳೋ ಪ್ರಯತ್ನಗಳಾದವು. ಭಾರತದಲ್ಲಿ ಏನಾಗ್ತಿದೆ ಅನ್ನೋದು ಅಲ್ಲಿಯವರಿಗೆ ತಿಳಿದಿಲ್ಲ ಏಕೆಂದರೆ ಅಲ್ಲಿಯ ಮಾಹಿತಿ ಇಲ್ಲಿಗೆ ಬರುತ್ತಿರುವ ಪ್ರಮಾಣದಲ್ಲಿ ಇಲ್ಲಿಯದು ಅಲ್ಲಿಗೆ ಹೋಗಿಲ್ಲ. ಗ್ಲಾಸ್ಗೋ ಲೈಬ್ರರಿಯಲ್ಲಿ ಭಾರತೀಯ ಚಿತ್ರಕಲೆ ಬಗ್ಗೆ ಹುಡುಕಾಡಿದರೆ ಕೇವಲ ಮೂರು ಪುಸ್ತಕ ಸಿಕ್ತು, ಅಮೇರಿಕನ್ ಆರ್ಟ್ ಬಿಟ್ಟು ಬೇರೆ ಕಲೆ ಬಗ್ಗೆ ಮಾಹಿತಿ ಇರಲಿಲ್ಲ. ಅಲ್ಲಿ ಮಾಹಿತಿ ಕೆಳಮುಖವಾಗಿ ಹರೀತಿದೆ, ಮೇಲಕ್ಕೇ ಹೋಗ್ತಿಲ್ಲ ಅನ್ನೋದನ್ನ ಗಮನಿಸಿ. ನಾನು ಭಾರತದಿಂದ ಹೋದ ನಮ್ಮ ಕಲಾವಿದರನ್ನ ಅಲ್ಲಿ ಭೇಟಿ ಆದೆ. ''ಇನ್ನು ನೂರು ವರ್ಷ ಇಲ್ಲೇ ಇದ್ದರೂ ನನಗೆ ಪ್ರಧಾನ ವಾಹಿನಿಯಲ್ಲಿ ಜಾಗ ಸಿಗೋದಿಲ್ಲ. ಅಪ್ಪಿತಪ್ಪಿ

ಸಿಕ್ಕರೂ ಭಾರತೀಯವಾಗಿ, ಭಾರತೀಯ ಅಂತ ನಮಗೆ ಪ್ರಾತಿನಿಧ್ಯ ಖಂಡಿತಾ ಸಿಗೋದಿಲ್ಲ'' ಅಂತಾರೆ. ಹನೀಶ್ ಕಪೂರ್ ಅಂತ ಒಬ್ಬ ಕಲಾವಿದ ಇದ್ದಾರೆ. ಅವರು ಬಿಂದು, ಶೂನ್ಯದ ಪರಿಕಲ್ಪನೆ ಇಟ್ಟುಕೊಂಡು ಕೆಲಸ ಮಾಡಿದಾರೆ. ಧ್ರುವ ಮಿಸ್ತ್ರಿ ಅನ್ನುವ ಕಲಾವಿದರು ನಮ್ಮ ಪುರಾಣಗಳನ್ನು ಇಟ್ಟುಕೊಂಡು ಕೆಲಸ ಮಾಡಿದಾರೆ. ಇವರನ್ನ ಬಿಟ್ರೆ ಬೇರೆ ಯಾವ ಭಾರತೀಯ ಕಲಾವಿದರನ್ನೂ ಅಲ್ಲಿಯವರು ಒಪ್ಪಿದಾರೆ ಅನ್ನಿಸಲಿಲ್ಲ ನನಗೆ. ಸೂಜ಼ಾ, ಅಕ್ಬರ್ ಪದಂಸಿ, ರಾಜಾ ಮೊದಲಾದೋರು ಬಹಳ ವರ್ಷದಿಂದ ಅಲ್ಲೇ ಕಳೆದರು. ಅವರ ಚಿತ್ರಗಳು ಅಲ್ಲಿಗಿಂತ ಇಲ್ಲೆ – ಭಾರತದಲ್ಲೇ – ಹೆಚ್ಚು ಗಮನ ಸೆಳೆದವು.

ಕ್ಲೆಮೆಂಟ್ ಅಂತ ಒಬ್ಬ ಕಲಾವಿದರು, ಇಲ್ಲಿ ಬಂದು ಮಹಾಬಲಿಪುರಂನಲ್ಲಿದ್ದು, ಸುಲಭವಾಗಿ ಸಿಗುವಂಥ ಭಾರತೀಯ ಇಮೇಜ್‌ನ ತಗೊಂಡು ಮಿನಿಯೇಚರ್ ಶೈಲಿಯಲ್ಲಿ ಒಂದು ದೊಡ್ಡ ಸೀರೀಸ್‌ನಲ್ಲಿ ಪ್ರದರ್ಶನ ಕೊಟ್ರು. ಅದೇ ನಾವು ಅಲ್ಲಿ ಹೋಗಿ ಬೇಗ ಸಿಗುವ ಸ್ಕಾಚ್ ವಿಸ್ಕಿ, ಬ್ಯಾಗ್ ಪೈಪರ್ ಥರದ ೩-೪ ಇಮೇಜಸ್ ಇಟ್ಟುಕೊಂಡು ಇದು ನನ್ನ ಅನುಭವ ಅಂತ ಪೈಂಟ್ ಮಾಡಿದರೆ ಅವರು ಖಂಡಿತ ಒಪ್ಪಿಕೊಳ್ಳೋದಿಲ್ಲ. 'ಬ್ಯಾಗ್ಸ್ ಫ್ರಂ ಇಂಡಿಯಾ' ಅಂತ ಒಂದು ಪ್ರದರ್ಶನ. ಅಲ್ಲಿ ನಮ್ಮ ದೇವರುಗಳು, ಹುಲಿ, ರಸ್ತೇಲಿ ನಿಂತಿರೋ ಹಸು ಇಂಥವೇ ಚಿತ್ರಗಳಿದ್ದವು. ಆರು ತಿಂಗಳು ಭಾರತದಲ್ಲಿದ್ದು, ತಾವು ಕಂಡಿದ್ದನ್ನು ಹೀಗೆ ತೋರಿಸಿದ್ದರು. ಇಂಥ ಮಿಸ್‌ಮ್ಯಾಚ್‌ಗಳೇ ಬಹಳ. ಇಪ್ಪತ್ತು ವರ್ಷದ ಹಿಂದೆ ಹೈದರಾಬಾದಿಗೆ ಹೋದರೆ ಬಳೆ ತರ್ತಿದ್ದೆವು. ರಾಜಾಸ್ಥಾನ್‌ಗೆ ಹೋದರೆ ಪ್ರಿಂಟೆಡ್ ಫ್ಯಾಬ್ರಿಕ್... ಹೀಗೆ ಒಂದು ವಿಶೇಷ, ವೈಶಿಷ್ಟ್ಯ ಇತ್ತು. ಆದರೆ ಈಗ ಎಲ್ಲಾನೂ ಎಲ್ಲಾ ಕಡೆ ಸಿಗುತ್ತೆ. ಜನಪದ ಕಲಾ ಪ್ರದರ್ಶನವಂತೂ ಕೇಳಲೇಬೇಡಿ. ಈಗ ಎಲ್ಲರಿಗೂ ಬನಸ್ಥಲಿ ಪೈಂಟಿಂಗ್, ಬಸ್ತಾರ್ ಶಿಲ್ಪ ಗೊತ್ತು! ಬಸ್ತಾರ್‌ನೋರೂ ಈಗ ತಮ್ಮ ಶಿಲ್ಪಕಲೆ ಬಿಟ್ಟು ನಮಗೆ ಬೇಕಾದ ಸುಂದರವಾದ ಆನೆಗಳನ್ನು ಮಾಡೋಕೆ ಪ್ರಾರಂಭಿಸಿದ್ದಾರೆ.

ನನಗೆ ಇದೇ ಹೊತ್ತಿನಲ್ಲಿ ಇನ್ನೊಂದು ಯೋಚನೆ ಬರ್ತಿದೆ.

ಬೌದ್ಧಮತದ ಪ್ರಾಬಲ್ಯ ಇದ್ದ ಕಾಲದಲ್ಲಿ ಅವರು ಆಫ್ಘಾನಿಸ್ಥಾನ, ಚೈನಾ, ಜಪಾನ್, ಮಲೇಷಿಯಾ ಮೊದಲಾದ ಕಡೆಗೆ ಹೋದರು. ಬರೀ ನಾಲ್ಕು ಮಂದಿ ಭಿಕ್ಷುಗಳು ಹೋದದ್ದಲ್ಲ. ಆ ಕಾಲಕ್ಕೆ ದಕ್ಷಿಣ ಭಾರತದ ರಾಜರುಗಳು ಅಲ್ಲಿ ಹೋಗಿ ರಾಜ್ಯಭಾರ ನಡೆಸಿದ್ದೂ ಇದೆ. ಅವರ ಜೊತೆಗೆ ಆ ಧರ್ಮ, ಬುದ್ಧಿಸ್ಟ್ ಐಕೊನೊಗ್ರಾಫಿ, ಕಥೆಗಳು ಎಲ್ಲವೂ ಹೋದವು. ಇವತ್ತು ನಾವು ಅಮೆರಿಕದ ಸಂಸ್ಕೃತಿ ಆಕ್ರಮಿಸ್ತಾ ಇದೆ ಅಂತಿದೀವಲ್ಲ, ಅಂಥ ಆತಂಕ ಅವತ್ತು ಆ ದೇಶಗಳಿಗೆ ಬುದ್ಧಿಸಂನಿಂದ ಎದುರಾಗಿತ್ತಾ? ಆದರೆ ಅದೆಲ್ಲ ನಿಧನಿಧಾನವಾಗಿ ನಡೆದದ್ದರಿಂದ ಹೊಂದಿಕೊಳ್ಳೋದಕ್ಕೆ ಅವರಿಗೆ ಸಮಯ ಸಿಕ್ಕಿರಬಹುದಾ ? ಆದರೆ ಇವತ್ತು ಈ ಬದಲಾವಣೆ ಎಷ್ಟು ವೇಗವಾಗಿ ಆಗ್ತಿದೆ ಅಂದ್ರೆ ಒಂದು ಗುಟುಕು ಗುಟುಕುವಷ್ಟರಲ್ಲಿ ಮೇಲೆ ಮತ್ತೊಂದು ಬರುತ್ತಿದೆ!

ಬೌದ್ಧಮತದಲ್ಲಿ ಆದ ಹಾಗೆ ಯಶಸ್ವೀ ಒಗ್ಗಿಕೊಳ್ಳುವ ಪ್ರಕ್ರಿಯೆ ಈ ಸಂದರ್ಭದಲ್ಲಿ ಆಗುವುದು ಕಷ್ಟ. ಅದು ನಮಗೆ ಬೇಕೇ ಬೇಡವೇ ಅನ್ನುವುದನ್ನ ನಾವೇ ತೀರ್ಮಾನಿಸುವುದು ನಮ್ಮ ಈ ಚರ್ಚೆಗಳಲ್ಲಿ ಮಾತ್ರ. ಆದರೆ ಬೇರೆ ಯಾರೋ ಆಗಲೇ ಅದಕ್ಕೆ ಒಪ್ಪಿಗೆಯ ಸಹಿ ಹಾಕಿಬಿಟ್ಟಿರ್ತಾರೆ !

**ಕೆ. ರಾಮಯ್ಯ:** ಜಾಗತೀಕರಣದಿಂದಾಗಿ ಆಗುತ್ತಿರುವ ಸಾಂಸ್ಕೃತಿಕ ಆಕ್ರಮಣ ಕುರಿತು ಯೋಚಿಸೋವಾಗ ನಾವು ಯಾವ ನೆಲೆಯಿಂದ ಯಾವ ದೃಷ್ಟಿಕೋನದಿಂದ ಮಾತಾಡುತ್ತೇವೆ, ಎಲ್ಲಿ ನಿಂತಿದ್ದೀವಿ ಅನ್ನೋದು ಮುಖ್ಯ. ನಮ್ಮ ಒಳಗಡೆಯಿಂದಲೇ ಇನ್ನೊಂದು ರೀತಿಯ ಸಾಂಸ್ಕೃತಿಕ ಆಕ್ರಮಣ ಆಗ್ತಾ ಇದೆ ಅನ್ನುವ ಕಡೆ ನಾವು ಲಕ್ಷ್ಯ ಕೊಡಬೇಕು. ಉದಾಹರಣೆಗೆ ಟೆಲಿವಿಷನ್‌ನಲ್ಲಿ ಜಾಹಿರಾತುಗಳು ಬರುತ್ತವೆ ಗಮನಿಸಿ.

ಒಬ್ಬ ಕುರುಡ. ಬಾಳೆಹಣ್ಣು ತಿಂದು ಸಿಪ್ಪೆ ಎಸೀಬೇಕು. ತಿಪ್ಪೆ ವಾಸನೆ ಬರೋ ಕಡೆ ಎಸಿಯೋಕೆ ಹೋದ. ಒಬ್ಬ ಮಧ್ಯಮ ವರ್ಗದ ಮಹಿಳೆ ತನ್ನ ಮೇಲೆ ಎಲ್ಲಿ ಎಸೀತಾನೊ ಅಂತ ಬೆಚ್ಚಿ ಏಳುತ್ತಾಳೆ. ಆಗ ಅವಳ ಕೈಗೆ ಒಂದು ಡಿಯೊಡ್ರೆಂಟ್ ಬಾಟಲ್ ಕೊಡ್ತಾರೆ. ಅಂದರೆ ಅವಳಿಂದ ಬೆವರಿನ ವಾಸನೆ ಬರ್ತಿದೆ. ಅದು ತಿಪ್ಪೆಥರಾ ವಾಸನೆ....

ಇನ್ನೊಂದು ಜಾಹಿರಾತಿನಲ್ಲಿ ವಿಮಾನದಲ್ಲಿ ಪ್ರಯಾಣ ಮಾಡ್ತಿದಾರೆ. ಪಕ್ಕದಲ್ಲಿರೋ ಹೆಂಗಸಿನ ಕಂಕುಳಿಂದ ಬೆವರಿನ ವಾಸನೆ. ಅವಳನ್ನು ಎತ್ತಿ ಎಸೆದು ಬಿಡ್ತಾರೆ.... ಮಧ್ಯದಲ್ಲೇ 'ಉಪಯೋಗಿಸು' ಅಂತ ಡಿಯೊಡ್ರೆಂಟ್ ಬಾಟ್ಲ ಕೊಡ್ತಾರೆ. ಇವೆಲ್ಲ ತಮಾಷೆಯಾಗಿ ಕಾಣ್ತವೆ. ಆದರೆ ಭಾರತದಲ್ಲಿ ಬೆವರಿಗೆ ಕೊಡೊ ಮರ್ಯಾದೇನೇ ಬೇರೆ. ಇದನ್ನು ಅವಮಾನ ಮಾಡ್ತಿದಾರೆ ಅನ್ನಿಸಲ್ವಾ ?... ಬೆವರಿಗೆ ನಾವು ಕೊಡೋ ಬೆಲೆ ಬಹಳ ಮಹತ್ವದ್ದು. ತಾಯಿಯೊಬ್ಬಳು ತನ್ನ ಮಗು ಯಾವುದು ಅಂತ ತಿಳಿಯದೇ ಹೋದಾಗ ಮಗುವಿನ ನೆತ್ತಿ ಮೂಸಿ ನೋಡಿ ತನ್ನ ಮಗು ಅಂತ ಗುರುತು ಹಿಡೀತಾಳಂತೆ... ಇಂಥ ದೊಡ್ಡ ಮೌಲ್ಯ ನಂಬಿಕೆ ನಮ್ಮ ಪರಂಪರೆಯಲ್ಲಿ ಇದೆ. ಆದರೆ ಆ ಜಾಹಿರಾತುಗಳು ಎಂಥ ಅವಮಾನ ಮಾಡ್ತಿವೆ ನೋಡಿ! ಅದರ ಪರಿಣಾಮ ಎಲ್ಲಿಗೆ ಬಂದು ನಿಲ್ಲುತ್ತೆ ಅಂದರೆ ನನ್ನ ಮಗಳು ಆ ಡಿಯೋಡ್ರೆಂಟ್ ತಂದು ಕೊಡು ಅಂತ ಹಟ ಮಾಡ್ತಾಳೆ. ಮಕ್ಕಳಿಗೆ ಬೆವರು ಬರೋದಿಲ್ಲ, ಮೈ ಕೊಳೆ ಆಗಲ್ಲ ಅಂತ ಹೇಳಿ ಸಮಾಧಾನ ಮಾಡ್ತೀನಿ... ಇದು ಈ ಪ್ರಧಾನವಾಹಿನಿ ತರ್ತಿರೊ 'ಸಂಸ್ಕೃತಿ'ಯ ಪ್ರಭಾವ. ನಮ್ಮ ಹತ್ತಿರ ಬಂಡವಾಳ ಇಲ್ಲ. ಅದರ ಪ್ರಭಾವಕ್ಕೆ ಹೆದರ್ತಿದೀವಿ.

ವಾಲ್ಟ್ ಡಿಸ್ನಿಯನ್ನು ಎದುರಿಸೋದು ಕಷ್ಟ. ಅಂಥದ್ದೇ ಒಂದು ಮಿಥ್‌ನ ಕಟ್ಟಿಕೊಡೋಕ್ಕೆ ನಮ್ಮ ಹತ್ರ ಅಷ್ಟು ದೊಡ್ಡ ಬಂಡವಾಳ ಇಲ್ಲ. ಫ್ಯಾಂಟಮ್‌ನಂಥ ಕುರೂಪಿಯಾದ ಮಿಥ್ ನಮ್ಮ ಮುಂದೆ ಇಟ್ಟಿದಾರೆ. ಅದರ ಉಡುಪು ವಿನ್ಯಾಸ, ಉಗ್ರತೆ, ಅದು ಪ್ರತಿಪಾದಿಸುವ ಹಿಂಸೆ, ಹೇಳುತ್ತಿರೋ ವರ್ಣಭೇದ ನೀತಿ.... ಇದನ್ನೆಲ್ಲ ನಮ್ಮ ಮಕ್ಕಳು ಒಪ್ಪಿಕೊಂಡು ಬಿಡುತ್ತಾರೆ. ಅವರನ್ನೆಲ್ಲ ಸರಿಯಾದ ರೀತೀಲಿ ತಲುಪುವಂಥಾ ವಾಣಿಜ್ಯ-ಆರ್ಥಿಕ ಸೌಲಭ್ಯ ಅವರಿಗಿದೆ.

ನಮ್ಮಲ್ಲಿಯೂ ಅನೇಕ ಪ್ರತಿಮೆಗಳಿವೆ. 'ರಾಗಿ ಬೋರ' ಒಂದು ಜನಪದ ಪ್ರತಿಮೆ. ಜನಪದ ನಾಯಕ ಅವನು. ಆಲದ ಮರದಷ್ಟು ಎತ್ತರ ಇದಾನೆ. ಅವನ ಗಡ್ಡದಲ್ಲಿ ಹಕ್ಕಿಗಳು ಗೂಡು ಕಟ್ಟಿಕೊಳ್ತಾವೆ, ಮೊಟ್ಟೆ ಇಡುತ್ತವೆ. ಇದೆಂಥ ಜೀವಪರವಾದ ಇಮೇಜ್... ಇದಕ್ಕೆಂಥ ಶಕ್ತಿ ಇದೆ ಅಂತ ಹೇಳೋದಿಕ್ಕೆ ಕೂಡ ಸಾಧ್ಯ ಆಗುತ್ತಿಲ್ಲ. ಆ ಬಂಡವಾಳ ನಮಗಿಲ್ಲ. ಪರ್ಯಾಯ ಕಟ್ಟಿಕೊಡಲಾರದಂಥ ದಯನೀಯ ಸ್ಥಿತಿ. ಕಿರುತೆರೆಯಿಂದ ಬರ್ತಿರೋ ಅಪಾಯಗಳೇನೂ ಕಡಿಮೆಯವಲ್ಲ. ಇದುವರೆಗೆ ಪತ್ರಿಕೆಗಳಿದ್ದವು. ಅಕ್ಷರಸ್ಥರನ್ನು ಮಾತ್ರ ತಲಪಿದವು. ಓದುಗರಿಗೆ ವಿವೇಚನೆ ಇತ್ತು, ತರತಮ ಜ್ಞಾನ ಇತ್ತು. ಅಲ್ಲಿ ಆ ಸ್ಪೇಸ್ ಇತ್ತು. ಅವರು ನಿರ್ಧಾರ ತಗೋಬಲ್ಲವರಾಗಿದ್ದರು. ಸಿನಿಮಾ ಕೂಡಾ ದುಡ್ಡಿದ್ದವರಿಗೆ ಮಾತ್ರ ಇತ್ತು. ಈಗ ಹಾಗಲ್ಲ. ಕಿರುತೆರೆ ನಡುಮನೇಲಿ ಕೂತಿದೆ. ೩೬೫ ದಿವಸವೂ ಮನಸ್ಸುಗಳನ್ನು ಆಳುತ್ತಾ ಇರಬಲ್ಲುದು. ಅದೊಂದು ಹೇರಿಕೆ. ಇಲ್ಲಿ ತಮ್ಮನ್ನೇ ತಾವು ಕೀಳು ಮಾಡಿಕೊಳ್ಳುವಂತಹ ಇಮೇಜ್‌ಗೆ ಆದ್ಯತೆ. ನಮ್ಮತನ, ನಮ್ಮ ಬದುಕು ಅಲ್ಲಿ ಇಲ್ಲ. ನಿರ್ದಿಷ್ಟವಾದ ನೆನಪುಗಳನ್ನು ಕಿತ್ತು ಹಾಕುವುದೇ ಅದರ ಮುಖ್ಯ ಗುರಿ. ನಿಮ್ಮ ನೆನಪಲ್ಲಿ ಅಜ್ಜಿ ಮಾಡಿದ್ದ ಹುರುಳಿಸಾರು ನೆನಪಿದ್ರೂ ಸಾಕು, ಚಿಕ್ಕಂದಿನ ಕೌದಿಯ ವಾಸನೆಯ ನೆನಪಿದ್ರೂ ಸಾಕು. ಆದರೆ ಆ ನೆನಪುಗಳನ್ನು ಕಿತ್ತುಹಾಕದೆ ಇವರ ಪಿಜ್ಜಾ ಮಾರಾಟ ಆಗಲ್ಲ; ರಜಾಯ್ ಮಾರೋಕಾಗಲ್ಲ... ಇಂಥದರ ವಿರುದ್ಧ ನಮ್ಮ ನೆನಪುಗಳನ್ನು ಚಿಗುರಿಸಬೇಕು. ಅದಕ್ಕೆ ನಾವೇನು ಮಾಡಬೇಕು ಅನ್ನುವುದೇ ಸವಾಲು !

ಕೋಡಿಹಳ್ಳಿ ಶಿವರಾಮನ ಹಳ್ಳಿಗೆ ಹೋಗಿದ್ದೆ. ಕೂಲಿ ಮಾಡುತ್ತಿದ್ದ ರೈತರೆಲ್ಲ ನಾಲ್ಕು ಗಂಟೆಗೆ ಕೆಲಸದಿಂದ ಹೊರಟು

ಬರ್ತೋರು. ''ಎಲ್ಲಿಗೋ ?'' ಅಂದರೆ 'ಮಾಯಾಮೃಗ' ನೋಡಕ್ಕೆ ಅನ್ನೋರು. ನನಗೆ ಅದು ಶಾಕ್ ಆಯ್ತು. ಮಾಯಾಮೃಗ ಇಡೀ ಕಥೆ, ನೈತಿಕ ಮೌಲ್ಯ ಯಾವುದೂ ಆ ರೈತರ ಬದುಕಿನ ಪ್ರತಿನಿಧಿಗಳಲ್ಲ. ಅಂಥದ್ದನ್ನು ನೋಡಲು ಹೋಗುವುದೂ ಕೂಡ ಒಂದು ಅರ್ಥದಲ್ಲಿ ಒಳಗೇ ಆಗುತ್ತಿರುವ ಸಾಂಸ್ಕೃತಿಕ ಆಕ್ರಮಣ. ಅಂಥ ಹೊತ್ತಿನಲ್ಲೇ 'ಸಂಕ್ರಾಂತಿ'ಗೆ ಬರೆಯುವ ಅವಕಾಶ ಒದಗಿತು. ಅವರದೇ ಬದುಕು, ಮೌಲ್ಯಗಳನ್ನು ತರುವ ಪ್ರಯತ್ನ ಮಾಡಿದ್ದೆ... ಮುಖ್ಯವಾಗಿ ಇವತ್ತು ಎಲ್ಲವನ್ನು ವಾಣಿಜ್ಯ ನಿರ್ಧಾರ ಮಾಡ್ತಿದೆ. 'ಹಳ್ಳಿ ಕಥೆ ಮಾಡಬೇಡಿ. ಅದಕ್ಕೆ ಪ್ರಾಯೋಜಕರು ಸಿಗೋದಿಲ್ಲ. ಸರಕು ಮಾರಾಟ ಆಗಲ್ಲ, ನಮ್ಮ ಪ್ರೇಕ್ಷಕರು ಕೊಳ್ಳುವ ಶಕ್ತಿ ಇರುವ ನಗರದ ಜನ. ಅವರ ಅಭಿರುಚಿಗೆ ಪೂರಕವಾದ್ದೇ ಆಗಬೇಕು' ಅಂತಾರೆ. ಜಾಗತೀಕರಣದ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಆಕ್ರಮಣದ ಮಾತಾಡುವಾಗಲೇ ಒಳಗಿನ ಅಪಾಯವನ್ನೂ ದೃಷ್ಟಿಯಲ್ಲಿ ಇಟ್ಟುಕೊಳ್ಳಬೇಕಾಗಿದೆ.

**ಜಿ. ಆರ್ :** ರೇಡಿಯೋ ಮೊದಲಾದ ಮಾಧ್ಯಮಗಳಲ್ಲಿ ಸಂಗೀತ-ನೃತ್ಯ ವಿದ್ವಾಂಸರನ್ನು ಪರಿಚಯಿಸೋವಾಗ ಇಂತಿಂಥ ದೇಶಗಳಿಗೆ ಹೋಗಿ ಬಂದಿದ್ದಾರೆ ಅಂತ ಹೇಳುವ ರೀತಿಯಲ್ಲೇ ಆತ ನಮಗಿಂತ ಹೆಚ್ಚಿನ ತಿಳುವಳಿಕೆ ಇರುವವರ ಎದುರಿಗೆ ತನ್ನ ಕಲೆಯನ್ನು ಸಾದರಪಡಿಸಿದಾನೇನೋ ಎಂಬ ಭಾವನೆ ಬರುವ ಹಾಗೆ ಇರುತ್ತೆ. ಎಷ್ಟೋ ಸಲ ಈ ಸಂಗೀತಗಾರರು ವಿದೇಶದಲ್ಲಿ ಸಂಗೀತವೇ ಗೊತ್ತಿಲ್ಲದೋರ ಮುಂದೆ ಹಾಡಿ ಬಂದಿರ್ತಾರೆ. ಇದೆಲ್ಲ ಒಂಥರು ವಿದೇಶ ವ್ಯಾಮೋಹವನ್ನೇ ತೋರಿಸುತ್ತೆ. ಅಂಥ ಸಂಗತಿಗಳಿಗೆ ಪ್ರಚಾರವೂ ಹಾಗೇ ಇರುತ್ತೆ. ಈ ವಸಾಹತು ವ್ಯಾಮೋಹ ಎಲ್ಲಿಯತನಕ ?

**ದೀಪಾ ಧನರಾಜ್:** ಇವತ್ತು ಜಾಗತೀಕರಣ ಅನ್ನುವ ದೈತ್ಯ ನಿಂತಿರುವುದು ಆರ್ಥಿಕ ತಳಹದಿಯ ಮೇಲೆ. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ವಿಧಿಸುವ ಷರತ್ತುಗಳು ಬೇರೆ ರೀತಿಯವು. ಚಂದ್ರಬಾಬು ನಾಯ್ಡು ಈಗ ತನ್ನ ರಾಜಕೀಯ ಕ್ಷೇತ್ರವನ್ನು ಮಹಿಳೆಯರಿಗೆ ಆದ್ಯತೆ ನೀಡಿ ಭದ್ರಗೊಳಿಸಿಕೊಳ್ಳುತ್ತಿದ್ದಾನೆ. ಜಾತಿ-ಧರ್ಮಗಳು ಈಗ ಆತನಿಗೆ ಗೌಣ. ಮಹಿಳೆಯರ ಮತಗಳು ಸಿಕ್ಕಿದರೆ ಸಾಕೆಂಬ ನಿಲುವು ಇದು. ಆದ್ದರಿಂದಲೇ ಆತ ಸುಮಾರು ಎಂಟು ಲಕ್ಷ ಮಹಿಳೆಯರನ್ನು ಹಲವು ಗುಂಪುಗಳಲ್ಲಿ ಸಂಘಟಿಸಿರುವುದು. ಇದಕ್ಕೂ ಸಂಸ್ಕೃತಿಗೂ ಸಂಬಂಧವೇನು ? ಕಳೆದ ಎಂಟು ವರ್ಷಗಳಲ್ಲಿ ಜಾನಪದ ತಂಡಗಳು, ನಾಟಕ ತಂಡಗಳು, ಚಲನಚಿತ್ರ ತಯಾರಕರು, ಮುಂತಾದವರು ಸಾಮಗ್ರಿ ತಯಾರಿಸಿ ಜನರತ್ತ ಒಯ್ಯುತ್ತಿದ್ದರು. ಏಡ್ಸ್, ಕ್ಷಯ, ಪೋಲಿಯೋ ಮುಂತಾದುವನ್ನು ನಿವಾರಿಸಲು ಈಗ ಗೊಂಬೆಯಾಟದ ಮುಖಾಂತರ ತಿಳಿವಳಿಕೆ ನೀಡಲಾಗುತ್ತಿದೆ. ಇದು ವಿಪುಲವಾಗಿ ವಿಸ್ತರಿಸಿದೆ. ಇದಕ್ಕೂ ಜಾಗತೀಕರಣಕ್ಕೂ ಏನು ಸಂಬಂಧ ? ಈ ತಂಡಗಳಿಗೂ ತಮ್ಮದೇ ಆದ ಅಗತ್ಯಗಳಿವೆ, ಅವೂ ಉಳಿಯಬೇಕಲ್ಲ. ಅದೇ ಮುಖ್ಯವಲ್ಲ ಆದರೆ ಮುಖ್ಯವಾದದ್ದು ಅವರ ಹೊಸ ಪ್ರಯೋಗಗಳು, ಅವಕ್ಕೆ ವಿಶೇಷ ವ್ಯಾಪ್ತಿಯುಂಟು. ಪಾಶ್ಚಿಮಾತ್ಯ ದೇಶಗಳಲ್ಲಿ ಬಳಕೆಗೆ ಬಂದಿದ್ದು ಮಹಿಳೆಯರು ಅಧಿಕಾರಸ್ಥಾನಕ್ಕೆ ಬರುವುದರ ಕಲ್ಪನೆ. ನಮ್ಮಲ್ಲಿ ಈ ವಿಚಾರವನ್ನು ಅನೇಕ ಮಾಧ್ಯಮಗಳ ಮೂಲಕ ಸಾಧಿಸುವ ಯತ್ನ ನಡೆದಿದೆ. ಸಾಮಾನ್ಯವಾಗಿ ಎಲ್ಲದರಲ್ಲೂ ಈ ಪದಗುಚ್ಛ ಕಾಣ ಬರುತ್ತದೆ: ಮಹಿಳೆಯರನ್ನು ನಾಲ್ಕು ಗೋಡೆಗಳ ಮಧ್ಯೆ ಬಂಧನದಲ್ಲಿಡಲಾಗಿದೆ, ಎಂದು. ಆಮೇಲೆ ಅವರು ಹೊಸಿಲು ದಾಟಿ ಹೊರಬರುತ್ತಾರೆ, ಸಂಘಟಿತರಾಗುತ್ತಾರೆ. ಹೊರಬಂದವರ ಬಗ್ಗೆ ಇನ್ನೊಂದು ಮಾತು ಹೇಳಲಾಗುತ್ತದೆ: ಅವರ ಸೆರಗು ಬಿದ್ದಿತು ಅಥವಾ ಪರ್ದಾ ಬಿದ್ದಿತು, ಎಂದು. ಅಂದರೆ ಬಂಧನವನ್ನು ಕಳಚಿಕೊಂಡರು, ಎಂದರ್ಥ. ಈಗ ಅವರು ತಲೆಯೆತ್ತಿ ನಿಲ್ಲಬಹುದು. ಅದರ ಮುಂದಿನ ಹಂತದಲ್ಲಿ ಅವರಲ್ಲಿ ವಿಮೋಚನೆಯ ಪ್ರಜ್ಞೆ ಸಂಪೂರ್ಣವಾಗಿ ಮೂಡಿರುತ್ತದೆ. ಅಂದರೆ, ಈಗ ಅವರು ಸೆಣಸಾಟಕ್ಕೆ ಸಿದ್ಧವಿದ್ದಾರೆ ಎಂಬುದರ ಸೂಚನೆ. ಅಧಿಕಾರ ಅವರಿಗೆ ಎಟಕುವಂತಿದೆ. ಪಂಚಾಯತಿಯಲ್ಲಿ. ಮನೆಯಲ್ಲಲ್ಲ, ಹೊರಗೆ. ಇದರಲ್ಲಿ ಇನ್ನೊಂದು ವಿಸ್ಮಯವಿದೆ. ಅದು ಮಹಿಳೆಯರ ಭಾಷೆಗೆ ಸಂಬಂಧಿಸಿದ್ದು. ಅದೂ ಸಂಸ್ಕೃತಿಯ ಒಂದು ಭಾಗವೇ ತಾನೆ. ಮಹಿಳೆಯರ ಹೊಸ ಸಂಪರ್ಕಗಳಿಂದಾಗಿ, ಕಾರ್ಯಕ್ರಮ ಮತ್ತು ಸಂಸ್ಥೆಗಳಿಂದಾಗಿ, ಅವರ ಭಾಷೆಯಲ್ಲಿ ವಿಶೇಷ ಛಾಯೆಯೊಂದು ಮೂಡಿದೆ. ಭಾಷೆಯು ಹೊಸ ಸನ್ನಿವೇಶವನ್ನು ಪ್ರತಿಫಲಿಸುವ ನಿಟ್ಟಿನಲ್ಲಿ ರೂಪುಗೊಳ್ಳುತ್ತದೆ. ತರಬೇತಿ ನೀಡುವವರ ದೃಷ್ಟಿಯಲ್ಲಿ ಯಾವುದು ಮೂಲ ಆಶಯವೋ ಅದು ವ್ಯಕ್ತವಾಗಲು ಆರಂಭವಾಗುತ್ತದೆ. ಅದು ಹೊಸ ಭಾವನೆಗಳ ಪ್ರತೀಕ. ಇದರಲ್ಲಿ ಒಂದು ರೀತಿಯ ಆತಂಕಕ್ಕೆ ಕಾರಣವಿದೆ. ಅದೇನೆಂದರೆ, ಎಲ್ಲ ಕಡೆಗಳಲ್ಲೂ ಏಕರೂಪದ ಅಭಿವ್ಯಕ್ತಿ ಪ್ರಧಾನವಾಗುತ್ತಿದೆ. ನಾನು ಈ ಊರಿನಲ್ಲಿ ಹದಿನೈದು ವರ್ಷಗಳಿಂದ ಇದ್ದೇನೆ. ಹಿಂದೆ ಇರದಿದ್ದ ಏಕರೂಪದ ರೂಪಕಗಳ ಪ್ರಯೋಗ ಈಗ ಕಾಣುತ್ತಿದೆ. ಆಂಧ್ರದ ಮೇಡಕ್ ಜಿಲ್ಲೆ ಇರಬಹುದು, ದೂರದ ಬರೋಡ ಇರಬಹುದು, ಎಲ್ಲೋ ಮೂಲೆಯಲ್ಲಿರುವ ಗುಡ್ಡಗಾಡಿನ ಜನರ ನಡುವೆ ಇರಬಹುದು, ಉತ್ತರ ಪ್ರದೇಶದ

ಗಡವಾಲ ಪ್ರದೇಶ ಇರಬಹುದು, ಅಥವಾ ಕೇರಳದ ಯಾವುದೋ ಭಾಗವಿರಬಹುದು, ಎಲ್ಲ ಕಡೆಯೂ ಒಂದೇ ಭಾವನೆ ಮತ್ತು ಒಂದೇ ರೂಪಕದ ಭಾಷೆಯಲ್ಲಿ ಅಭಿವ್ಯಕ್ತಿ. ಇದು ಹೇಗುಂಟಾಯಿತು ? ಮಹಿಳೆಯರು ತಮ್ಮ ಬಗ್ಗೆ ತಾವು ಮಾತನಾಡುವ ವಿಧಾನವನ್ನು ನಾವು ಬದಲಾಯಿಸಿಬಿಟ್ಟಿದ್ದೇವೆ. ಅವರನ್ನು ಅವರು ಪ್ರತಿನಿಧಿಸಿಕೊಳ್ಳುವುದರಲ್ಲಿ ವ್ಯತ್ಯಾಸ ಬಂದುಬಿಟ್ಟಿದೆ. ಹಾಗೇ ಯೋಚನೆ ಮಾಡುತ್ತಾ ಹೋದಾಗ ಇದರಲ್ಲಿ ನನಗೆ ಎಲ್ಲೋ ಮೇಲುಜಾತಿಯ ಭಾಷೆ, ಅಭಿವ್ಯಕ್ತಿ ಇದೆ ಎನ್ನಿಸಿತು. ಬಂಗಾಳದಲ್ಲಿ ಹೇಳುವಂತೆ ಇದು 'ಭದ್ರಾ ಲೋಕ'ದವರ ನುಡಿವೈಖರಿ. ಅದೇ ಆಶಯ, ಅದೇ ಮೌಲ್ಯ, ಮಧ್ಯಮ ವರ್ಗದ ಪ್ರಜ್ಞೆ. ಸಾಹಿತ್ಯದಿಂದ ಅವರು ಉಲ್ಲೇಖಿಸುವುದು, ಉಡಿಗೆ-ತೊಡಿಗೆ, ಎಲ್ಲದರಲ್ಲೂ ಒಂದೇ ಪ್ರಕಾರ ಎನ್ನುವಂತಾಗಿದೆ. ಹಾಗೆ ನೋಡಿದರೆ ದಲಿತ ಮಹಿಳೆಯರು ಎಂದೂ ಮುಸುಕು ಹಾಕಿಕೊಂಡಿದ್ದಿಲ್ಲ. ''ಪರದೆಯಿಂದ ಹೊರ ಬರುವುದು'' ಎಂಬುದು ಅವರಿಗೆ ಅನ್ವಯವಾಗಲಾರದು. ಈ ಸಮಸ್ಯೆ ಅವರಿಗೆ ಇರಲಿಲ್ಲ. ಅವರ ಚಲನವಲನಗಳಿಗೆ ಕಟ್ಟುಪಾಡು ವಿಧಿಸಲಾಗಿರಲಿಲ್ಲ, ಅವರೆಂದೂ ನಾಲ್ಕು ಗೋಡೆಗಳ ಮಧ್ಯ ಬಂಧಿತರಾಗಿರಲಿಲ್ಲ. ಕೂಲಿ-ನಾಲಿಗಾಗಿ ಹೊರಗೆ ಹೋಗದಿದ್ದರೆ ಅವರಿಗೆ ಜೀವನ ಸಾಧ್ಯವಿಲ್ಲ. ಹೀಗಿರುವಾಗ ಅವರಿಗೆ ಬಂಧನದ ಸ್ವರೂಪ ಬೇರೆಯ ವರಿಗೆ ಇದ್ದಿರಬಹುದಾದಂತೆ ಇರಲು ಶಕ್ಯವಿಲ್ಲ.

**ಸತ್ಯನಾರಾಯಣರಾವ್ ಅಣತಿ** : ನಮ್ಮ ಇವತ್ತಿನ ಸಾಂಸ್ಕೃತಿಕ ಸಂಘರ್ಷದ ಸಂದರ್ಭದಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ನಮ್ಮ ರುಚಿ-ಅಭಿರುಚಿಯನ್ನು. ಇವೂ ನಾಶವಾದರೆ ನಮ್ಮ ಸಂಸ್ಕೃತಿಯ ಮೇಲೆ ಆಗಬಹುದಾದ ಆಘಾತ ಬಹಳ ದೊಡ್ಡದು ಅನ್ನಿಸುತ್ತೆ. ನನ್ನ ಅನುಭವದ ಒಂದು ವಿವರ ಹೇಳಿಬಿಡ್ತೀನಿ.

೧೯೭೦ರಲ್ಲಿ ಅನ್ಸುತ್ತೆ. ಶಿವಮೊಗ್ಗೆಯಲ್ಲಿ ವೃತ್ತಿಯಲ್ಲಿದ್ದೆ. ತೀರ್ಥಹಳ್ಳಿ ತಾಲ್ಲೂಕನ್ನು ಕಡಿದಾಳು ಶಾಮಣ್ಣನ ಜೊತೆ ಮೋಟಾರ್‌ಬೈಕಲ್ಲಿ ಸುತ್ತುವ ಅವಕಾಶ ಒಂದು ಬಂತು. ಅದು ಆತಿಥ್ಯಕ್ಕೆ ಹೆಸರಾದ ತಾಲ್ಲೂಕು. ಹೋದ ನಾಲ್ಕಾರು ಮನೆಗಳಲ್ಲಿ ಒಂದು ವಿಶೇಷವಾದ ಸಿಹಿ ತಿಂಡಿ ಕೊಟ್ಟರು. ಅದರ ಹೆಸರು 'ಇಬ್ಬನಿ ಹಿಟ್ಟು' ಅಂದರು. (ನಾವು ಅದನ್ನು 'ಹಲ್ಬಾಯಿ' ಅಂತೀವಿ.) ಆ ತಿನಿಸನ್ನು ಸೂರಿನ ಮೇಲೆ ಇಟ್ಟು ಮಾರನೇ ದಿವಸ ತಿನ್ನುತ್ತಾರಂತೆ. ಅದು ರಕ್ಷಿಸಿಡೊ ವಿಧಾನ. ಕೆಲವರು ಅದನ್ನೇ ಫ್ರಿಡ್ಜ್ ನಲ್ಲಿಟ್ಟಿದ್ದನ್ನು ತೆಗೆದುಕೊಟ್ಟರು. ಇಲ್ಲಿ ಮುಖ್ಯವಾಗೋದು ಫ್ರಿಡ್ಜ್‌ನಿಂದಲೇ ಆದರೂ 'ಇಬ್ಬನಿ ಹಿಟ್ಟು' ಇತ್ತು ಅನ್ನೋದು. ಕೊನೆವರಗೆ ಈ ಇಬ್ಬನಿ ಹಿಟ್ಟನ್ನು ಉಳಿಸಿಕೊಳ್ಳೋದೇ ಆದರೆ ಈ ಸಂದರ್ಭಕ್ಕೆ ದೊಡ್ಡ ಸಾಧನೆಯೇ ಆಗಿಬಿಡಬಹುದು. ಜಾಗತೀಕರಣವನ್ನ ತಡೆಯೋದು ಅಸಾಧ್ಯವಾಗಿದ್ದೆ... ಮೈಮೇಲೆ ಏರಿ ಬರ್ತಿರೋ ಪೆಡಂಭೂತ ಅದು. ಅದಕ್ಕೆ ಪರ್ಯಾಯ ಅಂದರೆ ದೇಶೀಯ ಐಡೆಂಟಿಟಿ ಉಳಿಸ್ಕೋಬೇಕು. ನಾವು ಬರಹಗಾರರು ಯಾವುದೋ ಜಗತ್ತಿಗೆ ಮೆಚ್ಚಿಕೆಯಾಗೋದನ್ನು ಹೇಳೋದಕ್ಕಿಂತ (ಹಾಗೆ ಹೇಳಿದರೆ ಬಹಳ ಬೇಗ ದೊಡ್ಡೋರಾಗಿಬಿಡಬಹುದು) ನಮ್ಮ ಸನ್ನಿವೇಶ, ನಮ್ಮ ಪಾತ್ರಗಳ ಮೂಲಕ ಅಭಿವ್ಯಕ್ತಿಸೋದು... ಆಧುನಿಕ ವಾಗುತ್ತಿರುವ ಮನೋಭಾವಗಳ ಜೊತೇಲೂ ನಮ್ಮತನವನ್ನು ಉಳಿಸಿಕೊಳ್ಳೋದು ಮುಖ್ಯ. ವಸಾಹತುಶಾಹಿಯಿಂದ ಏನು ಕಲಿತೆವು ಅನ್ನೋದಕ್ಕಿಂತ ಅದರಿಂದಲೂ ಮುಂದೆ ಬಂದುಬಿಟ್ಟಿದ್ದೀವಿ.. ನಮ್ಮ ಸಾಹಿತ್ಯದಲ್ಲಿ ಹೂವಯ್ಯನಂಥ ಪಾತ್ರವಿದೆ, ನಾಯಿ ಗುತ್ತಿ ಇದೆ, ಬಾಡುಗಳ್ಳ ಸೋಮನೂ ಇದ್ದಾನೆ. ಇಲ್ಲಿ ಒಂದು ಪ್ರಾಣಿ ಇದೆ. ಒಬ್ಬ ಮನುಷ್ಯ ಇದ್ದಾನೆ. ವಿವೇಕಿಯಾದ ಹೂವಯ್ಯನೂ ಇದಾನೆ. ಇವೆಲ್ಲ ನಮ್ಮ ದೇಶೀಯ ಸಂಸ್ಕೃತಿಯ ಒಳಗಿನಿಂದಲೇ ಬಂದಂಥವು. ಈಗ ಈ ಸಂದರ್ಭಕ್ಕೆ ಇದೇ ಆಗಬೇಕು... ಹಾಗೆ ಮಾಡುವ ಮೂಲಕ ಪರ್ಯಾಯವನ್ನು ಕಂಡುಕೊಳ್ಳುವ ಪ್ರಯತ್ನ ಆಗಬೇಕು.

**ಕೆ. ರಾಮಯ್ಯ** : ಜಾಗತೀಕರಣದ ವಿರುದ್ಧ ಮಾತನಾಡುವಾಗ ದೇಸೀ ಪರ್ಯಾಯಗಳ ಪ್ರಸ್ತಾವ ಬರತ್ತೆ. ಆದರೆ ಜಾತಿ ಪದ್ಧತಿ ಇನ್ನೂ ಜೀವಂತವಾಗಿರುವ ಈ ದೇಶದಲ್ಲಿ ಅದು ಎಷ್ಟು ಅಪಾಯಕಾರಿಯಾಗಿ ಪರಿಣಮಿಸುತ್ತೆ ಎನ್ನೋ ಎಚ್ಚರಾನೂ ಬೇಕು. ಮಲ ಹೊರುವವರನ್ನು, ಚಪ್ಪಲಿ ಹೊಲಿಯುವವರನ್ನು ಅದು ಹೀನಾಯಕರ ಅಂತ ಮಾಡಿದ್ರು. ಆದರೆ ಇವರಿಗೆ ಬದಲಿ ವ್ಯವಸ್ಥೆಯ ಕಲ್ಪನೆ ಸರಿಯಾಗಿ ಆಗಿಲ್ಲ. ಚಪ್ಪಲಿ ಹೊಲಿಯೋನ ಆ ವಿನ್ಯಾಸ, ಕಲಾತ್ಮಕತೆ ಎಲ್ಲಿ ಬಳಕೆಯಾಗ್ತಿದೆ ? ಸುಲಭ್, ಬಾಟಾದಂಥ ಕಂಪನಿಗಳು ಅವರ ಸ್ಥಾನವನ್ನು ಆಕ್ರಮಿಸಿಕೊಂಡುಬಿಟ್ಟು. ಜಾಗತೀಕರಣದ ವಿರುದ್ಧ ನಮ್ಮ ದೇಸೀ ಪರ್ಯಾಯಗಳೆಲ್ಲ ಇಂಥ ಕಾರಣಗಳಿಂದಾಗಿ ದುರ್ಬಲ ಅಸ್ತ್ರಗಳಾಗಿ ಬಿಡುತ್ತವೆ. ಮತ್ತು ಇಂಥ ನಮ್ಮ ಕ್ರಮಗಳಿಂದಾಗಿಯೇ ಜಾಗತೀಕರಣ ಆವರಿಸಿಕೊಳ್ಳುವ ಮುನ್ನವೆ ಸುಲಭ್, ಬಾಟಾಗಳು ಕೋಟ್ಯಂತರ ಕಮಾಯಿಸುತ್ತಿವೆ. ಇನ್‌ಫೋಸಿಸ್‌ನಂಥವರು ನೆರವಾಗಲು ಮುಂದೆ ಬರ್ತಿರೋದು ಅರ್ಥವಾಗತ್ತೆ. ಸರಳವಾಗಿ ಹೇಳಬೇಕೆಂದರೆ ಮಾಧ್ಯಮಗಳಲ್ಲಿ ಕೂಡಾ ಕಲಾತ್ಮಕ ಇತ್ಯಾದಿ ಹೆಸರಲ್ಲಿ ಬರೋ ಅಂಥ ಧಾರಾವಾಹಿಗಳು ಕೆಳವರ್ಗದವರ ದೃಷ್ಟಿಕೋನದಿಂದ ಮೂಡಿ ಬರ್‍ತಾ ಇಲ್ಲದೇ ಇರೋದರಿಂದ ಹಿಂದುತ್ವವನ್ನು ಹೇರುವಂಥ ಅಪಾಯಕ್ಕೆ ಸಿಕ್ಕಿಹಾಕಿಕೊಳ್ಳುತ್ತೇವೆ. ಮೂಲದಲ್ಲಿ ಯಾರು ಯಾವ ಪ್ರಕಾರಗಳಲ್ಲಿ ಪ್ರಾವೀಣ್ಯವನ್ನು ಪರಂಪರಾಗತವಾಗಿ ಮೈಗೂಡಿಸಿಕೊಂಡಿರುತ್ತಾರೋ ಅಂಥವರ ಪರಿಣತಿಯನ್ನು ನಾವೇ ನಿರ್ನಾಮ ಮಾಡಿಬಿಟ್ಟಿರುತ್ತೇವೆ.

**ಸತ್ಯನಾರಾಯಣರಾವ್ ಅಣತಿ**: ದೇಸೀ ಅಂತ ಅಂದ್ರೆ ಆರ್‌ಎಸ್‌ಎಸ್ ನೆಲೆಯಲ್ಲಿ ನಾನು ಹೇಳ್ತಾ ಇಲ್ಲ. ಪರ್ಯಾಯ ವ್ಯವಸ್ಥೇನೇ ಇಲ್ಲದೆ ಇದನ್ನು ಎದುರಿಸೋಕ್ಕೆ ಆಗಲ್ಲ. ನಮ್ಮ ಆಲೋಚನಾ ಕ್ರಮ, ಅದನ್ನ ಅಭಿವ್ಯಕ್ತಿಸುವ ವಿಧಾನದ ಮೇಲೆ ಇದು



ಹೊಂದಿಕೊಂಡಿರುತ್ತದೆ. ನನ್ನದೇ ಕವಿತೆಯಲ್ಲಿ 'ಬೆಂಡಿಗೇರಿಯ ದಾಸೋಹ ವಿಭವ' ಅಂತ ಬಳಸಿದೀನಿ. ಬೆಂಡಿಗೇರಿ ಘಟನೆ ನಮಗೆಲ್ಲ ಗೊತ್ತಿರೋದರಿಂದ ಇಂಥ ಆಲೋಚನಾ ವಿಧಾನ ನಮ್ಮನ್ನು ಪ್ರತಿಕ್ರಮಕ್ಕೆ ಸಜ್ಜುಗೊಳಿಸುತ್ತದೆ. ಹಾಗಾಗದೆ ಹೋದರೆ ಹ್ಯಾಗೆ ಎದುರಿಸುತ್ತೀರಿ ?

**ರಾಮಯ್ಯ** : ಹಾಗಾದರೆ ನೀವು ಪರ್ಯಾಯವನ್ನು ಯಾವ ನೆಲೆಯಲ್ಲಿ ನಿಂತು ನೋಡುತ್ತೀರಿ ?

**ಅಣತಿ** : ಅವರವರ ಸೂಕ್ಷ್ಮಜ್ಞತೆಯನ್ನು ಅವಲಂಬಿಸಿರುತ್ತದೆ. ಆದರೆ ಎಲ್ಲ ಲೇಖಕರೂ ಕಲಾವಿದರೂ ಪ್ರಗತಿಪರ ಚಿಂತನೆಯವರೇ ಆದ್ದರಿಂದ ನೀವು ಹೇಳುವಂಥ ಅಪಾಯ ಎದುರಾಗದು.

**ಜಿ. ಆರ್.** : ನಮಗೆ ಲಭ್ಯವಿರೋ ಸಾಮಗ್ರಿಯನ್ನು ಗಮನಿಸಿದರೆ ನೀವು ಹೇಳ್ತಾ ಇರೋದು ನಿಜವೇ ಅಂತ ಅನುಮಾನಿಸ್ಬೇಕಾಗುತ್ತದೆ.

**ರಾಮಯ್ಯ** : ನಾಟ್ಯವಾಗಲಿ, ಹಾಡಿಕೆಯ ಲಯವಾಗಲಿ ಇವುಗಳ ಮೂಲ ಯಾವುದು ? ಇವತ್ತಿನ ಇಳೆಯರಾಜಾ ಸಂಗೀತವಾಗಲಿ, ಎ. ಆರ್. ರೆಹ್ಮಾನರ ಲಯ ವಿನ್ಯಾಸಗಳಾಗಲಿ ಎಲ್ಲಿಂದ ಬಂದವು ? ಅವೆಲ್ಲ ದಲಿತರ ಸೊತ್ತು. ಅವರಿಂದ ಹಾರಿಸಿಕೊಂಡವು. ನಾಟ್ಯಕ್ಕೆ ಬಂದರೆ ಭರತ ಮುನಿ ಅಂತಾರೆ, ಸಂಗೀತಕ್ಕೆ ಬಂದರೆ ಇನ್ನಾರನ್ನೋ ಹೆಸರಿಸುತ್ತಾರೆ. ಹೀಗಾಗಿ ಒಂದು ವ್ಯವಸ್ಥೆ ಸಾವಿರಾರು ವರ್ಷಗಳಿಂದ ದಲಿತವರ್ಗದ ಕಲೆಯನ್ನು ಕೀಳಾಗಿಸಿ ಇವತ್ತು ಅವರು ತಮ್ಮ ನಾಟ್ಯ, ಸಂಗೀತಗಳನ್ನು ಅಭಿವೃದ್ಧಿಪಡಿಸಿಕೊಳ್ಳುವುದು ಬಿಡಿ, ಇವು ನಮ್ಮವು ಅಂತ ಹೇಳಿಕೊಳ್ಳಲೂ ಆಗದಂಥ ವಾತಾವರಣ ಸೃಷ್ಟಿಯಾಗಿಬಿಟ್ಟಿದೆ.

ದಲಿತ ವರ್ಗದ ಈ ಸಾಧನವನ್ನು ಜಾಗತೀಕರಣದ ವಿರುದ್ಧ ಅಸ್ತ್ರವನ್ನಾಗಿ ಬಳಸಲು ಸಾಧ್ಯವೇ ಇಲ್ಲ. ಯಾಕಂದ್ರೆ ಯಾವ ವರ್ಗದಲ್ಲಿ ಇದು ಪರಂಪರೆಯಿಂದ ರಕ್ತಗತವಾಗಿ ಉಳಿದುಬಂದಿದೆಯೋ ಆ ವರ್ಗವನ್ನು ಅದನ್ನ

ಶಸ್ತ್ರವನ್ನಾಗಿ ಎತ್ತಲಾಗದಷ್ಟು ದುರ್ಬಲಗೊಳಿಸಲಾಗಿದೆ. ಇದು ಈ ದೇಶದ ದುರಂತ. ಈ ಜಾತಿಗ್ರಸ್ತ ದೇಶದಲ್ಲಿ ಚಿಂತನೆಗಳಿಗಿರೋ 'ಮತಿಮಿತಿ'ಗಳಿಂದಾಗಿ ಇವು ಯಾವುವೂ ನಿಜವಾದ ಪರ್ಯಾಯಗಳಾಗುವುದಿಲ್ಲ.

ನಮ್ಮ ಚರಿತ್ರೆಯಲ್ಲಿ ವಿದ್ಯೆ, ಶಿಕ್ಷಣ, ಕಲೆ, ಅಧಿಕಾರ ಮುಂತಾಗಿ ಎಲ್ಲ ಕ್ಷೇತ್ರಗಳಲ್ಲಿ ಪ್ರಯೋಗ ಮಾಡಲಿಕ್ಕೆ ಅವಕಾಶ ಇದ್ದದ್ದು ಬ್ರಾಹ್ಮಣ ವರ್ಗಕ್ಕೆ ಮಾತ್ರ. ಅದು ಸಂವೇದನೆಗಳಿಗೆ ಮಿತಿ ಹಾಕಿಕೊಂಡುಬಿಟ್ಟಿತು. ಜರ್ಮನಿಯಲ್ಲಿ ಹಿಟ್ಲರ್ ನಂತರದ ತಲೆಮಾರು ತಮ್ಮದೆಂತಹ ನರಹಂತಕ ಪರಂಪರೆ ಎಂದು ವ್ಯಥೆಪಟ್ಟುಕೊಂಡುದರಿಂದಲೆ ಅಲ್ಲಿ ಕಲೆ, ಸಂಸ್ಕೃತಿ ಇತ್ಯಾದಿ ಕ್ಷೇತ್ರಗಳಲ್ಲಿ ಹೊಸತನ, ಸಂವೇದನೆಗಳು ಮೂಡಲು ಸಾಧ್ಯವಾಯಿತು. ಆದರೆ ಇಂಡಿಯಾದಲ್ಲಿ ಅಂಥ ಒಂದು ಭಾವನೆ ಮೂಡಿದ್ದು ಕೆಲವೇ ಜನರಲ್ಲಿ ಮಾತ್ರ. ಬಹುತೇಕರಲ್ಲಿ ಇನ್ನೂ 'ಮೊದಲಿದ್ದ ವ್ಯವಸ್ಥೆಯೇ ಸರಿ' ಎನ್ನುವ ಭಾವನೆಯೇ ಇರುವುದು ದುರಂತ.

ಮಂಗಳೂರಿನ ಕುದ್ಮಲ್ ರಂಗರಾವ್ ಅಂಥವರನ್ನು ನಾವು ನೆನೆಯಬೇಕು. ಹರಿಜನೋದ್ಧಾರದ ಗಾಂಧೀಜಿ ಪರಿಕಲ್ಪನೆ ಇನ್ನೂ ವ್ಯಾಪಕವಾಗಿ ಹರಡಿರದಂಥ ಕಾಲದಲ್ಲೆ ಈ ಮೇಲ್ಜಾತಿಯ ಮನುಷ್ಯ ತನ್ನ ತನುಮನಧನಗಳನ್ನೆಲ್ಲ ದಲಿತ ವರ್ಗದ ಶಿಕ್ಷಣಕ್ಕೆ, ಕಲ್ಯಾಣಕ್ಕೆ, ಅವರಿಗೆ ಸಮಾನತೆಯನ್ನು ದೊರಕಿಸಿಕೊಡಲಿಕ್ಕೆ ಮೀಸಲಿಟ್ಟು ಹೋರಾಟ ನಡೆಸಿದರು. ಇಂಥವರು ಶೇ. ೯೦ ಮಂದಿಯಾಗಿ, ವ್ಯವಸ್ಥೆಯನ್ನು ಪ್ರತಿಪಾದಿಸುವವರು ಶೇ. ೧೦ರಷ್ಟಿರಬೇಕಾಗಿತ್ತು, ಆಗ ಈ ದೇಶದ ಚಿತ್ರವೇ ಬೇರೆಯಾಗಿ ಬಿಡುತ್ತಿತ್ತು. ಅದರಿಂದಲೇ ನೀವು ಹೇಳುವಂಥ ಸಂವೇದನೆಯನ್ನು ಒಪ್ಪಿಕೊಳ್ಳಲು ಆಗುವುದಿಲ್ಲ. ಯಾಕೆಂದರೆ ಈ ಪರಿಸ್ಥಿತೀಲಿ ಅಂಥ ಸಂವೇದನೆ ಇರಲು ಸಾಧ್ಯವೇ ಇಲ್ಲ. ಹಾಗಾಗಿ ಪರ್ಯಾಯಗಳು ನಿಜವಾದ ಪರ್ಯಾಯಗಳು ಆಗುವುದಿಲ್ಲ.

**ಗಾಯತ್ರಿ :** ಜಾಗತೀಕರಣದ ವಿರುದ್ಧ ದೇಸೀ ಪರ್ಯಾಯದ ಮಾತು ಬಂದಾಗ ದಲಿತರ ಯಾವ ವರ್ಗ ಯಾವುದರಲ್ಲಿ ಪರಿಣತಿ ಪಡೆದಿತ್ತೋ ಅದರಲ್ಲೆ ಮುಂದುವರಿಯುವ ಅವಕಾಶ ಬೇಕು ಅಂತ ಹೇಳೋದು ಎಷ್ಟು ಸರಿ? ಮೊಗಳ್ಳಿ ಗಣೇಶ್ ತಮ್ಮ 'ದಲಿತರು ಮತ್ತು ಜಾಗತೀಕರಣ' ಎಂಬ ಕೃತಿಯಲ್ಲಿ ಮತ್ತು ಸಾಹಿತ್ಯ ಸಮ್ಮೇಳನ ಒಂದರಲ್ಲಿ ಮಾಡಿದ ಭಾಷಣದಲ್ಲಿ ಜಾಗತೀಕರಣದಿಂದ ದಲಿತನಿಗೆ ವಿಮುಕ್ತಿ ದೊರಕುತ್ತದೆ. ಬಾಟಾ ಶೂ ಕಂಪೆನಿಯಂಥ ಸಂಸ್ಥೆಯಲ್ಲಿ ಮ್ಯಾನೇಜರ್ ಆಗುವ ಅವಕಾಶ ದೊರಕುತ್ತದೆ ಎನ್ನುವ ಅರ್ಥದಲ್ಲಿ ಮಾತಾಡಿದ್ರು. ಆದ್ರೆ ಅವರಿಗೆ ಅದು ತಾನೆ ಎಲ್ಲಿ ಸಿಗುತ್ತೆ? ಮೇಲ್ವರ್ಗಕ್ಕೇ ಹೋಗುತ್ತೆ. ಆಗಲೂ ಕೂಡ ಒಬ್ಬ ದಲಿತನಿಗೆ ಕಸ ಗುಡಿಸೋನೋ, ಚಪ್ರಾಸಿಯೋ ಆಗಲು ಅವಕಾಶ ಸಿಕ್ಕಬಹುದಷ್ಟೆ. ದೇಸೀಯತೆಯನ್ನು ಉಳಿಸಿಕೊಳ್ಳೋ ಲಕ್ಷಣಗಳಲ್ಲ ಇವು. ದಲಿತ ಪ್ರಜ್ಞೆಯ ಹಿನ್ನೆಲೆಯಲ್ಲಿ ಜಾಗತೀಕರಣವನ್ನು ಗ್ರಹಿಸೋಕೆ ಹೊರಟರೆ ಅದು ಯಾವ ಸಾಧ್ಯತೆಯಾಗಿರಬೇಕೆಂದು ನಿಮ್ಮ ಅಭಿಪ್ರಾಯ ?

**ರಾಮಯ್ಯ :** ಇಷ್ಟು ಸರಳೀಕರಣಗೊಳಿಸುವ ಉದ್ದೇಶ ನನ್ನದಲ್ಲ. ಒಬ್ಬ ಚಪ್ಪಲಿ ಹೊಲಿಯೋನ ಕಸುಬುಗಾರಿಕೆಗೆ ವೃತ್ತಿ ಘನತೆ ಯಾಕೆ ದೊರಕಿಲ್ಲ ಅಂದರೆ ವ್ಯವಸ್ಥೆಯ ಮೇಲ್ವರ್ಗ ಅದನ್ನು ಹೀನಾಯಗೊಳಿಸಿದೆ. ಇದು 'ರೋಗಗ್ರಸ್ತ' ಮನಸ್ಸಿನ ಚಿಂತನೆಯಿಂದ ಆದದ್ದು. ಇದು ತಪ್ಪಿ, ವೃತ್ತಿಗೆ ಘನತೆ ದೊರಕಬೇಕು ಎನ್ನುವುದು ನನ್ನ ಆಶಯ. 'ಮತಿಮಿತಿ'ಯ ಚಿಂತನೆಯಿಂದ ರೂಪುಗೊಳ್ಳುವ ಯಾವ ಪರ್ಯಾಯವೂ ಆರೋಗ್ಯಕರವಾದುದಾಗಿ ಇರುವುದಿಲ್ಲ. ವಚನಕಾರರ ಕಾಲಘಟ್ಟದಲ್ಲಿ ಕಾಯಕಕ್ಕೆ ಘನತೆ, ಗೌರವದ ಸ್ಥಾನವನ್ನು ಕಲ್ಪಿಸಿದರು. ಇದು ಆತ್ಮಗೌರವದ ಚಳವಳಿಯಾಗಬೇಕು. ಆರ್ಥಿಕತೆಯ ನೆಲೆಯಲ್ಲೆ ಇದನ್ನು ಯೋಚಿಸುವುದು ಸರಿಯಲ್ಲ. ಚಮ್ಮಾರನು ಚಪ್ಪಲಿ ಹೊಲಿಯುವ ಕಸುಬುಗಾರಿಕೆಯನ್ನು ಬಿಡಬೇಕು ಅಂತ ನಾನು ಹೇಳುವುದಿಲ್ಲ. ಆ ಕಾಯಕಕ್ಕೆ ಅದರದೇ ಆದ ವೈಶಿಷ್ಟ್ಯ ಇದೆ. ಕಲೆ, ವೃತ್ತಿ ಗೌರವ ಮುಖ್ಯ. ಹೊರಗಡೆಯಿಂದ ಎದುರಾಗುತ್ತಿರುವ ಅಪಾಯಕ್ಕೆ ನಾವು ನಮ್ಮ ವ್ಯವಸ್ಥೆಯ ಒಳಹೊಕ್ಕು ನೋಡಿ ಪರ್ಯಾಯಗಳನ್ನು ರೂಪಿಸಬೇಕು. ಗಿರೀಶ್ ಅವರು ಈ ಮೊದಲೇ ಹೇಳಿದ ಹಾಗೆ ಏಸ್ಥೆಟಿಕ್ಸ್ (ಸೌಂದರ್ಯಪ್ರಜ್ಞೆ) ಅನ್ನು ಶಿಲ್ಪ ಪರಿಮಾಣಗಳ ನೆಲೆಯಲ್ಲಿ ಹುಡುಕಿಕೊಂಡು ವಿಫಲವಾಗಿ ಅಲೆದವನ ಕಥೆಯ ನೆಲೆಯೊಂದು ಕಡೆಯಾದರೆ, ಕಾವ್ಯದ ಪರಿಕಲ್ಪನೆಯ ಘಟ್ಟಗಳೂ ಬದಲಾಗಿರುವ ಸಂದರ್ಭದಲ್ಲಿ ಪರಂಪರೆಯಿಂದ ಬಂದ ಜುಂಜಪ್ಪನ ಕಥೆ, ಮಂಟೇಸ್ವಾಮಿ ಕಥೆಯಂಥವುಗಳನ್ನು ಕಾವ್ಯವೆಂದು ಒಪ್ಪಿಕೊಳ್ಳಲಾಗುವುದಿಲ್ಲವೆನ್ನುವ ವಾದವಿರುವಾಗ ಸುಧಾರಣೆ ಎಲ್ಲಿ ಸಾಧ್ಯ ? ನಿರೀಕ್ಷೆ ಮಾಡೋದಾದರೂ ಹೇಗೆ ?

**ಮನು ಚಕ್ರವರ್ತಿ** : ಚಲನಶೀಲವಾದಂಥ ಕಾಲಘಟ್ಟದಲ್ಲಿ ಇಂಥವೆಲ್ಲ ಬರುತ್ತವೆ. ನಮ್ಮ ನಡುವೆ ಇರುವ ಕೆಲವು ವಿಪರ್ಯಾಸಗಳ ಕಡೆ ಗಮನ ಹರಿಸೋಣ. ರಾಮಯ್ಯ ಹೇಳಿದ ಮಾತುಗಳನ್ನು ವಿಸ್ತರಿಸೋದಾದ್ರೆ ೧೯೩೦ರಲ್ಲಿ ಅಮೆರಿಕದಲ್ಲಿ ಕರಿಯರು ಪಾಶ್ಚಾತ್ಯ ಶಾಸ್ತ್ರೀಯ ಸಂಗೀತದ ವಿರುದ್ಧ ತಮ್ಮ 'ಜಾಜ್...' ಹಿಡಿದುಕೊಂಡು ಸಂಗೀತ ಕ್ಷೇತ್ರದಲ್ಲಿ ಕ್ರಾಂತಿಯನ್ನೇ ಮಾಡಿದರಲ್ಲ! ಅವರಿಗೆ ಆ ಶಕ್ತಿ ಎಲ್ಲಿಂದ ಬಂತು ? ಆಗ ಅವರ ಪರಿಸ್ಥಿತಿಯೇನೂ ಉತ್ತಮವಾಗಿರಲಿಲ್ಲ. ನಿಕೃಷ್ಟ ಸ್ಥಿತಿಯಲ್ಲಿದ್ದಾಗಲೇ ತಮ್ಮ ಜನಪದ ಸಂಗೀತವನ್ನು ಹಿಡಿದುಕೊಂಡು ರಾಜಕೀಯ ಅಧಿಕಾರದ ಏಣಿಯನ್ನು ಹತ್ತಿದರಲ್ಲ. ನಮ್ಮ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯ ರೂಪಕಗಳ ಮೂಲಕವೇ ಶಕ್ತಿ ಸಂಚಯ ಮಾಡಲು ಏಕೆ ಆಗುತ್ತಿಲ್ಲ? ಮಧ್ಯ ಪ್ರದೇಶದ ದಿಗ್ವಿಜಯ ಸಿಂಗ್ ಸರಕಾರ 'ಭೋಪಾಲ್ ಡಾಕ್ಯುಮೆಂಟ್' ರೂಪಿಸುವಾಗ 'ದಲಿತ್ ವಿಷನ್ ಫಾರ್ ಇಂಡಿಯ' ಎಂಬ ಉಪಶೀರ್ಷಿಕೆಯಡಿಯಲ್ಲಿ ೨೧ನೇ ಶತಮಾನದಲ್ಲಿ ಕಾರ್ಪೊರೇಟ್ ವರ್ಲ್ಡ್‌ಗೆ, ಮಾರುಕಟ್ಟೆ ಕ್ಷೇತ್ರಕ್ಕೆ ದಲಿತರ ಪ್ರವೇಶವಾಗಿ ಅವರು ಮಾರುಕಟ್ಟೆ ಶಕ್ತಿಗಳ ವಿರುದ್ಧ ಹೋರಾಡುವಷ್ಟು ಸಮರ್ಥರಾಗಬೇಕು ಎನ್ನುತ್ತದೆ. ಅರ್ಥಶಾಸ್ತ್ರಜ್ಞೆ ಗೇಲ್ ಓಮ್ವೆಡ್ತ್ ಆಧುನೀಕರಣ, ಜಾಗತೀಕರಣ, ಅಂತಾರಾಷ್ಟ್ರೀಯ ಹಣಕಾಸು ನಿಧಿ ಇವುಗಳೆಲ್ಲ ದಲಿತರ ವಿಮುಕ್ತಿಗೆ ಬಹಳ ಮುಖ್ಯ ಅಂತಾಳೆ. ಆದರೆ ಪಾಂಡ್ಯನ್ ಅಂಥವರು ಬರೀ ಆಧುನೀಕರಣದಂಥ ಕ್ರಮಗಳಿಂದಲೇ ದಲಿತರ ವಿಮುಕ್ತಿ ಸಾಧ್ಯವಾಗದು. ಅವರು ತಮ್ಮ ಜಾತಿ ಪ್ರಜ್ಞೆ, ಸಂಪ್ರದಾಯ, ಆಚರಣೆ ಇತ್ಯಾದಿಗಳನ್ನು ಉಳಿಸಿಕೊಂಡು ದಲಿತತ್ವದ ಮೂಲಕವೇ ಕಾರ್ಪೊರೇಟ್ ವರ್ಲ್ಡ್‌ನಂಥ ಕ್ಷೇತ್ರಗಳಲ್ಲಿ ಪ್ರವೇಶ ಮಾಡಬೇಕು. ಜಾತಿ ಪದ್ಧತಿ ಬಲವಾಗಿ ಬೇರೂರಿರೋ ಈ ದೇಶದಲ್ಲಿ ಇದು ಅನಿವಾರ್ಯ ಅಂತ ಹೇಳ್ತಾರೆ.

ಇಷ್ಟು ಸಂಕೀರ್ಣವಾಗಿರೋ ಸನ್ನಿವೇಶದಲ್ಲಿ ಆಧುನಿಕತೆಯನ್ನು ಮತ್ತು ಸಾಂಪ್ರದಾಯಿಕತೆಗಳನ್ನು ಜತೆ ಜತೆಯಾಗಿಟ್ಟುಕೊಂಡೇ ಹೋರಾಡಲು ಸಾಧ್ಯವೇ? ನಾನಿನ್ನೂ ಚಿಕ್ಕ ಹುಡುಗನಾಗಿರುವಾಗಲೇ ಡ್ಯೂಕ್ ಎಲಿಂಗ್ಟನ್, ಕೌಂಟ್ ಬಿ. ಸಿ. ಮುಂತಾದವರು ಅಂತಾರಾಷ್ಟ್ರೀಯ ವ್ಯಕ್ತಿತ್ವ ಗಳಿಸಿಕೊಂಡಿದ್ದರೂ 'ಕಪ್ಪು ಸುಂದರ, ಕಪ್ಪೇ ಶಕ್ತಿ' ಎನ್ನುವ ಭಾವನೆಯನ್ನು ದೃಢವಾಗಿಟ್ಟುಕೊಂಡೇ ರಾಜಕೀಯ ಶಕ್ತಿಯನ್ನು ಗಳಿಸಿಕೊಂಡರು. ಇದನ್ನು ಒಂದು ಮಾದರಿಯಾಗಿ ಇಟ್ಟುಕೊಳ್ಳಬಹುದೆ? ಇವತ್ತು ದಲಿತರ ಸಮುದಾಯಕ್ಕೆ ಹುಟ್ಟಿನಿಂದ ಸಾವಿನವರೆಗೆ ಜಾತಿ ಚಿಹ್ನೆ, ಸಂಸ್ಕೃತಿ, ಸಂಪ್ರದಾಯ ದಲಿತತ್ವ ಬೇಕೇ ಬೇಕು ಎನ್ನುವ ವಾದ ಒಂದು ಕಡೆ, ಇನ್ನೊಂದು ಕಡೆ ದಲಿತ ಸಮುದಾಯದೊಳಗೇ ಆಧುನಿಕತೆ ಮತ್ತು ಸಂಪ್ರದಾಯಗಳ ವಿಷಯದಲ್ಲಿ ಸಂಘರ್ಷವಿದೆ. ಹೀಗಿರುವಾಗ ಪರ್ಯಾಯಕ್ಕೆ ಅನುಸಂಧಾನ ಹೇಗೆ ಸಾಧ್ಯ ? ಇದಕ್ಕೆ ನಾವು ವೈಜ್ಞಾನಿಕವಾಗಿ ಪ್ರತಿಸ್ಪಂದಿಸಬೇಕು.

**ರವಿ ಕಾಶಿ** : ಆಧುನೀಕರಣ ಎಂಥ ಪೊಳ್ಳು ಪರಿಕಲ್ಪನೆ ಉಂಟುಮಾಡುತ್ತೆ ಎನ್ನೋದನ್ನ ಒಂದು ವ್ಯಂಗ್ಯಚಿತ್ರ ಬಿಂಬಿಸಿತ್ತು. ಅದರಲ್ಲಿ ಒಬ್ಬ ಜಲಗಾರ ಒಳಚರಂಡಿಯ ಮ್ಯಾನ್ ಹೋಲ್‌ನಲ್ಲಿ ಇಳಿದು ಶುಚಿ ಮಾಡುತ್ತಲೆ ಮೊಬೈಲ್‌ನಲ್ಲಿ ಗೆಳೆಯನನ್ನು ಸಂಪರ್ಕಿಸಿ 'I am neck deep in my work' ಎನ್ನುತ್ತಾನೆ.

**ದೀಪಾ ಧನರಾಜ್** : ನನ್ನ ಮಟ್ಟಿಗೆ ನಾವು ನಮ್ಮ ಕೆಲಸ, ಸಂಬಂಧಗಳಲ್ಲಿ ನಾವು ಆಯ್ಕೆ ಮಾಡಿಕೊಳ್ಳುವ ವಿಧಾನಗಳು ಇವುಗಳೆಲ್ಲದರ ಹಿನ್ನೆಲೆಯಲ್ಲಿ ನಮ್ಮ ನೆಲೆಯೇನು ಎಂಬುವುದನ್ನು ಅರ್ಥೈಸಿಕೊಳ್ಳಬೇಕಾದ್ದು ಹೆಚ್ಚು ನಿರ್ಣಯಾತ್ಮಕ ಎನಿಸುತ್ತದೆ. ಮಹಿಳೆಯರ ದೃಷ್ಟಿಕೋನದಿಂದ, ಗ್ರಾಮೀಣ ಮಹಿಳೆಯರ ಅದರಲ್ಲೂ ಬಹಳಷ್ಟು ವೇಳೆ ದಲಿತ ಮಹಿಳೆಯರ ಕುರಿತ ಚಿತ್ರಗಳನ್ನು ೧೦-೧೫ ವರ್ಷಗಳಲ್ಲಿ ಮಾಡಿರುವ ಮಧ್ಯಮ ವರ್ಗದ ಮಹಿಳೆಯಾದ ನನ್ನದೇ ಅನುಭವದ ನೆಲೆಯಲ್ಲಿ ಹೇಳುವುದಾದರೆ ಅಧಿಕೃತವಾದ ಭಾರತೀಯತೆ ಅಂದರೆ ಏನು ? ಅದರಲ್ಲಿ ಅಂತರ್ಗತವಾಗಿರುವುದು ಏನು ? ಎನ್ನುವ ಪ್ರಶ್ನೆ ಏಳುತ್ತದೆ. ಈ ದಲಿತ ಮಹಿಳೆಯರ ಗ್ರಾಮೀಣ ಸಂಸ್ಕೃತಿ, ಅವರಿಗಿರುವ ಅಭಿವ್ಯಕ್ತಿ ಸಂಪತ್ತು, ಅವರ ಭಾಷೆಯಲ್ಲಿರುವ ರೂಪಕಗಳ ಖಜಾನೆ ಇವೆಲ್ಲ ನಶಿಸುವ ಹಂತ ತಲುಪಿವೆ. ಅವರು ತಮ್ಮ ಗ್ರಾಮ್ಯ ಸೊಗಡಿನ ಭಾಷೆಯನ್ನು ಮಾತಾಡುವುದೇ ಹೀನಾಯವೆಂದುಕೊಳ್ಳುತ್ತಿದ್ದಾರೆ. ಮಾರುಕಟ್ಟೆ ಹಿಡಿತದ ಮೂಲಕ ಸಂಸ್ಕೃತಿಯನ್ನು ಜಾಗತೀಕರಣಗೊಳಿಸುವ ಪ್ರಕ್ರಿಯೆ ಅಂತ ನನ್ನ ವೈಯಕ್ತಿಕ ಭಾವನೆ. ಕುಟುಂಬದ ಮೂವರು ವಿವಿಧ ಸಂದರ್ಭಗಳಲ್ಲಿ ಪ್ರಾಣಕ್ಕೆ ಎರವಾದ ವಿಷಯವನ್ನು ನಾನು ಆಂಧ್ರದಲ್ಲಿ ಸಂದರ್ಶಿಸಿದ ಮುಸ್ಲಿಂ ವ್ಯಕ್ತಿಯೊಬ್ಬ ತಿಳಿಸಿದ. ಒಬ್ಬಾತ ೧೯೪೮ರಲ್ಲಿ ಅಂದರೆ ದೇಶದ ವಿಭಜನೆಯ ಉದ್ರಿಕ್ತತೆ ಇದ್ದ ಸಂದರ್ಭದಲ್ಲಿ, ಎರಡನೆಯಾತ ರಮೀಜಾ ಬೀ ಪ್ರಕರಣದಲ್ಲಿ, ಮೂರನೆಯಾತ ಇತ್ತೀಚಿನ ಕೋಮು ಸಂಘರ್ಷದ ವೇಳೆ ಬಲಿಯಾದನಂತೆ. ಇವರೆಲ್ಲ ಪೊಲೀಸ್ ಕಾರ್ಯಾಚರಣೆಗೆ ಬಲಿಯಾದವರೆಂದೇ ಪದೇ ಪದೇ ಪ್ರಶ್ನಿಸಿದಾಗಲೂ ಆತ ಹೇಳುತ್ತಿದ್ದ. ಆದದ್ದು 'ಮಿಲಿಟರಿ ಕಾರ್ಯಾಚರಣೆ'. ಮೂರು ಸಾವುಗಳು ವಿಭಿನ್ನ ಕಾರಣ, ಸನ್ನಿವೇಶಗಳಲ್ಲಿ ಸಂಭವಿಸಿದವು. ಇದನ್ನು ಅರ್ಥ ಮಾಡಿಕೊಳ್ಳಲಾರದವನಾಗಿದ್ದ ಆತ. ಹಾಗಾಗಿಯೆ ಯಾವುದೇ ಸಮಸ್ಯೆಯನ್ನು ಸ್ಥಳೀಯ ನೆಲೆಯಲ್ಲಿ ವಿಶ್ಲೇಷಿಸಿ ಪರಿಹಾರವನ್ನು ರೂಪಿಸಬೇಕು ಎಂದು ನಾನು ಹೇಳುವುದು. ಗತಕಾಲದ ಸುವರ್ಣಯುಗವನ್ನೆ ನೆನೆಯುತ್ತ ನೆನಪಿಸುತ್ತ ವರ್ತಮಾನಕ್ಕೆ ವಿಮುಖವಾಗುವಂಥ ಕ್ರಿಯೆಗೆ ಮುಂದಾಗುವುದರಲ್ಲಿ ಅರ್ಥವಿಲ್ಲ. ಜಾಗತೀಕರಣ ತರುವುದೆನ್ನಲಾದ ಭೀತಿಯನ್ನು ದೇಶೀಯಕರಣದಿಂದ ನಿರಸನಗೊಳಿಸಬೇಕು.

**ಗಿರೀಶ್** : ಇವತ್ತು ಭಾರತೀಯತೆ ಮತ್ತು ಭಾರತೀಯ ಸಂಸ್ಕೃತಿಗಾಗಿ ಡೆಸ್ಪರೇಟ್ ಆಗಿ ನಡೆಸುವ ''ಹುಡುಕಾಟ'' ಅರ್ಥಹೀನ ಅನ್ನಿಸುತ್ತೆ. ಇದು ಸದಾಕಾಲವೂ ಒಂದು ಸಮಾಜದಲ್ಲಿ ವ್ಯಕ್ತವಾಗ್ತಾ ಇರುತ್ತೆ. ನನ್ನ ಸುತ್ತಲಿನ ಪರಿಸರವನ್ನು ಅರ್ಥೈಸಿ ಗ್ರಹಿಸಿಕೊಂಡರೆ ಅದನ್ನು ಕಾಣಬಹುದು. ಸಮುದಾಯಕ್ಕೆ ಸೇರಿದ ಸಂಸ್ಕೃತಿ, ಚಲನಶೀಲವಾಗಿ ಕಾಲಕಾಲಕ್ಕೆ ಬದಲಾಗುತ್ತ ಹೋಗುತ್ತದೆ. ಜಾಗತೀಕರಣ ಎನ್ನುವುದು ರಾಜಕೀಯ ನೀತಿಯಾಗಿ ನಮ್ಮ ಮೇಲೆ ಬಂದಿರುವಂಥದು. ಅದನ್ನು ವ್ಯಕ್ತಿಗತವಾಗಿ ವಿರೋಧಿಸುವುದರಿಂದ ಹೆಚ್ಚೇನೂ ಪ್ರಯೋಜನ ಆಗುವುದಿಲ್ಲ. ಆರ್ಥಿಕತೆಯೇ ಮೂಲವಾದ ಜಾಗತೀಕರಣಕ್ಕೆ ನಾವು ಬೇಟೆಯ ಮಿಕಗಳಾಗದೆ ನಮ್ಮತನವನ್ನುಳಿಸಿಕೊಂಡು ಅದರ ಜತೆ ಅನುಸಂಧಾನ ಮಾಡುವುದು ಸೂಕ್ತವೆನ್ನಿಸತ್ತೆ. ಎಂದಿನದೋ ಬೇರುಗಳನ್ನು ಹುಡುಕುತ್ತ ಹೋಗುವ ಹಪಹಪಿಗಿಂತ ಇಂದಿನ ಅಗತ್ಯಗಳೇನು, ಸಮುದಾಯದಲ್ಲಿ ಏನು ಉಳಿದುಕೊಳ್ಳಬೇಕು ಎನ್ನುವುದರತ್ತ ಗಮನ ಕೇಂದ್ರೀಕರಿಸಬೇಕು.

**ರವಿ ಕಾಶಿ** : ಈ ಒಂದು ಪ್ರಕ್ರಿಯೆಯ ಬಗ್ಗೆ ನಮ್ಮಲ್ಲಿ ಅರಿವು ಮೂಡಿರುವುದೇ ಒಂದು ರೀತಿಯಲ್ಲಿ ಪ್ರತಿಭಟನೆ. ಇದೆಲ್ಲ ಒಂದೆರಡು ದಿನದಲ್ಲಿ ಸಾಧನೆಯಾಗುವಂಥದಲ್ಲ. ಅರಿವು ತಲೆಮಾರುಗಳಿಗೆ ಹರಿದು, ಬೆಳೆದು ಸಾಧಿಸಬೇಕಾದಂಥದು. ೧೯೪೭ರಲ್ಲಿ ಆಧುನಿಕ ವಾದ ಬಂತು. ಆನಂತರ ಇತರ ವಾದಗಳು ಕ್ಯೂಬಿಸಂ ಇತ್ಯಾದಿ ಬೆಳೆದವು. ಕಾರ್ಯಸ್ತರದಲ್ಲಿ ಮೂರು ವಾದಗಳಿವೆ. ಒಂದು ಭಾರತೀಯತೆಯನ್ನು ಮೈಗೂಡಿಸಿಕೊಂಡ ಪೇಯಿಂಟಿಂಗ್‌ಗಳನ್ನೇ ಅಲ್ಲಿಗೆ ಒಯ್ದು ಪರಿಚಯಿಸುವುದು, ಎರಡನೆಯದು ನಾವೇನು ಮಾಡುತ್ತೇವೆಯೋ ಅದನ್ನು ಕೊಡುವುದು, ಮೂರನೆಯದು ಇದಾವುದರ ಗೊಡವೆಯೂ ಇಲ್ಲದೆ ಇದ್ದಲ್ಲಿ ತಮ್ಮ ಪಾಡಿಗೆ ತಾವು ಚಿತ್ರರಚನಾ ಕಾರ್ಯದಲ್ಲಿ ಮಗ್ನರಾಗುವುದು. ಅಲ್ಲಿನವರು ತಮ್ಮ ಕಲೆಯನ್ನು ಇಲ್ಲಿಗೆ ಪರಿಚಯಿಸಬೇಕಾದರೆ ಗ್ಯಾಲರಿ, ಬ್ರೋಷರ್ ಇತ್ಯಾದಿಗಳಿಗಾಗಿ ಕನಿಷ್ಠ ೬ ತಿಂಗಳ ಸಿದ್ಧತೆ ಮಾಡ್ತಾರೆ. ಅವರ ಮಹಾನ್ ಚಿತ್ರಕಾರರನ್ನ ಅವರೇ ನಿರ್ಧರಿಸಿ, ಜಗತ್ತಿನ ಶ್ರೇಷ್ಠರೆಂದು ನಾವು ಒಪ್ಪಿಕೊಳ್ಳುವಂತೆ ನಮ್ಮ ಮನಸ್ಸುಗಳ ಮೇಲೆ ಪ್ರಭಾವ ಬೀರುತ್ತಾರೆ. ಆ ಆರ್ಥಿಕ ಶಕ್ತಿಯಾಗಲಿ, ಸರಕಾರ ಮತ್ತಿತರೆ ಬೆಂಬಲವಾಗಲಿ ನಮಗಿಲ್ಲ. ಇನ್ನೂ ಎರಡು ಶತಮಾನ ಕಳೆದರೂ ನಮ್ಮ ಮಹಾನ್ ಕಲಾಕಾರರಿಗೆ ಜಾಗತಿಕ ಶ್ರೇಷ್ಠರ ಶ್ರೇಣಿಯಲ್ಲಿ ಸ್ಥಾನ ಸಿಗುವುದು ನನಗೆ ಅನುಮಾನ. ಸದ್ಯಕ್ಕಂತೂ ನಾವೇನೂ ಮಾಡಲಿಕ್ಕಾಗುವುದಿಲ್ಲ. ಆದರೆ ಮುಂದೊಂದು ದಿನ ಅಂಥ ಪರಿಸ್ಥಿತಿ ನಮ್ಮಲ್ಲೂ ರೂಪುಗೊಂಡೀತೆಂಬ ದೂರದ ಆಶೆಯಿಂದ ಮುಂದುವರಿಯಬೇಕಷ್ಟೇ.

**ಗಿರೀಶ್** : ಸಾಮಾನ್ಯವಾಗಿ ಮುಂದುವರಿದ ರಾಷ್ಟ್ರಗಳು ತೃತೀಯ ಜಗತ್ತನ್ನು ಪೂರ್ವಾಗ್ರಹದಿಂದ ನೋಡುತ್ತವೆ. ಆಧುನಿಕ ಸೌಲಭ್ಯ, ಸಂಪರ್ಕ, ಹಣ ಇಲ್ಲದವರೆಲ್ಲ ಅಮಾನವೀಯರಾಗಿರುತ್ತಾರೆ ಅನ್ನುವ ಭಾವನೆ. 'ಪಥೇರ್ ಪಾಂಚಾಲಿ' ಸಿನಿಮಾ ಇಂಥ ನಂಬಿಕೆಗಳಿಗೆ ಸರಿಯಾದ ಉತ್ತರ ಕೊಟ್ಟಿತ್ತು. ಕಿತ್ತು ತಿನ್ನೋ ಬಡತನ ಇದ್ದವರೂ ನಗ್ತಾರೆ, ಆಡ್ತಾರೆ, ದುಡ್ಡಿಲ್ಲ ಅಂತ ಒಬ್ಬರನ್ನೊಬ್ರು ಸಾಯಿಸುವುದಿಲ್ಲ ಅಂತ ತೋರಿಸಿತ್ತು. ಇವತ್ತಿಗೆ ಒಳ್ಳೇ ಉದಾಹರಣೆ ಅಂದರೆ ಇರಾನಿಯನ್ ಸಿನಿಮಾಗಳು. ಆ ದೇಶದ ಜನ ಹತ್ತಿಕ್ಕಲ್ಪಟ್ಟಿದ್ದಾರೆ, ದನಿ ಇಲ್ಲದೋರು ಅಂತ ಏನೇನೆಲ್ಲ ಹುಸಿ ಪುರಾಣ ಕಟ್ಟಿದಾರಲ್ಲ. ಪಾಶ್ಚಾತ್ಯರಿಗಿಂತ ಇವರೇನು ಕಮ್ಮಿ ಸುಸಂಸ್ಕೃತರಲ್ಲ ಎಂದು ಅವರ ಸಿನಿಮಾ ತೋರಿಸುತ್ತಿದೆ. ಪಶ್ಚಿಮದವರು ಇವರ ಬಗ್ಗೆ ಕಟ್ಟಿಕೊಂಡ ಇಮೇಜಿಗೆ ತದ್ವಿರುದ್ಧವಾದ್ದನ್ನ ಇರಾನಿಯನ್ ಸಿನಿಮಾ ನಿರ್ದೇಶಕರು ತೋರಿಸ್ತಿದಾರೆ. ಎಲ್ಲಿಂದಲೋ ಧನ ಸಹಾಯ ಪಡೆದಿದ್ದರೂ ತಮ್ಮ ನಿಜವಾದ ಸಮಾಜ ಹೇಗಿದೆ ಅನ್ನೋದನ್ನೇ ಹೇಳ್ತಿರ್ತಾರೆ. ಇದು ಪಾಶ್ಚಾತ್ಯರಿಗೆ ಕೊಡುವ ಪೆಟ್ಟು ಕೂಡಾ... ಒಂದು ಸಬ್‌ವರ್ಷನ್ ಆಗಿ....

**ಜಿ. ಆರ್.** : ನಮ್ಮಲ್ಲಿ ಏಕಕಾಲಕ್ಕೆ ಆಧುನಿಕ ಸೌಲಭ್ಯ, ಸಂಪರ್ಕ ವ್ಯವಸ್ಥೆಯನ್ನೂ ಒಪ್ಪಿಕೊಳ್ತಾರೆ, ಅವರೇ ಅತ್ಯಂತ ಪ್ರಾಚೀನವಾದ ಕೆಲವು ಸಂಗತಿಗಳ ಬಗ್ಗೆ ವ್ಯಾಮೋಹ ಇಟ್ಟುಕೊಂಡಿರ್ತಾರೆ, ಅದನ್ನ ವೈಭವೀಕರಿಸ್ತಾ ಇರ್ತಾರೆ. ಇದನ್ನ ಸಾಂಸ್ಕೃತಿಕವಾಗಿ ಹೇಗೆ ವ್ಯಾಖ್ಯಾನಿಸೋದು ?

**ಮನು :** ಇವತ್ತು ಭೂತಕಾಲವನ್ನು, ಭಾರತಕ್ಕೆ ಸಂಬಂಧಪಟ್ಟಂತೆ ವೈದಿಕಯುಗ, ವೇದಾಂತಕ್ಕೆ ಸಂಬಂಧಪಟ್ಟದ್ದು ಇದನ್ನ ಎತ್ತಿ ಹಿಡೀತಿದಾರೆ. ಅದನ್ನ ಮಾಡ್ತಿರೋರು ಆಧುನಿಕರೇ... ಇಲ್ಲದೇ ಇರೋ ಒಂದು ಸುವರ್ಣಯುಗವನ್ನು ಕಟ್ಟುವ ಪ್ರಯತ್ನ. ಅಂಥದೊಂದು ಇಲ್ಲವೇ ಇಲ್ಲ ಅನ್ನೋದು ಅದನ್ನ ಗಂಭೀರವಾಗಿ ಅಭ್ಯಾಸಮಾಡಿದಾಗ ತಿಳಿದುಹೋಗುತ್ತೆ. ಆದರೆ ನಮಗೆ ಆ ಪಠ್ಯದ ಪರಿಚಯ ಇಲ್ಲ, ಇನ್ನೊಂದು ಕಡೆ ಪಾಶ್ಚಾತ್ಯರು ಕಟ್ಟಿಕೊಡುವ ಎಪಿಸ್ಟಮಾಲಜಿಯ ಜ್ಞಾನಶಾಖೆ. ಕಡೆಗೆ ಎಲ್ಲಿ ನಿಲ್ಲುತ್ತೆ ಅಂದ್ರೆ ನಿಮ್ಮ ವೈದಿಕ ಸಂಪ್ರದಾಯ ಸುಳ್ಳು, ನಿಮ್ಮ ದೈವದ ಕಲ್ಪನೆ ಸುಳ್ಳು, ನಿಮ್ಮ ಇತಿಹಾಸ ಸುಳ್ಳು ಇತ್ಯಾದಿ... ಒಟ್ಟಾರೆ ಯಾವುದನ್ನು ನಾವು ಪರಿಶೀಲನೆ ಮಾಡಬೇಕೋ ಅದನ್ನ ಮಾಡದೆ, ಅದರ ಬಗ್ಗೆ ಸುಲಭವಾಗಿ, ಇದು ವೇದಿಕ್, ಇದು ಬ್ರಾಹ್ಮನಿಕಲ್ ಅಂದುಬಿಡುತ್ತೀವಲ್ಲ ಅದು ನಿಜವಾಗ್ಲೂ ಇತ್ತಾ? ಇದೆಯಾ ? ಇದು ಭಾರತದ ಪ್ರಾಚೀನತೇನ ಹೇಳ್ತಿದೆಯಾ ಅನ್ನೋದು ಪರಿಶೀಲನೆ ಆಗಬೇಕು. ಆಗ ಮಾತ್ರ ಈ ಮತೀಯವಾದಿಗಳು ಕಟ್ಟಿಕೊಡುತ್ತಿರೋ ವೇದ, ವೇದಕಾಲೀನ, ವೇದಾಂತ, ದೇವರನ್ನ ಚಾರಿತ್ರಿಕಗೊಳಿಸೋದು ಇದನ್ನೆಲ್ಲ ಒಡೆಯೋದಿಕ್ಕೆ ಬೌದ್ಧಿಕ ಸಲಕರಣೆಗಳು ಸಿಗುತ್ತವೆ. ಆ ರೀತಿಯ ಸಿದ್ಧತೆ ಕೂಡಾ ಈ ತೊಗಾಡಿಯಾ, ನರೇಂದ್ರ ಮೋದಿ ಥರದ ಕೊಲೆಗಡುಕರನ್ನು ಬಗ್ಗುಬಡಿಯೋಕೆ ಅಗತ್ಯ ಅನ್ನಿಸುತ್ತೆ.

**ರಾಮಯ್ಯ:** ಇವತ್ತು ಕೋಮುವಾದ-ಜಾಗತೀಕರಣ ಎರಡೂ ಒಟ್ಟೊಟ್ಟಿಗೆ ನುಗ್ಗುತ್ತಾ ಇವೆ. ಜಾಗತೀಕರಣಕ್ಕೆ ಅವಕಾಶ ಮಾಡಿಕೊಟ್ರೆ ಕೋಮುವಾದ ಬಂದೇ ಬರುತ್ತೆ. ಅವೆರಡೂ ಒಂದಾಗ್ತಾ ಇವೆ. ಈ ಸಮಸ್ಯೇನ ಇವತ್ತು ಎದುರಿಸ್ತಾ ಇದೀವಿ. ಮನು ಚಕ್ರವರ್ತಿ ಹೇಳುತ್ತಿರುವುದು ಒಂದು ಜ್ಞಾನ, ಜ್ಞಾನಶಾಖೆ. ಅದರ ಮೂಲಕವೂ ಉತ್ತರ ಕೊಡಬಹುದು ಅಷ್ಟೆ. 'ನೀವು ಹೇಳುತ್ತಿರೊ ತತ್ವ ಸರಿಯಲ್ಲ, ಹುರುಳಿಲ್ಲ' ಅಂತ ವಾದ ಮಂಡಿಸೋಕೆ ಈ ಅಧ್ಯಯನ ನೆರವಾಗಬಹುದು. ಆದರೆ ಇವತ್ತು ಪ್ರಶ್ನೆ ಇರೋದು ಸಮಷ್ಟಿಯಲ್ಲಿ, ಇದು ನಮ್ಮ-ನಿಮ್ಮಂಥ ಒಬ್ಬಿಬ್ಬರ ಸಮಸ್ಯೆ ಅಲ್ಲ, ಒಂದು ದೊಡ್ಡ ಸಮುದಾಯದ್ದು. ಅವರನ್ನ ಆ ಬಗೆಯ ಅಧ್ಯಯನದಲ್ಲಿ ತೊಡಗಿಸೋದು ಹೇಗೆ? ಅವರೊಳಗೇ ಒಂದು ನೆಲೆ ಕಟ್ಟಿಕೊಳ್ಳೋದು ಮುಖ್ಯ. ನನ್ನನ್ನ ನಾನು ಗೌರವಿಸಿ ಕೊಳ್ಳೋದು. ಕೈವಾರ ನಾರಣಪ್ಪನೊ, ಶಿಶುನಾಳ ಶರೀಫನೊ ಮತ್ತೊಬ್ಬನೊ ಆಧ್ಯಾತ್ಮವನ್ನ ಅವರವರೇ ಕಟ್ಟಿಕೊಂಡರು. ಅವರಿಗೆ ಸಹಜವಾಗಿ ಸಿದ್ಧಿಸಿತ್ತು ಅದು. ರವಿಶಂಕರ್ ಥರ ಒಂದು ವ್ಯವಸ್ಥೆಯೇ ಆಗಿ ಇದು ಆಧ್ಯಾತ್ಮ, ಇದು ಬದುಕು ಅಂತ ಸಮೀಕರಿಸಲಿಲ್ಲ. ನಾವೆಷ್ಟರಮಟ್ಟಿಗೆ ನಮ್ಮ ನೆಲೆಗಳಿಗೆ ಬದ್ಧರು ಅನ್ನೋದು ಮುಖ್ಯ. ಜಾಗತೀಕರಣವನ್ನ ತಡೆ ಹಿಡಿಯುವಂಥ ಪ್ರತಿರೋಧ ಶಕ್ತಿ ಸಮುದಾಯದಲ್ಲೇ ಇದೆ. ನನ್ನ-ನಿಮ್ಮಲ್ಲಿ ಆ ಶಕ್ತಿ ಇಲ್ಲದೇ ಇರಬಹುದು. ಜಾಗತೀಕರಣವನ್ನು ನಾವು ಮೈಮೇಲೆ ಆವಾಹಿಸಿಕೊಳ್ತಾ ಇದೀವಿ. ಆದರೆ ನಮ್ಮ ತಾಯಿ, ಒಬ್ಬ ಕೂಲಿಯವನು ಹಾಗೆ ಆವಾಹಿಸಿಕೊಳ್ಳೋದಿಲ್ಲ. ಅಷ್ಟರಮಟ್ಟಿಗೆ ಅವರ ಪರಿಸರದಲ್ಲಿ ಪ್ರತಿರೋಧ ಶಕ್ತಿ ಇದೆ. ಆ ಶಕ್ತಿಯ ಮೂಲಕ ನಾವು ಜಾಗತೀಕರಣವನ್ನು ತಡೆಗಟ್ಟಲು ಸಮಷ್ಟಿ ದಾರಿಗಳನ್ನ ಹುಡುಕಬೇಕಾಗಿದೆ ಇವತ್ತು.

**ಗಿರೀಶ್ :** ನೀವು ಮತ್ತು ಮನು ಹೇಳಿದ ಮಾತುಗಳನ್ನು ನಾನು ಒಪ್ಪುತ್ತೇನೆ. ಈ ಭವ್ಯ ಪರಂಪರೆ ಇತ್ಯಾದಿ ಆದರ್ಶಗಳನ್ನ ಅನುಕೂಲಕ್ಕೆ ತಕ್ಕ ಹಾಗೆ ಕಟ್ಟುತ್ತಾ, ಭೂತವನ್ನು ಸೃಷ್ಟಿಸುವ ಪ್ರವೃತ್ತಿಯನ್ನು ಒಡೆಯೋಕೆ ನಮಗೆ ಸಾಧ್ಯ ಆಗಬೇಕು. ಹಾಗಾದಾಗ ನಮ್ಮ ದಾರಿ ಸುಲಭ ಆಗಬಹುದು. ಒಬ್ಬ ಕಲಾವಿದನಾಗಿ ನಾನು ಈ 'ಐಡಿಯಲ್' ಅನ್ನೇ ನಿರಾಕರಿಸ್ತಾ ಹೋಗ್ತೀನಿ. ಇವತ್ತು ಎದುರಿಗೆ ನಿಂತಿರೋ 'ತಡೆ'ಯನ್ನ ದಾಟೋದು ಮುಖ್ಯ. ಮುಂದೆ ಮತ್ತೊಂದು ತಡೆ ಬರಬಹುದು. ಆಯಾ ಕಾಲದ ಸಮುದಾಯ ಅದನ್ನ ನಿರ್ವಹಿಸಿಕೋಬೇಕು, ನಿರ್ವಹಿಸುತ್ತೆ. ಆ ನಂಬಿಕೆ ಮೇಲೆ ಕಟ್ಟುತ್ತಾ ಹೋಗಬೇಕು. ಹಿಂದೆಂದೂ ಇತ್ತು, ಮುಂದೆಲ್ಲೋ ಇದೆ, ಸಿಗುತ್ತೆ ಅನ್ನೋದಲ್ಲ, ಇವತ್ತಿನದಕ್ಕೆ ಇವತ್ತಿನ ಗ್ರಹಿಕೆಯ ಮೂಲಕ ದಾಟುವ ಪ್ರಯತ್ನ ನನ್ನ ಕರ್ತವ್ಯ. ಅದು ಒಂದು ಸಾರ್ವಕಾಲಿಕ ಸೂತ್ರದ ನಿರೂಪಣೆ ಖಂಡಿತಾ ಅಲ್ಲ.

**ಮನು :** ಇವತ್ತು ಎಲ್ಲವನ್ನೂ ಚಾರಿತ್ರಿಕ ಮಾಡ್ತಾ ಇದಾರಲ್ಲ ಇಂಡಿಯನ್ ಎಪಿಸ್ಟಮಾಲಜಿಯಲ್ಲೇ ಬಂದಿರೋದು... ಆಧುನಿಕ ಜ್ಞಾನಶಾಖೆಯಲ್ಲಿ ಬಂದಿರೋ ಸಮಸ್ಯೆ ಇದು. ಸುಳ್ಳು ಬೌದ್ಧಿಕ ಶಕ್ತಿ.. ಸುಳ್ಳನ್ನು ಹೇಳಿ ಹೇಳಿ ಹೇಳಿ... 'ನಿಜ' ಅನ್ನಿಸಿಬಿಡೋದು. ಇಪ್ಪತ್ತು ವರ್ಷದ ಹಿಂದೆ ಯಾರೂ ಮಾತಾಡ್ತಿರಲಿಲ್ಲ, ಇವತ್ತು ರಾಮ, ಅಯೋಧ್ಯೆ ಇತಿಹಾಸವಾಗ್ತಿರೋದರ ಹಿಂದೆ ಇಂಥ 'ವ್ಯವಸ್ಥಿತ' ಸಂಚು ಇದೆ. ಮಿಥ್‌ಗಳನ್ನು ಕಟ್ಟುವ ಮೂಲಕ ನಂಬಿಸಿಬಿಡೋದಾಗ್ತಿದೆ. ಇದನ್ನ ಒಡೆಯೋದಾಗಬೇಕು ಅಂತೀನಿ.

**ದೀಪಾ :** ೯೦ರ ದಶಕದಿಂದೀಚೆಗೆ ಒಂದು ವಿಚಿತ್ರ ಒಪ್ಪಂದದ ಜೊತೆ ಸಾಗಿದ್ದೇವೆ. ನಮ್ಮ ಆರ್ಥಿಕ ಸ್ಥಿತಿಗತಿಗಳು ಒಮ್ಮೆಲೇ ಬದಲಾಗಿವೆ. ಆ ಪರಿಣಾಮವಾಗಿ ಹೊಸ ಮುಖಗಳು ಅನಾವರಣಗೊಂಡಿವೆ. ಕೆಲವು ಆತಂಕಕಾರಿ ಸಂಗತಿಗಳಿಗೂ ದಾರಿಯಾಗಿವೆ. ಮಾಧ್ಯಮಾಧಿ ಕಾರವುಳ್ಳ ಎಂಟು ಕಂಪನಿಗಳಿವೆ. ಶೇ. ೭೦-೮೦ ಭಾಗ ಸುದ್ದಿಗಳು ಎಲ್ಲಿಂದಲೋ ಬರುತ್ತಿವೆ. ಈ ಏಜೆನ್ಸಿಗಳಲ್ಲಿ ಕೆಲಸ ಮಾಡುವವರು ಬಹುತೇಕ ಹೊರ ದೇಶದ ಬಾತ್ಮೀದಾರರು, ಅವರು ತೃತೀಯ ಜಗತ್ತಿನಲ್ಲೇ ಇದ್ದುಕೊಂಡು ಕೆಲಸ ಮಾಡುತ್ತಿದ್ದಾರೆ. ಈಗ ಬರುವ-ಹೋಗುವ ಸುದ್ದಿಗಳು ಹೇಗಿರುತ್ತವೆ, ಏನಾಗಿರುತ್ತವೆ ಎಂಬುದನ್ನು ಊಹಿಸಬಹುದಲ್ಲವೆ? ಭಾರತ ದಲ್ಲಂತೂ ಸ್ಟಾರ್, ಮುರ್ಡೋಕ್‌ಗಳು ಆಕ್ರಮಿಸಿಯಾಗಿದೆ. ಈ ಹಿನ್ನೆಲೆಯಲ್ಲಿ ನೋಡಿದರೆ ಟಿಲಿವಿಷನ್‌ನಂಥ ಮಾಧ್ಯಮಗಳಿಗೆ ಹಣ ಎಲ್ಲಿಂದ ಬರುತ್ತಿದೆ ಎಂತಲೂ ಊಹಿಸ ಬಹುದಾಗಿದೆ. ನಾವು ಜಾಹಿರಾತು, ಕಾರ್ಪೊರೇಟೈಸಿಂಗ್ ಅಂತ ಮಾತನಾಡ್ತಿದೀವಿ. ಈಚೆಗೆ ನನ್ನ ಕೆಲವು ಮಾಧ್ಯಮ ಮಿತ್ರರಿಂದ ತಿಳಿದುಬಂದ ಸಂಗತಿ ಏನೆಂದರೆ, ಇಲ್ಲಿಯೂ ಜಾಹಿರಾತು ಕಂಪನಿಗಳು, ಏಜೆನ್ಸಿಗಳು ಇವೆ. ಆದರೆ ಕೋಲಾ, ಪೆಪ್ಸಿ ಮೊದಲಾದ ಯಾವುದೇ ಅಂತಾರಾಷ್ಟ್ರೀಯ ಪದಾರ್ಥಗಳಿಗೆ ಜಾಹಿರಾತು ಸಿದ್ಧವಾಗುವುದು ಅಮೆರಿಕಾದಲ್ಲಿಯೇ. ಅಲ್ಲಿಂದ ಬರುವ ಟೇಪ್‌ಗಳನ್ನು ಹಾಕಿಕೊಂಡು ಪ್ರತಿಯೊಂದು ಚಿತ್ರಿಕೆಯನ್ನೂ ತದ್ವತ್ತಾಗಿ ಅನುಕರಿಸಬೇಕು. ಕೇವಲ ಪಾತ್ರಧಾರಿ, ಭಾಷೆ, ಸ್ಥಳ ಸ್ಥಳೀಯವಾಗಿರುತ್ತೆ ಅಷ್ಟೇ. ಎಲ್ಲವೂ ಯಾರದೋ ನಿಯಂತ್ರಣದಲ್ಲಿದೆ. ಅವರು ರೂಪಿಸಿದ ಹಾಗೆ ಇರ್ತವೆ. ಇಷ್ಟು ಸಾಕಲ್ಲ ಮಾಧ್ಯಮಗಳು ನಡೆದುಬರುತ್ತಿರುವ ರೀತಿ ತಿಳಿಯಲು ? ಇನ್ನೊಂದು ಜಾಗತೀಕರಣದ ದೊಡ್ಡ ದಾಳಿ ಎಂದರೆ ವಿಶ್ವಬ್ಯಾಂಕ್ ಮೊದಲಾದ ಹಲವು ಏಜೆನ್ಸಿಗಳದ್ದು. ಆಂಧ್ರ-ಕರ್ನಾಟಕದ ಶಿಕ್ಷಣ ಕ್ಷೇತ್ರದಲ್ಲಿ, ಹೆದ್ದಾರಿಗಳ ವಿಚಾರದಲ್ಲಿ ಏನಾಗುತ್ತಿದೆ ಗಮನಿಸಿ. ಗ್ರಾಮೀಣ ಮಹಿಳೆಯರನ್ನು ಸ್ವಸಹಾಯ ಪದ್ಧತಿಯ ಅಡಿ ಒಗ್ಗೂಡಿಸುತ್ತಿರುವುದರ ಹಿಂದೆ ಇರುವ ಷಡ್ಯಂತ್ರವನ್ನು ಊಹಿಸಿಕೊಳ್ಳಿ. ಬಡತನ ನಿರ್ಮೂಲನೆಯಂಥ ಯೋಜನೆಯಡಿಯಲ್ಲಿ ಇದನ್ನು ಪ್ರಾರಂಭಿಸಿದ್ದು ಆಂಧ್ರದ ಚಂದ್ರಬಾಬು ನಾಯ್ಡು. ರಾಷ್ಟ್ರವೇ ಇನ್ನೂ ತೀರ್ಮಾನ ಮಾಡಿರಲಿಲ್ಲ, ಆಂಧ್ರದಂಥ ರಾಜ್ಯ ನಿರ್ಧರಿಸಿ ಸಹಿ ಹಾಕಿಯಾಗಿತ್ತು. ವಿಶ್ವಬ್ಯಾಂಕಿನೊಂದಿಗೆ ಒಪ್ಪಂದವಾಗಿಹೋಗಿತ್ತು. ಜಾತಿ, ಮತ, ಪುರುಷ ಎಲ್ಲವನ್ನೂ ಬಿಟ್ಟು ಮಹಿಳೆಯರನ್ನು ರಾಜಕೀಯ ಗುರಿ ಸಾಧನೆಗೆ ಕೇಂದ್ರ ಮಾಡಿಕೊಂಡರು. ಎಂಟು ಲಕ್ಷ ಮಹಿಳೆಯರನ್ನು ಈ ಯೋಜನೆಯಡಿ ಸಂಘಟಿಸಿದರು. ಇವೆಲ್ಲ ನಮ್ಮ ಸಂಸ್ಕೃತಿಗೂ ಹೇಗೆ ಸಂಬಂಧ ಪಡುತ್ತವೆ ಎಂಬುದನ್ನು ಗುರುತಿಸಬೇಕಾಗಿದೆ.

ನಾವು ಸಂಸ್ಕೃತಿಯ ನಿರ್ಮಾಣಕಾರರಾಗಿ ಮಾತಾಡ್ತಿದೀವಿ. ಇದಕ್ಕೂ ಮುಂದೆ ಹೋಗಿ ಜಾಗತೀಕರಣದ ಹಿನ್ನೆಲೆಯಲ್ಲಿ ಸ್ಟೇಟ್‌ನ ಪಾತ್ರವನ್ನ ಗಮನಿಸಬೇಕು ಅನ್ನಿಸುತ್ತೆ. ಎಲ್ಲಕಡೆ 'ಧನಸಹಾಯ' ಆಗ್ತಿದೆ. ಅದರ ಮೂಲಕ ಏನು ಕೊಡ್ತಿದಾರೆ? ನಮ್ಮ ಅನೇಕ ಸಾಂಸ್ಕೃತಿಕ ವ್ಯವಸ್ಥೆಗಳು, ಅಕಾಡೆಮಿಗಳಲ್ಲಿ ಬಿಜೆಪಿ ಜನ ತುಂಬಿಕೊಂಡಿದಾರೆ. ಇಲ್ಲೆಲ್ಲ ಏನಾಗ್ತಾ ಇದೆ ಅನ್ನೋದನ್ನ ಪರಿಶೀಲಿಸಬೇಕಿದೆ. ನೀವು ಕಟ್ಟುವ ಮಾತಾಡ್ತ ಇದ್ದೀರಿ. ಆ ಹಿನ್ನೆಲೆಯಲ್ಲಿ ಕೆಲವು ಕುತೂಹಲಕರ ಬೆಳವಣಿಗೆಗಳನ್ನು ಗಮನಿಸಬೇಕು. ಜಾಗತೀಕರಣದಿಂದಾಗಿ ಆರ್ಥಿಕ ಶಕ್ತಿ ಬೇರೆಯಾಗ್ತಿದೆ. ಟೆಲಿವಿಷನ್ ಜಾಹಿರಾತುಗಳನ್ನು ಗಮನಿಸಿ, ಬೇರೆ ಕಾರ್ಯಕ್ರಮಗಳ ಮೂಲಕ ಕೂಡ ಜಗತ್ತಿಗೆ ಹೊಸ ನಾಗರಿಕ ಬರ್ತಿದಾನೆ, ಸರ್ಕಾರ ಕೂಡಾ ಬದಲಾಗ್ತಾ ಇದೆ. ಈಗ ಅದು 'ಗರೀಬಿ ಹಟಾವೋ' ಅನ್ನೋಲ್ಲ, ನಿನ್ನನ್ನು ನೀನೇ ರೂಪಿಸಿಕೊ, ನಿನಗೆ ನಾವು ಧನ ಸಹಾಯ ಮಾಡ್ತೀವಿ ಅನ್ನುತ್ತೆ. ಈಗ ವ್ಯಕ್ತಿಯೇ ಜವಾಬ್ದಾರ, ಸ್ಟೇಟ್ ಅಲ್ಲ. ಇಂಥಲ್ಲಿ ನಾವೆಲ್ಲಿ ನಿಂತಿದೇವೆ ಅಂತ ನೋಡಿಕೋಬೇಕಿದೆ. ''ನೀನು ಗ್ರಾಮ ಪಂಚಾಯತ್‌ನಲ್ಲಿರು. ನಿನಗೆ ಮೂರು ಸಾವಿರ ರೂಪಾಯಿ ಕೊಡ್ತೀವಿ. ಆದರೆ ನಿನ್ನ ನೀರಿನ ಸಮಸ್ಯೆ ನೀನೇ ಪರಿಹರಿಸಿಕೊ, ನಾವು ಜವಾಬ್ದಾರರಲ್ಲ'' ಅನ್ನುತ್ತೆ ಸ್ಟೇಟ್. ವಿಚಿತ್ರ ಎನ್ನಿಸುವಂಥ ದಿಢೀರ್ ಬದಲಾವಣೆ, ಅಥವಾ ಹೊಣೆಗಾರಿಕೆಯ ವರ್ಗಾವಣೆಯಂಥದ್ದು ಬಂದಿದೆ. ವಿಶ್ವಬ್ಯಾಂಕು ಸರ್ಕಾರಿ ಆಸ್ಪತ್ರೆಗಳಿಗೆ ಬಳಕೆದಾರನಿಂದ ಫೀಸ್ ತಗೊ ಅನ್ನುತ್ತೆ! ಒಂದು ಕಾಲಕ್ಕೆ ಪ್ರಜೆ, ಸ್ಟೇಟ್, ಸಂಬಂಧ ಏನಾಗಿತ್ತು? ಅದು ಇವತ್ತು ಏನು ಆಗ್ತಾ ಇದೆ! ಅವನಿಗವನೇ ಜವಾಬ್ದಾರ ಅನ್ನುವಂಥ ಒಂದು 'ಹೊಸ ಕಟ್ಟೋಣ'ವೇ ನಮ್ಮೆದುರಿಗಿದೆ. ಇದು ಬಹಳ ಸೂಕ್ಷ್ಮವಾಗಿ ಆಗಿ ಹೋಗಿಬಿಡ್ತಿದೆ. ಆ ಹಂತದಲ್ಲಿ..

**ಮನು** : ಪ್ರಭುತ್ವದ ಈ ಪ್ರವೃತ್ತಿಯನ್ನ ಬೆಳೆಸೋದು ಮಧ್ಯಮವರ್ಗದ ಪೋಷಕರು. ಪ್ರಭುತ್ವ ಲಾಭದಾಯಕವಾದ್ದಕ್ಕೆ ನೆರವಾಗುತ್ತೆ. ಬಯೊಟೆಕ್ನಾಲಜಿ, ಬಿ.ಬಿ.ಎಂ., ಎಂ.ಬಿ.ಎ.ಗಳು ಅಂಥ ಲಾಭ ಕೊಡುತ್ವೆ. ಇಲ್ಲಿ ಪ್ರಭುತ್ವ ನೆರವಿಗೆ ಬರುತ್ತೆ, ಪೋಷಿಸುತ್ತೆ. ಯಾಕೆ ಅಂದ್ರೆ ಅದನ್ನ ಬಯಸಿ ಬೆಳೆಸೊ ಮಧ್ಯಮವರ್ಗದಿಂದ ಲಾಭ ಇದೆ. ಇವತ್ತು ಮಧ್ಯಮವರ್ಗಕ್ಕೆ ಮಾನವಿಕಗಳು ಬೇಡ, ಸಹಜ ವಿಜ್ಞಾನ ಬೇಡ! ಅವರಿಗೆ ಸ್ಕೋಪ್ ಇರೋದು ಬೇರೆ ಕಡೆ ಅಂತ ಕಂಡುಕೊಂಡಿದಾರೆ. ಕೆಲವು ಕಡೆ (ಗುಜರಾತ್‌ನಲ್ಲಿ ಮಾನವಿಕ ವಿಭಾಗ ತೆಗೆದೇಬಿಟ್ಟಿದಾರೆ.) ಅಂತಹ ಶಿಕ್ಷಣಕ್ಕೆ ಧನಸಹಾಯ ನಿಲ್ಲಿಸಿಬಿಟ್ಟಿದ್ದಾರೆ.

**ಜಿ. ಆರ್.** : ನಾವು ಇದುವರೆಗೆ ಇಂಥ ಕಾರ್ಯಕಾರಣಗಳನ್ನು ಕುರಿತು ಚರ್ಚಿಸ್ತಾ ಇದೇವೆ. ಕೊನೆಯದಾಗಿ ಇದಕ್ಕೆ ನಿಖರವಾಗಿ ಯಾವುದಾದರೂ ಪರಿಹಾರದ ಮಾರ್ಗ ಇದೆಯೇ? ಖಚಿತವಾಗಿ ಏನು ಕ್ರಮ ತಗೋಬೇಕು ಅನ್ನಿಸುತ್ತೆ?

**ದೀಪಾ ಧನರಾಜ್** : ಇವತ್ತು ಈ ಬಗ್ಗೆ ಸರಿಯಾದ ಚರ್ಚೆ ಆಗ್ತಿದೆ ಅನ್ನಿಸ್ತಿಲ್ಲ, ನಾವು... ಕಲಾವಿದರು, ಕಲಾವಲಯ ಅಥವಾ ಸಾಂಸ್ಕೃತಿಕ ಸಂದರ್ಭದಲ್ಲಿ ಎಷ್ಟು ಆಗಬೇಕಿತ್ತೋ ಅಷ್ಟು ಗಂಭೀರವಾಗಿ ಚರ್ಚೆ ಆಗಿಲ್ಲ. ಆರ್ಥಿಕತಜ್ಞರು, ಪರಿಸರತಜ್ಞರು, ಬಯೊಟೆಕ್ನಾಲಜಿಯಂಥ ಕಡೆ ಚರ್ಚೆ ಆಗ್ತಾ ಇದೆ. ರೈತರು.. ಅದರಲ್ಲೂ ಪೇಟೆಂಟ್ಸ್ ವಿಚಾರದಲ್ಲಿ ಬಹಳಷ್ಟು ಎಚ್ಚರ ಬಂದಿದೆ. ಪ್ರಾಯಶಃ ಅಲ್ಲೆಲ್ಲ ಪ್ರತಿರೋಧ ಎದ್ದು ಕಾಣುತ್ತೆ. ಸಾಂಸ್ಕೃತಿಕ ವಿಚಾರಗಳಲ್ಲಿ ಹಾಗೆ ಎದ್ದುಕಾಣುವಂಥದ್ದಿಲ್ಲ. ಇಲ್ಲಿ ಕೊಂಚ ಕ್ಷೀಣವಾದ ಧ್ವನಿಯಾ? ಮಾಧ್ಯಮಗಳಲ್ಲೂ ಇದು ಸಾಧ್ಯ ಆಗಿಲ್ಲ. ಟೆಲಿವಿಷನ್‌ನಲ್ಲಂತೂ ಅತಿರೇಕಗಳಾಗಿವೆ. ಜಾಹಿರಾತಿನಲ್ಲಿ ತೆಂಡೂಲ್ಕರ್ ಮತ್ತು ವೇದ ಮಂತ್ರಗಳು! ಇದಾವುದಕ್ಕೂ ಪ್ರತಿರೋಧ ಇಲ್ಲ ಯಾಕೆ? ಯಾವುವೋ ಕೆಲವು ಸಾಹಿತ್ಯ ಪತ್ರಿಕೆಗಳಲ್ಲಿ ಬಿಟ್ಟರೆ ಯಾರೂ ಈ ಕುರಿತು ಬರೀತಾನೂ ಇಲ್ಲ. ಇಂಥದನ್ನೆಲ್ಲ ಬ್ರೆಜಿಲ್, ಲ್ಯಾಟಿನ್ ಅಮೆರಿಕಾ ಎದುರಿಸಿತ್ತು. ಬೀದಿ ಸಂಗೀತಗಳು ಇತ್ಯಾದಿ ಮೂಲಕ ಬ್ಯಾಂಡ್ ಸಂಗೀತಾನ ಪ್ರತಿಭಟಿಸಿತ್ತು. ಆ ದೇಶದಲ್ಲಿ ಇಂಥ ಪ್ರತಿಭಟನೆಯದೇ ಒಂದು ಇತಿಹಾಸ....



**ಗಿರೀಶ್** : ಲ್ಯಾಟಿನ್ ಅಮೆರಿಕಾ ಉದಾಹರಣೆ ಇದೆಯಲ್ಲ ಹಾಗೆ ನಾವೂ ಬೇರೆಯದೇ ರೀತಿಯಲ್ಲಿ ಪ್ರತಿಕ್ರಿಯಿಸಬೇಕು ಅನ್ನಿಸತ್ತೆ. ಅವರು ನಮ್ಮ ಸಂಸ್ಕೃತಿಯ ಒಳಕ್ಕೆ ಪ್ರವೇಶ ಮಾಡು ತ್ತಿರುವುದೇ ನಮ್ಮ ಕಲೆ-ಸಂಸ್ಕೃತಿಯ ಪ್ರತಿಮೆಗಳನ್ನು ಅವರದಾಗಿಸಿ ಕೊಳ್ಳುವ ಮೂಲಕ. ಹಾಗೆ ಅವರು ಎತ್ತಿಕೊಳ್ಳಲು ಸಾಧ್ಯವಾಗದಂಥ ಪ್ರತಿಮೆಗಳನ್ನು ರೂಪಕಗಳನ್ನು ಬಳಸಿ ನಮ್ಮ ಕಲೆಯನ್ನ ರಚಿಸಿಕೊಳ್ಳಬೇಕು. ಹಿಂದೆ ಭಾರತೀಯ ಸಿನಿಮಾಗಳು ಹಾಗಿದ್ದವು. ನಿರೂಪಣಾ ವಿಧಾನವೇ ಬೇರೆ... ಅಲ್ಲಿಂದ ಏನನ್ನೂ ಕಾರ್ಪೊರೇಟ್‌ನವರು ಎತ್ತಿಕೊಳ್ಳೋದು ಸಾಧ್ಯವೇ ಇರಲಿಲ್ಲ. ಅದಕ್ಕೇ ಅವರ ಛಾಯಮಾನಕ್ಕೆ ಹೊಂದಿಸೋದಕ್ಕೆ ಸಾಧ್ಯ ಆಗಲಿಲ್ಲ. ಅಂಥ ಹುಡುಕಾಟಗಳು ನಮಗೆ ಮುಖ್ಯ. "Pace of the film is the political expression of the maker" ಅಂತ **ಬುನ್ವೆಲ್** ಹೇಳಿದ್ದ. ಅದೊಂದು profound ಆದ ಹೇಳಿಕೆ. ಅವರ ಫೇಸ್‌ಗೆ ವಿರುದ್ಧವಾದ ಫೇಸ್, ನಿರೂಪಣಾ ಪದ್ಧತಿಯನ್ನ ನಾವು ಬಳಸಬೇಕು ಅನ್ನಿಸುತ್ತೆ.

**ಜಿ. ಆರ್.** : ಇಲ್ಲಿಯವರೆಗೆ ಚರ್ಚೆ ನಡೆಸಿಕೊಟ್ಟಿದೀರಿ. ಮುಗಿಸುವ ಮೊದಲು ಯಾವ ರೀತಿಯ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಈ ತಕ್ಷಣ ತೊಡಗಿಸಿಕೊಳ್ಳುವುದರಿಂದ ಈ ಸಮಸ್ಯೆ ಯನ್ನ ಎದುರಿಸಬಹುದು ಅನ್ನುವ ಬಗ್ಗೆ ಒಂದೊಂದು ಮಾತಿನಲ್ಲಿ ಹೇಳಲು ಸಾಧ್ಯಾನಾ?

**ಮನು** : ಬಹಳ ಮುಖ್ಯವಾಗಿ ಅಮೆರಿಕೆಯಿಂದ ಇತಿಹಾಸ, ಮಾನವಿಕ, ಸಮಾಜ ವಿಜ್ಞಾನದಂಥ ವಿಷಯಗಳ ಬಗ್ಗೆ ಬಂದಿರುವ ಕೆಲವು ಸೈದ್ಧಾಂತಿಕ ಪರಿಕಲ್ಪನೆಗಳನ್ನೇ ಪ್ರಶ್ನೆ ಮಾಡಲು ಪ್ರಾರಂಭಿಸಬೇಕು. ಒಬ್ಬ ಅಕಾಡಮಿಕ್ ವ್ಯಕ್ತಿಯಾಗಿ, ಅಧ್ಯಾಪಕನಾಗಿ ನನಗೆ ಕಾಲೇಜುಗಳಲ್ಲೇ ವಿದ್ಯಾರ್ಥಿಗಳು-ವಿಷಯತಜ್ಞರ ಮುಖಾಮುಖಿ ಆಗಬೇಕು. ಇವತ್ತು ಎದುರಾಗುತ್ತಿರುವ ಎಲ್ಲ ಸಂಕೀರ್ಣ-ಸಂಘರ್ಷ, ಗೊಂದಲಗಳ ಬಗ್ಗೆ ಮುಕ್ತವಾಗಿ ಚರ್ಚಿಸಬೇಕು. ಸಮಾಜಸೇವಾ ಸಂಸ್ಥೆಗಳು, ಅಧ್ಯಾಪಕರು ಮುಂದೆ ನಿಂತು ಮುಂದಿನ ಪೀಳಿಗೆಗೆ ಅವರೆಂಥ ಗ್ಲಾಮರಸ್ ವರ್ಲ್ಡ್‌ಗೆ ಒಡ್ಡಿಕೊಳ್ತಿದಾರೆ, ಅದೆಷ್ಟು ಪೊಳ್ಳಾದದ್ದು, ಅದರಿಂದಾಗಿ ನಾವೆಂಥ ಅಮೂಲ್ಯವಾದ್ದನ್ನು– ನಮ್ಮ ಬೇರುಗಳನ್ನೇ ಕಳೆದುಕೊಳ್ತಿದೀವಿ ಅನ್ನುವ ಅರಿವನ್ನ ಮೂಡಿಸಬೇಕು ಅನ್ನಿಸುತ್ತೆ. ಇದು ಇವತ್ತಿನ ಶಿಕ್ಷಕರ, ಸಾಮಾಜಿಕ ಹೊಣೆಗಾರಿಕೆ ಇದ್ದವರ ಜವಾಬ್ದಾರಿ ಅಂದುಕೊಳ್ತೀನಿ.

**ರಾಮಯ್ಯ** : ನಮ್ಮ ನೆನಪುಗಳನ್ನೇ ಕಿತ್ತು ಹೊಸಕಿಹಾಕುವಂಥ ದೊಡ್ಡ ಆಕ್ರಮಣ ಇದು. ಅದನ್ನೇ ಬಳಸಿಕೊಂಡು ನೆನಪುಗಳನ್ನು ಚಿಗುರಿಸಿಕೊಳ್ಳೋ ಪ್ರಯತ್ನ ಆಗಬೇಕು. ಅದೇ ನಿಜವಾದ ಪ್ರತಿರೋಧ ಅಂದುಕೊಳ್ತೀನಿ...

**ರವಿ ಕಾಶಿ** : ಚಿತ್ರಗಳಲ್ಲಿ, ಚಲನಚಿತ್ರಗಳಲ್ಲಿ, ಕಡೆಗೆ ಬ್ಯಾನರ್‌ಗಳಲ್ಲಿ ಕೂಡಾ ಬರ್ತಾ ಇರೋ ಇಮೇಜಸ್‌ಅನ್ನ ತುಂಬ ಎಚ್ಚರದಿಂದ ನೋಡುವ ಅಭ್ಯಾಸ ಬೆಳೆಸಿಕೋಬೇಕು. ಹೆಚ್ಚು ಜನಕ್ಕೆ ತಲಪೋ ಪ್ರಯತ್ನದಲ್ಲಿ ಚಪ್ಪಟೆಯಾಗುತ್ವೆ. ಅಲ್ಲಿ ವಿವರಗಳನ್ನ ಕೈಬಿಟ್ಟು ಬಿಡುತ್ತಾರೆ. ಉದಾ kyunkiನಲ್ಲಿ ಬರುವ ಪಾತ್ರಗಳನ್ನು ನೋಡಿ, ಅವು ಯಾವುದೇ ಒಂದು ಗೊತ್ತಾದ ಪ್ರದೇಶದವಾಗಿರೋಲ್ಲ, ಒಂದು ರೀತಿಯ ಕಟ್ಟಿಕೊಟ್ಟಂಥವು, ಮಾದರಿಗಳು! ಜಾಹಿರಾತಿನಲ್ಲಿ ಬರೋ ಪಾತ್ರಗಳೂ ಹಾಗೇ, ಅವಕ್ಕೆ ಯಾವುದೇ ವಿವರಗಳಿಲ್ಲ. ಈ ಅರಿವು ಮೂಡಿಸುವುದೇ ಒಂದು ಪ್ರೋಸೆಸ್ ಆಗುವ ಹಾಗೆ ಕೈಗೆತ್ತಿಕೋಬೇಕು..

**ಗಿರೀಶ್** : ಜಾಗತೀಕರಣ ಅಂದ್ರೆ ಆಗಲೇ ಹೇಳಿದ ಹಾಗೆ ಜಗತ್ತನ್ನೇ ಒಂದಾಗಿ ನೋಡುವ ವಿಚಿತ್ರ ಆದರ್ಶ. ಗ್ಲೋಬಲ್ ವಿಲೇಜ್. ಈ ಪ್ರೋಸೆಸ್‌ನಲ್ಲಿ ಪ್ರತಿಯೊಂದು ಪರಿಸ್ಥಿತಿಯಲ್ಲಿ ಢಾಳಾಗಿ ಕಾಣೋದನ್ನ ಎತ್ತಿಕೊಳ್ತಾರೆ. ವಿವರಗಳನ್ನ ಕೈಬಿಡ್ತಾ ಇರ್ತಾರೆ. ಉದಾ: ಭಾರತದಲ್ಲಿ ಬಡತನ – ಶ್ರೀಮಂತಿಕೆ ವೈರುಧ್ಯ. ಹಾಗೇ ಇಸ್ಲಾಮಿಕ್ ದೇಶಗಳಲ್ಲಿ ಸಂಪ್ರದಾಯದ ದುಷ್ಟತನ, ಕಮ್ಯೂನಿಸ್ಟರ ರೆಜೀಮ್‌ನಲ್ಲಿ ವ್ಯಕ್ತಿ ಸ್ವಾತಂತ್ರ್ಯದ ಹರಣ, ಹೀಗೆ ಸ್ಥೂಲವಾದ್ದನ್ನು ಹಿಡೀತಿರ್ತಾರೆ. ಅದನ್ನೆಲ್ಲ ಬಿಟ್ಟು ಸೂಕ್ಷ್ಮಗಳನ್ನು ನಾವು ಹಿಡೀಬೇಕು. ಆಗ ಅವರು ಹೇಳುವುದಕ್ಕೆ ತದ್ವಿರುದ್ಧವಾದ ಪರಿಸರವನ್ನು ಸೃಷ್ಟಿಸುತ್ತಾ ಇರ್ತೀವಿ. ವಿವರಗಳ ಮೂಲಕ ಸ್ಥಳೀಯವಾಗುವ ಪ್ರಕ್ರಿಯೆಯಲ್ಲಿ ಅವರು ಕೊಟ್ಟಿರೋ ಮಾದರಿಗಳನ್ನು ಒಡೆಯುವ ಕೆಲಸ ಆಗ್ತಿರುತ್ತೆ. ಆ ವಿವರಗಳು ಹೊಸದನ್ನ ಕಟ್ಟುತ್ತಲೂ ಇರುತ್ತವೆ. ಇದು ಸಾಧ್ಯ ಆಗಬೇಕು ನಮಗೆ.

**ಮನು** : ಇಂದಿನ ಅನೇಕ ತೊಳಲಾಟಗಳಿಗೆ, ಸಂದಿಗ್ಧಗಳಿಗೆ, ನಾವು ಕಾರಣವನ್ನು ಹುಡುಕುವುದಾದರೆ, ಅದಕ್ಕೆ ಒಂದು ಅತ್ಯುತ್ತಮ ಮಾರ್ಗವನ್ನು ಮಾರ್ಕ್ಸ್ ತನ್ನ 'ದಿ ಜರ್ಮನ್ ಐಡಿಯಾಲಜಿ' ಪತ್ರದಲ್ಲಿ ಸೂಚಿಸಿರುವುದನ್ನು ಗಮನಿಸಬಹುದು. ಅವನ ಪ್ರಕಾರ "All the ruling ideas of a society are the ideas of the ruling class". ಅಂದರೆ ಇವತ್ತು ನಾವು ಕಾಣುತ್ತಿರುವ ಉಪಭೋಗವಾದ ಅಥವಾ ಜಾಗತೀಕರಣ, ಇವು ಸೃಷ್ಟಿಸುತ್ತಿರುವ ಆಸೆ, ಕಲ್ಪನೆ, ಭ್ರಮೆ ಎಲ್ಲವೂ ಆಳುವ ವರ್ಗದ ಸೃಷ್ಟಿಯಾಗಿದೆ. ಇವಕ್ಕೆ ನೇರವಾಗಿ ಮುಖಾಮುಖಿ ಆಗುವ ಮೂಲಕ ಸಮಾಜವಾದಿ ಚಿಂತನೆ, ಜನಪರವಾದ ಸಂಸ್ಕೃತಿಯನ್ನು ಕಟ್ಟಬಹುದಾಗಿದೆ. ಅದೇ ಜಾಗತೀಕರಣಕ್ಕೆ ನಿಜವಾದ ಪರ್ಯಾಯವಾಗುತ್ತದೆ. ■

# ಕಾನೂರು ಹೆಗ್ಗಡಿತಿ

# ಆಶಯ ಮತ್ತು ಅಭಿವ್ಯಕ್ತಿ - ಕೆಲವು ಗ್ರಹಿಕೆಗಳು



ರಾಷ್ಟ್ರಕವಿ ಕುವೆಂಪು ಅವರ ಜನ್ಮಶತಮಾನೋತ್ಸವ
ಡಿಸೆಂಬರ್ 29, 2003ರಂದು

**ಡಾ|| ಎಚ್. ಎಸ್. ರಾಘವೇಂದ್ರರಾವ್**

ಮಹತ್ವದ ಕಾದಂಬರಿಯೊಂದರ ಅಧ್ಯಯನದಲ್ಲಿ ಹೊಸ ಹೊಳಹುಗಳು ಮೂಡಿಬರುವುದು ವಿಮರ್ಶೆಗೆ ಪ್ರೇರಕವಾದ ಸಾಂಸ್ಕೃತಿಕ ಸನ್ನಿವೇಶದಲ್ಲಿ ಆಗುವ ಬದಲಾವಣೆಗಳಿಂದ ಮತ್ತು ವಿಮರ್ಶಕನು ತನ್ನ ಕೆಲಸದಲ್ಲಿ ಬಳಸಿಕೊಳ್ಳುವ ಹೊಸ ಉಪಕರಣಗಳಿಂದ. ನವ್ಯ ಸಾಹಿತ್ಯದ ಏರುವೆಯ ದಿನಗಳಲ್ಲಿ ಅದಕ್ಕಿಂತ ಹಿಂದಿನ ಉತ್ತಮ ಕೃತಿಗಳಿಗೆ ಹಿಡಿದಿದ್ದ 'ಗ್ರಹಣ'ವು ಬಿಟ್ಟು, ಅವುಗಳಿಗೆ ವಿಮರ್ಶೆಯ ನ್ಯಾಯ ದೊರಕುತ್ತಿರುವ ಈ ದಿನಗಳು ಕುವೆಂಪು ಅವರ ಕಾದಂಬರಿಗಳ ಮರು ಪರಿಶೀಲನೆಗೆ ಸೂಕ್ತ. ಅವುಗಳನ್ನು ಕುರಿತ ಪ್ರಾಮಾಣಿಕವೆನಿಸಿದರೂ, ಸೀಮಿತವಾದ ದೃಷ್ಟಿಕೋನ ಮತ್ತು ಒಂದು ಬಗೆಯ ಆರಾಧಕ ಒತ್ತಡಗಳಿಂದ ಬಿಡಿಸಿಕೊಂಡು ಆ ಕೃತಿಗಳ ಗುಣಗಳನ್ನು ಹುಡುಕಲು ಇಂದು ಸಾಧ್ಯ. ಕಾದಂಬರಿಗಳ ಆಶಯ ಮತ್ತು ಬಂಧಗಳನ್ನು ಕುರಿತಾದ ಇದುವರೆಗಿನ ಚರ್ಚೆಯಲ್ಲಿ ಕುರ್ತಕೋಟಿ, ಎಂ. ಜಿ. ಕೆ., ಅನಂತಮೂರ್ತಿ, ವಿವೇಕ ರೈ, ಆಮೂರ ಮತ್ತು ರಾಜೇಂದ್ರ ಚೆನ್ನಿಯವರು ಭಾಗವಹಿಸಿದ್ದಾರೆ. ಚೆನ್ನಿಯವರ ಲೇಖನವು 'ಕಾನೂರು ಹೆಗ್ಗಡಿತಿ'ಯನ್ನು ಅತ್ಯಂತ ಹೊಸರೀತಿಯಲ್ಲಿ ಪರಿಶೀಲಿಸಿ ಅದುವರೆಗಿನ ಚರ್ಚೆಗೆ ಉತ್ತರ ಕೊಡುವುದಲ್ಲದೆ, ಮುಂದಿನ ಚರ್ಚೆಗೆ ಭೂಮಿಕೆಯನ್ನೂ ಹಾಕಿಕೊಟ್ಟಿದೆ. ನನ್ನದು ಈ ಪ್ರಯತ್ನಗಳ ಮುಂದುವರಿಕೆ ಮಾತ್ರ. ನನ್ನ ವಿಧಾನವು ಬಹುವಾಗಿ ರಾಚನಿಕ ವಿಶ್ಲೇಷಣೆಯ ಕೆಲವು ಮೂಲತತ್ವಗಳಿಂದ ಪ್ರಭಾವಿತವಾಗಿದೆ.

ಒಂದು ಬಗೆಯ ವಿಮರ್ಶೆಯು, ಕಾದಂಬರಿಯ ಅರ್ಥವು ಅದನ್ನು ಬರೆದವನು ಉದ್ದೇಶಿಸಿದಂತೆ ಇರುವುದೆಂದು ತಿಳಿದರೆ, ಇನ್ನೊಂದು ರೀತಿಯು, ಅರ್ಥವು ಕೃತಿಯ ಭಾಷಿಕ ಶರೀರದಲ್ಲೇ ಅಡಗಿರುವುದೆಂದು ತಿಳಿಯಿತು. ಆದರೆ ನಾನು ಅನುಸರಿಸುತ್ತಿರುವ ವಿಧಾನವು, 'ಅರ್ಥವು' ಕಾದಂಬರಿಯ ಪ್ರತಿಯೊಬ್ಬ ಓದುಗನಲ್ಲಿಯೂ ಅವನಿಗೆ ಹಾಗೂ ಅವನ ಪರಿಸರಕ್ಕೆ ವಿಶಿಷ್ಟವಾದ ರೀತಿಯಲ್ಲಿ ಮೈದಳೆಯುವುದೆಂದು ನಂಬುತ್ತದೆ. ಬರವಣಿಗೆಯ ನಿಯಮಗಳೂ ಸೇರಿದಂತೆ ಒಟ್ಟು ಸಾಮಾಜಿಕ ವ್ಯವಸ್ಥೆಯು ಲೇಖಕ ಮತ್ತು ವಾಚಕರಿಬ್ಬರನ್ನೂ ಸಂಪೂರ್ಣವಾಗಿ ನಿಯಂತ್ರಿಸುತ್ತದೆ. ಆದ್ದರಿಂದಲೇ ಲೇಖಕನು ತನ್ನ ಓದುಗರೊಂದಿಗೆ ಹಂಚಿಕೊಂಡಿರುವ ಅನುಭವಗಳು ಹಾಗೂ ಪರಸ್ಪರ ಪೂರ್ವಸಿದ್ಧತೆಗಳು ಕೃತಿಯ ಸ್ವರೂಪವನ್ನು ನಿರ್ಧರಿಸುತ್ತವೆ. ೧೯೩೬ರಷ್ಟು ಹಿಂದೆ, ಕಾದಂಬರಿ ಪರಂಪರೆಯೊಂದರ ಅಭಾವದಲ್ಲಿ ರಚಿತವಾದ 'ಕಾನೂರು ಹೆಗ್ಗಡಿತಿ'ಯು, ಹೇಳುವಿಕೆಯ ಹೊಸಬಗೆಗಳನ್ನು ಹುಡುಕುವುದರ ಜೊತೆಜೊತೆಗೆ ಹಳೆಯ ರೀತಿಗಳನ್ನೂ ಉಪಯೋಗಿಸುತ್ತಾ ಓದುಗರೊಂದಿಗಿನ ಸಂಪರ್ಕವನ್ನು ಉಳಿಸಿಕೊಳ್ಳಬೇಕಾಗಿತ್ತು. ಸಾಹಿತ್ಯದ ಒಳಗೆ ಮತ್ತು ಹೊರಗೆ ಬಳಕೆಯಾಗುತ್ತಿದ್ದ ಹಲವು ವಿಧಾನಗಳನ್ನು ಉಪಯೋಗಿಸುವುದು ಅವರಿಗೆ ಅನಿವಾರ್ಯವಾಗಿತ್ತು. ನಮಗೆ 'ನಿಧಿ'ಯೆಂದು ತೋರುವ ಈ ಕೃತಿಯ ಹಿಂದೆ ಅಪಾರವಾದ ಪ್ರಯೋಗಶೀಲತೆ ಮತ್ತು ಹೊಸತನಗಳಿವೆಯೆನ್ನುವುದು ಅಚ್ಚರಿಯ ಸಂಗತಿ. (ಆದ್ದರಿಂದಲೇ ಕುವೆಂಪು, ಬೇಂದ್ರೆ ಮತ್ತು ಮಾಸ್ತಿಯವರು ಕನ್ನಡದ ಅತ್ಯುತ್ತಮ ಕಲಾವಿದರು.)

ಯಾವುದೇ ಕಾದಂಬರಿಯು ವಾಸ್ತವಲೋಕದ ಪ್ರತಿಕೃತಿಯಲ್ಲ. 'ವಾಸ್ತವತಾವಾದಿ' ಮಾರ್ಗವನ್ನು ಅನುಸರಿಸುವ ಕಾನೂರು ಹೆಗ್ಗಡಿತಿ, ಮರಳಿ ಮಣ್ಣಿಗೆಗಳ ವಿಷಯದಲ್ಲೂ ಈ ಮಾತು ನಿಜ. ಕಾದಂಬರಿಯೊಳಗಿನ ಪಾತ್ರಗಳು ಹಾಗಿರಲಿ ಅದರ ನಿರೂಪಕನೂ ಕೂಡ ರೊಲಾಂಡ್ ಬಾರ್ಥ್ ಒಂದು ಕಡೆ ಹೇಳುವ ಹಾಗೆ ಕಾಗದದ ಮೇಲೆ ಮಾತ್ರ ಜೀವಂತವಾಗಿರುವವರು. ನಿರೂಪಕನು ಲೇಖಕನಲ್ಲ. ಲೇಖಕನು ವಾಸ್ತವ ಜಗತ್ತಿನಲ್ಲಿ ಇರುವ ಮನುಷ್ಯನಂತೂ ಖಂಡಿತವಾಗಿಯೂ ಅಲ್ಲ. ಆದ್ದರಿಂದ ಹೂವಯ್ಯನಂಥ ಕಲ್ಪಿತ ಪಾತ್ರದಲ್ಲಿ ಕುವೆಂಪುರವರನ್ನೋ ಅಥವಾ ಕಾದಂಬರಿಯ ಕೇಂದ್ರ ದೃಷ್ಟಿಕೋನವನ್ನೋ ಹುಡುಕಿ ಹೊರಡುವವರು ತಪ್ಪು ಮಾಡುತ್ತಿರುತ್ತಾರೆ. ವಾಸ್ತವ ಮಾರ್ಗವನ್ನು ಬಳಸದ ಕಾದಂಬರಿಯಲ್ಲಿ ಸಂಯೋಜನೆಯ ಕೌಶಲ್ಯವು ತನ್ನ ಕಡೆಗೆ ಅಬ್ಬರಮಾಡಿ ಗಮನ ಸೆಳೆದರೆ, ವಾಸ್ತವವಾದಿಯೆಂಬಂತೆ ಕಾಣುವ ಕೃತಿಯಲ್ಲಿ ಸಂಯೋಜನೆಯು ಅದೃಶ್ಯವಾಗಿ ಕೆಲಸಮಾಡುತ್ತಿರುತ್ತದೆ. ಏಕೆಂದರೆ ನಿರೂಪಣೆಯಲ್ಲಿರುವ ಸ್ವಾರಸ್ಯ ಮತ್ತು ಸಾತತ್ಯಗಳು, ಘಟನೆಗಳ ಆಯ್ಕೆ, ಸಂಯೋಜನೆ, ವರ್ಣನೆ ಮತ್ತು ಭಾಷಾಶರೀರದ ಸೂಕ್ಷ್ಮಗಳ ಕಡೆಗೆ ನಮ್ಮ ಗಮನ ಹರಿಯದಂತೆ ಮಾಡುತ್ತವೆ. ಆದ್ದರಿಂದ ಇಂಥ ಕಾದಂಬರಿಯನ್ನು ಎಚ್ಚರಿಕೆಯಿಂದ ಅದರ ಘಟಕಗಳಾಗಿ ಒಡೆದಾಗ (De-construction) ಮಾತ್ರ ಅದರ ಹಿಂದಿನ ಸೃಜನಪ್ರತಿಭೆಯ ಸ್ವರೂಪವು ಗೊತ್ತಾಗುತ್ತದೆ. ಈ ಒಡೆಯುವಿಕೆಯು ಕಾದಂಬರಿಯ ಭಾಷಿಕ ನೆಲೆಯಿಂದ ಹಿಡಿದು ಅದಕ್ಕಿಂತ ಎತ್ತರದ ವ್ಯಾಖ್ಯಾನಾತ್ಮಕವಾದ, ರಾಚನಿಕ ನೆಲೆಗಳವರೆಗೆ ನಡೆಯಬೇಕು. ಸೃಜನಪ್ರತಿಭೆಯು ಕೆಲಸಮಾಡುವ ಬಗೆಯು ನಿಗೂಢವಾದುದರಿಂದ, ಕಾದಂಬರಿಕಾರನ ಬಾಹ್ಯ ಹೇಳಿಕೆಗಳ ಮೂಲಕ ನಾವು ದಾರಿ ಕಂಡುಕೊಳ್ಳಬೇಕಾಗಿಲ್ಲ. ಎಂದರೆ ಕುವೆಂಪುರವರ ಪ್ರತಿಭೆಯು ಅವರ ಜಾಗೃತ ಪ್ರಜ್ಞೆಯನ್ನು ಮೀರಿಯೂ ದುಡಿದಿರುತ್ತದೆ.

ಈ ಹಿನ್ನೆಲೆಯಿಂದ ಗಮನಿಸಿದಾಗ, 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ನಮ್ಮ ಗಮನವನ್ನು ಸೆಳೆಯುವ ಮೂರು ಸಂಗತಿಗಳೆಂದರೆ ದೃಷ್ಟಿಕೋನಗಳ ವೈವಿಧ್ಯ, ಮೇಲುರಚನೆಯಲ್ಲಿ ಕೇವಲ ವಿವರಗಳಂತೆ ಕಾಣುವ ಆದರೆ ಅಂತರಾಳದಲ್ಲಿ ಒಂದು ಕೇಂದ್ರದ ಕಡೆಗೆ ತುಡಿಯುವ ಘಟನಾಬಾಹುಳ್ಯ ಮತ್ತು ಭಾಷೆಯ ಹಲವು ಬಗೆಗಳನ್ನು ನಿಯೋಗಾತ್ಮಕವಾಗಿ ಬಳಸಿಕೊಂಡಿರುವ ಚಾತುರ್ಯ. 'ಕಲೆಯು ಅತ್ಯಂತ ಪರಿಶುದ್ಧವಾದ ಒಂದು ವ್ಯವಸ್ಥೆ, ಅಲ್ಲಿ ಯಾವ ಘಟಕವೂ ಎಂದೆಂದಿಗೂ ವ್ಯರ್ಥವಾಗುವುದಿಲ್ಲ' (Art is a system which is pure, where no unit ever goes wasted) ಎಂಬ ಬಾರ್ಥ್‌ನ ಮಾತುಗಳನ್ನು ಈ ಕಾದಂಬರಿಗೆ ಅನ್ವಯಿಸಬಹುದು.

ಒಂದು ಸನ್ನಿವೇಶವನ್ನು ಹಲವು ದೃಷ್ಟಿಕೋನಗಳಿಂದ ನೋಡಿ, ಒಂದರಿಂದ ಇನ್ನೊಂದನ್ನು ಪರೀಕ್ಷಿಸುವ ಬಗೆಗೆ ಒಂದು ನಿದರ್ಶನವನ್ನು ಗಮನಿಸೋಣ.

೩೪ರಿಂದ ೩೭ರವರೆಗಿನ ಅಧ್ಯಾಯಗಳ ಕೇಂದ್ರವಸ್ತು ಸಾವು. ಸತ್ತಿರುವುದು ಸೀತೆಯ ಪತಿಯಾಗಬೇಕಾಗಿದ್ದ ಕೃಷ್ಣಪ್ಪ, ಅವನ ದುಷ್ಟ ಸೇವಕ ಚಾರಿ, ಹುಲಿ, ಲಕ್ಷಾಂತರ ಚಿಗಳಿ ಇರುವೆಗಳು ಮತ್ತು ನಂಜನ ಮಗಳು ಹೊಲೆಯರ ರಂಗಿ. ಹೂವಯ್ಯನಿಂದ ಹಿಡಿದು ಚಿಕ್ಕ ಮಗು ಲಕ್ಷ್ಮಿಯವರೆಗೆ ಹಲವು ಪಾತ್ರಗಳು ಈ ಸಾವಿಗೆ



ತೋರಿಸುವ ಪ್ರತಿಕ್ರಿಯೆಯು ಇಲ್ಲಿ ಚಿತ್ರಿತವಾಗಿದೆ. ಅದು ಆಯಾ ಪಾತ್ರದ ಬೌದ್ಧಿಕತೆ, ಸ್ವಭಾವ ಮತ್ತು ಸ್ವಾರ್ಥಗಳಿಂದ ತೀರ್ಮಾನವಾಗುತ್ತದೆ. ಕೃಷ್ಣಪ್ಪನ ಸಾವು ಹೂವಯ್ಯ, ಸೀತೆಯರಿಬ್ಬರಿಗೂ ಬಿಡುಗಡೆಯ ದಾರಿಯಾಗಿ ಕಾಣುತ್ತದೆ. ಚಾರಿ, ಸೋಮನಿಗೆ 'ಲೌಡೀಮಗ-ಮುಂಡೆ ಮಗ' ಆದರೆ ಪುಟ್ಟಣ್ಣನಿಗೆ ಅನ್ನ ಕೊಟ್ಟ ಧಣಿಗಾಗಿ ಪ್ರಾಣಕೊಟ್ಟವನಾಗುತ್ತಾನೆ. ರಂಗಿಯ ಸಾವು ಅವಳ ತಂದೆ ಮತ್ತು ಅವಳದೇ ವಯಸ್ಸಿನ ಲಕ್ಷ್ಮಿಯ ಕುತೂಹಲವನ್ನು ಮಾತ್ರ ಕೆರಳಿಸುತ್ತದೆ. ಅಕ್ಕತಂಗಿಯರು 'ಸೊರ್ಗ'ದ ದಾರಿಯ ಬಗ್ಗೆ ಮಾತನಾಡಿದರೆ, ಸೋಮ ಸಾಯುತ್ತಿರುವ ಇರುವೆಗಳ ಚಟ್ನಿಯ ರುಚಿಯಲ್ಲಿ ಮಗ್ನ. ಅವನಿಗೆ ಆಹಾರದ ಮೂಲವಾದ ಆಲದ ಮರ ಹೂವಯ್ಯನಿಗೆ ಮುದುಕನ ಗಾಂಭೀರ್ಯದೊಂದಿಗೆ ತರುಣನ ಉತ್ಸಾಹದ ಸಂಗಮವಾಗಿರುವ ಆರಾಧ್ಯವಸ್ತು. ಇದೆಲ್ಲದರ ನಡುವೆ 'ಚಂಚಲಯಾನ ನಾಗರಿಕ ಲೋಕ' ಪ್ರತಿನಿಧಿಯಾದ ಬೈಸಿಕಲ್ ಸವಾರ. ಅವರವರು ಅವರವರ ಲೋಕದ ನಾಯಕರು, ತಮ್ಮ ಜೀವನದಲ್ಲಿ ಮಗ್ನರು. ಯಾರಿಂದಲೂ ಯಾರೂ ಪ್ರಭಾವಿತರಲ್ಲ. ಆದರೆ ಸೋಜಿಗದ ಸಂಗತಿಯೆಂದರೆ ಯಾವುದೇ ಪಾತ್ರದ ಆಲೋಚನೆಯೂ ಅವರವರ ಭಾಷಾಶಕ್ತಿಯನ್ನು ಮೀರಿ ಬೆಳೆಯುವುದಿಲ್ಲ. ನಿರೂಪಕನೂ ಅಷ್ಟೆ. ಹೂವಯ್ಯ, ಲಕ್ಷ್ಮಿ, ಸೋಮ, ನಂಜರ ಚರ್ಯೆಗಳನ್ನು, ಚಿಂತೆಗಳನ್ನು ವರ್ಣಿಸುವಾಗ ಸಂದರ್ಭೋಚಿತವಾದ ಶೈಲಿಯನ್ನು ಮಾತ್ರ ಬಳಸಿಕೊಳ್ಳುತ್ತಾನೆ. ಇಡೀ ಅಧ್ಯಾಯಕ್ಕೆ "ದುಃಖಕ್ಕೆ ದೊಡ್ಡವರು ಚಿಕ್ಕವರು ಎಂಬ ಭೇದವಿದೆಯೇ" ಎಂಬ ಅರ್ಥಪೂರ್ಣವಾದ ತಲೆಬರಹವನ್ನು ಕೊಡಲಾಗಿದೆ.

ಓದುಗನು ಗ್ರಹಿಸುವುದು ಇವರೆಲ್ಲರ ದೃಷ್ಟಿಕೋನಗಳಿಂದ ಸಮಗ್ರವಾದ, ತನ್ನ ಅನುಭವದಿಂದ ರೂಪಿತವಾದ ಸತ್ಯವನ್ನೇ ಹೊರತು ಹೂವಯ್ಯನ ಅಥವಾ ಕಾದಂಬರಿಕಾರರ ಸೀಮಿತ ಸತ್ಯವನ್ನಲ್ಲ. ಇಡೀ ಕಾದಂಬರಿಯು ನಮಗೆ ತನ್ನನ್ನು ಒಡ್ಡಿಕೊಳ್ಳುವ ಬಗೆಯೇ ಹೀಗೆ ಅನೇಕ ಮುಖವಾದುದು.

ಈಗ ಎರಡನೆಯ ಸಂಗತಿಯಾದ ವಿವರಗಳ ಮೇಲುರಚನೆ ಮತ್ತು ಒಳರಚನೆಗಳನ್ನು ಗಮನಿಸೋಣ. ಒಂದು ಅಧ್ಯಾಯದೊಳಗೆ ಅಥವಾ ಒಟ್ಟು ಕಾದಂಬರಿಯ ರಚನೆಯಲ್ಲಿ ಒಂದರ ನಂತರ ಒಂದರಂತೆ ಬರುವ ಘಟನೆಗಳ, ವಿವರಗಳ ನಡುವೆ ಇರುವ ತಾರ್ಕಿಕ ಸಂಬಂಧ ಅಥವಾ ಅದರ ಗೈರುಹಾಜರಿಯ ಮೇಲುನೋಟಕ್ಕೆ ಗೋಚರಿಸುತ್ತದೆ. ಕಾನೂರು ಮನೆತನದ ಆಗುಹೋಗುಗಳ ಪ್ರಧಾನನೆಲೆಗೆ ಮೀಸಲಾಗಿರುವುದು ಈ ಕಾದಂಬರಿಯ ಒಟ್ಟು ಎಂಬತ್ತೊಂದು ಅಧ್ಯಾಯಗಳಲ್ಲಿ ಸುಮಾರು ನಲವತ್ತು ಮಾತ್ರ. ಕೇವಲ ಅವುಗಳನ್ನೇ ಕೊಟ್ಟಿದ್ದರೆ ಕಥೆಗೆ ಭಂಗ ಬರುತ್ತಿರಲಿಲ್ಲ. ಹಾಗಾದರೆ ಉಳಿದ ಅಧ್ಯಾಯಗಳು ಅನವಶ್ಯಕವೇ ಎಂಬ ತಕ್ಷಣದ ಪ್ರಶ್ನೆಗೆ ದೊರಕುವ ಉತ್ತರವು ಅವೆಲ್ಲವೂ ಕಾದಂಬರಿಯ ಮೂಲ ಆಶಯಗಳೊಂದಿಗೆ ನೇರವಾದ ಸಂಬಂಧವನ್ನು ಹೊಂದಿವೆ ಎನ್ನುವುದು. ಏಕೆಂದರೆ ಹೂವಯ್ಯ-ರಾಮಯ್ಯ-ಸೀತೆಯರ ಬದುಕಿನ ನೆಪದಲ್ಲಿ ಕುವೆಂಪುರವರ ವಸ್ತುವಾಗಿರುವುದು ಪರಿವರ್ತನಶೀಲವಾಗಿರುವ ಮಲೆನಾಡಿನ ಸಮಾಜ. ಈ ಪರಿವರ್ತನೆಯ ಸ್ವರೂಪ ಗೋಚರವಾಗುವುದು ಇತರ ಪಾತ್ರಗಳ ವಿಕಸನ ಕ್ರಮದಲ್ಲಿ. 'ಬಾಡುಗಳ್ಳ' ಸೋಮ, ಸೇರೆಗಾರನಾಗುವುದಾಗಲೀ, ಗಂಗೆಯ ಪ್ರಿಯಕರ ಓಬಯ್ಯ ಹೂವಯ್ಯನ ಅನುಚರನಾಗುವುದಾಗಲೀ ಈ ಪರಿವರ್ತನೆಯ ನೆಲೆಗಳು.

ಅದೂ ಅಲ್ಲದೆ ಈ ಪರಿವರ್ತನೆಯು ಒಂದೇ ಪಾತ್ರದ ಜೀವನಕ್ರಮದಲ್ಲೇ ಆಗಬೇಕೆಂದೇನಿಲ್ಲ. ಒಂದು ಪಾತ್ರದ ಬದುಕಿನಲ್ಲಿ ಸಾಧ್ಯವಾದದು ಅದಕ್ಕಿಂತ ಹಿಂದಿನ ಪಾತ್ರದಲ್ಲಿ ಕೇವಲ ಸಾಧ್ಯತೆಯಾಗಿರುತ್ತದೆ. ಒಂದು ಪಾತ್ರಕ್ಕೆ ನಿರಾಕರಿಸಲ್ಪಟ್ಟ ಸಾಧ್ಯತೆಯು ಅದಕ್ಕೆ ಸಂವಾದಿಯಾದ ಮತ್ತೊಂದು ಪಾತ್ರದಲ್ಲಿ ಅಭಿನೀತವಾಗುತ್ತದೆ. ಉದಾಹರಣೆಗೆ ಸೀತೆ-ಹೂವಯ್ಯರಿಗೆ ದೊರೆಯದೆ ಹೋದ ವಿವಾಹಜೀವನವು ಅವರ ತಂಗಿ-ತಮ್ಮಂದಿರಾದ ಲಕ್ಷ್ಮಿ-ವಾಸುಗಳಲ್ಲಿ ನಿಜವಾಗುತ್ತದೆ. ನನ್ನ ಮಾತಿಗೆ ಸೂಕ್ಷ್ಮ ಪುರಾವೆಗಳನ್ನು ಕೊಡಬಯಸುತ್ತೇನೆ. ಕಾದಂಬರಿಯ ಮೊದಲ ಅಧ್ಯಾಯದಲ್ಲಿ ಹೂವಯ್ಯನ ತಾರುಣ್ಯದ ವರ್ಣನೆಯಿದೆ. ಕೊನೆಯದರಲ್ಲಿ ವಾಸುವಿನದು. ಆದರೆ ಉಡುಗೆ-ತೊಡಿಗೆಗಳಿಂದ ಹಿಡಿದು ಮೆಟ್ಟು-ಟೋಪಿಗಳವರೆಗೆ ಅವರಲ್ಲಿ ಆಗಿರುವ ಪರಿವರ್ತನೆಯ ಚಿತ್ರವೂ ಇದೆ. ವಾಸುವಿನಿಂದ ಹಿಂದೆ ನಡೆದು ಬರುತ್ತಿರುವುದು ಹನ್ನೊಂದರ ರಮೇಶ, ಅವನಿಗಿಂತ ಸ್ವಲ್ಪ ಹಿರಿಯನಾದ ಶಂಕರ. ಅವರಿಬ್ಬರು ಈಗ ಬಣ್ಣದ ಚಿಟ್ಟೆಗಳನ್ನು ಹಿಡಿಯಲು ಯತ್ನಿಸುತ್ತಿದ್ದಾರೆ. ಇವರೆಲ್ಲರಿಗೂ ಹಿರಿಯರಾದ ಎಷ್ಟೇ ಮಾಗಿದರೂ ಮೂಲಭೂತವಾಗಿ ಬದಲಾಗದ ಸೀತೆಮನೆ ನಿಂಗಪ್ಪಗೌಡರು ಮತ್ತು ಜೀತಗಾರ ಪುಟ್ಟಣ್ಣ ಮೊದಲ ಅಧ್ಯಾಯದಲ್ಲಿ ಬಂದಹಾಗೆ ಕೊನೆಯಲ್ಲೂ ಬರುತ್ತಾರೆ. ಇದೆಲ್ಲ ಕೇವಲ ಆಶಾಚಿಂತನೆಯಲ್ಲ. ವೈಯಕ್ತಿಕ ಬದುಕಿನ ಸೀಮಿತ ಸಾಧ್ಯತೆ ಹಾಗೂ ಸಾಮುದಾಯಿಕ ಬದುಕಿನ ಅನಂತ ಸಾಧ್ಯತೆಗಳಿಗೆ ಒಡ್ಡಿರುವ ಪ್ರತಿಮೆ;

ಮಲೆನಾಡಿನ ಇಂದಿನ ವಾಸ್ತವತೆಯ ಪೂರ್ವಸೂಚನೆ. ಕಾದಂಬರಿಯ ಕೊನೆಯ ಪದವು 'ಬಾಳ'ಎಂದಿರುವುದು ಆಕಸ್ಮಿಕವಲ್ಲ. ಈ ಬಾಲುವಿಕೆಯು ಗಾಡಿನಿಂಗನ ಮಗ ಪುಟ್ಟನನ್ನೂ, ಬೇಲರನ್ನೂ, ಹಸಲರನ್ನೂ ಒಲಗೊಳ್ಳುತ್ತದೆ. ವರ್ಗ ವ್ಯತ್ಯಾಸವನ್ನು ಹಾಗೆಯೇ ಉಳಿಸುತ್ತದೆ.

ಹೀಗೆಯೇ ಅಗ್ರಹಾರದ ದೇವಸ್ಥಾನದಲ್ಲಿ ನಡೆಯುವ ಘಟನೆಗಳು ಕೊನೆಯ ಅಧ್ಯಾಯದ ಬುದ್ಧದೇವನ ಪೂಜೆಯ ಸನ್ನಿವೇಶದಿಂದ ಅರ್ಥ ಪಡೆಯುತ್ತವೆ. ಅಥವಾ ಕಾದಂಬರಿಯ ತುಂಬ ವ್ಯಾಪಿಸಿರುವ ಬೇಟೆಯ ವಿವರಗಳು (ಮೀನು ಶಿಕಾರಿ, ಕೋಳಿಯ ಶಿಕಾರಿ, ಕಾಡುಹಂದಿಯ ಬೇಟೆ, ಹೊಂಡ ತೋಣಕುವ ಬೈರ, ಕಾಗೆಯ ಬೇಟೆ, ಕಣೆಹಂದಿಯ ಬೇಟೆ.) ಮನುಷ್ಯಲೋಕದಲ್ಲಿ ಬರುವ ವಿವಿಧ ಬಗೆಯ ಪರಸ್ಪರ ಹಿಂಸೆಗಳಿಗೆ ಸಂವಾದಿಯಾಗಿಯೇ ಬರುತ್ತವೆ. ಅಹಿಂಸೆಯ ಅಕ್ಕಪಕ್ಕದಲ್ಲೇ ಮಾನವೀಯ ಭಾವನೆಗಳನ್ನು ಕೊಡುವ ಸಮತೂಕದ ಕ್ರಿಯೆ ನಡೆಯುತ್ತದೆ. ಚಂದ್ರಯ್ಯಗೌಡರು ಕಾಗೆ, ನಾಯಿಗಳನ್ನು ಕೊಲ್ಲುವ ಕ್ರೌರ್ಯದ ಪಕ್ಕದಲ್ಲಿ ನಾಗಮ್ಮನವರ ಪುತ್ರವಾತ್ಸಲ್ಯದ ಚಿತ್ರವಿದೆ. ಅದರ ನಂತರವೇ ಹುಡುಗ ವಾಸುವಿನೊಂದಿಗೆ ಎಲೆಪೀಪಿ ಊದಲೆತ್ನಿಸುವ ಪುಟ್ಟಣ್ಣನು ತಕ್ಷಣದಲ್ಲೇ, 'ಚಾಕುವಿನಿಂದ' ಕಣೆಹಂದಿಯ ಕಣ್ಣುಬೇಳೆ, ಕಿವಿ, ನೆತ್ತಿ, ಮೂತಿ, ಬಾಯಿಗಳನ್ನು ಹುಲ್ಲು ಕೊಚ್ಚುವಂತೆ ಕೊಚ್ಚಿಹಾಕುತ್ತಾನೆ. ಮಗ ಮನೆಗೆ ಬಂದರೆ ನಾಗಮ್ಮನವರಿಗೆ ಹೋದಜೀವ ಬಂದಂತಾಗುತ್ತದೆ. ಈ ಬಗೆಯ ಉದ್ದೇಶಪೂರ್ವಕ ಒಳನೇಯ್ಗೆ ಬದುಕಿನ ಸಂಕೀರ್ಣತೆಯನ್ನು ಅದ್ಭುತವಾಗಿ ಧ್ವನಿಸುತ್ತದೆ.

ಇನ್ನು ಮುಂದೆ ವಿವರಗಳ ಸಂಯೋಜನೆಯನ್ನು ಕುರಿತಾದ ಈ ಮಾತನ್ನು ಕೇವಲ ಏಳು ಪುಟಗಳ ಒಂದು ಅಧ್ಯಾಯಕ್ಕೆ ಅನ್ವಯಿಸಿ ನೋಡೋಣ. 'ಸೀತೆಯ ಮನಸ್ಸಿಗೆ ಮೊದಲನೆಯ ಸಿಡಿಲು' ಎಂಬ ೨೫ನೇ ಅಧ್ಯಾಯ. 'ಮೊದಲನೆಯ' ಎನ್ನುವ ಮಾತೇ ತನ್ನ ಧ್ವನಿಶಕ್ತಿಯಿಂದ ಸೀತೆಯ ಭವಿಷ್ಯವನ್ನು ಸೂಚಿಸುತ್ತದೆ. ಆ ಮಾತು ಹಾಗಿರಲಿ. ಈ ಅಧ್ಯಾಯದ ಮೇಲುರಚನೆಯಲ್ಲಿ(surface structure) ಕಂಡುಬರುವ ಘಟನೆಗಳ ಕ್ರಮ ಹೀಗಿದೆ.

೧. ಹೂವಯ್ಯ ಕಾನೂರಿಗೆ ಹೋದನಂತರದ ಸೀತೆಯ ಮನಃಸ್ಥಿತಿ; ಹಗಲು ಕನಸುಗಳು.
೨. ಸೀರೆ ಬಿಚ್ಚಿಕೊಂಡ ಲಕ್ಷ್ಮಿಯ ಹೆಣ್ಣುಗೊಂಬೆ; ಸೊಂಟ ಮುರಿದುಕೊಂಡ ಗಂಡು ಗೊಂಬೆ.
೩. ಕಾರ್ಮೋಡ; ಬಿರುಗಾಳಿ; ಆಲಿಕಲ್ಲು ಮಳೆ.
೪. ಹರಿವೆ ಸೊಪ್ಪು ಸೋಸುತ್ತ ಕನಸು ಕಾಣುವ ಸೀತೆ.
೫. (ಸೀತೆಯಿದ್ದ ಸ್ವರ್ಗ)
೬. ಕಾಳನು ಮಾಡುವ ತಮಾಷೆ.
೭. ಸೀತೆಯ ಅಳು, ಹಲ್ಲಿಯ ಶಕುನ.

ಅನುಕ್ರಮವಾದ ಈ ಘಟನೆಗಳನ್ನು ಹಿಡಿದಿಡುವ ಏಕಸೂತ್ರವೆಂದರೆ ಕನಸು ಮತ್ತು ವಾಸ್ತವಗಳ ನಿರಂತರ ಅದಲುಬದಲು. ಒಂದರ ಮೇಲೆ ಒಂದರಂತೆ ನಡೆದಂತೆ ನಿರೂಪಿತವಾಗಿರುವ ಈ ಸಂಗತಿಗಳು ಯಾವುದೇ ಕ್ರಮದಲ್ಲಿಯೂ, ಎಲ್ಲಿಯೂ ನಡೆದಿಲ್ಲ ಎಂಬುದನ್ನು ಮೊದಲು ಗ್ರಹಿಸಬೇಕು. ಘಟನೆ, ಸಂಯೋಜನೆಗಳೆರಡೂ ಕಾಲ್ಪನಿಕವಾದವು, ಉದ್ದೇಶಪೂರ್ವಕವಾದವು. ನಡೆದಿರಬಹುದಾದ ಅನೇಕ ಘಟನೆಗಳಲ್ಲಿ ಕೆಲವನ್ನು ಆಯ್ಕೆ ಮಾಡಿಕೊಳ್ಳುವುದರ ಹಿಂದಿನ ತರ್ಕವು ಒಳರಚನೆಗೆ ಸಂಬಂಧಪಟ್ಟದ್ದು. ಸೀತೆಯು ಹೂವಯ್ಯ ಭಾವನಿಗೆ ದಮಯಂತಿ, ಚಂದ್ರಮತಿ, ಸಾವಿತ್ರಿ, ಸೀತೆಯಾಗುವ ಆದರ್ಶಮಯ ಕನಸಿನಿಂದ ಪ್ರಾರಂಭಿಸುತ್ತಾಳೆ. ಆದರೆ ಆಮೇಲೆ ''ಮತ್ತೆ ಕೆಲವು ಪ್ರಣಯ ಚಿತ್ರಗಳು ಒಳಗಣ್ಣಿಗೆ ಸುಳಿದುಬಂದು ಆಕೆಯ ಚೆಂಗೆನ್ನೆಗಳು ನಾಚಿಕೆಯಿಂದ ಕೆಂಪಾದವು. ಮಾಧುರ್ಯದಿಂದ ಮೈ ಪುಲಕಿತವಾಯಿತು'' ಈ ಮಾತುಗಳ ಸಂಸ್ಕೃತಿಮಯತೆ ಅನಿವಾರ್ಯವೆನ್ನುವುದು ಈ ಬಣ್ಣದ ಕನಸಿನ ಗುಳ್ಳೆಗೆ ಸೂಜಿ ಚುಚ್ಚುವ ಮುಂದಿನ ಮಾತನ್ನು ಗಮನಿಸಿದಾಗ ಗೊತ್ತಾಗುತ್ತದೆ. ಅದು

''ಅಕ್ಕಯ್ಯಾ.... ಸೀರೆ ಬಿಚ್ಚಿಹೋಯ್ತೆ''

ಎರಡು ನೆಲೆಯ ಭಾಷೆಯ ಬಳಕೆ ಹೀಗೆ ಅರ್ಥಪೂರ್ಣವಾಗುವ ಅನೇಕ ನಿದರ್ಶನಗಳನ್ನು ಕೊಡಬಹುದು. ಅದಿರಲಿ, ಪುಟ್ಟ ಲಕ್ಷ್ಮಿಯ ಮದುವಣಗನ ಸೊಂಟ ಮುರಿದು, ಮದುವಣಗಿತ್ತಿಯ ಸೀರೆ ಬಿಚ್ಚಿಹೋಗುವ ಈ ಘಟನೆಯು ಬರಲಿರುವ ಘಟನೆಗಳ ಹಿನ್ನೆಲೆಯಲ್ಲಿ ಪಡೆಯುವ ಸಾಂಕೇತಿಕತೆಯು ಅಪೂರ್ವವಾದುದು. ಈ ಸಂಯೋಜನೆಯ ಕ್ರಮವು ಆಕಸ್ಮಿಕವಲ್ಲವೆನ್ನುವುದು ಮುಂದೆ ಸುಸ್ಪಷ್ಟವಾಗುತ್ತದೆ : ಗಮನಿಸಿ.

''ತರುವಾಯ ಸೀತೆ ತನ್ನ ತಂಗಿಯ ಗೊಂಬೆ ಮಗಳ ಸೀರೆಯನ್ನು ಮಾತ್ರವಲ್ಲದೆ, ಅವಳ ಗೊಂಬೆಯಳಿಯನ ಸೊಂಟವನ್ನೂ ಸರಿಮಾಡಿಕೊಡಬೇಕಾಯಿತು.'' (ಹೂವಯ್ಯನ ನಿಷ್ಕ್ರಿಯತೆ ಹಾಗೂ ಸೀತೆಯ ಕ್ರಿಯಾಶೀಲತೆಗಳ ಹಿನ್ನೆಲೆಯಲ್ಲಿ 'ಮಾತ್ರವಲ್ಲದೆ' ಎನ್ನುವ ಮಾತು ಮುಖ್ಯವಾಗುತ್ತದೆ. ಗೋಡೆಯ ಮೇಲೆ ಬರೆಯುವುದರಿಂದ ಹಿಡಿದು, ಪ್ರೇಮಪತ್ರದವರೆಗೆ ಸೀತೆಯು ಕ್ರಿಯಾಶೀಲಳೇ. ಇದೆಲ್ಲದರಲ್ಲೂ ಹೂವಯ್ಯನು ಅ-ವಾಸ್ತವಿಯೇ)

ಮುಂದಿನ ವಾಕ್ಯ : ''ಅಷ್ಟರಲ್ಲಿ ಕಾರ್ಗಾಳಿ ಬೀಸಿ, ಕರಿಮೋಡಗಳು ಕಿಕ್ಕಿರಿದು, ಸಿಡಿಲು ಮಿಂಚುಗಳು ಜೋರಾಗಿ, ಮಳೆಯೂ ಆಲಿಕಲ್ಲುಗಳೊಡನೆ ಬೀಳತೊಡಗಿತು.''

ಸೀತೆಯ ಸರಿಪಡಿಸುವ ಪ್ರಯತ್ನಕ್ಕೆ ಪ್ರಕೃತಿಯ ಪ್ರತಿಕ್ರಿಯೆ ಇದು. ಅವಳು ಮತ್ತೆ ಕನಸಿನ ಲೋಕಕ್ಕೆ ಇಳಿಯುತ್ತಾಳೆ. ಆಗ,

''ಪ್ರಾಣಪಕ್ಷಿ.... ಕಾಮಧೇನುಗಳ ಕೊಡಗೆಚ್ಚಲುಗಳಿಗೆ ಬಾಯಿಹಾಕಿ ಕಡೆಯ ಹನಿಯ ವರೆಗೆ ಆನಂದಾಮೃತವನ್ನು ಹೀರಲೆಳಸುತ್ತದೆ. ಅಂತಹ ಸ್ವರ್ಗದಲ್ಲಿದ್ದಳು ಸೀತೆ.'' ತಕ್ಷಣ,

''ಮುಸುರೆ ತಿಕ್ಕಲೆಂದು ಅಲ್ಲಿಗೆ ಬಂದಿದ್ದ ಕಾಳ, 'ಎಂಥದು ಯೇಚ್ನೆ ಮಾಡ್ತಾ ಕೂತೀರಮ್ಮಾ' ಎಂದು ಹಲ್ಲುಬಿಟ್ಟನು.''

ಇಲ್ಲಿ ಮತ್ತೆ ವಿಭಿನ್ನ ಭಾಷಾ ಪ್ರಯೋಗಗಳಿಂದಲೇ ಸ್ಥಿತಿ ವಿಭಿನ್ನತೆಯನ್ನು ಸೂಚಿಸುವ ಕ್ರಿಯೆಯನ್ನು ಗಮನಿಸಬಹುದು.

ಕಾಳನೊಂದಿಗಿನ ಸಂಭಾಷಣೆಯ ಮೇಲುನೆಲೆಯ ಪ್ರಯೋಜನವು ಸೀತೆಯ ಹೃದಯ ದಲ್ಲಿ ನೋವಿನ ಬೀಜಗಳನ್ನು ಬಿತ್ತುವುದಾದರೂ, ಅಂತರ್ಯದಲ್ಲಿ ಅವಳ ಬಾಯಿಂದ ''ನಿನ್ನ ಕೃಷ್ಣಪ್ಪ ಗೌಡ್ರನ್ನ ಹುಲಿ ಹಿಡೀಲೋ'' ಎನ್ನುವ ಮಾತನ್ನು ಆಡಿಸುವುದೇ ಆಗಿದೆ. ಅವಳ ಮಾನಸಿಕ ಅನಾರೋಗ್ಯವು ಈ ಮಾತಿನ ಫಲವಾದ ಆತ್ಮನಿಂದನೆಯ ಪರಿಣಾಮವೂ ಹೌದು.

ಈ ಕ್ರಮವು ಇಡೀ ಅಧ್ಯಾಯವನ್ನೇ ತುಂಬಿಕೊಂಡಿದೆ. ಕೊನೆಯಲ್ಲಿಯೂ ಅವಳ ದೈವಭಕ್ತಿ ಮತ್ತು ಹೂವಯ್ಯ ಕೊಟ್ಟ ಕನಸುಗಳ ಭ್ರಮಾಲೋಕಕ್ಕೂ ಮಲೆನಾಡಿನ ವಾಸ್ತವಕ್ಕೂ ಇರುವ ಅಂತರವು ಎರಡು ಮಾತುಗಳ ಸಾಮೀಪ್ಯದಿಂದ ಸೂಚಿತವಾಗುತ್ತದೆ.

''ಹೆಣ್ಣು ಕೇಳಿದರೆ ಏನಾಯ್ತು? ದೇವರ ದಯದಿಂದ ಜಾತಕ ಸರಿಬರದೆ ಹೋಗುತ್ತದೆ'' ಎಂದು ಶಾಂತಳಾದಳು. ಎಲ್ಲವೂ ಹೆಣ್ಣು ಕೇಳುವವರ, ಕೊಡುವವರ ಮತ್ತು ಜೋಯಿಸರ ಕೈಯಲ್ಲಿದೆ ಎಂಬುದು ಅವಳಿಗೆ ಇನ್ನೂ ಗೊತ್ತಾಗಿರಲಿಲ್ಲ.

ಈ ರೀತಿ ಅನೇಕ ಅಧ್ಯಾಯಗಳನ್ನು ಅಧ್ಯಯನ ಮಾಡಿದಾಗ ವಿವರಗಳ ಕಲಾತ್ಮಕತೆ ಮತ್ತು ಅನಿವಾರ್ಯತೆಗಳು ಖಚಿತವಾಗುತ್ತವೆ. ಆದ್ದರಿಂದಲೇ 'ಕಾನೂರು ಹೆಗ್ಗಡಿತಿ' ವಿವರಗಳಿಂದ ತುಂಬಿರುವ ಕೇಂದ್ರರಹಿತ ರೀತಿಯಲ್ಲ. ಹೀಗೆ ಹೇಳುವಾಗ ಅನಂತಮೂರ್ತಿಯವರು ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಹೇಳಿದ ಹಲವು ಮಾತುಗಳು ನನ್ನ ಮನಸ್ಸಿನಲ್ಲವೆ. ''ಎಲ್ಲವನ್ನೂ ಸುಂದರವಾದ ಚಿತ್ರಗಳಿಗೆ ವಸ್ತುವೆಂದು ತಿಳಿಯುವ, ನೀತಿ-ಅನೀತಿಗಳಿಂದ ಅಬಾಧಿತವಾದ ದೃಷ್ಟಿಯುಳ್ಳ ಕಥೆಗಾರ ಕುವೆಂಪು ಬರಿ ಈಸ್ಥೆಟ್ ಆಗಿಬಿಡುತ್ತಾರೆ. ಯಾಕೆಂದರೆ ಸುಧಾರಕ ಕುವೆಂಪುವಿನ ನೈತಿಕ ಪ್ರಜ್ಞೆಯು ಈ ದಟ್ಟ ವಿವರಗಳಿಂದ ಕೂಡಿದ ಪ್ರಪಂಚನ್ನು ಸೃಷ್ಟಿಸುವ ಸಂದರ್ಭದಲ್ಲಿ ಭಾಗಿಯಾಗುವುದಿಲ್ಲ... ತನ್ನ ಕೃತಿಯೊಳಗೆ ತಾನು ಸ್ವಂತ ಹೀಗೆ ಪ್ರವೇಶಿಸಬೇಕೆಂಬ ಪ್ರಶ್ನೆಯನ್ನು ಈ ಎರಡು ಕೃತಿಗಳಲ್ಲೂ ಕುವೆಂಪು ಬಗೆಹರಿಸಿಕೊಂಡಿಲ್ಲ ಎನ್ನಿಸುತ್ತದೆ.'' (ಪ್ರಜ್ಞೆ ಮತ್ತು ಪರಿಸರ, ಪು - ೧೬೪)

ನಾನು ಮಾಡಿರುವ ವಿಶ್ಲೇಷಣೆಯ ಹಿನ್ನೆಲೆಯಲ್ಲಿ, ಅನಂತಮೂರ್ತಿಯವರ ಅಭಿಪ್ರಾಯಗಳು ಕಾದಂಬರಿಯ ವಿವರಗಳ ಲೋಕ ಮತ್ತು ಭಾಷಿಕ ಶರೀರದ ಮೇಲುಮೇಲಿನ ಗ್ರಹಿಕೆಯಿಂದ ಮೂಡಿಬಂದಿವೆಯೆಂದು ನನಗೆ ತೋರುತ್ತದೆ. 'ತನ್ನ ಕೃತಿಯೊಳಗೆ ತಾನು ಸ್ವಂತ ಹೇಗೆ ಪ್ರವೇಶಿಸಬೇಕು' ಎನ್ನುವ ಮಾತೇ ಕುವೆಂಪು ಅವರ ಕಾದಂಬರಿಗಳ ಸಂದರ್ಭದಲ್ಲಿ ಅಸಂಗತವಾದುದು. ಅವರು ಕೃತಿಲೋಕವನ್ನು ಪರಸ್ಪರ ವಿರೋಧಗಳಿಂದ ಬೆಳಗಿಸುವ ಕಲಾವಿದರಾಗಿಯೂ ಕೃತಿಯ ಹೊರಗಿರುತ್ತಾರೆ. ಹೂವಯ್ಯನೂ ಕೂಡ ವಿಮರ್ಶಿತ ಪಾತ್ರವಾಗಿಯೇ ಓದುಗರಲ್ಲಿ ಕಂಡುಬರುವುದು. ಮತ್ತು ಈ ವಿಮರ್ಶೆಯ ನೆಲೆಗಳು ಕಾದಂಬರಿಯಲ್ಲಿಯೇ ಇವೆ.

ಕಾದಂಬರಿಯಲ್ಲಿ ಬಳಸಿರುವ ಭಾಷೆಯನ್ನು ಕುರಿತ ತೀರ್ಮಾನಗಳಿಗೆ ಬರುವ ಮೊದಲು ಹಲವು ಅಂಶಗಳನ್ನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ನವ್ಯ ವಿಮರ್ಶಕರಿಗೆ ದೊರೆತ ಆ ಕಾಲದ ಪಾಶ್ಚಾತ್ಯ ಮಾದರಿಗಳು ಶೈಲಿಶಾಸ್ತ್ರವನ್ನಾಗಲೀ, ರಾಚನಿಕ ವಿಶ್ಲೇಷಣೆಯನ್ನಾಗಲೀ ಕಥಾಸಾಹಿತ್ಯದ ಗದ್ಯಭಾಷೆಯ ಪರಿಶೀಲನೆಗೆ ಅಗತ್ಯವಾದಷ್ಟು ಪ್ರಮಾಣದಲ್ಲಿ ಬಳಸಿಕೊಂಡಿರಲಿಲ್ಲ. ಆದರೆ ಅರವತ್ತರ ದಶಕದ ನಂತರ ಈ ಕ್ಷೇತ್ರದಲ್ಲಿ ಮಹತ್ವದ ಕೆಲಸ ನಡೆದಿದೆ. ವಾಕ್ಯೋತ್ತರ ಘಟಕಗಳ ಅಧ್ಯಯನದ ಮಹತ್ವವು ಮನದಟ್ಟಾಗಿದೆ.

ಸ್ಥೂಲವಾಗಿ ಹೇಳುವುದಾದರೆ ಕಾದಂಬರಿಯೊಂದರಲ್ಲಿ ಕೆಳಕಾಣಿಸಿರುವ ಹಲವು ಬಗೆಗಳಲ್ಲಿ ಭಾಷೆಯು ಬಳಕೆಯಾಗುತ್ತದೆ.

೧. ವಸ್ತು ಜಗತ್ತನ್ನು ಬಣ್ಣಿಸಲು ನಿರೂಪಕನು ಬಳಸುವ ಭಾಷೆ.
೨. ಪಾತ್ರಗಳ ವರ್ತನೆಯನ್ನು ಹೇಳಲು ನಿರೂಪಕನು ಬಳಸುವ ಭಾಷೆ.
೩. ಪಾತ್ರಗಳ ಆಲೋಚನೆಯನ್ನು ಹೇಳಲು ನಿರೂಪಕನು ಬಳಸುವ ಭಾಷೆ.
೪. ಪಾತ್ರಗಳು ಇತರರೊಡನೆ ಬೇರೆಬೇರೆ ಸಂದರ್ಭಗಳಲ್ಲಿ ಮಾಡುವ ಸಂಭಾಷಣೆಯ ಭಾಷೆ.
೫. ತನ್ನ ಅನಿಸಿಕೆಗಳನ್ನು ತಾನೇ ಹೇಳಲು ಬಳಸುವ ಭಾಷೆ.

ಸಮರ್ಥನಾದ ಕಲಾವಿದನು ಈ ಸಂದರ್ಭಗಳಿಗೆ ಅನುಗುಣವಾಗಿ ಭಾಷಿಕ ಪರಿವರ್ತನೆಗಳನ್ನು ತಂದುಕೊಳ್ಳುತ್ತಾನೆ. ಅಷ್ಟೇ ಅಲ್ಲ, ಪಾತ್ರಗಳ ನಡುವಿನ ಸಂಬಂಧಗಳು ಅವರ ಭಾಷಿಕ ಶಕ್ತಿ ಹಾಗೂ ಪರಿಮಿತಿಗಳಿಂದ ನಿರ್ಧಾರವಾಗುವುದೆಂದು ತೋರಿಸಿಕೊಡುತ್ತಾನೆ. ಒಬ್ಬ ವ್ಯಕ್ತಿಯು ತನ್ನ ಪರಿಸರಕ್ಕೆ ಪ್ರತಿಸ್ಪಂದಿಸುವ ರೀತಿಯೂ ಅವನ ಭಾಷಿಕ ಮಿತಿಗಳನ್ನು ಅವಲಂಬಿಸಿರುತ್ತದೆ. ಭಾಷಿಕವಾದ, ಆಲೋಚನಾತ್ಮಕವಾದ ವ್ಯಕ್ತಿತ್ವವು ಕೆಲವೊಂದು ಕಡೆ ಕ್ರಿಯಾತ್ಮಕವಾದ ಪ್ರತಿಕ್ರಿಯೆಯನ್ನು ತೋರಿಸುವುದರ ಬದಲು ಸ್ವ ನಿರತವಾಗಬಹುದು. ಬದಲಾಗಿ ಸೀಮಿತ ಭಾಷಾಶಕ್ತಿಯು, ಪೂರ್ವಬಿಂಬಿತವಲ್ಲದ ಕ್ರಿಯೆಯಲ್ಲಿ ತೊಡಗಬಹುದು. ಉದಾಹರಣೆಗೆ, ಈಗಾಗಲೇ ಹೇಳಿದ ಸೀತೆಯ ಕ್ರಿಯಾಶೀಲತೆ ಮತ್ತು ಹೂವಯ್ಯನ ನಿಷ್ಕ್ರಿಯತೆಗೆ ಇಂಥ ಕಾರಣಗಳೂ ಇರಬಹುದು.

'ಕಾನೂರು ಹೆಗ್ಗಡಿತಿ'ಯ ಭಾಷೆಯನ್ನು ಮೇಲಿನ ಮಾತುಗಳ ಹಿನ್ನೆಲೆಯಲ್ಲಿ ನೋಡಿದಾಗ ಕುವೆಂಪುರವರು ಭಾಷಾಪ್ರಯೋಗದ ಈ ವೈವಿಧ್ಯ ಮತ್ತು ಔಚಿತ್ಯಗಳನ್ನು ಮನಗಂಡಿರುವರೆಂಬ ಸಂಗತಿಯು ಗೊತ್ತಾಗುತ್ತದೆ. ಎಲ್ಲ ಸಂದರ್ಭದಲ್ಲೂ ಅವರು ಆಯಾಪಾತ್ರದ ಗ್ರಹಿಕೆಗೆ ಮೀರಿದ ಭಾಷೆಯನ್ನು ಬಳಸುವುದಿಲ್ಲ ಆ ಪಾತ್ರ ಮಾತನಾಡುವಾಗಲೂ ಅಷ್ಟೆ, ಆಲೋಚಿಸುವಾಗಲೂ ಅಷ್ಟೆ. ಬದಲಾಗಿ, ಆ ಪಾತ್ರಗಳ ವರ್ತನೆ, ಆಲೋಚನೆಗಳ ವ್ಯಾಖ್ಯಾನಕಾರನಾಗಿ ನಿರೂಪಕನು ಪ್ರವೇಶಿಸಿದಾಗ ಭಾಷೆಯು ಹೆಚ್ಚು ವರ್ಣನಾತ್ಮಕವಾಗುತ್ತದೆ. ಅಲ್ಲಿಯೂ ಸಂಸ್ಕೃತ ತುಂಬಿದ, ಅಮೂರ್ತ ಪರಿಕಲ್ಪನೆಗಳನ್ನು ಬಳಸುವುದು ಹೂವಯ್ಯನನ್ನು ಕುರಿತಿರುವಾಗ ಮಾತ್ರ. ಹೂವಯ್ಯನ ಪಾತ್ರವು ಅಂಥ ಪೂರ್ವಸಿದ್ಧತೆ ಪಡೆದಿರುವಂಥದೇ ಹೌದು. ಹಾಗೆ ನೋಡಿದರೆ ಅವನೂ ಬುದ್ಧಿಪೂರ್ವಕವಾಗಿ ಪ್ರಯತ್ನಪಟ್ಟಾಗ ಅಮೂರ್ತವಾದ ಸಂಗತಿಗಳನ್ನು ಇತರರಿಗೆ ತಿಳಿಯುವಂತೆ ವಿವರಿಸುವ ಕೆಲಸ ಮಾಡಬಲ್ಲ. ''ಸೀತೆ-ಹೂವಯ್ಯ'' ಎಂಬ ಅಧ್ಯಾಯದಲ್ಲಿ ಸೀತೆಗೆ ತನ್ನ ಭಾವಸಮಾಧಿಯನ್ನು ವಿವರಿಸುವ ಪ್ರಯತ್ನ ಈ ಬಗೆಯದು. ಉಳಿದಂತೆ ಭಾಷಿಕ ಸೇತುವೆಗಳನ್ನು ಕಟ್ಟಿಕೊಳ್ಳುವ ಸಂತತ ಪ್ರಯತ್ನ ಮತ್ತು ಸೋಲುಗಳು ಅವನ ಬದುಕಿನ ಭಾಗವೇ ಆಗಿದೆ.

ಹೂವಯ್ಯನ ಈ ಬಗೆಯ ಸಮಸ್ಯೆಗಳನ್ನು Bernstein ಅವರು ಬಳಸುವ elaborate code ಮತ್ತು restricted code ಎಂಬ ಪರಿಕಲ್ಪನೆಗಳಿಂದ ವಿವರಿಸಬಹುದು. ಒಬ್ಬ ವ್ಯಕ್ತಿಯು ಶಿಕ್ಷಣ, ವಿಭಿನ್ನ ಪರಿಸರಗಳ ಫಲವಾಗಿ ತನ್ನ ಭಾಷಿಕ ಸಂಪತ್ತನ್ನು ಹೆಚ್ಚಿಸಿಕೊಳ್ಳುತ್ತಾನೆ. ಈ ಸಮೃದ್ಧಿಯು ಅವನ ಊರ್ಧ್ವಮುಖಿಯಾದ ಸಾಮಾಜಿಕ ಚಲನೆಗೆ ನೆರವಾಗುತ್ತದೆ. ಆದರೆ ಈ elaborate code ಅವನು ತನ್ನ ಮೂಲಪರಿಸರದೊಂದಿಗೆ ಹೊಂದಿರುವ ಸಂಬಂಧದ ಸ್ವರೂಪವನ್ನು ಬದಲಿಸುತ್ತದೆ. ಏಕೆಂದರೆ ಅವರದು restricted code. ಆ ವ್ಯಕ್ತಿ ಪರಕೀಯನಾಗುತ್ತಾನೆ. ಇಡೀ ಪರಿಸರವನ್ನು ತನ್ನ ಮಟ್ಟಕ್ಕೆ ತರುವ ಅವನ ಪ್ರಯತ್ನವು ವಿಫಲವೂ, ನಗೆಪಾಟಲೂ, ಭಯ ಪ್ರಚೋದಕವೂ ಆಗಬಹುದು. ಈ ಸತ್ಯವನ್ನು ಬಲ್ಲ ಕುವೆಂಪು ಹೂವಯ್ಯನನ್ನು ಇಂಥ ಸಮಸ್ಯೆಗಳ ಬಲಿಪಶುವಾಗಿ ಮಾಡುತ್ತಾರೆ. ಉದಾಹರಣೆಗೆ ಗಮನಿಸಿ : ೧) ಸೀತೆ ಮತ್ತು ಹೂವಯ್ಯ ಕಾದಂಬರಿಯಲ್ಲಿ ಮೊದಲಬಾರಿಗೆ ಸಂಧಿಸಿದಾಗ ಇಬ್ಬರ ಹೃದಯಗಳೂ ಪ್ರೀತಿಯಿಂದ ತುಂಬಿವೆ. ಆದರೆ ಮಾತು ಸಾಧ್ಯವಿಲ್ಲದ ಸನ್ನಿವೇಶ. ಆದ್ದರಿಂದಲೇ ನಿರೂಪಕನ ವಿವರಣೆ ಜಾಸ್ತಿ. ಸೀತೆ ಬರೆದ ಗೋಡೆಬರಹವನ್ನು ಓದಿದ ಮೇಲೆ ನಡೆಯುವ ಸಂಭಾಷಣೆ ಕೇವಲ ನಾಲ್ಕು ಸಾಲುಗಳಷ್ಟು. (ಸೀತೆ ಸ್ವಲ್ಪ ನೀರು ಕೊಡು। ಕೈತೊಳೆಯೋಕೇನು। ಅಲ್ಲ ಕುಡಿಯುವುದಕ್ಕೆ। ನೀರು ಯಾಕೆ ಕುಡೀತೀರಿ ಹಾಲಿದೆ।) ಅಲ್ಲಿಯೂ ಅವನದು ಶಿಷ್ಟ ಭಾಷೆ. ಅವಳದು ಆಡುಮಾತು. ಆದರೆ ನಿರೂಪಕ ಕೊಡುವ ವಿವರಣೆ ಅರವತ್ತೊಂದು ಸಾಲುಗಳಷ್ಟಿದೆ. ಅಲ್ಲಿ ಮತ್ತೆ ಸೀತೆಯ ಮನಃಸ್ಥಿತಿಯ ನಿರೂಪಣೆಗೆಂದು ಮೀಸಲಾಗಿರುವುದು ಕೇವಲ ಎಂಟು ಸಾಲುಗಳು ಮಾತ್ರ. ಏಕೆಂದರೆ ಅವಳದು ಮಾತರಿಯದ ಪ್ರೀತಿ.

೨) ಆಮೇಲೆ ಇಪ್ಪತ್ತನೆಯ ಅಧ್ಯಾಯದಲ್ಲಿ ಹೂವಯ್ಯ - ಸೀತೆಯರ ನಡುವೆ ಸುಮಾರು ಎಂಟು ಪುಟಗಳಷ್ಟು ದೀರ್ಘವಾದ ಸಂಭಾಷಣೆಯಿದೆ. ಆದರೆ ಇಲ್ಲಿ ನಿರೂಪಕನಾಡುವ ಮಾತುಗಳು ಒಂದು ಪುಟದಷ್ಟು ಇದೆ. ಆದರೆ ಹೂವಯ್ಯನ ಮಾತುಗಳು ಸೀತೆಗೆ ಹೋಲಿಸಿದರೆ ಬಹಳ ಜಾಸ್ತಿ ಮತ್ತು ವಿಚಾರಾತ್ಮಕ. ಈ ಮಾತುಗಳನ್ನು ಗಮನಿಸಿ.

''ಅವಳಿಗೆ ಹೂವಯ್ಯನ ಪ್ರಶ್ನೆಯ ಅರ್ಥ, ಭಾವ, ಸಾರ್ಥಕ್ಯಗಳೊಂದೂ ಗೊತ್ತಾಗಲಿಲ್ಲ.''

''ಅವಳ ಭಾಷೆಯೂ ಅನುಕರಣದಿಂದ ಹೂವಯ್ಯನ ಭಾಷೆಯ ಮಟ್ಟಕ್ಕೆ ಅನೈಚ್ಛಿಕವಾಗಿಯೇ ಏರುತ್ತಿತ್ತು.''

''ಹೂವಯ್ಯ ಪ್ರಯತ್ನಪೂರ್ವಕವಾಗಿ ಸೀತೆಯ ಮಟ್ಟಕ್ಕಿಳಿದು ಮಾತನಾಡುತ್ತಿದ್ದರು.''

ಇಲ್ಲೆಲ್ಲ ಕಾದಂಬರಿಕಾರರಿಗೆ ಭಾಷಿಕ ಅಂತರದಿಂದ ಉಂಟಾಗುವ ಸಮಸ್ಯೆಗಳ ತಿಳಿವಳಿಕೆಯಿರುವುದೂ, ಅದರ ಪರಿಹಾರಕ್ಕಾಗಿ ಹೂವಯ್ಯನು ಪಡುವ ಕಷ್ಟಗಳೂ ತಿಳಿದುಬರುತ್ತವೆ. ಇನ್ನೊಂದು ಹಂತದಲ್ಲಿ 'ತನ್ನ ಪರಿಸರವನ್ನು ಎತ್ತರಿಸಬೇಕೆಂಬ' ಹೂವಯ್ಯನ ಒಟ್ಟು ಪ್ರಯತ್ನಕ್ಕೆ ಇದು ಸಂಕೇತವಾಗುತ್ತದೆ.

೩) ಕಾದಂಬರಿಯ ಕೊನೆಕೊನೆಗೆ ಪುಟ್ಟಣ್ಣ ಹೀಗೆನ್ನುತ್ತಾನೆ :

''ಈಗೀಗ ನನಗೆ ಅವರ ಹತ್ತಿರ ಹೋಗೋಕೆ ಹೆದರಿಕೆ ಆಗ್ತದೆ. ಹೆದರಿಕೆ ಅಂದರೆ ಹೆದರಿಕೆ ಅಲ್ಲ. ಅವರ ಹತ್ರ ಹೋದರೆ ಏನೋ ಒಂದು ತರಾ ಆಗ್ತದೆ.''

ಈ ರೀತಿಯ ಪರಿಮಿತಿಗಳನ್ನು ಮೀರುವ ಹೂವಯ್ಯನ ಪ್ರಯತ್ನ ಶ್ಲಾಘನೀಯವಾದುದು. ನಿರೂಪಕನು ಹೂವಯ್ಯನ ಬಗ್ಗೆ ಪಕ್ಷಪಾತ ತೋರುವನೋ ಎಂದು ತಕ್ಷಣಕ್ಕೆ ಅನ್ನಿಸುತ್ತದೆ. ಆದರೆ ವಾಸ್ತವದಲ್ಲಿ ಚಂದ್ರಯ್ಯಗೌಡರಿಂದ ಹಿಡಿದು ಗಂಗೆಯವರೆಗೆ, ಹುಲಿಯಿಂದ ಕಾಗೆಯವರೆಗೆ ಪ್ರತಿಯೊಂದು ಜೀವಿಯ ಬಗ್ಗೆಯೂ ನಿರೂಪಕನ ಸಹಾನುಭೂತಿಯ ಹರಹು ಇದೆ. ಅವರೆಲ್ಲರನ್ನೂ ಅರ್ಥೈಸುವ ಪ್ರಯತ್ನದಲ್ಲಿ ಅವನು ಸದಾ ತಲ್ಲೀನನಾಗಿದ್ದಾನೆ. ಹೂವಯ್ಯನು ಪ್ರತಿನಿಧಿಸುವ ಹಲವು ಮೌಲ್ಯಗಳ ಬಗ್ಗೆ ಅವನಿಗೆ ಅಭಿಮಾನವಿರಬಹುದು. ಆದರೆ ಅವನು ಹೂವಯ್ಯನ ದೌರ್ಬಲ್ಯಗಳ ಬಗ್ಗೆ ಮೌನಿಯಲ್ಲ.

ಇನ್ನು ಇತರ ಪಾತ್ರಗಳೊಡನೆ ಹೂವಯ್ಯ ಬಳಸುವ ಭಾಷೆಯ ಬಗ್ಗೆ ಮತ್ತು ಅವು ತಮ್ಮ ತಮ್ಮೊಳಗೆ ಬಳಸುವ ಭಾಷೆಯ ಬಗ್ಗೆ ಹೇಳುವ ಅಗತ್ಯವಿಲ್ಲ. ಒಂದು ಮಿತಿಯೊಳಗೆ ಅವು ತಮ್ಮ ಪ್ರಾದೇಶಿಕತೆಯನ್ನು ಉಳಿಸಿಕೊಳ್ಳುತ್ತವೆ. ದಕ್ಷಿಣ ಕನ್ನಡದಿಂದ ಬಂದವರು, ಮಲೆನಾಡ ಹರಿಜನರು ಮತ್ತು ಮಲೆನಾಡ ಒಕ್ಕಲಿಗರು ಮಾತನಾಡುವ ಕನ್ನಡದ ವೈಶಿಷ್ಟ್ಯಗಳು ಸರಿಯಾಗಿಯೆ ದಾಖಲಾಗಿವೆ ಮತ್ತು ಅದೆಲ್ಲದರ ಸಂಗಡ ಪ್ರತಿಯೊಂದು ಪಾತ್ರವೂ ತನ್ನದೇ ಅನನ್ಯತೆಯನ್ನೂ ಭಾಷೆಯಲ್ಲಿ ಉಳಿಸಿಕೊಳ್ಳುತ್ತದೆ.

ನಿರೂಪಕನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸುವ ಭಾಷೆಯು ಬೇರೆ ಬೇರೆ ಬಗೆಯಲ್ಲಿರುವುದೆಂದು ಹೇಳಲಾಯಿತು. ಇಲ್ಲಿ ಕುವೆಂಪು ಅವರ ಭಾಷೆಯ ಲಕ್ಷಣವೊಂದನ್ನು ಹೆಸರಿಸಬೇಕು. ಪದ್ಯವಿರಲಿ, ಗದ್ಯವಿರಲಿ ಅವರು ಕಥನ (narration), ವರ್ಣನೆ (description), ಚಿಂತನೆ (thought) ಮತ್ತು ಭಾವನೆಗಳಿಗೆ (feeling) ಬಳಸುವ ಭಾಷೆ ಬೇರೆ ಬೇರೆ. ಮೂರ್ತವಾದುದನ್ನು ಮೂರ್ತವಾಗಿಯೇ ಚಿತ್ರಿಸುವುದರ ಜೊತೆಗೆ, ಅದನ್ನು ಅಮೂರ್ತದ ಪರಿಭಾಷೆಯಲ್ಲಿ ವಿವರಿಸುವುದು ಅವರ ಸ್ವಭಾವ. ಇದು ರೂಪಕಗಳ,

ಪ್ರತಿಮೆಗಳ ಭಾಷೆಗೆ ಮನ ಒಲಿದವರ ಗುಣವಲ್ಲ. ಮೂವತ್ತರ ದಶಕದ ಕಥನಗದ್ಯವು ಆ ಮಟ್ಟದ ಪ್ರಬುದ್ಧತೆಯನ್ನು ಅಥವಾ ಆ ಸಾಧ್ಯತೆಯನ್ನು ಸಾಕ್ಷಾತ್ಕರಿಸಿಕೊಂಡಿರಲಿಲ್ಲ. ಇರುವುದರಲ್ಲಿಯೇ ಮಗ್ನವಾದ ಸಮುದಾಯದಲ್ಲಿ ಅರಿವನ್ನು ಮೂಡಿಸುವುದರಲ್ಲಿ ತೊಡಗಿದ ಕುವೆಂಪುರವರಿಗೆ ಈ ವ್ಯಾಖ್ಯಾನ ಪರತೆಯು ಅನಿವಾರ್ಯವಾಯಿತೆಂದು ತೋರುತ್ತದೆ. ಅಲ್ಲದೆ ಈ ವಿವರಣಪರತೆಯು ಅಂಥ ವಿವರಣೆಗಳನ್ನು ಅಪೇಕ್ಷಿಸುವ ವಾಚಕ ಸಮುದಾಯದ ನಿರೀಕ್ಷೆಗಳಿಂದ ಪ್ರೇರಿತವಾಗಿರುತ್ತದೆ. ವಿವರಣೆಗಳನ್ನು ನೀಡುವ ಕಾದಂಬರಿಗಳ, ಸಾಹಿತ್ಯ ಕೃತಿಗಳ ಸಾನ್ನಿಧ್ಯದಲ್ಲೇ ಕುವೆಂಪು ಬರೆಯುತ್ತಿದ್ದರು. ಸಂವೇದನಾಶೀಲ ವಾಚಕವರ್ಗವೂ ಭವಿಷ್ಯದಲ್ಲಿತ್ತೇ ಹೊರತು ಆ ಕಾಲದ ವಾಸ್ತವವಾಗಿರಲಿಲ್ಲ. ನನಗೆ ತೋರುವ ಹಾಗೆ ತೊಂದರೆ ಇರುವುದು ಕುವೆಂಪು ಅವರ ಭಾಷೆಯಲ್ಲಲ್ಲ, ಅವರ ಆಧ್ಯಾತ್ಮಿಕ, ಅಮೂರ್ತ ಚಿಂತನೆಗಳ ಅಸ್ಪಷ್ಟತೆ ಹಾಗೂ ಗೊಂದಲಮಯತೆಯಲ್ಲಿ. ಸಾಮಾಜಿಕವಾದ ಸಂಗತಿಗಳನ್ನು ಕುರಿತು ಆಲೋಚಿಸುವಾಗ ಈ ಕಾದಂಬರಿಯ ಭಾಷೆ ಕುಸಿಯುವುದಿಲ್ಲ. ಕಥನ, ಸಂಭಾಷಣೆಗಳಲ್ಲಿ ಸಾಧ್ಯವಾಗುವ ಲಯವು ಕೆಲವೆಡೆ ವರ್ಣನೆ ಹಾಗೂ ಆಲೋಚನೆಗಳಲ್ಲಿ ಸಾಧ್ಯವಾಗುವುದಿಲ್ಲ.

ಕೃತಿಯ ಕಿರುಘಟಕಗಳು ಕೂಡ, ಒಟ್ಟು ಕೃತಿಯ ಆಶಯಗಳಿಗೆ ಸಂವಾದಿಯಾದ ನೆಲೆಯಲ್ಲಿ ಕೆಲಸಮಾಡುತ್ತಿರುತ್ತವೆನ್ನುವುದು ವ್ಯಾಖ್ಯಾನ ವಿಶ್ಲೇಷಣೆಯ ಮತ್ತೊಂದು ನೆಲೆ. ಇದು ಕೃತಿಯ ವ್ಯಾಕರಣವು ವಾಕ್ಯದ ವ್ಯಾಕರಣಕ್ಕೆ ಸಮಾನಾಂತರವಾಗಿರುವುದೆಂದು ಹೇಳುತ್ತದೆ. ಈ ಮಾತಿನ ಸತ್ಯವನ್ನು ಈ ಕಾದಂಬರಿಯ ಘಟನೆಯೊಂದರ ಆಧಾರದ ಮೇಲೆ ಪರೀಕ್ಷಿಸುವುದು ನನ್ನ ಪ್ರಸ್ತುತ ಉದ್ದೇಶ.

೧) ಲಕ್ಷ್ಮಿಯ ಗೊಂಬೆಗಳ ಪ್ರಕರಣವು ಇಡೀ ಕಾದಂಬರಿಯ ಒಂದು ಆಯಾಮವನ್ನು ತನ್ನೊಳಗೆ ಹುದುಗಿಸಿಕೊಂಡಿದೆಯೆಂದು ಈಗಾಗಲೇ ನೋಡಿಯಾಯಿತು. ಅಷ್ಟೇ ಸಂಕೀರ್ಣವಾದ ಮತ್ತೊಂದು ಘಟಕವೆಂದರೆ ಸೀತೆಯನ್ನು ಮದುವೆಯಾಗುವೆನೆಂದು ಕೇಳಲು ಮುತ್ತಳ್ಳಿಗೆ ಹೊರಟಿರುವ ಹೂವಯ್ಯನು ಕಾಡಿನ ದಾರಿಯಲ್ಲಿ ಬೈಸಿಕಲ್ ಸವಾರನೊಬ್ಬನನ್ನು ಸಂಧಿಸುವ ಘಟನೆ. ಕುವೆಂಪು ಅವರ ಕಾದಂಬರಿಗಳಲ್ಲಿ ಬೈಸಿಕಲ್ ಪರಿವರ್ತನೆಯ ಸಂಕೇತ. ಹೆಗ್ಗಡಿತಿಗಿಂತ ಹಿಂದಿನ ಕಾಲಖಂಡದಲ್ಲಿ ನಡೆಯುವ 'ಮರಳಿ ಮಣ್ಣಿಗೆ' ಕಾದಂಬರಿಯ 'ಬಿಸೇಕಲ್ಲು ಸವಾರಿ'ಯನ್ನು ಇಲ್ಲಿ ನೆನಪುಮಾಡಿಕೊಳ್ಳಬಹುದು.

ಆ ಶೋಕಿ ಸವಾರನ ಉನ್ಮತ್ತವೇಗ-ಬೀಳುವಿಕೆ-ಅಹಂಕಾರ-ಮತ್ತು ಮೊದಲಿನ ವೇಗದಲ್ಲೇ ಮುಂದುವರಿಯುವಿಕೆಗಳು ಹೂವಯ್ಯನಿಗೆ 'ಯಂತ್ರ ನಾಗರಿಕತೆ, ಇಂಗ್ಲಿಷು, ಚಾಂಚಲ್ಯ, ಉದ್ವೇಗ, ವೇಗ'ಗಳನ್ನು ನೆನಪಿಗೆ ತರುತ್ತದೆ. ಆದರೆ ಅದು ಕೇವಲ ತಿರಸ್ಕಾರದ ಪ್ರತಿಕ್ರಿಯೆಯಲ್ಲ. ಏಕೆಂದರೆ ಉತ್ತರಕ್ಷಣದಲ್ಲೇ, ''ನಿಲ್ಲದೆ ಮುಂಬರಿಯುತ್ತಿರುವ, ದಿನದಿನವೂ ಬದಲಾಯಿಸುತ್ತಿರುವ ಹೊರಗಣ ವಿಶಾಲಜಗತ್ತಿಗೆ ಪ್ರತಿಮೆಗಳಾದರು, ಆ ಬೈಸಿಕಲ್ ಮತ್ತು ಅದರ ಸವಾರ. ಹೂವಯ್ಯನ ಮನಸ್ಸು ಗವಾಕ್ಷದಿಂದೆಂಬಂತೆ ಕಾನೂರು, ಮುತ್ತಳ್ಳಿಗಳ ಸಂಕುಚಿತ ಬದುಕಿನಿಂದ ಹೊರಲೋಕದ ಬಿತ್ತರಕ್ಕೆ ಹಾರಿತು... ಎಷ್ಟಾದರೂ ಆಕ್ರಮಣಶೀಲವಾದ ಆ ಚಂಚಲಮಾನ ನಾಗರಿಕಲೋಕವು ಮಲೆನಾಡಿಗೆ ದಾಳಿಯಿಡುವ ಮೊದಲು ಮುನ್ನಟ್ಟಿದ ರಣಚಾರನಲ್ಲವೇ ಆ ಬೈಸಿಕಲ್ ಸವಾರ.''

ಆ ದಿನಗಳ ಕುವೆಂಪು ಅವರ ಮನಸ್ಸಿನ ಹಾಗೂ ಅವರ ಕಾದಂಬರಿಗಳ ಬಹು ಮುಖ್ಯವಾದ ದ್ವಂದ್ವವೊಂದಕ್ಕೆ ಈ ಘಟನೆಯು ಕನ್ನಡಿ ಹಿಡಿಯುತ್ತದೆ. ನಾಗರಿಕತೆಯನ್ನು ಕುರಿತಾದ ಆಕರ್ಷಣೆ ಮತ್ತು ವಿಕರ್ಷಣೆಗಳು ಅವರ ಎರಡೂ ಕಾದಂಬರಿಗಳ ಕೇಂದ್ರದಲ್ಲಿವೆ. ಒಂದು ಕಡೆ ವಿಶಾಲಜಗತ್ತು, ಪ್ರಗತಿಗಾಮಿಯಾದ ಪ್ರಪಂಚ, ಹೊರಲೋಕದ ಬಿತ್ತರ ಮುಂತಾದ ಮಾತುಗಳು ಆಕರ್ಷಣೆಗೆ ಸಾಕ್ಷಿಯಾದರೆ, ಆಕ್ರಮಣಶೀಲ, ದಾಳಿ, ರಣಚಾರ ಮುಂತಾದ ಪದಗಳು ಭಯಮಿಶ್ರಿತ ವಿಕರ್ಷಣೆಗೆ ಸಾಕ್ಷಿಯಾಗಿವೆ.

೨) ಆದರೆ ಇನ್ನೊಂದು ನೆಲೆಯಿಂದ ನೋಡಿದಾಗ ಇಡೀ ಘಟನೆಯು ಸ್ವತಃ ಹೂವಯ್ಯನು ಎದುರಿಸಲಿರುವ ದುರದೃಷ್ಟ ಪರಂಪರೆಗೆ ಸಂವಾದಿಯಾಗಿದೆ. ಅವನೂ 'ಉತ್ಸಾಹ, ಉಲ್ಲಾಸಗಳ ಬುಗ್ಗೆ'ಯಾಗಿ, ಕನ್ನಡಿಯ ಮುಂದೆ ಕ್ರಾಪು ಬಾಚಿಕೊಂಡು, ನಡುನಡುವೆ ಕ್ರಾಪು ಮುಟ್ಟಿಕೊಂಡು, ಜಲದರ್ಪಣದಲ್ಲಿ ಮುಖ ನೋಡಿಕೊಂಡು ಜೋರಾಗಿ ನಡೆಯುತ್ತಿದ್ದಾನೆ. ಶೋಕಿ ಸವಾರನ ಹಾಗೆಯೇ. ಕೇವಲ ಒಂದು ದಿನದೊಳಗೆ ಸೀತೆಯ ತಂದೆಯನ್ನು ಒಂದು ಮಾತೂ ಕೇಳದೆ ಆಶಾಭಂಗದಿಂದ ಗಾಯಗೊಂಡು ಮನೆಗೆ ಹಿಂದಿರುಗುತ್ತಾನೆ. ಆದರೆ ಆ ಆಶಾಭಂಗವು ಅವನನ್ನು ರಾಮಯ್ಯನ ಹಾಗೆ ಆತ್ಮಹತ್ಯೆಯ



**ಅ**ವರು ಹೀಗಿರುವುದು ನಮ್ಮ ಅದೃಷ್ಟ
ಹೀಗಿರದೇ ''ಹಾಗೆ'' –
'ಎಲ್ಲರ ಹಾಗೆ' ಇದ್ದಿದ್ದರೆ, ಆಗ ತಿಳಿಯುತ್ತಿತ್ತು!!

ಬೇಕಾದ್ದು ಮಾಡಬಹುದು
ಎಂದೂ ಏನೂ ಅಂದಿಲ್ಲ.

ಅದನ್ನೆಲ್ಲ ತಿಳಿಯುವ ಆಸಕ್ತಿಯೂ ಅವರಿಗಿಲ್ಲ,
ಪುರುಸೊತ್ತಂತೂ ಮೊದಲೇ ಇಲ್ಲ
ನಮಗಂತೂ ಅವರ ಪಕ್ಕದಲ್ಲೇ ಜಾಗ
ಅತ್ತ ಮೇಜು, ಕುರ್ಚಿ, ಟಿವಿ; ಇತ್ತ ನಾವು!
ಮತ್ತೆಲ್ಲ ಕಡೆ ರಾಶಿ ರಾಶಿ ಸಾಮಾನು.

ಸಂಜೆಗೆ ತಂಗಲೊಂದು ಮನೆ,
ರುಚಿಗೆ ತಕ್ಕ ಊಟ, ಮಲಗಲೊಂದಷ್ಟು ಜಾಗ....
ಮೂಲಭೂತ ಬೇಕುಗಳಲ್ಲೇ ಸಂತೃಪ್ತ

ಸರ್ವೇ ಜನಾಃ ಸುಖಿನೋ ಭವಂತು!
ಬುದ್ಧನ ಅಪರಾವತಾರ.
ಆಸೆ ಇಲ್ಲ, ಅಹಂಕಾರವಿಲ್ಲ, ಕಾಮ ಮೋಹಗಳಿಲ್ಲ
ಈ ಇಲ್ಲಗಳ ಬಾಲಗೋಚಿ ಅಳೆದು ನೋಡಿದರೆ,
ಕಡೆಗೆ ಏನೂ ಇಲ್ಲ.
ಸ್ವಯಂಕೇಂದ್ರಿತ ಅಹುದುಗಳಿಗೆ ಅಹುದೆನ್ನುವ
ಕೂಪಮಂಡೂಕ.

ಬಟ್ಟೆ, ಪಾತ್ರೆ, ಅಡಿಗೆ...
ನಾವು ಮಾಡುವುದು; ಅದು ನಿತ್ಯಕರ್ಮ!
ಹುಣ್ಣಿಮೆಗೋ ಅಮಾವಾಸ್ಯೆಗೋ ಒಮ್ಮೆ
ತಮ್ಮ ನಾಲಿಗೆ ರುಚಿಗೆ ತಾವು ಬೇಯಿಸಿಕೊಂಡರೆ
ಅದು ನಮಗೆ ಮಾಡಿದ ಒಂದು ಉಪಕಾರ?

ತಿಳಿದೇ ಇರಲಿಲ್ಲ ಇಂಥದ್ದನ್ನೆಲ್ಲಾ
ಗಮನದಲ್ಲಿಡಬೇಕೆಂದು.

ಅವರು ಹೀಗಿರುವುದು ನಮ್ಮ ಅದೃಷ್ಟ
ಹೀಗಿರದೇ ''ಹಾಗೆ'' –
'ಎಲ್ಲರ ಹಾಗೆ' ಇದ್ದಿದ್ದರೆ, ಆಗ ತಿಳಿಯುತ್ತಿತ್ತು!!
ಛೇ!
ಎಷ್ಟು ದುರಹಂಕಾರ ನಮಗೆ!!


ಮಮತಾ ಜಿ. ಸಾಗರ
ಜಿ. ೨೬, ಸಾಯಿಪ್ರಿಯ ಅಪಾರ್ಟ್‌ಮೆಂಟ್ಸ್,
೧೨-೨-೭೯೦/೭೭, ಅಯೋಧ್ಯನಗರ, ಮೆಹದಿಪಟ್ನಂ,
ಹೈದರಾಬಾದ್-೫೦೦ ೦೨೮

ಕಡೆಗೆ ತಳ್ಳುವುದಿಲ್ಲ. ಬದಲಾಗಿ ಗಾಯಗಳನ್ನು ವಾಸಿಮಾಡಿಕೊಂಡು 'ಮೊದಲಿನ ವೇಗದಲ್ಲಿಯೇ' ಜೀವನಪಥದಲ್ಲಿ ಮುಂದುವರಿಯುತ್ತಾನೆ.

೩) ಕಾದಂಬರಿಯ ಮೊದಲ ಭಾಗದಲ್ಲೇ ಬರುವ ಗಾಡಿ ಅಪಘಾತ, ಶೂದ್ರಸಂಘದ ಮಹಾಸಭೆ, ಕೌಲ ಕರುಹಾಕಿದ್ದು ಮುಂತಾದ ಘಟನೆಗಳನ್ನು ಇದೇ ರೀತಿ ವಿಶ್ಲೇಷಣೆ ಮಾಡಿ ಒಟ್ಟು ಕಾದಂಬರಿಯ ವಸ್ತುವಿಗೆ ತಳುಕು ಹಾಕಲು ಸಾಧ್ಯ.

ಇನ್ನು ಮುಂದೆ ಕಾದಂಬರಿಯ ನಡೆಯನ್ನು ಬೇರೊಂದು ದೃಷ್ಟಿಕೋನದಿಂದ ಗಮನಿಸೋಣ. ಅದು ಕೂಡ ಕೃತಿರಚನೆಯ ಹಲವು ನೆಲೆಗಳ ಮೇಲೆ ಬೆಳಕು ಚೆಲ್ಲುತ್ತದೆ.

ಮೊದಲನೆಯ ಅಧ್ಯಾಯದಿಂದ ಕೊನೆಯವರೆಗೆ ಇಡೀ ಕಾದಂಬರಿಯು 'ಸಾಮಾನ್ಯ ಭೂತ ಕಾಲದಲ್ಲಿ' ನಿರೂಪಿತವಾಗಿದೆ. ಎಂದರೆ ಈಗ ನಡೆಯುತ್ತಿರುವ ಘಟನೆಗಳನ್ನು ಈಗಲೇ ನಿರೂಪಿಸುತ್ತಿರುವ ರೀತಿ. ಎಂದರೆ ನಿರೂಪಕನಿಗೂ ಅವನು ನಿವೇದಿಸುತ್ತಿರುವಾಗ ಘಟನೆಗಳಿಗೂ ನಡುವೆ ಯಾವುದೇ ವಿಧವಾದ ಕಾಲದ ಅಂತರವೂ ಇಲ್ಲ. ಅವನು ಘಟನೆಗಳ ಜೊತೆಯಲ್ಲಿಯೇ ತಾನೂ ಚಲಿಸುತ್ತಿದ್ದಾನೆ. ತನ್ನ ಕೃತಿಯ ಜಗತ್ತಿನ ಕೇಂದ್ರದಲ್ಲಿದ್ದಾನೆ ಅವನು. ಆದರೆ ಅವನು ಸಕ್ರಿಯ ನಿರೂಪಕನಲ್ಲ, ಆಸಕ್ತ ಪ್ರೇಕ್ಷಕ; ನಿರೀಕ್ಷಕ.

ಈ ರಾಚನಿಕ ಗುಣವು ಕುವೆಂಪು ಅವರು ಪ್ರೇಕ್ಷಕರಾಗಿದ್ದ ಕಾಲಖಂಡವಾದ 'ಕಾನೂರು ಹೆಗ್ಗಡಿತಿ'ಯ ರಚನೆಗೂ, ಅವರು ಕೇವಲ ಶ್ರೋತೃವಾಗಿದ್ದ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಸ್ವರೂಪಕ್ಕೂ ಇರುವ ವ್ಯತ್ಯಾಸಕ್ಕೆ ಕಾರಣವಾಗಿದೆ. ಎರಡನೆಯ ಕಾದಂಬರಿಯ ನಿರ್ಲಿಪ್ತತೆಯು ನಿರೂಪಕನು ಆ ಜಗತ್ತಿನಿಂದ ದೂರವಾಗಿರುವುದರ ಪರಿಣಾಮವಾಗಿದೆ.

ಹಾಗೆಯೇ ಈ ಕಾದಂಬರಿಯಲ್ಲಿ ಎಲ್ಲಿಯೂ ಕೂಡ ಭೂತಕಾಲವು ವರದಿಯ ರೂಪದಲ್ಲಿ ಪ್ರತ್ಯಕ್ಷವಾಗುವುದಿಲ್ಲ. ಪ್ರತಿಯೊಂದು ಘಟನೆಗೂ ಒಂದು ಬಗೆಯ ಲಾಕ್ಷಣಿಕತೆಯ ಶಕ್ತಿ (immediacy) ಇರುತ್ತದೆ. ಇತಿಹಾಸವು ವರ್ತಮಾನವನ್ನು ರೂಪಿಸಿರುವ ಬಗೆಯಲ್ಲಿ ಮಾತ್ರ ಪ್ರತ್ಯಕ್ಷವಾಗುತ್ತದೆ.

ನಿರೂಪಣೆಯ ಹಲವು ಕಡೆ ಬಹಳ ಸೂಕ್ಷ್ಮವಾಗಿ ಕೆಲಸಮಾಡುವ ವ್ಯಂಗ್ಯವು ನಾವು ಗಮನಿಸಬೇಕಾದ ಮತ್ತೊಂದು ಸಂಗತಿ. ಇಂಥ ಕಡೆ ನಿರೂಪಕನು ವ್ಯಂಗ್ಯದ ಬಲದಿಂದ ತಾನು ಹೇಳುತ್ತಿರುವುದಕ್ಕೆ ವಿರುದ್ಧವಾದುದನ್ನು ಧ್ವನಿಸುತ್ತಿರುತ್ತಾನೆ.

ಉದಾಹರಣೆಗೆ ಕೊನೆಯ ಅಧ್ಯಾಯಲ್ಲಿ ಬರುವ ಈ ಮಾತುಗಳನ್ನು ಗಮನಿಸಿ.



"ಆ ರಸ್ತೆ ಮೋಟಾರುಕಾರು ಬಸ್ಸುಗಳ ಕೋಟಲೆಯಿಂದ ಬೇಸರಗೊಂಡಿತ್ತು. ಸ್ವದೇಶಿ, ಖಾದಿಗಳ ಪ್ರಚಾರವೂ ತಕ್ಕಮಟ್ಟಿಗೆ ನಡೆದಿತ್ತು. ಗಾಂಧಿಟೋಪಿಗಳೂ ಆಗಾಗ ಬಂದು ಉಪನ್ಯಾಸ ಕೊಡುತ್ತಿದ್ದವು. ಮಾರಿಯ ಹರಕೆ, ದೆವ್ವದ ಪೂಜೆ ಮೊದಲಾದ ಮೂಢಾಚಾರಗಳಿಗೆ ಬದಲಾಗಿ ಉತ್ಕೃಷ್ಟವಾದ ಮತ ವಿಧಾನಗಳು ಆಚರಣೆಗೆ ಬರುತ್ತಿದ್ದವು. ಕಾಡಿಗೆ ನಾಗರಿಕತೆ ಕಾಲಿಟ್ಟಿತ್ತು." ಇಡೀ ಅಧ್ಯಾಯದ ಹಿನ್ನೆಲೆಯಲ್ಲಿ ನಾಗರಿಕತೆಗೆ ಸ್ವಾಗತದಂತೆ ಕಾಣುವ ಈ ಮಾತುಗಳು, ವ್ಯಂಗ್ಯದ ಬಲದಿಂದ ಆ ನಾಗರಿಕತೆಯ ಬಗ್ಗೆ ಆತಂಕ, ಅಸಹನೆಗಳನ್ನು ವ್ಯಕ್ತಪಡಿಸುತ್ತವೆ.

ವಾಸ್ತವತೆಯ ಎಲ್ಲ ವಿವರಗಳನ್ನು ಪ್ರತಿನಿಧಿಸುವಾಗಲೂ ನಿರೂಪಕನಿಗೆ ಅದರ ಬಗ್ಗೆ ಕತೆಯಿದೆಯೆಂದು ಭಾವಿಸಿ, "ಯಾವುದನ್ನು ಹೂವಯ್ಯನ ದೃಷ್ಟಿಯಿಂದ ನೋಡಿದಾಗ ನೈತಿಕವಾಗಿ ತಿರಸ್ಕರಿಸುತ್ತಾರೋ ಆ ವಿಷಯಗಳನ್ನೇ ಕಲಾವಿದರಾಗಿ ಸ್ವೀಕರಿಸಿ ಬಹಳ ಖುಷಿಯಿಂದ ದಟ್ಟ ವಿವರಗಳಲ್ಲಿ ಸೃಷ್ಟಿಸುತ್ತಾರೆ" (ಅನಂತಮೂರ್ತಿ, ಪು. ೧೬೯) ಎಂದು ಹೇಳುವುದನ್ನು ಒಪ್ಪುವುದು ಕಷ್ಟ. ನಿರೂಪಕನ ವಾಸ್ತವನಿಷ್ಠೆಯು ವಿವರಗಳ ಚಿತ್ರಣದಲ್ಲಿ ಪ್ರಾಮಾಣಿಕವಾಗಿ ಇರುತ್ತದೆ. ಆದರೆ ಅಲ್ಲಿ ನೈತಿಕ ದೃಷ್ಟಿಕೋನವು ಸದಾ ಜಾಗೃತವಾಗಿರುತ್ತದೆ; ಹಾಗೆಯೇ ಐಂದ್ರಿಯಿಕ ಸುಖಗಳ ಆಕರ್ಷಣೆಯನ್ನು ಹುಸಿ ನೈತಿಕತೆಯ ನೆಪ ಹೂಡಿ ಅದುಮಿಡ ಲೆತ್ನಿಸುವುದು ಹೂವಯ್ಯನ ಸ್ವಭಾವ. ಬೇಟೆಯಾದರೂ ಅಷ್ಟೆ; ಹೆಣ್ಣಾದರೂ ಅಷ್ಟೆ. ಈ ನೈತಿಕತೆ ಸುಬ್ಬಮ್ಮ ಹಾಗೂ ಸೇರೆಗಾರರ ಸಂಬಂಧವನ್ನು ಗ್ರಹಿಸುವ ಬಗೆಯನ್ನು ನೋಡಿ :

"ತನ್ನ ತೀರಿಹೋದ ಗಂಡ 'ಬಂಜೆ ಬಂಜೆ' ಎಂದು ಹಾಕುತ್ತಿದ್ದ ಶಾಪವೇ ಸುಬ್ಬಮ್ಮಗೆ ವರದಂತೆ ತೋರಿ ಸಂತೋಷವಾಗಿತ್ತು. ಜೊತೆಗೆ ನೀಚಜಾರನು ಬೀಸುತ್ತಿದ್ದ ಬಣ್ಣಬಣ್ಣದ ಬಲೆಯ ಆಕರ್ಷಣೆಯು ಆಕೆಯನ್ನು, ನಾಗರಹಾವಿನ ಹೆಡೆ ಹಕ್ಕಿಯನ್ನು ಮೋಹಮುಗ್ಧವಾಗಿ ಮಾಡಿ ಸೆಳೆಯುವಂತೆ ಮಾಡಿ ಸೇರಿ ಸೆಳೆಯಿತು." ಇಲ್ಲಿರಬಹುದಾದ ಲವಲೇಶ ಅನುಕಂಪವು ಸುಬ್ಬಮ್ಮನ ಬಗ್ಗೆಯೇ ಹೊರತು, ಅವಳ ರೀತಿಯ ಬಗೆಗಿನದಲ್ಲ. ನೈತಿಕ ನಿಷ್ಠುರತೆಯೇ ಈ ರೀತಿಯ ಮೂಲ ನೆಲೆಯಾದ ಪರಿವರ್ತನ ಪ್ರಿಯತೆಗೆ ಕಾರಣವಾಗಿದೆ. ಕುವೆಂಪುರವರಿಗೆ ಮಲೆನಾಡಿನ ಪ್ರಕೃತಿ ವಿವರಗಳು, ದೈನಿಕಗಳು ಆಕರ್ಷಕವೇ ವಿನಾ ಮಾನವ ಸಂಬಂಧಗಳಲ್ಲ. ಹಾಗೆ ನೋಡಿದರೆ ಇಡೀ ಕಾದಂಬರಿಯಲ್ಲಿ (ಕೊನೆಯ ಅಧ್ಯಾಯವೊಂದನ್ನ ಬಿಟ್ಟರೆ) ನೂರಕ್ಕೆ ನೂರರಷ್ಟು ಆರೋಗ್ಯಕರವೆನ್ನುವ ಮನುಷ್ಯ ಸಂಬಂಧವನ್ನು ಗ್ರಹಿಸುವುದು ಅಸಾಧ್ಯ. 'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಅಂಥ ಹಲವು ಸಂಬಂಧಗಳಿವೆ. ಯಾವುದೇ ಕಾರಣವಿರಲಿ, ಪತನದ ಹಾದಿಯಲ್ಲಿ ಹೆಜ್ಜೆಯಿಡತೊಡಗಿದ್ದ ಸಮುದಾಯವೊಂದು ಸಂಪೂರ್ಣವಾಗಿ ಪತನಹೊಂದಿರುವ ಸ್ಥಿತಿಯಾಗಿ ಕಾನೂರು ಹೆಗ್ಗಡಿತಿಯಿದೆ. ಹೂವಯ್ಯನು ಬಿತ್ತಿರಬಹುದಾದ ಪರಿವರ್ತನೆಯ ಬೀಜಗಳು ಉಂಟುಮಾಡಬಹುದಾದ ಪರಿಣಾಮದ ಬಗೆಗೂ ನಿರೂಪಕನಿಗೆ ಅದಮ್ಯ ಆಶಾವಾದವೇನೂ ಇದ್ದಂತಿಲ್ಲ.

ಹೀಗೆ ಕಾದಂಬರಿಯ ಜಗತ್ತಿನ ಬಗ್ಗೆ ನಿರೂಪಕನು ಖಚಿತವಾದ ನೀತಿನಿಷ್ಠುರ, ಸಾನುಕಂಪ ನಿಲುವುಗಳನ್ನು ತಳೆದಿರುವನೆಂದು ಹೇಳುವುದು ಸರಿ.

ಇದುವರೆಗೆ ನಾನು ಬಿಡಿಬಿಡಿಯಾಗಿ ಮಂಡಿಸಿರುವ ಅನೇಕ ಅಂಶಗಳು, ತನ್ನ ಒಟ್ಟಂದದಲ್ಲಿ ಕಾದಂಬರಿಯ ಕಲಾಮೌಲ್ಯದ ಸಮರ್ಥನೆಯಾಗಿ ಕಂಡರೆ ಅದು ಸರಿಯಾಗಿಯೇ ಇದೆ. ಏಕೆಂದರೆ ಅದು ನನ್ನ ಪೀಳಿಗೆಯ ವಿಮರ್ಶಕರು ಕಾದಂಬರಿಯ ಮರುಪರಿಶೀಲನೆಯ ನಂತರ ತಲುಪಿರುವ ತೀರ್ಮಾನ. ನಾನು ಬಳಸಿರುವ ವಿಧಾನವನ್ನು ಅದರ ಸೈದ್ಧಾಂತಿಕ ವಿವರಗಳೊಂದಿಗೆ ಮಂಡಿಸಲು ಈ ಸಂದರ್ಭದ ವ್ಯಾಪ್ತಿಯಲ್ಲಿ ಅವಕಾಶವಿಲ್ಲವಾದುದರಿಂದ ಅದರ ಅನ್ವಯಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದೇನೆ. ಈ ಅನ್ವಯದ ಫಲಿತಗಳು ಶ್ರೀ ರಾಜೇಂದ್ರ ಚೆನ್ನಿಯವರು ತಲುಪಿರುವ ನಿಲುವುಗಳಿಗೆ ಪೂರಕವಾಗಿಯೇ ಇವೆ. ನಾನು ಅವಕ್ಕೆ ಮತ್ತೊಂದು ನೆಲೆಯಿಂದ ಪುರಾವೆಗಳನ್ನು ದೊರಕಿಸಿಕೊಟ್ಟಿದ್ದೇನೆ.

ಒಟ್ಟನಲ್ಲಿ ಹೇಳುವುದಾದರೆ ನವ್ಯ ಸಾಹಿತಿಗಳು ತಮ್ಮ ಸೃಜನಾತ್ಮಕ ತುರ್ತುಗಳೆಂದು ಕಂಡುಕೊಂಡ ಮಾರ್ಗಗಳು ಎಷ್ಟೇ ಸರಿಯಾದರೂ, ಕುವೆಂಪುರವರ ಕಾದಂಬರಿಗಳ ಬಗ್ಗೆ ಅವರು ತೋರಿದ ಅವಜ್ಞೆಯು ಸರಿಯಾದುದಲ್ಲ. ಅದರ ಉತ್ತಮ ಗುಣಗಳನ್ನು ಒಪ್ಪಿಕೊಂಡಾಗಲೂ ಅವರು ಎತ್ತಿದ, ಗಂಭೀರವೆಂದು ತೋರಿದ ಆಕ್ಷೇಪಣೆಗಳು ಅನಗತ್ಯವೆಂದು ನಮಗೆ ತೋರುತ್ತದೆ. ಕಥಾಸಾಹಿತ್ಯದ ವಿಶ್ಲೇಷಣೆಯ ಮಾನದಂಡಗಳು ಮತ್ತು ವಿಧಾನಗಳು ಹರಿತವಾದಂತೆಲ್ಲ ಕಾನೂರು ಹೆಗ್ಗಡಿತಿಯು ಇನ್ನಷ್ಟು ಮೌಲಿಕವಾಗಿಯೇ ಉಳಿಯುವುದೆಂದು ನನ್ನ ಅಭಿಪ್ರಾಯ. ಅದರ ಆಶಯ ಮತ್ತು ಬಂಧಗಳ ನಡುವೆ ಕಲಾತ್ಮಕವಾದ ಅವಿನಾಸಂಬಂಧ ಖಂಡಿತವಾಗಿಯೂ ಇದೆ.


ಡಾ॥ ಎಚ್. ಎಸ್. ರಾಘವೇಂದ್ರರಾವ್

ನಂ. ೭, 'ಶ್ರೀಮಾತ', ೧೫ನೇ ಅಡ್ಡರಸ್ತೆ, ೫ನೇ ಹಂತ, ಜೆ.ಪಿ.ನಗರ, ಬೆಂಗಳೂರು - ೫೬೦ ೦೭೮

# ಮೌಲ್ಯ ವ್ಯವಸ್ಥೆಯಿಂದಲೇ ಉತ್ತಮ ಭವಿಷ್ಯ

**– ಪ್ರೊ|| ಬಿ. ಸಿ. ರಾಮಚಂದ್ರ ಶರ್ಮ**

**ಶ್ರೀನಿವಾಸ ರಾಜು** : ನಿಮಗೆ ಪ್ರಿಯವಾದ ವಿಷಯ ಕವನವನ್ನು ಹಾಡಾಗಿ ಹಾಡುವುದನ್ನು ಕುರಿತದ್ದು ಅದರ ಬಗ್ಗೆ ನಿಮ್ಮ ನಿಲುವು ಕಠಿಣವೆನ್ನುತ್ತಾರಲ್ಲ...

**ರಾಮಚಂದ್ರ ಶರ್ಮ** : ನಾನು ಯಾವತ್ತೂ ಹಾಡಾಗಲಿ ಅಂತ ಬರೆಯಲಿಲ್ಲ ಪದ್ಯವಾಗಲಿ ಅಂತ ಬರೆದೆ. ಪದ್ಯವಾಗಲಿ ಅಂತ ಬರೆದದ್ದು ಹಾಡೂ ಆಗುವ ಸಾಧ್ಯತೆ ಇದೆ. ಆದರೆ, ಹಾಡು ಅಂತ ಬರೆದದ್ದು ಪದ್ಯವಾಗುವ ಸಾಧ್ಯತೆ ಇಲ್ಲ. ಕೆ. ಎಸ್. ನ. ಮೈಸೂರು ಮಲ್ಲಿಗೆ ಬರೆದಾಗ ಅಥವಾ ಬೇಂದ್ರೆಯವರು ಬರೆದಾಗ ಪದ್ಯ ಅಂತ ಬರೆದರು. ಆ ಕಾಲದ ನವೋದಯ ಸಂಪ್ರದಾಯದಲ್ಲಿ ಹೀಗೆ ಬರೆಯುವುದೇ ಇತ್ತು. ನಿಯತ ಮಟ್ಟನಲ್ಲಿ ಛಂದಸ್ಸನ್ನು ಖಚಿತವಾಗಿಟ್ಟುಕೊಂಡು ಬರೆಯುವುದೇ ಇತ್ತು. ಅದನ್ನು ಹಾಳು ಮಾಡಿದರು ಇವರು. ಉದಾಹರಣೆಗೆ 'ದೋಣಿ ಸಾಗಲಿ ಮುಂದೆ ಹೋಗಲಿ ದೂರ ತೀರವ ಸೇರಲಿ' – ಖಚಿತವಾಗಿ ಬರ್ತಾಯಿತ್ತು ಮತ್ತು ಅದು ಹಾಡಿಗೂ ಒಗ್ಗುತ್ತಾಯಿತ್ತು. ಕಾಳಿಂಗರಾಯರು ಮಾಡಿದ್ದು ಅದೇನೇ, ಅದನ್ನು ಹಾಡಿದರು. ಆದರೆ, ಈಗ ಏನಾಗುತ್ತಿದೆಯೆಂದರೆ ಹಾಡಿನ ಮಟ್ಟು ಇಟ್ಟುಕೊಂಡು ಅದಕ್ಕೆ ಸರಿಯಾಗಿ ಪದಗಳನ್ನು ಹೊಂದಿಸೋ ಕವಿಗಳು ಬಂದುಬಿಟ್ಟಿದ್ದಾರೆ. ಈ ಸಿನಿಮಾ ಪ್ರಭಾವವೋ ಏನೋ, ಹೋಟೆಲ್‌ನಲ್ಲಿ ಕುಳಿತುಕೊಂಡು ಸಂಗೀತಗಾರ ಮೊದಲು ಟ್ಯೂನ್‌ಗಳನ್ನು ಕೊಡ್ತಾಯಿರ್ತಾನೆ. ಅದನ್ನು ಕೇಳಿಸಿಕೊಂಡು ಪದಗಳನ್ನು ಹೊಂದಿಸೋದಾದ್ರೆ ಇಲ್ಲಿ ಕಾವ್ಯ ಗೌಣ ಆಗಿಹೋಯ್ತು. ಸಂಗೀತದಿಂದ ಕಾವ್ಯವನ್ನು ಮೇಲಕ್ಕೆತುತ್ತೀವಿ ಅಥವಾ ದಡಕ್ಕೆ ತಲುಪಿಸ್ತೀವಿ ಅನ್ನೋ ಭ್ರಮೆ ನಿಮಗಿದ್ರೆ, ಯಾವುದಕ್ಕೆ ಪ್ರಾಧಾನ್ಯ ಕೊಡಬೇಕು ? ಶಬ್ದಕ್ಕೆ ಕೊಡಬೇಕು. ಅದರ ಬದಲು ಪದಗಳೇ ಇಲ್ಲದ ಸಂಗೀತಕ್ಕೆ ಕೊಡುತ್ತಾರೆ. ಪಾಶ್ಚಾತ್ಯ ಕ್ಲಾಸಿಕಲ್ ಸಂಗೀತ ತೆಗೆದುಕೊಂಡರೆ ಅಲ್ಲಿ ಪದಗಳೇ ಇಲ್ಲ. ಅದು ನಾದದಿಂದಲೇ ಒಂದು ಪ್ರಪಂಚವನ್ನು ಸೃಷ್ಟಿ ಮಾಡುತ್ತದೆ. ಇದು ಶಬ್ದದಿಂದ ಪ್ರಪಂಚವನ್ನು ಸೃಷ್ಟಿ ಮಾಡುತ್ತದೆ. ಎರಡು ವಿಭಿನ್ನ ಪ್ರಕಾರಗಳಾಗಿವೆ. ಒಂದು ಪ್ರಕಾರ ಇನ್ನೊಂದು ಕಲಾ ಪ್ರಕಾರದ ಬೆನ್ನ ಮೇಲೆ ಕೂತುಕೊಳ್ಳಬೇಕಾದುದಿಲ್ಲ.

**ರಾಜು** : ಆದರೆ ನವೋದಯದಲ್ಲಿ ಸಹಜವಾಗಿ ಆಗಿಹೋಯ್ತು...

**ಶರ್ಮ** : ನವೋದಯದಲ್ಲಿ ಆಗ ಹೆಚ್ಚು ಕಡಿಮೆ ಅದೇ ತರಹವೇ ಎಲ್ಲಾ ಬರೆಯುತ್ತಿದ್ದರು. ಅದರಲ್ಲಿ ಕೆಲವು ಪದ್ಯಗಳು ಹಾಳಾದುವೇ ಹೊರತು ಎಲ್ಲಾ ಅಲ್ಲ. ಈಗ ಪುಟ್ಟಪ್ಪನವರ 'ಪಾಂಚಜನ್ಯ'ವನ್ನು ಹಾಳುಮಾಡಲು ಆಗುವುದಿಲ್ಲ. ಆದರೆ ಇವರೇನು ಮಾಡುತ್ತಿದ್ದಾರೆಂದರೆ, ಹಾಡಾಗಲೀ ಅನ್ನುವ ಆಸೆಯಿಂದ ಅನುಭವವನ್ನು ಬಹಳ ತೆಳ್ಳಗೆ ಮಾಡುತ್ತಿದ್ದಾರೆ. ಭಾವಪ್ರಧಾನವಾದ ಪದ್ಯಗಳು ಮಾತ್ರ ಪದ್ಯಗಳು ಅನ್ನುವ ಹಾಗಾಗಿದೆ.

ಹಿಂದೊಮ್ಮೆ ರಾಜ್‌ಕುಮಾರ್ ಒಂದು ಪದ್ಯ ಬೇಕು ಅಂತ ಯಾರ ಕೈಲೋ ಹೇಳಿಕಳುಹಿಸಿದ್ದರು. ಅವರು ೧೦ ಕವಿಗಳ ಪದ್ಯದ ಒಂದು ಕ್ಯಾಸೆಟ್ ಮಾಡಿದ್ದರಂತೆ, ಅದರಲ್ಲಿ ನನ್ನದೂ ಒಂದು ಪದ್ಯ ಬೇಕು ಅಂತ. ನನಗೂ ಖುಷಿ ಆಯ್ತು, ರಾಜ್‌ಕುಮಾರ್ ನನ್ನ ಪದ್ಯವನ್ನು ಹಾಡ್ತಾರಲ್ಲ ಅಂತ. ಮೂರು ದಿನ ಪ್ರಯತ್ನಪಟ್ಟರೂ ಹೆಣ್ಣು ಹೊನ್ನು ಈ ತರದ ರೈಮ್‌ಗಳೇ ಹೊಳೆಯುತ್ತಿತ್ತು. ಅದರಾಚೆಗೆ ನನ್ನ ಮನಸ್ಸು ಹೋಗಲಿಲ್ಲ; ಶಬ್ದಗಳೂ ಹೋಗಲಿಲ್ಲ; ಎಷ್ಟೂಂತ ಹೆಣ್ಣು ಕಣ್ಣು ಅಂತ ಬರೆಯೋದು. ನನ್ನಂತಹವರಿಗೆ ಇದು ಹೇಳಿದ್ದಲ್ಲ ಅಂತ 'ಇಲ್ಲ' ಅಂತ ಹೇಳಿ ಕಳುಹಿಸಿದೆ.

೧೯೫೨-೫೩ರಲ್ಲಿ ಬರೆದ 'ಸಂಜೆ' ಎನ್ನುವ ಪದ್ಯವೊಂದನ್ನು ಹಾಡಿದ್ದಾರೆ. ಹಾಡಿಕೊಳ್ಳಲಿ. ಅಂದರೆ, ನನಗೆ ಪದ್ಯವಾಗಿ ಬರೆದಿದ್ದನ್ನು ಇನ್ನೊಬ್ಬರು ಹಾಡಿದರೆ ನನ್ನದೇನೂ ಅಭ್ಯಂತರವಿಲ್ಲ ಜಗಳ ಆಡುವುದಿಲ್ಲ. ಆದರೆ, ಹಾಡಿಗೇ ಅಂತ ಬರೆದರೆ ನನ್ನ ಅಭ್ಯಂತರವಿದೆ.

**ಪ್ರಹ್ಲಾದ್** : ಕವಿತೆ ಒಂದು ತುಂಬಾ ಗಂಭೀರವಾದ ಅಭಿವ್ಯಕ್ತಿಯ ಮಾಧ್ಯಮವಾಗಿ ಅದರ ಪ್ರಸ್ತುತತೆಯನ್ನು ಉಳಿಸಿಕೊಂಡಿದೆಯಾ ?

**ಶರ್ಮ** : ಇಲ್ಲ ಅದು ಒಂದು ನಿಂತ ನೀರಾಗಿದೆ. ಒಂದು ಗಂಭೀರ ವ್ಯವಹಾರವಾದ ಜೀವನಕ್ಕೆ ಸಂವಾದಿಯಾಗಿ ಕಾವ್ಯ ಇಲ್ಲ ಇವತ್ತು. ಒಂದು wit, ವೈ. ಎನ್. ಕೆ. ಮಾಡುತ್ತಿದ್ದ punning, ಚಂದ್ರಶೇಖರ ಪಾಟೀಲ್ ಬರೆಯುತ್ತಾಯಿರುವಂಥ ಚುಟುಕಗಳು

ನಮ್ಮ ನಾಡಿನ ಶ್ರೇಷ್ಠ ಕವಿ, ಶಿಕ್ಷಣ ತಜ್ಞ, ಮನೋವಿಜ್ಞಾನಿ, ಜನಪರ ಚಿಂತಕ ಮತ್ತು ಪ್ರಗತಿಪರ ಹೋರಾಟಗಾರರಾದ ಪ್ರೊ|| ಬಿ. ಸಿ. ರಾಮಚಂದ್ರ ಶರ್ಮ ಅವರನ್ನು 'ಹೊಸತು'ವಿಗಾಗಿ ಸಂದರ್ಶಿಸಲು ಶ್ರೀಯುತರು ಅವಕಾಶ ಮಾಡಿಕೊಟ್ಟಿದ್ದಾರೆ. ಪ್ರೊ|| ಚಿ. ಶ್ರೀನಿವಾಸ ರಾಜು, ಶ್ರೀ ಡಿ. ವಿ. ಪ್ರಹ್ಲಾದ್, ಎಸ್. ಸುರೇಂದ್ರ, ಕೆ. ಪಿ. ಸ್ವಾಮಿ ಮತ್ತು ಡಾ|| ಜಿ. ರಾಮಕೃಷ್ಣ ಸಂದರ್ಶನದಲ್ಲಿ ಭಾಗವಹಿಸಿದ್ದಾರೆ. ಸಂದರ್ಶನ – ಲೇಖನವನ್ನು ಸಿದ್ಧಪಡಿಸಿಕೊಟ್ಟವರು ಶ್ರೀ. ಪ್ರಹ್ಲಾದ್.



ಬರ್ತಾಇಲ್ಲ. ಪಾಟೀಲ್ ನನ್ನ ಮೇಲೊಂದು ಪದ್ಯ ಬರೆದಿದ್ದಾರೆ 'ಪಶ್ಚಿಮ ಮುಖಿ ಶರ್ಮ' ಅಂತ :

''ಅವನ ಮಾತೆಲ್ಲ ನೂತನ / ಬೇರು ಮಾತ್ರ ಆಳದಲ್ಲಿ ಪುರಾತನ''

**ಜಿ. ರಾಮಕೃಷ್ಣ** : ಬೇರು ಪುರಾತನವಾದರೆ ತಪ್ಪೇನು ?

**ಶರ್ಮ** : ತಪ್ಪಿಲ್ಲ; ಅವರದೇನು ಅಂದ್ರೆ, ಏನೇನು ಮಾಡಿದರೂ ಶರ್ಮನಂಥವರು ತಮ್ಮ ಬ್ರಾಹ್ಮಣ್ಯವನ್ನು ಕಳಕೊಳ್ಳುವುದಿಲ್ಲ ಅಂತ. ಅದೊಂದು obsession; ನನಗಿಲ್ಲ. ನಾನು ಬ್ರಾಹ್ಮಣನಾದರೆ, ಪಾಪ ಆ ಬ್ರಾಹ್ಮಣ ಕುಲಕ್ಕೆ ಅವಮಾನ ಮಾಡಿದ ಹಾಗೆ. ನಾನು ಯಾವತ್ತೂ ಬ್ರಾಹ್ಮಣ್ಯವನ್ನು ಆಚರಣೆಯಲ್ಲಾಗಲಿ, ನಂಬಿಕೆಯಲ್ಲಾಗಲಿ ಮಾಡಿಲ್ಲ. ಮನೆಯಲ್ಲಿ ಹುಡುಕಿದರೂ ಒಂದು ದೇವರ ಫೋಟೋ ಕಾಣುವುದಿಲ್ಲ. ನಮಗೆ ಬ್ರಾಹ್ಮಣ್ಯದ ಗೀಳು ಇರಲ್ಲ, ಅವರಿಗಿರತ್ತೆ.

**ಪ್ರಹ್ಲಾದ್** : ಆದರೆ, ಪದ್ಯಕ್ಕೆ ಸಂಬಂಧಪಟ್ಟ ಹಾಗೆ, ಯಾವ ಬ್ರಾಹ್ಮಣರ ನಿರೀಕ್ಷೆಗಳಿಗಿಂತಲೂ ಮೀರಿದ ಹಾಗೆ ಒಂದು ಕಾವ್ಯ ನಿಷ್ಠೆಯನ್ನು ಅದರ ಪೂರ್ವ form ಬಗ್ಗೆ ಇಟ್ಟುಕೊಂಡಿದ್ದೀರಿ. ಅದು ಹೇಗೆ ಸಾಧ್ಯವಾಯ್ತು ಮತ್ತು ಯಾಕೆ ಅಂಥ ಉಗ್ರವಾದ ನಿಷ್ಠೆ ಇರಬೇಕು ಕಾವ್ಯದ ಬಗ್ಗೆ?

**ಶರ್ಮ** : ಉಗ್ರವಾದ ನಿಷ್ಠೆ ಎಲ್ಲರಿಗೂ ಇರಬೇಕು ಅಂತ ಅಲ್ಲ, ನನಗೆ, ನಾನು ಹೇಳಬೇಕು ಅಂತಿರೋದಕ್ಕೆ ಆ ತರಹದ ಉಗ್ರವಾದ ನಿಷ್ಠೆ ಅಗತ್ಯವಾಯ್ತು. ಒಳ್ಳೆಯ ಪದ್ಯ ಅಂದರೆ ಏನು? ಒಂದು ಪದ್ಯ ಅದರ ಸತ್ಯವನ್ನು (ವೈಜ್ಞಾನಿಕ ಸತ್ಯ ಅಲ್ಲ) ಅಂತಸ್ಥಗೊಳಿಸಿಕೊಂಡಿರುತ್ತದೆ. The logic of poetry is not the same as the logic of science. ನನ್ನನ್ನು ನಾನೇ ಕೇಳಿಕೊಂಡೆ, ಕಥೆ ಹೇಳೋದು ಪದ್ಯದ ಕೆಲಸವಾ ಅಂತ. ನನ್ನ ಪ್ರಕಾರ ಅಲ್ಲ. ಅಂದರೆ 'ಕಥನ ಕಾವ್ಯ' ಕೂಡ ನಾನು rule out ಮಾಡಿಬಿಡ್ತೀನಿ. ಹಿಂದೆ ಕಥನ ಕಾವ್ಯ ಇತ್ತು. ಕಾವ್ಯವೇ ಎಲ್ಲವೂ ಆಗಿತ್ತು. ಶಾಸ್ತ್ರವೂ ಕೂಡ ಕಾವ್ಯ ರೂಪದಲ್ಲಿ ಬಂದಿತ್ತೇ ಹೊರತು, ಬೇರೆ ಥರ ಹೇಳಬಹುದು ಅಂತ ಅಂದುಕೊಂಡಿರಲಿಲ್ಲ. ಈಗೇನಾಗಿದೆಯೆಂದರೆ ಕಥನಕ್ಕೆ ಗದ್ಯದ ರೂಪ ಬಂದ ಮೇಲೆ, ಗದ್ಯ ಪದ್ಯಗಳು ಬೇರೆ ಬೇರೆ ಕೆಲಸ ಮಾಡುತ್ತವೆ. ಗದ್ಯದ ಕೆಲಸ ಕಥೆ ಹೇಳುವದು, ಚೆನ್ನಾಗಿ ಹೇಳುತ್ತೆ. ಕಥೆ ಹೇಳಬೇಕಾದರೆ ಗದ್ಯದಲ್ಲಿ ಹೇಳುವಷ್ಟು ಚೆನ್ನಾಗಿ ಪದ್ಯದಲ್ಲಿ ಹೇಳುವುದಕ್ಕಾಗುವುದಿಲ್ಲ. ಹಾಗಾಗಿ ಗದ್ಯದ ಕೆಲಸ ಕಥೆ ಹೇಳೋದು ಅಂದುಕೊಂಡರೆ, ಗದ್ಯದ ಕೆಲಸ ತಾರ್ಕಿಕವಾಗಿ ಯೋಚನೆ ಮಾಡಿ ವೈಜ್ಞಾನಿಕವಾದ ಲೇಖನ ಬರೆಯೋದು ಅಂದುಕೊಂಡರೆ, ಪದ್ಯಕ್ಕೆ ಅದರಲ್ಲಿ ಜಾಗ ಇಲ್ಲ ಅಂತ. ಹೀಗಾಗಿ ಕೊನೆಗೆ ನಾನು ಇತ್ಯರ್ಥಕ್ಕೆ ಬಂದಿದ್ದು ಏನೆಂದರೆ, ನಮ್ಮ ಹಿಂದಿನ ಋಷಿಗಳು 'ಇದಲ್ಲ ಅದಲ್ಲ ದೇವರು' ಅಂತ ಹೇಳಬಹುದೇ ಹೊರತು, ದೇವರು ಅಂದರೆ ಏನು ಅಂತ ಹೇಳೋಕ್ಕಾಗದ ಹಾಗೆ - ಇದು ಕೆಟ್ಟ ಕಾವ್ಯ, ಇದು ಕೆಟ್ಟ ಕಾವ್ಯ ಅಲ್ಲ ಅಂತ ಹೇಳಬಹುದೇ ಹೊರತು, ಒಳ್ಳೆಯದು ಯಾವುದು ಅಂತ ಹೇಳೋದು ತುಂಬಾ ಕಷ್ಟ ಆಗುತ್ತೆ. ಇಷ್ಟೆಲ್ಲಾ ಖಚಿತವಾಗಿ ಯೋಚನೆ ಮಾಡಿದಾಗ The scope for poetry is becoming narrow. ನಾನು ಎಷ್ಟೊಂದು ಬಿಟ್ಟುಕೊಟ್ಟುಬಿಟ್ಟಿದ್ದೀನಿ... ಈಗ ದುಂಡಿರಾಜ್ ಥರಾ ಹಾಸ್ಯ ಬರೆಯಲ್ಲ, Y. N. K. ಥರಾ pun ಮಾಡಲ್ಲ, ವೆಂಕಟೇಶಮೂರ್ತಿ ಥರಾ ಕಥೆ ಹೇಳಲ್ಲ, ಹಾಡಾಗಲಿ ಅಂತ ಲಕ್ಷ್ಮೀನಾರಾಯಣ ಭಟ್ಟರ ಥರಾ ಬರೆಯಲ್ಲ, ಅಥವಾ ನಮ್ಮ ಗಿರೀಶ್ ಲೋಕೇಶ್ ಮಟ್ಟಣ್ಣನವರ್ ಬಗ್ಗೆ ತಕ್ಷಣ ಪ್ರತಿಕ್ರಿಯಿಸಿ ಸುಮತೀಂದ್ರ ನಾಡಿಗರ ಥರಾ ಪದ್ಯ ಬರೆಯಲ್ಲ.

**ರಾಜು** : ಒಂದು ಕಡೆ ನೀವು ಅಡಿಗರಿಗೆ ಅನಂತಮೂರ್ತಿಯವರು ಸಿಕ್ಕಿದರು, ಅವರು ಅದೃಷ್ಟಶಾಲಿ ಅಂತ ಹೇಳಿದ್ದಿರಿ. ನನಗ್ಯಾರೂ ಸಿಕ್ಕಲ್ಲ ಅಂತಾನೂ ಹೇಳಿದ್ದಿರಿ.

**ಶರ್ಮ** : ಬಹಳ ದುಃಖದ ಹೊತ್ತಿನಲ್ಲಿ ಹೇಳಿಬಿಟ್ಟಿದ್ದೀನಿ.

**ಜಿ. ಆರ್** : ಅದನ್ನ ಅನಂತಮೂರ್ತಿಗೆ ಹೇಳಿದರೆ ಒಪ್ಕೋತಾರಾ ?

**ಶರ್ಮ** : ಒಪ್ಕೋತ್ತಾರೆ. ಒಂದಾನೊಂದು ಕಾಲದಲ್ಲಿ ಅನಂತಮೂರ್ತಿಗೆ ನನ್ನ ಕವನಗಳು ಅಡಿಗರ ಕವನಗಳಿಗಿಂತಲೂ ಬಹಳ ಪ್ರಿಯವಾಗಿತ್ತು, ನಾನು ಪದ್ಯ ಓದುವ ರೀತಿಯೂ ಪ್ರಿಯವಾಗಿತ್ತು. ಆಮೇಲೆ ಏನಾಯಿತೆಂದರೆ, ಕ್ರಮಕ್ರಮವಾಗಿ ಅವರ ಚಿಂತನೆಯಲ್ಲೇ ವ್ಯತ್ಯಾಸವಾದ ಆದ ಹಾಗೆ ಕಾಣುತ್ತೆ. ಕಾರಣವೇನೆಂದರೆ ಅಡಿಗರು ಪರಂಪರೆಯಲ್ಲಿ ಕಾಲಿಟ್ಟವರು, ಹಿಂದಿನದರಲ್ಲಿ ಏನೋ ಬೆಲೆ ಕಂಡುಕೊಂಡವರು; ನಾನು ಅವನ್ನೆಲ್ಲಾ ಪ್ರಶ್ನೆ ಮಾಡುತ್ತಾ ಹೋಗಿ ಅದನ್ನು ಬಿಟ್ಟುಕೊಟ್ಟಿದ್ದೇನೆ. ಹಾಗಾಗಿ ನನಗೆ ಏನಪ್ಪಾ ಉಳಿದಿದೆ ಪದ್ಯ ಬರೆಯೋಕೆ ಅಂತ ? ಒಂದು ಪದ್ಯ ಬರೆದೆ, 'ಹರಿಯುತ್ತಿದೆ ಸರಯೂ' ಅಂತ. ಆ ಥರಾ ಬಹಳ ಕಾಡಬೇಕು ನನಗೆ ಯಾವುದಾದರೂ. ಯಾವುದೂ ಕಾಡ್ತಾನೇ ಇಲ್ಲ.

**ರಾಜು** : ಈಗ ನಮ್ಮ ದೇಶದಲ್ಲಿ ಭಾಷಾಂಧತೆ ಇದೆ ಮತ್ತು ಧರ್ಮದ ಪರಮಾಂಧತೆ

ಕಾಣ್ತಾ ಇದೆ. ಮನಶ್ಶಾಸ್ತ್ರಜ್ಞರಾಗಿ ಇದನ್ನ ಹೇಗೆ ನೋಡ್ತೀರಿ ?

**ಶರ್ಮ** : ಮನಶ್ಶಾಸ್ತ್ರಜ್ಞನಾಗಿ ಒಂದು ಗುಂಪಿನ ಮನೋಭಾವವನ್ನು ವಿಶ್ಲೇಷಿಸುವುದೇ ಕಷ್ಟ. ಒಬ್ಬ ವ್ಯಕ್ತಿಯನ್ನು ಕೊಟ್ಟು ಅವನು ಹೇಗೆ ಅಂತಂದರೆ ಅವನ ಬಗ್ಗೆ ಒಂದು Thesis ಕೊಡಬಲ್ಲೆ. ಮನುಷ್ಯ ಒಂದು ಗುಂಪಿನಲ್ಲಿ ಹೋದ ತಕ್ಷಣ, ಅವನು ಒಂದು ವ್ಯಕ್ತಿಯಾಗಿ ಉಳಿಯೋದೇ ಕಡಿಮೆ ಆಗಿ ಹೋಗತ್ತೆ. So is the behaviour of the Gujarathis. ಬೇರೆ ದೇಶಕ್ಕೆ ಹೋದರೂ ಅಷ್ಟೆ, ಬೇರೆ ಸಮಾಜಕ್ಕೆ ಹೋದರೂ ಅಷ್ಟೇ. ಒಬ್ಬ ವ್ಯಕ್ತಿ ವ್ಯಕ್ತಿಯಾಗಿ ನಡೆದುಕೊಳ್ಳುವ ರೀತಿ ಒಂದು ಇರತ್ತೆ. ಅದೇ ಒಂದು ಹತ್ತು ಜನರ ಮಧ್ಯೆ ಸೇರಿಕೊಂಡುಬಿಟ್ಟರೆ ಅವನ ಸ್ವಭಾವವೇ ಬೇರೆಯಾಗಿರುತ್ತದೆ. ನಮ್ಮ ದೇಶದಲ್ಲಿ ಏನಾಗಿದೆಯೆಂದರೆ ಮೊದಲಿನಿಂದಲೂ ಕೂಡ ('ವೈತರಣಿ' ಎಂಬ ನಾಟಕದಲ್ಲಿ ಬರೆದ ನೆನಪು ನನಗೆ) ಸ್ವರ್ಗಕ್ಕೂ ನಾವು ಗುಂಪು ಗುಂಪಾಗಿ ಹೋಗುವ ಪ್ರಯತ್ನ ಮಾಡುವಂಥ ಜನ. ಕ್ರಿಶ್ಚಿಯಾನಿಟಿಗೆ ಭಿನ್ನವಾಗಿ ನಾವು ಯಾವತ್ತೂ ಗುಂಪು ಕಟ್ಟಿಕೊಂಡೇ ಸ್ವರ್ಗಕ್ಕೆ ಹೋಗೋದು.

**ರಾಜು** : ಕಾರಣರು ಯಾರು ಇದಕ್ಕೆ ? ಅಥವಾ ಇದಕ್ಕೆ ಕಾರಣಗಳು ಏನಿರಬಹುದು ಅಂತ ಹೇಳ್ತೀರಾ ?

**ಶರ್ಮ** : ನಮ್ಮ ದೇಶದಲ್ಲಿ, 'ನಾವು ಒಂದು ದೇಶ' ಅನ್ನುವ conceptಏ ಇತ್ತೀಚಿನ concept. ಬ್ರಿಟಿಷರು ಬರೋತನಕ ನಾವು ಒಂದು ದೇಶ ಅಂತ ಯೋಚನೆಯೇ ಮಾಡಲಿಲ್ಲ. ನಮ್ಮ ಪಾಳೆಯಗಾರರು ಯಾವುದೋ ಪಂಗಡಗಳನ್ನು, ಸಣ್ಣ ಸಣ್ಣ ಸಾಮಂತರು ಸಣ್ಣ ಸಣ್ಣ ಸಾಮ್ರಾಜ್ಯಗಳನ್ನು ಕಟ್ಟಿಕೊಂಡರು ಮತ್ತು ಜಾತಿ – ಇವೆಲ್ಲ ಆಗಿ – ನಮ್ಮ ಯೋಚನೆ ಇಡೀ ಭಾರತವನ್ನು ಒಳಗೊಳ್ಳುವಂಥ ವಿಚಾರವನ್ನು ಯಾವತ್ತೂ ಪಡೀಲಿಲ್ಲ. ಇವತ್ತು ಕೂಡ ಇಲ್ಲ. ಅದರಿಂದಲೇ ನಮ್ಮ ಪಾಟೀಲರಂಥವರು, 'ಇವರು ಬ್ರಾಹ್ಮಣರು, ಆದ್ದರಿಂದ ಒಂದು ಬ್ರಾಹ್ಮಣ ಗುಂಪಿಗೆ ಇವರನ್ನು ಸೇರಿಸಿದರೆ ಮಾತ್ರ ಒಂದು Identity" ಎನ್ನುವುದು. ನಮ್ಮಲ್ಲಿ ಯಾವತ್ತೂ ಒಬ್ಬ ಮನುಷ್ಯನನ್ನು ಮನುಷ್ಯನನ್ನಾಗಿ ನೋಡದೆ ಒಂದು ಗುಂಪಿನ ಪ್ರತಿನಿಧಿಯಾಗಿ ನೋಡೋದೇ ಅಭ್ಯಾಸ ಆಗಿಹೋಗಿದೆ. ನಮ್ಮ ಹಳ್ಳಿಯಲ್ಲೂ ಕೂಡ ನೀವು ಯಾವ ಪಂಗಡದವರು, ಯಾವ ಜಾತಿಯವರು ಅಂತ ಕೇಳ್ತಾರೆಯೇ ಹೊರತು - ನೀವು ನಾವಾಗೋದೇ ಇಲ್ಲ. ಹೀಗಾಗಿ Identitiy ಅನ್ನೋದೇ ಒಂದು ಪ್ರಶ್ನೆಯಾಗಿ ಬಿಟ್ಟಿದೆ. Individual identity ಬಹಳ ಕಷ್ಟವಾಗಿದೆ. ಹೀಗಾಗಿ ಒಂದು ಗುಂಪಿನಲ್ಲೇ ನಡ್ಕೋತೀವಿ. ಆದ್ದರಿಂದಲೇ ಬಿಹಾರಿಗಳು ಬಿಹಾರದಲ್ಲೇ ಇರಬೇಕು, ಅಸ್ಸಾಂನವರು ಅಸ್ಸಾಂನಲ್ಲೇ ಇರಬೇಕು. ಶಿವಸೇನೆ ಪ್ರಕಾರ ಮುಂಬೈಗೆ ಯಾರೂ ಕಾಲಿಡಬಾರದು. ಅದಕ್ಕೆ ಪರಿಹಾರವೇ ನನಗೆ ಗೊತ್ತಿಲ್ಲ.



**ಜಿ. ಆರ್** : ಹೇಗೆ ಮಾಡಬೇಕು ಅಂತ ನಿಮ್ಮ ನಿರೀಕ್ಷೆ ?

**ಶರ್ಮ** : ವಿದ್ಯಾಭ್ಯಾಸವನ್ನು ರಿಪೇರಿ ಮಾಡಬೇಕು ಅಂತ ಹೊರಟರೆ ಬಹಳ ಮೂಲಭೂತ ಪ್ರಶ್ನೆ ಏನೆಂದರೆ, ಪ್ರಾಥಮಿಕ ವಿದ್ಯಾಭ್ಯಾಸದಿಂದ ಪ್ರಾರಂಭ ಮಾಡಬೇಕು. ಜೊತೆಗೆ ದಲಿತರ ಪ್ರಶ್ನೆ. ನಾವು ಇವತ್ತು ಮಾಡ್ತಾಯಿರೋದೆಲ್ಲಾ ತಪ್ಪು ಅಂತ ನನ್ನ ಭಾವನೆ. ಐತಿಹಾಸಿಕವಾಗಿ ದಲಿತರಿಗೆ ಅನ್ಯಾಯವಾಗಿದೆ, ನಿಜ. ಅನ್ಯಾಯವನ್ನು ರಿಪೇರಿ ಮಾಡುವುದಕ್ಕೆ ನಾವು ಅನುಸರಿಸುತ್ತಿರುವ ಕ್ರಮ ಸರಿಯಲ್ಲ. ಅವರಿಗೆ, ೧೫, ೨೦ ಅಂಕಗಳನ್ನು ಕೊಟ್ಟು ಮುಂದಿನ ತರಗತಿಗೆ ತಳ್ಳುವುದಿದೆಯಲ್ಲ, ಅದು ಸರಿಯಾದ ಕ್ರಮವಲ್ಲ. ಯಾರಿಗೇ ಆಗಲಿ Medical, Engineeringನಲ್ಲಿ ಕಡಿಮೆ marks ಬಂದರೆ ಪರವಾಗಿಲ್ಲ, ಇಂಜಿನಿಯರ್ ಆಗಿ, ಅಂದರೆ ಅವರು ಕಟ್ಟೋ ಮನೆ ನಮ್ಮ ತಲೆಯ ಮೇಲೆ ಬೀಳುತ್ತೆ. ಎಲ್ಲೋ ತಪ್ಪಾ ಇದ್ದೇವೆ ನಾವು. ವಿಶ್ವವಿದ್ಯಾನಿಲಯದ ಕೆಲಸಗಳಿಗೂ ಕೂಡ ದಲಿತ ಅನ್ನೋ ಕಾರಣಕ್ಕಾಗಿ ಯಾರನ್ನೂ ನೇಮಕ ಮಾಡಬಾರದು. ಏಕೆಂದರೆ ನಾವು ಈಗಿನ generation ಅಲ್ಲದೆ ಮುಂದಿನ ತಲೆಮಾರಿನ ಜನರನ್ನು ಹಾಳುಮಾಡುತ್ತಿದ್ದೇವೆ.

**ಜಿ. ಆರ್.** : ದಲಿತರಲ್ಲದವರೂ ಅಂಥಾ ಕಳಪೆ ಕೆಲಸ ಮಾಡಬಹುದು...

**ಶರ್ಮ** : ಆದ್ದರಿಂದಲೇ ನಾನು ಹೇಳೋದು, University Education ಅನ್ನೋದು ಎಲ್ಲರಿಗೂ ಹೇಳಿದ್ದಲ್ಲ. ನಿಮ್ಮ Democracy ಎಲ್ಲ ಬಿಟ್ಟುಬಿಡೋಣ; ಕೇವಲ ವಿದ್ಯಾಭ್ಯಾಸದ ಬಗ್ಗೆನೇ ಯೋಚನೆ ಮಾಡಿದಾಗ, University Education ಅಥವಾ Higher Education ಎಲ್ಲರಿಗೂ ಸಿಗಬೇಕು ಅನ್ನೋದು ಒಂದು Communist argument ಇದೆ. SUCI ಅವರ ಒಂದು ದೊಡ್ಡ argument. ನಾನು ಅವರ ಸಲಹೆಗಾರನಾಗಿದ್ದು, ಪ್ರತಿಯೊಂದು ಸಲ ಅವರ ಸಂಘಟನೆಗೆ ಹೋದಾಗ ಹೇಳುತ್ತಿದ್ದೆ : ನಿಮ್ಮ ವಿಚಾರವೇ ತಪ್ಪು ಅಂತ. Higher Education ಎಲ್ಲರಿಗೂ ಸಿಗಬೇಕು ಅಂತ ಹೇಳ್ತೀರಿ, ಪ್ರಾಥಮಿಕ ವಿದ್ಯಾಭ್ಯಾಸ ಸಿಗಬೇಕು ಅಂತ ಹೇಳಿ, ಅಂತ.

**ರಾಜು** : ನೀವು ಆಗಲೇ ಹೇಳಿದಿರಿ, ದಲಿತರಿಗೆ ನಾವು ಅನ್ಯಾಯ ಮಾಡಿದ್ದೇವೆ ಅಂತ. ಅದನ್ನು ಹೇಗೆ ತುಂಬಿಕೊಳ್ಳೋದು ?

**ಶರ್ಮ** : ದಲಿತರಲ್ಲಿ ಮೂಲಭೂತವಾದ ಸಮಸ್ಯೆ ಏನೆಂದರೆ, ಮಗು ಮನೆಗೆ ಹೋದ ತಕ್ಷಣ ವಿದ್ಯಾಭ್ಯಾಸ ಕಲಿಕೆಗೆ ಪೂರಕವಾದ ವಾತಾವರಣ ಇರುವುದಿಲ್ಲ. ಒಂದು ಪುಸ್ತಕವೂ ಇರುವುದಿಲ್ಲ. ನಮ್ಮ ವಿದ್ಯಾವಂತ ಭಾರತೀಯರಲ್ಲೇ ಪುಸ್ತಕಗಳು ಕಡಿಮೆ ಇರುತ್ತೆ. ನನ್ನ Thesisನಲ್ಲಿ ಅದನ್ನು ಬರೆದೆ. ಭಾರತದಿಂದ ಬ್ರಿಟನ್‌ಗೆ ವಲಸೆ ಹೋದ ಮಕ್ಕಳಿಗೆ ಅಲ್ಲಿಯವರೇ ಆಗಿದ್ದು ಕಲಿತ ಮಕ್ಕಳ ಬುದ್ಧಿಶಕ್ತಿಗಿಂತ ಕಡಿಮೆಯೋ ಹೆಚ್ಚೋ ಅನ್ನುವುದು. ಬ್ರಿಟಿಷ್ ಸರ್ಕಾರ ಅದನ್ನು ಆಧಾರ ಮಾಡಿಕೊಂಡು ನೀತಿ ನಿರೂಪಿಸಿತು. ಇಂಗ್ಲೆಂಡ್‌ನಲ್ಲೇ ಹುಟ್ಟಿದ ಮಕ್ಕಳು ನಮ್ಮ ಭಾರತದಲ್ಲಿ ಹುಟ್ಟಿದ ಮಕ್ಕಳಿಗಿಂತ ಹೆಚ್ಚೇನೂ ಕಲಿತಿರಲಿಲ್ಲ. ಆರಂಭದಲ್ಲಿ ಅವರು ಚೆನ್ನಾಗಿ ಮಾಡುತ್ತಾರೆ. ಕಾರಣ ಏನೆಂದರೆ ಟೆಸ್ಟ್ ಅನ್ನು ಕೊಡುತ್ತಿದ್ದದ್ದು ಇಂಗ್ಲಿಷ್‌ನಲ್ಲಿ. ಅಲ್ಲಿರೋ ಸಮಸ್ಯೆಗಳೆಲ್ಲಾ ಇಂಗ್ಲೆಂಡ್‌ಗೇ ಸೀಮಿತ ವಾದಂಥವು. ೩ ವರ್ಷಗಳಲ್ಲಿ ಭಾರತೀಯ ಮಕ್ಕಳು ಬೆಳವಣಿಗೆ ಕಂಡರು ಮತ್ತು ಆರು ವರ್ಷಗಳಲ್ಲಿ ಅವರು ಇಂಗ್ಲಿಷ್‌ನಲ್ಲಿ ಉತ್ತೀರ್ಣರಾದರು. ಏನು ಹೇಳ್ತೀರಿ ಅದಕ್ಕೆ ? ಇಂಗ್ಲಿಷ್ ಭಾಷೆ ಕಲಿತರೆ ಸಹಾಯ ಆಗುತ್ತೆ ಟೆಸ್ಟ್ ಪಾಸ್ ಮಾಡೋಕೆ. ಅದರಿಂದ ಹೆಚ್ಚಿನ ಕಲಿಕೆ ಬರುತ್ತೆ. ಹಾಗೇ ದಲಿತರಿಗೆ ನೀವು ಸಹಾಯ ಮಾಡಬೇಕಾದರೆ, ಮಗು ೩, ೪ ವರ್ಷ ಇದ್ದಾಗಲೇ ಅದಕ್ಕೆ ಕಲಿಕೆಯ ಬಗ್ಗೆ ಪ್ರೀತಿ ಬರುವ ಹಾಗೆ ಮಾಡಬೇಕು. ಅದರಿಂದಲೇ ನಾನು ಹೇಳೋದು, ನರ್ಸರಿ, ಕಿಂಡರ್ ಗಾರ್ಟನ್ ಸ್ಕೂಲುಗಳನ್ನು ಹಳ್ಳಿ ಮತ್ತು ದಲಿತ ಮಕ್ಕಳು ಪ್ರಧಾನವಾಗಿರುವ ಸ್ಥಳಗಳಲ್ಲಿ ಹೆಚ್ಚಿಗೆ ತೆರೆಯಿರಿ ಅಂತ. ಈ ಮಕ್ಕಳನ್ನು ದಿನಕ್ಕೆ ೨½, ೩ ಗಂಟೆ ಇಟ್ಟುಕೊಂಡು ಪಾಠ ಹೇಳಿಕೊಡಿ. ಆ ಮೂಲಕ ಅವರು ಕಲಿಕೆಯ ಬಗ್ಗೆ ಪ್ರೀತಿ ಬೆಳೆಸಿಕೊಳ್ಳು ವಂತಾಗಲಿ, ಆಮೇಲೆ ನೀವೇ ಅನಗತ್ಯವಾಗಿ ಬಿಡುತ್ತೀರಿ.

ನಮ್ಮ ಮನೆಯ ಮಕ್ಕಳಲ್ಲೂ ಕೂಡ ಕಲಿಕೆಯ ಬಗ್ಗೆ ಬಹಳ ಪ್ರೀತಿ ಬರುವಂತಿರಬೇಕು. ನೀವು ಅದಕ್ಕಾಗಿ ಏನೂ ಮಾಡಬೇಕಾಗಿಲ್ಲ. ಮನೇಲಿರುವ ಪುಸ್ತಕಗಳನ್ನು ತೆಗೆದುಕೊಂಡು ಓದಿಕೊಳ್ತಾ ಇರೋದು. ಅದನ್ನು ನಾವು ಮಾಡ್ತಾಯಿಲ್ಲ. ಆ ಮಕ್ಕಳು ೬, ೭ ವರ್ಷ ವಯಸ್ಸಿನಲ್ಲಿ ಸ್ಕೂಲಿಗೆ ಹೋಗೋ ತನಕ ಬಿಟ್ಟುಬಿಡ್ತೀವಿ.

ಹಳ್ಳಿಗಾಡಿನ ಶಾಲೆಗಳಲ್ಲಿ ನಾವು ನಿಯಮಿಸುವ ಶಿಕ್ಷಕರು ಯಾರು ? ಯಾರಿಗೂ ಅಲ್ಲಿ ಹೋಗಲು ಇಷ್ಟವಿರಲಿಲ್ಲ. ಆದ್ದರಿಂದ ಅತಿ ಕಳಪೆಯಾದವರು ಕನ್ನಡ ಎಂ.ಎ. ಓದೋ ಹಾಗೆ : University Levelನಲ್ಲಿ ಇನ್ನು ಯಾವುದೂ ಓದೋಕೆ ಸರಿಯಿಲ್ಲ ಅನ್ನೋರೇ Language ಓದೋಕೆ ಹೋಗೋರು ಎನ್ನುವಂತಾಗಬಾರದು. ದಲಿತರಿಗೆ ಸಹಾಯ ಮಾಡಬೇಕು. ಅಂದರೆ, ಆರಂಭದಿಂದಲೇ ಅವರೂ ಕಲಿಕೆಯ ಮುಖ್ಯವಾಹಿನಿಗೆ ಬರೋಹಾಗೆ ಮಾಡಬೇಕು.

**ರಾಜು** : ಧರ್ಮಶ್ರದ್ಧೆ ನಿಮಗಿಲ್ಲ ಅನ್ನೋದು ಗೊತ್ತಿರೋ ವಿಚಾರ. ಆದರೆ ಚಿಕ್ಕಂದಿನ ಕೆಲವು ಸಂಗತಿಗಳು ಇದಕ್ಕೆ ಕಾರಣವಾಯಿತು ಅಂತ ಒಂದು ಕಡೆ ಹೇಳಿದ್ದೀರಿ. ಕಾರಣ ಏನು ಅಂತ ಕೇಳಬಹುದಾ ?

**ಶರ್ಮ** : ವೈಯಕ್ತಿಕವಾಗಿ ಹೇಳಬೇಕಾದರೆ: ನನಗೆ ಐದೂವರೆ ವರ್ಷ ವಯಸ್ಸು. ನಮ್ಮ ತಂದೆ ಸತ್ತಾಗ, ನಮ್ಮ ತಾಯಿ ಗರ್ಭಿಣಿಯಾಗಿದ್ದರು. ಹಾಗೆ ಆದ ಮೇಲೆ ನನ್ನ ತಂಗಿ ಹುಟ್ಟಿದಳು. ೧೦ ವರ್ಷ ಬದುಕಿದಳು. ನಮ್ಮ ತಾಯಿಗೆ ಒಂದು bitterness ಇತ್ತು. ೨೫ ವಯಸ್ಸಿನಲ್ಲಿ ಅದವಳಿಗೆ ಸಹಜವಾಗಿತ್ತು. ಅದೊಂದು anti-god attitude. ಪ್ರಾಯಶಃ ಅದೂ ಕೂಡ ಆಂಶಿಕವಾಗಿ, ಪ್ರಾರಂಭಿಕವಾಗಿ ನನ್ನ ತನಕ ಬಂದಿದೆ ಅನ್ನಿಸುತ್ತೆ. ಅದಕ್ಕಿಂತ

ಹೆಚ್ಚಾಗಿ, ನನ್ನ ೧೩ನೇ ವಯಸ್ಸಿನಲ್ಲಿ ಸಜ್ಜನ್‌ರಾವ್ ದೇವಸ್ಥಾನಕ್ಕೆ ಹೋಗಿ ಕುಂಕುಮ ಇಟ್ಟುಕೊಳ್ಳುತ್ತಿದ್ದದ್ದು ಜ್ಞಾಪಕವಿದೆ. ಆಮೇಲೆ ಏನಾಯಿತೋ ಏನೋ ! ರಸ್ತೆಯಲ್ಲಿ ಒಂದು ಕಾರಿಗೆ ಸಿಕ್ಕು ಒಂದು ಹುಡುಗಿ ಸತ್ತಿದ್ದು ನೋಡಿದೆ. ಆಗ ಬೇರೆಲ್ಲ ದೇವರು ಅನಗತ್ಯ ಅನಿಸಿತು. so.... ವೈಯಕ್ತಿಕ ಕಾರಣಗಳೂ ಇರುತ್ತೆ. ಜೊತೆಗೆ ಹತ್ತಿರದ ನೆಂಟರು, ಪರಿಚಿತರೂ ಮಾಡುತ್ತಿದ್ದ ಅಪಚಾರಗಳನ್ನ ನೋಡಿ ಸಾಕು ಅನಿಸಿತು. ಇವನ್ನೆಲ್ಲ ನೋಡುತ್ತಿದ್ದ ನನಗನ್ನಿಸಿದ್ದು ದೇವರಿಲ್ಲದ ಧರ್ಮ ಸಾಧ್ಯವಾ ಅಂತ ? ನನ್ನ ಪ್ರಕಾರ ದೇವರಿಲ್ಲದ ಧರ್ಮ ಸಾಧ್ಯ. ಅದನ್ನು ಅನುಷ್ಠಾನಕ್ಕೆ ತರೋದು ವ್ಯಕ್ತಿಗೆ ಸಂಬಂಧಪಟ್ಟ ವಿಷಯ.

**ರಾಜು :** ಇವತ್ತು ಕೋಮುವಾದದ ಬಗ್ಗೆ ವಿಚಿತ್ರವಾದ ಧೋರಣೆಗಳಿವೆಯಲ್ಲಾ ? ಧರ್ಮಶ್ರದ್ಧೆ ಇಲ್ಲದೇ ಇರೋ ನೀವು ಇದರ ಬಗ್ಗೆ ಏನು ಹೇಳ್ತೀರಿ ?

**ಶರ್ಮ :** ಏನು ಹೇಳಲಿ, ಅದರ ಬಗ್ಗೆ ದುಃಖವಾಗುತ್ತೆ.

**ಜಿ. ಆರ್. :** ನಮ್ಮ ದೇಶವೆಲ್ಲಾ ಒಟ್ಟಾಗಬೇಕಾದರೆ ಧರ್ಮವೊಂದೇ ಸಾಧನ ಅಂತ ಪ್ರಚಾರ ಮಾಡುತ್ತಿದ್ದಾರೆ. ಶ್ರೀರಾಮಚಂದ್ರನ ಮೇಲಿನ ನಂಬಿಕೆ ಅಥವಾ ಗೋಹತ್ಯೆ ಮಾಡದೇ ಇರೋದು ಅಥವಾ ಬಾಬಾಬುಡನ್‌ಗಿರಿಯಲ್ಲಿ ದತ್ತಜಯಂತಿ ಮಾಡೋದು...

**ಶರ್ಮ :** ಎಲ್ಲೀ ತನಕ ಇಷ್ಟೊಂದು ದೇವರಿರುತ್ತಾರೋ ಅಲ್ಲಿಯವರೆಗೆ ಅಷ್ಟೊಂದು ಪಂಗಡಗಳಿರುತ್ತವೆ. ಆದರೆ ಇದು ಆಗದ ಕೆಲಸ. ಅಂದರೆ ದೇಶ ಒಂದಾಗುತ್ತೆ ಅನ್ನೋ ಭ್ರಮೆ ಇದೆಯಲ್ಲ ಅದು ನನಗಿಲ್ಲ. ಅಷ್ಟೊಂದು ಧರ್ಮಗಳಿರುವಾಗ ಅದು ಸಾಧ್ಯವಿಲ್ಲ. ಹೋಗ್ಲಿ, ನಷ್ಟವನ್ನು ಕಡಿಮೆ ಮಾಡಬೇಕು ಅಂತಂದ್ರೆ, ಮಕ್ಕಳಿಗೆ ದೇವರಿಲ್ಲದ ಹಾಗೆ ಮಾಡಬೇಕು. ಹಾಗಂತ atheism ಪಾಠ ಹೇಳಿಕೊಡಿ ಅಂತ ಹೇಳುತ್ತಿಲ್ಲ. ದೇವರನ್ನು ಸ್ಕೂಲಿನೊಳಗೆ ಬಿಡಬೇಡಿ ಅಂತ ಹೇಳ್ತಾಯಿದ್ದೇನೆ.

ನಮ್ಮ secularism ಅನ್ನುವ ವಿವರಣೆಯೂ ತಪ್ಪಾಗಿದೆ. ಸಂವಿಧಾನ ಪ್ರಾರಂಭವಾದಾಗಿನಿಂದಲೂ ಸರ್ವಧರ್ಮ ಸಹಿಷ್ಣುತೆ - ಸರ್ವಧರ್ಮ ಪ್ರೇಮ ಅನ್ನೋ concept ತಪ್ಪು ನನ್ನ ಪ್ರಕಾರ. Dictionary ಯಲ್ಲಿ secularism ಬಗ್ಗೆ ವಿವರಣೆ ಇದೆಯಲ್ಲ ಅದೇ ನಿಜವಾದ secularism. ಧರ್ಮನಿರಪೇಕ್ಷವಾದಂಥಾ ಆಡಳಿತ ಇರಬೇಕು. ವಿದ್ಯಾಭ್ಯಾಸದಲ್ಲಿ ಧರ್ಮನಿರಪೇಕ್ಷತೆ ಇರಬೇಕು.

**ಜಿ. ಆರ್. :** ಧರ್ಮ ಇಲ್ಲದೆ ಮೌಲ್ಯಗಳೇ ಇರೋದಿಕ್ಕೆ ಸಾಧ್ಯವಿಲ್ಲ ಅಂತ ಹೇಳ್ತಾರೆ ?

**ಶರ್ಮ :** ನಾನು ಹೇಳ್ತಿರೋದು, ಧರ್ಮ ಇಲ್ಲದೆ ಒಂದು ಮೌಲ್ಯ ವ್ಯವಸ್ಥೆ ಮಾಡಿದರೆ ಆಗ ಮನುಷ್ಯನಿಗೆ ಒಂದು ಭವಿಷ್ಯ ಇದೆ ಅಂತ. ನನ್ನನ್ನೇ ನೋಡಿ - ನಾನು ಕೆಟ್ಟ ಮನುಷ್ಯ ಅಂದುಕೊಂಡರೆ ನಾನು ಕೆಟ್ಟ ಮನುಷ್ಯನೂ ಅಲ್ಲ, ಅಲ್ಲಿ ಕೂಡ ವೈಯಕ್ತಿಕವಾಗಿ ನಾನು ಒಂದು ಸಣ್ಣ ನಿಯಮವನ್ನು ಹಾಕಿಕೊಂಡಿದ್ದೇನೆ : ನಾವು ಒಳ್ಳೆಯವರಾಗಿರಬೇಕು ಅಂತ ಆಸೆ. ಒಳ್ಳೆಯದನ್ನು ಮಾಡಬೇಕು ಅಂತಲೇ ಒಳ್ಳೆಯದನ್ನು ಮಾಡಬೇಕಂತಲ್ಲ; ಇನ್ನೊಬ್ಬರಿಗೆ ಕೆಡುಕಾಗದ ಹಾಗೆ ನಾನು ಬದುಕಿದರೆ ಅದು ಒಳ್ಳೆಯತನ. ಬುದ್ಧಿಪೂರ್ವಕವಾಗಿ ನಾನು ಇನ್ನೊಬ್ಬನಿಗೆ ಅನ್ಯಾಯ ಮಾಡಬಾರದು. ಮಾಡಿದರೆ ಅವನ ಕ್ಷಮೆ ಕೇಳುವ ದೊಡ್ಡಸ್ತಿಕೆ ನನಗಿರಬೇಕು. ಇಷ್ಟೇ ನಾ ಹೇಳೋದು.

**ಜಿ. ಆರ್ :** ಆರ್ಥಿಕ ತಾರತಮ್ಯವನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಧರ್ಮ ಇತ್ಯಾದಿಗಳನ್ನು ಬಳಸಿಕೊಳ್ಳುತ್ತಿದ್ದೇವಾ ?

**ಶರ್ಮ :** ಆರ್ಥಿಕ ತಾರತಮ್ಯ ಉಳಿಸಿಕೊಳ್ಳುವುದಕ್ಕೋಸ್ಕರ ಧರ್ಮವನ್ನು ಉಳಿಸಿಕೊಂಡಿಲ್ಲ ಅನಿಸತ್ತೆ. ಕಾರಣ ನಾವು ಹಳ್ಳಿಗಾಡಿಗೆ ಹೋದರೂ ಕೂಡ ಅಲ್ಲೇ ಜಾತಿ ಹೆಚ್ಚು ಪ್ರಬಲವಾಗಿದೆ. ಪಟ್ಟಣಗಳಲ್ಲಿ ಅಷ್ಟೊಂದು ಇಲ್ಲ, ಸ್ವಲ್ಪ ಮಟ್ಟಿನ acceptance ಇದೆ. ಇದರಿಂದ ಆರ್ಥಿಕ ತಾರತಮ್ಯ ಉಳಿದುಕೊಂಡಿದೆ; ಆರ್ಥಿಕ ತಾರತಮ್ಯದಿಂದ ನಾವಿದನ್ನು ಉಳಿಸಿಲ್ಲ.

**ರಾಜು :** ನವೋದಯದ ಸಂದರ್ಭದಲ್ಲಿ ರಾಷ್ಟ್ರೀಯತೆ ಮತ್ತು ಏಕೀಕರಣ ಒಂದು ಒತ್ತಾಸೆಯಾಗಿ ನಿಂತುಕೊಂಡಿತ್ತು. ಪ್ರಗತಿಶೀಲರಿಗೆ ಸೋವಿಯತ್ ಒಕ್ಕೂಟ ಒತ್ತಾಸೆಯಾಗಿ ನಿಂತುಕೊಂಡಿತ್ತು. ನವ್ಯರಲ್ಲಿ ಏನಾಯ್ತು ಅಂತ ನಿಮಗೇ ಗೊತ್ತಿದೆ. ಆದರೆ ಈಚಿನ ತಲೆಮಾರಿನ ಕವಿಗಳಲ್ಲಿ ಯಾವ ವ್ಯತ್ಯಾಸವಿದೆ ? ಆ ಕಾವ್ಯವನ್ನು ನೀವು ಒಪ್ಪಿಕೊಳ್ಳುವಿರಾ ?

**ಶರ್ಮ :** ಒಂದು ಕನಸು, ಒಂದು ಆದರ್ಶ, ಸ್ವಾತಂತ್ರ್ಯ ಬಂದರೆ ದೇಶ ಉದ್ಧಾರವಾಗುತ್ತೆ ಅನ್ನುವ ಭ್ರಮೆ ನವೋದಯ ಕಾಲದಲ್ಲಿತ್ತು. ಈ ನವೋದಯದ

ಬಂಗಲೆಯ ಔಟ್‌ಹೌಸ್‌ನಲ್ಲಿ ಪ್ರಗತಿಶೀಲರಿದ್ದರು. ಅಂದರೆ ಅವರ ಮೂಲಭೂತ ಚಿಂತನೆಯಲ್ಲಿ ಏನೂ ವ್ಯತ್ಯಾಸವಾಗಲಿಲ್ಲ, ಅದಕ್ಕೆ ಒಂದು ತಿರುವನ್ನು ಕೊಟ್ಟರು. ಕಮ್ಯೂನಿಸಂನ ನಾನು ಬಹಳ ಮೆಚ್ಕೋತೀನಿ. ಯಾವ ಕವಿ ತನ್ನ ೧೮-೨೦ರ ವಯಸ್ಸಿನಲ್ಲಿ communism ಬಗ್ಗೆ ನಂಬಿಕೆ ಇಟ್ಟುಕೊಂಡಿಲ್ಲವೋ ಅವನು ಕವಿಯೇ ಅಲ್ಲ ಅಂತ ನನ್ನ ಭಾವನೆ. ಕಾರಣ ಏನೆಂದರೆ ಮಾರ್ಕ್ಸ್, ಏಂಗೆಲ್ಸ್‌ರ ಕನಸಿದೆಯಲ್ಲಾ, ಅದು ಎಲ್ಲಾ ಕವಿಗಳ, ಮಾನವತಾವಾದಿಗಳ, ಪಂಪನ ಕನಸದು. ಅದನ್ನು ಬಿಟ್ಟುಕೊಂಡು ನಾನು ಕಾವ್ಯ ಬರೀತೀನಿ ಅಂದ್ರೆ ಸಮಾಜಕ್ಕೂ ನನಗೂ ಸಂಬಂಧವೇ ಇಲ್ಲ ಅನ್ನುವ ಹಾಗಾಯಿತು. ನವ್ಯರಲ್ಲಿ ಏನಾಯಿತು ಅಂದರೆ, ನವೋದಯ ಕಾಲದ ಭ್ರಮೆ, ಅದು ಎಷ್ಟರ ಮಟ್ಟಿಗೆ ವಾಸ್ತವವಾಗ್ತಾಯಿದೆ ಅಂತ ಯೋಚನೆ ಮಾಡಿದಾಗ ಏನೂ ಇಲ್ಲ ಅನ್ನಿಸುತ್ತೆ. ದೇಶ ಸ್ವತಂತ್ರವಾದ ೫, ೬ ವರ್ಷಗಳಲ್ಲಿ ಎಷ್ಟೊಂದು ವ್ಯತ್ಯಾಸವಾಗ್ತಾಯಿದೆ ಅನ್ನುವ ಭ್ರಮ ನಿರಸನವೇ ಒಂದು philosophy ಆಯ್ತು. ಇವತ್ತಿನ ನವ್ಯೋತ್ತರರಲ್ಲಿ ಯಾವ ಗೇಯ ಇದೆ ? ನವ್ಯರನ್ನ ಬೈಯುವುದರಲ್ಲೇ ಅರ್ಧ ಕಾಲ ಕಳೆದರು ಅಥವಾ ನವ್ಯರಿಗಿಂತ ಭಿನ್ನವಾಗಬೇಕಂತ ಆಸೆ ಇಟ್ಟುಕೊಂಡು ನವೋದಯ ಕಾಲಕ್ಕೆ ಹೋಗುವ ಯೋಗ್ಯತೆಯೂ ಇಲ್ಲದೆ, ನವೋದಯ ಕಾಲದ ಕವಿಗಳಂತೆ ಬರೆಯುವ ಪ್ರಯತ್ನವನ್ನೂ ಮಾಡಿದ್ದಾಯ್ತು. ಇನ್ನೊಂದು, ನವ್ಯದ ದಾರಿಯೇ ಎಲ್ಲೋ ಹೋಗ್ತಾ ಇದೆ. ಸಣ್ಣ ವಿಷಯಗಳ ಬಗ್ಗೆ ಅವರು ಕಾವ್ಯ ಬರೀತಾರೆ ಅಂತ ಬೈಯೋಲ್ಲ. ಅಂತಿಮವಾಗಿ ಕಾವ್ಯ ಬರೆಯೋದು ಅಂದರೆ ಸಣ್ಣ ಸಣ್ಣ ವಿಷಯಗಳ ಬಗ್ಗೆಯೇ. ಆದರೆ, ಒಂದು ಸಿದ್ಧಾಂತ, attitude, ಒಂದು ಧ್ಯೇಯ ಇರಬೇಕು.

**ರಾಜು** : ಈಗ ಝುಂಝುರವಾಡರ ಕವಿತೆಗಳನ್ನು ಶಿವಪ್ರಕಾಶರ ಕವಿತೆಗಳನ್ನು ನೀವು ನೋಡಿದ್ದೀರಾ ? ಇವರ ಬಗ್ಗೆ ಏನು ಹೇಳ್ತೀರಾ ?

**ಶರ್ಮ** : ಝುಂಝುರವಾಡರ ಕವಿತೆಗಳ ಬಗ್ಗೆ ಅಷ್ಟು ಪರಿಚಯವಿಲ್ಲ.

**ರಾಜು** : ಹೊಸಬರಲ್ಲಿ ಶಿವಪ್ರಕಾಶ್, ಝುಂಝುರವಾಡ ಅಂಥವರು ಒಂದು ತರಹದ ಪದ್ಯ ಬರೆಯುತ್ತಿದ್ದಾರೆ, ಸಿದ್ದಲಿಂಗಯ್ಯನಂಥವರು ಮತ್ತೊಂದು ಥರಾ ಬರೆಯುತ್ತಿದ್ದಾರೆ. ಅವರ ಕಾವ್ಯವನ್ನು ನೀವು ಹೇಗೆ ತೆಗೆದುಕೊಳ್ಳುವಿರಿ ?

**ಶರ್ಮ** : ದಲಿತ ಕವಿ ಸಿದ್ದಲಿಂಗಯ್ಯನವರ ಥರಾ ಯಾರಿದ್ದಾರೆ ಈಗ ? ಸ್ವಲ್ಪಮಟ್ಟಿಗೆ ಹನುಮಂತಯ್ಯನವರು ಆ ದಾರಿಯಲ್ಲಿ ಹೋಗ್ತಾರೆ ಅಂತ ಇತ್ತು. ಆದರೆ ಹನುಮಂತಯ್ಯನವರು ಶಾಸಕರಾದ ಮೇಲೆ that is the end of poetry. ಸಿದ್ದಲಿಂಗಯ್ಯನವರು ಮೊದಲು ಚೆನ್ನಾಗಿ ಬರೆಯುತ್ತಿದ್ದರು. ಆಕ್ರೋಶವೇ ಕಾವ್ಯವಾಗಿತ್ತು. ಪರಿಶುದ್ಧವಾದ ಸಿಟ್ಟು ಅದು. ಆ ಒಂದು ಸ್ಟೇಜ್ ಆಯ್ತು. ಕ್ರಮವಾಗಿ ಮೇಲೆ ಬಂದರು. ಈಗಲೂ ಕೂಡ ನೀವು ಊರುಕೇರಿ ಅಂಥ ಅನುಭವಗಳನ್ನು ಬರೆದರೆ ಸುಳ್ಳಾಗುತ್ತೆ. ಅವರು ಇವತ್ತು ಕಾವ್ಯ ಬರೆಯುವುದಾದರೆ ಇವತ್ತಿನ ಸಂದರ್ಭಗಳ ಬಗ್ಗೆ ಬರೆಯಬೇಕು. ಇವೊತ್ತಿನ ತಾಕಲಾಟಗಳ ಬಗ್ಗೆ ಬರೆಯಬೇಕು. ಮತ್ತೆ ಮತ್ತೆ ಹಳವಂಡ ಉಪಯೋಗಿಸಿಕೊಂಡು ಬರೆಯಬಾರದು.

**ಪ್ರಹ್ಲಾದ್** : ಒಬ್ಬ ಕವಿಯ ಬಹಳ ಮುಖ್ಯವಾದ ಜವಾಬ್ದಾರಿ ಏನು ?

**ಶರ್ಮ** : ಇವತ್ತಿನ ಸಮಾಜದ ಸ್ಥಿತಿಗತಿಗಳಿಗೆ ಪ್ರತಿಕ್ರಿಯಿಸುವ ಯೋಗ್ಯತೆ ಇಲ್ಲದಿದ್ದಾಗ, ನೀವು ಬಾಲ್ಯದ ಕಡೆಗೆ ಹೊರಳುತ್ತೀರಿ. ನಾನು ಸಮಕಾಲೀನ ಸಮಾಜಕ್ಕೆ ಪ್ರತಿಕ್ರಿಯಿಸಬೇಕೇ ಹೊರತು – ಬಾಲ್ಯದ ಕಡೆಗೆ ಹೋಗಬಾರದು.

**ಪ್ರಹ್ಲಾದ್** : ಪ್ರಾಯಶಃ ಸಮಕಾಲೀನ ಸಂದರ್ಭಗಳಿಗೆ ಪ್ರತಿಕ್ರಿಯಿಸುತ್ತಿದ್ದ ಕಾರಣಕ್ಕೆ, ನಿಮ್ಮ ಕಾವ್ಯದ ಬಗ್ಗೆ ತಣ್ಣಗಿನ ಪ್ರತಿಕ್ರಿಯೆ ಬಂತು. ಏಕೆಂದರೆ ನೀವು ಇಂಗ್ಲೆಂಡಿನ ಅನುಭವ, ಹೊರದೇಶದ ಏಕಾಕಿತನವನ್ನು, ಹೊರದೇಶದ ಸಮಸ್ಯೆಗಳಿಗೆ ಪ್ರತಿಕ್ರಿಯಿಸಿದಿರಿ. ನಿಮ್ಮ ಕಾವ್ಯದ ಸೂಕ್ಷ್ಮತೆ ಬಹಳ ಜನರಿಗೆ ಒಗ್ಗಲೇ ಇಲ್ಲ. ಬಹುಶಃ ಎಚ್. ಎಸ್. ರಾಘವೇಂದ್ರರಾವ್ ನಿಮ್ಮ ಸಮಗ್ರ ಕಾವ್ಯದ ಮುನ್ನುಡಿಯಲ್ಲಿ 'ಉಗುರುಬೆಚ್ಚಗಿನ ಪ್ರತಿಕ್ರಿಯೆ ಶರ್ಮರ ಕಾವ್ಯಕ್ಕೆ ಬಂತು' ಎಂದು ಬರೆದರು.

**ಶರ್ಮ** : ಜನಕ್ಕೆ ಮೆಚ್ಚುಗೆಯಾಗಬೇಕು ಅಂತ ನನ್ನ ಅನುಭವಕ್ಕೆ ಬಾರದ ಇವತ್ತಿನ ಭಾರತದ ಸಂದರ್ಭಕ್ಕೆ ಪ್ರತಿಕ್ರಿಯಿಸಬೇಕೋ ಅಥವಾ ನಾನು ವೈಯಕ್ತಿಕವಾಗಿ ಅನುಭವಿಸಿದ ತಾಕಲಾಟ – ಅವನ್ನು ಕೂಡ ಕಾವ್ಯಕ್ಕೆ ತಂದಿದ್ದರಿಂದ – ಕನ್ನಡ ಕಾವ್ಯವನ್ನು ವಿಸ್ತರಿಸಿದೆ ಅನ್ನುವ ಮಾತಿದೆ.

ಅನುಭವಕ್ಕೆ ಪ್ರಾಮಾಣಿಕವಾಗಿರಬೇಕಾದ್ದು ಮುಖ್ಯ ಅಂತ ನಮ್ಮ ಕವಿಗಳ ಕನಸು. ಆ ಅನುಭವಕ್ಕೆ ಪ್ರಾಮಾಣಿಕರಾಗಬೇಕಾದಾಗ ನಮ್ಮದಲ್ಲದ ಅನುಭವವನ್ನು ನಾವು ಬರೆಯೋದು ತಪ್ಪಾಗುತ್ತೆ. ಈಗ ಉದಾಹರಣೆಗೆ, ನವ್ಯೋತ್ತರದ ಸಂದರ್ಭದಲ್ಲಿ ಅವರಿಗೆ ಒಂದು vision ಇಲ್ಲ. ನವೋದಯಕ್ಕೂ ನವ್ಯಕ್ಕೂ ಆದ ವ್ಯತ್ಯಾಸವೇ ಇದು. ನವೋದಯಕ್ಕೂ ಒಂದು philosophy ಇತ್ತು, ನಮಗೆ ಒಂದು vision of life ಇತ್ತು. ಜೀವನ ಅಂದರೆ ಏನು, ಅದರ ಬೆಲೆ ಏನು, ಎಂಬ ಮೂಲಭೂತ ಪ್ರಶ್ನೆಗಳನ್ನು ಕೇಳಿಕೊಂಡು ಉತ್ತರಕೊಟ್ಟರು. ಬಹುಶಃ ತಪ್ಪಿರಬಹುದು. ನವ್ಯೋತ್ತರರು ಈ ಥರದ ಪ್ರಶ್ನೆಗಳನ್ನು ಕೇಳಿಕೊಳ್ಳಲಿಲ್ಲ.

**ಪ್ರಹ್ಲಾದ್** : ಒಂದು ಆಶಯವನ್ನು ಪ್ರತಿಪಾದಿಸುತ್ತಾ ಸಮಾನತೆ, ಸ್ವಾತಂತ್ರ್ಯ ಇತ್ಯಾದಿ ಘೋಷಿಸುತ್ತಾ ಹೋಗುವುದು : ಅಂದರೆ ಒಂದು ತರಹದ escapism...

**ಶರ್ಮ** : escapism ಅಲ್ಲ, ಆದರ್ಶಗಳನ್ನು ಹೇಳುತ್ತಾ ಹೋಗುವುದು. ಅದು ಸುಲಭ, ಆದರೆ ಇವತ್ತಿನ ವಾಸ್ತವ ಹೇಗಿದೆಯೆಂದು, contrast ಮಾಡ್ತಾಯಿಲ್ಲ. ಇನ್ನೊಂದು, ಅಡಿಗರಂಥ ದೊಡ್ಡ ಕವಿಗಳಲ್ಲಿ ಒಂದು ರೀತಿಯಾಗುತ್ತೆ – ವೈಯಕ್ತಿಕ ಅನುಭವ ಮತ್ತು ಸಾಮಾಜಿಕವಾದ ಅನುಭವ ಎರಡೂ ಎಲ್ಲೋ ಸಂಗಮದ ಹಾಗೆ ಎರಡು ನದಿಗಳು ಕೂಡಿಕೊಳ್ಳುವ ಹಾಗೆ, ಎರಡೂ ಅವರಲ್ಲಿ ಕೂಡಿಕೊಂಡು ಕಾವ್ಯ ಶ್ರೀಮಂತವಾಗುತ್ತೆ. ಈ ನವ್ಯೋತ್ತರದಲ್ಲಿ ಆ ತರಹ ಒಂದು ಸಾಮಾಜಿಕವಾದದ್ದು, ವೈಯಕ್ತಿಕವಾದದ್ದು ಸಂಗಮಿಸುವುದೇ ಇಲ್ಲ. ನವೋದಯ ಮತ್ತು ಪ್ರಗತಿಶೀಲರಲ್ಲೂ ಸಂಗಮಿಸಲಿಲ್ಲ. ಬಂಡಾಯದವರು ನಮ್ಮ ಪ್ರಗತಿಶೀಲರ ಮೊಮ್ಮಕ್ಕಳು : ಅವರಲ್ಲೂ ಇಲ್ಲ.

**ಪ್ರಹ್ಲಾದ್** : ಒಬ್ಬ ಕವಿಯಾಗಿ ನೀವು ಕನ್ನಡದಲ್ಲಿ ಯಾವ ಕವಿಯನ್ನು ಹೆಚ್ಚು ಮೆಚ್ಚಿಕೊಳ್ಳುತ್ತೀರಾ ?

**ಶರ್ಮ** : ನನ್ನನ್ನೇ !



**ರಾಜು** : ಇತ್ತೀಚೆಗೆ ಮೂವತ್ತು ವರ್ಷಕ್ಕಿಂತ ಕೆಳಗಿರುವವರ ಕವಿತೆಗಳನ್ನು ಓದಿದ್ದೀರ ? ಭಗವತಿ ಅಂತ ಒಬ್ಬ ಕವಯತ್ರಿಯನ್ನು ಬಿಎಂಶ್ರೀ ಕಾವ್ಯ ಪ್ರಶಸ್ತಿಗೆ ಆಯ್ಕೆ ಮಾಡಿದ್ದೀರಿ ನೀವು. ಆ ಒಂದು levelನಲ್ಲಿ ಇರುವ ಕವಿಗಳ ಬಗ್ಗೆ ನೀವೊಂದು ಆಶಾಕಿರಣ ಇಟ್ಟುಕೊಳ್ಳಲು ಸಾಧ್ಯವಿದೆಯೇ ?

**ಶರ್ಮ** : ಅವರಿನ್ನೂ ಬೆಳೆಯಬೇಕಿದೆ.

**ರಾಜು** : ಆದರೀಗ ಬರೆದಿರುವುದರಲ್ಲಿ ?

**ಶರ್ಮ** : ಹೌದು, ಅವರು ಚೆನ್ನಾಗಿ ಬರೆಯುತ್ತಾರೆ. ಅವರಲ್ಲಿ ಒಂದು wit ಇದೆ, humour ಇದೆ ಮತ್ತು ಅನುಭವವನ್ನು ಸುಳ್ಳು ಮಾಡುವ ಪ್ರಯತ್ನವಿಲ್ಲ. ಅಲ್ಲಿ ಒಂದು ತರಹದ concentration ಇದೆ. ಸಾಂಸಾರಿಕ ಬದುಕಿನಲ್ಲೇ ಇದ್ದುಕೊಂಡು, ಅದರ ಆಚೆಗೆ ಯೋಚನೆ ಮಾಡುವ ಶಕ್ತಿಯಿದೆ.

**ಪ್ರಹ್ಲಾದ್** : ಇತ್ತೀಚಿನ ತಲೆಮಾರಿನ ಕವಿತೆಗಳನ್ನು ನೀವು ಹೆಚ್ಚು ಸೀರಿಯಸ್ಸಾಗಿ ಓದುತ್ತಿದ್ದೀರಾ ?

**ಶರ್ಮ** : ಸಿಕ್ಕಷ್ಟು ಓದುತ್ತೇನೆ.

**ಪ್ರಹ್ಲಾದ್** : ನಮ್ಮ ದೊಡ್ಡ ಸಮಸ್ಯೆ ಎಂದರೆ, ನಮ್ಮ ಹಿರಿಯ ಲೇಖಕರು ಅವರ ಮುಂದಿನ ತಲೆಮಾರಿನವರ ಬರಹಗಳನ್ನು ಓದುವುದು ಬಹಳ ಕಡಿಮೆ. ತುಂಬಾ ಒಳ್ಳೆಯ ಬರಹ, ಕವಿತೆ ಬರೆದಿರೋ ಮತ್ತು ಬರೆಯುವ ತಾಕತ್ತಿರುವ ಹುಡುಗರಿದ್ದಾರೆ. ಮುಖ್ಯವಾದ ಸಮಸ್ಯೆಯೆಂದರೆ, ನಾವು ದೊಡ್ಡವರನ್ನು ಯಾರನ್ನೇ ಕೇಳಿದರೂ ಕೂಡ ಎಚ್. ಎಸ್. ಶಿವಪ್ರಕಾಶ್‌ರ ಹಂತದಲ್ಲೇ ನಿಂತುಬಿಡುತ್ತಾರೆ. ಶಿವಪ್ರಕಾಶ್ ಆದ ಮೇಲೆ ಕನ್ನಡದಲ್ಲಿ ಒಳ್ಳೆ ಕಾವ್ಯ ಬಂದಿಲ್ಲ ಎಂಬಂತಹ ಸಾರ್ವತ್ರಿಕ ವಿಶ್ಲೇಷಣೆಗಳನ್ನು ಕೊಡುತ್ತಾರೆಯೇ ಹೊರತು, ಹತ್ತು ಹಲವಾರು ಗಂಭೀರವಾದ ಪ್ರಯತ್ನಗಳು ನಡೆದಿರುವುದನ್ನು ಗುರುತಿಸುತ್ತಿಲ್ಲ.

ರಾಜು : ವಸಂತ ಬನ್ನಾಡಿಯವರ 'ಕಡಲ ಧ್ಯಾನ' ಎನ್ನುವ ಒಂದು ಪುಸ್ತಕ ಬಂದಿದೆ.

**ಪ್ರಹ್ಲಾದ್** : ತುಂಬಾ ಜನ ಇದ್ದಾರೆ.

**ಶರ್ಮ** : ಓದಬಾರದು ಅಂತಲ್ಲ, ಕಣ್ಣಿಗೆ ಬಿದ್ದದ್ದು, ಸಿಕ್ಕಿದ್ದು ಓದುತ್ತೇನೆ. ಓದೋದೇ ಕಡಿಮೆಯಾಗುತ್ತೆ ವಯಸ್ಸಾದಂತೆ. ನನ್ನ ಪದ್ಯಗಳನ್ನು ನಾನು ಓದಿಕೊಳ್ಳಲ್ಲ. ಕೆಲವರದು I have liked. ಈ ಭಗವತಿ ಉದಾಹರಣೆ ಕೊಟ್ಟೆ. ಎಚ್. ಎಲ್. ಪುಷ್ಪಾ - ಕೆಲವು ಕಡೆ ಅವರು ಚೆನ್ನಾಗಿ ಬರೆಯುತ್ತಾರೆ, ವೈದೇಹಿ in her own limited way she writes very interestingly. ಲಕ್ಷ್ಮೀಪತಿ ಕೋಲಾರ ಅವರಲ್ಲಿ ಒಂದು ತರಹದ myth create ಮಾಡುವ ಆಸೆಯಿದೆ. ಮೂಲಭೂತವಾದ ಸಮಸ್ಯೆ ಏನೆಂದರೆ, ಈ ಚಿಕ್ಕ ವಯಸ್ಸಿನ ಕವಿಗಳು ಏನನ್ನೂ ಓದದೇ ಬರೀತಾಯಿದ್ದಾರೆ ಅಂತ. ಅಂದರೆ ಅವರ ಹಿಂದೆ ಆಗಿ ಹೋದ ಕವಿಗಳು ಏನು ಸಾಧಿಸಿದರು, ಹೇಗೆ ಸಾಧಿಸಿದರು ಅನ್ನೋ ಬಗ್ಗೆ ಯೋಚನೆಯೇ ಮಾಡದಂತೆ ಬರೆಯುತ್ತಿದ್ದಾರೆ.

**ಪ್ರಹ್ಲಾದ್** : ತುಂಬಾ generalised ಆದ statement ಅನ್ನಿಸುತ್ತೆ. ಏಕೆಂದರೆ ಸಾಕಷ್ಟು ಜನ ಸೀರಿಯಸ್ಸಾಗಿ ಓದುತ್ತಿದ್ದಾರೆ ಮತ್ತು ತುಂಬಾ ಜನ ಬರೆಯುತ್ತಾರೆ.

**ರಾಜು** : ಅವರು ಓದುತ್ತಾಯಿಲ್ಲ ಅಂತ ನಿಮಗೆ ಹೇಗೆ ಅನ್ನಿಸಿತು ?

**ಶರ್ಮ** : ಉದಾಹರಣೆಗೆ, ಕವಿತೆಗೆ ಬೇಕಾದ ಕೆಲವು ಅಂಶಗಳಿವೆಯಲ್ಲಾ; ಛಂದಸ್ಸು, wit, ಶಬ್ದಗಳ ಉಪಯೋಗ – ಇವುಗಳ ಬಗ್ಗೆ ಸಾಕಷ್ಟು ಗಮನ ಕೊಡ್ತಾಯಿಲ್ಲ ಅನ್ನಿಸುತ್ತೆ. ಉದಾ : ಅನಂತಮೂರ್ತಿ ಕಾರಣವೋ, ತಿರುಮಲೇಶ್ ಕಾರಣವೋ, ಅಂತೂ ಎಲ್ಲಾ ಬಿಟ್ಟು ಬರೆಯೋದು ಇವತ್ತಿನ ಕಾವ್ಯ ಅನ್ನುವಂಥ ಸ್ಥಿತಿಗೆ ಬಂದುಬಿಟ್ಟಿದ್ದೇವೆ. ಅಂದರೆ ಗದ್ಯಕ್ಕೆ ಅತಿ ಹತ್ತಿರವಾಗ್ತಾಯಿದೆ. ಕಾವ್ಯ ಗದ್ಯಕ್ಕೆ ಹತ್ತಿರವಾಗಬಾರದು ಅಂತಲ್ಲ. ಆದರೆ ಕಾವ್ಯ ತನ್ನ ಸ್ವಂತಿಕೆಯನ್ನು ಸ್ವಲ್ಪ ಉಳಿಸಿಕೊಳ್ಳಬೇಕು. ಉಳಿಸಿಕೊಂಡಿದೆಯೋ ಅನ್ನುವ ಪ್ರಶ್ನೆ ಬರುತ್ತೆ, ಇಲ್ಲ.

**ಪ್ರಹ್ಲಾದ್** : ನಾನು ಪದ್ಯಗಳನ್ನು ಓದಿಲ್ಲ, ಕನ್ನಡದಲ್ಲಿ ಒಳ್ಳೆಯ ಕಾವ್ಯವೇ ಇಲ್ಲ, ಅನ್ನುವುದು ಹೇಗೆ ಸಾಧ್ಯ ? ಕವಿತೆಗಳನ್ನು ಓದಿರುವುದಿಲ್ಲ ಎಂದಾಗ ಕನ್ನಡದಲ್ಲಿ ಒಳ್ಳೆಯ ಕವಿತೆಗಳೇ ಬಂದಿಲ್ಲ ಅನ್ನುವ ತೀರ್ಮಾನಕ್ಕೆ ಬರ್ತಾಯಿರುವುದು ಹೇಗೆ ಸಾಧ್ಯ ?

**ರಾ. ಶರ್ಮ** : ತಪ್ಪು ಅದು.

**ಜಿ. ಆರ್.** : ಲೋಕದೃಷ್ಟಿ ಅನ್ನುವ ಕಾರಣಕ್ಕೇನಾದರೂ ನವ್ಯರಿಗಿಂತ ಈಚಿನವರು ಅಷ್ಟು ಆಳ ಇಲ್ಲ ಅನ್ನಿಸುತ್ತಾ ?

**ಶರ್ಮ** : They haven't been able to evolve a philosophy. ಕಾವ್ಯ ತಾತ್ವಿಕವಾಗಿ ಇರಬೇಕು ಅಂತ ನಾ ಹೇಳ್ತಾಯಿಲ್ಲ. ಒಂದು overview ಕಾಣ್ತಾ ಇಲ್ಲ ಕವಿತೆಯಲ್ಲಿ.

**ಪ್ರಹ್ಲಾದ್** : ಒಂದು ಸಾಮೂಹಿಕ ಕನಸು ಅನ್ನುವುದು ಈವತ್ತಿನ ತಲೆಮಾರಿನಲ್ಲಿ ಬಹಳ ದೊಡ್ಡ ಸಮಸ್ಯೆ, ಏಕೆಂದರೆ ಬರೆಯೋಕೆ ಸಾಧ್ಯವಾಗದಿರುವಂಥ ಪರಿಸ್ಥಿತಿಯಲ್ಲಿ ನಾವಿದ್ದೇವೆ.

**ಶರ್ಮ** : ಸಾಮೂಹಿಕ ಕನಸೇ ಕವಿಯ ಕನಸಾಗಬೇಕು ಅಂತಿಲ್ಲ.

**ಪ್ರಹ್ಲಾದ್** : ಹಾಗಲ್ಲ, ಆ ತರಹದ ಉತ್ಸಾಹ ಹುಟ್ಟಿಸುವ ಒಂದು ವಾತಾವರಣ ಖಂಡಿತವಾಗಿಯೂ ಇಲ್ಲ.

**ಶರ್ಮ** : ಖಂಡಿತವಾಗಿಯೂ ಇಲ್ಲ. ನವೋದಯ ಕಾಲದಲ್ಲೂ ಇತ್ತು ನಮ್ಮಲ್ಲೂ ಇತ್ತು. ನಾವು ಒಂದು ೧೦, ೧೨ ಜನ ನಿಯಮಿತವಾಗಿ ಸೇರುತ್ತಿದ್ದೆವು. ಒಬ್ಬರು ಬರೆದಿದ್ದನ್ನು ಇನ್ನೊಬ್ಬರು ಓದುತ್ತಿದ್ದೆವು, ಬೈಯುತ್ತಿದ್ದೆವು, ಜಗಳ ಆಡುತ್ತಿದ್ದೆವು. ಆದರೆ ಮನೆಗೆ

## ಇನ್ನಾರಿಗೆ ದೂರಬೇಕಯ್ಯ ?

**ಕಾ**ಲ, ಕಾಲಾಂತರದಲ್ಲೂ ಮಲಿತ ಮಲಿನಕ್ಕೆ
ಹರಿವಿನ ಹಕ್ಕೊತ್ತಾಯ.
ಕೊಂಡಿಗೊಂಡ ತಡೆಗೋಡೆಗಳ ದೂಡಿ
ಕಟ್ಟೆಯೊಡೆದು ಬಿಟ್ಟೆ
ಸ್ಥಾವರವೆಲ್ಲ ಜಂಗಮ !
ಎಂಥ ರಭಸದ ವೇಗ
ನಿಲ್ಲಿಸಲಾಗಲಿಲ್ಲ ಯಾರಿಗೂ ಆಗ.
ದಾರ ದಾರಗಳ ಗಂಟು ಹರಿದೊಗೆದು
ದಾರಿಗಳ ನೇರಗೊಳಿಸಿ
ಎದೆ ತುಂಬ ತುಂಬಿದೆ
ಇವ ನಮ್ಮವ, ಇವ ನಮ್ಮವ.

ಅಂಗದ ಹಂಗು ಹರಿದೊಗೆದ
ಲಿಂಗಸಂಗಿ ಸ್ತ್ರೀ-ಪುಲ್ಲಿಂಗಗಳ
ಸಮಗೊಳಿಸಿ ಸಲ್ಲಿಸಿದೆ ಮನುಷ್ಯ ಲಿಂಗಕ್ಕೆ.
ಇದ್ದುಳ್ಳ ಕಳ್ಳರ ಕಣ್ಣ
ಇಲ್ಲದವರ ಕಡೆ ಹರಿಸಿ
ಎಡೆ ಮಾಡಿದೆ ದಾಸೋಹಕ್ಕೆ.

ಶತಶತಮಾನಗಳ ಅಚರ
ಮಿಸುಕಾಡತೊಡಗಿ, ಚಲಿಸಿ
ಕೂಡಲಸಂಗನಲ್ಲಿ ಕೂಡಿ ಹರಿದು
ಜೊಂಡು ಜೊಡರೆಲ್ಲ ಝುಳ ಝುಳ
ಹೊಳೆಯಿತು ಸಂಗಮನಾಥನ ಕಳಸ ಥಳ ಥಳ !



ಕತೆ ವರ್ತಮಾನದಲ್ಲಿದ್ದಾಗಲೆ –
ಬೆಳಗಾದದ್ದೇ ತಂತು
ಕತ್ತಲಗಣ್ಣವರಿಗೆ ತಳಮಳ.
ಕೊಂಡಿಗಳ ಕಿಂಡಿ ಕಳ-ಕಳಚಿ
ಪಟ್ಟದ ಅಟ್ಟೆ ಅಲುಗಾಡಿದ ಸದ್ದು !
ದಾರಿಗಳುದ್ದಕ್ಕೂ ಕಿತ್ತೆಸೆದ ಶರಣಗಣ್ಣು
ಗಜಪಾದದೆಳೆತಕ್ಕೆ ಸಿಕ್ಕ ಲಿಂಗದೇಹಿಗಳ
ಮೈಯ ರಕ್ತ-ಮಾಂಸ
ಮರಣ-ಮಾರಣ, ಹರಣ
ಎಲ್ಲಾ ಚೆಲ್ಲಾಪಿಲ್ಲಿ
ಜಂಗಮವೆಲ್ಲ ಮತ್ತೆ ಸ್ಥಾವರ
ಕಣ್ಣು ಮಂಜಾಗಿ ಕೂಡಿದೆ ಕೂಡಲ ಸಂಗನಲ್ಲಿ.

ಇತಿಹಾಸದೀಚೆ- ಹೊರಳಿ ನೋಡಿದರೆ ಈಗ
ಕಳೆದ ದಾರಿಯಗುಂಟ ಹಿಮ್ಮುಖದ ಹೆಜ್ಜೆಗಳು
ಎಣಿಸಿದರೆ ಎಂಟೋ, ಎಂಟೂವರೆಯೋ ನೂರು.
ಇಟ್ಟ ಕೆಟ್ಟ ಪಾದಗಳೆಲ್ಲ
ಮೆಟ್ಟಿ ತುಳಿದಿವೆ ನಿನ್ನ ತತ್ವಗಳ ಪಾತಾಳಕ್ಕೆ :
ಜ್ಞಾನದ ಬಲದಿಂದಲೇ ಜ್ಞಾನದ ಕೇಡು !
ತಮಂಧದ ಬಲದಿಂದಲೇ ಜ್ಯೋತಿಯ ಕೇಡು !!
ನೀನಲ್ಲದೆ ಇನ್ನಾರಿಗೆ ದೂರಬೇಕಯ್ಯ ?

**ಡಾ|| ಬಸವರಾಜ ಸಾದರ**
ಸಹಾಯಕ ಕೇಂದ್ರ ನಿರ್ದೇಶಕರು, ಆಕಾಶವಾಣಿ
ಧಾರವಾಡ - ೫೮೦ ೦೦೮

ಹೋಗಿಬಿಟ್ಟು each one wrote according to his need or his experience. ಅದು ಇಲ್ಲ ಈಗ. ಕಾರಣ ಏನೆಂದರೆ, ಒಂದು ಕ್ಷುಲ್ಲಕತನ ನಮ್ಮ ಸಾಹಿತಿಗಳಲ್ಲಿ ಬಂದುಬಿಟ್ಟಿದೆ. ನಾನು ಯಾವಾಗಲೂ ಹೇಳ್ತಾಯಿರ್ತೀನಿ – ನಾನು ಈ 'ಅನನ್ಯ' ಮಾಡೋದಕ್ಕೆ ಹೋಗಿ ಕೈ ಸುಟ್ಟುಕೊಂಡ ಮನುಷ್ಯ. ಈ ಮನುಷ್ಯ ಬಂದರೆ, ಆ ಮನುಷ್ಯ ಬರೋದಿಲ್ಲ ಸಭೆಗೆ. 'ಅವರು ಬರ್ತಾರಾ, ಹಾಗಾದರೆ ನಾನು ಬರೋದಿಲ್ಲ' ಅಂತಾರೆ. ಹಾಗಾಗಿ ನಾವು ಹತ್ತು ಜನ ಸೇರಿ ಯಾವುದನ್ನಾದರೂ ಸೇರಿ ಚರ್ಚಿಸುವಂಥ ಸಾಧ್ಯತೆಯೇ ಹೊರಟುಹೋಗ್ತಾಯಿದೆ.

**ಪ್ರಹ್ಲಾದ್** : ನವ್ಯರ ಮಟ್ಟಿಗೆ ನವ್ಯ ಚಳುವಳಿ ಅನ್ನುವುದೊಂದು acid wash ತರಹ ಆಗಿಹೋಯಿತು ಅನ್ನುವುದು ನನ್ನ ಆಪಾದನೆ. ಮುಂದೆ ಏನೂ ಬೆಳೆಯದಿರುವಂಥ ಪರಿಸ್ಥಿತಿ ನಿರ್ಮಾಣ ಮಾಡಿತು. ಬಹಳ ಮುಖ್ಯವಾದ ಪ್ರಕಾರಗಳು, ವ್ಯಕ್ತಿ ಚಿತ್ರಗಳು, ಲಲಿತ ಪ್ರಬಂಧಗಳು ಇತ್ಯಾದಿಗಳೆಲ್ಲವೂ ಮುಖ್ಯ ಅಲ್ಲ; ಬಹಳ ಮುಖ್ಯವಾಗಿ ಕವನ ಬರೆಯೋದು, ಇಲ್ಲಾ ಸ್ವಲ್ಪ ಮಟ್ಟಿಗೆ ಕಥೆ ಬರೆಯೋದು. ಈ ತರಹದ trend ಆಯ್ತೇ ಹೊರತು ಯಾವುದನ್ನೂ ಗಟ್ಟಿಗೊಳಿಸಲಿಲ್ಲ. ನವ್ಯ ಚಳುವಳಿ ಆ ಮಟ್ಟಿಗೆ ಕನ್ನಡ ಸಾಹಿತ್ಯಕ್ಕೆ ಮಾಡಿದಂಥ ಬಹಳ ದೊಡ್ಡ damage ಅಂದರೆ, ಈ ತರಹದ ಪ್ರಕಾರಗಳ ಬಗ್ಗೆ ನಿರ್ಲಕ್ಷ್ಯದ ಧೋರಣೆಯನ್ನು ಒಟ್ಟಾರೆ ಸೃಷ್ಟಿ ಮಾಡಿತು. ಇದರ ಬಗ್ಗೆ ಏನು ಹೇಳ್ತೀರಿ ?

**ಶರ್ಮ** : ಒಟ್ಟಾರೆ ಈ ತರಹದ ಕೆಲವು ಪ್ರಕಾರಗಳ ಬಗ್ಗೆ ನಿರ್ಲಕ್ಷ್ಯ ಬಂತು ಅನ್ನೋದು ನಿಜ. ಆದರೆ ನವ್ಯಕವಿಗಳು ಅದಕ್ಕೆ ಕಾರಣ ಅಂತಲ್ಲ. ಪ್ರಬಂಧ ಬರೀಬೇಕು ಅಂತನಿಸಿದರೆ ಪ್ರಬಂಧ ಬರೀರಿ; ಅದರಲ್ಲಿ ಉತ್ತಮ ಕಾವ್ಯದ ಅಂಶಗಳಿಟ್ಟುಕೊಂಡು ಬರೆಯಿರಿ. ನವ್ಯರಿಗೆ ಆರಂಭ ಕಾಲದಲ್ಲಿ ಅವರ mediumಗೆ ಬಹಳ ಪ್ರಧಾನವಾದ ಪ್ರಕಾರ ಅನ್ನಿಸಿದ್ದು ಕಾವ್ಯ. ಕಾವ್ಯದ ಮೂಲಕ ಪ್ರಪಂಚದ ಮುಖ್ಯ ಧ್ಯೇಯಗಳ ಬಗ್ಗೆ ಸಮಸ್ಯೆಗಳ ಬಗ್ಗೆ ಹೇಳಬಹುದು ಅಂತನಿಸಿತು. ಎರಡನೆಯದು ಕತೆ, ಕತೆಯಲ್ಲಿ ಬಹಳ ಒಳ್ಳೆಯ ಕೆಲಸ ಮಾಡಿದರು ನವ್ಯರು. ಕತೆಗೆ ಕಾವ್ಯದ ಗುಣಗಳನ್ನು ತಂದರು.

ನವ್ಯರು ಇನ್ನೂ ಒಂದು ಮಾಡಿದರು. ಆತ್ಮರತಿ ಅಂತ ಕರೀತೀರಲ್ಲ, ವೈಯಕ್ತಿಕವಾಗಬೇಕು ಪ್ರಾಮಾಣಿಕವಾಗಬೇಕು ಎನ್ನುವ ಪ್ರಯತ್ನದಲ್ಲಿ ಸಮಾಜದ ಕಡೆ ಸ್ವಲ್ಪ ಗಮನ ಕಳಕೊಂಡರು. ಎಲ್ಲಾ ವೈಯಕ್ತಿಕವಾಗಬೇಕು, ಎಲ್ಲವನ್ನೂ ವೈಯಕ್ತಿವಾಗಿ ಮಾಡಿಕೊಳ್ಳಬೇಕು ಅನ್ನುವ ಪ್ರಯತ್ನವೇ ತಪ್ಪಾಯಿತು. ಆದ್ದರಿಂದಲೇ ಅಂಥ ಕಾದಂಬರಿಗಳೇ ಬರಲಿಲ್ಲ ನಮ್ಮಲ್ಲಿ.

**ಪ್ರಹ್ಲಾದ್** : ಕಾದಂಬರಿ ಬಹಳ ಜನಪ್ರಿಯ ಪ್ರಕಾರ. ಎಲ್ಲರಿಗೂ ಮುಟ್ಟಬಲ್ಲಂಥ Form ಆಗಿತ್ತು.

**ಶರ್ಮ** : ಜನಪ್ರಿಯತೆ ಬಗ್ಗೆ ಮಾತನಾಡದಿರಿ. ಅದನ್ನ ನವ್ಯರು ಯಾವತ್ತೂ ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. Objective ಆಗಿ ನೋಡಿದರೆ ನವ್ಯರಿಂದ ಬೇಕಾದಷ್ಟು ನಷ್ಟಗಳಾಗಿವೆ. ಅದನ್ನು ನಾನು ಒಪ್ತೀನಿ.

**ರಾಜು** : ಅನುವಾದದ ಬಗ್ಗೆ ಮಾತನಾಡೋಣ. ನೀವು ಒಂದು ಕಡೆ cultural translation ಬಗ್ಗೆ ಮಾತನಾಡ್ತಾ: ಒಬ್ಬ ಅನುವಾದಕ ಮೂಲಕ್ಕೆ ಹೆಚ್ಚು ವಿಧೇಯನಾಗಬೇಕಾಗಿಲ್ಲ, ಸ್ವತಂತ್ರವಾಗಿ ಬಳಸಿಕೊಳ್ಳಬಹುದು ಅಂತ ಹೇಳಿದ್ದೀರಿ. ನಮ್ಮಲ್ಲಿ ನೀವು ಮುಖ್ಯವಾಗಿ ಅನುವಾದ ಮಾಡಿದ್ದೀರ, ಎ. ಕೆ. ರಾಮಾನುಜನ್ ಮಾಡಿದ್ದಾರೆ. ಅವರ ಆಯ್ಕೆಯ ದೃಷ್ಟಿ ಏನು, ನಿಮ್ಮ ಆಯ್ಕೆಯ ದೃಷ್ಟಿ ಏನು ?

**ಶರ್ಮ** : ಇಬ್ಬರದೂ ಒಂದೇ ಹೆಚ್ಚು ಕಡಿಮೆ.

**ರಾಜು** : ಇಲ್ಲ, ಅವರು ಮಾಡಿದ ಅನುವಾದ ಬೇರೆ ತರಹ ಇತ್ತು, ನೀವು ಮಾಡಿದ ಅನುವಾದಗಳು ಬೇರೆ ತರಹ.

**ಶರ್ಮ** : ಅದು ವೈಯಕ್ತಿಕ ವ್ಯತ್ಯಾಸಗಳಿಂದ ಆಗುತ್ತೆ. ಆದರೆ, ಮೂಲಭೂತವಾಗಿ ಸ್ವಾತಂತ್ರ್ಯವನ್ನು ಎಷ್ಟರಮಟ್ಟಿಗೆ ವಹಿಸಬಹುದು, ಮೂಲದಿಂದ ಸ್ವಲ್ಪ ಸ್ವಲ್ಪ ದೂರ ಹೋಗಬಹುದು ಎನ್ನುವುದರ ಬಗ್ಗೆ ಇಬ್ಬರೂ ಒಂದೇ ತರಹ ಯೋಚನೆ ಮಾಡ್ತಾಯಿದ್ದೆವು. ಅವರೂ ಕೂಡ ವಚನಗಳಲ್ಲಿ ಅಷ್ಟು ಶ್ರದ್ಧೆಯಿಂದ ಮೂಲಕ್ಕೆ ಹತ್ತಿರವಾಗಿರಬೇಕು ಅಂತ ಮಾಡಿಲ್ಲ. ನಾನೂ ಅಷ್ಟೇ. ಆದರೆ ಅದನ್ನ ಬಿಟ್ಟು ಬರೀಬೇಕು ಅನ್ನೋದನ್ನ ಧರ್ಮವಾಗಿ ಮಾಡಿಕೊಂಡಿಲ್ಲ. ಎಲ್ಲಿ ಮೂಲದ ರೂಪವನ್ನು, ಒತ್ತಾಯವನ್ನು ಬಳಸಿಕೊಂಡು ಹಾಗೇ ಬರೆಯುವುದು ಸಾಧುವೋ ಆಗ ಹಾಗೇ ಮಾಡಬಹುದು. ಆದರೆ ಕಾವ್ಯಕ್ಕೆ ಬಂದಾಗ ಅಷ್ಟು ಸಾಧ್ಯವಾಗೋದಿಲ್ಲ. ಕಾರಣ ಏನೆಂದರೆ, ನಾನು ಕನ್ನಡಕ್ಕೆ 'ಈ ಶತಮಾನದ ೧೦೦ ಕವಿತೆಗಳು' ಅನುವಾದ ಮಾಡಿದಾಗ ನನ್ನ ಓದುಗ ಡಿ. ಆರ್. ನಾಗರಾಜ್ ಅಲ್ಲ, ನಮ್ಮಮ್ಮ ಅಂತ ಹೇಳ್ತಾಯಿದ್ದೆ. ಅಂದರೆ ಒಂದೇ ಭಾಷೆ ತಿಳಿದ ನಮ್ಮಮ್ಮನಿಗೆ, ಕನ್ನಡ ಮಾತ್ರ ತಿಳಿದವಳಿಗೆ, ಇದು ಕಾವ್ಯ ಅಂತನಿಸಬೇಕು. ಇದು ಕಾವ್ಯ ಅಂತ ಅನ್ನಿಸಬೇಕಾದರೆ, ಆಕೆಯ ಪ್ರಕಾರ ಕನ್ನಡದ ಉತ್ತಮ ಕಾವ್ಯದ ಲಕ್ಷಣಗಳನ್ನು ಈ ಅನುವಾದವೂ ಒಳಗೊಳ್ಳಬೇಕು. ಆದ್ದರಿಂದ ಮೂಲದಿಂದ ಸ್ವಲ್ಪ ಬದಲಾವಣೆ ಮಾಡ್ಕೋತೀನಿ. ಹತ್ತಿರವಾಗುವ ಹಾಗೆ. ಬಿ. ಎಂ. ಶ್ರೀಯವರು ಹಾಗೆ ಮಾಡಿದ್ದರು.

**ರಾಜು** : ಅದು ತಪ್ಪು ಅನ್ನುವ ಕೆಲವು objectionsಗಳಿವೆಯಲ್ಲಾ...

**ಶರ್ಮ** : ಸುಮತೀಂದ್ರರ ಪ್ರಕಾರ ಅದು ತಪ್ಪು. ಅವರದೇನೆಂದರೆ ಮೂಲದ ಗುಣ ಬರುವ ಹಾಗೆ ಕಾಣಬೇಕು ಅಂತ. ಒಪ್ತೀನಿ. ಅದು ಕಾವ್ಯವಾಗದೇ ಹೋದಾಗ ಯಾರೂ ಓದೋದೇ ಇಲ್ಲ.

**ಜಿ. ಆರ್.** : Cultural context ಬೇರೆ ಇರುವಾಗ, ನಾವು ಅದು ಮೂಲದಲ್ಲೇ ಇರುವ ಹಾಗೆ ತಗೊಂಡುಬನ್ನಿ ಅಂತ ಅನ್ನೋಕಾಗಲ್ಲ. ಶೇಕ್ಸ್‌ಪಿಯರ್ ಸಾನೆಟ್ ಅನ್ನು ಹೇಗೆ ಮೂಲದಲ್ಲೇ ಇರುವಂತೆ ತಂದುಬಿಡೋಕೆ ಆಗುತ್ತೆ ?

**ಶರ್ಮ** : ಇನ್ನೊಂದು, ಅದನ್ನ ಯಾರು ಓದ್ತಾರೆ ಅಂತ.

**ಜಿ. ಆರ್.** : ಇಂಗ್ಲಿಷ್ ಸಾನೆಟ್ ಓದಿಬಿಟ್ಟು, ಕನ್ನಡದ ಅನುವಾದ ಚೆನ್ನಾಗಿದೆ ಅಂತ ಹೇಳೋದಲ್ಲ, ಬರೀ ಕನ್ನಡವೇ ಓದಿದಾಗ ಮೂಲ ಸಂವಹನವಾಗಿದೆಯಾ ಅಂತ ಪ್ರಶ್ನೆ.

**ಶರ್ಮ** : ಆದ್ದರಿಂದಲೇ ಈ ಅನುವಾದದ ವಿಮರ್ಶೆಯ ಬಗ್ಗೆ ನನ್ನದೊಂದು ನಿಲುವು ಇದೆ. ಎರಡೂ ಭಾಷೆಯನ್ನು ತಿಳಿದವರು ವಿಮರ್ಶೆಯನ್ನು ಮಾಡಬಾರದು ಅಂತ.



ಕಾರಣವೇನೆಂದರೆ, ನನ್ನ ಹೆಂಡ್ತಿ ಕಾರಂತರನ್ನು ಅನುವಾದ ಮಾಡಿದರೆ, ಕನ್ನಡದಲ್ಲೇ ಓದಿಕೊಂಡು ಅದರಲ್ಲಿ ಸುಖ ಪಡೋ ಜನಕ್ಕೆ ಇಂಗ್ಲಿಷ್‌ನಲ್ಲಿ ಹೇಗಪ್ಪಾ ಓದ್ತಾರೆ. ಹಾಗೇ ಇಂಗ್ಲಿಷಿನಲ್ಲಿ ಟಿ. ಎಸ್. ಎಲಿಯಟ್ ಓದಿ ಆನಂದ ಪಡೋರಿಗೆ ನನ್ನ Kannada version ಯಾಕೆ ಬೇಕು ? ಆದರೆ ಪಂಡಿತರೇನು ಮಾಡ್ತಾರೆ ಅಂದರೆ, ಎರಡನ್ನೂ ಪಕ್ಕ ಪಕ್ಕ ಇಟ್ಟುಕೊಂಡು 'ಇಲ್ಲೊಂದು ಪದ ಇದೆ, ಇದನ್ನು ಹಾಕೇ ಇಲ್ಲ' ಅಂತಾರೆ. ಈ ತರಹ ಕೂದಲು ಸೀಳುವಿಕೆಯನ್ನು ಪ್ರಾರಂಭ ಮಾಡ್ತಾರೆ. ಇದೊಂದು ದೊಡ್ಡ ಸಮಸ್ಯೆ.

**ರಾಜು** : ಆದರೆ, ರಾಮಾನುಜನ್ ಏನು ಮಾಡಿದರು ಅಂದರೆ ಕನ್ನಡದಲ್ಲಿ ಕಾವ್ಯ ಬರೆಯುವಾಗ ಅವರು ಸ್ವತಂತ್ರ ಕವನಗಳನ್ನು ಹೆಚ್ಚಾಗಿ ಮಾಡಿದರು. ಆದರೆ ನಿಮ್ಮ ದೃಷ್ಟಿ ಬೇರೆ ಇತ್ತು. ನೀವು ಇಂಗ್ಲಿಷಿನಿಂದ ಕನ್ನಡಕ್ಕೆ ತರೋವಾಗ ನಿಮ್ಮ ಶೈಲಿಯಲ್ಲೇ ಮಾಡಿದಿರಿ. ಅವರು ನಿಮ್ಮದನ್ನೇಕೆ ಅಳವಡಿಸಲಿಲ್ಲ? ನಿಮ್ಮ ಶೈಲಿಯನ್ನು ಯಾಕೆ ಅಳವಡಿಸಲಿಲ್ಲ?

**ಶರ್ಮ** : ರಾಮಾನುಜನ್‌ರವರ ಇಂಗ್ಲಿಷ್ ಮತ್ತು ಕನ್ನಡ ಪದ್ಯಗಳನ್ನು ಓದಿದರೆ ಒಬ್ಬನೇ ಕವಿ ಎರಡನ್ನೂ ಬರೆದಿದ್ದಾನೆ ಅಂತ ಅನ್ನಿಸೋದೇ ಇಲ್ಲ. ಅದಕ್ಕೇ ಅವರು ತಮ್ಮ ಕವನಗಳನ್ನು ಎಂದೂ ಭಾಷಾಂತರ ಮಾಡಲಿಲ್ಲ. ನನ್ನ ದೃಷ್ಟಿಕೋನವೇ ಬೇರೆ. ಬರೆಯುತ್ತಿರುವ ಮನುಷ್ಯ ಒಬ್ಬನೇ ಆದಾಗ ಅದನ್ನು ಪೂರ್ತಿಯಾಗಿ ಹಾಗೇ ಬಿಟ್ಟುಬಿಡೋದು ಅಂತ. ನನ್ನ ಮೇಲೆ ಈ ಆಪಾದನೆ ಇದೆ. ಒಂದು ಇಂಗ್ಲಿಷ್ ಕವನ ಅನುವಾದ ಮಾಡಿದರೆ, ನಾನು ಬರೆದ್ರೆ ಹ್ಯಾಗೆ ಬರಿತಾಯಿದ್ದೆನೋ ಹಾಗೆ ಮಾಡಿಬಿಟ್ಟಿದ್ದೀನಿ. ಅದು ನನ್ನ ಪ್ರಕಾರ ಬಹಳ ಸಹಜವಾದ ದೌರ್ಬಲ್ಯ. ನಾನೇ ತಾನೇ ಬರಿತಾಯಿರೋದು, ಆದ್ದರಿಂದ ರಾಮಚಂದ್ರ ಶರ್ಮರ ಅನುವಾದ ಮತ್ತು original ಕವನಗಳು ಅಷ್ಟು ಭಿನ್ನ ಅಲ್ಲ ಅಂತ ಅನ್ನಿಸೋಕೆ ಶುರುವಾಗುತ್ತೆ. ಅದು ತಪ್ಪು ಅಂತಲ್ಲ. ಒಂದು ಕವನ ಓದಿದಾಗ ಅದೊಂದು ಕವನ ಅಂತನ್ನಿಸುತ್ತೋ ? ನಾನು ಮುನ್ನುಡಿಯಲ್ಲಿ ಹೇಳಿದ್ದೀನಿ: ಒಂದು ವೇಳೆ ನನಗೆ ಕನ್ನಡದಲ್ಲಿ ಈ ವಿಷಯ ಹೊಳೆದಿದ್ದರೆ, ನನಗೆ ಕನ್ನಡದಲ್ಲೇ ಬರೀಬೇಕು ಅಂತನ್ನಿಸಿದ್ದರೆ, ಹೇಗೆ ಬರೀತಾಯಿದ್ದೆನೋ ಹಾಗೆ ಅನುವಾದ ಮಾಡಿದ್ದೀನಿ. ಉದಾಹರಣೆಗೆ, ೧೯೦೦ಳನೇ ಇಸವಿಯ ಒಬ್ಬ ಐರಿಷ್ ಕವಿಯ ಪದ್ಯ

ಅನುವಾದ ಮಾಡುವಾಗ, 'ಲಂಕೇಶ್ ಪತ್ರಿಕೆ ಕೂಡಾ ಹಾಗೆ ಹೇಳ್ತು' ಅಂತ ಬರೆದುಬಿಟ್ಟಿದ್ದೀನಿ. ಲಂಕೇಶ್ ಇರಲಿಲ್ಲ, ಪತ್ರಿಕೆಯೂ ಇರಲಿಲ್ಲ ಆ ಪದ್ಯ ಬರೆದಾಗ. ಆದರೆ ಜನ they can react. ಅವರು ಏನು ಹೇಳ್ತಾಯಿದ್ದಾರೆ ಅಂತ ತಿಳಿಯುತ್ತೆ. ಇನ್ನೊಂದು ಆರ್. ಎಸ್. ಥಾಮಸ್ ಅನ್ನುವ ಕವಿಯ ಪದ್ಯದ ಅನುವಾದ ಮಾಡುವಾಗ ಬರುತ್ತೆ : 'ಅಡಿಗರನ್ನೇ ಹೋಗಿ ಕೇಳಿ ಬೇಕಾದರೆ' ಅಂತ. ಅಡಿಗರಿಗೂ ಆರ್. ಎಸ್. ಥಾಮಸ್‌ಗೂ ಏನೂ ಸಂಬಂಧ ಇಲ್ಲ. ಅವರಿಬ್ಬರಿಗೂ ಕೊಂಡಿಯಾಗಿ ಮಧ್ಯೆ ನಾನಿದ್ದೆ. ನನ್ನ ಕಾವ್ಯದ ಬಗ್ಗೆ ಅಡಿಗರು ಹೇಳಿದ ಮಾತು ಮನಸ್ಸಿನಲ್ಲಿ ಚುರುಚುರು ಅನ್ನುತ್ತಿತ್ತು. ಅದನ್ನು ತೀರಿಸಿಕೊಳ್ಳಬೇಕೂಂತ ಏನು ಮಾಡಿದೆ... ಅಡಿಗರು ಒಂದು ಕಡೆ ಬರೆದಿದ್ದಾರೆ: 'ಇವನಿಗೆ ಎಷ್ಟೊಂದು ಬುದ್ಧಿ ಇದೆಯೆಂದರೆ ಏನೂ ಬೇಕಾದರೂ ಕಾವ್ಯ ಮಾಡಿಬಿಡುತ್ತಾನೆ, ಆದರೆ ಯೋಗ, ಆಯೋಗ ಏನೂ ಇಲ್ಲ' ಅಂತೇನೋ ಬರೆದಿದ್ದರು. ಹಾಗಾಗಿ ನಾನು ಅಡಿಗರನ್ನು ಪ್ರಸ್ತಾಪಿಸಿ 'ಅಡಿಗರನ್ನು ಹೋಗಿ ಕೇಳಿ ಬೇಕಾದರೆ' ಅಂತ ಬರೆದೆ. ಆ ಪುಸ್ತಕ ಅವರೇ ಬಿಡುಗಡೆ ಮಾಡಿದರು. ಅಡಿಗರು ಆಮೇಲೆ 'ಅಯ್ಯಾ ನನ್ನ ಮೇಲಿನ ಸಿಟ್ಟನ್ನು ಕಾವ್ಯದ ಮೂಲಕ ತೀರಿಸಿಕೊಳ್ತೀಯಲ್ಲಾ, ಅದೇ ಸಂತೋಷ ನನಗೆ' ಅಂದರು.

**ಜಿ. ಆರ್.** : ಆಗ ಅನುವಾದ ಯಾಕೆ ಮಾಡ ಬೇಕಾಗಿತ್ತು ? ನಿಮ್ಮದೇ ಒಂದು ಕವನ ಬರೆದು ಬಿಡಬಹುದಿತ್ತಲ್ಲಾ ?

**ಶರ್ಮ** : ಪೂರ್ತಿ ಅಷ್ಟು ಇಲ್ಲವಲ್ಲ ನನ್ನಲ್ಲಿ. 'Two Old poets meet in a restaurant and talk about poetry' ಎನ್ನುವ ಪದ್ಯವಿದೆ. ಅಲ್ಲಿ ಒಬ್ಬ ಕವಿಯ ಧೋರಣೆ ಅಡಿಗರದೇ ಇತ್ತು. ಅದಕ್ಕೆ ಇನ್ನೊಂದು dimension ; ಕನ್ನಡದಲ್ಲೇ ಓದಿಕೊಳ್ಳುವ ಹಾಗೆ ಒಂದು dimension ಗೊತ್ತಾಗಬೇಕು. ಬಿ. ಎಂ. ಶ್ರೀಯವರೇ ದಾರಿ ಹಾಕಿಕೊಟ್ಟರು. Bridge of sighs ಪದ್ಯದಲ್ಲಿ ಆಕೆಯನ್ನು ತಂದು ಒಂದು ಮಗುವನ್ನು ತಂದು, ಅದು ಅವಳ ಲಂಗ ಹಿಡಿದು ಎಳೆಯುವ ಒಂದು ಪಂಕ್ತಿಯನ್ನು ಹಾಕಿದ್ದಾರೆ. ಅದಕ್ಕಿಂತಲೂ ಹೆಚ್ಚಾಗಿ 'The old familiar faces' ಅನ್ನುವ ಚಾರ್ಲ್ಸ್ ಲ್ಯಾಂಬ್‌ನ ಪದ್ಯ. ಅಲ್ಲಿ ಮೂಲದಲ್ಲಿ ಅವಳು ಅವನನ್ನು ಪ್ರೀತಿಸುವುದನ್ನು ನಿಲ್ಲಿಸಿ ಬಿಟ್ಟಿರುತ್ತಾಳೆ. ಅದು ದುಃಖದ ವಿಷಯ. ಇಲ್ಲಿ ಬಿ. ಎಂ. ಶ್ರೀಕಂಠಯ್ಯನವರಿಗೆ ಆಗ ತಾನೇ ಹೆಂಡತಿ ಸತ್ತು ಹೋಗಿದ್ದರು. ಇದರಲ್ಲಿ ಅವಳು ಬಿಟ್ಟು ಹೋಗುವುದು ಅವೆಲ್ಲಾ ಇಲ್ಲ. ಅವನು ಸತ್ತು ಹೋಗುವುದೋ... ಯಾವುದೋ ಒಂದು ಪಂಕ್ತಿಯನ್ನೇ ಬರೆದುಬಿಟ್ಟಿದ್ದಾರೆ. ಬೇಂದ್ರೆಯವರು 'ಮೇಘದೂತ'ವನ್ನು ಅನುವಾದ ಮಾಡುವಾಗ ಕಾಳಿದಾಸನಿಗೆ ಇನ್ನೊಂದು ಆಯಾಮ ಕೊಡುವ ಹಾಗೆ ಒಂದು ಪಂಕ್ತಿಯನ್ನು ಸೇರಿಸಿಬಿಟ್ಟಿದ್ದಾರೆ. ಇದನ್ನು ತಪ್ಪು ಅನ್ನುವ ಜನರೂ ಇರ್ತಾರೆ. ತಪ್ಪಲ್ಲ, ಸಹಜ ಅನ್ನುವ ಜನರೂ ಇರ್ತಾರೆ. ಬೇಂದ್ರೆಯವರೇ ಬಿ. ಎಂ. ಶ್ರೀಯವರ ವಿಧಾನದ ಬಗ್ಗೆ ಒಂದು ಕಡೆ ಹೇಳಿದ್ದಾರೆ : 'ಎಲ್ಲಿ ಮೂಲ ಕವಿಯ ರಸದ ಜೊತೆಗೆ ಅನುವಾದಕನ ಕಾವ್ಯಾಭಿವ್ಯಕ್ತಿಯ ರಸವೂ ಸೇರಿಕೊಳ್ಳುತ್ತದೋ ಆಗ ಮೂರನೇ ಒಂದು ಭಾಗ ಬರುತ್ತೆ' ಅಂತ. ಯಾಕಾಗಬಾರದು ?

**ರಾಜು** : ನೀವು Cultural translation ಬಗ್ಗೆ ಬರೆದಿದ್ದೀರ ಒಂದು ಕಡೆ...

**ಶರ್ಮ** : Cultural translationನಲ್ಲಿ ಇನ್ನೂ ಕಷ್ಟ ಆಗುತ್ತೆ. ಒಂದು ಕನ್ನಡ ಪದ್ಯವನ್ನು ಹಿಂದಿಗೆ ಅನುವಾದ ಮಾಡುವುದು ಸುಲಭವಾಗಿರುವಷ್ಟು ಇಂಗ್ಲಿಷ್‌ಗೆ ಅನುವಾದ ಮಾಡುವುದು ಸುಲಭ ಅಲ್ಲ.

**ಪ್ರಹ್ಲಾದ್** : ಆ ತರಹದ ಅನುವಾದದ ಬಗ್ಗೆ ಇನ್ನೊಂದು ಪ್ರಶ್ನೆ ಬರುತ್ತೆ, ನಮಗೆ ಇಂಗ್ಲಿಷ್ ಮತ್ತು ಬೇರೆ ಬೇರೆ ಭಾಷೆಗಳ ಅನುವಾದ ಬಂದಷ್ಟು ಪ್ರಮಾಣದಲ್ಲಿ ಸುತ್ತಲಿನ ಭಾಷೆಗಳ interaction ಸಾಧ್ಯವೇ ಆಗಲಿಲ್ಲ ಅನ್ನೋದು...

**ಶರ್ಮ** : ಅದಕ್ಕೆ ಒಂದು body ಇಲ್ಲ, ಒಂದು establishment ಇಲ್ಲ.

**ಜಿ. ಆರ್.** : ಈಚೆಗೆ ಸ್ವಲ್ಪ ಹೆಚ್ಚು ಹೆಚ್ಚು ಬರ್ತಾಯಿದೆ.

**ರಾಜು** : National Book Trustನವರು ಮಾಡ್ತಾ ಇರ್ತಾರೆ.

**ಪ್ರಹ್ಲಾದ್** : ಇಂಗ್ಲಿಷ್‌ನಲ್ಲಿ ಯಾವುದೋ ಒಂದು ಪುಸ್ತಕ ಬಂತು ಅಂದ್ರೆ ಅದರ ಅನುವಾದಗಳು, ಬರುವ ಹಾಗೆ, ನಮ್ಮ ಪಕ್ಕದ ರಾಜ್ಯದ ಒಬ್ಬ ತೆಲುಗು ಕವಿ ಬರೆದಂಥ, ಇಲ್ಲಾ ತಮಿಳು ಕವಿ ಮಾಡಿದಂತ ಒಂದು ಒಳ್ಳೇ ಪುಸ್ತಕದ ಬಗ್ಗೆ....

**ಶರ್ಮ** : ನಾನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ 'ಕನ್ನಡದ ಇಪ್ಪತ್ತು ಕತೆಗಳು' ಅಂತ ಮಾಡಿಕೊಟ್ಟಿದ್ದು ಮಲೆಯಾಳಂಗೆ, ತೆಲುಗಿಗೆ ಹೋಯ್ತು. ಮಲೆಯಾಳದ ಇಪ್ಪತ್ತು ಕತೆಗಳು ಕನ್ನಡಕ್ಕೆ, ತೆಲುಗಿಗೆ, ತಮಿಳಿಗೆ ಹೋಯ್ತು. ಹೀಗೆ ಮಾಡಿದೆ. ಒಂದು ತಿಂಗಳ ಅನುವಾದ. ನಾಲ್ಕು ಪುಸ್ತಕಗಳು ಕನ್ನಡಕ್ಕೆ ಬಂದವು. ಅಂದರೆ ೮೦ ಕತೆಗಳು ಕನ್ನಡಕ್ಕೆ ಸೇರಿಕೊಂಡವು. ಇದನ್ನು ಮುಂದುವರಿಸಿಕೊಂಡುಹೋಗಿ ಎಂದು ನಾನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಲಹೆ ಕೊಟ್ಟಿದ್ದೆ. ಕಾವ್ಯದಲ್ಲಿ ಇದನ್ನು ಮಾಡಬಹುದು. ಒಂದು ಐವತ್ತು ಪದ್ಯಗಳನ್ನು ಹಾಗೆ ಮಾಡಬಹುದು. ■

# ಈ ವರ್ಷದ ವಿಶೇಷ ಏನು ?

**ಹೊ**ಸ ವರ್ಷದ ಶುಭಾಶಯಗಳು. ನಭಾವಲೋಕನದ ಈ ಶೀರ್ಷಿಕೆ ಫಲಜ್ಯೋತಿಷಿಗಳಿಂದ ಎರವಲು ಪಡೆದದ್ದು. ನೆನಪಿರಲಿ – ಶೀರ್ಷಿಕೆ ಮಾತ್ರ ಎರವಲು ಅಷ್ಟೇ. ವರ್ಷದುದ್ದಕ್ಕೂ ಖಗೋಳೀಯ ಘಟನೆಗಳತ್ತ ಓದುಗರನ್ನು ಆಕರ್ಷಿಸುವುದಷ್ಟೇ ಇದರ ಉದ್ದೇಶ.

ಮೊದಲು ಜನವರಿಯ ಆಕಾಶದತ್ತ ಗಮನ ಹರಿಸೋಣ. ಶುಭ್ರವಾದ ನೀಲಿ ಆಕಾಶದಲ್ಲಿ ಗಮನ ಸೆಳೆಯುವ ಚುಕ್ಕೆ ಬೆಳ್ಳಿ. ಕಳೆದ ತಿಂಗಳು ಇದ್ದಕ್ಕಿದ್ದಂತೆ (?) ಪ್ರತ್ಯಕ್ಷವಾದ ಇದು ಈಗ ಎಲ್ಲರ ಗಮನ ಸೆಳೆದಿದೆ. ಸೂರ್ಯಾಸ್ತಕ್ಕೆ ಮುಂಚೆಯೇ ಇದನ್ನು ಹುಡುಕಬಲ್ಲಿರಿ. ಆಕಾಶ ಶುಭ್ರವಾಗಿದೆ ಎಂಬುದಕ್ಕೆ ಇದೇ ಸಾಕ್ಷಿ.

ಪೂರ್ವ ದಿಗಂತದ ಅಂಚಿನಲ್ಲಿ ಕಾಣುವ ಇನ್ನೊಂದು ಪ್ರಕಾಶಮಾನವಾದ ಚುಕ್ಕೆ ಸಿರಿಯಸ್. ಲುಬ್ಧಕ ಎಂಬುದು ನಾವಿಟ್ಟಿರುವ ಹೆಸರು. ಸೂರ್ಯಾಸ್ತವಾಗುವಾಗ ಇದು ಉದಯಿಸುತ್ತಿದ್ದರೆ ಮಳೆಗಾಲದ ಆರಂಭ ಎಂದು ಕೆಲವರು ನಂಬಿದ್ದರು. ಮಳೆಗಾಲವನ್ನು, ಮುಖ್ಯವಾಗಿ ನೈಲ್ ನದಿಯ ಪ್ರವಾಹವನ್ನು, ಮುಂಚಿತವಾಗಿ ಇದು ತಿಳಿಸಿಕೊಡುತ್ತಿದ್ದ ಕಾರಣ ಇದನ್ನು ಕಾವಲು ನಾಯಿ ಎಂದು ಪರಿಗಣಿಸಿದರು. ನಾಯಿ ನಕ್ಷತ್ರ (Dog star) ಎಂದೇ ಇದರ ಹೆಸರು. ಇಟ್ಟವರು ಯಾರೆಂದು ಸುಲಭವಾಗಿ ಊಹಿಸಬಹುದು. ಈಗ ಎಲ್ಲಿ ಮಳೆಗಾಲವೋ ಅದೇ ಭೂಭಾಗದ ಜನ – ನೈಲ್ ನದಿಯ ಪ್ರವಾಹವನ್ನು ಎದುರಿಸಬೇಕಾದ ಇಜಿಪ್ಷಿಯನ್ನರು.




ಲುಬ್ಧಕ ಎಂಬ ಪದದ ಮೂಲಕ್ಕೊಂದು ಕಥೆಯಿದೆ. ಪ್ರಜಾಪತಿ ತನ್ನ ಮಗಳಾದ ರೋಹಿಣಿಯನ್ನೇ ಕಾಮಿಸಿದ. ಹೆಣ್ಣು ಜಿಂಕೆಯಾಗಿ ಆಕೆ ಓಡಾಡುತ್ತಿದ್ದುದನ್ನು ಕಂಡು ತಾನೂ ''ಮೃಗ'' – ಜಿಂಕೆಯ ರೂಪ ತಳೆದು ಹಿಂಬಾಲಿಸಿದ. ಇದನ್ನು ಕಂಡು ಕೆರಳಿದ ಶಿವ 'ಲುಬ್ಧಕ'ನಾದ. ಅವನಿಂದ ಹೊರಟ ಬಾಣ ಪ್ರಜಾಪತಿಯ ಶಿರವನ್ನು ಕೆಡವಿತು. ಅದೇ 'ಮೃಗಶಿರಾ' ಆಯಿತು. ಒರೈಯನ್ ನಕ್ಷತ್ರಪುಂಜದಲ್ಲಿ ಬೇಟೆಗಾರನನ್ನು ಕಲ್ಪಿಸಿಕೊಂಡು ತಲೆಯ ಭಾಗವನ್ನು ಊಹಿಸಿ. ಅಲ್ಲಿದೆ ಮೃಗಶಿರಾ. ಒರೈಯನ್‌ನ ಮಧ್ಯಭಾಗದಲ್ಲಿರುವ ಮೂರು ಚುಕ್ಕೆಗಳೇ ಶಿವ ಧನುಸ್ಸಿನಿಂದ ಹಾರಿ ಬಂದ ಬಾಣ.

ಕಥೆ ಹಾಗಿರಲಿ. ಆಕಾಶದ ಈ ಭಾಗದ ಸುಂದರ ನೋಟದತ್ತ ಗಮನ ಹರಿಸಿ. ಆಕಾಶ ಗಂಗೆ – ನಮ್ಮ ಗ್ಯಾಲಕ್ಸಿಯ ಈ ಭಾಗದಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚು. ದೂರದರ್ಶಕದಿಂದ ಕಂಡಿರಾದರೆ, ನೆಬ್ಯುಲಗಳು, ನಕ್ಷತ್ರ ಗುಚ್ಛಗಳೂ ನೋಡಲು ಸಿಗುವುವು. ಇದಕ್ಕೆ ತದ್ವಿರುದ್ಧವಾಗಿ ನಕ್ಷತ್ರಗಳೇ ಇಲ್ಲದೆ ಬರಡು ಎನ್ನಿಸುವ ದಕ್ಷಿಣದಲ್ಲಿ ಹೊಳೆಯುವ ಏಕಾಂಗಿ ನಕ್ಷತ್ರ ಫಾಮಲ್ ಹೌಟ್ – ಇದು ವೈತರಣೀ (ಎರಿಡಾನಿಸ್) ಪುಂಜಕ್ಕೆ ಸೇರಿದ್ದು. ಒರೈಯನ್‌ನ ಕಾಲಿನ ಭಾಗದಿಂದ ಹೊರಡುವ ಈ ನದಿಯನ್ನು ಗುರುತಿಸಲು ನಕ್ಷೆಯನ್ನು ಬಳಸಬೇಕಾಗುವುದು.

ನೆತ್ತಿಯಲ್ಲಿ ಪೆಗಸಸ್ (ನಕುಲ)ನ ಚೌಕ. ಚೌಕದಿಂದ ಪಕ್ಕಕ್ಕೆ ಮೇಷ ರಾಶಿಯತ್ತ ಚಲಿಸುತ್ತಿರುವುದು ಮಂಗಳ ಗ್ರಹ. ಇದರ ಪ್ರಕಾಶ ಕುಂದಿದೆಯಾದರೂ ಗ್ರಹ ಎಂದು ಗುರುತಿಸಬಹುದು. ಸಂಜೆಯಾಗುತ್ತಿದ್ದಂತೆ ಉದಯಿಸುವ ಶನಿಗ್ರಹ ಸಾಕಷ್ಟು ಪ್ರಕಾಶಮಾನವಾಗಿದೆ. ಮಿಥುನರಾಶಿಯಲ್ಲಿರುವ ಇದನ್ನು ರಾತ್ರಿ ಇಡೀ ನೋಡಬಹುದು. ಸುಮಾರು ೯ ಗಂಟೆಯ ಹೊತ್ತಿಗೆ ಗುರು ಗ್ರಹವನ್ನು ಪೂರ್ವದ ಅಂಚಿನಲ್ಲಿ ನೋಡಬಹುದು. ಹುಡುಕುವುದು ಕಷ್ಟವೇನಿಲ್ಲ. ಸಿಂಹರಾಶಿಯ ಅಂಚಿನಲ್ಲಿದೆ.

ದೀರ್ಘವೃತ್ತದ ಕಕ್ಷೆಯ ಕಾರಣ ಭೂಮಿ ವರ್ಷಕ್ಕೊಮ್ಮೆ ಸೂರ್ಯನನ್ನು ಕನಿಷ್ಠ ದೂರದಲ್ಲಿ ಹಾಯುವುದಲ್ಲವೇ ? ಈ ಘಟನೆಯ ದಿನ, ಅಂದರೆ ಭೂಮಿ ಪುರರವಿ ಎಂಬ ಬಿಂದುವನ್ನು ಹಾಯುವ ದಿನ ಜನವರಿ ೪. ಈ ದೂರದ ವ್ಯತ್ಯಾಸದ ಕಾರಣ ಋತುಮಾನಗಳುಂಟಾಗುತ್ತವೆ ಎಂಬ ತಪ್ಪು ತಿಳುವಳಿಕೆಯನ್ನು ತಿದ್ದಿಕೊಳ್ಳಲು ಇದಕ್ಕಿಂತ ಉತ್ತಮ ಪ್ರಾತ್ಯಕ್ಷಿಕೆ ಬೇಕಿಲ್ಲ. (ದೂರ ಕನಿಷ್ಠವಿದೆ, ಆದರೆ ನಮಗೀಗ ಚಳಿಗಾಲ)

ಖಗೋಳ ದಿನಚರಿ ಎಂದು ಕೊಟ್ಟಿರುವ ಪಟ್ಟಿಯನ್ನು ಗಮನಿಸಿ. ಗ್ರಹಗಳನ್ನು ಗುರುತಿಸಲು, ಛಾಯಾ ಚಿತ್ರ ತೆಗೆಯಲು ಒಳ್ಳೆಯ ಅವಕಾಶಗಳನ್ನು ಗುರುತಿಸಿ. ೬ರಂದು ಚಂದ್ರನ ಫೋಟೋ ತೆಗೆದಿರಾದರೆ ಪಕ್ಕದಲ್ಲಿ ಶನಿಗ್ರಹವೂ ಮೂಡುವುದು. ಆದರೆ ಹುಣ್ಣಿಮೆಗೆ ಹಿಂದಿನ ದಿನವಾದದ್ದರಿಂದ ಚಂದ್ರ over-expose ಆಗಿಬಿಡಬಹುದು. ಶನಿಗ್ರಹವನ್ನು ಗುರುತಿಸಲು ಇದು ಒಳ್ಳೆಯ ಅವಕಾಶ. ೧೯ರಂದು ಚಂದ್ರ ಮತ್ತು ಬುಧಗಳನ್ನು ಒಟ್ಟಿಗೇ ಸೆರೆಹಿಡಿಯುವ ಅವಕಾಶವಿದೆ. ಈ ಚಿತ್ರ ಚೆನ್ನಾಗಿ ಬರುವುದು. ಏಕೆಂದರೆ ಸಣ್ಣ ಗೆರೆಯಂತಹ ಬಾಲಚಂದ್ರ ಇದು. ೧೨ರಂದು ಚಂದ್ರ ಮತ್ತು ಗುರು ಹೀಗೆ ಒಂದೇ ಫೋಟೋದಲ್ಲಿ ಬರುವ (ಬೀಳುವ ?) ಅವಕಾಶ ಇದೆ. ೨೪ರಂದು ಸಂಜೆಗೆಂಪಿನಲ್ಲಿ ಚಂದ್ರ ಮತ್ತು ಶುಕ್ರರನ್ನು ಒಟ್ಟಿಗೇ ಸೆರೆಹಿಡಿಯಬಹುದು.

ಈ ವರ್ಷದುದ್ದಕ್ಕೂ ಗ್ರಹಗಳು ಯಾವ ಹೊತ್ತಿನಲ್ಲಿ ಕಾಣುವುವು ಎಂದು ತಿಳಿಯೋಣ. ಬುಧಗ್ರಹ ಆರು ಬಾರಿ ಸಂಜೆಯಿಂದ ಮುಂಜಾವಿಗೆ, ಮುಂಜಾವಿನಿಂದ ಸಂಜೆಗೆ ಜಾರಲಿದೆ. ಮಾರ್ಚ್‌ನಲ್ಲಿ ಸಂಜೆ ಶುಕ್ರದೊಡನೆ ಒಳ್ಳೆಯ ನೋಟ ಒದಗಿಸಲಿದೆ. ಶುಕ್ರಗ್ರಹ ಜೂನ್‌ವರೆಗೂ ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದು ಆನಂತರ ಮುಂಜಾವಿಗೆ ಹಾಜರಾಗಲಿದೆ. ಹೀಗೆ ಅದು 'ದಿಕ್ಕು' ಬದಲಿಸುವ ಕುರುಹಾಗಿ ಒಂದು ವಿಶೇಷ ಘಟನೆ ಜೂನ್ ೮ರಂದು ನಡೆಯಲಿದೆ. ಅದು ಸೂರ್ಯನ ಮುಂದೆ ಹಾದು ಹೋಗಲಿರುವ (ಸೂರ್ಯಗ್ರಹಣದಂತಹ) ಈ ಘಟನೆಗೆ ಸಂಕ್ರಮಣ ಎಂಬ ಹೆಸರಿದೆ. ನಿಮ್ಮ ದೂರದರ್ಶಕಗಳನ್ನು ಈಗಲೇ ಸಜ್ಜಾಗಿಟ್ಟುಕೊಳ್ಳಿ. ಸೂರ್ಯಬಿಂಬವನ್ನು ಸ್ಪುಟವಾಗಿ ಕಾಣುವಂತೆ ಗೋಡೆಯ ಮೇಲೆ ಮೂಡಿಸಲು ಪ್ರಯತ್ನಿಸಿ. ಸೌರ ಕಲೆಗಳನ್ನು ಗುರುತಿಸಲು ಸಾಧ್ಯವಾದರೆ ಜೂನ್

**ಡಾ|| ಬಿ. ಎಸ್. ಶೈಲಜಾ**

ಲ್ಲರಂದು ಶುಕ್ರಗ್ರಹವನ್ನು ಸ್ಫುಟವಾಗಿ ಗುರುತಿಸಬಲ್ಲಿರಿ.

ದಿನೇ ದಿನೇ ಕ್ಷೀಣಿಸುತ್ತಿರುವ ಮಂಗಳಗ್ರಹ ಆಗಸ್ಟ್‌ವರೆಗೂ ಸಂಜೆಯ ಆಕಾಶದಲ್ಲೇ ಕಾಣುತ್ತದೆ. ಅದು ಭೂಮಿಯಿಂದ ದೂರ ಸರಿಯುತ್ತಿರುವುದೇ ಕ್ಷೀಣವಾಗುತ್ತಿರಲು ಕಾರಣ. ಏಪ್ರಿಲ್-ಮೇ ತಿಂಗಳಲ್ಲಿ ಶುಕ್ರಗ್ರಹದ ಜೊತೆಗೂಡುವ ಇದು ಅಕ್ಟೋಬರ್ ಹೊತ್ತಿಗೆ ಬೆಳಗಿನ ಜಾವ ಕಾಣತೊಡಗುತ್ತದೆ.

ಈಗ ರಾತ್ರಿ ಇಡೀ ಕಾಣುತ್ತಿರುವ ಶನಿಗ್ರಹ ಈ ವರ್ಷ ಪೂರ್ತಿ ಸಾಕಷ್ಟು ಪ್ರಕಾಶಮಾನವಾಗಿ ಕಾಣುತ್ತದೆ. ದೂರದರ್ಶಕದಿಂದ ಅದರ ಉಂಗುರಗಳು ಮತ್ತು ದಕ್ಷಿಣ ಗೋಳಾರ್ಧ ಸ್ಫುಟವಾಗಿ ಕಾಣುತ್ತವೆ. ೧೯೯೭ರಲ್ಲಿ ಹಾರಿದ ಕ್ಯಾಸಿನಿ ಎಂಬ ಬಾಹ್ಯಾಕಾಶ ನೌಕೆ ಈ ವರ್ಷ ಶನಿಯನ್ನು ಮುಟ್ಟಲಿರುವುದರಿಂದ 'ಶನಿ' ಮತ್ತು ಕ್ಯಾ'ಸಿನಿ' ಎರಡೂ ಸುದ್ದಿಯಲ್ಲಿರುತ್ತವೆ.

ದೂರದರ್ಶಕದಿಂದ ಸ್ಫುಟವಾಗಿ ಕಾಣುವ ಇನ್ನೊಂದು ಗ್ರಹ ಗುರು. ವರ್ಷದುದ್ದಕ್ಕೂ ಪ್ರಕಾಶಮಾನವಾಗಿ ಕಾಣುವ ಇದು ಮಾರ್ಚ್-ಏಪ್ರಿಲ್‌ನಲ್ಲಿ ಗರಿಷ್ಠ ಪ್ರಕಾಶ ಪಡೆಯುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಈ ಚಳಿಗಾಲ ಗ್ರಹವೀಕ್ಷಣೆಗೆ ಅತ್ಯಂತ ಸೂಕ್ತವಾಗಿದೆ. ನಾಲ್ಕು ಗ್ರಹಗಳು ಸಂಜೆಯಲ್ಲೇ ನೋಡಲು ಸಿಗುತ್ತವೆ.

ಇಷ್ಟೇ ಅಲ್ಲ; ಈ ವರ್ಷ ಏಪ್ರಿಲ್-ಮೇ ತಿಂಗಳಲ್ಲಿ ಎರಡು ಧೂಮಕೇತುಗಳೂ ಬರಿಗಣ್ಣಿಗೆ ಕಾಣುವಷ್ಟು ಪ್ರಕಾಶ ಪಡೆಯುವ ಸಾಧ್ಯತೆ ಇದೆಯೆಂದು ಅವುಗಳನ್ನು ಗಮನಿಸುತ್ತಾ ಬಂದಿರುವ ವಿಜ್ಞಾನಿಗಳ ನಿರೀಕ್ಷೆ. ಇವುಗಳಲ್ಲೊಂದು ನೀಟ್ (NEAT) ಎಂಬ ಹೆಸರಿನದು ದಕ್ಷಿಣದ ಅಂಚಿನಲ್ಲಿ ರಾತ್ರಿ ಇಡೀ ನೋಡಲು ಸಿಗುವುದು. ಇದೊಂದು ಅಪೂರ್ವ ಅವಕಾಶ. ಲೀನಿಯರ್ (LINEAR) ಎಂಬ ಹೆಸರಿನ ಇನ್ನೊಂದು ಏಪ್ರಿಲ್-ಮೇನಲ್ಲಿ ಬೆಳಗಿನ ಜಾವ ಕಂಡರೆ, ಜೂನ್‌ನಲ್ಲಿ ಸಂಜೆ ಕಾಣುವುದು. ಧೂಮಕೇತುಗಳನ್ನು ನೋಡಿ ಬಹಳ ವರ್ಷಗಳಾದುವಲ್ಲವೇ? ಈ ನಿರೀಕ್ಷೆ ಹುಸಿಯಾಗದಿರಲಿ ಎಂದು ಆಶಿಸೋಣ.

**ಖಗೋಳ ದಿನಚರಿ**

ಜನವರಿ ೪ ಚಂದ್ರ-ಭೂಮಿ ನಡುವಿನ ದೂರ ಗರಿಷ್ಠ
ಭೂಮಿ-ಸೂರ್ಯರ ನಡುವಿನ ದೂರ ಕನಿಷ್ಠ
ಗುರುಗ್ರಹದ ಹಿನ್ನಡೆಯ ಆರಂಭ

೬ ಚಂದ್ರ ಮತ್ತು ಶನಿಗ್ರಹದ ನಡುವೆ ಕನಿಷ್ಠ ಕೋನೀಯ ಅಂತರ (ಎರಡೂ ಪಕ್ಕಪಕ್ಕದಲ್ಲೇ ಕಾಣುವುವು)

೭ ಹುಣ್ಣಿಮೆ ೨೧ : ೧೦ಕ್ಕೆ

೧೨ ಚಂದ್ರ ಮತ್ತು ಗುರುಗ್ರಹದ ನಡುವೆ ಕನಿಷ್ಠ ಕೋನೀಯ ಅಂತರ

೧೪ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)

೧೭ ಬುಧಗ್ರಹ ಗರಿಷ್ಠ ಎತ್ತರದಲ್ಲಿ ಬೆಳಗಿನ ಜಾವ ಕಾಣುವುದು

೧೯ ಬುಧ ಮತ್ತು ಚಂದ್ರ ಗ್ರಹದ ನಡುವೆ ಕನಿಷ್ಠ ಅಂತರ; ಚಂದ್ರ ಮತ್ತು ಭೂಮಿ ನಡುವೆ ಕನಿಷ್ಠ ದೂರ

೨೨ ಅಮಾವಾಸ್ಯೆ ೨ : ೩೩ಕ್ಕೆ

೨೪ ಶುಕ್ರ ಮತ್ತು ಚಂದ್ರರ ನಡುವೆ ಕನಿಷ್ಠ ಅಂತರ

೨೭ ಮಂಗಳ ಮತ್ತು ಚಂದ್ರರ ನಡುವೆ ಕನಿಷ್ಠ ಅಂತರ

೨೯ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ)

೩೧ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ
ಬೆಂಗಳೂರು - ೫೬೦ ೦೦೧



ಸ್ಥಾಪನೆ: 1946

ಗಾಂಧೀಜಿಯವರ ಕರೆ, ನೆಹರೂರವರ ವೈಜ್ಞಾನಿಕ ದೃಷ್ಠಿಕೋನ
ಸ್ವಾತಂತ್ರ್ಯ ಹೋರಾಟಗಾರರ ಶ್ರಮ -ತ್ಯಾಗ
ಸಹ್ಯಾದ್ರಿ ಮಡಿಲಿನ ಮಲೆನಾಡು ಪ್ರಾಂತದ ವಿದ್ಯಾಕ್ಷೇತ್ರ.

# ರಾಷ್ಟ್ರೀಯ ಶಿಕ್ಷಣ ಸಮಿತಿ (ರಿ.)


**ಬಾಲರಾಜ್ ಅರಸ್ ರಸ್ತೆ ಶಿವಮೊಗ್ಗ 577201**

**ಫೋನ್: 273469, 272178. ಫ್ಯಾಕ್ಸ್: 08182-222450**

ವೆಬ್‌ಸೈಟ್:www.nes-shimoga.org www.jnnce.ac.in ಇ-ಮೈಲ್:nescec@sancharnet.in


1. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ. 1946
2. ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ. 1954
3. ರಾಷ್ಟ್ರೀಯ ಹಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ. 1956
4. ರಾಷ್ಟ್ರೀಯ [illegible] ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಕೋಣಂದೂರು. 1960
5. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಬಿ.ಆರ್. ಪ್ರಾಜೆಕ್ಟ್. 1962
6. ಜಯಪ್ರಕಾಶ್‌ನಾರಾಯಣ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಶಿವಮೊಗ್ಗ. 1963
7. ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ, ಶಿವಮೊಗ್ಗ. 1963
8. ರಾಷ್ಟ್ರೀಯ ಪ್ರೌಢಶಾಲೆ, ಚೀಲೂರು. 1964
9. ರಾಷ್ಟ್ರೀಯ ಪ್ರೌಢಶಾಲೆ, ಕುಂಸಿ. 1964
10. ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪ್ರೌಢಶಾಲೆ, ಬೆಳಗುತ್ತಿ. 1964
11. ಶ್ರೀ ಪದ್ಮಾಂಬ ಪ್ರೌಢಶಾಲೆ, ಹುಂಚ. 1964
12. ಕಮಲಾ ನೆಹರು ಸ್ಮಾರಕ , ರಾಷ್ಟ್ರೀಯ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಿಳಾ ಕಾಲೇಜು, ಶಿವಮೊಗ್ಗ.1965
13. ಆಚಾರ್ಯ ತುಳಸಿ ರಾಷ್ಟ್ರೀಯ ವಾಣಿಜ್ಯ ಕಾಲೇಜು, ಶಿವಮೊಗ್ಗ. 1966
14. ರಾಷ್ಟ್ರೀಯ ಕಾನೂನು ಕಾಲೇಜು, ಶಿವಮೊಗ್ಗ. 1966
15. ರಾಷ್ಟ್ರೀಯ ಸಂಜೆ ವಾಣಿಜ್ಯ ಕಾಲೇಜು, ಶಿವಮೊಗ್ಗ. 1968
16. ರಾಷ್ಟ್ರೀಯ ಔಷಧ ಮಹಾವಿದ್ಯಾಲಯ, ಶಿವಮೊಗ್ಗ. 1969
17. ಶರಾವತಿ ರಾಷ್ಟ್ರೀಯ ಪ್ರೌಢಶಾಲೆ, ಹರಿಗೆ. 1969
18. ಶಾರದಾದೇವಿ ಬಾಲಿಕ ಪ್ರೌಢಶಾಲೆ , ಶಿವಮೊಗ್ಗ. 1970
19. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು,ಶಿವಮೊಗ್ಗ. 1972
20. ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು. ಶಿವಮೊಗ್ಗ. 1972
21. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಕೋಣದೂಂರು. 1972
22. ಜವಾಹರಲಾಲ್‌ನೆಹರು ರಾಷ್ಟ್ರೀಯ ತಾಂತ್ರಿಕ ಮಹಾವಿದ್ಯಾಲಯ, ಶಿವಮೊಗ್ಗ. 1980
23. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬಿ.ಆರ್.ಪ್ರಾಜೆಕ್ಟ್. 1983
24. ಶರಾವತಿ ಪ್ರಥಮ ದರ್ಜೆ ಕಾಲೇಜು, ಕೋಣಂದೂರು. 1983
25. ರಾಷ್ಟ್ರೀಯ ಕಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ 1983
26. ಇಂಡಿಯನ್ ಪ್ರೌಢಶಾಲೆ, ಶಿವಮೊಗ್ಗ. 1983
27. ಜಯಪ್ರಕಾಶನಾರಾಯಣ ಪದವಿ ಪೂರ್ವ ಕಾಲೇಜು, ಶಿವಮೊಗ್ಗ. 1984
28. ಎಸ್.ಆರ್.ನಾಗಪ್ಪ ಶೆಟ್ಟಿ ಸ್ಮಾರಕ ರಾಷ್ಟ್ರೀಯ ಅನ್ವಯಿಕ ವಿಜ್ಞಾನ ಕಾಲೇಜು, ಶಿವಮೊಗ್ಗ. 1991
29. ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬೆಳಗುತ್ತಿ. 1994
30. ಎನ್.ಇ.ಎಸ್. ಕಂಪ್ಯೂಟರ್ ಶಿಕ್ಷಣ ಕೇಂದ್ರ, ಶಿವಮೊಗ್ಗ. 1998
31. ರಾಷ್ಟ್ರೀಯ ಸ್ವತಂತ್ರ ವಸತಿ ವಿಜ್ಞಾನ ಕಾಲೇಜು, ಕೋಣಂದೂರು. 2000



Ramadhyani / S.B.WEB-VISION

ಎಂ. ಬಿ. ಲಾಲ್

# ಮಾಧ್ಯಮಗಳು ಬಡತನವನ್ನು ತೊಲಗಿಸಿರುವ ಬಗೆ

**ಇಂದಿನ ಪಂಚತಾರಾ ಸಮಾಜದ ಮನರಂಜನೆಗೆ ಇಷ್ಟು ಸಾಲದೆನ್ನುವಂತೆ ನಾವು ಪ್ರತಿದಿನವೂ ಪತ್ರಿಕೆಗಳಲ್ಲಿ ಹಲವಾರು ಪುಟಗಳ ಪುರವಣಿಗಳನ್ನು ಕಾಣುತ್ತೇವೆ. ಅವುಗಳ ತುಂಬ ಇಂದಿನ ಸಿನಿಮಾ ಪ್ರಪಂಚದ ಹಾಗೂ ದೂರದರ್ಶನದ ನಾಯಕ ನಾಯಕಿಯರ ಕುರಿತ ಇತಿಮಿತಿ ಇಲ್ಲದ ಹೊಗಳಿಕೆಗಳೇ ಹಾಗೂ ಅವರ ನಾನಾ ಭಂಗಿಗಳ ಆಕರ್ಷಕ ಛಾಯಾಚಿತ್ರಗಳೇ ತುಂಬಿರುತ್ತವೆ. ಇವುಗಳ ಜೊತೆಗೆ ಡಿಸೈನರ್ ಭವನಗಳು, ಡಿಸೈನರ್ ಉಡುಪುಗಳು, ಡಿಸೈನರ್ ಪೀಠೋಪಕರಣಗಳು ಹಾಗೂ ಚಾಕು ಚಮಚಗಳು, ಡಿಸೈನರ್ ಅಂಗಡಿಗಳು, ಇತ್ಯಾದಿಗಳ ಕುರಿತ ಪುರವಣಿಗಳೂ ಇರುತ್ತವೆ. ಬಹುವೇಳೆ ಪತ್ರಿಕೆಯ ಒಂದು ದೊಡ್ಡ ವಿಭಾಗವನ್ನೇ ಸೌಂದರ್ಯ ವ್ಯಾಪಾರಕ್ಕೆ ಮೀಸಲು ಇರಿಸಲಾಗಿರುತ್ತದೆ. ಭಾರತವು ಸಂಪತ್ಸಮೃದ್ಧತೆಯ ಹೊಸಯುಗ ಪ್ರವೇಶಿಸಿದೆ ಅನ್ನುವುದಕ್ಕೆ ಇದಕ್ಕಿಂತ ಹೆಚ್ಚು ಉತ್ತಮವಾದ ಸಾಕ್ಷ್ಯ ಬೇಕೆ ?**

ಕಳೆದ ಶತಮಾನದ ಅರವತ್ತರ ದಶಕದ ಆರಂಭಿಕ ವರ್ಷಗಳಲ್ಲಿ ಭಾರತದ ಪಾರ್ಲಿಮೆಂಟಿನಲ್ಲಿ ನಡೆದ ಘಟನೆಯೊಂದು ನನಗಿನ್ನೂ ಚೆನ್ನಾಗಿ ನೆನಪಿನಲ್ಲಿದೆ. ಅದು ಜವಾಹರಲಾಲ ನೆಹರೂ ಮತ್ತು ರಾಮಮನೋಹರ ಲೋಹಿಯಾ ಇನ್ನೂ ಜೀವಂತವಾಗಿದ್ದ ಕಾಲ. ಆಗ ಲೋಹಿಯಾರವರು ನೆಹರೂರವರಿಗೆ ಒಂದು ಸವಾಲು ಹಾಕಿದ ಘಟನೆ ಅದು. ೧೯೬೩ರ ಘಟನೆ : ನೆಹರೂರವರು ಲೋಕಸಭೆಯಲ್ಲಿ ಸ್ವಾತಂತ್ರ್ಯಾನಂತರ ರಾಷ್ಟ್ರ ಸಾಧಿಸಿದ ಸಾಧನೆಗಳ ಬಗೆಗೆ ಮಾತನಾಡುತ್ತಿದ್ದರು. ಆಗ ಸರ್ವಾಂತರ್ಯಾಮಿ ಎನಿಸಿದ್ದ ಲೋಹಿಯಾರವರು ಕೊನೆಸಾಲಿನ ಬೆಂಚುಗಳ ಹಿಂದಿದ್ದ ಬಾಗಿಲಿನಲ್ಲಿ ಕಾಣಿಸಿಕೊಂಡು ''ಪಂಡಿತ್‌ಜೀ, ನಿಮ್ಮ ರಾಜ್ಯದಲ್ಲಿ ಹಳ್ಳಿಗಳಲ್ಲಿ ಬಹುಮಟ್ಟಿಗಿನ ಜನ ಇನ್ನೂ ದಿನಕ್ಕೆ ಮೂರು ಆಣೆ (ಇಂದಿನ ನಾಣ್ಯದಲ್ಲಿ ಹತ್ತೊಂಭತ್ತು ಪೈಸೆ) ಖರ್ಚಿನ ಜೀವನ ನಡೆಸುತ್ತಿದ್ದಾರೆ ಎಂಬ ವಿಷಯ ನಿಮಗೆ ಗೊತ್ತುಂಟೆ ?'' ಎಂದು ಕೂಗಿ ಕೇಳಿದರು.

''ಶುದ್ಧ ಹುಚ್ಚು ಮಾತು'' ಎಂದು ಪ್ರಧಾನಿ ಗುಡುಗಿದರು. ಲೋಹಿಯಾರವರಿಗೆ ಬೀದಿ ಭಾಷಣಕಾರನ ಮಾರ್ದನಿಸುವ ಧ್ವನಿ ಇದ್ದಿತು. ಅವರು ಮತ್ತೆ ಕೂಗಿ ಪ್ರತಿ ನುಡಿದರು. ''ಪಂಡಿತ್‌ಜೀ, ನಾನು ನಿಮಗೆ ಸವಾಲು ಹಾಕುತ್ತೇನೆ. ನಿಮ್ಮ ಅರ್ಥಶಾಸ್ತ್ರಜ್ಞರಿಂದ ನಾನು ನೀಡಿದ ಅಂಕೆಯ ಬಗೆಗೆ ಪರಿಶೀಲನೆ ಮಾಡಿಸಿ ನೋಡಿ. ನನ್ನ ಮಾತು ತಪ್ಪಾದರೆ ನಾನು ಪಾರ್ಲಿಮೆಂಟಿನಲ್ಲಿ ನನ್ನ ಸ್ಥಾನಕ್ಕೆ ರಾಜಿನಾಮೆ ನೀಡುತ್ತೇನೆ. ನನ್ನ ಮಾತು ಸರಿಯಾದರೆ ನೀವು ನಿಮ್ಮ ಪದವಿಗೆ ರಾಜಿನಾಮೆ ನೀಡಿ.''

ನೆಹರೂರವರು ಈ ಸವಾಲನ್ನು ಒಪ್ಪಿಕೊಳ್ಳಲಿಲ್ಲವೆನ್ನಿ. ಆದರೆ ಅವರಿಗೆ ಮಾತು ಹೊರಡದಂತಾಯಿತು, ಮೈ ನಡುಗಿದಂತಾಯಿತು. ಆದರೂ ಅವರು ಎಷ್ಟೇ ಆಗಲಿ ದೊಡ್ಡ ಮನುಷ್ಯರಾಗಿದ್ದರು. ಲೋಹಿಯಾರವರ ಎಚ್ಚರಿಕೆಯ ಮಾತನ್ನು ಗಹನವಾಗಿ ತೆಗೆದುಕೊಂಡರು. ತಜ್ಞರಿಂದ ಪರಿಶೀಲನೆ ನಡೆಸಿದರು. ಸಮಾಜವಾದಿ ನಾಯಕ ಹೇಳಿದ ಮಾತು ಸರಿ ಎಂದು ಕಂಡುಬಂದಿತು. ತಜ್ಞ ತನಿಖಾ ವರದಿಯನ್ನು ಮುಚ್ಚಿಹಾಕುವ ಯತ್ನ ಮಾಡಲಿಲ್ಲ. ಬಹು ಬೇಗನೆಯೇ ಇಡೀ ದೇಶಕ್ಕೆ ಸತ್ಯಾಂಶ ತಿಳಿಯಿತು. ಲೋಹಿಯಾರವರ ಸವಾಲು ದೇಶದಾದ್ಯಂತ ''ಮೂರಾಣೆ ವಿವಾದ'' ಎಂದೇ ಖ್ಯಾತಿ ತಳೆಯಿತು.

ಲೋಹಿಯಾರವರಂಥ ಗತ್ತು ಗಮ್ಮತ್ತಿನ ಜನರಿಂದು ಪಾರ್ಲಿಮೆಂಟಿನಲ್ಲಿಲ್ಲವಲ್ಲ ಎಂದು ದುಃಖವಾಗುತ್ತದೆ. ಭಾರತದ ಬಹುಭಾಗಗಳಲ್ಲಿಂದು ಸಾಮಾನ್ಯ ಜನ ದಿನಕ್ಕೆ ಹನ್ನೆರಡು ರೂಪಾಯಿಗಳಿಗಿಂತ ಹೆಚ್ಚು ಖರ್ಚಿಲ್ಲದ ದುರ್ಭರ ಜೀವನ ನಡೆಸುತ್ತಿದ್ದಾರೆ. ಇದು ಇಂದಿನ ನಿಜವಾದ ಲೆಕ್ಕದಲ್ಲಿ ಲೋಹಿಯಾರವರು ಹೇಳಿದ ಹತ್ತೊಂಭತ್ತು ಪೈಸೆ (ಮೂರಾಣೆ)ಗಿಂತ ಕಡಿಮೆಯೇ ಆಯಿತು. ಇಂತಹ ವಿಷಯಗಳನ್ನು ಪ್ರಧಾನಿಗಳಿಗೆ ಬಿಗುಮಾನವಿಲ್ಲದೆ ಹೇಳಬಲ್ಲಂಥ ಜನ ಇಂದು ಪಾರ್ಲಿಮೆಂಟಿನಲ್ಲಿಲ್ಲ. ಅದೇ ರೀತಿ ನೆಹರೂರವರ ಸಾವಿನ ನಂತರ ಅಷ್ಟೇ ಘನತೆ ಸ್ಥಾನಮಾನಗಳುಳ್ಳ ನಾಯಕ ಬರಲಿಲ್ಲವಲ್ಲ ಎಂದೂ ದುಃಖವಾಗುತ್ತದೆ. ಅವರು ಸತ್ಯಾಂಶಗಳನ್ನು ಆಳದವರೆಗೂ ಅಭ್ಯಸಿಸುವಂತೆ ಮಾಡಿ ಫಲಿತಾಂಶವನ್ನು ಯಾವುದೇ ಬಿಗುಮಾನವಿಲ್ಲದೆ ಇಡೀ ಜಗತ್ತಿಗೆ ತಿಳಿಯುವಂತೆ ಘೋಷಿಸುತ್ತಿದ್ದರು.

ಇದಾದ ಕೆಲವು ವರ್ಷಗಳ ನಂತರ, ೧೯೬೭ರಲ್ಲಿ, ಲೋಹಿಯಾರವರು ನನಗೆ ನೀಡಿದ ಒಂದು ದೀರ್ಘ ಸಂದರ್ಶನದಲ್ಲಿ, ಇಂದಿರಾ ಗಾಂಧಿಯವರ ಕಾಂಗ್ರೆಸ್ ಪಾರ್ಟಿ ಪ್ರತಿಪಾದಿಸಿದಂಥ ಸಮಾಜವಾದಿ ಪ್ರಜಾ ಪ್ರಭುತ್ವದ ಗುರಿಯನ್ನು, 'ಬೀದಿ ಸಮಾಜವಾದ' ಎನ್ನುವಂಥದರ ಬೆಂಬಲವಿಲ್ಲದೆ ಸಾಧಿಸುವುದು ಅಸಾಧ್ಯ ಎಂಬ ಅಂಶವನ್ನು ವಿವರಿಸಿ ತಿಳಿಸಿದರು. ಹೆದ್ದಾರಿಗಳಲ್ಲಿ ಅಷ್ಟೇ ಅಲ್ಲ ಕಾಲುದಾರಿಗಳಲ್ಲೂ ಬದಲಾವಣೆಯಾಗಬೇಕೆಂದು ಆಗ್ರಹಿಸುವ ಪ್ರಬಲ ಜನತಾ ಚಳವಳಿಯಷ್ಟೆ ಸರಿಯಾದ ಜನರನ್ನು ಪಾರ್ಲಿಮೆಂಟಿಗೆ ಆರಿಸಿ ಕಳುಹಿಸಬಲ್ಲುದು. ಅದಷ್ಟೆ ಮೇಲುಜಾತಿಯ ಶ್ರೀಮಂತರ ವಿಶೇಷಾಧಿಕಾರಗಳನ್ನು ಸಂರಕ್ಷಿಸುವ ಹಾಗೂ ಉತ್ತೇಜಿಸುವ ಗುರಿಯನ್ನೇ ಸಂಪೂರ್ಣವಾಗಿ ಇಟ್ಟುಕೊಂಡಿರುವ ಹಳತಾದ ಸಾಮಂತಶಾಹಿ ಸಮಾಜ ರಚನೆಯನ್ನು ಬದಲಿಸಲು ಅವರನ್ನು ಒತ್ತಾಯಿಸಬಲ್ಲುದು. ಈ ಒತ್ತಾಯವಿಲ್ಲದೆ ಪಾರ್ಲಿಮೆಂಟು ತಾನೇ ಎಂದೂ ಅದನ್ನು ಮಾಡದು, ಎಂದು ತಿಳಿಸಿದರು. ಈ ಸಮಾಜವಾದಿ ಮಹಾನಾಯಕ ಆಡಿದ ಎಚ್ಚರಿಕೆಯ ಮಾತು ಎಷ್ಟು ಭವಿಷ್ಯ ಸೂಚಕವಾಗಿದ್ದಿತು! ಅದನ್ನು ನನ್ನ ವೃತ್ತಪತ್ರಿಕೆಯಲ್ಲಿ ವರದಿ ಮಾಡುವ ಸುಯೋಗ ನನಗೆ ಒದಗಿದ್ದಿತು. ಶಾಲಾ ಬಾಲಕನಾಗಿದ್ದಾಗ ಗಾಂಧೀಜಿಯವರ ಆಣತಿಗೆ ಅನುಗುಣವಾಗಿ ದೇಶದಾದ್ಯಂತ ಜರುಗುತ್ತಿದ್ದ 'ಪ್ರಭಾತಫೇರಿ'ಗಳೆಂದು ಹೇಳಲಾಗುತ್ತಿದ್ದ ಮೈಲಿ ಉದ್ದದ ಬೀದಿ ಮೆರವಣಿಗೆಗಳಲ್ಲಿ ಭಾಗವಹಿಸುತ್ತಿದ್ದ ನನಗೆ ಲೋಹಿಯಾರವರ ಮಾತಿನ ಅರ್ಥ ಏನೆಂಬುದು ತುಂಬ ಸ್ಪಷ್ಟವಾಗಿದ್ದಿತು. ಅರ್ಥಪೂರ್ಣ ರಾಜಕೀಯ ಪರಿವರ್ತನೆ ಉಂಟು

ಮಾಡಲು ನಾಯಕರೂ ಜನರೂ ಚುನಾವಣೆಗಳಲ್ಲಿ ಮತ ಹಾಕುವುದಕ್ಕಿಂತ ಇನ್ನೂ ಹೆಚ್ಚಿನ ಯತ್ನ ಹಾಕಬೇಕು. ಅವರು ಬೀದಿಗಳಿಗೆ ಹೊರಬಂದು ತಮ್ಮ ಕೇಳಿಕೆಗಳು ಈಡೇರುವಂತೆ ಒತ್ತಡ ಹಾಕಬೇಕು.

ಲೋಹಿಯಾರವರ ದಿನಗಳಲ್ಲಿ ಭಾರತದಲ್ಲಿ ಪತ್ರಿಕಾ ಪ್ರಪಂಚ ಬಲಶಾಲಿಯಾಗಿದ್ದಿತು. ಅದು ಜನರ ಮನೋಭಾವಗಳನ್ನೂ, ಸಮಸ್ಯೆಗಳನ್ನೂ ಯಥಾವತ್ತಾಗಿ ವರದಿ ಮಾಡುತ್ತಿದ್ದಿತು. ಅಂದಿನ ದಿನಗಳಲ್ಲಿ ಪ್ರತಿಯೊಬ್ಬರೂ, ಮಹಾರಾಜರು ವಾಣಿಜ್ಯೋದ್ಯಮಿಗಳು ಮತ್ತು ಭಾರಿ ಭೂಮಾಲೀಕರನ್ನೂ ಒಳಗೊಂಡಂತೆ ಪ್ರತಿಯೊಬ್ಬರೂ ತೋಳುಗಳಿಗೆ ಸಮಾಜವಾದಿ ಪಟ್ಟಿ ಕಟ್ಟಿಕೊಳ್ಳುತ್ತಿದ್ದರು, ಸಮಾಜವಾದಿ ಟೋಪಿ ತೊಡುತ್ತಿದ್ದರು, ಸಮಾಜವಾದಿ ಶಪಥ ಮಾಡುತ್ತಿದ್ದರು. ಜನತಾ ಚಳವಳಿಗಳನ್ನು ವರದಿ ಮಾಡುವುದರಲ್ಲಿ ವೃತ್ತಪತ್ರಿಕೆಗಳು ಪರಸ್ಪರ ಸ್ಪರ್ಧಿಸುತ್ತಿದ್ದವು. ಸಂಪಾದಕೀಯ ಬರೆಯುತ್ತಿದ್ದವರು ರೀತಿ ವಿಧಾನಗಳ ಬಗೆಗೆ ವಾದ ಮಾಡುತ್ತಿದ್ದರೇ ಹೊರತು ಗುರಿಯನ್ನೆಂದೂ ಪ್ರಶ್ನಿಸುವ ಸಾಹಸ ಮಾಡುತ್ತಿರಲಿಲ್ಲ. ಇಂಥ ಸುಸ್ಥಿತಿ ಇದ್ದುದಕ್ಕೆ ಒಂದು ಕಾರಣವೆಂದರೆ – ಪತ್ರಿಕೆಗಳ ಮಾಲೀಕರು ಬಂಡವಾಳಗಾರರಾಗಿದ್ದರೂ ಅವರಿಗಾಗಿ ಕೆಲಸ ಮಾಡುತ್ತಿದ್ದ ಪತ್ರಕರ್ತರು ಬಹುಮಟ್ಟಿಗೆ ಇನ್ನೂ ಸಮಾಜವಾದಿ ಮನೋಭಾವದವರಾಗಿದ್ದುದು. ಅವರಲ್ಲನೇಕರು, ಈ ಲೇಖಕನಂತೆಯೇ, ಸಮಾಜವಾದಿ ಭಾರತ ನಿರ್ಮಿಸುವ ಸ್ವಾತಂತ್ರ್ಯಪೂರ್ವ ಕನಸುಗಳಿಂದ ಪೋಷಿತರಾಗಿದ್ದರು.

ಆ ದಿನಗಳಲ್ಲಿ ಎಲ್ಲ ಪತ್ರಿಕೆಗಳೂ ನಿಯತಕಾಲಿಕಗಳೂ ಹಗಲೂ ರಾತ್ರಿ ಬೇಕೆಂದೋ ಬೇಡವೆಂದೋ ಭಾರತದ ಬಡತನದ ಸ್ಥಿತಿಯನ್ನೇ ಪ್ರಧಾನವಾಗಿ ಎತ್ತಿ ತೋರಿಸುತ್ತಿದ್ದವು. ಇಂದಿರಾ ಗಾಂಧಿಯವರು ೧೯೬೭ರಿಂದ ೧೯೮೦ರವರೆಗೆ ನಡೆದ ಚುನಾವಣೆಗಳಲ್ಲೆಲ್ಲ ಗೆದ್ದುದಕ್ಕೆ ಅವರ 'ಗರೀಬಿ ಹಟಾವೋ' ಘೋಷಣೆಯೇ ಮುಖ್ಯ ಕಾರಣವಾಗಿದ್ದಿತು. ತುರ್ತು ಪರಿಸ್ಥಿತಿಯ ವೈಫಲ್ಯದ ೧೯೭೭ರ ಚುನಾವಣೆಯಷ್ಟೆ ಇದಕ್ಕೆ ಅಪವಾದವಾಗಿದ್ದಿತು. ಆಗ ಅದರಿಂದ ಅಧಿಕಾರವನ್ನು ಕಸಿದುಕೊಂಡ ನಾಯಕರು ಬಡತನದ ಮೇಲಿನ ಗಮನವನ್ನು ಹಿಮ್ಮುಖಗೊಳಿಸಲು ಯತ್ನಿಸಿದುದರಿಂದಾಗಿ ಮೂರು ವರ್ಷಗಳೊಳಗೇ ಜನ ಅವರನ್ನು ಅಧಿಕಾರದಿಂದ ಕಿತ್ತೊಗೆದರು.

ಈಗ ಇಂದು ಭಾರತದ ರಾಜಧಾನಿಯಲ್ಲಿರುವ ಮಾಧ್ಯಮಗಳು ಎಂಥ ನೋಟ ನೀಡುತ್ತವೆ ಎಂಬುದರ ಕಡೆಗೊಮ್ಮೆ ದೃಷ್ಟಿ ಹರಿಸೋಣ. ದೆಹಲಿಯ ಪ್ರಧಾನ ದಿನಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ವರದಿಗಳಲ್ಲಿ ಜನರ ಹಾಗೂ ಸ್ಥಳಗಳ ಹೆಸರುಗಳನ್ನು ಭಾರತೀಯ ಅನ್ನುವ ಬದಲು ಬ್ರಿಟಿಷ್ ಎಂದು ಇಟ್ಟು ನೋಡಿ. ನೀವು ಓದುತ್ತಿರುವ ಪತ್ರಿಕೆ ಭಾರತೀಯ ಅಲ್ಲ, ಆದರೆ ಬ್ರಿಟಿಷ್ ಎಂದೇ ಸಂಪೂರ್ಣವಾಗಿ ನಂಬಲು ಎಲ್ಲ ಸಮರ್ಥನೆ ಒದಗುತ್ತದೆ. ಅದರಲ್ಲಿ ಭಾರತೀಯ ಎಂಬ ಅಂಶ ಇರುವುದು ಭಾಷೆಯಲ್ಲಷ್ಟೆ. ಭಾರತಕ್ಕೆ ಭೇಟಿ ನೀಡುತ್ತಿರುವ ಇಂಗ್ಲಿಷ್ ಪ್ರಜೆಯೊಬ್ಬನು ಈ ಪತ್ರಿಕೆಗಳನ್ನು ಓದಿದಾಗ ಹೀಗೆ ಮೋಸ ಹೋಗುವುದು ಖಂಡಿತ. ಈ ಪತ್ರಿಕೆಗಳ ದೃಷ್ಟಿಯಲ್ಲಿ ಭಾರತವು ಕಳೆದ ಮೂರು ದಶಕಗಳಲ್ಲಿ ಅತ್ಯಂತ ಬಡತನದ ಸ್ಥಿತಿಯಿಂದ ಜಗತ್ತಿನ ಅತ್ಯಂತ ಸಿರಿವಂತ ದೇಶಗಳಲ್ಲೊಂದರ ಸ್ಥಿತಿಗೆ ಪರಿವರ್ತನೆಗೊಂಡಿದೆ. ಬಡತನವನ್ನು ಸಂಪೂರ್ಣವಾಗಿ ತೊಡೆದುಹಾಕಲಾಗಿದೆ. ಇಂದು ಬಡಜನರೇ ಇಲ್ಲ, ಅವರ ಬಗೆಗೆ ಬರೆಯಲು ಅವಕಾಶವೇ ಇಲ್ಲ. ಇಂದು ಭಾರತ ಒಂದು ಪಂಚತಾರಾ ರಾಷ್ಟ್ರ. ಇಂದು ಪತ್ರಿಕೆಗಳು ಪ್ರಕಟಿಸುತ್ತಿರುವ ರಾಷ್ಟ್ರೀಯ ಸುದ್ದಿಗಳೆಲ್ಲ ಸಂಪೂರ್ಣವಾಗಿ ಹವಾ-ನಿಯಂತ್ರಿತ ಪಂಚತಾರಾ ವಿಮಾನ ನಿಲ್ದಾಣ ಹಾಗೂ ರೈಲ್ವೇ ನಿಲ್ದಾಣಗಳು, ಶಾಲೆಗಳು, ಆಸ್ಪತ್ರೆಗಳು ಹಾಗೂ ನರ್ಸಿಂಗ್ ಹೋಂಗಳು, ಪಂಚತಾರಾ ಮಾಲ್‌ಗಳು (ವಾಣಿಜ್ಯ ಪ್ರಕಾರಗಳು), ವ್ಯಾಪಾರ ಕೇಂದ್ರಗಳು, ನಾನಾ ರೀತಿಯ ವಿಹಾರ ಕೇಂದ್ರಗಳು, ನೈಟ್ ಕ್ಲಬ್‌ಗಳು, ಅಂತಾರಾಷ್ಟ್ರೀಯ ಸಮ್ಮೇಳನ ಸಂಕಿರಣಗಳು, ಪಂಚತಾರಾ ರೈಲುಗಳು, ಬಸ್ಸುಗಳು ಹಾಗೂ ಟ್ಯಾಕ್ಸಿಗಳು, ಆಧುನಿಕ ಕಾರ್ಯಾಲಯವೊಂದರ ಬಗೆಗೆ ಬಿಲ್ ಗೇಟ್ಸ್ ಕಾಣಬಹುದಾದಂಥ ಕನಸನ್ನೂ ನಾಚಿಸುವಂಥ ಕಾರ್ಯಾಲಯ ಸಂಕೀರ್ಣಗಳು – ಇವುಗಳ ಬಗೆಗಷ್ಟೆ. ಕೆಲವು ಮುಖ್ಯಮಂತ್ರಿಗಳಂತೂ ತಮ್ಮ ರಾಜ್ಯದ ರಾಜಧಾನಿಗಳನ್ನು ಪಂಚತಾರಾ ನಗರಗಳನ್ನಾಗಿ ಪರಿವರ್ತಿಸುವ ಉದಾತ್ತ ಕಾರ್ಯ-ನಿರ್ವಹಣೆಯಲ್ಲಿ ತೊಡಗಿದ್ದಾರೆ. ಈ ನಗರಗಳಲ್ಲಿ ಹಣ ಕೊಳ್ಳಬಲ್ಲಂಥ ಸಕಲ ಸೌಲಭ್ಯ ಸೌಕರ್ಯಗಳೂ ಇರಬೇಕು. ಪಂಚತಾರಾ ಖಯಾಲು ಹಾಗೂ ಗೀಳುಗಳ ನಮ್ಮ ಈ ಪಟ್ಟಿಗೆ ಕೊನೆ ಎಂಬುದೇ ಇಲ್ಲ.

ಈ ಪಂಚತಾರಾ ಸಮಾಜದಲ್ಲಿ ಬರೆಯಲು ಸಮಸ್ಯೆಗಳೇನೂ ಇಲ್ಲವೆಂದೇನೂ ಅಲ್ಲ. ನಿಜಕ್ಕೂ ಅಂಥ ಸಮಸ್ಯೆಗಳಿವೆ. ಅವು ದಂಗುಬಡಿಸುವಂತಹವೂ ಹೌದು.

ಉದಾಹರಣೆಗೆ, ನಮ್ಮ ಬಡ ಮುಗ್ಧ ಜನರಿಗೆ ಸರಬರಾಜು ಮಾಡುತ್ತಿರುವ ಕೋಕ್ ಹಾಗೂ ಪೆಪ್ಸಿ ಬಾಟಲುಗಳಲ್ಲಿ ಗೊಬ್ಬರ ಹಾಗೂ ಕ್ರಿಮಿನಾಶಕ ಪ್ರಮಾಣ ಅಧಿಕವಾಗಿದೆ. ಅದು ಯೂರೋಪಿಯನ್ ಯೂನಿಯನ್‌ನಲ್ಲಿನ ಪ್ರಮಾಣಗಳನ್ನೂ ಮೀರಿದೆ, ಆದರೆ ಅದು ಭಾರತೀಯ ಹಾಗೂ ಅಮೇರಿಕನ್ ಮಟ್ಟಗಳಿಗೆ ಅನುಗುಣವಾಗಿದೆ, ಎಂಬುದಷ್ಟೆ ತೃಪ್ತಿ ನೀಡುವ ಅಂಶ. ಆಮೇಲೆ ವಿಮಾನ ನಿಲ್ದಾಣಗಳಲ್ಲಿ ನೌಕರರು ಇರಬೇಕಾದಷ್ಟು ವಿನೀತರಾಗಿಲ್ಲ, ಅಲ್ಲಿ ಇತ್ತೀಚೆಗೆ ವಿದೇಶೀ ರಾಜತಂತ್ರಜ್ಞೆಯೊಬ್ಬಳನ್ನು ಬಲಾತ್ಕಾರದಿಂದ ಅತ್ಯಾಚಾರಕ್ಕೆ ಗುರಿಮಾಡಲಾಯಿತು. ಮತ್ತೆ ರಾತ್ರಿ ಡಿಸ್ಕೋಗಳಿಂದಲೂ ವಿಹಾರ ಕೇಂದ್ರಗಳಿಂದಲೂ ಹಿಂದಿರುಗುತ್ತಿರುವ ಅರೆ ಅಥವಾ ಪೂರ್ಣ ಮತ್ತ ಪ್ರಣಯಿಗಳು ಗೂಂಡಾಗಳ ಹಾಗೂ ಲೂಟಿಗಾರರ ಉಪಟಳದಿಂದ ಮುಕ್ತರಾಗಿಲ್ಲ, ಪಂಚತಾರಾ ಹೋಟಲುಗಳಲ್ಲೂ ಮೇಲ್ವರ್ಗದ ಕಾಲೋನಿಗಳಲ್ಲೂ ವ್ಯಭಿಚಾರ/ಹಾದರ ವಿಜೃಂಭಿಸುತ್ತಿದೆ. ಪ್ರತಿದಿನವೂ ಪೋಲಿಸರು ಭಾರಿ ಪ್ರಮಾಣಗಳಲ್ಲಿ ಕದ್ದ ಪ್ರಾಚೀನ ಕಲಾಕೃತಿಗಳನ್ನೂ ಕಣ್ಣುತಪ್ಪಿಸಿ ತಂದ ಮದ್ದುಗಳನ್ನೂ ಪತ್ತೆ ಹಚ್ಚುತ್ತಿದ್ದಾರೆ. ನೂರಾರು ಕೋಟಿ ರೂಪಾಯಿಗಳ ಭ್ರಷ್ಟಾಚಾರ ಪ್ರಸಂಗಗಳನ್ನೂ ಸಮಾಜದ ಮೇಲುವರ್ಗದ ಜನರ ಪ್ರಣಯ ಮತ್ತು ಕೊಲೆ ಪ್ರಸಂಗಗಳನ್ನೂ ದುರಾಶೆಯ ಅಧಿಕಾರಿಗಳೂ ರಾಜಕಾರಣಿಗಳೂ ಮುಚ್ಚಿಹಾಕುತ್ತಿದ್ದಾರೆ. ಕ್ರಿಕೆಟ್‌ನಿಂದ ಹಿಡಿದು ಚುನಾವಣೆಗಳವರೆಗೆ ಬಹುಮಟ್ಟಿಗೆ ಎಲ್ಲ ವ್ಯವಹಾರಗಳಲ್ಲೂ ನಡೆಯುತ್ತಿರುವ ಜೂಜುಗಾರಿಕೆ, ಜಾಹಿರಾತುಗಳಲ್ಲಿ ಕ್ರಿಕೆಟ್ ಕ್ರೀಡಾಪಟುಗಳಿಗೂ ಚಲಚ್ಚಿತ್ರ ತಾರೆಯರಿಗೂ ನೀಡುತ್ತಿರುವ ಅಪಾರ ಪ್ರಮಾಣದ ಹಣ... ಇಂಥವೇ ಇಂದಿನ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಸುದ್ದಿಗಳು. ಸುದ್ದಿಗಳೆಲ್ಲ ಶ್ರೀಮಂತ ಜನರ ಚಟ, ಭೋಗ್ಯ ಹಾಗೂ ವಿಲಾಸಗಳಿಗೆ ಸಂಬಂಧಿಸಿದವಾಗಿವೆ.

ಇಂದಿನ ಪಂಚತಾರಾ ಸಮಾಜದ ಮನರಂಜನೆಗೆ ಇಷ್ಟು ಸಾಲದೆನ್ನುವಂತೆ ನಾವು ಪ್ರತಿದಿನವೂ ಪತ್ರಿಕೆಗಳಲ್ಲಿ ಹಲವಾರು ಪುಟಗಳ ಪುರವಣಿಗಳನ್ನು ಕಾಣುತ್ತೇವೆ. ಅವುಗಳ ತುಂಬ ಇಂದಿನ ಸಿನಿಮಾ ಪ್ರಪಂಚದ ಹಾಗೂ ದೂರದರ್ಶನದ ನಾಯಕ ನಾಯಕಿಯರ ಕುರಿತ ಇತಿಮಿತಿ ಇಲ್ಲದ ಹೊಗಳಿಕೆಗಳೇ ಹಾಗೂ ಅವರ ನಾನಾ ಭಂಗಿಗಳ ಆಕರ್ಷಕ ಛಾಯಾಚಿತ್ರಗಳೇ ತುಂಬಿರುತ್ತವೆ. ಇವುಗಳ ಜೊತೆಗೆ ಡಿಸೈನರ್ ಭವನಗಳು, ಡಿಸೈನರ್ ಉಡುಪುಗಳು, ಡಿಸೈನರ್ ಪೀಠೋಪಕರಣಗಳು ಹಾಗೂ ಚಾಕು ಚಮಚಗಳು, ಡಿಸೈನರ್ ಅಂಗಡಿಗಳು, ಇತ್ಯಾದಿಗಳ ಕುರಿತ ಪುರವಣಿಗಳೂ ಇರುತ್ತವೆ. ಬಹುವೇಳೆ ಪತ್ರಿಕೆಯ ಒಂದು ದೊಡ್ಡ ವಿಭಾಗವನ್ನೇ ಸೌಂದರ್ಯ ವ್ಯಾಪಾರಕ್ಕೆ ಮೀಸಲು ಇರಿಸಲಾಗಿರುತ್ತದೆ. ಭಾರತವು ಸಂಪತ್ಸಮೃದ್ಧತೆಯ ಹೊಸಯುಗ ಪ್ರವೇಶಿಸಿದೆ ಅನ್ನುವುದಕ್ಕೆ ಇದಕ್ಕಿಂತ ಹೆಚ್ಚು ಉತ್ತಮವಾದ ಸಾಕ್ಷ್ಯ ಬೇಕೆ ?

**ಸತ್ಯ ಅಡಗಿರುವುದೆಲ್ಲಿ ?**

ಇಂದು ನಮ್ಮ ಪತ್ರಿಕೆಗಳಲ್ಲಿ ಮುದ್ರಿತವಾಗುತ್ತಿರುವ ಇಂತಹ ಎಲ್ಲ ಸುದ್ದಿಗಳನ್ನೂ ಓದಿದನಂತರ ಭಾರತ ಒಂದು ಬಡದೇಶ ಎಂದು ಯಾರಿಗೆ ತಾನೆ ಹೇಳಲು ಸಾಧ್ಯ ? ನಾವು ಒಂದು ಮಂತ್ರದಂಡವನ್ನು ಬೀಸಿ ರಾತ್ರೋ ರಾತ್ರಿ ಬಡತನವನ್ನು ಹೊಡೆದಟ್ಟಿಬಿಟ್ಟಿದ್ದೇವೇನೋ ಎಂದೇ ಅನಿಸುತ್ತದೆ. ಆದರೂ, ಆಗೊಮ್ಮೆ ಈಗೊಮ್ಮೆ, ಇವೇ ಪತ್ರಿಕೆಗಳೇ ನೈಜ ಪರಿಸ್ಥಿತಿಯ ತುಣುಕುಗಳನ್ನು ಪ್ರಕಟಿಸುವ ಒತ್ತಾಯಕ್ಕೂ ಒಳಗಾಗುತ್ತವೆನ್ನಿ. ಇತ್ತೀಚೆಗೆ 'ದಿ ಸ್ಟೇಟ್ಸ್‌ಮನ್' ಪತ್ರಿಕೆ ''ದಕ್ಷಿಣ ಏಷ್ಯದ ಮೇಲೆ ಕೆಂಪು ನಕ್ಷತ್ರ'' ಎಂಬ ಬೃಹತ್ ಶೀರ್ಷಿಕೆಯ ಅಗ್ರ ಲೇಖನವೊಂದನ್ನು ಪ್ರಕಟಿಸಿತು. ಚೆನ್ನಾಗಿ ಸಂಶೋಧನೆ ಮಾಡಿ ಸತ್ಯಾಂಶಗಳನ್ನು ಪತ್ತೆ ಹಚ್ಚಿ ರಚಿಸಿದ ಈ ಲೇಖನವು ತೀವ್ರ ಉಗ್ರಗಾಮಿ ವೃಂದಗಳು ಒಂದುಗೂಡಿ ನೇಪಾಳದಿಂದ ಶ್ರೀಲಂಕಾದವರೆಗೆ ತಮ್ಮ ಉಪಯೋಗಕ್ಕಾಗಿ ಒಂದು ವಿಶಾಲ ಕಾರಿಡಾರು (ದಾರಿ) ನಿರ್ಮಿಸಿಕೊಳ್ಳಲು ಮಾಡಿದ ನಿರ್ಧಾರ ಹಾಗೂ ಹಾಕಿಕೊಂಡ ಯೋಜನೆಗಳನ್ನು ಹೊರಗೆಡಹಿದ್ದಿತು. ಈ ಕಾರಿಡಾರು ನೇಪಾಳದಿಂದ ಪ್ರಾರಂಭವಾಗಿ ಬಿಹಾರ, ಜಾರ್ಖಂಡ್, ಒರಿಸ್ಸಾದ ದಂಡಕಾರಣ್ಯ ವಿಭಾಗ, ಮಧ್ಯಪ್ರದೇಶ ಹಾಗೂ ಛತ್ತೀಸ್‌ಗಢ, ಆಂಧ್ರಪ್ರದೇಶದ ಪೀಪಲ್ಸ್ ವಾರ್ ಗ್ರೂಪ್ ಹತೋಟಿ ಪ್ರದೇಶ, ತಮಿಳುನಾಡಿನಲ್ಲಿನ ಅಂಥವೇ ಪ್ರದೇಶಗಳು, ಇವುಗಳ ಮೂಲಕ ಸಾಗಿಹೋಗಿ ಕೊನೆಗೆ ಶ್ರೀಲಂಕಾದ ಎಲ್‌ಟಿಟಿಇ ಜೊತೆಗೂಡುತ್ತದೆ. ಇದೇ ರೀತಿ ಉತ್ತರದಲ್ಲಿ ಕಾಶ್ಮೀರದ ಹಾಗೂ ಭಾರತದ ಈಶಾನ್ಯ ಭಾಗಗಳ ಉಗ್ರಗಾಮಿಗಳೂ ಇದೇ ನಿಷೇಧಿತ ಸಂಸ್ಥೆಯ ಭಾಗವಾಗಲಿರುವರು, ಎಂದೂ ಈ ಲೇಖನ ತಿಳಿಸಿದ್ದಿತು. ಕೆಲವು ವಾರಗಳ ಮುನ್ನವಷ್ಟೆ ನಾವು ಆಂಧ್ರಪ್ರದೇಶದಲ್ಲಿ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡುರವರ ಮೇಲೆ ನಡೆದ ಮಾರಕ ಧಾಳಿಯನ್ನು ಕಂಡೆವಷ್ಟೆ. ಇದನ್ನು ಈ ವೃಂದಗಳಲ್ಲೊಬ್ಬರೇ ನಡೆಸಿದುದು.

ಈ ಉಗ್ರಗಾಮಿಗಳು ಯಾರು ? ಅವರಿಗೆ ಬೇಕಾದುದೇನು ? ಅವರು ಯಾರನ್ನು ಪ್ರತಿನಿಧಿಸುತ್ತಾರೆ ? ಇವರೆಲ್ಲ ಕೊಲೆಗಾರರ, ಕೊಳ್ಳೆಗಾರರ ಗುಂಪುಗಳೇ ? ಭಯಭೀತಿ ಉಂಟುಮಾಡಿ ಲೂಟಿ, ಸುಲಿಗೆ ಮಾಡಲೋಸುಗ ಇವರು ಒಂದಾಗಿದ್ದಾರೆಯೆ ? ಅಥವಾ ಇವರು ನಿರ್ಲಕ್ಷಿಸಲ್ಪಟ್ಟ ಧ್ಯೇಯವೊಂದನ್ನು ಪ್ರತಿನಿಧಿಸುವ ಜನರೆ ? ಕೆಲವು ಮಾತುಗಳಲ್ಲಿ ಹೇಳುವುದಾದರೆ, ಇವರು ನಿರಂತರ ದಬ್ಬಾಳಿಕೆಗೆ ತುತ್ತಾದ ಜನರ ಹಿತಕ್ಕೆ ಧ್ವನಿ ಕೊಡುತ್ತಿದ್ದಾರೆಯೆ ? ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಸಂಸ್ಥಾಪಕ ನಾಯಕರು ಏನೆಲ್ಲ ವಚನ ಭರವಸೆಗಳನ್ನು ನೀಡಿದ್ದರೂ ಸ್ವತಂತ್ರ ಭಾರತದ ಸಂಪೂರ್ಣ ಉಪೇಕ್ಷೆಗೊಳಗಾಗಿರು ವಂಥ ಜನಸಮೂಹಗಳ ಮುಖವಾಣಿಯೇ ಇವರು ? ಆಡಳಿತ ಸೂತ್ರ ಹಿಡಿದಿರುವ ಹೊಸ ಶಾಸಕರು ಇವರನ್ನು ಬಗ್ಗುಬಡಿಯಬಲ್ಲರೇ ? ಈಗ ಸಹಸ್ರಾರು ವರ್ಷಗಳಿಂದ ನಡೆದುಕೊಂಡು ಬಂದಿರುವಂತೆ, ನಿರ್ಲಕ್ಷ್ಯಕ್ಕೊಳಗಾದ ವರ್ಗಗಳ ಹಿತ ಪ್ರತಿಪಾದಿಸು ತ್ತಿರುವ ಈ ಜನರ ಧ್ವನಿಯನ್ನು ಈ ಹೊಸ ಶಾಸಕರು ಅಡಗಿಸಬಲ್ಲರೇ ? ಇಲ್ಲವೇ, ಬರಲಿರುವ ದಶಕಗಳಲ್ಲಿ ಜನಸಮೂಹಗಳ ಹಸಿವು ನಗರಗಳಿಗೂ ಹರಡುತ್ತಿದ್ದಂತೆ ಈ ಜನರ ಬಲವೂ ಹೆಚ್ಚಲಿರುವುದೇ ?

ನನಗೆ ತೋರಿದಂತೆ, ಇಂದಿನ ಭಾರತ ಚಿಯಾಂಗ್-ಕೈ-ಷೇಕ್‌ರ ಚೀಣಾವನ್ನು, ರಿಜಾ ಷಾ ಪೆಹಲ್ವಿಯ ಇರಾನ್‌ಅನ್ನು ಹೋಲುತ್ತದೆ. ಇಂದಿನ ಕಲ್ಪಿತ ಸಮೃದ್ಧತೆಯ ಈ ನೀರ್ಗುಳ್ಳೆ ಬೇಗನೆಯೇ ಒಡೆಯಲಿರುವುದು. ಇಂದಿನ ಸಮಸ್ಯೆ ಇರುವುದು ಜನಸಮೂಹಗಳಿಗೆ ಹವಾನಿಯಂತ್ರಿತ ಶಾಲೆಗಳನ್ನೂ, ಆಸ್ಪತ್ರೆಗಳನ್ನೂ ಒದಗಿಸುವುದಲ್ಲ, ಆದರೆ ಮಾನವಕುಲದ ಇತಿಹಾಸದಲ್ಲೇ ಕೇಳರಿಯದಂಥ ಪ್ರಮಾಣದಲ್ಲಿ ಜನರಿಗೆ ಆಹಾರ ನೀರು ಒದಗಿಸುವುದಾಗಿದೆ. ಇಂದು ಭಾರತ ತನ್ನಲ್ಲಿ ಜಗತ್ತಿನಲ್ಲೇ ಅತಿ ಹೆಚ್ಚಿನ ಪ್ರಮಾಣದಲ್ಲಿ ಆಹಾರ ದಾಸ್ತಾನು ಹೊಂದಿದೆಯೆಂದು ಜಂಭದಿಂದ ಹೇಳಿಕೊಳ್ಳುತ್ತಿದೆ, ಆದರೆ ಅದೇ ಹೊತ್ತಿನಲ್ಲಿ ಲಕ್ಷಾಂತರ ಕೋಟ್ಯಾಂತರ ಜನ ದಿನಕ್ಕೆ ಒಪ್ಪತ್ತಿನ ಅರೆಹೊಟ್ಟೆಯ ಊಟದ, ಅಥವಾ ಕೇವಲ ಉಪವಾಸದ, ಜೀವನ ನಡೆಸುತ್ತಿದ್ದಾರೆ. ನೀರು ಸರಬರಾಜಿನದು ಮತ್ತೊಂದು ಕಥೆ. ಇದು ಎಷ್ಟು ಭಯಂಕರವಾಗಿ ಜನರನ್ನು ಪೀಡಿಸುತ್ತಿದೆ ಎಂಬುದನ್ನು ರಾಜಕಾರಣಿಗಳಾಗಲೀ, ಪತ್ರಕರ್ತರಾಗಲೀ ಬಹು ಸುಲಭವಾಗಿ ಉಪೇಕ್ಷಿಸುತ್ತಿದ್ದಾರೆ. ಭಾರತದ ನದಿಗಳನ್ನೆಲ್ಲ ಒಂದುಗೂಡಿಸುವಂಥ ದುಡುಕು ಬುದ್ಧಿಯ ಯೋಜನೆಗಳ ಹೆಸರಿನಲ್ಲಿ ಕೋಟ್ಯಂತರ ಪ್ರಮಾಣಗಳಲ್ಲಿ ಹಣವನ್ನು ಪೋಲು ಮಾಡುವುದರಿಂದ ಈ ಸಮಸ್ಯೆಯನ್ನು ಪರಿಹರಿಸಲಾಗುವುದಿಲ್ಲ.



ಇವನ್ನೆಲ್ಲ ನೋಡಿದಾಗ ಒಂದು ಅಂಶ ಸ್ಪಷ್ಟವಾಗು ತ್ತದೆ : ಪತ್ರಿಕೆಗಳು ಸಿದ್ಧಾಂತ, ನೈತಿಕತೆ, ನ್ಯಾಯಪರತೆ ಹಾಗೂ ಮಾನವನ ಸಹಜಿಕ ಹಕ್ಕುಗಳಂಥ ಮೂಲ ಭೂತ ಸಮಸ್ಯೆಗಳಿಂದ ದೂರ ಸರಿದಿವೆ. ಮಾನವ ಹಕ್ಕುಗಳು ಎಂದು ನಗಾರಿ ಹೊಡೆದು ಉದ್ಘೋಷಿಸು ತ್ತಿರುವಂಥ ಹಕ್ಕುಗಳಿಗಿಂತ ಹೆಚ್ಚು ಉಚ್ಚತರವಾದವು ಈ ಹಕ್ಕುಗಳು.

ನೆಹರೂ ಯುಗದ ಪತ್ರಕರ್ತನು ಸೀಮಿತ ಜೀವನೋಪಾಯ ಸಾಧನಗಳ ವ್ಯಕ್ತಿಯಾಗಿದ್ದ. ಅವನು ಗಾಂಧಿಯನ್ ಭಾರತದಲ್ಲಿ ಹುಟ್ಟಿ ಬೆಳೆದಿದ್ದ. ಅವನು ದೇಶದ ಬಡಜನರ ಕೂಗಿಗೆ ಸಹಜವಾಗಿ ಅನುರಣಿಸು ತ್ತಿದ್ದ. ಈ ಲೇಖನದ ಕರ್ತೃವೇ ತಿಂಗಳ ಕೊನೆಯಲ್ಲಿ

ಸಂಬಳ ಬರುವವರೆಗೂ ಜೀವನ ಸಾಗಿಸಿಕೊಂಡು ಹೋಗಲು ಪ್ರತಿ ತಿಂಗಳೂ ಕಾರ್ಯಾಲಯದ ನೌಕರರ ಸಹಕಾರಿ ಸಂಸ್ಥೆಯಿಂದ ಹಣ ಸಾಲ ತೆಗೆದುಕೊಳ್ಳುತ್ತಿದ್ದ. ಅಂದಿನ ದಿನಗಳ ಪತ್ರಕರ್ತ ಆಸ್ತಿವಂತ ವ್ಯಕ್ತಿಯಾಗುವ ಕನಸು ಕೂಡ ಕಾಣದಾಗಿದ್ದ. ಅವನ ಶಕ್ತಿಯೆಲ್ಲ ಅವನ ಲೇಖನಿಯಲ್ಲೇ ಕೇಂದ್ರೀಕೃತವಾಗಿದ್ದಿತು. ಅವನು ಆಫೀಸಿಗೆ ಬೈಸಿಕಲ್ಲಿನಲ್ಲೋ, ಬಸ್ಸಿನಲ್ಲೋ ಅಥವಾ ಸ್ಕೂಟರಿನಲ್ಲೋ ಹೋಗುತ್ತಿದ್ದ ಮತ್ತು ಮಧ್ಯಮ ವರ್ಗದ ಪುಟ್ಟ ಮನೆಯಲ್ಲಿ ವಾಸಿಸುತ್ತಿದ್ದ.

ಇಂದು ಈ ಆಟದ ನಿಯಮಗಳು ನಾಟಕೀಯವಾಗಿ ಬದಲಾಗಿವೆ. ನಮ್ಮ ನಾಯಕರು ಇನ್ನೆಷ್ಟು ಮಾತ್ರವೂ ಗಾಂಧಿ, ನೆಹರೂ, ಬೋಸ್ ಅಥವಾ ಅಬ್ರಹಾಮ್ ಲಿಂಕನ್‌ರಂಥ ಜನರಲ್ಲ. ಬಚ್ಚನ್, ಐಶ್ವರ್ಯ ರೈ ಹಾಗೂ ಹಾಲಿವುಡ್ ತಾರೆಗಳು ಇಂದು ನಮ್ಮ ನಾಯಕರು. ಮಹಾನಗರದ ಸಾಮಾನ್ಯ ಮಟ್ಟದ ಪತ್ರಕರ್ತನಿಂದು ಎಲ್ಲ ರೀತಿಯಲ್ಲೂ ಒಬ್ಬ ಗಟ್ಟಿಕುಳ. ನಮ್ಮ ದಿನಗಳಲ್ಲಿ ನಾವು ಕಲಾವಿದರು, ಶಿಕ್ಷಕರು, ಗುಮಾಸ್ತರು, ಟ್ರೇಡ್ ಯೂನಿಯನ್ ಕಾರ್ಯಕರ್ತರು, ಸಣ್ಣಪುಟ್ಟ ರಾಜಕಾರಣಿಗಳು ಮತ್ತು ಇತರ ನಾನಾ ರೀತಿಯ ನಿರ್ಗತಿಕರೆನ್ನುವಂಥ ಜನರ ಗುಂಪಿನಿಂದ ತುಂಬಿರುತ್ತಿದ್ದ ಕಾಫಿ ಹೌಸ್ ಜನಜಂಗುಳಿಯೊಂದಿಗೆ ಹೇಗೆ ಸಂತೃಪ್ತಿಯಿಂದ ಹೊಂದಿಕೊಂಡು ಹೋಗುತ್ತಿದ್ದೆವೋ ಹಾಗೆ ಇಂದು ಈ ಪತ್ರಕರ್ತರು ಪಂಚತಾರಾ ವ್ಯಕ್ತಿಗಳೊಂದಿಗೆ ಎಲ್ಲ ರೀತಿಯಲ್ಲೂ ಸರಿಹೊಂದಿಕೊಂಡು ವ್ಯವಹಾರ ನಡೆಸುತ್ತಾರೆ.


ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣರಾವ್
ಮೂಲ : ಎಂ. ಬಿ. ಲಾಲ್
ಮಾಜಿ ಸಂಪಾದಕ, ದಿ ಸ್ಟೇಟ್ಸ್‌ಮನ್, ಡಿ-೩೦, ಪ್ರೆಸ್ ಎನ್‌ಕ್ಲೇವ್, ಸಾಕೇತ್, ನವದೆಹಲಿ - ೧೧೦ ೦೧೭


# ಬುದ್ಧನ ನದಿಯ ಹಾಡು

ಬಾಗಿ ನೀರ ಕನ್ನಡಿಯಲ್ಲಿ
ಮುಖ ನೋಡಿಕೊಳ್ಳುವ
ಹಣ್ಣು ಹೂವುಗಳೆ, ಭಾರದ ತರುಲತೆಗಳೆ
ನೀರ ಬರಿಮೈಮೇಲೆ
ನೆರಳ ಮೂಡಿಸುವ ನೀಳ ನೀಲ ಮೋಡಗಳೆ
ಹಾರುತ್ತ ಹಾರುತ್ತ ಥಕ್ಕನೆ ಮೀನ ಮೇಲೆರಗಿ
ಬೇಟೆಯಾಡುವ ಪಕ್ಷಿಗಳೆ
ಮೈಮರೆಸಿ ಮುಖತೋರೋ ಜಾಣ ಜಲಚರಗಳೆ
ನಿಮಗೆ ಗೊತ್ತಿಲ್ಲ ಈ ನದಿಯ ಇನ್ನೊಂದು ಮುಖ
ತಲೆತಲಾಂತರಗಳಿಂದ ಅಡಗಿರುವ, ಒಳಗೇ ಹರಿವ
ರಕ್ತದ ಬಿಸಿ ಕಾಲುವೆಯ ಪರಿಚಯ.....

ಈ ನದಿಯ ದಡದ ಮರ
ನಿಂತಿದೆ ಎಷ್ಟೋ ವರ್ಷಗಳಿಂದ ಕವಲು ಕವಲಾಗಿ
ಕಂಡಿದೆ ಮುಳುಗುವ ಹೆಣ ರಾಶಿಗಳ
ಮಾತನಾಡದೆ ಆಲಿಸಿದೆ ಕೇಕೆ ಅಟ್ಟಹಾಸಗಳ.

ಕೋಲಿಯಾ ಕಪಿಲವಸ್ತುಗಳ ನಡುವೆ
ರೋಹಿಣಿಯ ತಣ್ಣಗಿನ ತೀರದಲ್ಲಿ
ಸಿದ್ಧಾರ್ಥ, ನಮ್ಮ ಗೌತಮ ಬುದ್ಧ
ಕಂಗಾಲಾಗಿ ನಿಂತಿದ್ದ ಇಂದಿನಂತೆಯೇ.
ಸಂಗಾತಿಗಳಿಲ್ಲದೆ, ಪ್ರಿಯ ಆನಂದನಿಲ್ಲದೆ.

ಇಂದಿನಂತೆಯೇ ಅದೇ ಜಲ, ಅದೇ ಜಗಳ,
ಅದೇ ರಕ್ತಸಿಕ್ತ ಕತ್ತಿ, ಅದೇ ಮುಂಡವಿಲ್ಲದ ರುಂಡ.

ಇಲ್ಲೇ ಈ ಶಾಲವೃಕ್ಷದ ಅಡಿಯಲ್ಲೇ
ನನ್ನ ಹುಟ್ಟು, ಈ ರೋಹಿಣಿಯ ಮಡಿಲಲ್ಲೇ
ನನ್ನ ಬಾಲ್ಯ ಸಾಗಿಹೋದದ್ದು.
ಶಾಂತ ತಾಯಿ ರೋಹಿಣಿಯ ಮೈ ತುಂಬಾ
ಏನಿದೆ ಈಗ ಬರಿಯ ಗಾಯ, ನೋವು, ಸೋರುವ
ಕೀವು, ಸೋತು ಹೋಗಿದ್ದಾಳೆ ಮೈಯ ಸುಕ್ಕಿನೊಂದಿಗೆ
ತರಂಗಗಳೇ ಮೂಡದ ನೀರವ ಭಿಕ್ಷುಣಿಯಾಗಿದ್ದಾಳೆ.

ಯಾಕೆ ಜಗಳವೇಳಬೇಕು ನಮ್ಮಲ್ಲಿ
ನಮ್ಮದೇ ನದಿಯ ನೀರಿಗಾಗಿ ?
ಕೊಲೆಗೆ ಕೊಲೆ, ಜೀವಕ್ಕೆ ಜೀವ
ಸಾವಿಗೆ ಸಾವು, ಯುದ್ಧಕ್ಕೆ ಯುದ್ಧ
ನೀಲಿ ನಕ್ಷೆಯ ಖಾಲಿ ಪಾಯದಲ್ಲಿ
ಸುರಿಯಲಾಗಿದೆ ಇಟ್ಟಿಗೆ, ಮರಳು.

ಬರಿಯ ಸಿದ್ಧಾರ್ಥ ನಾನು ಬುದ್ಧನಲ್ಲ
ಮಡಿಲಲ್ಲಿ ನನ್ನ ಮುದ್ದು ಕುವರ
ಕನಸುಗಣ್ಣಿನ ಯಶೋಧರೆ ಪಕ್ಕದಲ್ಲಿ
ಕಣ್ಣೆದುರು ಕೋಲಿಯಾ ಕಪಿಲವಸ್ತುಗಳ ಕೆಂಪೇರಿದ
ಕಣ್ಣುಗಳು
ರೋಗ, ಮುಪ್ಪು, ಸಾವು ಕಾಡಿದ್ದು ನಿಜ
ಆದರೆ ನದಿಯ ನೀರಿಗಾಗಿ ಕೊಲ್ಲಲಾರೆ
ನನ್ನ ಮತ್ತೊಬ್ಬ ಸೋದರನನ್ನು
ಸಂಸಾರವೆನ್ನಲೇ, ನನ್ನ ಜನರ ಸಾವು ನೋಡಲೇ
ಉಸುಕು ಹಾದಿ ಕುಸಿಯುತ್ತಿತ್ತು
ಹೆಜ್ಜೆ ಗುರುತು ಮಾಯವಾಗಿತ್ತು.

ಕತ್ತಿ ಹಿಡಿಯಲಾರೆ ನಾನು ಜೀವಜಲಕ್ಕಾಗಿ
ತೆಗೆದುಕೊಳ್ಳಲಾರೆ ಇವರ ಜೀವಜಲಗಳನ್ನು
ಮಮಕಾರ ತೊರೆದು ಸಾಗುತ್ತೇನೆ ಬುದ್ಧನಾಗಿ
ಈ ಹೆಜ್ಜೆ ಮೂಡದ ನಿಶೆಯ ದಾರಿಯಲ್ಲಿ
ಬಹಳ ದಿನಗಳಿಂದ ಈ ರೋಹಿಣಿ ಹರಿಯುತ್ತಿದ್ದಾಳೆ
ಅದೇ ಗುಡಿ, ಗುಡಿಸಲು, ನಾಡು, ನಾಡಾಡಿ
ಎಲ್ಲ ಒಳಗೊಂಡು ಯಾವುದೇ ತಳಮಳವಿಲ್ಲದೇ
ಅದೇ ತರಂಗಗಳಿಲ್ಲದ ಶಾಂತ ಭಿಕ್ಷುಣಿಯಾಗಿ.

*(ಕಪಿಲವಸ್ತು ಮತ್ತು ಕೋಲಿಯಾಗಳ ನಡುವೆ ಹರಿಯುತ್ತಿದ್ದ ರೋಹಿಣಿ ನದಿಯ ವಿವಾದವೇ ಸಿದ್ಧಾರ್ಥ ಗೌತಮ ಬುದ್ಧನಾಗಲು ಮುಖ್ಯ ಕಾರಣವೆನ್ನಲಾಗಿದೆ.)*


ಡಾ|| ಎಚ್. ಎಲ್. ಪುಷ್ಪ
೩೭/೨ ಎ, 'ನಿಸರ್ಗ'
ನಾಗರಬಾವಿ ಮುಖ್ಯರಸ್ತೆ, ವಿಜಯನಗರ
ಬೆಂಗಳೂರು-೫೬೦ ೦೪೦




# ನದಿ ಜೋಡಣೆ

## ಒಂದು ವಿಶ್ಲೇಷಣೆ ಹಾಗೂ ಪರ್ಯಾಯ ಮಾರ್ಗಗಳು




ಜನಸಂಖ್ಯಾ ಸ್ಫೋಟ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಅಸಮರ್ಪಕ ಬಳಕೆ ಈ ಸಂಪನ್ಮೂಲಗಳ ಮೇಲೆಯೇ ತೀವ್ರ ಒತ್ತಡ ತಂದು ಅವುಗಳ ಕೊರತೆ ತಲೆದೋರುವುದಕ್ಕೆ ಕಾರಣವಾಗಿದೆ. ಉಳಿದಿರುವ ಸಂಪನ್ಮೂಲಗಳನ್ನು ಮಾನವ ತನ್ನ ಒಳಿತಿಗಾಗಿ ಬಳಸಿಕೊಳ್ಳುವ ಅನೇಕ ವಿಧಾನಗಳಿಗೆ ಮೊರೆಹೋಗುತ್ತಿದ್ದಾನೆ. ಇಂದು ಇದೇ ಬಹು ಚರ್ಚಿತವಾಗುತ್ತಿರುವ ಹಾಗೂ ವಿಜ್ಞಾನಿಗಳು ತಂತ್ರಜ್ಞರು ಬಲವಾಗಿ ವಿರೋಧಿಸುತ್ತಿರುವ ನದಿ ಜೋಡಣೆ ಯೋಜನೆ.

ಮೈದುಂಬಿ ಹರಿದು ಪ್ರವಾಹ - ಸಾವು ನೋವು ಉಂಟುಮಾಡುತ್ತಿರುವ ಉತ್ತರದ ನದಿಗಳನ್ನು ತಡೆದು, ಅಣೆಕಟ್ಟೆ ಕಟ್ಟಿ ಅವುಗಳ ಮಾರ್ಗ ಬದಲಿಸಿ ಕಾಲುವೆಗಳ ಮೂಲಕ ಬರಪೀಡಿತ ದಕ್ಷಿಣಕ್ಕೆ ವರ್ಗಾಯಿಸುವುದು ಯೋಜನೆಯ ಸಂಕ್ಷಿಪ್ತ ನೋಟ. ನಿಜದಲ್ಲಿ ಇದು ಭಾರತದ ಭೂಗೋಳವನ್ನೇ ಬದಲಾಯಿಸುವ ಯೋಜನೆ. (ಬಾಕ್ಸ್ ನೋಡಿ)

ಈ ಯೋಜನೆಯಿಂದ 'ಬರ' ಎಂಬುದು ಸದಾಕಾಲಕ್ಕೆ ತೊಲಗುತ್ತದೆ, ಪ್ರವಾಹ ಇನ್ನಿಲ್ಲವಾಗುತ್ತದೆ, ಕುಡಿಯುವ ನೀರಿನ ಸಮಸ್ಯೆ ಪರಿಹಾರವಾಗುತ್ತದೆ, ಕೃಷಿಗೆ ನೀರಿನ ಕೊರತೆ ಇರುವುದಿಲ್ಲವಾದ್ದರಿಂದ ಅದು ಅಬಾಧಿತವಾಗುವುದರೊಂದಿಗೆ ನಿರುದ್ಯೋಗ ಸಮಸ್ಯೆ ಪರಿಹಾರವಾಗುತ್ತದೆ, ಹೆಚ್ಚು ವಿದ್ಯುತ್ ಉತ್ಪಾದನೆ ಸಾಧ್ಯವಾಗಿ ಅದರ ಕೊರತೆಯನ್ನು ತಕ್ಕಮಟ್ಟಿಗೆ ನೀಗಿಸಬಹುದು ಎಂದೆಲ್ಲಾ ಸರ್ಕಾರ ಜನರನ್ನು ನಂಬಿಸಲು ಯತ್ನಿಸುತ್ತಿದೆ. ಇಂತಹ ಯೋಜನೆಯ ಸಾಧಕ ಬಾಧಕಗಳನ್ನು ತಾಂತ್ರಿಕ, ಆರ್ಥಿಕ ಹಾಗೂ ಸಾಮಾಜಿಕ ಹಿನ್ನೆಲೆಯಲ್ಲಿ ಚರ್ಚಿಸೋಣ.

**ತಾಂತ್ರಿಕ ಅಂಶಗಳು**

ನದಿ ಜೋಡಣೆಯನ್ನು ಹಿಮಾಲಯ ಭಾಗದ ಜೋಡಣೆ, ದಕ್ಷಿಣದ ಪ್ರಸ್ಥಭೂಮಿಯ ಜೋಡಣೆ ಎಂದು ವಿಂಗಡಿಸಲಾಗಿದ್ದು, ದಕ್ಷಿಣದಲ್ಲಿ ಒಂದು ನೀರಿನ ಜಾಲವನ್ನೂ ಉತ್ತರದಲ್ಲಿ ಮುಖ್ಯವಾಗಿ ಗಂಗಾ-ಬ್ರಹ್ಮಪುತ್ರ ನದಿಗಳನ್ನೂ ಜೋಡಿಸಲು ಉದ್ದೇಶಿಸಲಾಗಿದೆ. ಉತ್ತರದ ಹಿಮಾಲಯ ಭಾಗದಲ್ಲಿ ಅಣೆಕಟ್ಟೆಗಳನ್ನು ಕಟ್ಟಿ ಕಾಲುವೆಗಳ ಜಾಲ ನಿರ್ಮಿಸಿ ದಕ್ಷಿಣದ ಜಲಜಾಲಕ್ಕೆ ಜೋಡಿಸಲಾಗುವುದು. ಒಟ್ಟು ಕಾಲುವೆಯ ಉದ್ದ ಹನ್ನೆರಡೂವರೆ ಸಾವಿರ ಕಿ.ಮೀ. ಈಗ ಇದಕ್ಕಿರುವ ತಾಂತ್ರಿಕ ಅಡಚಣೆಗಳನ್ನು ನೋಡೋಣ :

ಮುಖ್ಯವಾಗಿ, ನ್ಯಾಷನಲ್ ಕಮಿಷನ್ ಫಾರ್ ಇಂಟಿಗ್ರೇಟೆಡ್ ವಾಟರ್ ರೀಸರ್ಚ್ ಡೆವಲಪ್‌ಮೆಂಟ್‌ನ ತಜ್ಞರ ವರದಿಯಲ್ಲಿ ಹೀಗೆ ಹೇಳಲಾಗಿದೆ : ''ಹಿಮಾಲಯ ಭಾಗದ ಭೂಗರ್ಭ ವಿಜ್ಞಾನದಲ್ಲಿ ನಮಗಿರುವ 'ಅರಿವಿನ ಕಂದಕ' ಎಷ್ಟೆಂದರೆ ಮುಂಬರುವ ದಶಕಗಳಲ್ಲಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳುವುದು ಅಸಾಧ್ಯ.'' ಹಾಗೆಯೇ ದಕ್ಷಿಣದ ಯೋಜನೆಗಳ ಬಗ್ಗೆ ನಕಾರಾತ್ಮಕ ಅಭಿಪ್ರಾಯ ವ್ಯಕ್ತವಾಗಿದೆ. ಆದರೆ, ಈ ಯೋಜನೆಯ ಟಾಸ್ಕ್ ಫೋರ್ಸ್ ಮಾತ್ರ ಸಂಪೂರ್ಣ ಕಾರ್ಯಸಾಧ್ಯತಾ ವರದಿ (ಫೀಸಿಬಿಲಿಟಿ ರಿಪೋರ್ಟ್) ೨೦೦೬ರಲ್ಲಿ ಲಭ್ಯವಾಗುವ ನಿರೀಕ್ಷೆ ಇದ್ದರೂ ೨೦೦೪ರಲ್ಲೇ ಕಾರ್ಯಾರಂಭ ಮಾಡುವುದಾಗಿ ಹೇಳುವ ಉದ್ಧಟತನ ಪ್ರದರ್ಶಿಸಿದೆ.

ಅಲ್ಲದೆ, ಹಿಮಾಲಯ ಭೂಭಾಗವು ಭೂಕಂಪನ ಪೀಡಿತ ಪ್ರದೇಶ. ಇಲ್ಲಿ, ಉದ್ದೇಶಿಸಿರುವ ಅಣೆಕಟ್ಟುಗಳನ್ನು ನಿರ್ಮಿಸಿದ ನಂತರ ಭೂಕಂಪನ ಸಂಭವಿಸಿದರೆ ಕಲ್ಪನೆಗೆ ನಿಲುಕದ ಅನಾಹುತಗಳಾಗುತ್ತವೆ ಎಂದು ವಿಜ್ಞಾನಿಗಳು ಎಚ್ಚರಿಸಿದ್ದಾರೆ.

**ಇತರ ತಾಂತ್ರಿಕ ಆಕ್ಷೇಪಗಳು ಇಂತಿವೆ :**

೧. ಈ ಯೋಜನೆಯಲ್ಲಿ ಹೇಳಲಾಗಿರುವ ''ಸಾಗರಕ್ಕೆ ವ್ಯರ್ಥವಾಗಿ ಹರಿಯುವ ನೀರನ್ನು ಬಳಸಿಕೊಳ್ಳಲಾಗುವುದು'' ಎಂಬುದೇ ಅವೈಜ್ಞಾನಿಕ ಹೇಳಿಕೆ! ನಿಸರ್ಗದಲ್ಲಿ ವ್ಯರ್ಥವಾದುದು ಯಾವುದೂ ಇಲ್ಲ. ನದಿಗಳು ಹರಿಯಲೇಬೇಕು. ಅವು ಖನಿಜಾಂಶಗಳನ್ನು ಹಾಗೂ ಜೈವಿಕ ಪದಾರ್ಥಗಳನ್ನು ತೆಗೆದುಕೊಂಡು ಹೋಗಿ ಸಾಗರಕ್ಕೆ ಸೇರಿಸುತ್ತವೆ. ಸಾಗರದ ಜೀವಿಗಳ ಆಹಾರಕ್ಕೆ ಇವೇ ಮೂಲ. ಆಹಾರ ಸರಪಳಿಯ ಪ್ರಥಮ ಕೊಂಡಿ. ಇದನ್ನೆ ಬದಲಾಯಿಸುವ ಅವಿವೇಕದ ಮಾತುಗಳು ಸರಕಾರದಿಂದ ಬರುತ್ತಿವೆ. ಇತರೆ ದೇಶಗಳಲ್ಲಿ ಹೀಗೆ ಮಾಡಿದ ಮೇಲೆ ಸಾಗರಗಳೇ ಸತ್ತ ಉದಾಹರಣೆ ಇದೆ (ಪುಟ ೫೧ರಲ್ಲಿ ಬಾಕ್ಸ್ ನೋಡಿ). ಪ್ರವಾಹ, ನಿಜದಲ್ಲಿ ನದಿಯಲ್ಲಿನ ಹೂಳು ತೆಗೆಯುವ ನಿಸರ್ಗದ ಆಟ! ಪ್ರವಾಹ ಇಳಿದ ಮೇಲೆ ಹೊಲಗದ್ದೆಗಳಲ್ಲಿ ಉಳಿಯುವ ಹೂಳು

---

**ನದಿ ಜೋಡಣೆಯ ಇತಿಹಾಸ**

ಈ ಯೋಜನೆಗೆ ಸುಮಾರು ಎರಡು ಶತಮಾನಗಳ ಇತಿಹಾಸವಿದೆ. ೧೯ನೇ ಶತಮಾನದಲ್ಲಿ ಭಾರತದಲ್ಲಿದ್ದ ಸರ್ ಆರ್ಥರ್ ಕಾಟನ್ ಎಂಬಾತ ಸಂಪರ್ಕ ಹಾಗೂ ಕೃಷಿಗಾಗಿ ನದಿ ಜೋಡಣೆಯನ್ನು ಮೊದಲಿಗೆ ಪ್ರಸ್ತಾಪಿಸಿದ. ಆದರೆ ಆಗ ಬ್ರಿಟಿಷ್ ಸರ್ಕಾರ ಆ ಯೋಜನೆಯಲ್ಲಿ ಆಸಕ್ತಿ ತೋರಿಸಲಿಲ್ಲ.

ನಂತರ ಬಂದದ್ದು, ಡಾ॥ ಕೆ. ಎಲ್. ರಾವ್ ಅವರ ಯೋಜನೆ. ಇದು ಮುಖ್ಯವಾಗಿ ೧. ಗಂಗಾ-ಕಾವೇರಿ ಜೋಡಣೆ. ೨. ಗಂಗಾ-ಬ್ರಹ್ಮಪುತ್ರ. ೩. ನರ್ಮದಾ ನದಿಯಿಂದ ಗುಜರಾತ್ ಹಾಗೂ ರಾಜಸ್ಥಾನಕ್ಕೆ ದೊಡ್ಡ ಕಾಲುವೆ. ೪. ಪಶ್ಚಿಮ ಘಟ್ಟದ ಜೋಡಣೆಗಳು. ೫. ಚಂಬಲ್ ಹಾಗೂ ಅಜ್ಮೀರ್ ಜೋಡಣೆ. ೬. ಮಹಾನದಿ ಹಾಗೂ ಶಾರದಾ ಜೋಡಣೆ ಒಳಗೊಂಡಿದ್ದು ೨೦ ದಶಲಕ್ಷ ಹೆಕ್ಟೇರ್ ಭೂಮಿಗೆ ನೀರುಣಿಸುವ ಯೋಜನೆಯಾಗಿತ್ತು. ಇದು ಬೇಡುವ ವಿದ್ಯುತ್ ಹಾಗೂ ಇತರ ಸಂಪನ್ಮೂಲಗಳನ್ನು ಗಮನಿಸಿ ಇದನ್ನು ಕೈಬಿಡಲಾಯಿತು.

ನಂತರ ಸುದ್ದಿಗೆ ಬಂದಿದ್ದು ಕ್ಯಾ॥ ದಸ್ತೂರ್ ಅವರ 'ಗಾರ್ಲ್ಯಾಂಡ್ ಕೆನಾಲ್' ಯೋಜನೆ. ಹಿಮಾಲಯದಲ್ಲಿ ೧೦೦೦-೧೫೦೦ ಅಡಿ ಎತ್ತರದಲ್ಲಿ ಹಾಗೂ ದಕ್ಷಿಣ ಪ್ರಸ್ಥಭೂಮಿಯಲ್ಲಿ ಸಮುದ್ರ ದಂಡೆಗೆ ಸಮಾನಾಂತರವಾಗಿ ಕಾಲುವೆಗಳನ್ನು ತೋಡಿ ಜೋಡಿಸುವುದಾಗಿತ್ತು. ತಾಂತ್ರಿಕವಾಗಿ ಬೆಟ್ಟಗಳನ್ನು ಕಡಿಯಬೇಕಾಗುತ್ತದೆ ಎಂದು ಇದನ್ನು ಕೈಬಿಡಲಾಯಿತು.

ನಂತರ ೧೯೮೨ರಲ್ಲಿ ರಾಷ್ಟ್ರೀಯ ಜಲ ಅಭಿವೃದ್ಧಿ ನಿಗಮ ಪ್ರಸಕ್ತ ಯೋಜನೆಯನ್ನು ತಯಾರಿಸಿದೆ. ಹಿಮಾಲಯ ಹಾಗೂ ದಕ್ಷಿಣದ ಪ್ರಸ್ಥಭೂಮಿಗೆ ಅಲ್ಲಿಯ ನದಿಗಳನ್ನು ಜೋಡಿಸುವುದು ಹಾಗೂ ದಕ್ಷಿಣಕ್ಕೆ ಒಂದು ಜಲಪಟ್ಟಿ ನಿರ್ಮಿಸಿ ಅದನ್ನು ಹಿಮಾಲಯದ ಜೋಡಣೆ ಜಾಲಕ್ಕೆ ಸೇರಿಸುವುದು ಇದರ ವೈಶಿಷ್ಟ್ಯ.

CHINA
Water tunnel with axial flow turbines for hydro Electric Power
Himalayas
Brahmaputra River
Zonal Strips of Large Reverse tube wells
Western Ghats to be developed with Pump Storage Scheme

ಉತ್ತರ ಭಾರತಕ್ಕೆ ಸೂಚಿಸಲಾಗಿರುವ ಪರ್ಯಾಯ ಯೋಜನೆ

---

ಉತ್ತಮ ಗೊಬ್ಬರ. (ಇಂದಿನ ನೆರೆಗೆ ಪರೋಕ್ಷವಾಗಿ ನಾವೇ ಕಾರಣರು ಎಂಬುದನ್ನು ಮರೆಯಬಾರದು).

೨. ಮುಂದಿನ ವರ್ಷಗಳಲ್ಲಿ ಇದೇ ಕಾಲುವೆ ಅಣೆಕಟ್ಟುಗಳಲ್ಲಿ ಹೂಳು ತುಂಬಿ ಅವು ನಿಷ್ಪ್ರಯೋಜಕವಾಗುತ್ತವೆ. ನೀರು ಕ್ಷಾರಯುತವಾಗಿ ರೋಗಗಳ ತವರಾಗುತ್ತದೆ. ಅಲ್ಲದೆ, ಇಡೀ ಜೋಡಣೆಯ ಹೂಳೆತ್ತಲು ಸಾಧ್ಯವೇ ಇಲ್ಲ.

೩. ಈ ಕಾಲುವೆಗಳು, ಕಟ್ಟೆಗಳು ನಮ್ಮ ನೈಸರ್ಗಿಕ ಕಾಡುಗಳನ್ನು ಮತ್ತಷ್ಟು ವಿಭಾಗಿಸಿ ಹದಗೆಡಿಸುತ್ತವೆ. ವನ್ಯಜೀವಿಗಳ ನೆಲೆ ಅತಂತ್ರವಾಗುತ್ತದೆ. ಕಾಡಿನ ಸವೆತ ಮಳೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ.

೪. ಯೋಜನೆ ಅನುಷ್ಠಾನವಾದ ನಂತರ ಏನಾಗುತ್ತದೆ ಎಂದು ಹೇಳಲು ಬಾರದಷ್ಟು ಈ ಯೋಜನೆ ಬೃಹತ್ತಾಗಿದೆ. ವಿಶ್ವದಲ್ಲಿ ಇಂತಹ ಬೃಹತ್ ಯೋಜನೆ ಇದುವರೆವಿಗೂ ಕಾರ್ಯಗತವಾಗಿಲ್ಲ. ಇದರ ಪರಿಣಾಮ ಪರಿಸರದ ಮೇಲೆ ಏನಾಗಬಹುದೆಂದು ಊಹಿಸಲೂ ಸಾಧ್ಯವಿಲ್ಲ. ಎರಡೋ- ಮೂರೋ ನದಿಗಳನ್ನು ಪ್ರಾಯೋಗಿಕವಾಗಿ ಜೋಡಿಸಿ ಪರಿಣಾಮವನ್ನು ಅಧ್ಯಯನ ಮಾಡುವ ಬದಲು ಇಡೀ ಭಾರತದ ನದಿಗಳನ್ನು ಏಕಕಾಲದಲ್ಲಿ ಜೋಡಿಸಬೇಕೆನ್ನುತ್ತಿರುವ ಸರ್ಕಾರ ಈ ಗಂಭೀರ ಸವಾಲುಗಳಿಗೆ ಗಮನ ಕೊಡದೆ ಇರುವುದು ಪ್ರಜಾಪ್ರಭುತ್ವದ ಲಕ್ಷಣವಲ್ಲ. ರಸ್ತೆಗಳನ್ನೂ, ವಿದ್ಯುತ್ ತಂತಿಗಳನ್ನೂ ಜೋಡಿಸುವಂತೆ ನದಿಗಳನ್ನು ಜೋಡಿಸಲು ಬಾರದು. ನದಿಗಳು ಇಡೀ ಪರಿಸರದ ಅವಿಭಾಜ್ಯ ಅಂಗ.

೫. ಗಂಗಾ ಹಾಗೂ ಬ್ರಹ್ಮಪುತ್ರ ಎರಡೂ ಏಕಕಾಲದಲ್ಲಿ ಪ್ರವಾಹ ಪೀಡಿತವಾಗುವುದರಿಂದ ಅವನ್ನು ಜೋಡಿಸಲಾಗದು. ನಮ್ಮ ಹಲವಾರು ನದಿಗಳು ಪ್ರವಾಹ ಪೀಡಿತವಾಗುವುದರ ಜೊತೆಗೆ ಸಾಕಷ್ಟು ಮಲಿನವೂ ಆಗಿವೆ. ಹೀಗಿರುವಾಗ ಇವನ್ನು ಜೋಡಿಸಿ ಮಾಲಿನ್ಯವನ್ನು ಹಂಚುವುದು ಅವೈಜ್ಞಾನಿಕವಷ್ಟೇ ಅಲ್ಲ, ಮಾರಕವೂ ಕೂಡಾ.

ಇವೆಲ್ಲದರ ಜೊತೆಗೆ ಸರ್ಕಾರ ಇನ್ನೊಂದು ಆಟ ಆಡುತ್ತಿದೆ: ಅದು ಯೋಜನೆಯ ಯಾವುದೇ ಬಿಡಿ ವಿವರಗಳನ್ನೂ ಸಾರ್ವಜನಿಕರಿಗಿರಲಿ, ಪ್ರಸಿದ್ಧ ವಿಜ್ಞಾನಿಗಳಿಗೇ ನೀಡಿಲ್ಲ! ಈ ಹಿನ್ನೆಲೆಯಲ್ಲೇ ವಿಜ್ಞಾನಿ ಪ್ರೊ॥ ಮಾಧವ ಗಾಡ್ಗಿಲ್‌ರವರು ''ಪರಿಸರದ ಮೇಲೆ ಭ್ರಷ್ಟಾಚಾರದ ಪರಿಣಾಮ'' ಕುರಿತ ಸಮ್ಮೇಳನದಲ್ಲಿ ''ಅಭಿವೃದ್ಧಿ ಕಾಮಗಾರಿಗಳು ಅಧಿಕಾರಸ್ಥರಿಗೆ ಅನ್ಯಾಯವಾಗಿ ಹಣ ಗಳಿಸಲು ಅವಕಾಶಗಳನ್ನು ಸೃಷ್ಟಿಸುವ ಹುನ್ನಾರಗಳಾಗಿವೆ. ಅಭಿವೃದ್ಧಿ ಹಾಗೂ ಪರಿಸರವನ್ನು ಪರಸ್ಪರ ವಿರುದ್ಧ ಪದಗಳನ್ನಾಗಿಸಿದ್ದು ಹಾಗೂ ಸಾರ್ವಜನಿಕರಿಗೆ ಮಾಹಿತಿ ನಿರಾಕರಿಸುವುದು ಈ ಎರಡೂ ವಿಕೃತ ಅಭಿವೃದ್ಧಿಯನ್ನು ಸಾಧಿಸಿ ಸಂಪನ್ಮೂಲಗಳನ್ನು ಅಸಮರ್ಪಕವಾಗಿ ಬಳಸಲು ಮೂಲವಾಯಿತು'' ಎಂದಿದ್ದು.

ಈ ಯೋಜನೆಯ ಬಗೆಗೂ ಅದೇ ಮಾತು ಹೇಳಬೇಕಿದೆ. ಈ ಯೋಜನೆಯನ್ನು ನಿರ್ಮಿಸಿದ ನ್ಯಾಷನಲ್ ವಾಟರ್ ಡೆವಲಪ್‌ಮೆಂಟ್ ಏಜೆನ್ಸಿಯು, ತಾನು ಈ ಯೋಜನೆಯ ಸಾಧಕ ಬಾಧಕಗಳನ್ನೆಲ್ಲಾ ಪರಿಶೀಲಿಸಿದ್ದು ಅವು ಸಮರ್ಪಕವಾಗಿವೆ ಹಾಗೂ ಇದನ್ನೇ ತಜ್ಞ ಎಂಜಿನಿಯರ್‌ಗಳು, ಸಮಾಜ ಶಾಸ್ತ್ರಜ್ಞರು ಒಪ್ಪಿದ್ದಾರೆ ಎಂದು ಹೇಳಿದೆ. (ಈ ತಜ್ಞರು ಯಾರೆಂದು ಅದು ಬಹಿರಂಗಪಡಿಸಿಲ್ಲ!) ಹಾಗಿದ್ದಲ್ಲಿ ಈ ಅಧ್ಯಯನದ ವಿವರಗಳನ್ನು ಜನರಿಗೆ ನೀಡಿ ಉಪಯುಕ್ತ ಚರ್ಚೆಗೆ ಏಕೆ ಅವಕಾಶ ಮಾಡಿಕೊಡಬಾರದು? ಎಂಬ ಮದ್ರಾಸಿನ ಅಭಿವೃದ್ಧಿ ಅಧ್ಯಯನ ಕೇಂದ್ರದ ಪ್ರಾಧ್ಯಾಪಕ ಪ್ರೊ॥ ಎ. ವೈದ್ಯನಾಥನ್ ಅವರ ಪ್ರಶ್ನೆಗೆ ಇದುವರೆಗೂ ಉತ್ತರ ಸಂದಿಲ್ಲ!

ಜೊತೆಗೆ, ಸರ್ಕಾರ ದಮನಕಾರಿ ತಂತ್ರಗಳನ್ನು ಬಳಸಿ ಪ್ರಾಮಾಣಿಕ ಪ್ರತಿರೋಧವನ್ನು ತುಳಿಯುತ್ತಿರುವುದು ಪ್ರಜಾಪ್ರಭುತ್ವಕ್ಕೆ ಮಾರಕವಾಗಿದೆ. ಬಾಂಬೆ ನ್ಯಾಚುರಲ್ ಹಿಸ್ಟರಿ ಸೊಸೈಟಿಯು ಸರಿ ಸುಮಾರು ಇನ್ನೂರು ವರ್ಷಗಳಿಂದ ಭಾರತದ ಜೀವ-ವೈವಿಧ್ಯದ ಮೇಲೆ ಸಂಶೋಧನೆ ಮಾಡಿಕೊಂಡು ಬರುತ್ತಿರುವುದರ ಜೊತೆಗೆ ಜನರಲ್ಲಿ ಪರಿಸರ ಪ್ರಜ್ಞೆ ಮೂಡಿಸಲು ದುಡಿಯುತ್ತಿರುವ ಸಂಸ್ಥೆ. ಇದರ ಮುಖಪತ್ರಿಕೆ ವಿಖ್ಯಾತವಾದದ್ದು. ಅದರ ಏಪ್ರಿಲ್ ಸಂಚಿಕೆಯಲ್ಲಿ ಸರ್ಕಾರದ ಯೋಜನೆಯನ್ನು ವಿಶ್ಲೇಷಿಸಿ ಸಂಪಾದಕೀಯದಲ್ಲಿ ಚರ್ಚಿಸಿತು. ಇದನ್ನೇ ಕೆಲ ಜನ ವಿಜ್ಞಾನಿಗಳು ಸಹಿ ಮಾಡಿ ಸರ್ಕಾರ ಪರ್ಯಾಯ ಯೋಜನೆ ಹಾಕಿಕೊಳ್ಳಬೇಕೆಂದು ಸೂಚಿಸಿತು. ಪರಿಣಾಮ? ಸರ್ಕಾರವು ಈ ಸಂಸ್ಥೆಯನ್ನೇ ಪ್ರಧಾನಿಯವರ ಅಧ್ಯಕ್ಷತೆಯಲ್ಲಿರುವ ವನ್ಯಜೀವಿ ಅಧ್ಯಯನ ಬೋರ್ಡ್‌ನಿಂದ ಹೊರಗಿಟ್ಟಿತು! ಇದರಿಂದಾಗುವ ಹಾನಿ ಸಂಸ್ಥೆಗಲ್ಲ, ದೇಶಕ್ಕೆ ಎಂದು ನಮ್ಮ ಪ್ರಧಾನಿಗೆ ಹೇಳುವವರು ಯಾರು? ನಮ್ಮ ಎನ್.ಡಿ.ಎ. ಪರಿಭಾಷೆಯಲ್ಲಿ ಇದನ್ನು ಹೇಳುವುದಾದರೆ, ಬಿ.ಎನ್.ಎಚ್.ಎಸ್. ಇಲ್ಲದ ವನ್ಯಜೀವಿ ಬೋರ್ಡ್ ರಾಮನಿಲ್ಲದ ಅಯೋಧ್ಯೆಯಂತೆ!

ಇದಷ್ಟೇ ಅಲ್ಲ! ನದಿ ಜೋಡಣೆ ಎಂದರೆ ಕೆಳಗಿನ ಸಂಪ್‌ನಿಂದ ಮೇಲಿನ ಮನೆಗೆ ನೀರು ಹಾಯಿಸುವಷ್ಟು ಸರಳವಾದುದಲ್ಲ ಸಮಸ್ಯೆ. ಉತ್ತರ ಭಾರತದಿಂದ ದಕ್ಷಿಣಕ್ಕೆ ನೀರು ಹರಿಯುವಾಗ ಅಲ್ಲಲ್ಲಿನ ನೆಲದ ಪ್ರದೇಶಗಳಲ್ಲಿ ನೀರು ಇಂಗುವ ಚಟುವಟಿಕೆ ಇರುತ್ತದೆ. ಪ್ರತಿ ಜೋಡಣೆಯ ಹಾದಿಯಲ್ಲಿ ಇವುಗಳಿಂದಾಗುವ ಪರಿಣಾಮದ ಬಗ್ಗೆ ಅಧ್ಯಯನ ಮಾಡಬೇಕಾಗಿದೆ.

ಹಣವಿದ್ದರೆ ಯಾವ ಯೋಜನೆಯನ್ನಾದರೂ ಮಾಡಬಹುದು. ಪರಿಸರ ತಜ್ಞರ, ಭೂಗರ್ಭ ಶಾಸ್ತ್ರಜ್ಞರ ಅಭಿಪ್ರಾಯ ಪಡೆಯದೆ ಈ ಯೋಜನೆಯನ್ನು ಕೇವಲ ಎಂಜಿನಿಯರಿಂಗ್ ಸಮಸ್ಯೆ ಎಂದು ಪರಿಗಣಿಸಿ ಪರಿಹರಿಸುವುದೆಂದರೆ ನಲ್ಲಿ ದುರಸ್ತಿ ಮಾಡಿಸುವವನಿಂದ ತೆರೆದ ಹೃದಯ ಶಸ್ತ್ರಚಿಕಿತ್ಸೆ ಮಾಡಿಸಿದಂತೆ!

## ಉದ್ದೇಶಿತ ಜೋಡಣೆಗಳು

***ಪ್ರಮುಖ ಜೋಡಣೆಗಳು***

೧. ದಕ್ಷಿಣದ ಜಲಪಟ್ಟಿ : ಇದರಲ್ಲಿ ಮಹಾನದಿ, ಗೋದಾವರಿ, ಪೆನ್ನಾರ್, ಕಾವೇರಿ ಹಾಗೂ ವೇಗೈ ನದಿಗಳ ಜೋಡಣೆ.

೨. ಬ್ರಹ್ಮಪುತ್ರ - ಗಂಗಾ ಹಾಗೂ ಸುವರ್ಣರೇಖಾ - ಮಹಾನದಿ ಜೋಡಣೆ.

೩. ಗಂಡಕಿ, ಶಾರದಾ ಹಾಗೂ ಯಮುನಾವನ್ನು ರಾಜಸ್ಥಾನಕ್ಕೆ ಸೇರಿಸಿ ಸಬರಮತಿ ಮುಟ್ಟಿಸುವುದು

***ಉಳಿದದ್ದನ್ನು ಎರಡು ವಿಭಾಗಗಳಲ್ಲಿ ಹಂಚಲಾಗಿದೆ.***

ಹಿಮಾಲಯ ಪ್ರಾಂತ್ಯದ ಜೋಡಣೆಗಳು –

೧. ಮಾನಸ - ಸಂತೋಷ್- ಟಿಸ್ಟ- ಗಂಗಾ
೨. ಜಗಿಡೋಪ- ಟಿಸ್ಟ- ಫರಕ್ಕಾ
೩. ಗಂಗಾ- ದಾಮೋದರ- ಸುವರ್ಣರೇಖಾ
೪. ಫರಕ್ಕಾ- ಸುಂದರಬನ
೫. ಗಂಡಕಿ- ಗಂಗಾ
೬. ಗಾಂಧಾರ- ಯಮುನ
೭. ಶಾರದಾ- ಯಮುನ
೮. ರಾಜಾಸ್ತಾನ - ಸಬರಮತಿ ಕೋಣಿಕೆ
೯. ಚುನಾರ್- ಸೋನೆ ಬ್ಯಾರೇಜ್ ಕೋಣಿಕೆ
೧೦. ಸೋನೆ ಅಣೆಕಟ್ಟೆಯಿಂದ ಗಂಗಾದ ದಕ್ಷಿಣ ಉಪನದಿಗಳಿಗೆ.
೧೧. ಕೋಸಿ- ಗಂಪಾರ ಕೋಣಿಕೆ
೧೨. ಕೋಸಿ- ಮೇಚಿ ಕೋಣಿಕೆ

## ದಕ್ಷಿಣ ಪ್ರಸ್ಥಭೂಮಿಯ ಜೋಡಣೆಗಳು

೧. ಮಹಾನದಿ- ಗೋದಾವರಿ
೨. ಇಂಚಪಲ್ಲಿ - ನಾಗಾರ್ಜುನ ಸಾಗರ
೩. ಇಂಚಪಲ್ಲಿ ಕೆಳ ಅಣೆಕಟ್ಟೆ - ನಾಗಾರ್ಜುನ ಸಾಗರ ಟೇಲ್ ಪಾಂಡ್‌ವರೆಗೆ
೪. ಪೋಲಾವರಮ್ - ವಿಜಯವಾಡ
೫. ಆಲಮಟ್ಟಿ - ಪೆನ್ನಾರ್ ಕೋಣಿಕೆ
೬. ಶ್ರೀಶೈಲಂ - ಪೆನ್ನಾರ್
೭. ನಾಗಾರ್ಜುನ ಸಾಗರ - ಸೋಮಶೀಲ
೮. ಕಟ್ಟಾಲಾಯ್- ವೇಗೈ- ಗುಂಡಾರ ಕೋಣಿಕೆ
೯. ಪಾಂಬ- ಅಚಾನ್‌ಕೋವಿಲ್- ವೈಪ್ಪಾರ್ ಕೋಣಿಕೆ
೧೦. ಬೇಡ್ತಿವರದಾ ಕೋಣಿಕೆ
೧೧. ನೇತ್ರಾವತಿ- ಹೇಮಾವತಿ
೧೨. ದಮನಗಂಗಾ- ಪಿಂಜಾಲ್
೧೩. ಪಾರ್- ತಾಪಿ- ನರ್ಮದಾ
೧೪. ಕೆನ್- ಬೇತ್ವಾ
೧೫. ಪಾರ್ವತಿ- ಕಾಳಿಸಿಂದ್- ಚಂಬಲ್‌ಕೋಣಿಕೆ

*ಕೃಪೆ. ಕೇಂದ್ರ ಸರ್ಕಾರದ ವೆಬ್‌ಸೈಟ್ http//riverlinks.nic.in.*

### ಆರ್ಥಿಕ ಸವಾಲುಗಳು

ನದಿ ಜೋಡಣೆಗೆ ೨೦೦೨ರಲ್ಲಿದ್ದ ದರದಲ್ಲಿ ೫,೬೦,೦೦೦ ಕೋಟಿ ರೂ.ಗಳು ಎಂದು ಅಂದಾಜು ಮಾಡಲಾಗಿದೆ. ಅಂದರೆ ೧೧೨ ಶತಕೋಟಿ ಡಾಲರ್. ಯೋಜನೆಯು ಮುಗಿಯುವಾಗ ಇದು ೨೦೦ ಶತಕೋಟಿ ಡಾಲರ್‌ಗಳಷ್ಟು ಆಗುವುದೆಂದು ಯೋಜನೆ ಅಧಿಕಾರಿ ಸುರೇಶ್‌ಪ್ರಭು ಹೇಳಿದ್ದಾರೆ. ಎನ್.ಡಿ.ಡಬ್ಲ್ಯೂ.ಎ. ಪ್ರಕಾರ ಹಿಮಾಲಯದ ಯೋಜನೆಗೆ, ಹದಿನಾಲ್ಕು ನದಿಗಳ ಜೋಡಣೆಗೆ ೩,೭೫,೦೦೦ ಕೋಟಿ ಹಾಗೂ ದಕ್ಷಿಣದ ಯೋಜನೆಗೆ ರೂಪಾಯಿ ೧,೮೫,೦೦೦ ಕೋಟಿ ಖರ್ಚು ತಗಲುತ್ತದೆ.

*(ಸರ್ಕಾರದ ಹೇಳಿಕೆಗಳಲ್ಲಿರುವ ವೈರುಧ್ಯಗಳನ್ನು ನೋಡಿ : ಜಲಸಂಪನ್ಮೂಲ ಇಲಾಖೆಯ ಅಧಿಕಾರಿಗಳು ದಕ್ಷಿಣದ ಯೋಜನೆಗೇ ೫ ಲಕ್ಷ ಕೋಟಿ ರೂ.ಗಳು ಬೇಕಾಗುತ್ತದೆ ಎನ್ನುತ್ತಾರೆ)*

ಈಗ, ಎಲ್ಲರೂ ಒಪ್ಪುವ ರೂಪಾಯಿ ೫,೬೦,೦೦೦ ಕೋಟಿಯ ಯೋಜನೆಯನ್ನೇ ತೆಗೆದುಕೊಳ್ಳೋಣ. ಇದು ನಮ್ಮ ವಿದೇಶಿ ವಿನಿಮಯ ನಿಧಿಯ ಎರಡರಷ್ಟು! ಇದನ್ನು ತೆರಲು ಸರ್ಕಾರದಲ್ಲಿ ಹಣವೆಲ್ಲಿದೆ ? ಈಗಾಗಲೇ ಚಾಲ್ತಿಯಲ್ಲಿರುವ ಯೋಜನೆಗಳನ್ನೇ ಮುಗಿಸಲು ೧೦ನೇ ಯೋಜನೆಯಲ್ಲಿ ರೂಪಾಯಿ ೬೦ ಸಾವಿರ ಕೋಟಿ ಬೇಕಾಗಿದ್ದು ೧೧ನೇ ಯೋಜನೆಯಲ್ಲಿ ಇದು ಒಂದು ಲಕ್ಷ ಹತ್ತು ಸಾವಿರ ಕೋಟಿಗೇರಲಿದೆ. ಹೀಗಾಗಿ ಈ ಪಾಟಿಯ ಬೆಲೆ ಏರಿಕೆ ಯಾವ ಹೊಸ ಯೋಜನೆಯನ್ನೂ ಆಗಗೊಡುವುದಿಲ್ಲ. ಈ ಹಣವನ್ನು ವಿಶ್ವಬ್ಯಾಂಕಿನಿಂದ ಸಾಲ ಪಡೆಯಬೇಕೆಂಬುದು ಸರ್ಕಾರದ ಹುನ್ನಾರ. ಹೀಗೆ ಸಾಲವಾಗಿ ತಂದ ಹಣಕ್ಕೆ ವಾರ್ಷಿಕ ಬಡ್ಡಿ ರೂಪಾಯಿ ೨೦ ರಿಂದ ೩೦ ಸಾವಿರ ಕೋಟಿಗಳಾಗುತ್ತವೆ. ಇಷ್ಟು ವೆಚ್ಚ ಮಾಡಿ ಮಾಡಲಾಗುವ ಯೋಜನೆಯಿಂದ ಒದಗುವ ನೀರು ಹಾಗೂ ಶಕ್ತಿಯನ್ನು ರೈತರಿಗೆ ಹಾಗೂ ಉದ್ಯಮಿಗಳಿಗೆ ನಿಲುಕದ ಬೆಲೆಗಳಲ್ಲಿ ಕೊಡಬೇಕಾಗುತ್ತದೆ. ಮುಂದೆ ಇದರ ಪರಿಣಾಮವಾಗಿ ಉತ್ಪನ್ನಗಳ ಮಾರಾಟದ ಬೆಲೆ ಇನ್ನೂ ಹೆಚ್ಚಾಗುತ್ತದೆ. ಅಲ್ಲದೆ ರಾಜಕೀಯ ಪಕ್ಷಗಳು ಈ ಬೆಲೆಗಳ ಕುರಿತು ಹೋರಾಟ ಪ್ರಾರಂಭಿಸುತ್ತವೆ. ಈ ಬಗ್ಗೆ ತಜ್ಞರ ಅಭಿಪ್ರಾಯ ಹೀಗಿದೆ : ''ಈ ಯೋಜನೆಯನ್ನು ಸರ್ಕಾರ ಖಾಸಗಿಯವರಿಗೆ ವಹಿಸುವುದು ಕೇವಲ ಸಮಯದ ಪ್ರಶ್ನೆ!'' ಈಗಾಗಲೇ ಬಹುರಾಷ್ಟ್ರೀಯ ಕಂಪನಿಗಳು ವಿಶ್ವಸಂಸ್ಥೆಯಲ್ಲಿ ಲಾಬಿ ನಡೆಸಿ ನೀರನ್ನು 'ಮಾನವ ಹಕ್ಕು' ಎಂದಿದ್ದನ್ನು 'ಮಾನವ ಅಗತ್ಯ' ಎಂದು ಬದಲಾಯಿಸಿದೆ. 'ಅಗತ್ಯ' ಎಂದರೆ ನೀರನ್ನು ಹಣ ನೀಡಿ ಕೊಂಡುಕೊಳ್ಳಬೇಕೆಂದು ಅರ್ಥ. ಜಾಗತೀಕರಣದ ಇನ್ನೊಂದು ಮಜಲು ಇಲ್ಲಿಂದ ಆರಂಭವಾಗುತ್ತದೆ.

## ತಜ್ಞರ ಅಭಿಪ್ರಾಯಗಳು

ನದಿ ಜೋಡಣೆ ಸಂಬಂಧವಾಗಿ ಎಲ್ಲಾ ಮಾಹಿತಿ ಜನರಿಗೆ ಸಿಗುತ್ತಿಲ್ಲ. ಹಾಗಾಗಿ ಈ ಬಗ್ಗೆ ಆರೋಗ್ಯಕರ ಚರ್ಚೆ ಸಾಧ್ಯವಾಗಿಲ್ಲ. ಈಗಾಗಲೇ ಛಿದ್ರಗೊಂಡಿರುವ ನೈಸರ್ಗಿಕ ಕಾಡುಗಳು ಈ ಯೋಜನೆಯ ಅಣೆಕಟ್ಟು , ಕಾಲುವೆಗಳಿಂದ ಮಳೆಯ ಮೂಲವಾದ ಕಾಡುಗಳು ಇನ್ನಷ್ಟು ಹಾನಿಗೊಳಗಾಗುತ್ತವೆ.
*– ಡಾ|| ಆರ್. ಸುಕುಮಾರ್, ಅಧ್ಯಕ್ಷರು, ಏಷ್ಯ ಆನೆ ಅಧ್ಯಯನ ಘಟಕ, ಐಯುಸಿಎನ್ ಹಾಗೂ ಪ್ರಾಧ್ಯಾಪಕರು, ಪರಿಸರ ಅಧ್ಯಯನ ಕೇಂದ್ರ, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು - ೫೬೦ ೦೧೨.*

ಲಭ್ಯವಿರುವ ತಾಂತ್ರಿಕ ವಿವರಗಳನ್ನು ನೋಡಿದರೆ ಈ ಯೋಜನೆ ಅಪೇಕ್ಷಣೀಯವಲ್ಲ.
*– ಪ್ರೊ|| ಕೆ. ಕೇಶವರಾವ್, ರಸಾಯನ ಶಾಸ್ತ್ರ ಎಂಜಿನಿಯರಿಂಗ್ ವಿಭಾಗ, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು -೧೨.*

ನದಿಗಳು ಸ್ಥಳೀಯ ಹವಾಮಾನವನ್ನು ಪ್ರಭಾವಿಸುತ್ತವೆ. ಈ ದೈತ್ಯ ಪ್ರಮಾಣದಲ್ಲಿ ನದಿಗಳನ್ನು ಜೋಡಿಸಿದಾಗ ಆಗುವ ಬದಲಾವಣೆಗಳ ಅಧ್ಯಯನಗಳು ನಡೆಯಬೇಕು. ಈಗ ಅಂದಾಜು ಮಾಡಿರುವ ಪ್ರಮಾಣದಲ್ಲಿ ವ್ಯವಸಾಯ ಹೆಚ್ಚಿದರೆ ಹಸಿರು ಮನೆ ಅನಿಲಗಳು ಹೆಚ್ಚಿ ಪರಿಸರಕ್ಕೆ ಹಾನಿಯಾಗುತ್ತದೆ. ಇದು ಗಂಭೀರ ಅಧ್ಯಯನಕ್ಕೆ ಒಳಗಾಗಬೇಕಾದ ವಿಷಯ.
*– ಶ್ರೀ ಬಿ. ಆರ್. ಗುರ್ಜಾರ್, ಹವಾಮಾನ ರಸಾಯನಶಾಸ್ತ್ರ ವಿಭಾಗ, ಮ್ಯಾಕ್ಸ್ ಪ್ಲಾಂಕ್ ರಸಾಯನಶಾಸ್ತ್ರ ಅಧ್ಯಯನ ಕೇಂದ್ರ, ಜರ್ಮನಿ.*

ಯಾವುದೇ ನೀರಾವರಿ ತಜ್ಞ ಪ್ರವಾಹ ತಡೆಯಲು ನದಿ ಜೋಡಣೆಯನ್ನು ಸಲಹೆ ಮಾಡುವುದಿಲ್ಲ.
*– ಡಾ|| ಭರತ್‌ಸಿಂಗ್, ವಿಖ್ಯಾತ ಎಂಜಿನಿಯರ್ ಹಾಗೂ ನಿವೃತ್ತ ಕುಲಪತಿಗಳು, ರೂರ್ಕಿ ವಿಶ್ವವಿದ್ಯಾಲಯ.*

ನದಿ ಜೋಡಣೆಯನ್ನು ಅನುಷ್ಠಾನಗೊಳಿಸುವುದು ಹಾಗಿರಲಿ, ಆ ಬಗ್ಗೆ ಗಂಭೀರವಾಗಿ ಯೋಚಿಸಲು ಬೇಕಾದಷ್ಟು ಅಧ್ಯಯನಗಳು ನಡೆದಿವೆ ಎಂದು ನಂಬಲು ಅಸಾಧ್ಯ.
*– ಪ್ರೊ|| ಎ. ವೈದ್ಯನಾಥನ್, ನಿವೃತ್ತ-ಗೌರವ ಪ್ರಾಧ್ಯಾಪಕರು, ಮದ್ರಾಸ್ ಅಭಿವೃದ್ಧಿ ಅಧ್ಯಯನ ಕೇಂದ್ರ.*

ಹಿಮಾಲಯ ವಲಯದ ಭೂಗರ್ಭ ವಿಜ್ಞಾನದಲ್ಲಿ ನಮಗಿರುವ ಅರಿವಿನ ಕಂದರ ಎಷ್ಟೆಂದರೆ ಮುಂಬರುವ ದಶಕಗಳಲ್ಲಿ ಇದನ್ನು ಕೈಗೆತ್ತಿಕೊಳ್ಳುವುದು ಅಸಾಧ್ಯ.
*– ನ್ಯಾಷನಲ್ ಕಮಿಷನ್ ಫಾರ್ ಇಂಟಗ್ರೇಟೆಡ್ ವಾಟರ್ ರಿಸರ್ಚ್ ಡೆವಲಪ್‌ಮೆಂಟ್ ಪ್ಲಾನ್ ತನ್ನ ೧೯೯೯; ೧೮೭-೮ರ ವರದಿಯಲ್ಲಿ.*

### ಸಾಮಾಜಿಕ ಸಮಸ್ಯೆಗಳು

ನದಿಗಳು ಪರಿಸರದ ಅವಿಭಾಜ್ಯ ಅಂಗವಾಗಿರುವುದರ ಜೊತೆಗೆ ನಮ್ಮ ಸಂಸ್ಕೃತಿ ಹಾಗೂ ನಾಗರಿಕತೆಯ ತೂಗುತೊಟ್ಟಿಲು ಕೂಡ. ಈ ಯೋಜನೆಯಿಂದ ಎಷ್ಟು ಜನ ಭೂಹೀನರಾಗುತ್ತಾರೆ ಎಂಬುದನ್ನು ಸರ್ಕಾರದ ಸಂಸ್ಥೆಗಳು ತಿಳಿಸಿಲ್ಲ. ಊಹೆಗಳು ಲಕ್ಷದಿಂದ ಕೋಟಿಯವರೆಗೂ ಹಬ್ಬಿವೆ. ಇಂದಿನವರೆಗೂ ಯಾವುದೇ ಬೃಹತ್ ಯೋಜನೆಯಲ್ಲಿಯೂ ಭೂಹೀನರಿಗೆ, ಸಂತ್ರಸ್ತರಿಗೆ ಸಮರ್ಪಕ ಪರಿಹಾರ ಸಂದಿಲ್ಲ. ಅರ್ಹರಿಗೆ ವರ್ಷಗಳ ನಂತರ ಪರಿಹಾರ ತಲುಪಿದಾಗ ಅದು ಅವರೆಗೂ ಜೀವಿಸಲು ಮಾಡಿದ್ದ ಸಾಲ-ಬಡ್ಡಿಗಳನ್ನೇ ನುಂಗಿದ ಹೇರಳ ಉದಾಹರಣೆಗಳಿವೆ. ಭೂರಹಿತ ಕೃಷಿ ಕಾರ್ಮಿಕರಿಗೆ ಯಾವುದೇ ಪರಿಹಾರ ದೊರೆಯದು. ಸರ್ದಾರ ಸರೋವರ ಯೋಜನೆಯಲ್ಲಿ ಈ ರೀತಿ ಪರಿಹಾರಕ್ಕೆ ಅನರ್ಹರಾದವರು ಒಂದೂವರೆ ಲಕ್ಷ ಕೂಲಿ ಕಾರ್ಮಿಕರು, ಕೃಷಿ ಭೂರಹಿತರು. ಬಹುತೇಕ ಅಭಿವೃದ್ಧಿ ಕಾಮಗಾರಿಗಳು ಇಂತಹ ಬಡಜನರ ಮೇಲಿನ ಸಮಾಧಿಗಳಾಗಿ ಪರಿಣಮಿಸಿವೆ.

ಬಿ.ಎನ್.ಎಚ್.ಎಸ್.ನ ಹಿರಿಯ ವಿಜ್ಞಾನಿ ಡಾ|| ಜೆ. ಸಿ. ಡೇನಿಯಲ್ ಹೇಳುವಂತೆ, ಇಂತಹ ದುಬಾರಿ ಯೋಜನೆಗಳ ಕಹಿ ಫಲ ಅನುಭವಿಸುವವರು ನಮ್ಮ ಬಡಜನರು ಮಾತ್ರ.

ನದಿ ಜೋಡಣೆಯು ಆರಂಭವಾಗುವ ಸೂಚನೆ ದೊರೆತಾಗಲೇ ಬಾಂಗ್ಲಾದೇಶವು ಅಂತಾರಾಷ್ಟ್ರೀಯ ನ್ಯಾಯಾಲಯದಲ್ಲಿ ದಾವೆ ಹೂಡುವುದಾಗಿ ಪ್ರಕಟಿಸಿದೆ. ಅಲ್ಲದೆ,

ಚೀನಾ ತನ್ನ ಕಡೆಗೆ (ಟಿಬೆಟ್ ಕಡೆಗಿರುವ) ಬ್ರಹ್ಮಪುತ್ರ ನದಿಯನ್ನು ತಿರುಗಿಸುವ ಯೋಜನೆಯನ್ನು ಹಾಕಿಕೊಂಡಿದೆ. ಇದು ಜಾರಿಯಾದಲ್ಲಿ ಭಾರತದ ಯೋಜನೆಗೆ ಸಂಭವಿಸುವ ಪರಿಣಾಮಗಳು ಭೀಕರ.

**ಪರ್ಯಾಯ ಯೋಜನೆಗಳು**

ಇದುವರೆಗೂ ಪರಿಗಣಿಸಿದ ಅಂಶಗಳಿಂದ ಪ್ರಸ್ತಾವಿತ ಯೋಜನೆ ಭಾರತದಂತಹ ಹೇರಳ ಸಂಪನ್ಮೂಲಗಳನ್ನೊಳಗೊಂಡ ಹಾಗೂ ಜೀವವೈವಿಧ್ಯದ ಕೇಂದ್ರಕ್ಕೆ ಸಲ್ಲ ಎಂದಾಯಿತು. ಹಾಗಿದ್ದಲ್ಲಿ ನೀರಿಗಾಗಿ ಏನು ಮಾಡಬೇಕು? ಇದನ್ನು ಪರಿಸರ ಸ್ನೇಹಿಯಾಗಿ ಪರಿಹರಿಸಲು ಯೋಜನೆಯನ್ನು ಮಂಡಿಸಿದ್ದಾರೆ, ಖ್ಯಾತ ನೀರಾವರಿ ತಜ್ಞರೂ, ಮಧ್ಯಪ್ರದೇಶ ಹಾಗೂ ಕರ್ನಾಟಕ ರಾಜ್ಯದ ಮಾಜಿ ಮುಖ್ಯ ಎಂಜಿನಿಯರ್ ಆಗಿ ನಿವೃತ್ತರಾಗಿರುವ ಹಾಗೂ ಸಂಪನ್ಮೂಲ ಬಳಕೆಯಲ್ಲಿ ಜನರನ್ನು ಸೇರಿಸಿಕೊಳ್ಳಲು 'ಸಹಯೋಗ' ಎಂಬ ಸಂಸ್ಥೆ ಸ್ಥಾಪಿಸಿ ಕೆಲಸ ಮಾಡುತ್ತಿರುವ ಬೆಂಗಳೂರಿನ ಶ್ರೀ ಬಿ. ಎಸ್. ಭವಾನಿಶಂಕರ್. ಉತ್ತರ ಹಾಗೂ ದಕ್ಷಿಣ ಭಾರತಕ್ಕೆ ತಕ್ಕ ಭೂವಿಜ್ಞಾನ ಹಾಗೂ ಪರಿಸರ ಸ್ನೇಹಿ ಅಳವಡಿಕೆಯೊಂದಿಗೆ ಬೇರೆ ಬೇರೆಯಾಗಿ ಇದು ಯೋಜಿಸಲ್ಪಟ್ಟಿದೆ.

**ಉತ್ತರ ಹಿಮಾಲಯ ಯೋಜನೆ**

ಈ ಭೂಭಾಗದಲ್ಲಿ ಹೇರಳವಾಗಿ ಅಂತರ್ಜಲ ಲಭ್ಯವಿರುವುದರಿಂದ ಅದನ್ನು ಸಂಪೂರ್ಣವಾಗಿ ಬಳಸಿಕೊಳ್ಳುತ್ತಲೇ, ಅಂತರ್ಜಲವನ್ನು ಹೆಚ್ಚಿಸುವ ಕಾರ್ಯವನ್ನು ಜೊತೆಯಲ್ಲೇ ನಿರ್ವಹಿಸುವುದು ಇಲ್ಲಿಯ ತಂತ್ರ.

ಇಲ್ಲಿನ ಜಲಧರ (ಆಕ್ವಿಫರ್) ೨.೪ ಕಿ.ಮೀ. ಹೆಚ್ಚಾಗಿದ್ದು ಹಿಮಾಲಯದ ನದಿಗಳು ಸಾಗರ ಸೇರುವವರೆಗೂ ಇದನ್ನು ಮರುಪೂರಣಗೊಳಿಸುತ್ತವೆ. ನಾವು ಇದರ ಸಂಪೂರ್ಣ ಲಾಭ ಪಡೆಯದೆ, ಅನಾವಶ್ಯಕವಾಗಿ ನದಿ ನೀರನ್ನು ಅವಲಂಬಿಸಿದ್ದೇವೆ ಎನ್ನುತ್ತಾರೆ ಭವಾನಿಶಂಕರ್. ಈ ಭಾಗದಲ್ಲಿ ವೈಜ್ಞಾನಿಕ ರೀತಿಯಿಂದ ಆಯ್ದ ಸ್ಥಳಗಳಲ್ಲಿ ಅಂತರ್ಜಲವನ್ನು ತೆಗೆದು ಬಳಸಬೇಕೆಂದು ಅವರು ಸೂಚಿಸುತ್ತಾರೆ.

ಇಲ್ಲಿನ ಬೃಹತ್ ಜಲಧರಗಳು ನದಿಯಿಂದ ಅವ್ಯಾಹತವಾಗಿ ಜಲ ಮರುಪೂರಣಕ್ಕೊಳಗಾದರೂ, ಅಂತರ್ಜಲವನ್ನು ಸುರಕ್ಷಿತ ಮಟ್ಟದಲ್ಲಿ ಕಾಪಾಡಲು ವಿಲೋಮ ಕೊಳವೆ ಬಾವಿಗಳನ್ನು (ಅಂದರೆ ನದಿಯಿಂದ ಕೊಳವೆ ಬಾವಿಯ ಇಂಗು ಪ್ರದೇಶಕ್ಕೆ ನೀರನ್ನು ಒದಗಿಸುವುದು) ಅಳವಡಿಸಿ ಜಲ ಮರುಪೂರಣಗೊಳಿಸುವುದು ಇಲ್ಲಿನ ತಂತ್ರ. ಇದು ಸ್ವಲ್ಪಮಟ್ಟಿಗೆ ಪ್ರವಾಹದ ನೀರನ್ನು ಭೂಮಿಗೆ ಸೇರಿಸುತ್ತದೆ. ಇಡೀ ಗಂಗಾನದಿಯ ಪ್ರದೇಶಗಳಲ್ಲಿ ಈ ತಂತ್ರವನ್ನು ಬಳಸಬಹುದು.

ಇನ್ನು, ಪ್ರವಾಹದ ನಿಯಂತ್ರಣಕ್ಕಾಗಿ ನದಿ ಮುಖಜ ಭೂಮಿಯಲ್ಲಿ ಸಂಗ್ರಹವಾಗಿರುವ ಹೂಳನ್ನು ಸಾಗರಕ್ಕೆ ಸೇರಿಸಬೇಕು. ಏಕೆಂದರೆ, ಇಲ್ಲಿನ ಹೂಳು ಹೆಚ್ಚಾದಂತೆಲ್ಲಾ ಅದು ಬಹಳ ಗಟ್ಟಿಯಾಗಿ ಪ್ರವಾಹದ ವೇಗ ತಗ್ಗಿಸಿ ನದಿಯ ಪಾತ್ರ ಹರವು ಅಗಲವಾಗುವಂತೆ ಮಾಡುತ್ತದೆ. ಹಾಗಾಗಿ ಪ್ರತೀ ವರ್ಷ ಪ್ರವಾಹ ಪೀಡಿತ ಪ್ರದೇಶಗಳ ವಿಸ್ತೀರ್ಣ ಹೆಚ್ಚಾಗುತ್ತದೆ. ಇನ್ನು ಕೋಟ್ಯಾಂತರ ರೂಪಾಯಿ ವ್ಯಯಿಸಿ ಕಟ್ಟಿಸುವ ಪ್ರವಾಹ ತಡೆಗೋಡೆಗಳೂ ಪ್ರವಾಹಕ್ಕೆ ಸಿಲುಕಿ ನಷ್ಟವಾಗುತ್ತವೆ. ಇದನ್ನು ತಡೆಗಟ್ಟಲು ಉಪಗ್ರಹದ ಚಿತ್ರಗಳನ್ನು ತೆಗೆಯಿಸಿ ಅಧ್ಯಯನ ಮಾಡಿ ಸರಿಯಾದ ಜಾಗಗಳನ್ನು ಗುರುತಿಸಿ ಸ್ಫೋಟಕಗಳನ್ನು ಬಳಸಿ ಪ್ರವಾಹವಿದ್ದಾಗ ಸ್ಫೋಟಿಸಿದರೆ ಹೂಳೂ ಸಾಗರ ಸೇರುತ್ತದೆ. ಪ್ರವಾಹದ ವೇಗವೂ ಕಡಿಮೆಯಾಗುವುದಿಲ್ಲ, ನದಿಯ ಅಗಲವೂ ಹೆಚ್ಚುವುದಿಲ್ಲ.

ಒಮ್ಮೆ ಈ ತಂತ್ರವನ್ನು ಅಳವಡಿಸಿದಲ್ಲಿ ವರ್ಷಗಳ ಕಾಲ ಪ್ರವಾಹದ ತೊಂದರೆಯಿಂದ ಮುಕ್ತರಾಗಬಹುದು. ಇದನ್ನು ಮೊದಲು ಪ್ರಾಯೋಗಿಕವಾಗಿ ಒಂದೆರಡು ನದಿಗಳಲ್ಲಿ ಅಳವಡಿಸಿ ಅದರಿಂದ ಪಡೆಯುವ ಅನುಭವವನ್ನು ಬಳಸಿಕೊಂಡು ಮುಂದುವರಿಯಬಹುದು.

ಇನ್ನು ಹಿಮಾಲಯದ ನದಿ ದಂಡೆಗಳು ಪ್ರವಾಹಕ್ಕೆ ಸಿಕ್ಕಿ ಕರಗಿ ಹೂಳು ಹಾಗೂ ಇತರೆ ವಸ್ತುಗಳನ್ನು ನದಿಗೆ ಸೇರಿಸುತ್ತವೆ. ಇದನ್ನು ತಡೆಯಲು ಈ ಕಡಿದಾದ ಏರುಗಳ ಮೇಲೆ ಮಣ್ಣನ್ನು ಭದ್ರವಾಗಿ ಹಿಡಿದಿಡುವ ಸಸ್ಯ ಜಾತಿಗಳನ್ನು ಬೆಳೆಸಬೇಕು. ಅರಣ್ಯ ಇಲಾಖೆಯವರ ಸಹಾಯ ಪಡೆದು ಈ ಸಸ್ಯ ಜಾತಿಗಳ ಬೀಜಗಳಿಗೆ ಮೊಳಕೆಯೊಡೆಯಲು ಅಡ್ಡಿಯಾಗದ ಅಂಟನ್ನು ಲೇಪಿಸಿ ಈ ಪ್ರದೇಶಗಳ ಮೇಲೆ ಸಿಂಪಡಿಸಿದರೆ ಅಲ್ಲಿ ಗಿಡಮರಗಳು ಬೆಳೆದು ಮಣ್ಣಿನ ಸವೆತ ತಪ್ಪುತ್ತದೆ.

ಒಟ್ಟಿನಲ್ಲಿ ಹಿಮಾಲಯದ ಪ್ರಾಂತ್ಯದ ನೀರಿನ ಸಮಸ್ಯೆ ಹಾಗೂ ಪ್ರವಾಹ ತಡೆಯಲು ಈ ಮೂರು ಮಾರ್ಗಗಳನ್ನು ಜೊತೆ ಜೊತೆಯಾಗಿ ಬಳಸುವುದು ಸೂಕ್ತ.

**ದಕ್ಷಿಣ ಭಾರತಕ್ಕೆ ಸಂಬಂಧಪಟ್ಟಂತೆ ರೂಪಿಸಿರುವ ಯೋಜನೆ**

ದಕ್ಷಿಣ ಭಾರತದಲ್ಲಿ ಅಂತರ್ಜಲ ಪದ್ಧತಿಯನ್ನು ಬಳಸಲಾಗದು. ಇಲ್ಲಿನ ಪಶ್ಚಿಮ

## ಇತಿಹಾಸದಿಂದ ಕಲಿಯದ ಪಾಠ

ನದಿ ಜೋಡಣೆಯಂತಹ ಯೋಜನೆಗಳು ಹಿಂದೆ ಅನೇಕ ರಾಷ್ಟ್ರಗಳಲ್ಲಿ ಅನುಷ್ಠಾನಕ್ಕೆ ಬಂದು ವಿಫಲಗೊಂಡಿವೆ. ಹಿಂದಿನ ಸೋವಿಯತ್ ರಷ್ಯಾದಲ್ಲಿ ಎರಡು ನದಿಗಳ ದಿಕ್ಕು ಬದಲಿಸಿ ಸಮುದ್ರ ಸೇರದಂತೆ ಬೇರೆಡೆಗೆ ತಿರುಗಿಸಲಾಗಿತ್ತು. ಇಂದು ಆರಲ್ ಸಮುದ್ರ ಕೇವಲ ಉಪ್ಪು ನೀರಿನ ಸರೋವರವಾಗಿ ತನ್ನ ಹಿಂದಿನ ಗಾತ್ರದ ಒಂದನೇ ಆರರಷ್ಟಕ್ಕೆ ಇಳಿದಿದೆ. ಇಂತಹುದು ಭಾರತದಲ್ಲಿ ಆದರೆ, ಮತ್ಸ್ಯೋದ್ಯಮಕ್ಕೆ ಭಾರಿ ಹೊಡೆತ ಬೀಳುತ್ತದೆ.

ಹಾಗೆಯೇ ಇಂದು ಬೃಹತ್ ಅಣೆಕಟ್ಟುಗಳನ್ನು ಯಾರೂ ಸಲಹೆ ಮಾಡುವುದಿಲ್ಲ. ಇದರಿಂದಾಗುವ ಅನಾಹುತಗಳನ್ನು ಮನಗಂಡು ೧೯೯೯-೨೦೦೨ರವರೆಗೆ ಅಮೆರಿಕಾದಲ್ಲಿ ನಾನೂರು ಅಣೆಕಟ್ಟುಗಳನ್ನು ಕೆಡವಲಾಗಿದೆ. ೨೦೦೧ರಲ್ಲಿ ಬರಾಡೋ ನದಿಯನ್ನು ಹಿಂದಿನ ಸ್ಥಿತಿಗೆ ತರಲಾಯಿತು. ಕೊಲರಾಡೋ ನದಿಯನ್ನು ಜೀವಂತಗೊಳಿಸಲು ಎಂಟು ಬಿಲಿಯನ್ ಡಾಲರ್ ಯೋಜನೆ ಸಿದ್ಧಪಡಿಸಲಾಗಿದೆ. ಆಸ್ಟ್ರೇಲಿಯಾದಲ್ಲೂ ಇದೇ ರೀತಿಯ ಅನುಭವಗಳಾಗಿವೆ.

ಅಷ್ಟೇ ಏಕೆ? ನಮ್ಮಲ್ಲಿ ಬೇಸಿಗೆಯಲ್ಲೂ ತುಂಬಿ ಹರಿಯುತ್ತಿದ್ದ ಚಕ್ರಾನದಿಯನ್ನು ಮಳೆಗಾಲದ 'ಸಣ್ಣ ತೊರೆ'ಯಾಗಿಸಿದ್ದು ಅಣೆಕಟ್ಟುಗಳಿಂದಾಗಿ. ಇದರಿಂದ ನಾವು ಕಲಿಯಬೇಕಾಗಿರುವುದು ಏನು, ಎಷ್ಟು ಎಂಬುದನ್ನು ಊಹಿಸಿಕೊಳ್ಳಬಹುದಾಗಿದೆ.

ಘಟ್ಟಗಳಲ್ಲಿ ಸುಮಾರು ೨೦೦೦ ಟಿ.ಎಂ.ಸಿ. ನೀರು ನದಿಗಳ ಮೂಲಕ ಸಾಗರ ಸೇರುತ್ತದೆ. ಇದರ ಶೇ. ೧೦ರಷ್ಟನ್ನು ಪಡೆದರೂ ನಮ್ಮ ಕೃಷಿಕಾರ್ಯಗಳಿಗೆ ಸಾಕಾಗುತ್ತದೆ. ಅದಕ್ಕಾಗಿ ಚಿತ್ರದಲ್ಲಿ ತೋರಿಸಿರುವಂತೆ ನೀರು ಸಂಗ್ರಹಾಗಾರಗಳನ್ನು ನೆಲಮಟ್ಟದಲ್ಲಿ ಹಾಗೂ ಎತ್ತರದಲ್ಲಿ ನಿರ್ಮಿಸಿ ಅದನ್ನು ತೂಬು ಹಾಗೂ ವಿಲೋಮ ವಿದ್ಯುತ್ ಜನಕಗಳೊಂದಿಗೆ ಬೆಸೆಯುವುದು ಅಂದರೆ, ಕೆಳಗಿನ ಸಂಗ್ರಹಾಗಾರದಲ್ಲಿ ನೀರು ಹೆಚ್ಚಾದಾಗ ವಿದ್ಯುಜ್ಜನಕ ಕೇವಲ ನೀರನ್ನು ಎತ್ತುವ ಕಾರ್ಯ ನಿರ್ವಹಿಸುತ್ತದೆ. ಮೇಲಿನ ಸಂಗ್ರಹಾಗಾರದ ಹೆಚ್ಚುವರಿ ನೀರನ್ನು ಕೆಳಗೆ ತಂದಾಗ ವಿದ್ಯುಜ್ಜನಕ, ವಿದ್ಯುಜ್ಜನಕವಾಗಿಯೇ ಕಾರ್ಯನಿರ್ವಹಿಸಿ ವಿದ್ಯುತ್ ಉತ್ಪಾದಿಸುತ್ತದೆ. ಇದೂ ಬಳಕೆಗೆ ಬರುತ್ತದೆ. ನೀರೆತ್ತಲು ಬೇಕಾದ ಶಕ್ತಿಯನ್ನು ರಾತ್ರಿಯ ವೇಳೆಯಲ್ಲಿ ಶಾಖೋತ್ಪನ್ನ ಕೇಂದ್ರಗಳಲ್ಲಿ ವ್ಯರ್ಥವಾಗುವ ಶಕ್ತಿಯನ್ನು ಬಳಸಿಕೊಳ್ಳಬಹುದಾಗಿದೆ.

ಇಂತಹ ಸಂಗ್ರಹಾಗಾರಗಳನ್ನು ನಿರ್ಮಿಸಿ ಜೋಡಿಸಿದಾದಲ್ಲಿ ಪ್ರವಾಹದ ನೀರನ್ನು ಸಮುದ್ರಕ್ಕೆ ಸುಲಭವಾಗಿ ಸೇರಿಸಬಹುದು ಹಾಗೂ ಇದರಿಂದ ಪಶ್ಚಿಮ ಘಟ್ಟಗಳು ನೀರಿನಿಂದ ಪರ್ಯಾಪ್ತವಾಗಿ ಹಲವಾರು ಝರಿಗಳು ಮರು ಜೀವ ಪಡೆಯುತ್ತವೆ ಹಾಗೂ ಹೊಸ ಝರಿಗಳು ಹುಟ್ಟಿಕೊಳ್ಳುತ್ತವೆ. ಇದರಿಂದ ಕುಡಿಯಲು ಹಾಗೂ ಕೃಷಿಗೆ ನೀರು ಲಭ್ಯವಾಗುತ್ತದೆ. ಯುಕ್ತ ನೀರಾವರಿ ವ್ಯವಸ್ಥೆಯನ್ನು ಬಳಸಿ ಕಡಿಮೆ ನೀರಿನಿಂದ ಹೆಚ್ಚು ಪ್ರಯೋಜನ ಪಡೆಯಲು ಆದ್ಯತೆ ನೀಡುವುದು ಅವಶ್ಯಕ. ಪ್ರವಾಹದ ಸಂದರ್ಭಗಳಲ್ಲಿ ಹಾಗೂ ಬೇಸಿಗೆಯಲ್ಲಿ ಮಂಗಳೂರಿನಂತಹ ತಗ್ಗು ಪ್ರದೇಶಗಳು ಅನುಭವಿಸುವ ನೀರಿನ ಅಭಾವ ಮತ್ತಿತರ ಸಮಸ್ಯೆಗಳು ಪರಿಹಾರವಾಗುತ್ತವೆ. ಇಲ್ಲಿನ ವಿದ್ಯುತ್‌ಜನಕಗಳಿಂದ ರೈತರಿಗೆ ಬೇಕಾದಾಗ ವಿದ್ಯುತ್ತನ್ನು ನೀಡಬಹುದು. ಅಂತೆಯೇ ಹೆಚ್ಚುವರಿ ನೀರನ್ನು ದೂರದ ಕೃಷ್ಣ ಹಾಗೂ ಕಾವೇರಿ ಜಲಾನಯನ ಪ್ರದೇಶಕ್ಕೂ ವರ್ಗಾಯಿಸಬಹುದು. ಈ ಯೋಜನೆಯಿಂದ ಇಲ್ಲಿ ಪರಿಸರಕ್ಕೆ ಉಂಟಾಗುವ ಹಾನಿ ಅತಿ ಕಡಿಮೆ ಮಟ್ಟದ್ದು.

**ಮಳೆ ನೀರಿನ ಕೊಯ್ಲು, ಕೊಳವೆ ಬಾವಿಗಳ ಜಲ ಮರುಪೂರಣ ಹಾಗೂ ಜಲ ಸಂಪನ್ಮೂಲಗಳ ಸಮರ್ಪಕ ಬಳಕೆ**

ಇಂದು ಹೆಚ್ಚು ಪ್ರಚಲಿತವಾಗುತ್ತಿರುವ ಮಳೆ ನೀರಿನ ಕೊಯ್ಲು ಹಾಗೂ ಮಳೆ ನೀರಿನ ಸಂಗ್ರಹಣೆಯು ವಾಸ್ತವದಲ್ಲಿ ಗುಜರಾತ್ ಮೊದಲಾದ ರಾಜ್ಯಗಳಲ್ಲಿ ಬಹಳ ಹಿಂದೆಯೇ ಅಸ್ತಿತ್ವದಲ್ಲಿತ್ತು. ಇಂದು ಇವನ್ನು ಹೊಸ ತಂತ್ರಜ್ಞಾನದೊಂದಿಗೆ ಜೋಡಿಸಿ ಹೆಚ್ಚಿನ ಪ್ರಯೋಜನ ಪಡೆದುಕೊಳ್ಳಬಹುದಾಗಿದೆ.

ದಕ್ಷಿಣ ಭಾರತಕ್ಕೆ ಸೂಚಿಸಲಾಗಿರುವ ಪರ್ಯಾಯ ಯೋಜನೆ

ರಾಜಸ್ತಾನದಂತಹ ಮರಳುಗಾಡು ಪ್ರದೇಶದಲ್ಲಿ ಪ್ರಖ್ಯಾತ ರಾಜೇಂದರ್ ಸಿಂಗ್ ಅವರು ಬೇಸಗೆಯಲ್ಲಿ ನದಿ ಹರಿಯುವಂತೆ ಮಾಡಿದ್ದು ಅಣೆಕಟ್ಟು ಕಟ್ಟಿ ಅಲ್ಲ; ಮಳೆ ನೀರಿನ ಕೊಯ್ಲಿನಿಂದ! ಇಲ್ಲಿ, ನಮ್ಮ ಕರ್ನಾಟಕದಲ್ಲಿ ಅತಿ ಕಡಿಮೆ ಮಳೆ ಬೀಳುವ ಪ್ರದೇಶವಾದ ಚಿತ್ರದುರ್ಗದಲ್ಲಿ ಶ್ರೀ. ದೇವರಾಜ ರೆಡ್ಡಿಯವರು ಕೊಳವೆ ಬಾವಿಗೆ ಜಲ ಮರುಪೂರಣ ಮಾಡಿ ಚಿತ್ರದುರ್ಗದ ಭಗೀರಥ ಎನಿಸಿಕೊಂಡಿದ್ದಾರೆ. ಅಂತೆಯೇ ಅವರು ಕೆರೆಗಳಿಗೆ ಫೀಡರ್ ಕಾಲುವೆ ಮೂಲಕ ನೀರು ಮರುಪೂರಣಗೊಳಿಸಿ ಜೀವಂತಗೊಳಿಸಿದ್ದಾರೆ. ಹೀಗೆ ಪ್ರತಿಯೊಂದು ಗ್ರಾಮವನ್ನೂ ಈ ಪರ್ಯಾಯ ಪದ್ಧತಿಗಳಿಂದ ಬರರಹಿತ ಗ್ರಾಮಗಳನ್ನಾಗಿಸಿದರೆ, ನದಿ ಜೋಡಣೆಯಂತಹ ಅಪಾಯಕಾರಿ ಯೋಜನೆಗಳ ಅವಶ್ಯಕತೆಯಾದರೂ ಏನಿದೆ?

**ತೀರ ಪ್ರದೇಶಗಳಿಂದ ನೀರು ಪಡೆಯುವುದು:** ವಿಖ್ಯಾತ ಭೂವಿಜ್ಞಾನಿಗಳಾದ ಶ್ರೀ ಬಿ. ಪಿ. ರಾಧಾಕೃಷ್ಣ ಅವರು ತಮ್ಮ ಪುಸ್ತಕದಲ್ಲಿ ಹೇಳುತ್ತಾರೆ: ''ನಾವು ತೀರ ಪ್ರದೇಶಗಳಿಂದ ಸಾಗರಕ್ಕೆ ಬಸಿದುಹೋಗುವ ನೀರನ್ನು ಬಳಸುವ ಬಗ್ಗೆ ಅಧ್ಯಯನವನ್ನೇ ಮಾಡಿಲ್ಲ. ಹೀಗೆ ಬಸಿದು ಹೋಗುವ ನೀರಿನ ಪ್ರಮಾಣ ನದಿ ನೀರಿನ ಶೇ. ೪೦ರಷ್ಟು ಇದೆ.'' ಹಾಗೆಯೇ ನದಿ ಜೋಡಣೆಯಿಂದ ಹಾಗೂ ಹಿಂದಿನ ಯೋಜನೆಗಳಿಂದಾದ ಮತ್ತು ಆಗುವ ಅನಾಹುತಗಳನ್ನು ಪಟ್ಟಿ ಮಾಡುವ ಅವರು ನೀರಿನ ಲಭ್ಯತೆಯನ್ನು ನೋಡಿ ಅದರ ಆಧಾರದ ಮೇಲೆ ಕೃಷಿಯ ಜಲಸಂಪನ್ಮೂಲಗಳನ್ನು ಜತೆಯಲ್ಲೇ ಅಭಿವೃದ್ಧಿಪಡಿಸಿಕೊಳ್ಳುವುದನ್ನು ಪ್ರಾರಂಭಿಸಬೇಕು ಎನ್ನುತ್ತಾರೆ. ಅಂದರೆ, ಇದು ನಿಸರ್ಗದ ಅಸಲನ್ನು ಹಾಗೆಯೇ ಇಟ್ಟು ಬಡ್ಡಿಯನ್ನು ಮಾತ್ರ ಬಳಸಿಕೊಳ್ಳುವ ತಂತ್ರ.

ನಾವು ಹೀಗೆ ಮಾಡದೆ, 'ಶಸ್ತ್ರಚಿಕಿತ್ಸೆ ಯಶಸ್ವಿ, ಆದರೆ ರೋಗಿ ಉಳಿದಿಲ್ಲ' ಎಂಬ ವೈಖರಿಯ ಬೃಹತ್ ಅಣೆಕಟ್ಟೆ, ನದಿ ಜೋಡಣೆಯನ್ನು ಹಮ್ಮಿಕೊಂಡರೆ ಮುಂದಿನ ಪೀಳಿಗೆ ಇರಲಿ, ನಾವೇ ದುರ್ಭರ ಪರಿಸ್ಥಿತಿಯಲ್ಲಿ ಬದುಕಬೇಕಾಗುತ್ತದೆ!

**ಆಯ್ದ ಗ್ರಂಥ ಸೂಚಿ**

೧. ಜೆ.ಎನ್.ಬಿ.ಎಚ್.ಎಸ್. ವಾಲ್ಯೂಮ್ ೧೦೦ (೧) ಏಪ್ರಿಲ್ ೨೦೦೩.

೨. ನದಿ ಜೋಡಣೆ – ಬಿ. ಪಿ. ರಾಧಾಕೃಷ್ಣ

೩. ದಿ ಹಿಂದೂ, ಕರೆಂಟ್ ಸೈನ್ಸ್, ಸಾಂಚ್ಯೂಯರಿ ಏಷ್ಯ, ಡೆಕ್ಕನ್ ಹೆರಾಲ್ಡ್ ಹಾಗೂ ಸಿಪಿಐ ಮುಖಪತ್ರಿಕೆ.

೪. Jayanth Bandopadhyay & Shama Parveen : Interlinking of rivers: Some questions on the scientific, economic & environmental dimensions of the proposal. - Paper presented in seminar on interlinking of Rivers : Boom or Bane. Kolkatta 2002.

ಕೃತಜ್ಞತೆಗಳು : ಶ್ರೀ. ಟಿ. ಆರ್. ಅನಂತರಾಮು, ಶ್ರೀ ಬಿ. ಎಸ್. ಭವಾನಿಶಂಕರ್, ನವಕರ್ನಾಟಕದ ಶ್ರೀ ಸುರೇಂದ್ರ, ಶ್ರೀ ಎ. ಆರ್. ಉಡುಪ, ಶ್ರೀ ಹರೀಶ್, ಆರ್ಥಿಕ ಸಾಮಾಜಿಕ ಬದಲಾವಣೆಗಳ ಅಧ್ಯಯನ ಕೇಂದ್ರದ ಶ್ರೀ ಬಿ. ಹೆಚ್. ಚಂದ್ರಶೇಖರ್, ಅರಣ್ಯ ಇಲಾಖೆ ಗ್ರಂಥಾಲಯ ಹಾಗೂ ಸಿಬ್ಬಂದಿ.

ಕೆ. ಎಸ್. ನವೀನ್
ನಂ. ೨/೩., ಒಬಳಪ್ಪ ಅಡ್ಡರಸ್ತೆ, ಚಿಕ್ಕಮಾವಳ್ಳಿ, ಬೆಂಗಳೂರು-೫೬೦ ೦೦೪

*ಈ ಲೇಖನದ ಮೊದಲ ಭಾಗ ಡಿಸೆಂಬರ್ ೨೦೦೩ರ ಸಂಚಿಕೆಯಲ್ಲಿ ಪ್ರಕಟವಾಗಿದ್ದಿತು. ಅದರ ಮುಂದುವರಿದ ಭಾಗ ಇಲ್ಲಿದೆ.*

# ಜಾತಿಪದ್ಧತಿಯು ಹಿಂದೂಧರ್ಮದ ಸ್ವಭಾವಜನ್ಯ ಭಾಗವೇ?

**ಡಾ॥ ಎಂ. ವಿ. ನಾಡಕರ್ಣಿ**

### ಪವಿತ್ರ ಗ್ರಂಥಗಳು ಹಾಗೂ ಜಾತಿ

ಜಾತಿ ಪದ್ಧತಿಯನ್ನು ಬೆಂಬಲಿಸುತ್ತವೆಂದು (ತಪ್ಪಾಗಿ) ವ್ಯಾಖ್ಯಾನಿಸಲಾದಂಥ ಪವಿತ್ರ ಗ್ರಂಥಗಳ ಭಾಗಗಳನ್ನು ನಾವು ಮೊದಲು ಪರ್ಯಾಲೋಚಿಸಿ ಆನಂತರ ಹುಟ್ಟಿನ ಮೇಲೆ ಆಧರಿಸಿ ಜಾತಿಯನ್ನು ನಿರ್ಧರಿಸುವ ಪದ್ಧತಿಯನ್ನು ನೇರವಾಗಿ ಹಾಗೂ ಖಡಾಖಂಡಿತವಾಗಿ ವಿರೋಧಿಸುವಂಥ ಭಾಗಗಳನ್ನು ಪರಿಶೀಲಿಸೋಣ.

ಧರ್ಮಶಾಸ್ತ್ರಗಳಲ್ಲಷ್ಟೆ (ಧರ್ಮಸೂತ್ರ ಮತ್ತು ಸ್ಮೃತಿಗಳಲ್ಲಷ್ಟೆ) ನಾವು ಜಾತಿ ಪದ್ಧತಿಗೆ ಬೆಂಬಲವಿರುವುದನ್ನು ಕಾಣುತ್ತೇವೆ. ಇತರ ಧರ್ಮಗ್ರಂಥಗಳಲ್ಲಲ್ಲ. ಆದರೆ ಧರ್ಮಶಾಸ್ತ್ರಗಳಿಗೆ ವೇದ ಹಾಗೂ ಉಪನಿಷತ್ತುಗಳ ಅಂತಸ್ತು ಹಾಗೂ ಸ್ಥಾನಮಾನವನ್ನು ಎಂದೂ ಕೊಟ್ಟಿರಲಿಲ್ಲ. ಶ್ರುತಿ ಹಾಗೂ ಸ್ಮೃತಿ ನಡುವೆ ಘರ್ಷಣೆ ಜರುಗಿದಾಗೆಲ್ಲ ಶ್ರುತಿಯೇ ಮೇಲುಗೈ ಪಡೆಯುತ್ತದೆ. ಮನುಸ್ಮೃತಿಯು ವಿಶೇಷವಾಗಿ ಜಾತಿ ಪದ್ಧತಿಗೆ ಬೆಂಬಲ ನೀಡುತ್ತದೆ. ಆದರೆ ವೇದಗಳೊಂದಿಗೂ ಉಪನಿಷತ್ತುಗಳೊಂದಿಗೂ ಅದು ಘರ್ಷಣೆಗೆ ಒಳಗಾದಾಗಲೆಲ್ಲ ವೇದ ಉಪನಿಷತ್ತುಗಳೇ ಮೇಲುಗೈ ಪಡೆಯುತ್ತವೆ. ಭಗವದ್ಗೀತೆಯನ್ನು ಶ್ರುತಿಯ ಒಂದು ಭಾಗವನ್ನಾಗಿ ಪರಿಗಣಿಸದ ಹೋದರೂ ಅದನ್ನು ಪವಿತ್ರವೆಂದು ಅತ್ಯುಚ್ಚವಾಗಿ ಭಾವಿಸಲಾಗುತ್ತದೆ. ಗೀತೆಯಲ್ಲಿಯೂ ಹುಟ್ಟನ್ನು ಆಧರಿಸಿದ ಜಾತಿ ಪದ್ಧತಿಗೆ ವಿರೋಧವಿದೆ, ಅದಕ್ಕೆ ಬೆಂಬಲವಿಲ್ಲ ಎಂಬುದನ್ನು ಕೆಳಗೆ ಕಾಣಲಿರುವೆವು. ಹೀಗೆ ಧರ್ಮಶಾಸ್ತ್ರಗಳು ಶ್ರುತಿ ಹಾಗೂ ಗೀತೆಯೊಂದಿಗೆ ಘರ್ಷಣೆಗೆ ಒಳಗಾದಾಗಲೆಲ್ಲ, ಶ್ರುತಿ ಹಾಗೂ ಗೀತೆಗಳೇ ಮೇಲುಗೈ ಪಡೆಯುತ್ತವೆ. ಆಪಸ್ತಂಬ ಧರ್ಮಸೂತ್ರವು ಅಸ್ಪೃಶ್ಯತೆಗೆ ಬೆಂಬಲ ನೀಡಿರಬಹುದು. ಆದರೆ ಅದನ್ನು ಹಿಂದೂಧರ್ಮವನ್ನು ವಿರೋಧಿಸ ಬಯಸುವವರು ಹೆಚ್ಚಾಗಿ ಓದುತ್ತಾರೆಯೇ ಹೊರತು ಅದನ್ನು ಅನುಸರಿಸುವವರಲ್ಲ ಎಂದೇ ಕಂಡುಬರುತ್ತದೆ.

ಧರ್ಮಶಾಸ್ತ್ರಗಳು ಜಾತಿ ಪದ್ಧತಿಯನ್ನು ಬೆಂಬಲಿಸುತ್ತವೆ ಎಂದು ಭಾವಿಸಲಾಗಿದ್ದರೂ ಜಾತಿ ಪದ್ಧತಿಯ ಬಗೆಗೆ ಅವುಗಳಲ್ಲೇ ಒಮ್ಮತವಿಲ್ಲ, ಇದನ್ನು ಡಾ॥ ಅಂಬೇಡ್ಕರ್‌ರವರು ತಿಳಿಸಿಕೊಟ್ಟಿದ್ದಾರೆ. ಉದಾಹರಣೆಗೆ, ಧರ್ಮಶಾಸ್ತ್ರಗಳ ಪ್ರಕಾರ ಶೂದ್ರನೊಬ್ಬ ಉಪನಯನಕ್ಕೆ ಅರ್ಹನಲ್ಲ. ಆದರೆ 'ಸಂಸ್ಕಾರ ಗಣಪತಿ' ಪ್ರಕಾರ ಅವನು ಅದಕ್ಕೆ ಅರ್ಹ. ಪೂರ್ವಮೀಮಾಂಸದ ಕರ್ತೃ ಜೈಮಿನಿಯ ಪ್ರಕಾರ ಶೂದ್ರರು ವೈದಿಕ ಮತಾಚಾರಣೆಗಳನ್ನು ನೆರವೇರಿಸಬಲ್ಲರು. ಅಂತೆಯೇ ಭಾರದ್ವಾಜ ಶ್ರೌತಸೂತ್ರ (V. ೨೮) ಹಾಗೂ ಕಾತ್ಯಾಯನ ಶ್ರೌತಸೂತ್ರಗಳೂ ಶೂದ್ರರಿಗೆ ವೈದಿಕ ಮತಕ್ರಿಯೆಗಳನ್ನು ನೆರವೇರಿಸುವ ಅರ್ಹತೆ ಇದೆ ಎಂದು ಒಪ್ಪುತ್ತವೆಂಬುದನ್ನೂ ಡಾ॥ ಅಂಬೇಡ್ಕರ್ ಉಲ್ಲೇಖಿಸುತ್ತಾರೆ.[೨೩] ಇತರ ಕೆಲವು ಧರ್ಮಶಾಸ್ತ್ರಗಳು ಇದಕ್ಕೆ ವಿರುದ್ಧವಾಗಿ ಹೇಳಿದರೂ, ಬದರಿ ಶೂದ್ರರ ಹಿತ ಸಮರ್ಥಿಸಿದರೆಂದು ಮತ್ತು (ಶೂದ್ರರನ್ನೂ ಒಳಗೊಂಡಂತೆ) ಎಲ್ಲರೂ ವೈದಿಕ ಯಜ್ಞಯಾಗಾದಿಗಳನ್ನು ನೆರವೇರಿಸುವ ಹಕ್ಕು ಹೊಂದಿದ್ದಾರೆ ಎಂಬ ಅಭಿಪ್ರಾಯವನ್ನು ಪ್ರತಿಪಾದಿಸಿದರು[೨೪] ಎಂದು ಕಾಣೆಯವರು ತಿಳಿಸುತ್ತಾರೆ.

ಸ್ವಾರಸ್ಯಕರವೆನ್ನುವಂತೆ, ಮನುಸ್ಮೃತಿಯೇ ಹುಟ್ಟಿನ ಮೇಲೆ ಆಧರಿಸಿದ ಜಾತಿ ಪದ್ಧತಿಯನ್ನು ಬೆಂಬಲಿಸುವ ತನ್ನ ಉಪದೇಶವನ್ನು ನಿರ್ಮೂಲಗೊಳಿಸುವ ಮಾರ್ಗವನ್ನೂ ತೋರಿಸಿಕೊಡುತ್ತದೆ. ೪ನೇ ಅಧ್ಯಾಯದ ೧೭೬ನೇ ಶ್ಲೋಕ ಸ್ಪಷ್ಟವಾಗಿ ಹೇಳುತ್ತದೆ: 'ಧರ್ಮಕ್ಕೆ ವಿರುದ್ಧವಾಗುವುದಾದರೆ ಅಂತಹ ಸಂಪತ್ತನ್ನೂ ಬಯಕೆಯನ್ನೂ ಬಿಟ್ಟುಕೊಡಿ, ಧರ್ಮವು ದುಃಖಕ್ಕೆ ದಾರಿ ಮಾಡಿಕೊಡುವುದಾದರೆ ಅಥವಾ ಜನರ ಕೋಪವನ್ನು ಕೆರಳಿಸುವುದಾದರೆ, ಅದನ್ನೂ ಬಿಟ್ಟುಕೊಡಿ.' ಇಲ್ಲಿ ಧರ್ಮ ಎಂದರೆ ಪಾಶ್ಚಿಮಾತ್ಯ ಅರ್ಥದ ಮತಧರ್ಮವಲ್ಲ, ಆದರೆ ನಡತೆಯ ನಿಯಮಗಳು. ವರ್ಣಧರ್ಮವು, ಅಥವಾ ವರ್ಣಗಳಿಗೆ ಸಂಬಂಧಿಸಿದ ನಡತೆಯ ನಿಯಮಗಳು, ಹಾಗೆ ನೋಡಿದರೆ ಜಾತಿಯೂ ಸಹ, ದುಃಖಕ್ಕೆ ಅಥವಾ ಜನರ ಕೋಪಕ್ಕೆ ದಾರಿ ಮಾಡಿಕೊಡುವುದಾದರೆ – ಅವು ಖಂಡಿತ ಹಾಗೆ ಮಾಡುತ್ತವೆ – ಅಂಥ ಧರ್ಮವನ್ನು ಬಿಟ್ಟುಕೊಡಬಹುದೆಂದು ಮನುಸ್ಮೃತಿಯೇ ಹೇಳುತ್ತದೆ. ಹಾಗಾದರೆ ಮನುಸ್ಮೃತಿಯ ಪ್ರಕಾರ, ಧರ್ಮ ಎಂದರೇನು ? ಮನುಸ್ಮೃತಿಯ ೨ನೆಯ ಅಧ್ಯಾಯದ ಮೊದಲನೆಯ ಶ್ಲೋಕ ಇದಕ್ಕೆ ಉತ್ತರ ನೀಡುತ್ತದೆ. ಅದು ಹೇಳುತ್ತದೆ: 'ಯಾವ ಧರ್ಮವನ್ನು ಪ್ರಾಜ್ಞರೂ, ಉತ್ತಮರೂ, ಕಾಮಕ್ರೋಧಗಳಿಂದ ಮುಕ್ತರಾದವರೂ ಅನುಸರಿಸುತ್ತಾರೋ, ಯಾವುದು ಹೃದಯಕ್ಕೆ ಪ್ರಿಯವಾಗಿರುತ್ತದೋ, ಅದೇ ನಿಜವಾದ ಧರ್ಮವೆಂದು ತಿಳಿ.'[೨೫] ಮಹಾತ್ಮ ಗಾಂಧಿಯವರು ತಮ್ಮ ಉಪನ್ಯಾಸಗಳಲ್ಲಿ ಈ ಶ್ಲೋಕವನ್ನು ತುಂಬ ಇಷ್ಟಪಟ್ಟು ಉದ್ಧರಿಸುತ್ತಿದ್ದರು. ಕಾಮಕ್ರೋಧ ದ್ವೇಷಗಳಿಂದ ಮುಕ್ತರಾದ ಪ್ರಾಜ್ಞರೂ ಉತ್ತಮರೂ ಹುಟ್ಟಿನ ಮೇಲೆ ಆಧರಿಸಿದ ಜಾತಿ ಪದ್ಧತಿ ಹೃದಯಕ್ಕೆ ಪ್ರಿಯವಾಗುವುದಿಲ್ಲವಾದುದರಿಂದ ಅದನ್ನು ಒಪ್ಪಿಕೊಳ್ಳುವುದಿಲ್ಲವಾದರೆ, ಮನುಸ್ಮೃತಿಯ ಪ್ರಕಾರವೇ ಆ ಪದ್ಧತಿಯನ್ನು ಬಿಟ್ಟುಕೊಡಬಹುದು. ಜಾತಿ ಪದ್ಧತಿಗೆ ಮನುಸ್ಮೃತಿಯ ಬೆಂಬಲ ಎಷ್ಟು ಅನ್ನುವುದಕ್ಕೆ ಇಷ್ಟು ಸಾಕು.

ಜಾತಿ ಪದ್ಧತಿಗೆ ಪ್ರಾಮಾಣ್ಯ ನೀಡಲು ಮನುಸ್ಮೃತಿಗಿಂತ ಹೆಚ್ಚಾಗಿ ಬಹುವೇಳೆ ಋಗ್ವೇದದಲ್ಲಿನ ಪುರುಷ ಸೂಕ್ತ (X.೯೦)ವನ್ನು ಉದ್ಧರಿಸಲಾಗುತ್ತದೆ:

ಯತ್ಪುರುಷಮ್ ವ್ಯದಧುಃ<br>
ಕತಿಧಾ ವ್ಯಕಲ್ಪಯನ್ ।<br>
ಮುಖಮ್ ಕಿಮಸ್ಯ ಕೌ ಬಾಹೂ<br>
ಕಾ ಊರೂ ಪಾದಾ ಉಚ್ಯೇತೆ ॥ (೧೧ನೇ ಮಂತ್ರ)

"(ದೇವರುಗಳು) ಪುರುಷನನ್ನು ವಿಭಜಿಸಿದಾಗ ಅವನನ್ನು ಎಷ್ಟು ಭಾಗಗಳನ್ನಾಗಿ ತುಂಡರಿಸಿದರು ? ಅವನ ಮುಖ ಏನಾಯಿತು ? ಯಾವ ಬಾಹುಗಳು (ಅವನಿಗಿದ್ದವು)? ಯಾವ (ಎರಡು ವಸ್ತುಗಳು) ಅವನ ಪಾದ ಹಾಗೂ ಊರು (ತೊಡೆ)ಗಳಾಗಿದ್ದವು?"

ಬ್ರಾಹ್ಮಣೋಸ್ಯ ಮುಖಮಾಸೀತ್<br>
ಬಾಹೂ ರಾಜನ್ಯಃ ಕೃತಃ<br>
ಊರೂ ತದಸ್ಯ ಯದ್ವೈಶ್ಯಃ<br>
ಪದ್‌ಭ್ಯಾಂ ಶೂದ್ರೋ ಅಜಾಯತ ॥ (೧೨ನೇ ಮಂತ್ರ)

"ಬ್ರಾಹ್ಮಣ ಅವನ ಮುಖವಾಗಿದ್ದ, ಅವನ ಬಾಹುಗಳಿಂದ ರಾಜ ಅಥವಾ ಕ್ಷತ್ರಿಯರು ಆದರು; ವೈಶ್ಯ ಎಂದು ಕರೆಯಲ್ಪಡುವವನು ಅವನ ತೊಡೆಗಳಾಗಿದ್ದ; ಶೂದ್ರನು ಅವನ ಪಾದಗಳಿಂದ ಹುಟ್ಟಿದ."[೨೬]

ಈ ಶ್ಲೋಕಗಳು ಪ್ರಕ್ಷೇಪಗಳು, ಮೂಲದಲ್ಲಿಲ್ಲದೇ ನಂತರ ಹಾಕಿದವುಗಳು ಎಂದು ಡಾ॥ ಅಂಬೇಡ್ಕರ್ ಪರಿಗಣಿಸುತ್ತಾರೆ. ಇದಕ್ಕೆ ಅನೇಕ ಆಧಾರಗಳನ್ನು ನೀಡುತ್ತಾರೆ. ಪುರುಷ ಸೂಕ್ತದಲ್ಲಿ ಇತರೆಲ್ಲ ಮಂತ್ರಗಳೂ ನಿರೂಪಣೆಯ ಶೈಲಿಯಲ್ಲಿದ್ದರೆ ಈ ಎರಡು ಮಂತ್ರಗಳು ಪ್ರಶ್ನೋತ್ತರ ಶೈಲಿಯಲ್ಲಿರುವುದೂ ಆ ಆಧಾರಗಳಲ್ಲೊಂದು. ಇದು ಮೂಲ ಪುರುಷಸೂಕ್ತದ ನೈಜಭಾಗವೇ, ಪ್ರಕ್ಷೇಪಗಳಲ್ಲ ಎಂದು ತೆಗೆದುಕೊಂಡರೂ, ಅದು ಹುಟ್ಟಿನ ಮೇಲೆ ಆಧರಿಸಿ ಜಾತಿ ಪದ್ಧತಿಯನ್ನು ಬೆಂಬಲಿಸುತ್ತದೆಂದು ವ್ಯಾಖ್ಯಾನಿಸಲಾಗದು. ಇದು ಸಾರತಃ ಒಂದು ರೂಪಕೋಕ್ತಿ, ಸಮಾಜವನ್ನು ಒಂದು ಜೈವಿಕ ಅಖಂಡತೆಯನ್ನಾಗಿ ತೆಗೆದುಕೊಳ್ಳುತ್ತದೆ. ಶ್ರಮವಿಭಜನೆಯನ್ನು ಆಧರಿಸಿದ ನಾಲ್ಕು ವರ್ಣಗಳು ಅದರ ಅಂತರ್ಗತ ಭಾಗಗಳು. ಅವು, ಇಂದು ಅರ್ಥ ಮಾಡಿಕೊಳ್ಳಲಾಗುತ್ತಿರುವಂತೆ, ಜಾತಿಗಳಾಗಿರಬೇಕೆಂದು ಸೂಚಿಸುವುದಕ್ಕೆ ಅದರಲ್ಲಿ

ಏನೂ ಇಲ್ಲ. ಉಲ್ಲೇಖ ಇರುವುದು ಆಯಾ ವರ್ಣಗಳ ವೃತ್ತಿಗಳಿಗೆ ಅಥವಾ ಕೆಲಸಕ್ಕೆ. ಅವು ಅವಶ್ಯವಾಗಿಯೇ ಹುಟ್ಟಿನ ಮೇಲೆ ಆಧರಿಸಿರಬೇಕಾಗಿಲ್ಲ. ಈ ಎರಡು ಶ್ಲೋಕಗಳಲ್ಲಿ ಶಿಫಾರಸು ಮಾಡುವ ಅಥವಾ ಆಜ್ಞಾಕಾರಕ ಅಂಶ ಏನೂ ಇಲ್ಲ. ಅದು ಇದ್ದ ಶ್ರಮ ವಿಭಜನೆಯನ್ನಷ್ಟೆ ಸೂಚಿಸುತ್ತದೆ. ಒಂದೊಂದು ವರ್ಣವೂ ಯಾವ ವೃತ್ತಿ ಅಥವಾ ಕೆಲಸಕ್ಕೆ ಸಂಬಂಧಿತವೋ ಅದಕ್ಕನುಗುಣವಾಗಿ ಆದಿ ಪುರುಷನ ಶರೀರದ ಭಾಗಕ್ಕೆ ಉಲ್ಲೇಖಿಸಲಾಗಿದೆ. ವೈಶ್ಯರೂ ಶೂದ್ರರೂ ತಮ್ಮ ಆರ್ಥಿಕ ಅಥವಾ ಉತ್ಪಾದಕ ಕಾರ್ಯದ ಮೂಲಕ ಸಮಾಜಕ್ಕೆ ಬೆಂಬಲ ನೀಡುತ್ತಾರಾದ ಕಾರಣ ಅವರನ್ನು ಅನುಗುಣವಾಗಿ ಆದಿ ಪುರುಷನ ತೊಡೆಗಳಿಂದ ಹಾಗೂ ಪಾದಗಳಿಂದ ಬಂದವರನ್ನಾಗಿ ತೆಗೆದುಕೊಳ್ಳಲಾಗಿದೆ. ಅವರ ಕಾರ್ಯ ಕೀಳುಮಟ್ಟದ್ದು ಎಂದು ಯಾವ ರೀತಿಯಲ್ಲೂ ಸೂಚಿಸಿಲ್ಲ. ಅದೇ ರೀತಿ ಯುದ್ಧಗಳಲ್ಲಿ ಕ್ಷತ್ರಿಯರು ಪ್ರಧಾನವಾಗಿ ತಮ್ಮ ಬಾಹುಗಳನ್ನು ಬಳಸುತ್ತಾರಾದ ಕಾರಣ ಅವರು ಆದಿ ಪುರುಷನ ಬಾಹುಗಳಿಂದ ಬಂದರು ಎಂದು ಹೇಳಲಾಗಿದೆ. ಮಂತ್ರೋಚ್ಚಾರಣೆ ಹಾಗೂ ಮೌಖಿಕವಾಗಿ ಸಾಗಿಬರುತ್ತಿದ್ದ ವೇದ ಸಂರಕ್ಷಣೆ ಬ್ರಾಹ್ಮಣರ ವೃತ್ತಿಯಾಗಿದ್ದುದರಿಂದ ಅವರು ಆದಿ ಪುರುಷನ ಮುಖದಿಂದ ಬಂದರೆಂದು ಹೇಳಲಾಗಿದೆ. ತಿಳಿಹಾಸ್ಯವಾಗಿ ಹೇಳುವುದಾದರೆ, ಬ್ರಾಹ್ಮಣರು ಪಾರಂಪರಿಕವಾಗಿ ಭೋಜನಪ್ರಿಯರಾದುದರಿಂದ ಆದಿ ಪುರುಷನ ಬಾಯಿಯಿಂದ ಹೊರಬಂದರೆನ್ನಬಹುದು! ಈ ಎರಡು ವಿವಾದಾತ್ಮಕ ಮಂತ್ರಗಳ ಉದ್ದೇಶ ಶ್ರೇಣೀಕೃತ ವ್ಯವಸ್ಥೆಯನ್ನು ಪ್ರಾಮಾಣೀಕರಿಸುವುದಾಗಿದ್ದಲ್ಲಿ ಅವು ಬ್ರಾಹ್ಮಣರನ್ನು ಆದಿ ಪುರುಷನ ಶಿರದಿಂದ ಹೊರಬಂದರೆಂದು ವಿವರಿಸಬಹುದಿತ್ತು. ಮಂತ್ರಗಳನ್ನು ಉಚ್ಚರಿಸುವಾಗ ಬ್ರಾಹ್ಮಣರು ಹೆಚ್ಚಾಗಿ ಶಿರವನ್ನಲ್ಲ ಆದರೆ ಬಾಯಿಯನ್ನು ಉಪಯೋಗಿಸುತ್ತಿದ್ದುದನ್ನು ಪುರುಷಸೂಕ್ತ ರಚಿಸಿದ ವೈದಿಕ ಋಷಿ ಬಹುಶಃ ಕಂಡಿದ್ದಿರಬೇಕು ! ಆದ್ದರಿಂದ ಪುರುಷಸೂಕ್ತದ ಈ ಎರಡು ಶ್ಲೋಕಗಳಿಂದಾಗಿ ಕಟು ಭಾವನೆಗಳನ್ನು ಪಡೆಯುವ ಆವಶ್ಯಕತೆ ಏನಿಲ್ಲ.

ಗೀತೆಯಲ್ಲಿನ ಮೂರು ಶ್ಲೋಕಗಳನ್ನು ಆಧಾರವಾಗಿ ನೀಡಿ ಗೀತೆಯೂ ಜಾತಿ



# ರಾಜಕಾರಣಿಗಳಿಗೆ ಶಾಲಿನಲ್ಲಿಟ್ಟು ...

೧

ಅಮೇರಿಕದ ಅಯೋವಾದ ಕೃಷ್ಣಶಾಸ್ತ್ರಿಗಳಂದು
ಸಾರಥಿಯಾಗಿ ಕಾರಿನಲಿ ಕರೆದೊಯ್ದರೆನ್ನನ್ನು
ಭೇಟಿ ಮಾಡಿಸಲೆಂದು ಮಿನೆಸೋಟ, ವಿಸ್ಕಾನ್ಸಿನ್
ಪ್ರಾಂತ್ಯಗಳ ಹೆಸರಾಂತ ಚೆಲು ನೋಟದೆಡೆಗಳನ್ನು.
ನೂರಾರು ಮೈಲಿಗಳು ದಿಟ್ಟಿ ದಣಿಯುವವರೆಗೆ
ದಾರಿಯಿಕ್ಕೆಲದಲ್ಲಿ ಜೋಳ ಸೋಯಾ ಹತ್ತಿ
ಸೂರ್ಯಕಾಂತಿಯ ಹೊಲಗಳಚ್ಚ ಹಸುರಿನ ನಿರಿಗೆ.
ನಡುವೆ ಆಗೀಗ ಒಂಟಿ ವಾಸದ ಸೂರು,
ಫೋರ್ಡು, ಮೋಟರುಬೈಕು, ಜಾನ್‌ಡೀರ್ ಟ್ರ್ಯಾಕ್ಟರು,
ಜಿರಾಯ್ತಿದಾರರ ಜೊತೆಗೆ ಪೊಗದಸ್ತು ಜಾನುವಾರು
ಲಿಂಗದಾಕಾರದ ಅತ್ಯಾಧುನಿಕ ಧಾನ್ಯಾಗಾರ
– ಇವನೆಲ್ಲ ತಕ್ಕೈಸಿರುವ ಓಕ್ ಪಟ್ಟಿಗಳ ಪಾಗಾರ
ಇತ್ಯಾದಿಗಳ ಅಚ್ಚುಕಟ್ಟನ್ನು ರಸಾನಂದಿಸುತ್ತ
ಮುಂದೆ ಸಾಗಿರುವಾಗ, ಹರಟಿ
ಹೊಸ ದೃಶ್ಯಗಳ ಸಂಧಿಸುತ್ತ
ಗಮನ ಹೊರಳಿತು ಗ್ರಾಮವೊಂದ -
ರೆದುರಿನ ಸೌಮ್ಯ ಫಲಕದತ್ತ.

೨

ಆ ಹಳ್ಳಿಯಲ್ಲೊಂದು ಹಂದಿ ಸಾಕಣೆ ಕೇಂದ್ರ
ತೆರೆವ ಘನ ಉದ್ದೇಶ ಸರಕಾರಕಿರುವುದನು ತಿಳಿದು -
ಅದರ ಗಬ್ಬು ಗಲೀಜು, ಹೊಲಸು ನಾತದ ರೊಪ್ಪ, ಲಾಯ,
ನೊಣ, ರೋಗ ರುಜಿನಗಳ ಸಂತತ ಅಪಾಯ
ಆ ಹಳ್ಳಿಗರ ಮನಕೆ ಮುಂಗಡವಾಗಿ ಹೊಳೆದು
ದೊಂಬಿ ಹರತಾಳಗಳ ಅಬ್ಬರದ ಮಾರ್ಗವನ್ನುಳಿದು,
ಪ್ರತಿಭಟಿಸಿರುವ ಮಾರ್ಮಿಕ ವಿಧಾನವನು
ಮುನ್ನೆಚ್ಚರಿಕೆಯಂತೆ ಮೆರೆಸಿ ಸಾರಿತ್ತು ಫಲಕ,
ಗ್ರಾಮ ಮುತ್ತೈದೆ ಹಣೆ ತಿಲಕ.
''ರಾಜಕಾರಣಿಗಳೆ, ದಯವಿಟ್ಟು ಆಲಿಸಿ :
ತತ್‌ಕ್ಷಣವೇ ಬದಲಾಯಿಸಿ ಈ ನಿಮ್ಮ ಪಾಲಿಸಿ.
ನಿಮಗೆ ಮತ ಕೊಡುವವರು ನಾವು ಹಳ್ಳಿಯ ಮಂದಿ
ನಿಮ್ಮ ದುರ್ಗಂಧಿ ಬಂಧುಗಳಲ್ಲ,
ಅರ್ಥಾತ್ ಕೊಳಕು ಹಂದಿ !''

೩

''ನಮ್ಮ ಇಂಡಿಯಾದಲ್ಲೂ ಪ್ರತಿಭಟಿಸಬಾರದೇ
ಹೀಗೆ ಮೊಗುಮ್ಮಾಗಿ
ಅವಾಚ್ಯ ಬೈಗುಳಗಳ ಮೆರೆಸದೆ,
ಕಿರುಚಾಡಿ ದನಿಯನೆತ್ತರಿಸದೆ ?''
ಎಂದಾಗ ಸ್ನೇಹಿತರು, ನಾನುತ್ತರಿಸಿದೆ :
''ಸ್ವಾಮಿ ಶಾಸ್ತ್ರಿಗಳೆ, ಹಾಳಾದ್ದು–
ನಮ್ಮ ಆಳ್ವಿಕೆಗಾರ, ರಾಜಕಾರಣಿಗಳದ್ದು
ಘೇಂಡಾಮೃಗದ ಚರ್ಮ, ಹೃದಯವೋ ಕಬ್ಬಿಣ;
ಸೂಜಿ ಸಾಕಾಗುವುದೆ ಹೇಳಿ ? ಬೇಕದಕೆ ದಬ್ಬಣ.''

**ಪ್ರೊ|| ಕೆ. ಎಸ್. ನಿಸಾರ್ ಅಹಮದ್**
ನಂ. ೩೪೧, 'ಹಮೀದಾ ಹೈದರ್' ಪದ್ಮನಾಭನಗರ, ಬೆಂಗಳೂರು-೭೦

ಪದ್ಧತಿಯನ್ನು ಬೆಂಬಲಿಸುತ್ತದೆ ಎಂದು ಹೇಳಲಾಗುತ್ತದೆ. ಇದಕ್ಕೆ ಸಂಬಂಧಿಸಿ ೪ನೇ ಅಧ್ಯಾಯದ ೧೩ನೇ ಶ್ಲೋಕವನ್ನು ಪ್ರಧಾನವಾಗಿ ಉದ್ಧರಿಸಲಾಗುತ್ತದೆ. ಇದರಲ್ಲಿ ಭಗವಾನ್ ಕೃಷ್ಣನು ಅರ್ಜುನನಿಗೆ ಹೇಳುತ್ತಾನೆ :

ಚಾತುರ್ವರ್ಣ್ಯಮ್ ಮಯಾ ಸೃಷ್ಟಮ್
ಗುಣಕರ್ಮ ವಿಭಾಗಶಃ

(ನಾಲ್ಕು ವರ್ಣಗಳು ನನ್ನಿಂದ ಗುಣ ಹಾಗೂ ವೃತ್ತಿ ಆಧಾರದ ಮೇಲೆ ಸೃಷ್ಟಿಸಲ್ಪಟ್ಟವು.)

ನೀನೊಬ್ಬ ಕ್ಷತ್ರಿಯ, ಧರ್ಮಯುದ್ಧ ಮಾಡುವುದಕ್ಕಿಂತ ಹೆಚ್ಚು ಕೀರ್ತಿಶಾಲಿಯಾದುದು ನಿನಗೆ ಬೇಕೆಂದಿಲ್ಲ, ಎಂದು ಅಧ್ಯಾಯ ೨ ಶ್ಲೋಕ ೩೧ರಲ್ಲಿ ಹೇಳಿ ಅರ್ಜುನನನ್ನು ಯುದ್ಧ ಮಾಡುವಂತೆ ಪ್ರೇರಿಸಲಾಗುತ್ತದೆ. ಮತ್ತೆ ಅಧ್ಯಾಯ ೧೮ ಶ್ಲೋಕ ೪೭ರಲ್ಲಿ ಭಗವಾನ್ ಕೃಷ್ಣನು ಅರ್ಜುನನಿಗೆ ಹೇಳುತ್ತಾನೆ: ನಿಗುಣವಾಗಿದ್ದರೂ ಸ್ವಧರ್ಮ ನಿರ್ವಹಣೆ ಶ್ರೇಯಸ್ಕರ, ಚೆನ್ನಾಗಿ ನಿರ್ವಹಿಸಲ್ಪಡುತ್ತಿದ್ದರೂ ಅನ್ಯಧರ್ಮ ಅನುಸರಣೆ ಸಲ್ಲ.[೧೨]

೪ನೇ ಅಧ್ಯಾಯದ ೧೩ನೇ ಶ್ಲೋಕವು ಇತರೆರಡು ಶ್ಲೋಕಗಳನ್ನು ಅರ್ಥಮಾಡಿಕೊಳ್ಳಲು ಸಹಕಾರಿ. ಕೃಷ್ಣನು ನಾಲ್ಕು ವರ್ಣಗಳಿಗೆ ಉಲ್ಲೇಖಿಸಿ ಅವನ್ನು ತಾನು ಗುಣ ಹಾಗೂ ಕರ್ಮಗಳ ಆಧಾರದ ಮೇಲೆ ಸೃಷ್ಟಿಸಿದುದು ಎಂದು ಹೇಳುತ್ತಾನೆ. ನಾಲ್ಕು ರೀತಿಯ ವಿಭಜನೆಗೆ ಹುಟ್ಟು ಆಧಾರ ಎಂದು ಅವನು ಎಲ್ಲೂ ಹೇಳುವುದಿಲ್ಲ, ಆ ವಿಭಜನೆ ಶ್ರಮ ವಿಭಜನೆಯಷ್ಟೆ. ಇದರಲ್ಲಿ ಪ್ರತಿಯೊಬ್ಬನೂ ತನ್ನ ಸಹಜ ಒಲವು ಹಾಗೂ ಪ್ರವೃತ್ತಿಗೆ ತಕ್ಕಂಥ ವೃತ್ತಿಯನ್ನು ಅನುಸರಿಸುತ್ತಾನೆ. ಹೀಗೆ ಗೀತೆಯು ಜಾತಿ ಪದ್ಧತಿಯನ್ನು ಬೆಂಬಲಿಸುವುದು ಹಾಗಿರಲಿ, ಅದು ಹುಟ್ಟಿನ ಆಧಾರದ ಮೇಲೆ ಜಾತಿ ನಿರ್ಧರಿಸುವುದನ್ನು ವಿರೋಧಿಸುತ್ತದೆ, ಎಂದೇ ಕೆ. ಎಂ. ಪಣಿಕ್ಕರ್ ಪರಿಗಣಿಸುತ್ತಾರೆ.[೧೩] ಕೃಷ್ಣನು ಶ್ರಮವಿಭಜನೆಗೆ ಹುಟ್ಟನ್ನು ಆಧಾರವಾಗಿ ಇರಿಸಿಕೊಳ್ಳ ಬಯಸಿದ್ದರೆ 'ಗುಣ-ಕರ್ಮ-ವಿಭಾಗಶಃ' ಎಂದು ಹೇಳಿರುವುದರ ಬದಲು 'ಜಾತಿ-ಕರ್ಮ-ವಿಭಾಗಶಃ' ಎಂದೋ 'ಜನ್ಮ-ಕರ್ಮ-ವಿಭಾಗಶಃ' ಎಂದೋ ಹೇಳುತ್ತಿದ್ದ, ಎಂದು ಕಾಣೆಯವರು ಹೇಳುತ್ತಾರೆ.[೧೪] ಅವರು 'ಗುಣ' ಎಂಬ ಪದವನ್ನು ಸ್ಪಷ್ಟವಾಗಿ ಎತ್ತಿ ತೋರಿಸುತ್ತಾರೆ. ಇದು ಉತ್ತರ-ಗೀತೆಯಲ್ಲಿ ಅರ್ಜುನನ ವಿಶಿಷ್ಟ ಪ್ರಶ್ನೆಗೆ ಕೃಷ್ಣ ನೀಡಿದ ಉತ್ತರದೊಂದಿಗೂ (ಇದನ್ನು ಕೆಳಗೆ ಉದ್ಧರಿಸಲಾಗಿದೆ) ಸುಸಂಗತವಾಗಿದೆ.

ಒಮ್ಮೆ ಇದು ಸ್ಪಷ್ಟವಾಯಿತೆಂದರೆ, ಇತರ ಎರಡು ಶ್ಲೋಕಗಳಲ್ಲಿ (II.31 ಹಾಗೂ XVIII.47) ಉಲ್ಲೇಖಿತವಾದ ಧರ್ಮವೂ ಗುಣದ ಮೇಲೆ ಆಧರಿತವಾದುದೇ ಹೊರತು ಹುಟ್ಟಿನ ಮೇಲಲ್ಲ ಎಂಬುದೂ ಸ್ಪಷ್ಟವಾಗುತ್ತದೆ. ಮಹಾಭಾರತ ಯುದ್ಧದಲ್ಲಿ ಕ್ಷತ್ರಿಯರಾಗಿ ಜನ್ಮ ತಳೆದಿರದಿದ್ದ ವ್ಯಕ್ತಿಗಳೂ ತಮ್ಮ ಒಲವು, ಸ್ವಭಾವ ಹಾಗೂ ಗುಣಕ್ಕೆ ಅನುಗುಣವಾಗಿ ಯುದ್ಧದಲ್ಲಿ ಭಾಗವಹಿಸಿದ್ದರು. ಆದ್ದರಿಂದ ಕ್ಷತ್ರಿಯನಾಗಿ ಹೋರಾಟ ನಡೆಸು ಎಂದು ಕೃಷ್ಣನು ಅರ್ಜುನನಿಗೆ ಹೇಳಿದುದರಲ್ಲಿ ಜಾತಿಯ ಭಾವ ಏನಿಲ್ಲ. ಅದೇ ರೀತಿ ಸ್ವಧರ್ಮ ಅನುಸರಿಸುವಂತೆ ನೀಡಿದ ಬುದ್ಧಿವಾದದ ಅರ್ಥವೂ, ಮನೋಧರ್ಮ ಹಾಗೂ ಗುಣವನ್ನು ಅನುಸರಿಸುವುದು, ಯಾವುದರಲ್ಲಿ ತುಲನಾತ್ಮಕವಾಗಿ ಹೆಚ್ಚು ಅನುಕೂಲವಿದೆ ಎಂಬುದನ್ನು ಕಂಡುಕೊಳ್ಳುವುದು, ಎಂಬುದೇ ಆಗಿದೆ. ಪ್ರತಿಭಾನ್ವಿತ ವ್ಯಕ್ತಿಯೊಬ್ಬ ಅನೇಕ ಕರ್ತವ್ಯಗಳನ್ನು ಇತರರಿಗಿಂತ ಹೆಚ್ಚು ಉತ್ತಮವಾಗಿ ನೆರವೇರಿಸಬಹುದು. ಆದರೆ ಎಲ್ಲಿ ತನಗೆ ತುಲನಾತ್ಮಕವಾಗಿ ಹೆಚ್ಚು ಅನುಕೂಲ ಇದೆ ಎಂಬುದನ್ನು ಕಂಡುಕೊಂಡಾಗಲಷ್ಟೆ ಅವನು ಹಾಗೆ ಮಾಡಬಲ್ಲನು. ನಿರುಪಾಧಿಕ (absolute) ಅನುಕೂಲದ ಬದಲು ತುಲನಾತ್ಮಕ ಅನುಕೂಲದ ನೀತಿಯನ್ನು ದೇಶಗಳ ನಡುವಿನ ಅಂತಾರಾಷ್ಟ್ರೀಯ ವ್ಯಾಪಾರದಲ್ಲೂ ಅನುಸರಿಸಲಾಗುತ್ತದೆ. ಕೃಷ್ಣ ಹೇಳಿದುದೆಲ್ಲ, ಹೆಚ್ಚು ವೈಜ್ಞಾನಿಕವಾದ ಹಾಗೂ ಕಾರ್ಯಸಾಧುವಾದ ನೀತಿಯನ್ನು ಅನುಸರಿಸು, ಅದು ಪರಮಾವಧಿ ಸಾಮಾಜಿಕ ಹಾಗೂ ವೈಯಕ್ತಿಕ ಸಂಕ್ಷೇಮವನ್ನು ಒದಗಿಸುತ್ತದೆ, ಎಂಬುದೇ ಆಗಿದೆ. ಇದರಲ್ಲಿ ಜಾತೀಯತೆಯ ಲಕ್ಷಣ ಏನೇನೂ ಇಲ್ಲ. ಇಲ್ಲಿ ಹೇಳಲಾಗಿರುವ ತುಲನಾತ್ಮಕ ಅನುಕೂಲ ಭಾವನೆಯನ್ನು ಈಡೇರಿಸಲು ಸಾಧ್ಯವಾದ ಸಂಭಾವ್ಯತೆ ಎಂಬ ಗತಿಶೀಲತೆಯ (dynamic) ಅರ್ಥದಲ್ಲಿ ತೆಗೆದುಕೊಳ್ಳಬಹುದು, ಇಂದಿನ ಅಥವಾ ವಾಸ್ತವಿಕ ಗುಣದಲ್ಲಿನ ಸ್ಥಾಯೀ ಅರ್ಥದಲ್ಲಲ್ಲ.

ಜಾತಿ ಪದ್ಧತಿಯನ್ನು ತುಂಬ ಮಟ್ಟಿಗೆ ಬೆಂಬಲಿಸಲು ರಾಮಾಯಣದ ಶಂಬೂಕ ಕಥೆಯನ್ನೂ ಉದ್ಧರಿಸಲಾಗುತ್ತದೆ. ಇದು ಒಬ್ಬ ಶೂದ್ರನ ಕಥೆ. ಅವನು ತನ್ನ ಜಾತಿ ನಿಯೋಜಿತ ಕರ್ತವ್ಯಗಳನ್ನು ನಿರ್ಲಕ್ಷಿಸಿ ತಪಸ್ಸನ್ನು ಆಚರಿಸುತ್ತಾನೆ. ಈ ತಪ್ಪಿಗೆ ಶಿಕ್ಷೆಯಾಗಿ ರಾಮನು ಸಚಿವರುಗಳ ಸಲಹೆಯ ಮೇರೆಗೆ ಅವನಿಗೆ ಮೃತ್ಯು ದಂಡ ಕೊಡುತ್ತಾನೆ. ಈ ಕಥೆ ಉತ್ತರ ಕಾಂಡದಲ್ಲಿ ಬರುತ್ತದೆ, ಆದರೆ ಇದು ವಾಲ್ಮೀಕಿ ರಾಮಾಯಣದ ಒಂದು ಭಾಗವೇನಲ್ಲ. ರಾಮನು ಅಯೋಧ್ಯೆಗೆ ಹಿಂದಿರುಗುವ ಯುದ್ಧಕಾಂಡದೊಂದಿಗೆ ವಾಲ್ಮೀಕಿ ರಾಮಾಯಣ ಮುಗಿಯುತ್ತದೆ. ಹಾಗಾಗಿ ಉತ್ತರಕಾಂಡವು ಸ್ಪಷ್ಟವಾಗಿಯೇ ಆನಂತರ ಸೇರಿಸಲಾದ ಒಂದು ಪ್ರಕ್ಷೇಪ ಎಂದು ಘನ ಸಂಸ್ಕೃತ ವಿದ್ವಾಂಸ ಪಿ. ವಿ. ಕಾಣೆಯವರು ಹೇಳುತ್ತಾರೆ.[೧೫] ವರ್ಣ ಪದ್ಧತಿಯು ಹುಟ್ಟಿನ ಮೇಲೆ ಆಧರಿಸುವ ಜಡ್ಡು ರೂಪ ತಳೆದಿದ್ದ ಕಾಲದಲ್ಲಿ ಈ ಪ್ರಕ್ಷೇಪ ಮಾಡಲಾಯಿತು. ಕೆಳ ಜಾತಿಗಳಲ್ಲಿ ಹುಟ್ಟಿದ ಅನೇಕರು ಋಷಿಗಳ ಶಿಷ್ಯರಾಗಿ ಆಶ್ರಮ ಸೇರಿ ತಾವೇ ಋಷಿಗಳಾದ ಅನೇಕ ನಿದರ್ಶನಗಳಿರುವಾಗ ಈ ಶಂಬೂಕನ ಕಥೆ ಅಸಂಗತವಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಮಾತಂಗ ಋಷಿಯನ್ನು ಅತ್ಯಂತ ಉನ್ನತ ಗೌರವದಿಂದ ಕಾಣಲಾಗಿದೆ. ಈ ಋಷಿಯು ಇಂದಿನ ಅರ್ಥದಲ್ಲಿ ಅಸ್ಪೃಶ್ಯರು ಎನ್ನುವಂಥ ಜಾತಿಯವ. ರಾಮನು ಅರಣ್ಯವಾಸದಲ್ಲಿ ಈ ಋಷಿಯನ್ನು ಸಂಧಿಸಿ ಗೌರವ ಸಲ್ಲಿಸುತ್ತಾನೆ.

ಈಗ ನಾವು ಜಾತಿ ಪದ್ಧತಿಯೊಂದಿಗೆ ಸಹಮತ ಹೊಂದಿರದಂಥ ಹಾಗೂ ಹುಟ್ಟು ಅಥವಾ ಕುಲ (ಕುಟುಂಬ)ವನ್ನು ಆಧರಿಸಿ ವ್ಯಕ್ತಿಯೊಬ್ಬನ ಗುಣ ಹಾಗೂ ಸ್ಥಾನಮಾನವನ್ನು ನಿರ್ಧರಿಸುವ ಅಭ್ಯಾಸವನ್ನು ಖಂಡಿಸುವಂಥ ಹಿಂದೂ ಧರ್ಮಗ್ರಂಥಗಳ ಭಾಗಗಳನ್ನು ಪರಿಶೀಲಿಸೋಣ.

ಪ್ರತಿಯೊಂದು ಜೀವಿಯಲ್ಲೂ ದೈವತ್ವವಿದೆಯೆಂದು ವೇದಾಂತ ಘೋಷಿಸುತ್ತದೆ. ಅಧ್ಯಾಯ ೬, ಶ್ಲೋಕ ೩೦ರಲ್ಲಿ ಕೃಷ್ಣ ಭಗವಾನ್ ಹೇಳುತ್ತಾನೆ : ''ಯಾರು ನನ್ನನ್ನು ಎಲ್ಲದರಲ್ಲೂ, ಎಲ್ಲದರಲ್ಲಿ ನನ್ನನ್ನೂ ಕಾಣುತ್ತಾರೋ ಅವರು ಎಂದೂ ನನ್ನಿಂದ ಹೊರಗಿರಲಾರರು, ನಾನು ಅವರಿಗೆ ಅಲಭ್ಯನೂ ಅಲ್ಲ'' ಗೀತೆಯಲ್ಲಿನ ಇದಕ್ಕೆ ಮುನ್ನಿನ ಹಾಗೂ ಇದಾದ ನಂತರದ ಶ್ಲೋಕಗಳೂ ಇದೇ ಸಂದೇಶವನ್ನು ಹೇಳುತ್ತವೆ. ಭಗವಾನ್ ಕೃಷ್ಣ ಮತ್ತೂ ಹೇಳುತ್ತಾನೆ : ''ಯಾರು ತನಗೆ ಅನ್ವಯಿಸುವ ಮಾನಕದಿಂದಲೇ ಇತರರ ಸುಖ ದುಃಖಗಳನ್ನೂ ತೀರ್ಮಾನಿಸುತ್ತಾನೋ ಅವನೇ ಅತ್ಯಂತ ಶ್ರೇಷ್ಠಯೋಗಿ.'' (ಅಧ್ಯಾಯ ೬.೩೨) ಈ ಹಿತವಚನವು ಹುಟ್ಟು ಆಧಾರಿತ ಜಾತಿ ವೈಪರೀತ್ಯಗಳೊಂದಿಗೆ ಹೇಗೆ ಸುಸಂಗತವಾಗಿರಬಲ್ಲುದು ? ೧೬ನೆಯ ಅಧ್ಯಾಯದಲ್ಲಿ ಭಗವಾನ್ ಕೃಷ್ಣನು ಮಾನವ ಜೀವಿಗಳಲ್ಲಿ ತಾನು ಯಾವ ಸದ್ಗುಣಗಳನ್ನು ಕಾಣಬಯಸುತ್ತಾನೆ ಎಂಬುದನ್ನು ನಿರೂಪಿಸಿ ಅವುಗಳುಳ್ಳವರೇ ದೈವೀ ಪುರುಷರು ಎಂದು ಹೇಳುತ್ತಾನೆ. ಅಹಿಂಸೆ, ಸತ್ಯ, ಎಲ್ಲರ ಬಗೆಗೂ ಕರುಣೆ, ಕೋಪ, ಹಗೆತನ ಇಲ್ಲದಿರುವುದು, ನಿಸ್ವಾರ್ಥ ದಾನ ಹಾಗೂ ಸೇವೆ, ಕ್ಷಮೆ, ನಿರ್ಲೋಭ ಹಾಗೂ ವಿನಮ್ರತೆ - ಇವು ಈ ಸದ್ಗುಣಗಳಲ್ಲಿ ಕೆಲವು (ಅಧ್ಯಾಯ ೧೬, ಶ್ಲೋಕ ೧-೩). ಉಚ್ಚ ಕುಲ ಅಥವಾ ಜನ್ಮ ಎಷ್ಟು ಮಾತ್ರವೂ ಪ್ರಸ್ತುತವಲ್ಲ ಎಂಬುದು ಇದರಿಂದ ಸ್ಪಷ್ಟ.

ಋಗ್ವೇದವು ಎಲ್ಲ ಮಾನವ ಜೀವಿಗಳೂ ಸಮಾನರೆಂದು ಒತ್ತಿ ಹೇಳುತ್ತದೆ. ಅದು ಹೇಳುವ ಈ ಕೆಳಗಿನ ಮಾತುಗಳು ಎಷ್ಟು ಆಧುನಿಕ ಎನಿಸುತ್ತದೆ : ''ಯಾರೂ ಉಚ್ಚರಲ್ಲ, ಯಾರೂ ನೀಚರಲ್ಲ, ಎಲ್ಲರೂ ಸಮೃದ್ಧತೆಯತ್ತ ಮುನ್ನಾಗುತ್ತಿರುವ ಸೋದರರೇ.''[೧೬]

ಜಾತಿ ಏನೇ ಆಗಿರಲಿ, ಎಲ್ಲ ಮಾನವ ಜೀವಿಗಳೂ ದೇವರ ಮುಂದೆ ಸಮಾನರು. ಎಲ್ಲರೂ ಭಗವಂತನ ದಿವ್ಯ ಜ್ಯೋತಿಯನ್ನು ಪಡೆಯಲು ಬಾಧ್ಯರು, ಎಂಬ ವಿಚಾರವು ಈ ಕೆಳಗಿನ ಶ್ಲೋಕದಿಂದ ಸುಸ್ಪಷ್ಟ:

ರುಚಮ್ ನೋ ದೇಹಿ ಬ್ರಾಹ್ಮಣೇಷು
ರುಚಮ್ ರಾಜಸು ನಸ್ಕೃಧಿ।
ರುಚಮ್ ವಿಶ್ವೇಷು ಶೂದ್ರೇಷು
ಮಯಿ ದೇಹಿ ರುಚಾ ರುಚಮ್ ॥

*- ತೈತ್ತಿರೀಯ ಸಂಹಿತೆ V. 7.6. 3-4*

(ನಮ್ಮ ಬ್ರಾಹ್ಮಣರಲ್ಲಿ ಜ್ಯೋತಿಯನ್ನು ಬೆಳಗಿಸು, ನಮ್ಮ ರಾಜರುಗಳಲ್ಲಿ ಅದನ್ನು ಬೆಳಗಿಸು, ವೈಶ್ಯ ಶೂದ್ರರಲ್ಲೂ ಬೆಳಕನ್ನು ಬೆಳಗಿಸು, ನಿನ್ನ ಬೆಳಕಿನಿಂದ ನನ್ನಲ್ಲೂ ಬೆಳಕನ್ನು ಇರಿಸು. [೧೭])

ಹುಟ್ಟನ್ನು ಕಡೆಗಣಿಸಿ ವ್ಯಕ್ತಿಗಳ ಗುಣ ಹಾಗೂ ಮೂಲ ಯೋಗ್ಯತೆಯನ್ನು ಎತ್ತಿ ಹಿಡಿಯುವ ಮೂಲಕ ಹಿಂದೂ ಪವಿತ್ರ ಗ್ರಂಥಗಳು ಮಾನವೀಯತೆಯನ್ನೂ ಉದಾರವಾದವನ್ನೂ ಮೆರೆದಿವೆ ಎಂಬುದು ಹಿಂದೂಧರ್ಮದ ನಿಂದಕರಿಗೆ ಆಶ್ಚರ್ಯಕರವಾಗಿ ಕಾಣಬಹುದು, ಆದರೆ ಅದು ವಾಸ್ತವಾಂಶ.

ಮಹಾಭಾರತವು ಈ ಅಂಶವನ್ನು ತುಂಬ ಪ್ರಬಲವಾಗಿ ಎತ್ತಿ ತೋರಿಸುತ್ತದೆ. ಎಷ್ಟರಮಟ್ಟಿಗೆ ಅಂದರೆ, ಅದು ಹುಟ್ಟು ಆಧಾರಿತ ಜಾತಿ ಪದ್ಧತಿಯ ವಿರುದ್ಧ ಬಂಡಾಯವನ್ನೇ ಪ್ರತಿಬಿಂಬಿಸುತ್ತದೆ.

ನ ಕುಲಮ್ ವೃತ್ತಹೀನಸ್ಯ
ಪ್ರಮಾಣಮಿತಿ ಮೇ ಮತಿಃ
ಅಂತೇಷ್ವಪಿ ಜಾತಾನಾಮ್
ವೃತ್ತಮೇವ ವಿಶಿಷ್ಯತೇ ॥

- ಮಹಾಭಾರತ, ಉದ್ಯೋಗಪರ್ವ, ಅಧ್ಯಾಯ ೩೪, ಶ್ಲೋಕ ೪೧

(ಗುಣರಹಿತನಿಗೆ ಉನ್ನತ ಹುಟ್ಟು ಪ್ರಮಾಣವಾಗಲಾರದು. ಆದರೆ ಕೆಳಹುಟ್ಟಿನವರಾದರೂ ಸದ್ಗುಣದ ವ್ಯಕ್ತಿಗಳು ವಿಶಿಷ್ಟವಾಗಿ ಎದ್ದು ಕಾಣುವರು.)

ಮಹಾಭಾರತವು ಮತ್ತೊಂದು ಕಡೆಯೂ ಇದೇ ಅಂಶವನ್ನು ಒತ್ತಿ ಹೇಳುತ್ತದೆ :

*ಯಸ್ತು ಶೂದ್ರೋ ದಮೇ ಸತ್ಯೇ*
*ಧರ್ಮೇ ಚ ಸತತೋತ್ಥಿತಃ।*
*ತಮ್ ಬ್ರಾಹ್ಮಣಮಹಂ ಮನ್ಯೇ*
*ವೃತ್ತೇನ ಹಿ ಭವೇತ್ ದ್ವಿಜಃ॥*

- ಮಹಾಭಾರತ, ವನಪರ್ವ, ಅಧ್ಯಾಯ ೨೧೬, ಶ್ಲೋಕ ೧೪-೧೫

(ಆತ್ಮಸಂಯಮ, ಸತ್ಯ ಹಾಗೂ ಧರ್ಮಶೀಲತೆಯಲ್ಲಿ ಸದಾ ತೊಡಗಿರುವಂಥ ಶೂದ್ರನನ್ನು ನಾನು ಬ್ರಾಹ್ಮಣನೆಂದು ಮನ್ನಿಸುತ್ತೇನೆ. ಯಾರೇ ಆಗಲಿ ನಡೆವಳಿಕೆಯಿಂದಷ್ಟೆ ದ್ವಿಜನಾಗಬಲ್ಲ.[೨೨])

ಕೃಷ್ಣಾರ್ಜುನರ ಸಂವಾದವಾದ ಉತ್ತರಗೀತೆಯೂ ಇದೇ ಅಂಶವನ್ನು ತಿಳಿಸುತ್ತದೆ. ವರ್ಣವನ್ನು ನಿರ್ಧರಿಸುವುದೆಂತು ಎಂದು ಅರ್ಜುನ ಕೃಷ್ಣನನ್ನು ನಿರ್ದಿಷ್ಟವಾಗಿ ಕೇಳಿದಾಗ ಅವನು ಉತ್ತರಿಸುತ್ತಾನೆ :

*ನ ಜಾತಿಃ ಕಾರಣಮ್ ತಾತ*
*ಗುಣಾಃ ಕಲ್ಯಾಣಕಾರಣಮ್।*
*ವ್ರತಸ್ತಮಪಿ ಚಾಂಡಾಲಮ್*
*ತಮ್ ದೇವಾಃ ಬ್ರಾಹ್ಮಣಂ ವಿದುಃ॥*

(ಜಾತಿ ಕಾರಣವಲ್ಲ, ನನ್ನ ಮಿತ್ರ, ಸದ್ಗುಣಗಳೇ ಕಲ್ಯಾಣಕ್ಕೆ ಕಾರಣ. ವ್ರತಸ್ಥನಾದ ಚಂಡಾಲನನ್ನೂ ದೇವತೆಗಳು ಬ್ರಾಹ್ಮಣನೆಂದೇ ತಿಳಿಯುತ್ತಾರೆ.[೨೩])

ಮೇಲಿನ ಶ್ಲೋಕವೂ ಭಗವದ್ಗೀತೆಯ ಮೂರು ವಿವಾದಾತ್ಮಕ ಶ್ಲೋಕಗಳಿಗೆ ನಾವು ನೀಡಿದ ವ್ಯಾಖ್ಯಾನವನ್ನೆ ಪುಷ್ಟೀಕರಿಸುತ್ತದೆ.

ಶಂಕರಾಚಾರ್ಯರು (೮ನೆಯ ಶತಮಾನ) ಚಂಡಾಲನೊಬ್ಬನಿಗೆ ಸಾಷ್ಟಾಂಗವೆರಗಿದ ಕಥೆ ಸುವಿಖ್ಯಾತ. ಚಂಡಾಲನು ಶಂಕರಾಚಾರ್ಯರ ದಾರಿಗೆ ಅಡ್ಡ ಬಂದಾಗ ದೂರ ಸರಿಯುವಂತೆ ಹೇಳಲಾಯಿತು. ನಿಮ್ಮ ವರ್ತನೆಯು ನಿಮ್ಮ ತತ್ವಜ್ಞಾನಕ್ಕೆ ಸರಿಹೊಂದುತ್ತದೆಯೇ, ಎಂದು ಚಂಡಾಲ ಅವರನ್ನು ಕೇಳಿದ. ಅವನು ಮತ್ತೂ ಕೇಳಿದ : ವಿಪ್ರೋಯಮ್ ಶ್ವಪಚೋಯಮ್ ಇತ್ಯಪಿ ಮಹಾನ್ ಕೋಯಮ್ ವಿಭೇದ ಭ್ರಮಃ (ಇವ ಬ್ರಾಹ್ಮಣ, ಇವ ಅಸ್ಪೃಶ್ಯ ಎನ್ನುವ ಈ ಗೊಂದಲಗೊಳಿಸುವ ವ್ಯತ್ಯಾಸ ಎಂತಹುದು ?). ಇದನ್ನು ಕೇಳಿದ ಶಂಕರಾಚಾರ್ಯರು ಗುರುವಿನ ಮುಂದೆ ಎಂಬಂತೆ ಆ ಚಂಡಾಲನ ಮುಂದೆ ಸಾಷ್ಟಾಂಗವೆರಗಿ, ಮಾನಿಷ ಪಂಚಕಮ್ ಎಂದು ಖ್ಯಾತವಾದ ಐದು ಶ್ಲೋಕಗಳನ್ನು ಉದ್ಗರಿಸುತ್ತಾರೆ. ಅವರು ತಮ್ಮ ಅದ್ವೈತ ದರ್ಶನವನ್ನು ಪುನರುಚ್ಚರಿಸು ತ್ತಾರೆ. ಮೊದಲ ಶ್ಲೋಕದಲ್ಲೇ ಹೇಳುತ್ತಾರೆ. ಪರಮಾತ್ಮನನ್ನು ಬಲ್ಲವನು, ಅವನು ಚಂಡಾಲನಾಗಿರಲಿ ಇಲ್ಲವೇ ದ್ವಿಜನಾಗಿರಲಿ, ಅವನೇ ನನಗೆ ಗುರು. (ಚಂಡಾಲೋಸ್ತು ಸ ತು ದ್ವಿಜೋಸ್ತು ಗುರುರಿತ್ಯೇಷಾ ಮನೀಷಾ ಮಮ)[೨೪]. ೧೨ನೆಯ ಶತಮಾನದಲ್ಲಿ ಬಂದ ರಾಮಾನುಜಾಚಾರ್ಯರು ಜಾತಿಯನ್ನು ಇನ್ನೂ ಹೆಚ್ಚು ಪ್ರಬಲವಾಗಿ ಧಿಕ್ಕರಿಸಿದರು. ಮಧ್ವಾಚಾರ್ಯರು (೧೩ನೆಯ ಶತಮಾನ) ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಹೇಳುತ್ತಾರೆ. ಅಸ್ಪೃಶ್ಯರೂ ದೈವಭಕ್ತಿ ಹೊಂದಿದ್ದಲ್ಲಿ ದೇವರ ಹೆಸರಿಗೂ ಜ್ಞಾನಕ್ಕೂ ಬಾಧ್ಯರು.[೨೫]

ತಮಿಳು ವೇದ ಎಂದು ತಮಿಳರು ಪೂಜ್ಯಭಾವದಿಂದ ಕಾಣುವ ತಿರುವಳ್ಳುವರ್ ವಿರಚಿತ ತಿರುಕ್ಕುರಳ್ ಹೇಳುತ್ತದೆ : ಅನ್ಯಾಯ ಪಕ್ಷಪಾತಗಳೊಂದಿಗೆ ಯೋಚಿಸುವವನಿಗೆ ಎಚ್ಚರವಿರಲಿ - ಅವನಿಗೆ ಸರ್ವನಾಶ ಕಾದಿದೆ. (೧೧೬ನೇ ಸೂಕ್ತ). ಮತ್ತೆ ''ಸಮಸ್ತರೂ ಸಮಾನರಾಗಿ ಹುಟ್ಟಿದವರು, ವ್ಯತ್ಯಾಸಗಳೇನಿದ್ದರೂ ಅವು ಅವರು ಮಾಡುವ ಕರ್ಮದಲ್ಲಿ (೯೭೨ನೇ ಸೂಕ್ತ).

ಹುಟ್ಟಿನ ಮೇಲೆ ಆಧರಿಸಿದ ಜಾತಿ ಪದ್ಧತಿಯನ್ನು ವಿರೋಧಿಸುವ ಒಂದು ಇಡೀ ಉಪನಿಷತ್ತೇ ಇದೆ. ಅದರ ಹೆಸರು ವಜ್ರಸೂಚಿಕ. ಅಂದರೆ ವಜ್ರ (ಸಿಡಿಲು) ಸೂಚಿಸುವಂತಹುದು. ಹೆಸರಿಗೆ ತಕ್ಕಂತೆ ಅದು ದೇವರಿಂದ ದೂರ ಒಯ್ಯುವಂಥ ಹಾಗೂ ಜಾತಿ ವೈಪರೀತ್ಯಗಳಿಗೆ ಕಾರಣವಾದಂಥ ಅಜ್ಞಾನವನ್ನು ಸಿಡಿಲಿನಂತೆ ಬಡಿದು ನಾಶಗೊಳಿಸುತ್ತದೆ. ಇದು ಗದ್ಯರೂಪದಲ್ಲಿದೆ. ಗಾತ್ರದಲ್ಲಿ ಸಣ್ಣದು, ಕೇವಲ ಒಂಬತ್ತು ಸಣ್ಣ ವಾಕ್ಯವೃಂದಗಳಿಂದ ಕೂಡಿದೆ. ಡಾ. ಎಸ್. ರಾಧಾಕೃಷ್ಣನ್‌ರವರ 'ಪ್ರಧಾನ ಉಪನಿಷತ್ತುಗಳು' ಎಂಬ ಗ್ರಂಥದಲ್ಲಿ ಇದನ್ನು ಕೊನೆಯ ಉಪನಿಷತ್ತನ್ನಾಗಿ ಸೇರಿಸಲಾಗಿದೆ. ರಾಧಾಕೃಷ್ಣನ್‌ರವರೇ ಇದನ್ನು ಭಾಷಾಂತರಿಸಿದ್ದಾರೆ.[೨೬] ಕೆಳಗಿನದು ಅದರ ಸಾರಾಂಶರೂಪ. ಈ ಉಪನಿಷತ್ತು ವಾದದ ರೂಪದಲ್ಲಿದೆ. ಕೆಲವು ಪ್ರಶ್ನೆಗಳೊಂದಿಗೆ (ಎರಡನೇ ವಾಕ್ಯವೃಂದದಲ್ಲಿ) ಪ್ರಾರಂಭವಾಗುತ್ತದೆ : ''ನಿಜಕ್ಕೂ ಬ್ರಾಹ್ಮಣ ಅಂದರೆ ಯಾರು ? ಅವನು ಆತ್ಮ ಅಥವಾ ಜೀವವೇ? ಅವನು ಶರೀರವೇ ? ಜಾತಿ ಆಧರಿಸಿದ ವರ್ಗವೇ? ಅವನು ಜ್ಞಾನವೇ? ಅವನು ಕರ್ಮವೇ ? ಅವನು ಧಾರ್ಮಿಕ ಕ್ರಿಯೆಗಳ ಕರ್ತೃವೇ?'' ಅನಂತರ ಅದು ಒಂದಾದ ನಂತರ ಒಂದರಂತೆ ಈ ಪ್ರಶ್ನೆಗಳಿಗೆ ಉತ್ತರ ನೀಡುತ್ತದೆ. ಬ್ರಾಹ್ಮಣನು ಆತ್ಮ ಆಗಲಾರ, ಏಕೆಂದರೆ ಈ ಆತ್ಮ ಹಿಂದಿನ ಜನ್ಮಗಳಲ್ಲೂ ಇದೇ ಆಗಿರುತ್ತದೆ. ಅವನು ಶರೀರವಾಗಲಾರ, ಏಕೆಂದರೆ, ಶರೀರವು ದೈಹಿಕ ಘಟಕಗಳಿಂದ ಕೂಡಿರುತ್ತದೆ, ಮತ್ತೆ ಅವು ಎಲ್ಲ ಮಾನವಜೀವಿಗಳಲ್ಲೂ ಒಂದೇ ಆಗಿರುತ್ತವೆ. ಆವನನ್ನು ಹುಟ್ಟಿನಿಂದ ನಿರ್ಧರಿಸಲಾಗದು, ಏಕೆಂದರೆ ಹುಟ್ಟು ಬೇರೆ ಆಗಿದ್ದರೂ ಅನೇಕ ಋಷಿಗಳು ಉನ್ನತ ಪದವಿ ಗಳಿಸಿದ್ದಾರೆ. ಅವನು ಜ್ಞಾನದಿಂದಲೂ ನಿರ್ಧರಿತವಾಗಲಾರ, ಏಕೆಂದರೆ ಅನೇಕ ಕ್ಷತ್ರಿಯರೂ ಇತರರೂ ಅತ್ಯುನ್ನತ ಜ್ಞಾನ ಹಾಗೂ ವಿವೇಕ ಗಳಿಸಿದ್ದಾರೆ. ಜ್ಞಾನವು ಬ್ರಾಹ್ಮಣನ ವಿಶಿಷ್ಟಲಕ್ಷಣವೇನೂ ಆಗಿಲ್ಲ. ಕರ್ಮ ವೈಶಿಷ್ಟ್ಯವೂ ಒಬ್ಬನನ್ನು ಬ್ರಾಹ್ಮಣನನ್ನಾಗಿ ಮಾಡಲಾರವು, ಏಕೆಂದರೆ, ಮಾನವ ಜೀವಿಗಳೆಲ್ಲ ಉತ್ತಮ ಕರ್ಮ ಎಸಗಬಲ್ಲರು, ಅದೇ ರೀತಿ ಮತಕ್ರಿಯೆಗಳನ್ನೂ ದಾನ ಧರ್ಮಗಳನ್ನೂ ಎಲ್ಲರೂ ಮಾಡಬಲ್ಲರು. ಹಾಗಿದ್ದ ಮೇಲೆ ನಿಜಕ್ಕೂ ಬ್ರಾಹ್ಮಣನು ಯಾರು ? ಅವನು ಆತ್ಮಜ್ಞಾನವುಳ್ಳವನು. ಹುಟ್ಟಿನ ವ್ಯತ್ಯಾಸಗಳ ಕಡೆಗೆ ಅವನು ಗಮನ ನೀಡುವುದಿಲ್ಲ, ಅವನು ಅಸ್ಥಿರತೆ, ಸಂಕುಚಿತತೆ ಹಾಗೂ ಅಹಂಕಾರಗಳಿಂದ ಮುಕ್ತನು. ಎಲ್ಲ ಜೀವಿಗಳ ಅಂತರ್ಯದಲ್ಲಿ ಇದ್ದುಕೊಂಡಿರುವ ಸದಸದ್ಭಾವದಂತೆ ಕಾರ್ಯ ಜರುಗಿಸುತ್ತಾನೆ. ಹೀಗೆ ಹೇಳಿದ ನಂತರ ಕೊನೆಯಲ್ಲಿ ಉಪನಿಷತ್ತು ಎಲ್ಲ ರೀತಿಯ ಭೇದಭಾವಗಳನ್ನೂ ಅಹಂಭಾವವನ್ನೂ ಬಿಟ್ಟು ಪರಮಾತ್ಮನ ಧ್ಯಾನದಲ್ಲಿ ಅಸಕ್ತರಾಗುವಂತೆ ಎಲ್ಲರಿಗೂ ಕರೆ ನೀಡುತ್ತದೆ. ಈ ಉಪನಿಷತ್ತನ್ನು ಓದಿದ ನಂತರ ಹಿಂದೂ ತತ್ತ್ವಜ್ಞಾನವೂ ಧರ್ಮವೂ ಜಾತಿ ಪದ್ಧತಿಗೆ ವಿರೋಧವಾಗಿವೆ ಎಂಬುದನ್ನು ತೋರಿಸಿಕೊಡಲು ಮತ್ತಷ್ಟು ಪುರಾವೆಗಳ ಅಗತ್ಯವೇನಿಲ್ಲ.

**ಜಾತಿ ಪದ್ಧತಿಯ ವಿರುದ್ಧ ಆಯುಧವಾಗಿ ದಂತಕತೆಗಳು**

ಹಿಂದೂಧರ್ಮವು ಅಸ್ಪೃಶ್ಯತೆ ಹಾಗೂ ಜಾತಿ ಪದ್ಧತಿಯ ವಿರುದ್ಧ ಮೇಲೆ ಚರ್ಚಿಸಿದಂತೆ ನೇರ ಬೋಧನೆಯ ಮೂಲಕವಲ್ಲದೆ ದಂತಕಥೆ (legends)ಗಳನ್ನು ಸೃಷ್ಟಿಸುವ ಮೂಲಕವೂ ಹೋರಾಟ ನಡೆಸಿತು. ಅಂಥ ದಂತಕಥೆಗಳು ಜನರ ಮನಸ್ಸಿನ ಮೇಲೆ ನೇರವಾಗಿ ಪರಿಣಾಮ ಬೀರುತ್ತಿದ್ದವು.

ತಿರುಪ್ಪನ್ ಆಳ್ವಾರ್ (ಕ್ರಿ. ಶ. ೧೦ನೆಯ ಶತಮಾನ) ರಂಗನಾಥ ದೇವರ ಒಬ್ಬ ಅಸ್ಪೃಶ್ಯ ಭಕ್ತ. ಅವನು ಒಮ್ಮೆ ದೇವಸ್ಥಾನದ ಮಾರ್ಗ ಮಧ್ಯೆ ನಿಂತಿದ್ದನೆಂದು ಪೂಜಾರಿಯೊಬ್ಬ ಅವನನ್ನು ನಿಂದಿಸಿದ. ಅನಂತರ ಪೂಜಾರಿ ದೇವಸ್ಥಾನದ ಬಾಗಿಲು ತೆರೆಯಲು ಹೋದಾಗ ಬಾಗಿಲು ತೆರೆದುಕೊಳ್ಳಲೇ ಇಲ್ಲ. ಬದಲು ಗರ್ಭಗುಡಿಯಿಂದ ಧ್ವನಿ ಕೇಳಿ ಬಂತು : ಪೂಜಾರಿಯು ಆಳ್ವಾರ್‌ನನ್ನು ಹೆಗಲ ಮೇಲೆ ಹೊತ್ತು ದೇವಸ್ಥಾನದ ಸುತ್ತ ಮೂರು ಸುತ್ತು ಪ್ರದಕ್ಷಿಣೆ ಹಾಕಿ ಅವನನ್ನು ದೇವರ ಮುಂದೆ ತಂದು ನಿಲ್ಲಿಸಿದರಷ್ಟೆ ಬಾಗಿಲು ತೆರೆಯುವುದು. ಪೂಜಾರಿ ಈ ಆಜ್ಞೆಯನ್ನು ಪಾಲಿಸಲೇಬೇಕಾಯಿತು. ಆನಂತರ ತಿರುಪ್ಪನ್ ಆಳ್ವಾರ್‌ನನ್ನು ಒಬ್ಬ ಮಹಾಸಂತನೆಂದು ಕೊಂಡಾಡಲಾಯಿತು.

ಕನಕದಾಸ (ಕ್ರಿ. ಶ. ೧೬ನೇ ಶತಮಾನ)ನ ಬಗೆಗೂ ಅಂಥದೇ ಒಂದು ದಂತ ಕಥೆ ಇದೆ. ಉಡುಪಿ ಶ್ರೀಕೃಷ್ಣನ ದೇವಸ್ಥಾನದ ಒಳಗೆ ಹೋಗಲು ಪೂಜಾರಿಗಳು ಅವನಿಗೆ ಅವಕಾಶ ನೀಡದಿದ್ದಾಗ ದೇವರ ವಿಗ್ರಹವೇ ಹಿಂದೆ ತಿರುಗಿ ಅಲ್ಲಿದ್ದ ಕಿಂಡಿಯ ಮೂಲಕ ಕನಕದಾಸನಿಗೆ ದರ್ಶನ ನೀಡಿತೆಂದು ಹೇಳಲಾಗುತ್ತದೆ. ಇಂದೂ ಆ ಕಿಂಡಿಯನ್ನು 'ಕನಕನ ಕಿಂಡಿ' ಎಂದು ಕರೆಯಲಾಗುತ್ತಿದೆ.

ಭಾರತದ ಇತರ ಪ್ರದೇಶಗಳಲ್ಲೂ ಇಂಥವೇ ಹಲವಾರು ದಂತಕಥೆಗಳಿವೆ. ಮಹಾರಾಷ್ಟ್ರದಲ್ಲಿ ಕೆಳಜಾತಿಗಳ ಕಾರ್ಮಿಕ ವರ್ಗದ ಭಕ್ತ-ಸಂತರ ಬಗೆಗೆ ಒಂದು ಸ್ವಾರಸ್ಯಕರ ನಂಬಿಕೆ ಇದೆ. ಹೊಟ್ಟೆಪಾಡಿಗಾಗಿ ಹೋರಾಟ ನಡೆಸಬೇಕಾಗಿ ಬಂದರೂ ತನ್ನಲ್ಲಿ ಗಾಢ ಭಕ್ತಿ ಹೊಂದಿರುವ ಕಾರ್ಮಿಕ ವರ್ಗದ ಭಕ್ತರ ಬಗೆಗೆ ವಿಠ್ಠಲ ದೇವರು ಎಷ್ಟು ಅಪಾರ ಸಹಾನುಭೂತಿ ಹೊಂದಿದ್ದಾನೆಂಬುದನ್ನು ಅದು ಹೃದಯಸ್ಪರ್ಶಿಯಾಗಿ ವ್ಯಕ್ತಪಡಿಸುತ್ತದೆ. ಆ ದೇವರು ಸ್ವತಃ ತನ್ನ ಭಕ್ತರ ದುಡಿಮೆಯಲ್ಲಿ ಭಾಗವಹಿಸಿ ಅವರಿಗೆ ಭಾವಾತ್ಮಕ ನೆಮ್ಮದಿ ನೀಡುತ್ತಾನೆ. ಇದು ಮೇಲ್ಜಾತಿಗಳ ದೃಷ್ಟಿಯಲ್ಲಿ ದೈಹಿಕ ಶ್ರಮದ ಸ್ಥಾನಮಾನವನ್ನು ಹೆಚ್ಚಿಸುವ ಒಂದು ವಿಧಾನವೂ ಆಗಿದೆ. ಏಕೆಂದರೆ ದೇವರೇ ತನ್ನ

ಭಕ್ತರಿಗಾಗಿ ಈ ಶ್ರಮ ವಹಿಸುತ್ತಾನೆ. ಇಂಥ ಹಲವಾರು ಕಥೆಗಳಿವೆ. ಆದರೆ ದಲಿತ ಹೆಂಗಸು ಜನಾಬಾಯಿಯ ಕಥೆಯಂತೂ ಇನ್ನೂ ಸ್ವಾರಸ್ಯಕರ. ಅದೇ ಕಾಲದ ದಲಿತ ಸಂತಕವಿ ಚೊಖಮೇಳಾ ಈ ಕತೆಯನ್ನು ತನ್ನ ಕವನವೊಂದರಲ್ಲಿ ಅಮರವಾಗಿಸಿದ್ದಾನೆ.

''(ಅವಳ) ಮನೆಯ
ಕಸ ಗುಡಿಸುತ್ತಾನೆ, ನೆಲ ಸಾರಿಸುತ್ತಾನೆ
ಬತ್ತ ಕುಟ್ಟುತ್ತಾನೆ, ನೀರು ಸೇದಲು
ಧಾವಿಸುತ್ತಾನೆ ಈ ಚಕ್ರಪಾಣಿ (ವಿಷ್ಣು).
ಸ್ವಂತ ಕೈಗಳಿಂದ ಅವಳ ಜಡೆ ಹೆಣೆಯುತ್ತಾನೆ.
ಶಾಂತನಾಗಿ ಕೂತು ಕಣ್ಣಟ್ಟು
ಹೇನು ಕೂರೆಗಳ ತೆಗೆದು ಹೊಸೆದು ಹಾಕುತ್ತಾನೆ.
ಪ್ರೀತಿಗಾಗಿ ಮಾಡುವ ಕೆಲಸವಿದು
ದೊಡ್ಡಸ್ತಿಕೆಯ ಗೊಡವೆಯಿಲ್ಲ ಆತಗೆ,
ಎನ್ನುತ್ತಾನೆ ಚೋಖ''[೫]

**ಹಿಂದೂಧರ್ಮದೊಳಗೇ ಜಾತಿ ವಿರುದ್ಧ ಚಳವಳಿಗಳು...**

ಹಿಂದೂಧರ್ಮದ ಚೌಕಟ್ಟಿನೊಳಗೇ ಜಾತಿವಾದದ ವಿರುದ್ಧ ಹೋರಾಟ ನಡೆಸಿದ ಅತ್ಯಂತ ಮುಖ್ಯ ಚಳವಳಿಯೆಂದರೆ ಭಕ್ತಿ ಚಳವಳಿ. ಕ್ರಿ. ಶ. ೬ನೆಯ ಶತಮಾನದಷ್ಟು ಹಿಂದೆಯೇ ತಮಿಳುನಾಡಿನಲ್ಲಿ ಶೈವ ಸಂತರು ಮೊದಲು ಈ ಹೋರಾಟ ಪ್ರಾರಂಭಿಸಿದರೂ ಅದು ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಬಸವಣ್ಣನ ನಾಯಕತ್ವದ ವೀರಶೈವ ಚಳವಳಿಯಲ್ಲಿ ಪ್ರಬಲವಾಗಿ ಕಾಣಿಸಿಕೊಂಡಿತು. ಭಕ್ತಿ ಚಳವಳಿಯು ಹಿಂದೂಧರ್ಮವನ್ನು ಹಿಂದೆಂದೂ ಇರದಿದ್ದಷ್ಟು ವಿಶಾಲಗೊಳಿಸಿತು, ಪ್ರಜಾಸತ್ತಾತ್ಮಕಗೊಳಿಸಿತು, ಮಾನವೀಕರಿಸಿತು. ಅದು ಜಾತಿ ಪದ್ಧತಿಯನ್ನು ನಿರ್ಮೂಲ ಮಾಡುವುದರಲ್ಲಿ ಯಶಸ್ವಿಯಾಗದಿರಬಹುದಾದರೂ ಹುಟ್ಟು-ಆಧಾರಿತ ಜಾತಿ ವೈಪರೀತ್ಯಗಳು ದೇವರ ದೃಷ್ಟಿಯಲ್ಲಿ ಸಲ್ಲದು ಎಂಬ ಮುಖ್ಯ ಸಂಗತಿಯನ್ನು ಜನರ ಮನಸ್ಸಿನಲ್ಲಿ ಮೂಡಿಸಿತು. ಈ ಚಳವಳಿಯು ಜಾತಿಯನ್ನು ಬೆಂಬಲಿಸಿದ ಪಠ್ಯಗಳ ಅಧಿಕೃತತೆಯನ್ನು ನಿರ್ಮೂಲಗೊಳಿಸಿತು. ವೇದಗಳು ಜಾತಿ ಪದ್ಧತಿಯನ್ನು ಬೆಂಬಲಿಸುತ್ತವೆ ಎಂಬ ತಪ್ಪು ಅಭಿಪ್ರಾಯವನ್ನು ಕೆಳಜಾತಿಗಳಿಗಿಂತ ಹೆಚ್ಚಾಗಿ ಮೇಲ್ಜಾತಿಗಳವರು ಸೃಷ್ಟಿಸಿದ್ದರು. ತತ್ಫಲವಾಗಿ ಹಲವಾರು ಭಕ್ತಿ ಪಂಥಗಳು ವೇದಗಳ ಅಧಿಕೃತತೆಯನ್ನು ತಿರಸ್ಕರಿಸಿದವು. ವೀರಶೈವ ಚಳವಳಿ ಅವುಗಳಲ್ಲಿ ಮುಖ್ಯವಾಗಿತ್ತು.

ಭಕ್ತಿ ಚಳವಳಿಯು ಭಾಷೆಯ ಅಡೆತಡೆಗಳನ್ನಷ್ಟೆ ಅಲ್ಲ ಜಾತಿಗಳ ಅಡೆತಡೆಗಳನ್ನು ದಾಟಿಕೊಂಡು ಭಾರತದಾದ್ಯಂತ ಹರಡಿತು. ಉತ್ತರ ಭಾರತದಲ್ಲಿ ಕಬೀರ, ಕರ್ನಾಟಕದಲ್ಲಿ ಶಿಶುನಾಳ ಶರೀಫ, ಮಹಾರಾಷ್ಟ್ರದಲ್ಲಿ ಶಿರ್ಡಿ ಸಾಯಿಬಾಬ ಜನ್ಮತಃ ಮುಸ್ಲಿಮರಾಗಿದ್ದರು, ಆದರೆ ಭಕ್ತಿ ಚಳವಳಿಯ ಭಾಗವಾಗಿದ್ದರು, ಹಿಂದೂಗಳ ಭಾರಿ ಗೌರವಕ್ಕೆ ಪಾತ್ರರಾಗಿದ್ದರು. ಈ ಚಳವಳಿಯು ಅಸ್ಪೃಶ್ಯತೆಯನ್ನೂ ಒಳಗೊಂಡಂತೆ ಜಾತಿ ಪದ್ಧತಿಯನ್ನು ಬಹಿರಂಗವಾಗಿ ಹಾಗೂ ಪ್ರಬಲವಾಗಿ ಖಂಡಿಸಿತು. ಕರ್ನಾಟಕದಲ್ಲಿ ಬಸವಣ್ಣನ ಚಳವಳಿಯಂತೂ ಜಾತಿ ವಿರುದ್ಧ ಅತ್ಯಂತ ಆಕ್ರಮಣಕಾರಿಯಾಗಿದ್ದಿತು. ಇದರಲ್ಲಿ, ಹಲವಾರು ದಲಿತ ಶರಣ ಶರಣೆಯರು ಇದ್ದರು. ಬಸವಣ್ಣನು ತನ್ನ ಬ್ರಾಹ್ಮಣ ಶಿಷ್ಯನೊಬ್ಬನ ಮಗಳನ್ನು ಅಸ್ಪೃಶ್ಯ ಶಿಷ್ಯನೊಬ್ಬನ ಮಗನೊಂದಿಗೆ ಮದುವೆ ಮಾಡಿಸುವವರೆಗೂ ಹೋದ. ಇದು ಸಮಾಜದಲ್ಲಿ ಭಾರಿ ಕ್ಷೋಭೆಯನ್ನೇ ಉಂಟು ಮಾಡಿತು. ಬಸವಣ್ಣನು ತನ್ನ ಕಾಲವನ್ನು ಮೀರಿ ತುಂಬ ಮುಂದುವರಿದಿದ್ದನು. ಕೆಳ ಜಾತಿಯವರೆಲ್ಲ ಸಾಮಾನ್ಯವಾಗಿ ಕಾರ್ಮಿಕ ವರ್ಗದಿಂದ ಬಂದವರೇ ಆಗಿದ್ದುದರಿಂದ ಅವನು ದೈಹಿಕ ಶ್ರಮದ ಘನತೆಯನ್ನು ತನ್ನ ತತ್ತ್ವಜ್ಞಾನದ ಪ್ರಮುಖ ಸೂತ್ರವನ್ನಾಗಿ ಬೋಧಿಸಿದ. ಮಹಾರಾಷ್ಟ್ರದಲ್ಲಿನ ಭಕ್ತಿ ಚಳವಳಿಯೂ ಇದೇ ಮಾದರಿಯದಾಗಿದ್ದಿತು. ಅದು ಕೆಳ ಜಾತಿಯ ಕಾರ್ಮಿಕ ವರ್ಗದ ಸಂತ-ಕವಿಗಳನ್ನು ಆಕರ್ಷಿಸಿದ್ದಿತು. ಆದರಲ್ಲಿ ಬ್ರಾಹ್ಮಣರೂ ಇದ್ದರೆನ್ನಿ. ಈ ಚಳವಳಿಯನ್ನು ಪ್ರಾರಂಭಿಸಿದವನು ಸಂತ ಜ್ಞಾನೇಶ್ವರ ಎಂಬ ಒಬ್ಬ ಬಹಿಷ್ಕೃತ ಬ್ರಾಹ್ಮಣ. ಇವನ ತಂದೆ ಒಬ್ಬ ಸನ್ಯಾಸಿಯಾಗಿದ್ದು ಅನಂತರ ದೈವ ಪ್ರೇರಣೆಯಿಂದ ಸನ್ಯಾಸ ತೊರೆದು ವಿವಾಹವಾದುದರಿಂದ ಅವನನ್ನು ಜಾತಿಯಿಂದ ಹೊರಹಾಕಲಾಗಿದ್ದಿತು, ಇಡೀ ಕುಟುಂಬವೇ ಜಾತಿಯಿಂದ ಬಹಿಷ್ಕೃತವಾಗಿದ್ದಿತು. ಮಹಾರಾಷ್ಟ್ರದಲ್ಲಿನ ಭಕ್ತಿ ಚಳವಳಿಯೂ ದೈಹಿಕ ಶ್ರಮಕ್ಕೆ ಹೆಚ್ಚು ಒತ್ತು ನೀಡಿದ್ದಿತು. ಹೀಗೆ ಹಿಂದೂಧರ್ಮವು ಆಧುನಿಕ ಕಾಲಕ್ಕೂ ತುಂಬ ಮುನ್ನವೇ, ಪಾಶ್ಚಿಮಾತ್ಯ ವಿಚಾರಗಳಿಂದ ಪ್ರಭಾವಿತವಾಗುವುದಕ್ಕೂ ತುಂಬ ಮುನ್ನವೇ, ಆಗಾಗ್ಗೆ ಜಾತಿ ಪದ್ಧತಿಯ ವಿರುದ್ಧವೂ ಅಸ್ಪೃಶ್ಯತೆಯ ವಿರುದ್ಧವೂ ಸತತವಾಗಿ, ಉದ್ದೇಶಪೂರ್ವಕವಾಗಿ ಹಾಗೂ ಮನಃಪೂರ್ವಕವಾಗಿ ಹೋರಾಟ ನಡೆಸುತ್ತಿದ್ದಿತು ಎಂಬುದನ್ನು ತೋರಿಸಲು ಬೇಕಾದಷ್ಟು ಪುರಾವೆಗಳಿವೆ.

ಜಾತಿ ಪದ್ಧತಿಯ ವಿರುದ್ಧ ಹೀಗೆ ಆಗೊಮ್ಮೆ ಈಗೊಮ್ಮೆ ಹರಿದು ಹಂಚಿದ ರೀತಿಯಲ್ಲಿ ಹೋರಾಟ ನಡೆಯುತ್ತಿದ್ದುದೇ ಅಲ್ಲದೆ ಬಿಡಿ ಅಸ್ಪೃಶ್ಯ ಸಮುದಾಯಗಳನ್ನೇ ಇಡಿಯಾಗಿ ಮೇಲೆತ್ತಿ ಅವನ್ನು ಪ್ರಧಾನ ಪ್ರವಾಹದೊಳಕ್ಕೆ ತರುವ ಸುಸಂಬಂಧಿತ ಯತ್ನಗಳೂ ನಡೆದವು. ಅವು ೧೯ನೆಯ ಶತಮಾನದಿಂದಲೇ ಪ್ರಾರಂಭಗೊಂಡವು. ಇದಕ್ಕೆ ಎರಡು ಭವ್ಯ ನಿದರ್ಶನಗಳೆಂದರೆ - ಕೇರಳದಲ್ಲಿ ಈಳವರ ಹಾಗೂ ತಮಿಳುನಾಡಿನಲ್ಲಿನ ನಾಡಾರರ ಚಳವಳಿಗಳು. ಇವೆರಡೂ ಸ್ವಾತಂತ್ರ್ಯ ಪೂರ್ವಕಾಲದವು, ೧೯ನೆಯ ಶತಮಾನದ ಕೊನೆ ಹಾಗೂ ೨೦ನೆಯ ಶತಮಾನದ ಆರಂಭ ಕಾಲದವು. ಈ ಎರಡು ದಲಿತ ಸಮುದಾಯಗಳೂ ಸ್ವಪ್ರಯತ್ನದಿಂದಲೇ, ಹಿಂದೂಧರ್ಮದ ಚೌಕಟ್ಟಿನೊಳಗೇ, ತಮ್ಮ ಜಾತಿಯ ಸ್ಥಾನಮಾನವನ್ನು ಮೇಲು ಮಟ್ಟಕ್ಕೆ ಎತ್ತರಿಸುವ ಯತ್ನಗಳಾಗಿದ್ದುದರಿಂದ ಈ ಎರಡು ನಿದರ್ಶನಗಳೂ ಮಹದಾಸಕ್ತಿಕರವಾದವು. ಸಾಮಾಜಿಕ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುವ ಉದ್ದೇಶದಿಂದ ಕೆಲವರು ಇತರ ಮತಗಳಿಗೆ ಪರಿವರ್ತನೆಗೊಳ್ಳುತ್ತಿದ್ದ ಯತ್ನಗಳಿಗಿಂತ ಈ ಚಳವಳಿಗಳು ಹೆಚ್ಚು ಯಶಸ್ವಿಯಾದವು.

ಶ್ರೀ ನಾರಾಯಣ ಗುರು (೧೮೫೪-೧೯೨೮)ಗಳು ಈಳವರ ಸಾಮಾಜಿಕ ಸ್ಥಾನಮಾನವನ್ನು ಉನ್ನತ ಮಟ್ಟಕ್ಕೇರಿಸುವ ಚಳವಳಿಯ ಹಿಂದಿದ್ದ ಪ್ರಧಾನ ಶಕ್ತಿಯಾಗಿದ್ದರು. ಈಳವರಷ್ಟೆ ಅಲ್ಲ ಇತರರೂ ಇವರನ್ನು ಪೂಜ್ಯಭಾವನೆಯಿಂದ ಕಾಣುತ್ತಾರೆ. ಇವರು ತಮ್ಮ ಅನುಯಾಯಿಗಳ ಮುಂದೆ ಮೂರು ಘೋಷಣೆಗಳನ್ನು ಇರಿಸಿದ್ದರು : ''ಮನುಷ್ಯನಿಗೆ ಇರುವುದು ಒಂದೇ ಜಾತಿ, ಒಂದೇ ಧರ್ಮ, ಒಬ್ಬನೇ ದೇವರು,'', ''ಜಾತಿಯ ಬಗೆಗೆ ಕೇಳಬೇಡ, ಹೇಳಬೇಡ, ಚಿಂತಿಸಬೇಡ''; ''ಧರ್ಮ ಏನೇ ಆಗಿರಲಿ, ಮನುಷ್ಯ ತನ್ನನ್ನು ತಾನೇ ಸುಧಾರಿಸಿಕೊಳ್ಳಲಿ.'' ಇವರೊಬ್ಬ ಧಾರ್ಮಿಕ ಗುರುಗಳಾಗಿದ್ದರೂ ಪಂಥಾಭಿಮಾನಿಯಾಗಿರಲಿಲ್ಲ. ದೇವರ ಮುಂದೆ ಎಲ್ಲ ಮಾನವರೂ ಸಮಾನರು ಎಂದವರು ಒತ್ತಿ ಹೇಳಿದರು. ಜಾತಿ ಪ್ರಜ್ಞೆಯನ್ನು ಸಂಪೂರ್ಣವಾಗಿ ತೊಡೆದುಹಾಕುವುದು ಅವರ ಇಚ್ಛೆಯಾಗಿದ್ದಿತು. ಈಳವರನ್ನೂ ಇತರ ದಲಿತರನ್ನೂ ಜಾತೀಯ ಹಿಂದೂಗಳು ದೇವಾಲಯ ಪ್ರವೇಶಿಸಲು ಬಿಡುತ್ತಿರದಿದ್ದುದನ್ನು ಕಂಡ ಅವರು ಮೊತ್ತ ಮೊದಲ ಬಾರಿಗೆ ದಲಿತರಿಗೇ ಪ್ರತ್ಯೇಕ ಹೊಸ ದೇವಾಲಯಗಳನ್ನು ನಿರ್ಮಿಸಿದರು. ಇವುಗಳಲ್ಲಿ ದಲಿತೇತರ ಹಿಂದೂಗಳಿಗೂ ಪ್ರವೇಶವಿದ್ದಿತು. ಅನಂತರ ಅವರು ದಲಿತರಿಗಾಗಿಯೇ ವೇದ ಪಾಠಶಾಲೆಗಳನ್ನು ತೆರೆದರು. ಅವುಗಳಲ್ಲಿ ದಲಿತರಿಗೆ ಹಿಂದೂ ತತ್ತ್ವಜ್ಞಾನದಲ್ಲೂ ಸಂಸ್ಕಾರಗಳಲ್ಲೂ ತರಬೇತು ನೀಡಲಾಗುತ್ತಿದ್ದಿತು. ಅನಂತರ ಅವರು ಸಾರ್ವಜನಿಕ ಶಾಲೆ-ಕಾಲೇಜುಗಳನ್ನು ಪ್ರಾರಂಭಿಸಿ ಎಲ್ಲರಿಗೂ ಸಾರ್ವತ್ರಿಕ ಹಾಗೂ ಜಾತ್ಯತೀತ ಶಿಕ್ಷಣ ನೀಡುವುದಕ್ಕೆ ಉತ್ತೇಜನ ನೀಡಿದರು. ಅವರು ಆರಂಭದಲ್ಲಿ ದೇವಾಲಯಗಳನ್ನು ನಿರ್ಮಿಸಿದುದು ಜನಸಮುದಾಯಗಳನ್ನು ಒಂದೆಡೆ ಸಾಮೂಹಿಕವಾಗಿ ಅಣಿನೆರೆಯಿಸುವ ಉದ್ದೇಶವಿದ್ದಷ್ಟೆ ಆಗಿದ್ದಿತು. ಅನಂತರ ಅವರು ಸಾರ್ವತ್ರಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿದರು. ದಲಿತರೂ ಸೂಕ್ತ ಶಿಕ್ಷಣ ಪಡೆದು ಜೀವನದಲ್ಲಿ ಒಳ್ಳೆಯ ಅವಕಾಶಗಳಿಗಾಗಿ ಅರಸುವಂತೆ ಮಾಡುವುದು ಅವರ ಉದ್ದೇಶವಾಗಿದ್ದಿತು. ದಲಿತರು ಆರ್ಥಿಕವಾಗಿ ಉಚ್ಚ ಜಾತಿಯವರ ಮೇಲೆ ಅವಲಂಬಿಸಿದ್ದುದನ್ನು ತಪ್ಪಿಸಲು ಅವರು 'ಸಾಲ ಸಹಕಾರಿ ಸಂಸ್ಥೆ'ಗಳನ್ನು ಸ್ಥಾಪಿಸಿದರು. ಹೀಗೆ ನಾರಾಯಣ ಗುರುಗಳು ದಲಿತರ ಸರ್ವತೋಮುಖ ಏಳಿಗೆಗೆ ಶ್ರಮಿಸಿದರು.



ಗಾಂಧೀಜಿಯವರಂತೆ ಇವರೂ ಮೇಲು ಜಾತಿಗಳವರ ಮನೋಧರ್ಮ ಬದಲಿಸಲು ಯತ್ನಿಸಿದರು. ಅವರು ತಮ್ಮ ಅನುಯಾಯಿಗಳ ಮಧ್ಯೆ ಮೇಲು ಜಾತಿಯವರ ಬಗೆಗೆ ದ್ವೇಷ ಬೋಧಿಸಲಿಲ್ಲ. ಮೇಲು-ಕೀಳು ಜಾತಿಗಳವರ ನಡುವೆ ಭಿನ್ನತೆ ಉಂಟುಮಾಡುವುದು ಅವರಿಗೆ ಇಷ್ಟವಿರಲಿಲ್ಲ. ಮೇಲು ಜಾತಿಗಳ ಪುರೋಗಾಮಿ ವಿಭಾಗಗಳು ಅವರಿಗೆ ಬೆಂಬಲ ನೀಡಿದುದು ಅವರ ಯಶಸ್ಸಿಗೆ ದ್ಯೋತಕವಾಗಿದ್ದಿತು. ಇದರ ಫಲವಾಗಿ, ಗಾಂಧೀಜಿಯವರು ಪ್ರಾರಂಭಿಸಿದ ದೇವಾಲಯ ಪ್ರವೇಶ ಸತ್ಯಾಗ್ರಹ ಸಮಯದಲ್ಲಿ ಸುಪ್ರಸಿದ್ಧ ವೈಕೋಮ್ ದೇವಾಲಯಕ್ಕೆ ದಲಿತರ ಪ್ರವೇಶಕ್ಕೆ ಬೆಂಬಲ ನೀಡುವ ಮೆರವಣಿಗೆಯಲ್ಲಿ ಸವರ್ಣೀಯರೂ ಭಾಗವಹಿಸಿದ್ದರು. ದಲಿತರಿಗೆ ದೇವಾಲಯ ಪ್ರವೇಶದ ಚಳವಳಿಯಲ್ಲಿ ಗಾಂಧೀಜಿಯವರೂ ನಾರಾಯಣ ಗುರುಗಳೂ ಜೊತೆಗೂಡಿ ಶ್ರಮಿಸಿದರು. ನಾರಾಯಣ ಗುರುಗಳು ತಮ್ಮ ಚಟುವಟಿಕೆಗಳನ್ನು ತಮ್ಮ ಈಳವ ಸಮುದಾಯಕ್ಕಷ್ಟೇ ಸೀಮಿತಗೊಳಿಸಿಕೊಳ್ಳಲಿಲ್ಲ. ಕೇರಳದಲ್ಲಿ ಅಸ್ಪೃಶ್ಯರ ನಡುವೆ ಇತರ ಜನಸಮುದಾಯಗಳೂ ಇದ್ದವು. ಅವುಗಳ ಸ್ಥಾನಮಾನ ಈಳವರ ಸ್ಥಾನಮಾನಕ್ಕಿಂತ ಕೆಳಮಟ್ಟದ್ದಾಗಿದ್ದಿತು. ನಾರಾಯಣ ಗುರುಗಳು ಎಲ್ಲ ದಲಿತರ ಸ್ಥಾನಮಾನವನ್ನೂ ಮೇಲು ಮಟ್ಟಕ್ಕೇರಿಸುವ ತಮ್ಮ ಯತ್ನದಲ್ಲಿ ಅವರೆಲ್ಲರನ್ನೂ ತೊಡಗಿಸಿಕೊಂಡಿದ್ದರು.[೩೦]

ನಾಡಾರರು ನಾರಾಯಣ ಗುರುವಿನಂಥ ದಿವ್ಯಶಕ್ತಿಯ ಧಾರ್ಮಿಕ ಗುರುವನ್ನು ಹೊಂದಿರುವ ಅನುಕೂಲತೆಯನ್ನು ಪಡೆದಂತೆ ಕಂಡುಬರದಿದ್ದರೂ ಅವರೂ ಜಾತ್ಯತೀತ ನಾಯಕರ ಮಾರ್ಗದರ್ಶನದಲ್ಲಿ ಅಷ್ಟೇ ಚೆನ್ನಾಗಿ ಕಾರ್ಯ ನಿರ್ವಹಿಸಿದರು. ಇವರ ಜಾತಿ ಸ್ಥಾನಮಾನ ಪ್ರಭಾವವಾಗಿ ವಿದ್ಯಾಭ್ಯಾಸ ಹಾಗೂ ಕೌಶಲವರ್ಧನೆಯ ಮೂಲಕ ಹೆಚ್ಚಿತು. ಜೊತೆಗೆ ಹೊಸ ಉದ್ಯಮಗಳನ್ನು ಪ್ರಾರಂಭಿಸಲು ಸಾಲ ನೀಡುವ ಮೂಲಕವೂ ಇವರು ಪರಸ್ಪರರಿಗೆ ನೆರವಾದರು. ಉದ್ಯೋಗ ವಿನಿಮಯ ಕೇಂದ್ರದಂತೆ ವರ್ತಿಸುತ್ತ ಇವರು ತಮ್ಮ ಜಾತಿ ಸದಸ್ಯರಿಗೆ ಉದ್ಯೋಗ ಒದಗಿಸಿಕೊಡುವುದರಲ್ಲಿ ನೆರವಾದರು. ಇದೂ ಸಂಸ್ಕೃತೀಕರಣದ ಒಂದು ಮಾದರಿ.[೩೧] ಈ ಎರಡೂ ಸಮುದಾಯಗಳ ಸದಸ್ಯರು ಈಳವರು ಹಾಗೂ ನಾಡಾರರು – ಈಗ ಉನ್ನತ ಶಿಕ್ಷಣ ಪಡೆದವರಾಗಿ ಸಮಾಜದಲ್ಲಿ ಪ್ರಮುಖ ಸ್ಥಾನಗಳನ್ನು ಅಲಂಕರಿಸಿದ್ದಾರೆ. ನಾಡಾರರು ಆರ್ಥಿಕವಾಗಿಯೂ ಪ್ರಬಲರಾಗಿ ಹೊರಬಂದು ಕೈಗಾರಿಕೆ ವಾಣಿಜ್ಯ ಕ್ಷೇತ್ರಗಳಲ್ಲಿ ತಮ್ಮವೇ ಪ್ರತಿಷ್ಠಿತ ಸ್ಥಾನ ಗಳಿಸಿಕೊಂಡಿದ್ದಾರೆ.

ಈಳವರ ಹಾಗೂ ನಾಡಾರರ ದೃಷ್ಟಾಂತವು ಎಲ್ಲ ದಲಿತರಿಗೂ ಮಾರ್ಗದರ್ಶಕ ಸೂತ್ರವಾಗಿದೆ. ದಲಿತರು ತಮ್ಮ ಸ್ವಂತ ಸಂಘಟನೆ ಕಟ್ಟಿಕೊಂಡು ತಮ್ಮ ಮಧ್ಯೆ ಜಾಗೃತಿ ಮೂಡಿಸಿಕೊಂಡರಷ್ಟೆ ಸಾಲದು, ತಮ್ಮ ಕೇಳಿಕೆಗಳನ್ನು ಮುಂದಿಟ್ಟು ಅನ್ಯಾಯದ ವಿರುದ್ಧ ಪ್ರತಿಭಟಿಸಿದರಷ್ಟೆ ಸಾಲದು. ತಮ್ಮ ಸಮುದಾಯದ ಜನರ ಕಲ್ಯಾಣಕ್ಕಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಳ್ಳುವುದೂ ಅಷ್ಟೇ ಮುಖ್ಯ. ದಲಿತರ ಸಂಕ್ಷೇಮಕ್ಕಾಗಿ ಸರಕಾರದ ಮುಂದೆ ಕೇಳಿಕೆಗಳನ್ನು ಇರಿಸುವುದರ ಮೇಲಷ್ಟೆ ಅವಲಂಬಿಸಿರುವ ಪ್ರವೃತ್ತಿ ಎಷ್ಟು ಮಾತ್ರವೂ ಸಾಲದು. ಸಾಮಾಜಿಕ ಸಂಕ್ಷೇಮ ಹಾಗೂ ಸಾಮಾಜಿಕ ಗತಿಶೀಲತೆಗೆ ಉತ್ತೇಜನ ನೀಡುವಲ್ಲಿ ಸರಕಾರೀ ಅಧಿಕಾರಶಾಹಿಗೆ ಅದರದೇ ಮಿತಿಗಳಿರುತ್ತವೆ. ಸಮುದಾಯವೇ ಸೃಜನಾತ್ಮಕ ಕಾರ್ಯಕ್ರಮಗಳಲ್ಲಿ ತೊಡಗುವುದು ಅತಿಮುಖ್ಯ. ಮಕ್ಕಳನ್ನು ಶಾಲೆಗೆ ಕಳಿಸುವಂತೆ ದಲಿತ ಪೋಷಕರನ್ನು ಪ್ರೇರಿಸಬೇಕು, ಪಾರಂಪರಿಕ ವೃತ್ತಿಗೂ ಹೊರಗೆ ನಾನಾ ಇತರ ರೀತಿಯ ಕೆಲಸಗಳಲ್ಲಿ ತರಬೇತು ಕೌಶಲ್ಯ ಪಡೆಯುವಂತೆ ಅವರಿಗೆ ನೆರವಾಗಬೇಕು, ಕೆಲಸಗಳನ್ನೂ, ವಾಸಿಸಲು ಮನೆಗಳನ್ನೂ ಪಡೆಯಲೋಸುಗ ಹಳ್ಳಿಗಳಿಂದ ಪಟ್ಟಣಗಳಿಗೆ ವಲಸೆ ಬರಬಯಸುವವರಿಗೆ ಸೂಕ್ತ ಮಾರ್ಗದರ್ಶನ ಹಾಗೂ ನೆರವು ಒದಗಿಸಬೇಕು, ಮದ್ಯಪಾನ ಚಟ ಬಿಡಲು ನೆರವಾಗಬೇಕು, ಇತ್ಯಾದಿ ರಚನಾತ್ಮಕ ಕಾರ್ಯಕ್ರಮಗಳಲ್ಲಿ ತೊಡಗಬೇಕು. ನಾಡಾರ ಹಾಗೂ ಈಳವ ಸಮುದಾಯಗಳ ಸಂಘಟನೆಗಳು ತಮ್ಮ ಸದಸ್ಯರನ್ನು ಪೋಷಕರು ಮಕ್ಕಳನ್ನು ನೋಡಿಕೊಳ್ಳುವಂತೆ ನೋಡಿಕೊಂಡವು. ಒಮ್ಮೆ ದಲಿತ ಸಂಘಟನೆಗಳು ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಂಡಲ್ಲಿ ಅವುಗಳಿಗೆ ಸ್ವಯಂ ಸೇವಕ ಹಾಗೂ ಸಾಮಾಜಿಕ ಸೇವಾ ಸಂಘಟನೆಗಳಿಂದಲೂ ಲೋಕೋಪಕಾರಿ ಸಂಸ್ಥೆಗಳಿಂದಲೂ ದೊಡ್ಡ ರೀತಿಯಲ್ಲಿ ನೆರವು ಬಂದೇ ಬರುವುದು.

ಈಳವರ ಹಾಗೂ ನಾಡಾರರ ಯಶಸ್ವೀ ದೃಷ್ಟಾಂತವು ಮತ್ತೊಂದು ಅಂಶವನ್ನೂ ಎತ್ತಿ ತೋರಿಸುತ್ತದೆ; ದಲಿತ ಸಮಸ್ಯೆಯ ಪರಿಹಾರಕ್ಕೆ ಮತಾಂತರ ಎಷ್ಟು ಮಾತ್ರವೂ ಅಗತ್ಯವಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಶ್ರೀ ನಾರಾಯಣ ಗುರುಗಳ ಚಳವಳಿ ತೋರಿಸಿಕೊಟ್ಟ ಮತ್ತೂ ಒಂದು ಮುಖ್ಯಾಂಶವೆಂದರೆ ಚಳವಳಿಗೆ ವಿರೋಧಾತ್ಮಕ ಲಕ್ಷಣ ನೀಡಬೇಕಿಲ್ಲ, ಎಂಬುದು. ದಲಿತರು ಮೇಲು ಜಾತಿಗಳವರನ್ನು ಶತ್ರುಗಳನ್ನಾಗಿ ಮಾಡಿಕೊಳ್ಳದೆಯೇ ಸಾಮಾಜಿಕ ಬದಲಾವಣೆಗಾಗಿ ಮೇಲು ಜಾತಿಯವರಲ್ಲಿದ್ದ ಪ್ರತಿರೋಧವನ್ನು ಭಂಗಗೊಳಿಸಿದರು. ಅಷ್ಟೇ ಅಲ್ಲ ಮೇಲು ಜಾತಿಗಳವರು ಚಳವಳಿಗೆ ಸಹಕಾರ, ಬೆಂಬಲ ನೀಡುವಂತೆಯೂ ಮಾಡಿದರು. ಅವರದು ಗಾಂಧಿ ಮನೋಧರ್ಮವಾಗಿದ್ದಿತು. ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಬದಲಾವಣೆ ತರುವಲ್ಲಿ ಸಂಘರ್ಷಕ್ಕಿಂತ ಸಮನ್ವಯಕಾರಿ ಮನೋಧರ್ಮ ಹೆಚ್ಚು ಯಶಸ್ವಿ ಎಂದು ಕಂಡುಕೊಂಡಿದ್ದರು.

ಈಳವರ ಹಾಗೂ ನಾಡಾರ ಚಳವಳಿಗಳಲ್ಲಿ ಒಂದು ವ್ಯತ್ಯಾಸವೂ ಇದ್ದಿತು. ಈಳವ ಚಳವಳಿಯು ಒಂದೇ ಸಮುದಾಯದಲ್ಲಿ ಗಮನ ಕೇಂದ್ರೀಕರಿಸದೆ ಸಾಮಾಜಿಕ ಹಾನಿಗೊಳಗಾಗಿದ್ದ ಎಲ್ಲ ಅಸ್ಪೃಶ್ಯರನ್ನೂ, ಕೆಳಜಾತಿಯವರನ್ನೂ ತಲುಪುವ ಗುರಿಯುಳ್ಳದ್ದಾಗಿದ್ದಿತು. ಅದು ದಲಿತರ ಮಧ್ಯೆಯೇ ಅಸ್ತಿತ್ವದಲ್ಲಿದ್ದ ಮೇಲು ಕೀಳು ಶ್ರೇಣಿ ವ್ಯವಸ್ಥೆಯನ್ನು ಬಗ್ಗು ಬಡಿಯುವ ಗಂಭೀರವಾದ ಯತ್ನವಾಗಿದ್ದಿತು. ಈಳವರ ಸ್ಥಾನಮಾನವನ್ನು ಹೆಚ್ಚಿಸುವುದರಲ್ಲಿ ಗಳಿಸಿದಷ್ಟು ಭಾರಿ ಯಶಸ್ಸನ್ನು ಬಹುಶಃ ಈ ಕಾರ್ಯದಲ್ಲಿ ಅದು ಗಳಿಸಲಿಲ್ಲವೆನ್ನಬೇಕು. ಆದರೆ ನಾಡಾರ್ ಹಾಗೂ ಈಳವ ಚಳವಳಿಗಳೆರಡೂ ಅಪಾರ ಸಂಖ್ಯೆಯಲ್ಲಿದ್ದ ಹಾಗೂ ದಲಿತರ ಮಧ್ಯೆಯೇ ಸ್ವಲ್ಪ ಹೆಚ್ಚಿನ ಮಟ್ಟದ ಸಾಮಾಜಿಕ ಸ್ಥಾನಮಾನ ಹೊಂದಿದ್ದ ಮುಖ್ಯ ಅಸ್ಪೃಶ್ಯ ಸಮುದಾಯಗಳು ಅನುಭವಿಸುತ್ತಿದ್ದ ಸಾಮಾಜಿಕ ಅವನತಿಯನ್ನು ಹೋಗಲಾಡಿಸುವುದರಲ್ಲಿ ಯಶಸ್ವಿಯಾದವು.

ಆಧುನಿಕ ಹಿಂದೂಧರ್ಮದಲ್ಲಿ ಜಾತಿ ಅಥವಾ ಸಮುದಾಯ ಆಧಾರಿತವಲ್ಲದ ಅನೇಕ ಚಳವಳಿಗಳಿವೆ. ಅವು ತಮ್ಮ ಅನುಯಾಯಿಗಳ ನೈತಿಕ ಹಾಗೂ ಆತ್ಮಿಕ ಬಾಳನ್ನು ಸಿರಿವಂತಗೊಳಿಸುವಲ್ಲಿ ತುಂಬ ನೆರವು ನೀಡಿವೆ. ರಾಮಕೃಷ್ಣ ಮಿಷನ್, ಅರಬಿಂದೋ, ಬ್ರಹ್ಮಕುಮಾರಿ, ಇಸ್ಕಾನ್, ಶ್ರೀ ಸತ್ಯಸಾಯಿಬಾಬ, ಮಾತಾ ಅಮೃತಾನಂದಮಯಿ – ಇವು ಅಂಥವಲ್ಲಿ ಕೆಲವು. ಹಿಂದೂಧರ್ಮವು ಜಾತಿ ಪದ್ಧತಿ ಇಲ್ಲದೆಯೇ ತುಂಬಾ ಚೆನ್ನಾಗಿಯೇ ಏಳಿಗೆ ಹೊಂದಬಲ್ಲುದು ಎಂಬುದನ್ನು ಇವು ತೋರಿಸಿಕೊಟ್ಟಿರುವುದೇ ಇಲ್ಲಿ ಅವುಗಳನ್ನು ಉಲ್ಲೇಖಿಸಿರುವುದರ ಮುಖ್ಯ ಉದ್ದೇಶ.[೩೨]

*(ಇನ್ನುಳಿದ ಭಾಗ ಮುಂದಿನ ಸಂಚಿಕೆಯಲ್ಲಿ ಪ್ರಕಟವಾಗುತ್ತದೆ)*

**ಟಿಪ್ಪಣಿಗಳು ಹಾಗೂ ಉಲ್ಲೇಖಗಳು**

೧೩. ವಸಂತ್ ಮೂನ್ (ಸಂ.) (೧೯೯೦), ಪು. ೧೯೮-೯.

೧೪. ಪಿ. ವಿ. ಕಾಣೆ (೧೯೯೦, ಮೊದಲ ಪ್ರಕಟಣೆ ೧೯೩೦). *History of Dharmashastras*, Poona, Bhandarkar Oriental Research Institute ಸಂ. II, ಭಾಗ ೧, ಪು. ೩೬.

೧೫. ಮೂಲದಲ್ಲಿರುವಂತೆ ಎರಡು ಶ್ಲೋಕಗಳು (ಅನುಕ್ರಮವಾಗಿ) :

ಪರಿತ್ಯಜೇತ್ ಅರ್ಥಕಾಮೌ
ಯೌ ಸ್ಯಾತಾಮ್ ಧರ್ಮವರ್ಜಿತೌ ।
ಧರ್ಮಶ್ಚಾಪಿ ಸುಖೋದರ್ಕ
ಲೋಕವಿಕೃಷ್ಟಮೇವ ಚ ॥
–ಮನುಸ್ಮೃತಿ ೪.೧೭೬

ವಿದ್ವದ್ಭಿಃ ಸೇವಿತಃ ಸದ್ಭಿರ್
ನಿತ್ಯಂ ಅದ್ವೇಷರಾಗಿಭಿಃ ।
ಹೃದಯೇನಾಭ್ಯನುಜ್ಞಾತೋ
ಯೋ ಧರ್ಮಸ್ತ್ವಂ ನಿಬೋಧತ ॥
– ಮನುಸ್ಮೃತಿ ೨.೧

೧೬. ಡಾ॥ ಅಂಬೇಡ್ಕರ್‌ರವರು ಭಾಷಾಂತರಿಸಿರುವಂತೆ, ವಸಂತ್ ಮೂನ್ (ಸಂ.) (೧೯೯೦) ಪೂ.ಗ್ರಂ. ಪು. ೨೨

೧೭. ಅರವಿಂದ ಶರ್ಮರು (೨೦೦೦, ಪೂ.ಗ್ರಂ. ಪು. ೧೬೧-೪) ಈ ಮೂರು ಶ್ಲೋಕಗಳನ್ನೂ ಗೊತ್ತುಹಚ್ಚಿ ಚರ್ಚಿಸಿದ್ದಾರೆ; ಇಲ್ಲಿನ ವ್ಯಾಖ್ಯಾನ ಅದನ್ನು ಆಧರಿಸಿದೆ, ಆದರೆ ಇನ್ನೂ ಸ್ವಲ್ಪ ಮುಂದೆ ಹೋಗುತ್ತದೆ. ಇಲ್ಲಿ ಗೀತೆಯ ಬಗೆಗೆ ಹೇಳಲಾಗಿರುವ ತುಲನಾತ್ಮಕ ಅನುಕೂಲತೆಯ ಸೂತ್ರವು ಶರ್ಮರ ಚರ್ಚೆಯಲ್ಲಿಲ್ಲ, ಆದರೆ ಇಂಥ ವ್ಯಾಖ್ಯಾನವಿಲ್ಲದೆ ಅಧ್ಯಾಯ ೩, ಶ್ಲೋಕ ೩೫ರ ಹಾಗೂ ಅಧ್ಯಾಯ ೧೮, ಶ್ಲೋಕ ೪೭ರ ಪೂರ್ಣ ಅರ್ಥ ಆಗದು. ಎರಡು ಶ್ಲೋಕಗಳ ಸಂದೇಶವೂ ಒಂದೇ. ಎರಡೂ ಶ್ಲೋಕಗಳ ಮೊದಲರ್ಧ ಭಾಗಗಳೂ ಎರಡಕ್ಕೂ ಸಾಮಾನ್ಯ.

೧೮. ಅರವಿಂದ್ ಶರ್ಮರವರು ಉದ್ಧರಿಸಿರುವಂತೆ. (೨೦೦೦) ಅದೇ ಗ್ರಂಥ. ಪು. ೧೬೩.

೧೯. ನೋಡಿ : ಪಿ. ವಿ. ಕಾಣೆ (೧೯೯೦. ಮೊದಲ ಪ್ರಕಟಣೆ ೧೯೩೦). *History of Dharmashastras (Ancient and Medieval Religious and Civil Law in India)*.

Poona, Bhandarkar Oriental Research Institute, ಸಂ. ೫, ಭಾಗ ೨, ಪು. ೧೬೩೫-೬.

೨೦. ಅದೇ ಗ್ರಂಥ, ಸಂ. ೧, ಭಾಗ ೧, ಪು. ೩೮೯.

೨೧. ಸಂಸ್ಕೃತ ಮೂಲ : ''ಅಜ್ಯೇಷ್ಠಾಸೋ ಅಕನಿಷ್ಠಾಸ ಏತೇ ಸಂ ಭ್ರಾತರೋ ವಾವೃಧುಃ ಸೌಭಗಾಯ'' (ಋಗ್ವೇದ, V ೬೦.೫), ಅನುವಾದ ಹಾಗೂ ಮೂಲ ಕೆ. ಟಿ. ಪಾಂಡುರಂಗಿಯವರಿಂದ (೧೯೯೯, ದ್ವಿತೀಯ ಆವೃತ್ತಿ), *Indian thought on Human Values*, ಬೆಂಗಳೂರು, ಭಾರತೀಯ ವಿದ್ಯಾಭವನ. ಪು. ೩.

೨೨. ಮೂಲ ಹಾಗೂ ಅನುವಾದ : ಪಿ. ವಿ. ಕಾಣೆಯವರಿಂದ. ಪೂರ್ವೋಕ್ತ ಗ್ರಂಥ, ಸಂ. ೨, ಭಾಗ ೧, ಪು. ೩೪.

೨೩. ಈ ಶ್ಲೋಕದ ಮೂಲ ಪಿ. ವಿ. ಕಾಣೆಯವರಿಂದ, ಪೂರ್ವೋಕ್ತ ಗ್ರಂಥ, ಸಂ. ೫, ಭಾಗ ೨, ಪು. ೧೦೦೬. ಅನುವಾದ ಅರವಿಂದ್ ಶರ್ಮರವರಿಂದ (೨೦೦೦) ಪೂರ್ವೋಕ್ತ ಗ್ರಂಥ. ಪು. ೧೫೮. ಕಾಣೆಯವರು ಇದೇ ವಿಷಯಕ್ಕೆ ಸಂಬಂಧಿಸಿ ಇನ್ನೂ ಹಲವು ಶ್ಲೋಕಗಳನ್ನು ಉದ್ಧರಿಸುತ್ತಾರೆ. ನೋಡಿ : ವಿಶೇಷವಾಗಿ ಸಂ. ೨, ಭಾಗ ೧, ಪು. ೧೧೧.

೨೪. ಅರವಿಂದ್ ಶರ್ಮರವರು ಉದ್ಧರಿಸಿದಂತೆ (೨೦೦೦). ಪೂ. ಗ್ರಂ. ಪು. ೧೬೫. ಅವರ ಆಕರ : ಎಸ್. ವಿ. ಓಕ್ (೧೯೫೭). *Uttaragitha with a translation into English and Appendices*, Poona, Bhandarkar Oriental Research Institute, ಪು. ೪೪.

೨೫. ಮೂಲ ಹಾಗೂ ಅನುವಾದಕ್ಕೆ ನೋಡಿ : ಸ್ವಾಮಿ ಈಶ್ವರಾನಂದ ಗಿರಿ (೨೦೦೦, ದ್ವಿತೀಯ ಆವೃತ್ತಿ). *Portrait of Guru : Lectures on Maneesha Panchakam of Acharya Sri Shankara*, Mt. Abu Samvit Sadhanalaya, esp. pp. xiv-xviii.

೨೬. ಕೆ. ಟಿ. ಪಾಂಡುರಂಗಿಯವರು ಈ ಉದ್ಧರಣದತ್ತ ನನ್ನ ಗಮನ ಸೆಳೆದರು.

೨೭. ಕುರಳ್‌ನ ಕೊನೆಯ ಪಕ್ಷ ಎರಡು ಭಾಷಾಂತರಗಳು ಇಂಗ್ಲಿಷಿನಲ್ಲಿ ಲಭ್ಯ. ಸಿ. ರಾಜಗೋಪಾಲಾಚಾರಿ (೧೯೯೯, ಮೊದಲ ಆವೃತ್ತಿ ೧೯೬೫) - *Kural : The Great Book of Tiruvalluvar*, Mumbai, Bharatiya Vidya Bhavan (ಆಯ್ದ ಭಾಗಗಳನ್ನು ಒಳಗೊಂಡಿದೆ); ಪಿ. ಎಸ್. ಸುಂದರಮ್ (೧೯೯೦) -*Tiruvalluvar : The Kural*, Translated from the Tamil with an Introduction, New Delhi, Penguin Books (ಪೂರ್ಣ ಪಾಠ ಒಳಗೊಂಡಿದೆ).

೨೮. ಎಸ್. ರಾಧಾಕೃಷ್ಣನ್ (೧೯೯೪) ಪೂ. ಗ್ರಂ.ಪು. ೯೩೫-೮.

೨೯. ರೋಹಿಣಿ ಮೊಕಾಶಿ ಪುಣೇಕರ್ ಭಾಷಾಂತರಿಸಿದಂತೆ (೨೦೦೦) *On the Threshold : Songs of Chokhamela*, New Delhi, The Book Review Literary Trust, ಪು. ೬೫

೩೦. ಈಳವರ ಯಶಸ್ಸಿನ ಹೆಚ್ಚು ವಿವರಗಳಿಗೆ ನೋಡಿ : Ciriac K. Pulapilly (1976) "The Izhavas of Kerala and their Historic Struggle for acceptance in Hindu Society" in Beldwell L. Smith (ed.) *Religion and Social conflict in South Asia*, Leiden : E. J. Brill; and Sathya Bai Sivadas and P. Prabhakara rao (2002): *Narayana Guru - The Social philosopher of Kerala*, Mumbai, Bharatiya Vidya Bhavan.

೩೧. ನೋಡಿ : Robert L. Hardgrave Jr. (1969). *The Nadars of Tamilnadu : The Political Culture of a Community*, Oxford University Press and University of California Press & L. I. Rudolph and S. H. Rudolph (1969) : *Modernity of Tradition - Political Development in India, Chicago and London, University of Chicago Press.*

೩೨. ಈ ಚಳವಳಿಗಳ ಕುರಿತು ನಾನು ಇನ್ನೂ ಹೆಚ್ಚು ವಿವರವಾಗಿ EPWನಲ್ಲಿ ನನ್ನ ಮುನ್ನಿನ ಪ್ರಬಂಧ 'Ethics and Relevance of Conversions...' ನಲ್ಲಿ ಚರ್ಚಿಸಿದ್ದೇನೆ. *Economic and Political weekly* (EPW) ಜನವರಿ ೧೮, ೨೦೦೩, ಪು. ೨೨೭-೨೩೫

ಅನುವಾದ : **ಕೆ. ಎಲ್. ಗೋಪಾಲಕೃಷ್ಣರಾವ್**
ಮೂಲ : **ಡಾ॥ಎಂ. ವಿ . ನಾಡಕರ್ಣಿ**
ಪರಿಜಾತ ಬಾಲ ವಿಹಾರ (ಮಹಡಿ), ೨ನೇ ಕ್ರಾಸ್, ಐಸೆಕ್ ಪಶ್ಚಿಮ, ನಾಗರಭಾವಿ, ಬೆಂಗಳೂರು - ೭೨

# ಯಾರಿಗೆ ಬಂತು ಸ್ವಾತಂತ್ರ್ಯ?

**ಈ** ವರುಷದ ಗಣರಾಜ್ಯೋತ್ಸವ ಸಂದರ್ಭ ವಿಶೇಷವಾದುದು. ಕಳೆದ ಐದಾರು ದಶಕಗಳಲ್ಲಿ ನಾವು ನಡೆದುಬಂದ ದಾರಿ, ಪ್ರಾರಂಭದಲ್ಲಿ ನಾವು ಇಟ್ಟುಕೊಂಡಿದ್ದ ಅನೇಕ ಆಶಯಗಳು ಬುಡಮೇಲಾಗಿವೆ. ರಾಜಕೀಯ ಅಧಿಕಾರ ಬರುವ ಮೊದಲ ದಿನಗಳಲ್ಲಿ ಸರಕಾರದ ರೀತಿನೀತಿಗಳ ಬಗ್ಗೆ ವ್ಯಕ್ತಪಡಿಸಿದ ಅನುಮಾನಗಳು ಆತಂಕಗಳು ಎಷ್ಟು ಪ್ರಸ್ತುತವಾಗಿವೆ ಎಂಬುದು ನಮಗೀಗ ಅನುಭವದಿಂದ ಅರಿವಾಗುತ್ತಿದೆ.

ಸ್ವಾತಂತ್ರ್ಯ ಬಂದದ್ದು ಯಾರಿಗಾಗಿ? ಎಂದು ಜನತೆ ಕೇಳುವ ಪರಿಸ್ಥಿತಿ ಇಂದು ಬಂದೊದಗಿದೆ.

ಬ್ರಿಟಿಷ್ ಸರಕಾರವು ತನ್ನ ವರ್ಗಮಿತ್ರ ದೇಶೀ ಭಾಗಕ್ಕೆ ಅಧಿಕಾರವನ್ನು ಹಸ್ತಾಂತರ ಮಾಡಿತಷ್ಟೆ. ಅಂತರರಾಷ್ಟ್ರೀಯ ಬಂಡವಾಳವು ಹೊಸದಾಗಿ ಅಧಿಕಾರ ಹಿಡಿದವರ ಮೂಲಕ ದೇಶದ ಅರ್ಥವ್ಯವಸ್ಥೆಯ ಮೇಲೆ ತನ್ನ ಹತೋಟಿಯನ್ನು ಉಳಿಸಿಕೊಂಡು, ತೀವ್ರಗತಿಯಲ್ಲಿ ಬೆಳೆಯುತ್ತದೆ. ಆ ಬಗ್ಗೆ ಹೇಳಿದವರನ್ನು ಅಂದು ದೇಶದ್ರೋಹಿಗಳೆಂದು ಹಣೆಪಟ್ಟಿ ಕಟ್ಟಲಾಯಿತು. ಅವರು ಹೇಳಿದ್ದು ಸುಳ್ಳಾಗಿಸಬೇಕೆನ್ನುವಂತೆ ಆರ್ಥಿಕ ಸ್ವಾವಲಂಬನೆಯೇ ಗುರಿ ಎನ್ನುವಂತೆ ಯೋಜನಾಬದ್ಧ ಆರ್ಥಿಕ ವಿಕಾಸಕ್ಕೆ ಕೈಹಾಕಲಾಯಿತು. ಆ ಕೆಲಸಕ್ಕೆ ಸಮಾಜವಾದದ ಹೆಸರಿಟ್ಟು ಆದರ್ಶ ಸಿದ್ಧಾಂತದ ಮೆರುಗು ನೀಡಿ ಪ್ರಾರಂಭದ ಎರಡು ದಶಕಗಳಲ್ಲಿ ರಾಜಕೀಯ ಲಾಭವನ್ನು ಪಡೆಯಲಾಯಿತು. ಆದರೆ ಅಂದಿನ ತಾರಕೇಶ್ವರಿ ಸಿನ್ಹಾ ಅವರು ಅರಿತೋ ಅರಿಯದೆಯೋ, ಯಾವುದೋ ರಾಜಕೀಯ ಉದ್ದೇಶಕ್ಕಾಗಿಯೋ ಒಳಗುಟ್ಟನ್ನು ಹೊರಗೆಡಹಿದರು. ಕೆಲವು ಕಾಲ ಸಾರ್ವಜನಿಕವಾಗಿ ಉದ್ಯಮಗಳನ್ನು ನಡೆಸಿ, ನಂತರ ಅವನ್ನು ಖಾಸಗಿಯವರಿಗೆ ಒಪ್ಪಿಸುವುದೇ ನೀತಿ ಎಂದರು ಇಂದಿರಾ ಗಾಂಧಿ. ತಾನು ಅಧಿಕಾರಕ್ಕೆ ಬರುವುದಕ್ಕೋಸ್ಕರ ಮತ್ತೊಮ್ಮೆ ಅದೇ ಆದರ್ಶದ ಮಾತನಾಡಿ ಸ್ವಲ್ಪಕಾಲ ಮೊರಾರ್ಜಿ ಬಣವನ್ನು ಹತ್ತಿಕ್ಕಿದರೂ, ಆಕೆಯ ವಾಸ್ತವ ಒಲವುಗಳು ಪ್ರಕಟವಾಗಲು ಬಹಳ ಸಮಯ ಆಗಲಿಲ್ಲ. ಕಾರ್ಮಿಕರ ಹೋರಾಟಗಳನ್ನು ಅತಿ ನಿರ್ದಯವಾಗಿ ಹತ್ತಿಕ್ಕಿದ್ದನ್ನು ಜ್ಞಾಪಿಸಿಕೊಂಡರೆ ಅದು ಸ್ಪಷ್ಟವಾಗುತ್ತದೆ. ಬ್ಯಾಂಕುಗಳನ್ನು ತನ್ನ ಹತೋಟಿಗೆ ತೆಗೆದುಕೊಂಡರೂ ಅವುಗಳ ನೀತಿಯನ್ನೇನೂ ಮೂಲತಃ ಸಮಾಜವಾದಿ ಧೋರಣೆಗಳನುಸಾರವಾಗಿ ಬದಲಾಯಿಸಲಿಲ್ಲ. ಆಕೆಯ ಮಗ ಏಕಾಏಕಿ ದೇಶದ ಆರ್ಥಿಕತೆಯನ್ನು ಐಎಂಎಫ್ ಮತ್ತು ಜಾಗತಿಕ ಬ್ಯಾಂಕ್ ಜಾಲಕ್ಕೆ ಬಂಧಿಸಿಬಿಟ್ಟರು. ನರಸಿಂಹರಾಯರು ನೆಹರೂ ಮಾರ್ಗಕ್ಕೆ ತಿಲಾಂಜಲಿ ಇತ್ತರು. ಕಳೆದ ಹತ್ತು ವರ್ಷಗಳಲ್ಲಿ ಅಧಿಕಾರಕ್ಕೆ ಬಂದ ಎಲ್ಲ ಪಕ್ಷಗಳೂ ಆಳುವ ವರ್ಗದ ವಾಣಿಜ್ಯಲೋಕದ ಸಂಗಡಿಗರಾಗಿದ್ದಾರೆಯೇ ವಿನಃ ಅವರ ನಡುವೆ ಯಾವ ಮೂಲಭೂತ ಅಸಾಂಗತ್ಯಗಳಿಲ್ಲ. ಅಂದರೆ ದೇಶದ ಆರ್ಥಿಕತೆಯ ಮೇಲೆ ಖಾಸಗಿಕ್ಷೇತ್ರದ ಸಂಪೂರ್ಣ ಹತೋಟಿ ಸಾಧಿಸಿ, ಅದರ ಬಂಧನವನ್ನು ಅಂತರರಾಷ್ಟ್ರೀಯ ಬಂಡವಾಳದೊಡನೆ ಬೆಸೆಯಲು ಸಮರ್ಥರಾದರು. ಇದು ಸ್ವಾತಂತ್ರ್ಯದ ಹರಣವಲ್ಲ ಎಂದು ಮುಕ್ತವಾಗಿ ವಾದಿಸುತ್ತಾರೆ ಕೂಡ. ಈ ಪ್ರವೃತ್ತಿಯನ್ನು ಮುನ್ನಾ ದಿನವೇ ಮನಗಂಡವರು ಏನು ತಪ್ಪು ಮಾಡಿದರು? ಅವರ ತಪ್ಪೆಂದರೆ ಬಹುಶಃ ತಮ್ಮ ದೂರದರ್ಶಿ ಸಾಮರ್ಥ್ಯಕ್ಕೆ ತಕ್ಕಂತೆ ಆ ಪ್ರವೃತ್ತಿಯನ್ನು ತಡೆಹಿಡಿಯಲು ಸಮರ್ಥವಾಗುವ ಜನಾಂದೋಳನ ನಡೆಸಲಾಗದೇ ಹೋದದ್ದರಿಂದ ಅವರು ಕೇವಲ ಅನಿವಾರ್ಯವೆಂಬಂತೆ ಘಟನೆಗಳನ್ನು ಹೊರಗೆಡಹುವ ಪ್ರವಾದಿಗಳಾದರು ಮಾತ್ರವಷ್ಟೆ.

ನರಸಿಂಹರಾಯರಿಗೆ ಈಗ ೮೩ ವರ್ಷ. ತಾವೇ ಎತ್ತಿಹಿಡಿದಿದ್ದ ಅಲಿಪ್ತನೀತಿಯನ್ನು ತಲೆಕೆಳಗಾಗಿಸಿದ ಕೀರ್ತಿ ಅವರದು. ಮನಮೋಹನ ಸಿಂಗರು ಹೇಳುತ್ತಾರೆ – ಎರಡನೆಯ ಪಂಚವಾರ್ಷಿಕ ಯೋಜನೆಯನ್ನು ತಾವೇ ಮಾರ್ಗದರ್ಶನವಿತ್ತು ಅಧಿಕಾರಿಯಾಗಿ ರಚಿಸಿದ್ದಾಗಿಯೂ, ಅದರಲ್ಲಿ ಇಂದಿನ ನೀತಿಯನ್ನು ಸಮರ್ಥಿಸುವ ಅಂಶಗಳನ್ನು ತುಂಬಿಸಿರುವುದಾಗಿಯೂ, ನೆಹರೂ ಅದನ್ನು ಒಪ್ಪಿದ್ದರೆಂದೂ ಒಮ್ಮೆ ಹೇಳಿಕೊಂಡದ್ದಿದೆ. ಅಂದರೆ ಅಧಿಕಾರವನ್ನು ವರ್ಗಾಯಿಸಲು ಇನ್ನೂ ತಡ ಮಾಡಿದ್ದರೆ ಅಂದಿನ ವಿಸ್ಫೋಟಕ ಪರಿಸ್ಥಿತಿಯಲ್ಲಿ ಸ್ವಾತಂತ್ರ್ಯ ಹೋರಾಟ ಪ್ರಜಾಪ್ರಭುತ್ವವಾದಿ ಎಡಪಂಥೀಯವೂ ಸಮಾಜವಾದೀಯವೂ ಆಗಿಬಿಡುವುದು ಎಂಬ ಹೆದರಿಕೆ ಪಾಶ್ಚಿಮಾತ್ಯ ಬಂಡವಾಳದ ಸಮರ್ಥಕರಿಗೂ ನಮ್ಮ ದೇಶದ ಅದೇ ವರ್ಗಕ್ಕೂ ಆತಂಕ ಉಂಟಾಗಿದ್ದು, ತರಾತುರಿಯಲ್ಲಿ ಸ್ವಾತಂತ್ರ್ಯದ ಘೋಷಣೆ ಮಾಡಿದರು ಎಂದು ಅನ್ನಿಸಿದ್ದರೆ ಇಂದು ಗತಕಾಲದ ಪುನರಾವಲೋಕನ ಮಾಡಿದಾಗ ಅದು ಸರಿಯಾಗಿತ್ತು ಎಂದು ಅನ್ನಿಸುವುದಿಲ್ಲವೇ? ದಲಿತರನ್ನು, ಶೋಷಣೆಗೆ ಒಳಗಾದ ಕೃಷಿಕರನ್ನೂ ಕಾರ್ಮಿಕರನ್ನೂ ಕೇಳಿ, ಅವರು ಈಗಂತೂ ಅದನ್ನು ಸಂಪೂರ್ಣ ಒಪ್ಪುತ್ತಾರೆ.

ನೆಹರೂ ಒಂದಿಷ್ಟು ಆದರ್ಶ ನಾಯಕರಾಗಿ, ವಿಶ್ವಶಾಂತಿಯಲ್ಲೂ, ಸಮಾಜವಾದದ ಒಲವಿನ ಬೆಳವಣಿಗೆಯಲ್ಲಿ ನಂಬಿಕೆ ಇರಿಸಿಕೊಂಡಿದ್ದವರು. ಜೊತೆಗೆ ಅಲಿಪ್ತ ನೀತಿಯನ್ನು, ಪಂಚಶೀಲವನ್ನು, ಯೋಜನಾಬದ್ಧ ಆರ್ಥಿಕ ನೀತಿಯನ್ನು ಸಾರಿದರು. ಅವರ ಕಾಲದ ಮೊದಲೆರಡು ಯೋಜನೆಗಳು ಸಾಕಷ್ಟು ಜಯಪ್ರದವಾಗಿದ್ದುವು. ಅವರು ಹಾಗೆಯೇ ಮುಂದುವರಿದಿದ್ದರೆ ದೇಶೀಯ ಬಂಡವಾಳ ಖಾಸಗೀ ವಲಯ ಯಾವಾಗಲೂ ಸಾರ್ವಜನಿಕ ವಲಯಕ್ಕೆ ಪೂರಕವಾಗಿಯೇ ಬಾಳಬೇಕಾಗುತ್ತಿತ್ತೇನೋ. ಆದರೆ ತಮ್ಮ ಕೈಗೆ ಸಂಪೂರ್ಣ ಅಧಿಕಾರ ತೆಗೆದುಕೊಳ್ಳದೇ ಇದ್ದರೆ ತಮ್ಮ ಮುಕ್ತ ಬೆಳವಣಿಗೆ ಸಾಧ್ಯವಿಲ್ಲ ಎಂದು ಮನಗಂಡ ದೇಶೀ ಬಂಡವಾಳದ ಪ್ರತಿನಿಧಿಗಳು ಸಿಕ್ಕ ಪ್ರಥಮ ಅವಕಾಶದಲ್ಲಿ ನೆಹರೂ ಅಧಿಕಾರವನ್ನು ಕಾಂಗ್ರೆಸ್ ಅಧಿಕಾರವನ್ನು ಶಿಥಿಲಗೊಳಿಸಲು ಹೊಂಚುಹಾಕುತ್ತಿದ್ದರು. ಅವರಿಗೆ ಅದು ಸಿಕ್ಕಿದ್ದು ದಲಾಯಿಲಾಮ ಟಿಬೆಟ್ಟಿನಿಂದ ಓಡಿಬಂದು ಆಶ್ರಯ ಗಿಟ್ಟಿಸಿಕೊಂಡಿದ್ದು,..... ಚೀನಾ-ಭಾರತ ಯುದ್ಧ, ಅಪಜಯ, ನೆಹರೂ ಸಾವು ಇವು ಘಟನೆಗಳು. ಆ ಸಂದರ್ಭದಲ್ಲಿ ನೆಹರೂ ಹೇಳಿದ್ದೇನು? ಚೀನಾ-ಭಾರತ ಬಾಂಧವ್ಯವು ಸಹಸ್ರಾರು ವರ್ಷದ್ದು, ಸಾಂಸ್ಕೃತಿಕವಾದದ್ದು ಎಂದು. ಯಾವತ್ತಿಗೂ ನಿರ್ದಿಷ್ಟವಾಗಿ ನಿರ್ಧರಿಸಲಾಗದಿದ್ದ ಗಡಿಯಲ್ಲಿ ಆದ ಘರ್ಷಣೆಗಳನ್ನು ನೆಪಮಾಡಿ ಯುದ್ಧಕ್ಕೆ ಹೋಗುವುದು ಸಲ್ಲ, ನಿಜ, ಚರ್ಚಿಸಿ ಸರಿಪಡಿಸಿಕೊಳ್ಳೋಣ ಎಂಬ ನಿಲುವೂ ಸರಿಯೇ. ಆದರೆ ಇಂದಿನ ವಾಜಪೇಯಿಯೂ ಸೇರಿ ಅನೇಕರು ಆಗ ನೆಹರೂ ಅವರಿಗೆ ದೇಶದ್ರೋಹಿ ಪಟ್ಟ ಕಟ್ಟಿ ಆತನ ಆತ್ಮೀಯ ಗೆಳೆಯ ಕೃಷ್ಣ ಮೆನನ್ನವರನ್ನು ಮುಖಭಂಗ ಮಾಡುವುದರ ಮೂಲಕ, ಆತನನ್ನು ಕಮ್ಯೂನಿಸ್ಟನೆಂದು ಕರೆಯುವುದರ ಮೂಲಕ ನಡೆಸಿದ ಹಲ್ಲೆಯ ಆಘಾತದಿಂದ ನೆಹರೂ ಚೇತರಿಸಿಕೊಳ್ಳಲೇ ಇಲ್ಲ. ಆದರೆ ಇಂದು ಅಮೆರಿಕ ಚೀನಾದೊಡನೆ ಬಾಂಧವ್ಯ ಬೆಳೆಸಿಕೊಂಡ ಮೇಲೆ ನಾಚಿಕೆಯಿಲ್ಲದೆ ಕೇವಲ ವ್ಯಾಪಾರಕ್ಕಾಗಿ ಆ ದೇಶದೊಡನೆ ಅದೇ ಒಪ್ಪಂದಕ್ಕೆ ಇಳಿದಿದ್ದಾರೆ ನಿನ್ನೆಯ ದೇಶಪ್ರೇಮಿಗಳು. ಅಂದೇ ನೆಹರೂ ಅವರಿಗೆ ಹಾಗೆ ನಡೆದುಕೊಳ್ಳಲು ಅವಕಾಶ ಕೊಟ್ಟಿದ್ದರೆ ನಮ್ಮ ಇತ್ತೀಚಿನ ಇತಿಹಾಸವೇ ಬದಲಾಗುತ್ತಿತ್ತು.

ಹಾಗೆ ನೋಡಿದರೆ ಒಂದು ರೀತಿಯಲ್ಲಿ ನಮ್ಮ ಇತಿಹಾಸ ಬದಲಾಯಿಸಿ ಹೋಗಿದೆ. ಇಂದು ನಮ್ಮ ಆಳುವ ವರ್ಗ ಪ್ರಭುತ್ವದ ಮೇಲೆ ತನ್ನ ಹಿಡಿತವನ್ನು ಸಂಪೂರ್ಣವಾಗಿ ಸಾಧಿಸಿದೆ. ವಿಶ್ವದ ವರ್ಗಬಂಧುಗಳೊಡನೆ ರಕ್ತಸಂಬಂಧ ಬೆಳೆಸಿದ್ದಾರೆ. ಕ್ಲಿಂಟನ್‌ರಂಥವರು ನಮ್ಮ ಕೆಲವು ಖಾಸಗೀ ಉದ್ಯಮಗಳಲ್ಲಿ ಗೌ॥ ಡೈರೆಕ್ಟರುಗಳೂ ಆಗಿದ್ದಾರೆ. ಮತ್ತು ಹಿಂದೀ-ಚೀನೀ ಭಾಯಿಭಾಯಿಯ ಶಬ್ದವೂ ಕೇಳಿಬರುತ್ತಿದೆ. ಯಾರಿಗೆ ಬಂತು ಸ್ವಾತಂತ್ರ್ಯ ಎಂದು ಕೇಳಿದರೆ ಅಂದು ಮಾಡಿದಂತೆ ಜೈಲಿಗೇನೂ ಕಳುಹಿಸಲಾರದ ಹಾಗೆ ಕೇಳಿದವರು ರಾಜಕೀಯವಾಗಿ ಕ್ಷೀಣಿಸಿರುವುದೇ ಬಹುಶಃ ಇದಕ್ಕೆ ಕಾರಣ. ಇಂದು ದಲಿತರು ಅದೇ ಪ್ರಶ್ನೆಯನ್ನು ಕೇಳುತ್ತಿದ್ದಾರೆ, ನಿಜ. ಆದರೆ ಅವರಲ್ಲಿ ಏನಾದರೂ ಇನ್ನೂ ವ್ಯಾಪಕ ಹೋರಾಟದ ಇಂಗಿತ ಇರುವುದಾದರೆ ಅದು ಇನ್ನೂ ಬೆಳಕಿಗೆ ಬಂದಿಲ್ಲ. ಅಂಥ ಹೋರಾಟ ವ್ಯಾಪಕವಾಗಿ ಆಗುವ ಪರಿಸ್ಥಿತಿ ಬೆಳೆದರೆ ಸಂಘರ್ಷ ಅನಿವಾರ್ಯವಾಗಬಹುದು.

**ಕೆ. ಎಸ್. ಪಾರ್ಥಸಾರಥಿ**
ನಂ. ೩-೧, ನಾಗಾರ್ಜುನ ಎನ್‌ಕ್ಲೇವ್, ೭೬/ಎ, ೧೪ನೇ ಕ್ರಾಸ್
೧ನೇ ಹಂತ, ಜೆ.ಪಿ.ನಗರ, ಬೆಂಗಳೂರು - ೫೬೦ ೦೭೮



# ಸಾಹಿತ್ಯ ಅಕಾಡೆಮಿ

ದಕ್ಷಿಣ ಪ್ರಾದೇಶಿಕ ಕಛೇರಿ, ಸೆಂಟ್ರಲ್ ಕಾಲೇಜು ಆವರಣ
ಡಾ|| ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು-೫೬೦ ೦೦೧

## ಕನ್ನಡ ಪ್ರಕಟಣೆಗಳು

### ಕಾದಂಬರಿಗಳು

⇨ **ಕಾಡಿನ ದಾವೇದಾರ** ರೂ. 150
ಬಂಗಾಲಿ ಮೂಲ : ಮಹಾಶ್ವೇತಾ ದೇವಿ ಅನು: ಜಿ. ಕುಮಾರಪ್ಪ

⇨ **ಉಮ್ರಾವ್ ಜಾನ್ ಅದಾ** ರೂ. 100
ಉರ್ದು ಮೂಲ : ಮಿರ್ಜಾ ರುಸ್ವಾ ಅನು : ಶಾಂತರಸ

⇨ **ಹಾವಿನ ಡೊಂಕು** (ಕಾದಂಬರಿ) ರೂ. 50
ಸ್ವೀಡಿಷ್ ಮೂಲ : ಟೋರ್‌ಗ್ನಿ ಲಿಂಡ್‌ಗ್ರೆಯನ್
ಅನು : ವನಮಾಲಾ ವಿಶ್ವನಾಥ್, ಹಾನ್ಸ್ ಉ ಹೊಮ್‌ಸ್ತಮ್

⇨ **ಕಾರ್ಮೆಲೀನ** ರೂ. 100
ಕೊಂಕಣಿ ಮೂಲ : ದಾಮೋದರ ಮಾವಜೊ ಅನು : ಶಾ. ಮಂ. ಕೃಷ್ಣರಾಯ

### ಕಥೆಗಳು

⇨ **ಕೊಂಕಣಿ ಕಥಾಸಂಗ್ರಹ** ರೂ. 125
ಸಂ : ಚಂದ್ರಕಾಂತ ಕ್ಷೇಣಿ ಅನು: ಶಾ. ಮಂ. ಕೃಷ್ಣರಾವ್

⇨ **ಒಂದು ಪೀಳಿಗೆಯ ತೆಲುಗು ಕಥೆಗಳು** ರೂ. 150
ಸಂ : ಡಿ. ರಾಮಲಿಂಗಂ ಅನು : ಕುಂ. ವೀರಭದ್ರಪ್ಪ

⇨ **ಕೃಷ್ಣಚಂದರ್ ಆಯ್ದ ಸಣ್ಣ ಕಥೆಗಳು** ರೂ. 150
ಸಂ : ಗೋಪಿಚಂದ್ ನಾರಂಗ್ ಅನು : ಡಿ. ಎ. ಶಂಕರ್

⇨ **ಮಧುರಾಂತಕಂ ರಾಜಾರಾಂ ಕಥೆಗಳು** ರೂ. 150
ತೆಲುಗು ಮೂಲ : ಮಧುರಾಂತಕಂ ರಾಜಾರಾಂ, ಅನು:ಲಕ್ಷ್ಮೀಪತಿ ಕೋಲಾರ

⇨ **ದಕ್ಷಿಣ ಕಾಮರೂಪದ ಒಂದು ಕಥಾನಕ** ರೂ. 180
ಅಸ್ಸಾಮಿ ಮೂಲ : ಇಂದಿರಾ ಗೋಸ್ವಾಮಿ, ಅನು:ಆರ್. ಎಲ್. ಅನಂತರಾಮಯ್ಯ

### ನಾಟಕಗಳು

⇨ **ಯಕೃತ್ತು** ರೂ. 50
ಮರಾಠಿ ಮೂಲ : ಶ್ಯಾಮ ಮನೋಹರ ಅನು : ವೀಣಾ ಶಾಂತೇಶ್ವರ

⇨ **ರವೀಂದ್ರನಾಥ್ ಟಾಗೋರ್ : ಎರಡು ನಾಟಕಗಳು** ರೂ. 50
ಬೆಂಗಾಲಿ ಮೂಲ : ರವೀಂದ್ರನಾಥ ಟಾಗೋರ್, ಅನು : ಶ್ರೀನಿವಾಸ ವಿ. ಸುತ್ರಾವೆ

### ಕಾವ್ಯ

⇨ **ಆಡು ಹಾವೇ** ರೂ. 80
ತಮಿಳು ಮೂಲ : ಡಾ. ಕಾರ್ಲೋಸ್ ಅನು:ಡಾ. ಬಸವರಾಜ ಕಲ್ಗುಡಿ

⇨ **ಶ್ರೀರಾಧಾ** ರೂ. 180
ಒಡಿಯಾ ಮೂಲ : ಶ್ರೀ ರಮಾಕಾಂತ ರಥ ಅನು: ಸಂಧ್ಯಾ ಎಸ್

⇨ **ಶ್ರೀ ಬಸವಣ್ಣನವರ ವಚನ ಸಂಗ್ರಹ** ರೂ. 65
ಸಂಪಾದಕ : ಸ. ಸ. ಮಾಳವಾಡ

⇨ **ಎರಡು ದಶಕದ ಕವಿತೆ** ರೂ. 65
ಸಂಪಾದಕ : ಜಿ. ಎಸ್. ಶಿವರುದ್ರಪ್ಪ, ಚನ್ನವೀರ ಕಣವಿ

⇨ **ತೆಲುಗು ಕಾವ್ಯಮಾಲೆ** ರೂ. 125
ಸಂ : ದೇವುಲಪಲ್ಲಿ ರಾಮಾನುಜ ರಾವ್ ಅನು : ಗುರುಮೂರ್ತಿ ಪೆಂಡಕೂರ್

### ಭಾರತೀಯ ಸಾಹಿತ್ಯ ನಿರ್ಮಾಪಕರು

⇨ **ಗೊರೂರು ರಾಮಸ್ವಾಮಿ ಅಯ್ಯಂಗಾರ್** ರೂ. 25
ಲೇಖಕರು : ಪಿ. ಜಿ. ವೆಂಕಟಯ್ಯ

⇨ **ಶಂಬಾ ಜೋಶಿ** ರೂ. 25
ಲೇಖಕರು : ಮಲ್ಲೇಪುರಂ ಜಿ. ವೆಂಕಟೇಶ್

⇨ **ಭೀಮಾಜಿಯಿ** ರೂ. 25
ಲೇಖಕರು : ಸೀತಾಕಾಂತ ಮಹಾಪಾತ್ರ, ಅನುವಾದ : ಶ್ರೀಧರ ಪಿಸ್ಸೆ

⇨ **ಮೋಹನ್ ರಾಕೇಶ್** ರೂ. 25
ಲೇಖಕರು : ಪ್ರತಿಭಾ ಅಗರ್‌ವಾಲ್, ಅನುವಾದ : ಎಸ್. ಜಿ. ಶ್ರೀಮತಿ

⇨ **ಚಿಲಕಮುರ್ತಿ ಲಕ್ಷ್ಮೀನರಸಿಂಹಮ್** ರೂ. 25
ಲೇ : ವಿ. ವಿ. ಎಲ್. ನರಸಿಂಹರಾವ್, ಅನುವಾದ : ಕೆ. ಮರುಳಸಿದ್ದಪ್ಪ

⇨ **ಅನ್ನಮಾಚಾರ್ಯ** ರೂ. 25
ಲೇಖಕರು : ಅಡಪ ರಾಮಕೃಷ್ಣರಾವ್, ಅನುವಾದ : ಭಾಗ್ಯಲಕ್ಷ್ಮಿ ಪದಕಿ

⇨ **ಶಾಂತಿನಾಥ ದೇಸಾಯಿ** ರೂ. 25
ಲೇಖಕರು : ಜಿ. ಎಸ್. ಆಮೂರ್

⇨ **ಎಂ. ಎಸ್. ಪುಟ್ಟಣ್ಣ** ರೂ. 25
ಲೇಖಕರು : ಎಚ್. ಎಸ್. ಸುಜಾತ

⇨ **ದೇವುಡು** ರೂ. 25
ಲೇಖಕರು : ಡಾ|| ಸಿ. ಎಸ್. ಶಿವಕುಮಾರಸ್ವಾಮಿ (ಕುಮಾರಚಲ್ಯ)

⇨ **ಕುಮಾರವ್ಯಾಸ** ರೂ. 25
ಲೇಖಕರು : ಕೀರ್ತಿನಾಥ ಕುರ್ತಕೋಟಿ

⇨ **ಸಂ. ಶಿ. ಭೂಸನೂರಮಠ** ರೂ. 25
ಲೇಖಕರು : ಶಾಂತಾ ಇಮ್ರಾಪೂರ

⇨ **ಸೇಡಿಯಾಪು ಕೃಷ್ಣಭಟ್ಟ** ರೂ. 25
ಲೇಖಕರು : ಎಂ. ರಾಮಚಂದ್ರ

⇨ **ಅಭಿನವಗುಪ್ತ** ರೂ. 75
ಲೇಖಕರು : ಜಿ. ಟಿ. ದೇಶಪಾಂಡೆ, ಅನುವಾದ : ಎನ್. ಬಾಲಸುಬ್ರಹ್ಮಣ್ಯ

### ಇತರೆ

⇨ **ಮಂದಾರ ರಾಮಾಯಣ** ರೂ. 150
ತುಳು ಮೂಲ : ಮಂದಾರ ಕೇಶವಭಟ್ಟ

⇨ **ಕಲಾಪೂರ್ಣೋದಯ** ರೂ. 100
ಅನುವಾದ : ಆರ್. ಶೇಷ ಶಾಸ್ತ್ರಿ ಜಿ. ಸದಾನಂದಂ

⇨ **ನನ್ನ ಜೀವಾವಧಿಯ ಶಿಕ್ಷೆ** ರೂ. 200
ಮರಾಠಿ ಮೂಲ : ವಿನಾಯಕ ದಾಮೋದರ ಸಾವರಕರ
ಅನುವಾದ : ವಿರೂಪಾಕ್ಷ ಕುಲಕರ್ಣಿ

⇨ **ವನದೇವತೆ** ರೂ. 25
ಲೇಖಕರು : 'ಕಲ್ಕಿ' ಗೋಪಾಲ ಕೃಷ್ಣನ್, ಅನುವಾದ : ಎ. ಚಂದ್ರಮ್ಮ

*ವಿವರಗಳಿಗೆ ಮತ್ತು ಪ್ರತಿಗಳಿಗೆ ಸಂಪರ್ಕಿಸಿ*

**ಸಾಹಿತ್ಯ ಅಕಾಡೆಮಿ**

**ದಕ್ಷಿಣ ಪ್ರಾದೇಶಿಕ ಕಛೇರಿ, ಸೆಂಟ್ರಲ್ ಕಾಲೇಜು ಆವರಣ**
**[redacted] ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು - 1**
**✆ : 2245152**

# ಒಲೆ ಹತ್ತಿ ಉರಿದೊಡೆ

## ಡಾ॥ ಕೆ. ವೈ. ನಾರಾಯಣಸ್ವಾಮಿ

ದೃಶ್ಯ ೧

*(ಹಾಡಿನ ಮೂಲಕ ಜ್ಯೋತ್ಯಮ್ಮನವರ ಪ್ರವೇಶ, ಹಾಡಿನ ಲಯಕ್ಕೆ ತಕ್ಕಂತೆ ಕುಣಿಯುತ್ತಾರೆ)*

*ಕಲ್ಲು ಕರಗುವ ವ್ಯಾಳೆ ಮಾಟಮಲಗಿದೆ ಊರು*
*ದಾಲಬಂದ್ರವ ದಾಟಿ ಜ್ಯೋತ್ಯಮ್ಮನೋರು*
*ಬಂದಾರು ಬೀದಿಗೆ।*
*ಕತ್ತಾಲ ಕಡಲಲ್ಲಿ ತೆಪ್ಪಾದ ದೀಪವು ತೇಲು*
*ತೇಲುವ ಹಾಗೆ। ಬೆಳಗೂ ಪಾದವನಿಕ್ಕಿ*
*ಬಂದಾರೊ ಬಯಲಿಗೆ।*
*ಊರ ಫಲವನು ದಾಟಿ*
*ಮೈಲು ಬಂಡೆಯ ಮೇಲೆ*
*ಮಾತಿಗೆ ಮತಿಕೊಟ್ಟು*
*ಕುಂತಾರೋ ಜ್ಯೋತ್ಯಮ್ಮನೋರು।*

**ಹಿರಿಯ ಜ್ಯೋತಿ :** ಎಲ್ಲಾರು ಬಂದ್ರಾ। ಮೀಟಿಂಗ್ ಸುರುವಾಗ್ಲಿ.. ತಡವಾದರೆ ಸಂಚಾರ್ಣೆಗೆ ತಡ ಆಯ್ತದೆ. ಇವೊತ್ತಿನ ಪಾಳಿ ಯಾರ್ದು?

**ಜ್ಯೋತಿ ೧ :** ತಾಯಿ ಕೆಳಗಿನ ಕೇರಿಯ ಮೂಲೆ ಮನೆಯವಳು ಇನ್ನೂ ಬರ್ಲಿಲ್ಲ... ಅಂಗೆ ದೊಡ್ಡಗೌಡ್ರ ಹಟ್ಟಿಯಳು ಬರಲಿಲ್ಲ ತಾಯಿ.

**ಜ್ಯೋತಿ ೨ :** ಗೌಡ್ರ ಹಟ್ಟಿಯಳು ಬಿರ್‍ರನೆ ಬರ್ತೀನಿ ಅಂತ ಅಂದಿದ್ಲು...

**ಹಿರಿ ಜ್ಯೋತಿ :** ಯಾಕೆ ಬರುಲ್ಲಾ? ಮನುಷ್ಯರಂಗೆ ಜ್ಯೋತ್ಯನ್ಮೋರ್‍ಗ್ಳು ಮರವು ಗಿರವು ಬಂತೂ ಹೆಂಗೆ? ಯಾರ್‍ನಾದ್ರ ಕಳುಸಿ ಕರೆಬಿಡ್ರಿ.

**(ಹಾಡು)**

*ಕೇರಿಯ ಕಡೆಗೊಂದು ಗೌಡರ ಮನೆಗೊಂದು*
*ಬರ್‍ರನೆ ಹೋದವು ಸರ್‍ರನೇ ಬಂದವು ಬೆಳ್ಳಿಯರು*
*ತಂದಾವು ಚಿಂತಿಯ ಸುದ್ದೀಗಳಾ...s....*

**ಹಿರಿ ಜ್ಯೋತಿ :** ಬಂದ್ರಾ ಏನು ಸುದ್ದಿ..

**೧ನೇ ಜ್ಯೋತಿ :** ಏನಿದ್ದಾತು, ಹುಡುಗಿ ಹಟ್ಟಿಗೆ ಕುಂತ್ಲು, ಯಾವೋಳ್ನೊ ಯಾವೋನೊ ಹಾರ್‍ಸಕಂಡು ಹೋದ್ನ.. ಇಂಥವೇ ದಿನಕ್ಕೆ ಸಾವಿರ ಇರ್‍ತಾವೆ.

**ಸುದ್ದಿ ಜ್ಯೋತಿ ೧ :** ತಾಯಿ ಗೌಡ್ರ ಮನೆ ಚಾವುಡಿನಾಗ ಊರಿನ ಮೇಲು ಕುಲಸ್ಥರೆಲ್ಲಾ ಗುಟ್ಟಾಗಿ ಸಭೆ ಸೇರವರೆ... ದೀಪ ತುಂಬ್ದಿ ತಕ್ಷಣ ಬರ್ತೀನಿ ಅಂದ್ಲು...

**ಸುದ್ದಿ ಜ್ಯೋತಿ :** ಕೆಳಗಿನ ಕೇರಿಯಾಗಿರೊ ಮೂಲೇ ಮನೇಲಿ ಹೆರಿಗೆ ನಡೆದೈತೆ ರವಷ್ಟು ಲೇಟಾಯ್ತದೆ ಅಂದ್ಲು...

**ಹಿರಿ ಜ್ಯೋತಿ :** ಸರಿ... ಅಂಗಾದ್ರೆ ಸ್ವಲ್ಪ ಹೊತ್ತು ಕಾಯೋಣ, ಅವ್ರು ಬರ್‍ಲಿ... ಎಲ್ಲರು ಕೂಡಿನೆ ಸಂಚಾರ್ಣೆ ಮಾಡೋದು ನಮ್ಮ ಕುಲಾಚಾರ. ಅದ್ನ ನಾವು ಮೀರಂಗಿಲ್ಲ..

**ಮರಿ ಜ್ಯೋತಿ :** ಅಕ್ಕೋ ನನ್ ಬಲಗಣ್ಣು ಯಾಕೋ ಅದ್ರತಾದೆ, ಏನೋ ಕೆಡುಕು ಕಾದಾದೆ ಅನ್ನಸ್ತದೆ...

**ಇ, ಜ್ಯೋತಿ :** ಅಯ್ಯೋ ಅಪಶಕುನ ಯಾಕ ನುಡಿತೀಯ... ನಿಂದು ಮೊದ್ಲೇ ಮಚ್ಚೆ ನಾಲಿಕೆ...

**ಹಿರಿ ಜ್ಯೋತಿ :** ಇಲ್ಲಾ ಊರಾಗಿನ ಬಿಗುವು ನೋಡಿದ್ರೆ ನಡೀಬಾರ್‍ದು ಏನೋ ನಡಿಯಂಗದೆ...

**ಮರಿ ಜ್ಯೋತಿ :** ಹಿಂದೆ ಆಗಿರೋದ್ನ ನೆನಸ್ಕಂಡ್ರೆ ಈಗ್ಲೂ ಮೈಯಿ ಜುಂ ಅಂತಾದೆ...ದೋ.

*(ಅಷ್ಟರಲ್ಲಿ ದೂರದಿಂದ ಕಿರುಚಿಕೊಂಡು ಯಾರೋ ಓಡಿ ಬರುವುದನ್ನು ಜ್ಯೋತ್ಯಮ್ಮನೋರು ದಿಗ್ಭ್ರಾಂತರಾಗಿ ನೋಡುತ್ತಿರುವಂತೆ)*

**ಜ್ಯೋತಿಗಳು :** ಅಲ್ಲಿ ದೂರದಾಗ ಯಾರೋ ದಿಗುಲಿನಿಂದ ಇತ್ತಲೇ ಓಡಿ ಬರ್‍ತಾ ಇದ್ದಂಗದೇ!

**ಹಿರಿ ಜ್ಯೋತಿ :** ಪರಸ್ಥಳದೋರು ಇರ್‍ಬೇಕು. ಬರ್‍ಲಿ ಇಚಾರ್‍ಸವ?

ಬೆಂಕಿ... ಬೆಂಕಿ... ಕೊಲೆ. ಅತ್ಯಾಚಾರ... ಅಂತ ಕಿರುಚಿಕೊಂಡು, *(ಮೈಕೈ ಸುಟ್ಟುಕೊಂಡಿರುವ ಪರ ಊರಿನವಳ ಪ್ರವೇಶ)*

**(ಹಾಡು)**

*ಗಿಡುಗಾನ ಬಾಯಿಂದ ತಪ್ಪಿಸಿಕೊಂಡಂತ*
*ಕೋಳಿಯ ಮರಿಯಂಗೆ ಗಡಗಡ ನಡುಗುವೆ।*
*ಯಾವ ಊರಿನವಳೆ ಎಲೆ ಜೀವವೇ...*
*ಹುಲಿ ಬಾಯನೊಕ್ಕು ಹೊರಬಂದ ಹುಲ್ಲೆಯಂಗೆ*
*ತರತರ ನಡುಗುವೆ*
*ಯಾವ ಕೇರಿಯಳೆ ಎಲೆ ಜೀವವೆ...*
*ತಾಯಿನಗಲಿದ ತಬ್ಬಲಿ ಕರುವಂಗೆ*
*ತತ್ತರಗೊಂಡಿರುವೆ ಯಾವ ಹಟ್ಟಿಯಳೇ ಎಲೆ ಜೀವವೇ...*

**ಜ್ಯೋತಿಗಳು :** ಕಳುವು ಸೊಕ್ಕಿದ್ಲು ರವಷ್ಟು ಗಾಳಿ ಹಾಕಿ, ನೀರು ಕುಡಿಸಿ...

**ಜ್ಯೋತಿ ೧ :** ಯಾವ ತಾಯಿ ಹೆತ್ತ ಮಗಳೊ ಏನೋ...

**ಜ್ಯೋತಿ ೨ :** ಪ್ರಾಣಗಂಡದಿಂದ ಪಾರಾಗಿ ಬಂದಿರೋಳ ತರ ಕಾಣ್ತಾಳೆ...

**ಜ್ಯೋತಿ ೩ :** ಮೈ ಕೈಯಲ್ಲಾ ಸುಟ್ಟೊಗ್ಯದೆ ಪಾಪ... ಏನು ಕಷ್ಟವೊ ಏನೊ...

**ಜ್ಯೋತಿ ೪ :** ಅತ್ತೆ ಮನೆಯವರು ವರದಕ್ಷಿಣೆ ಸಾಲ್ದು ಅಂತ ಸೀಮೆ ಎಣ್ಣೆ ಸುರುದು ಬೆಂಕಿ ಇಟ್ಟರೇನೊ...

**ಜ್ಯೋತಿ ೨ :** ಯಾರಾದ್ರು ನಂಬ್ಸಿ ಮೋಸ ಮಾಡುದ್ರೇನೊ

(ಪರವೂರಿನ ಜ್ಯೋತಿ ಮಂಪರು ಕಳೆದು ನಿಧಾನವಾಗಿ ಎದ್ದು ನಿಲ್ಲುವಳು)

**ಹಿರಿ ಜ್ಯೋತಿ :** ಅಮ್ಮ ನೀನು ಯಾರು? ನಿಂದು ಯಾವ ಊರು? ಯಾಕಂಥ ಅವೇಳೆನಾಗ ದಿಗಲು ಬಿದ್ದು ಬಂದಿದ್ದಿಯಲ್ಲಾ... ಏನು ನಿನ್ನ ಕಥೆ...

**(ಹಾಡು)**

*ಏನ ಹೇಳಲಿ ನಾನು ಹೇಗೆ ಹೇಳಲಿ ನಾನು*
*ನಾಗದಾಳಿಯ ಚಕ್ರ ಗಂಟಾಲ ಮುಳ್ಳಾಗಿ*
*ಮಾತು ಕತ್ತರಿಸಿರಲು ಹೇಗೆ ಹೇಳಲಿ ನಾನು*
*ಎದಿಯ ಗಾಯದಲ್ಲಿ ನೆತ್ತರು ಉಕ್ಕುವಾಗ*
*ಕರುಣೆಯ ಕಣ್ಣಲ್ಲಿ ಕೆಂಡಗಳುರಿದೊ*
*ಬೆಂಕಿಯ ಜ್ವಾಲೇಲಿ ಹೂಗಳು ಬೆಂದೋ...*
*ಇಲಗಾಡು ನಡೆದು ಊರಿಗೆ ಬಂತೋ*
*ಏನ ಹೇಳಲಿ ನಾನು ಹೇಗ ಹೇಳಲಿ...*

**ಪರ ಊರ ಜ್ಯೋತಿ :** ಆಪತ್ಕಾಲದಲ್ಲಿ ಆದ ತಾಯಂದಿರೆ ನಾನು ಹೇಡಿಯಂತೆ ಯಕ್ಚಿತ್ ಪ್ರಾಣ ಭೀತಿಯಿಂದ ಓಡಿ ಬಂದಿರುವ ಹತಭಾಗ್ಯೆ...

ನಾನು ನರ ಮನ್ಸರಗಿಂತ ಕಡೆಯಾಗಿ ಹೋದೆ...

**ಹಿರಿ ಜ್ಯೋತಿ :** ಅಮ್ಮ ಮಗಳೆ ಹೆದ್ರು ಬ್ಯಾಡ, ನಿಂಕ ಇನ್ನೇನು ಭೀತಿ ಇಲ್ಲ. ಪ್ರಾಣಕ ಬಂದಾಗ ಓಡೋದು ದೇವಾನು ದೇವತೆಗಳಿಗೇ ತಪ್ಪಲಿಲ್ಲ. ನಿನ್ನ ಜಾಗದಲ್ಲಿ ಯಾರಿದ್ರು ಹಿಂಗೆ ಮಾಡೋರು... ಅಂದಂಗೆ ನಿನ್ ಕಥೆ ಏನು ?

**ಪರ ಜ್ಯೋತಿ :** ಬನಹಳ್ಳಿ ಬೆಟ್ಟದ ಬುಡದಾಗಿರೋ ಕೆಂಡದಹಳ್ಳಿ ನಮ್ಮೂರು.

**ಜ್ಯೋತಿ ೩ :** ಭೂತ್ಯಮ್ಮನ ಬೆಟ್ಟದ ಬುಡದಾಗಿರೋ ಊರಾ ! ಅದೇ ಸಂಕ್ರಾಂತಿ ದಿನ ಬೆಟ್ಟದ ಮ್ಯಾಲೆ ಗರಡುಗಂಭದಾಗ ದೀಪ ಹಚ್ಚತ್ತಿದ್ರಲ್ಲಾ ಆ ಊರು...?

**ಪರ ಜ್ಯೋತಿ :** ಹೌದು ತಾಯಿ ಅದೇ ಊರು, ಮಾಮೇರಿ ಫಲ, ತಾಯಂಥ ಕೆರೆ, ಕಾಡು, ಮೇಡು, ಬೆಟ್ಟ.. ಎಲ್ಲಾನು ಇತ್ತು. ಊರ ತುಂಬಾ ಹತ್ತಾರು ಜಾತಿ ಜನಗಳು ವಾಸ ಮಾಡೋರು... ಎಲ್ಲಾ ಊರ್ಗಳಂಗೆ ಆಗಾಗ ಸಣ್ಣ ಪುಟ್ಟ ಜಗಳ ಪಗಳ ಆಗೋವು... ಪಂಚಾಯ್ತಿ ಮಾಡಿ ಅವ್ರವ್ರೆ ಸರಿಮಾಡಿಕಳ್ಳೋರು... ಆದ್ರೆ...

**ಜ್ಯೋತಿ ೪ :** ಆದ್ರೆ ಏನಾಯ್ತು...

**ಪರ ಜ್ಯೋತಿ :** ಕೆಳ ಜಾತಿಯ ಕಾಲೇಜು ಹುಡ್ಗನು ಒಬ್ಬ ಮೇಲು ಕುಲದವರ ಹರೇದ ಹುಡುಗಿಗೆ ಏನೋ ಲವ್ ಲೆಟರ ಬರ್ದನಂತೆ... ಅಲ್ಲಿಂದ ಶುರುವಾಯ್ತು...

**ಜ್ಯೋತಿ ೩ :** ಅಯ್ಯೊ ಕಾಲ್ದಿಂದ ಕಾಲಕು ಈ ಪ್ರೇಮ್ದು ದೊಡ್ಡ ಹಾವಳಿ ಆಗೋಯ್ತು...

**ಜ್ಯೋತಿ ೧ :** ಜಾತಿ ನೋಡ್ಕಂಡು ಪ್ರೇಮ ಮಾಡಾಕ ಆಯ್ತಾದ...

**ಜ್ಯೋತಿ ೪ :** ಯಾಕೆ ಕೆಳಜಾತಿ ಹುಡುಗ್ರು ಪ್ರೀತಿ ಮಾಡಬಾರ್ದಾ? ಮನುಷ್ಯರೆಂದ್ರೆ ಎಲ್ಲರು ಒಂದೇ ತಾನೆ ? ಇಷ್ಟಕ್ಕೂ ಆ ಹುಡ್ಗಿ ಅವ್ನ ಇಷ್ಟ ಪಟ್ಟಿದ್ಲಾ ?...

**ಪರ ಜ್ಯೋತಿ :** ಅವುಳು ಇಷ್ಟಪಟ್ಟಿದ್ಲೊ ಇಲ್ಲವೊ ಕೇಳದೋರು ಯಾರು ? ಪಾಪ ಅವಳು ಬದುಕವಳೊ ಇಲ್ಲ ಕೊಂದ್ಬಿಟ್ರೊ ...ಅಲ್ಲ ಮನುಷ್ಯರಾಗಿ ಹುಟ್ಟಿ ಮನುಷ್ಯರಾಗಿ ಬೆಳದ್ರು ಈ ಜನಗಳಾಗ ಆ ಪಾಟಿ ರಾಕ್ಷಸರು ಹೆಂಗೆ ಬಚ್ಚಿಟ್ಟುಕೊಂಡಿರ್ತಾರೊ ...ನೋಡಕೆ ಗೋವುಗಳಂಗೆ ಇರ್ತಾರೆ ಬಾಯಿ ತೆಗೆದ್ರೆ ಹುಲಿಗಳು ಆಗಿರ್ತಾರೆ.

**ಜ್ಯೋತಿ ೨ :** ಅಯ್ಯೋ ಪಾಪ... ಮುಂದೇನಾಯ್ತು...

**ಪರ ಜ್ಯೋತಿ :** ಊರಾಗಿನ ದೊಡ್ಡ ಮನುಸ್ರು ಕೇರಿಯವರ್ನ ಕರೆ ಬಿಟ್ಟು ಹುಡ್ಗನ್ನ ಹದ್ದುಬಸ್ತು ಮಾಡ ಕೇಳಿದ್ರು. ಊಂ, ಅಷ್ಟೇ ಅಲ್ಲ, ಆ ಹುಡ್ಗನು ಹೊತ್ತು ಹುಟ್ಟೊದ್ರೊಳಗೆ ಊರು ಬಿಟ್ಟು ದೇಶಾಂತರ ಹೋಗ ಬೇಕು ಅಂತಾನೂ ಆರ್ಡರ್ ಹಾಕಿದ್ರಂತೆ. ಆದ್ರೆ ಹುಡ್ಗನು ಕಲ್ತವನು. ಅದೆಲ್ಲ ಬಿಲ್‌ಕುಲ್ ಆಗಲ್ಲ ಅಂದ್ನಂತೆ...

**ಜ್ಯೋತಿಗಳು :** ಆಮ್ಯಾಲೆ...

**ಪರ ಜ್ಯೋತಿ :** ಅವೊತ್ತು ವತೀನೆ ಅವನು ಸಂಘದೋರ್ಕ ದೂರು ಕೊಟ್ಟನಂತೆ. ಸರಿ ಅವ್ರು ಪೋಲಿಸ ಸ್ಟೇಷನ್ನ ಕಂಪ್ಲೇಂಟು ಕೊಟ್ಟರಂತೆ... ಪೋಲಿಸನೋರು ಬಂದು ಊರಾಗಿನ ಮ್ಯಾಲಿನ ಕುಲದವ್ರಕ ಧಮ್ಕಿ ಹಾಕಿ ಹೋದ್ರಂತೆ. ಊರಕ ಪೋಲಿಸ್ರು ಬಂದು ಹೋಗಿದ್ದು ಮ್ಯಾಲಿನವರ್ಕ ಮೆಣಸ್ಕಾಯಿ ಮುರ್ದು ಇಕ್ಕಂಡಂಗೆ ಆಗಿತ್ತು. ಅವ್ರು ಸಮಯ ಕಾಯ್ತಾ ಇದ್ರು. ಇಂತದ್ರಾಗ ಗೌಡ್ರ ಬಣವೆನಾಗ ಹುಲ್ಲು ತರಾಕ ಹೋದೋರು ಯಾವನೋ, ಮೂದೇವಿ ಯಾಮಾರಿ ಬೀಡಿ ಸೇದಿ ಬೆಂಕಿಗಡ್ಡಿ ಬೀಸಾಕ್ಯವನೆ... ಮೊದಲೇ ಒಣ ಹುಲ್ಲು ಅದು ರಂಜಿಕ್ಯಂಡು ಬಗ್ ಅನ್ನಬುಡ್ತು... ಇದು ಕೇರಿಯಗನೋರ್ದೆ ಕೆಲ್ಸ ಅಂತ ಒಬ್ಬ , ಹುಲ್ಲು ಬಣವೆಗೆ ಕಿಚ್ಚು ಇಕ್ಕಿದವರು ನಾಳೆ ನಮ್ಮ ಮನೆಗಳನ್ನು ಬಿಟ್ಟಾರ ಅಂತ ಇನ್ನೊಬ್ಬ. ರುದ್ರ ಕ್ವಾಪನ ಮನಸ್ಗೆ ತಕ್ಕಂಡು ಕೈಗೆ ಸಿಕ್ಕಿದ್ ಆಯುಧ ಇಡಕಂಡು ಕೇರಿ ಮ್ಯಾಲೆ ಬಿದ್ರು. ಗುಡಸ್ಲಗಳ್ಕ ಬೆಂಕಿ ಇಕ್ಕಿದ್ದರು, ಹಟ್ಟಿಯೋರ ಹೊಟ್ಟೆಗಿಲ್ದೊದ್ರಾದ್ರು ಪ್ರಾಣಕ ಬಂದಾಗ ಸುಮ್ಮನಿದ್ದಾರಾ ? ಇವರ ಮ್ಯಾಲೆ ಅವರು ಅವರ ಮ್ಯಾಲೆ ಇವರು ಊರು ರಣರಂಗ ಆಗೋಯ್ತು... ಹೆಂಗಸ್ರು ಮಕ್ಕಳು ಬಸುರಿಗಳು, ಬಾಣಂತೀರು, ಮುದುಕರು, ಸತ್ತೋರು, ಎಷ್ಟೋ ! ಸುಟ್ಟೋದೋರು ಎಷ್ಟೋ ! ಎಲ್ಲೆಲ್ಲು ರಕ್ತದ ಕೋಡಿ. ಕೆಂಪಾನೇ ಕಾಲುವೆ ಹರ್ದಂಗೆ... (ಮೈಮೇಲೆ ಬಂದವಳ ಹಾಗೆ) ಅಯ್ಯೋ ಬೆಂಕಿ ಬೆಂಕಿ ರಕ್ತಾ ರಕ್ತ... ಕಾಪಾಡಿ ಆ ಉರ್ದೋಗೊ ಕಂದಮ್ಮಗಳನ್ನ ಬದುಕಿಸಿ... ಕತ್ತಿ ಇಡದೋರಲ್ಲ ರಾಕ್ಷಸರು ಆಗಿದ್ರು... (ಇತರ ಜ್ಯೋತಿಗಳು ಸಮಾಧಾನಿಸುವರು)

**ಹಿರಿ ಜ್ಯೋತಿ :** ಛೇ...ಛೇ ಏನಾಗಿದೆ ಈ ನರ ಮನುಷ್ಯರ್ಕ... ಎಲ್ಲರು ಒಂದ್ತಾಯೆ ಮಕ್ಕಳಂಗೆ, ಅಣ್ಣ ತಮ್ಮರಂಗೆ ಬಾಳಕಾಗಲ್ವ ?

**ಜ್ಯೋತಿ ೨ :** ಬಾಳಕ ಬದುಕಾಕ ಈ ಜಾತಿಗಳಾದ್ರು ಯಾಕೆ ಬೇಕು ?

**ಜ್ಯೋತಿ ೧ :** ಅಲ್ಲ ಈ ಜಾತಿಗಳ್ನ ಯಾಕಾದ್ರು ಕಾವಿಸಿಕೊಂಡ್ವರೋ.

**ಜ್ಯೋತಿ ೪ :** ಯಾಕಂದ್ರೆ ಒಬ್ಬರ್ನ ಒಬ್ಬರು ಬ್ಯಾಟಿ ಆಡಾಕ !

**ಜ್ಯೋತಿ ೩ :** ಯಾಕಂದ್ರೆ ಒಬ್ಬರ ಅನ್ನ ಇನ್ನೊಬ್ರು ಕಿತ್ತಕೊಳ್ಳಾಕ !

**ಜ್ಯೋತಿ ೫ :** ಯಾಕಂದ್ರೆ ಒಬ್ಬರ ಮ್ಯಾಲೆ ಒಬ್ಬರು ಸವಾರಿ ಮಾಡಾಕ !

**ಪರ ಜ್ಯೋತಿ :** ಈ ಭಿನ್ನ ಭೇದ ಅಳಸಕಾಗಲ್ವ ?

**ಜ್ಯೋತಿಗಳು :** ಮೇಲು ಕೀಳು ಎಣ್ಸದೀರ ಬಾಳೋದು ಸಾಧ್ಯವಿಲ್ವ? ಯುಗ ಯುಗದಿಂದ ನಡದಿರೊ ಈ ಜೀವದಬ್ಯಾಟಿ ನಿಲ್ಲಸೊದಿಕ್ಕೆ ಸಾಧ್ಯವಿಲ್ಲ.

**(ಹಾಡು)**

*ಕಣ್ಣೀರಿಗುಂಟೆ ಭೇದ ಬದುವಿನ ಏರು*
*ನೋವಿಗುಂಟೆ ಜಾತಿಯ ತಕರಾರು*
*ಹುಟ್ಟಲ್ಲಿ ಭೇದವಿಲ್ಲ ಸಾವಲ್ಲಿ ಭೇದವಿಲ್ಲ*
*ಬದುಕಲ್ಲಿ ಯಾಕೆ ಭೇದವು ನೂರು*
*ಬಾಳಲ್ಲಿ ಯಾಕೆ ಮೇಲು ಕೀಳಿನ ಕೆಸರು*
*ಸಾಲದೆ ಮನುಜ ಎಂಬೊಂದ ಹೆಸರು !*

**ಹಿರಿ ಜ್ಯೋತಿ :** ಇನ್ನು ಎಂಥೆಂತ ಕಾಲ ಬರ್ತಾದೊ ಏನೊ ನಮ್ಮ ಕರ್ಮ, ಇಂಥ ಭೇದ ಮಾಡೊ ಎಲ್ಲರ ಮನೆಗಳ್ನ ನಾವು ಮಾತ್ರ ಯಾವ ಭೇದಾನು ಮಾಡ್ದೆ ಬೆಳಗಬೇಕು... ಊಂ ಸಮಯ ಮೀರ್ತ ಬಂತು ನೋಡ್ರೆ ಗೌಡ್ರ ಮನೆ ಜ್ಯೋತ್ಯಮ್ಮನು ಬರ್ತಾವಳೇನೋ...?

**ಜ್ಯೋತಿ ೩ :** (ಪಕ್ಕದಲ್ಲಿದ್ದ ದಿಬ್ಬ ಹತ್ತಿ ನೋಡುವಳು ಅಚ್ಚರಿಯಿಂದ) ಅಕ್ಕೋ... ಜ್ಯೋತಿ ಬರ್ತ್ತಿಲ್ಲ ಯಾರೋ ಹಣ್ಣಣ್ಣು ಮುದುಕ ಇದೇ ದಾರಿನಾಗ ಬರ್ತಾ ಅವ್ನೆ!

**ಹಿರಿ ಜ್ಯೋತಿ :** ಸರಿಯಾಗಿ ನೋಡೇ ಸಂಚಾರ್ಗ್ನೆ

ಬಂದಿರೊ ದೇವ್ರೊ ದಿಂಡ್ರೋ ಇರಬೌದು.

**ಹಾರು ನೋಡುವ ಜ್ಯೋತಿ :** ಇಲ್ಲ ತಾಯಿ ದೇವ್ರಲ್ಲ ದೇವರ್ಗಳು ಯಾವೊತ್ತು ತಲೆತಗ್ಗಿಸಿಕೊಂಡು ಬರ್ಲ್ಲಾ... ಆತ್ನ ನೋಡಿದ್ರ ಯಾರೋ ಫಕೀರ್ನತರ ಕಾಣ್ತಾನೆ.

**ಇನ್ನೊಂದು ಜ್ಯೋತಿ :** ಬಾಬ ಬುಡನ್‌ಗಿರಿಯಾಗ ಗಲಾಟೆ ಮಾಡಿ ಗುಳೆ ಎಬ್ಬಿಸಿದ್ರಂತಲ್ಲ ಅಲ್ಲಿದ್ದ ಸೂಫಿಗಳ್ನ ಅವರೆ ಇರ್ಬೇಕು ಅದಮಾಯ್ಸಿ ನೋಡೆ.

**ಹಿರಿ ಜ್ಯೋತಿ :** ಬರ್ಲಿ, ಆತ ಯಾರು ? ಕಷ್ಟ ಸುಕಾನು ವಿಚಾರ್ಸನ ?

*(ಮುದುಕನ ಪ್ರವೇಶ. ಹರಿದ ಬಟ್ಟೆ, ಕುರುಚಲ ಗಡ್ಡ, ಸಿಬ್ಬುಗಟ್ಟಿದ ತಲೆ. ತನ್ನ ಪಾಡಿಗೆ ತಾನು ಗೊಣಗಿಕೊಂಡು ನಡೆದು ಹೋಗ್ತಾವನೆ)*

**ಹಿರಿ ಜ್ಯೋತಿ :** ಅಯ್ಯಾ! ಮುದುಕ ನಿಲ್ಲು, ಈ ಅವೇಳೇನಾಗ ಹಿಂಗೆ ಒಬ್ಬನೇ ಪ್ರಯಾಣ ಮಾಡ್ತಿಯಲ್ಲ, ನಿನ್ಗೆ ದೇವ್ರು ದೆವ್ವಗಳ ಭಯ ಇಲ್ಲವೇನು ?

**ಮುದುಕ :** ಯಾರ್ ಅದು ? ಏನಂದ್ರಿ ? ಭಯನಾ... ಭಯ... ಇದ್ದಿದ್ದರೆ ಚೆನ್ನಾಗಿತ್ತು.

**ಹಿರಿ ಜ್ಯೋತಿ :** ನಿನ್ನ ಹೆಸ್ರೇನು ? ಯಾವ ಊರು ?...

**ಮುದುಕ :** ಆಂ... ಮುದುಕ ನೋಡಿ ಕಿವಿ ಸ್ವಲ್ಪ ಮಂದ... ಏನು ಹೆಸ್ರು ಕೇಳಿದ್ರಾ ?... ಹೌದು ನನ್ನ ಹೆಸ್ರೇನು ?...

ಎಷ್ಟು ವರ್ಷ... ಎಷ್ಟು ಯುಗ ಆಯ್ತು... ಹೆಸ್ರು ಮರ್ತೊಗಿದೆ... ಊರು ...ಏನದ್ರ ಹೆಸ್ರು...ಥುತೇರಿಕೆ. ಊರು ಹೆಸ್ರು ಎಂಥ ಚಂದದ ಹೆಸ್ರು , ನಾಲಿಗೆ ಮ್ಯಾಲೆ ಇದೆ ತಿರ್ಗತ್ತಿಲ್ಲ. ನನ್ನ ಹೆಸ್ರೇನು ? ನನ್ನ ಊರು ಯಾವುದು ? ಎಲ್ಲರು ಕೇಳುತ್ತಾರೆ, ಆದ್ರೆ ಗೆಪ್ತಿಗೆ ಬರ್ತಿಲ್ಲ. ''ಏಕಯ್ಯ ನೀ ನಮ್ಮ ಬರಿದೆ ಬಳಲಿಸುವೆ ? ನಾನಾರ ಸೇರುವೆನಯ್ಯ ? ಆರೂ ಇಲ್ಲದ ದೇಸಿಗ ನಾನು''...

**ಹಿರಿ ಜ್ಯೋತಿ :** ತುಂಬ ಚನ್ನಾಗಿ ಮಾತಾಡ್ತೀಯ... ಬಾ... ಇಲ್ಲಿ ಕುಂತಕ್ಕೊ... ತುಂಬಾ ದಣಿದಿರೋ ಹಾಗೆ ಕಾಣ್ತೆಯ ?

**ಮುದುಕ :** ದೇಹ ದಣೀಬೇಕು ತಾಯಿ! ಕಾಯಕದ ನಡಿಗೆ ಕೈಲಾಸದೂರು...

**ಜ್ಯೋತಿ ೩ :** ಕಾಯಕ ಅನ್ನೋದು ನಿನ್ನ ಹೆಸ್ರಾ ?

**ಜ್ಯೋತಿ ೧ :** ಕೈಲಾಸ ಅನ್ನೋದು ನಿಮ್ಮೂರಾ ?

**ಮುದುಕ :**... ಅಲ್ಲ ಅದು ನನ್ನ ಕನಸು ! ನನ್ನ ಆಸೆ... ನನ್ನ ಉಸ್ರು...

**ಜ್ಯೋತಿ ೪ :** ಬಲು ವಿಚಿತ್ರವಾಗಿದೆ! ಏನು ನಿನ್ನ ಕನಸು...?

**ಮುದುಕ :** ಈ ಅಂಬರದ ಕೆಳಗೆ, ಈ ಭೂಮಿ ಮ್ಯಾಲೆ ಎಲ್ಲಾ ಮನುಷ್ಯರು ಒಂದಗೂಡಿ ದುಡಿಯಬೇಕು... ಒಂದೇ ಪಂಕ್ತಿಯಲ್ಲಿ ಕುಂತು ಉಣ್ಣಬೇಕು... ಅದೇ ನನ್ನ ಕನಸು. ಕಾಯಕವೇ ಕೈಲಾಸ...

**ಜ್ಯೋತಿ ೨ :** ನಿನ್ನ ಮಾತು ಕೇಳಿದ್ರೆ... ನೀನು ಸಮಾಜ ಸುಧಾರಕನಾಗಿದ್ದೆ ಅನ್ಸುತ್ತೆ.

**ಜ್ಯೋತಿ ೩ :** ಅಂದಂಗೆ ಈಗ ಗೆಪ್ತಿಗೆ ಬಂತು. ಸ್ಕೂಲ್‌ನಾಗ ಮೇಸ್ಟ್ರು ಹೇಳತ್ತಿದ್ರು ಕಾಯಕವೇ ಕೈಲಾಸ ಅಂದವರು ನಮ್ಮ ಪೂರ್ವಿಕ ಬಸಣ್ಣೋರು ಅಂತ !

**ಜ್ಯೋತಿ ೧ :** ನಿನ್ನ ಹೆಸ್ರು ಬಸವಣ್ಣ ಏನು ?

**ಮುದುಕ :** ಓ ವಿಧಿಯೇ... ಮತ್ತೇ ಅದೇ ನೆನಪು ! ಮತ್ತೇ ಅದೇ ಕುರುಹು. ಸಂಗಯ್ಯ ಎಂಥ ಮೋಸ ಮಾಡ್ದೆ, ಆ ಹೆಸರಿನ ಸೂತಕದಿಂದ ಬಿಡಿಸಿಕೊಳ್ಳದಿಕ್ಕೆ. ಆ ಗುರುತನ್ನ ಅಳಿಸೋದಿಕ್ಕೆ ಶತಮಾನಗಳಿಂದ ಪ್ರಯತ್ನಿಸ್ತಾ ಇದ್ದೀನಿ... ಇನ್ನೇನು ಮರ್ತೇ ಹೋಯ್ತು ಇನ್ನೇನು ಕಳೀದೇ ಹೋಯ್ತು ಅನ್ನುವಷ್ಟರಲ್ಲಿ ಯಾರಾದ್ರೂ ಬಸವಣ್ಣ ಅಂಥ ಕರೆದು ನೆನಪಿಸಿಬಿಡ್ತಾರೆ... ಆ ಹೆಸರಿನ ಜೊತೆಗೆ ಆ ದುಃಖ ಪಾತಾಳ ತಟ್ಟನೆ ಬಾಯಿ ತೆರೆದು ನನ್ನನು ನುಂಗಿ ಬಿಡುತ್ತದೆ. ''ಸಂಸಾರ ಸಾಗರ ಉರದುದ್ದವೇ ಹೇಳಾ, ಸಂಸಾರ ಸಾಗರ ಕೊರಳುದ್ದವೇ ಹೇಳಾ, ಸಂಸಾರ ಸಾಗರ ಶಿರದುದ್ದವಾದ ಬಳಿಕ ಏನ ಹೇಳಲಯ್ಯ...''

**ಹಿರಿ ಜ್ಯೋತಿ :** ಅಪ್ಪ ಬಸವಣ್ಣ ಬಾಳನ್ನೇ ಬತ್ತಿಯಾಗಿಸಿಕೊಂಡು ಲೋಕದ ಕತ್ತಲನ್ನು ಬೆಳಗಿಸಿದ ತಂದೆ, ನಿಮ್ಮ ದರ್ಶನದಿಂದ ನಮ್ಮ ಬೆಳಕು ಮತ್ತಷ್ಟು ಬಲಗೊಳ್ಳುವಂಗಾಯ್ತು...

**ಜ್ಯೋತಿಗಳು :** ಅಯ್ಯ ನೀವು ದೊರೆಗಳ ಆಸ್ಥಾನದಲ್ಲಿ ದ್ದವರು. ಮಂತ್ರಿ ಆಗಿದ್ದೋರು. ಯಾಕ್ ಹಿಂಗಾಗಿ ಬಿಟ್ಟಿದ್ದೀರಲ್ಲ ಗುರುತೇ ಸಿಕ್ಕದಂಗೇ... ದಿಕ್ಕಿಲ್ದಂಗೆ !

**ಬಸವಣ್ಣ :** ಜಾತಿ ಇಲ್ಲದ ಸಮಾಜ ಕಟ್ಟಬೇಕು ಅಂತ ಹೊರಟೆ. ಅಂತರ ಜಾತಿ ಮದುವೆ ಮಾಡಿಸಿದೆ. ಅದರ ನೆಪವಾಗಿ ಕಲ್ಯಾಣದಲ್ಲಿ ಗಲಭೆ ದೊಂಬಿಗಳು ಆಗೋಯ್ತು, ಅಲ್ಲೇ ಇದ್ದರೆ ಪಟ್ಟಭದ್ರ ಜನಗಳು ನನ್ನ ಕೊಲೆ ಮಾಡಬೌದು ಅಂತ ಕೂಡಲಸಂಗಮಕ್ಕೆ ಬಂದೆ. ನನ್ನ ಕನಸುಗಳ್ಗೆ ಬೆಂಕಿ ಬಿದ್ದಿತು. ಬಿಜ್ಜಳನ ಕೊಲೆ ಆಯ್ತು. ದೇಶಾನೆ ಹೊತ್ತಿ ಉರೀತಿತ್ತು. ರಕ್ತ ಕೊಲೆ ಹಿಂಸೆ... ನನ್ನ ಕನಸು ಛಿದ್ರವಾಗಿತ್ತು. ಬದುಕಿನ ಮೇಲೆ ವಿರಕ್ತಿ ಹುಟ್ಟಿತು. ಆತ್ಮಹತ್ಯೆ ಮಾಡ್ಕಬೇಕು ಅಂತ ನೀರಿನಲ್ಲಿ ಬಿದ್ದೆ, ಆದ್ರೆ ಗಂಗಮ್ಮ ನನ್ನ ಒಪ್ಪಿಕೊಳ್ಳಲಿಲ್ಲ. ಸಾವು ಕೂಡ ನನ್ನ ಮುಟ್ಟಲಿಲ್ಲ. ಹಿಂಸೆ ಶರಣರು ಮತ್ತು ಶರಣರಲ್ಲದವರ ನಡುವೆ ವ್ಯತ್ಯಾಸವನ್ನೇ ಅಳಸಿಹಾಕಿತ್ತು. ಅದಕ್ಕೆ ದೇಶಾಂತರ ಹೋದೆ. ಬಸವಣ್ಣ ನಾನೇ ಅಂದೇ. ಜನರು ನಂಬಲಿಲ್ಲ. ನಮ್ಮ ಬಸವಣ್ಣನವರು ದೇಹಸಹಿತ ಕೈಲಾಸಕ್ಕೆ ಹೋದ್ರು ಅಂದ್ರು ,.. ಆತ ನೀರಾಗ ಬಿದ್ದು ಸಂಗಮನಲ್ಲಿ ಐಕ್ಯ ಆದರು ಅಂದ್ರು. ಇನ್ನು ಕೆಲವರು ಹೊಟ್ಟೆಪಾಡಿಗೆ ಬಸವಣ್ಣನ ವೇಷ ಹಾಕಿದ್ದೀನಿ ಅಂತ ಹಿಯಾಳಿಸಿದ್ರು. ಕ್ರಾಂತಿಕಾರಿ ಬಸವಣ್ಣ ತೀರಿಹೋಗಿದ್ದ. ಅವನಿಗೆ ಈ ಜಗತ್ತಿನಲ್ಲಿ ಜಾಗ ಇರಲಿಲ್ಲ. ಅವೊತ್ತಿನಿಂದ ನಾನೇ ಬಸವಣ್ಣ ಅನ್ನೋದ್ನ ಮರೀಬೇಕು ಅಂತ ಪ್ರಯತ್ನ ಪಡ್ತಾ ಇದ್ದೀನಿ...

**ಜ್ಯೋತಿ ೪ :** ನೀವು ವಚನ ಕಟ್ಟಿ ಹೇಳಬೇಕಿತ್ತು. ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ಅನ್ಯರಿಗೆ ಅಸಹ್ಯ ಪಡಬೇಡ !

**ಬಸವಣ್ಣ :** ನಾನು ಒಂದು ಹೇಳಿದ್ರೆ ಜನ ಹತ್ತು ವಚನ ಹೇಳಿದ್ರು. ದೊಡ್ಡ ದೊಡ್ಡೋರು, ಮಠಗಳವರು, ಕಲ್ತವರು ಎಲ್ಲರೂ ಕಲ್ತಬಿಟ್ಟಿದ್ದರು. ಕಂಠಪಾಠ ಮಾಡಿಬಿಟ್ಟಿದ್ದರು. ಯಾವ ವಚನ ಕಟ್ಟಿ, ಜಾತಿ, ಧರ್ಮದ ಗೋಡೆಗಳನ್ನ ಕೆಡವ್ಬೇಕು ಅಂತಿದ್ನೋ... ಅದು ಹುಸಿ ಹೊಯ್ತು. ಅದೇ ವಚನ ಪಠನ ಮಾಡ್ಕಂಡು ಮತ್ತೊಂದು ಹೊಸ ಜಾತಿನೇ ಕಟ್ಟಿದ್ದರು, ನಮ್ಮ ಜಂಗಮದ ಬಯಲಿನಲ್ಲಿ ಸ್ಥಾವರದ ಗುಡಿ ಕಟ್ಟಿದ್ದರು.

**ಜ್ಯೋತಿಗಳು :** ಆಮ್ಯಾಲೆ ಏನು ಮಾಡಿದ್ರಿ...?

**ಬಸವಣ್ಣ :** ಹಿಂಗೆ ಊರೂರು ಅಲೀತಿದ್ದೀನಿ, ಅಂತರ ಪಿಶಾಚಿಯಾಗಿದ್ದೀನಿ, ನಿಜವಾದ ಜಂಗಮ, ಫಕೀರ ನಾಗಿದ್ದೀನಿ,... ಆದ್ರೂ ಮನುಷ್ಯ ನೋಡಿ ಶತಮಾನಗಳೇ ಆದ್ರೂ ಇನ್ನೂ ಆಸೆ ಸತ್ತಿಲ್ಲ. ಒಂದಲ್ಲ ಒಂದು ದಿನ, ಈ ಹುಸಿಯಾದ ಜಾತಿಗಳು, ಸ್ವರ್ಗನರಕದ ಧರ್ಮಗಳು ಕತ್ತರಿಸಿಕೊಂಡು ಹೊಯ್ತವೆ. ಆಗ ಮನುಷ್ಯರು ಜಾತಿ-ಧರ್ಮದ ಸೂತಕವಿಲ್ಲದೆ ಬಾಳಬಹುದು. ಈ ಮಣ್ಣಿನಲ್ಲಿ ಬೀಜದಂಗೆ ಇರೋ ಕಲ್ಯಾಣ ರಾಜ್ಯದ ಕನಸು ನನಸಾಗ ಬೌದು ಅಂತ... ಅತ್ತ ಸತ್ತ ಸಾವು ಅಲ್ಲದೆ ಇತ್ತ ಬದುಕಿದ ಬದುಕು ಅಲ್ಲದೆ ಬಾಳ್ತಾ ಇದ್ದೀನಿ. ಆ ಸಂಗಯ್ಯನಿಗೆ ಎಂದಿಗೆ ಕರುಣೆ ಬರುತೋ... ಏನೋ... ''ಅಯ್ಯ ಅಯ್ಯ ಎಂದು ಒರಲುತ್ತಲಿದ್ದೇನೆ, ಅಯ್ಯ ಅಯ್ಯ ಎಂದು ಕರೆವುತ್ತಲಿದ್ದೇನೆ. ಓ ಎನ್ನಲಾಗದೆ ಅಯ್ಯ...''

(ಅಷ್ಟರಲ್ಲಿ ಗೌಡರ ಮನೆ ಜ್ಯೋತಿ ಆತಂಕದಿಂದ ಪ್ರವೇಶ)

**ಗೌಡರ ಮನೆ ಜ್ಯೋತಿ :** ಅನಾಹುತ ಆಗೋಯ್ತು, ಇನ್ನೂ ಎಂಥೆಂಥದನ್ನ ಈ ಹಾಳು ಕಣ್ಣಾಗ ನೋಡ್ಬೇಕೊ. ಈ ಪಾಪಿ ಕಿವಿಗಳಾಗ ಕೇಳಬೇಕೊ....

**ಜ್ಯೋತಿಗಳು :** (ಭೀತಿಗೊಂಡು) ಏನಾಯ್ತು ? ರವಷ್ಟು ಬಿಡ್ಸಿ ಹೇಳು. ಮೇಲಿನ ಕುಲಗಳವರು ಗುಟ್ಟಾಗಿ ಏನು ಮೀಟಿಂಗ್ ಮಾಡಿದ್ರಲ್ಲ, ಏನು ವಿಷಯ ?

**ಗೌಡ ಜ್ಯೋತಿ :** ಕೆಳಗಿನ ಕೇರಿಯವರಿಗೆ ಊರಿಂದ ಬಹಿಷ್ಕಾರ ಹಾಕ್ತರಂತೆ !

**ಜ್ಯೋತಿಗಳು :** ಶಿವ... ಶಿವ... ಹೌದ... ಈ ಊರಿಗೂ ಬಂತಾ ಕೆಡುಗಾಲ.

**ಗೌಡ ಜ್ಯೋತಿ :** ಅವ್ರಗೆ ಬೆಂಕಿ ನೀರು ಕೊಡೋದಿ ಲ್ವಂತೆ ! ಅವ್ರ ಬಂದು ಇವರಗಳ ಕಾಲು ಹಿಡ್ಕಬೇಕಂತೆ. ಇಲ್ದಂದ್ರೆ ತಿಗಣೆ ಹೊಸಕಿದಂಗೆ ಹೊಸಕಿ ಬಿಡ್ತಾರಂತೆ.

**ಬಸವಣ್ಣ :** ಏನೇನು ಬದ್ಲಾಗಿಲ್ಲ... ಅದೇ ಅಹಂಕಾರ. ಅದೇ ಸ್ವಾರ್ಥ... ಇನ್ನೆಷ್ಟು ಯುಗ ಬೇಕು ? ಇನ್ನಾರಿಗೆ ದೂರಲಿ ಕೂಡಲ ಸಂಗಮ ದೇವ !

**ಜ್ಯೋತಿಗಳು :** ಯಾಕಂತೆ ಅವ್ರು ಏನು ತಪ್ಪು ಮಾಡಿದ್ರಂತೆ !

**ಗೌಡ ಜ್ಯೋತಿ :** ಸರ್ಕಾರದೋರು ಭೂಮಿ ಇಲ್ದೋರಿಕ ಕಾಡಾಗಿನ ಗ್ವಾಮಾಳನ್ನ ಹಂಚಿಕೊಟ್ಟಿದ್ರಲ್ಲ ಅಲ್ಲಿ ಕೇರಿಯಲ್ಲರೂ ಸೇರ್ಕಂಡು ಬೋರು ಕೊರೆಸಿದ್ರು. ಅವು ಅದೃಷ್ಟಕ್ಕ ಗಂಗಮ್ಮನು ತಾಂಡ್ವಾತ್ತಾಳಂತೆ ಅಲ್ಲಿ. ಆ ಭೂಮಿನ ಏನಾದ್ರು ಮಾಡಿ ಹೊಡ್ದು ಬಿಡಬೇಕು ಅಂತ ಇದ್ದವರು ಪ್ಲಾನ್ ಮಾಡಿದ್ರು. ಅವರು ಜಪ್ಪಯ್ಯ ಅಂದ್ರು ಜಗ್ಗಿಲ್ಲ, ಕೂಲಿನಾಲಿ ಮಾಡ್ಕಂಡು ತಿನ್ನೋರ್ಕ ಬೇಸಾಯ ಏಕೋಲು ಬರ್ಲ. ಭೂಮಿತಾಯಿ ಕ್ವಾಪ ಮಾಡ್ಕಂತಾಳೆ – ನೀವು ಬೇಸಾಯ ಮಾಡಕೂಡ್ದು. ಹಿಂದಿನಂಗೆ ನಮ್ಮ ಹಟ್ಟಿ ಪಂಚೆ ನಾಗ ಗೈಯ್ಕಂಡು ಬಿದ್ದಿರಿ ಅಂತ ಅಂದ್ರಂತೆ. ಆಗಕಿಲ್ಲ, ನಿಮ್ಮ ಭೂತಾಯನು ಬೇಸಾಯ ಮಾಡೋರು ನಾವೇ ತಾನೆ ಬೆಳೆ ಚನ್ನಾಗಿ ಆತವೆ ! ನೋಡೇ ಬಿಡತೀವಿ ಅಂದ್ರಂತೆ. ಇವರ್ನ ಹಿಂಗೆ ಬಿಟ್ರೆ ನಮ್ಮ ಜಮೀನುಗಳು ಬಿಸ್ಲು ಕಾಯ್ತವೆ. ಸಸಿ ಇದ್ದಾಗ್ಲೆ ಮಟ್ಟ ಹಾಕಬೇಕು ಅಂತ ಮಸಲತ್ತು ನಡಸವ್ರೆ. ಅದಕ್ಕೆ ಬಹಿಷ್ಕಾರ ಫಸ್ಟ್ ವಾರ್ನಿಂಗಂತೆ.

**ಬಸವಣ್ಣ :** ಮತ್ತೆ ಕಲ್ಯಾಣಕ್ಕೆ ಬೆಂಕಿ. ಮತ್ತೆ ಅದೇ ಗಾಯ... ಕೀವು ನೆತ್ತರು. ಇನ್ನೇನು ಹುಣ್ಣು ಮಾಯ್ತ ಅದೆ ಅನ್ನುವಾಗ್ಲೆ ಅದೇ ಜಾಗಕ್ಕೆ ಮತ್ತೆ ಹೊಡೆತ.

**ಜ್ಯೋತಿಗಳು ೧ :** ಎಂಥ ಅನ್ಯಾಯಕಾರು, ಪಾಪಿಗಳು. ಈ ದುಡ್ಡು ಇದ್ದೋರ್ಗೆ ರವಷ್ಟು ಕನಿಕರ ಯಾಕೆ ಇರಲ್ಲ ?

**ಜ್ಯೋತಿಗಳು ೨** : ಇಷ್ಟು ಭೇದ ಮಾಡೋ ಈ ಜನಗಳ ಮನೆಗಳಲ್ಲಿ ನಾವು ಮಾತ್ರ ಯಾವ ಭೇದಾನು ಮಾಡ್ದೆ ಬೆಳಕು ಮಾಡ್ಬೇಕು !

**ಜ್ಯೋತಿಗಳು ೪** : ನಾವು ಕೂಡ ಯಾಕೆ ಮ್ಯಾಗಿನ ಕೇರಿಯವರಿಗೆ ಬಹಿಷ್ಕಾರ ಹಾಕಬಾರ್ದು! ಅವರ ಮನೆಗಳಾಗ ಬೆಳಕಿಲ್ದಂಗೆ ಮಾಡಬಾರ್ದು ?

**ಬಸವಣ್ಣ** : ಇಲ್ಲ ತಾಯಿ ಅದು ಕೂಡ್ದು! ಅವರು ನರ ಮನುಷ್ಯರು. ಮೈತುಂಬಾ, ಮನಸ್ಸು ತುಂಬ ಕತ್ತಲು ಇರೋರು. ಅವರು ಏನಬೇಕಾದ್ರು ಮಾಡಬಹುದು. ಆದ್ರೆ ನೀವು ಜ್ಯೋತಿಗಳು ಮೈ ಮನಸ್ಸು ಎಲ್ಲಾ ಬೆಳಕಾಗಿರೋರು. ಅವರು ಮಾಡ್ದಂಗೆ ನೀವೂ ಮಾಡಕ್ಕಾಗಲ್ಲ. ಮುಡಿಸಿದ ದೀಪ ಬೆಳಗೋದು ನಿಮ್ಮ ಧರ್ಮ.

**ಹಿರಿ ಜ್ಯೋತಿ** : ಮುತ್ತಿನಂತ ಮಾತು ಬಸವಣ್ಣ... ಮನಸ್ಸುಗಳಲ್ಲಿ ತುಂಬಿರೋ ಹುಸಿ ಜಾತಿ, ಧರ್ಮದ ಕತ್ತಲು ಕಳೆದ್ರೆ ... ಮನುಷ್ಯರೆಲ್ಲಾ ಒಂದೇ. ಅವರ ರಕ್ತ ಕಣ್ಣೀರು, ಬೆವರು ಎಲ್ಲಾ ಒಂದೇ ಅನ್ನೊ ಗುರುತು ಸಿಕ್ಕೇ ಸಿಕ್ಕತ್ತೈತೆ. ಆದ್ರೆ... ಈ ತಮಂಧದ ಕೇಡಿನಲ್ಲಿ ಅರುಣ ಹುಟ್ಟುವುದೆಂದಿಗೆ...

(ಅಷ್ಟರಲ್ಲಿ ಕೇರಿ ಮೂಲೆಯ ಜ್ಯೋತಿ ಉತ್ಸಾಹದಿಂದ, ಬರುತ್ತಾಳೆ)

**ಕೆಳಗಿನ ಕೇರಿ ಜ್ಯೋತಿ** : ಅಕ್ಕೊ, ದೊಡ್ಡೋಳೆ, ಚಿಕ್ಕೋಳೆ ಸೂರ್ಣಿಂತ ಕೂಸು ಹುಟ್ಟಿತು. ಅದ್ರ ಮಕ ಏನು ಚಂದ... ಏನು ಅಂದ... ಅಂತೀಯಾ !

**ಹಿರಿ ಜ್ಯೋತಿ** : ನಿನ್ನ ಬಾಯಿಗಿಷ್ಟು ಬೆಲ್ಲ ಹಾಕು. ಸದ್ಯ ಒಳ್ಳೇ ಸುದ್ದೀ ತಂದ್ಯಲ್ಲ? ಎಲ್ಲಾ ಸುಖವಾಗಿ ಆಯ್ತು. ದೊಡ್ಡ ಜೀವ ಎಂಗೈತೆ.

**ಕೆಳಗಿನ ಕೇರಿ ಜ್ಯೋತಿ** : ಚಂದಾಗವಳೆ... ಆಗ್ಲೆ ಮೊಲೆ ಕಚ್ಚುಸುತ್ತಿದ್ಲು.

**ಜ್ಯೋತಿಗಳು** : ಅಬ್ಬ ಬರೀ ಭಯದ ಮಾತು, ಬೆಂಕಿ ಮಾತೇ ಆಗಿತ್ತು. ಸದ್ಯ ನೀನಾರ ತಣ್ಣೀರಿನಂತ ಸುದ್ದಿ ತಂದೆ. ನಿನ್ಹೊಟ್ಟೆ ತಣ್ಣಗಿರಲಿ.

**ಹಿರಿ ಜ್ಯೋತಿ** : ಅಣ್ಣ ಬಸವಣ್ಣ ಆ ಕೂಸಿಗೆ ಆಶೀರ್ವಾದ ಮಾಡು ತಂದೆ. ನಿಮ್ಮ ಅರಿಕೆಯಿಂದ ಅದ್ರ ಆಯುಷು ಗಟ್ಟಿಯಾಗಲಿ...

**ಬಸವಣ್ಣ** : ಅಯ್ಯ ಸಂಗಮನಾಥ. ಶತಶತಮಾನಗಳಿಂದ ನಿನಗೆ ಮೊರೆಯಿಡುತ್ತಲೇ ಇದ್ದೀನಿ. ಈ ಕೂಸು ಹರಳಯ್ಯನ ಮಗ ಶೀಲವಂತನೆ ಇರಬೌದು ! ಅದು ಬೆಳೆಯುವ ಕಾಲಕ್ಕಾದ್ರು ಈ ಜಾತಿ-ಜನಗಳನ್ನ ಮನುಷ್ಯರಾಗಿ ಮಾಡು, ಅಂತರಂಗದ ಕತ್ತಲನ್ನು ಓಡಿಸು, ಬಹಿರಂಗದ ಬಯಲನ್ನು ಹಿಂಸೆಯಿಂದ ಬಿಡಿಸು. ತಂದೆ ನನ್ನ ಮೊರೆ ಆಲಿಸೈ. ಕೂಡಲ ಸಂಗಮ ದೇವ !... ಇಲ್ಲ ತಾಯಿ ಆ ಹಸುಕೂಸಿಗೆ ಆಶೀರ್ವಾದ ಮಾಡಲು ನನ್ನ ಕೈ ಏಳುತ್ತಿಲ್ಲ. ಈ ಹಿಂದೆ ನಾನು ಹಾರೈಸಿದವರೆಲ್ಲ ಶಾಪಕ್ಕೆ ತುತ್ತಾದವರಂತೆ ಅಕಾಲ ಮೃತ್ಯುವಿಗೆ ಔತಣವಾದರು... ನೀವು ತಾಯಂದಿರು... ನಿಮ್ಮ ತಾಯ್ತನದ ಬಲುಮೆ ಆ ಕೂಸನ್ನು ಕಾಪಾಡಲಿ... ಕಾಪಾಡಲಿ. ಅಮ್ಮ ಪರವೂರಿನ ಜ್ಯೋತಿ ನಡಿ ನಿಮ್ಮ ಊರಿನ ದಾರಿ ತೋರಿಸು. ಬೆಂದಿರೋ ಊರಲ್ಲಿ ಗಾಯ ಜಾಸ್ತಿ. ನೋವು ಜಾಸ್ತಿ. ಅಲ್ಲಿಗೆ ಹೋಗೋಣ. ಇದು ಕೈಕಟ್ಟಿ ಕೂರೋ ಸಮಯ ಅಲ್ಲ. ನಮ್ಮ ಕೈಲಾದ ಸಹಾಯ ಮಾಡೋಣ. ದಯೆಯೇ ಧರ್ಮದ ಮೂಲವಯ್ಯ... ಸಕಲ ಜೀವಾತ್ಮರಿಗೆ ಲೇಸ ಬಯಸುವವನೇ ನಮ್ಮ ಕೂಡಲ ಸಂಗಮ ದೇವಾ !...

**ಪರ ಜ್ಯೋತಿ** : ಅಪ್ಪ ಬಸವಣ್ಣ ನಿನ್ನ ಪಾದ ಸೋಂಕಿ ಆದ್ರು ಆ ಊರಿಗೆ ನೆಮ್ಮದಿ ಬರ್ಲಿ. ಮತ್ತೆ ಎಲ್ಲರು ಮನುಷ್ಯರಂಗೆ ಬಾಳವಂತಾಗಲಿ. ನೋವು ಕಮ್ಮಿ ಆಗ್ಲಿ.

**ಬಸವಣ್ಣ** : ಹೊತ್ತು ಮೀರ್ತಾ ಬಂತು ನಾವಿನ್ನು ಬರ್ತಿವಿ. ಅಮ್ಮ ಜ್ಯೋತ್ಯಮ್ಮನವರೆ ಯುಗಾಂತರಗಳಿಂದ ಮನೆಗಳ್ನ ಬೆಳಕು ಮಾಡ್ತಾ ಬಂದಿದ್ದೀರಿ. ಈ ಜನರ ಮನಸ್ಸಿನ ಕತ್ತಲೆಯಲ್ಲಿ ದೀಪ ಮುಡಿಸ್ರಮ್ಮ. ಆಗಲಾದ್ರು ಎಲ್ಲಾರು ಕೂಡಿ ದುಡಿಯುವ, ಎಲ್ಲಾರು ಕೂಡಿ ಉಣ್ಣುವ ಕಾಲ ಬರಬಹುದು... (ನಿಷ್ಕ್ರಮಣ)

**ಜ್ಯೋತಿಗಳು** : ಅಂಗೇ ಆಗ್ಲಿ ನಾವು ಪ್ರಯತ್ನ ಪಡುತೀವಿ ನೀವು ನಡೆಯೋ ಬೆಳಕಿನ ದಾರಿಯಲ್ಲಿ ನಾವು ನಡೇತೀವಿ. ನುಡಿಯೊಳಗಾಗಿ ನಡೆಯದಿದ್ದೊಡೆ ಮೆಚ್ಚ ಕೂಡಲ ಸಂಗಮದೇವ –

**(ಹಾಡು)**

ಒಲೆ ಹತ್ತಿ ಉರಿದೊಡೆ ನಿಲಬಹುದಲ್ಲದೆ
ಧರೆ ಹತ್ತಿ ಉರಿದೊಡೆ ನಿಲಲುಬಾರದು
ಏರಿ ನೀರುಂಬಡೆ, ಬೇಲಿ ಕೆಯ್ಯ ಮೇವಡೆ
ನಾರಿ ತನ್ನ ಮನೆಯಲ್ಲಿ ಕಳುವದೆ
ತಾಯಿ ಮೊಲೆ ಹಾಲು ನಂಜಾಗಿ ಕೊಲುವಡೆ –
ಇನ್ನಾರಿಗೆ ದೂರಲಿ ಕೂಡಲ ಸಂಗಮದೇವ.

**ಡಾ|| ಕೆ. ವೈ. ನಾರಾಯಣಸ್ವಾಮಿ**
ನಂ. ೩೯, ೧೧ನೇ 'ಎ' ಮೆಯಿನ್, ವಿರಾಟನಗರ, ಬೊಮ್ಮನಹಳ್ಳಿ
ಬೆಂಗಳೂರು - ೫೬೦ ೦೬೮

# ಹಿಂದುತ್ವದ ಕೆಲವು ವಿ(ಶಿಷ್ಟ)ಚಿತ್ರ ಲಕ್ಷಣಗಳು

**ಎಸ್. ಜಿ. ಸರ್ದೇಸಾಯಿ**

ರತದ ಇತಿಹಾಸದಲ್ಲಿ ಒಂದು ವಿಲಕ್ಷಣ ಅಂಶವನ್ನು ಕಾಣಬಹುದಾಗಿದೆ. ಅದೇಂದರೆ – ಇಲ್ಲಿ ಎಷ್ಟೇ ಬದಲಾವಣೆಗಳಾದರೂ, ಅವು ನಿರಂತರತೆಗೆ ಸ್ವಲ್ಪವೂ ಚ್ಯುತಿ ತರದಿರಬಹುದಾಗಿದೆ. ಇದಕ್ಕೆ ಮುಖ್ಯ ಕಾರಣ – ಭಾರತದ ಆರ್ಥಿಕತೆಯು ತುಂಬ ನಿಧಾನವಾಗಿ ಹಾಗೂ ಕ್ರಮಕ್ರಮೇಣ ಬೆಳವಣಿಗೆ ಪಡೆಯುತ್ತಿರುವುದಾಗಿದೆ. ಹಾಗಾಗಿ, ವರ್ಗ ವಿಭಜಿತ ಶೋಷಕ ಸಮಾಜ ಕಾಣಿಸಿಕೊಂಡು ಬೆಳವಣಿಗೆ ಪಡೆದ ನಂತರವೂ ದೇಶದಲ್ಲಿ ಹಳೆಯ ಕಾಲದ ಬುಡಕಟ್ಟು ಜನಾಂಗಗಳ ಆಚಾರ-ವ್ಯವಹಾರಗಳೂ, ಪರಂಪರೆಗಳೂ ಅಲ್ಲಲ್ಲಿ ಇನ್ನೂ ಮುಂದುವರಿದುಕೊಂಡೇ ಹೋಗುತ್ತಿವೆ. ಹೀಗೆ ಬದಲಾವಣೆಯೂ ನಿರಂತರತೆಯೂ ಜೊತೆಜೊತೆಯಾಗಿ ಮುಂದುವರಿಯುತ್ತಿರುವುದನ್ನು ಭಾರತೀಯ ಸಮಾಜದ ಎಲ್ಲ ವಲಯಗಳಲ್ಲೂ ಕಾಣಬಹುದಾಗಿದೆ. ಇದು ಸಹಜವಾಗಿಯೇ ಒಂದು ವಿಶಾಲ ಹಾಗೂ ವ್ಯಾಪಕ ಅಧ್ಯಯನದ ವಿಷಯವಾಗಿದೆ. ಇಲ್ಲಿ ನಾವು ಈ ವಿದ್ಯಮಾನವು ಒಂದು ಮತಧರ್ಮವಾಗಿ ಹಿಂದುತ್ವದ ವೈಲಕ್ಷಣ್ಯಗಳಲ್ಲಿ ಹೇಗೆ ವ್ಯಕ್ತಗೊಂಡಿದೆ ಎಂಬುದನ್ನು ಪರಿಶೀಲಿಸಲಿದ್ದೇವೆ.

ತಮ್ಮ ಕೋಮುವಾದಿತ್ವದ ಬಣ್ಣ ಎಲ್ಲಿ ಬಯಲಾಗಿಬಿಡುತ್ತದೋ ಎಂದು ಅಂಜಿ ಕೆಲವರು ಇತ್ತೀಚೆಗೆ ಹಿಂದುತ್ವವು ಒಂದು ಮತಧರ್ಮವಲ್ಲ, ಅದೊಂದು ಜೀವನ ವಿಧಾನ ಎಂದು ಆಗಾಗ್ಗೆ ಹೇಳತೊಡಗಿದ್ದಾರೆ. ಆದರೆ ಈ ರೀತಿಯಲ್ಲಿ ಮತಧರ್ಮ ಹಾಗೂ ಜೀವನ ವಿಧಾನಗಳನ್ನು ಪ್ರತ್ಯೇಕಿಸಿ ತೋರುವ ವಿಧಾನವು ಸಮಸ್ಯೆಯ ನಿಜ ಸ್ವರೂಪದ ಮೇಲೆ ಹೆಚ್ಚಿನ ಬೆಳಕನ್ನೇನೂ ಬೀರುವುದಿಲ್ಲ. ಏಕೆಂದರೆ ಅದು 'ಜೀವನ ವಿಧಾನ' ಎಂದರೇನು ಎಂಬ ಪ್ರಶ್ನೆಯನ್ನು ಎತ್ತೇ ಎತ್ತುತ್ತದೆ. ಅಲ್ಲದೆ ಅಂತಹ ಅನಿಷ್ಕೃಷ್ಟ ಪದಗಳ ಬಳಕೆಯಿಂದ ಯಾವ ಉದ್ದೇಶವೂ ಸಾಧಿತವಾಗದು. ಅದು ವಿಷಯವನ್ನು ಸ್ಪಷ್ಟಗೊಳಿಸುವ ಬದಲು ಇನ್ನಷ್ಟು ಗೊಂದಲಗೊಳಿಸುತ್ತದಷ್ಟೆ. ಹಿಂದುತ್ವವು ಒಂದು ಮತಧರ್ಮವಲ್ಲ ಎಂದು ಹೇಳುವುದು ಸ್ಪಷ್ಟವಾಗಿಯೇ ತಪ್ಪಾದುದು. ಏಕೆಂದರೆ ಅದರಲ್ಲಿ ದೈವತ್ವದ ಪ್ರಕಲ್ಪನೆ ಇದೆ. ಪೂಜೆ, ಪ್ರಾರ್ಥನೆ, ಪ್ರಾಯಶ್ಚಿತ್ತ ಇವೇ ಮುಂತಾದ ಸಾಮಾನ್ಯವಾಗಿ ಎಲ್ಲ ಮತಧರ್ಮಗಳಲ್ಲೂ ಕಾಣಬರುವಂಥ ಅವಿಭಾಜ್ಯ ಅತ್ಯಗತ್ಯ ಅಂಶಗಳು ಇದರಲ್ಲೂ ಕಂಡುಬರುತ್ತವೆ. ಇದರಲ್ಲೂ ಧಾರ್ಮಿಕ ವಿಧಿ ಸಂಸ್ಕಾರಗಳನ್ನು ನೆರವೇರಿಸುವಂಥ ಪುರೋಹಿತರೂ ಪೂಜಾರಿಗಳೂ ಇದ್ದಾರೆ. ಹೀಗೆ ಹಿಂದುತ್ವವೂ ಒಂದು ಮತಧರ್ಮದ ಎಲ್ಲ ಅವಶ್ಯ ಅಂಶಗಳನ್ನೂ ತನ್ನಲ್ಲಿ ಒಳಗೊಂಡಿದೆ.

ಹಿಂದುತ್ವದ ಮತ್ತೊಂದು ವಿಶಿಷ್ಟ ಲಕ್ಷಣವೆಂದರೆ, ಅದು ಇಡೀ ದೇಶಕ್ಕೆ ಅನ್ವಯವಾಗುವಂಥ ಒಂದು ಸಾಮಾನ್ಯ ಸಂಸ್ಕೃತಿಯನ್ನು ಸೃಷ್ಟಿಸಿರುವುದಾಗಿದೆ ಎಂದು ಹೇಳಲಾಗುತ್ತದೆ. ಆದರೆ ಇದು ಹಿಂದುತ್ವದ ವಿಶಿಷ್ಟ ಲಕ್ಷಣವೇನಲ್ಲ. ಏಕೆಂದರೆ ಪುರಾತನ ಹಾಗೂ ಮಧ್ಯ ಯುಗಗಳಲ್ಲಿ ಜಗತ್ತಿನಾದ್ಯಂತ ಮತಧರ್ಮವು ಸಮಾಜವನ್ನು ಒಂದಾಗಿ ಬೆಸೆಯುವ ಶಕ್ತಿಯಾಗಿದ್ದಾಗ, ಕ್ರಿಶ್ಚಿಯನ್, ಇಸ್ಲಾಮ್ ಹಾಗೂ ಬೌದ್ಧ ಮತಧರ್ಮಗಳೂ ಆ ಧರ್ಮಾವಲಂಬಿ ಜನರಿಗೆ ಸಂಬಂಧಿಸಿದಂತೆ ಅಂತಹುದೇ ಕಾರ್ಯ ನಿರ್ವಹಿಸಿದವು. ಮತ್ತೆ ಈ ಮತಧರ್ಮಗಳ ಜನರು ಒಂದಲ್ಲ ಅನೇಕ ಖಂಡಗಳಲ್ಲಿ ಹರಡಿ ಹಂಚಿದ್ದರೆಂಬ ಅಂಶವನ್ನೂ ಗಮನಕ್ಕೆ ತಂದುಕೊಳ್ಳಬೇಕು.

ಹಾಗಾದರೆ ಹಿಂದು ಧರ್ಮ ಮತ್ತು ಇತರ ಧರ್ಮಗಳ ನಡುವೆ ವ್ಯತ್ಯಾಸ ಏನೂ ಇಲ್ಲವೇ? ಇವೆ, ಅನೇಕ ವ್ಯತ್ಯಾಸಗಳಿವೆ. ಸರಳವಾದ ವ್ಯತ್ಯಾಸಗಳಿಂದ ಆರಂಭಿಸಿ ಗಹನವಾದ ವ್ಯತ್ಯಾಸಗಳನ್ನು ನಂತರ ಗಮನಿಸೋಣ.

**ಒಬ್ಬ ಪ್ರವಾದಿ ಇಲ್ಲ, ಒಂದು ಮೂಲಗ್ರಂಥ ಇಲ್ಲ....**

ಜಗತ್ತಿನ ಕ್ರೈಸ್ತ, ಇಸ್ಲಾಮ್, ಬೌದ್ಧ ಮತ್ತಿತರ ಎಲ್ಲ ಮತಧರ್ಮಗಳಲ್ಲೂ ನಾವು ಒಬ್ಬ ಸಂಸ್ಥಾಪಕನನ್ನು, ಒಂದು ಮೂಲಗ್ರಂಥವನ್ನು ಕಾಣುತ್ತೇವೆ. ಆದರೆ ಹಿಂದು ಧರ್ಮದಲ್ಲಿ ಇದನ್ನು ಕಾಣುವುದಿಲ್ಲ. ಇದರಲ್ಲಿ ಒಬ್ಬ ಕ್ರೈಸ್ತನಿಲ್ಲ, ಒಬ್ಬ ಮಹಮ್ಮದನಿಲ್ಲ, ಒಬ್ಬ ಬುದ್ಧನಿಲ್ಲ, ಒಂದು ಬೈಬಲ್ ಇಲ್ಲ, ಒಂದು ಕುರ್‌ಆನ್ ಇಲ್ಲ, ಒಂದು ಬೌದ್ಧ ಪವಿತ್ರ ಗ್ರಂಥವಿಲ್ಲ.

ನಿಜವಾಗಿ ಹೇಳುವುದಾದರೆ ಹಿಂದು ಧರ್ಮದಲ್ಲಿ ಪ್ರವಾದಿ ಎಂದು ಹೇಳುವಂಥ ಯಾವೊಬ್ಬ ವ್ಯಕ್ತಿಯೂ ಇಲ್ಲ. ಇದರಲ್ಲಿ ಅನೇಕ ಋಷಿಗಳಿದ್ದಾರೆ, ಮುನಿಗಳಿದ್ದಾರೆ, ಅವತಾರ ಪುರುಷರಿದ್ದಾರೆ, ಶಂಕರರಂಥ ಅನೇಕ ಚಾರಿತ್ರಿಕ ವ್ಯಕ್ತಿಗಳಿದ್ದಾರೆ, ಧಾರ್ಮಿಕ ಪುರಾಣ ಪುರುಷರೆನ್ನುವಂಥ ಅನೇಕ ಸಂತರಿದ್ದಾರೆ. ಹಿಂದು ಧರ್ಮದ ಅತ್ಯಂತ ಪುರಾತನವಾದ ವೇದಗಳು 'ಅಂತಃ ಪ್ರೇರಣೆಯಿಂದ ಅಲೌಕಿಕ ಸಾಧನಗಳ ಮೂಲಕ ಪ್ರಕಾಶಪಟ್ಟಂಥವು.' ಅವೇ ಹಿಂದು ಧರ್ಮದ ಮೂಲ ಪ್ರಮಾಣ ಗ್ರಂಥಗಳು ಎಂದೆಲ್ಲ ಹೇಳಿದರೂ, ವಾಸ್ತವವಾಗಿ ಸ್ಮೃತಿಗಳು, ಗೀತೆ, ಮಹಾಭಾರತ ಹಾಗೂ ಪುರಾಣಗಳು ವೇದಗಳಿಗಿಂತ ಕಡಿಮೆ ಪ್ರಾಮುಖ್ಯತೆಯ ಪ್ರಮಾಣ ಗ್ರಂಥಗಳೇನಲ್ಲ. ನಿಜ ಹೇಳುವುದಾದರೆ, ವಾಸ್ತವವಾಗಿ ಕಳೆದ ೧೫೦೦-೨೦೦೦ ವರ್ಷಗಳ ಹಿಂದು ಧರ್ಮದ ಸ್ಥಿತಿಗತಿಗಳನ್ನು ಪರಿಶೀಲಿಸಿದಲ್ಲಿ ಸ್ಮೃತಿ, ಗೀತೆ ಹಾಗೂ ಪುರಾಣಗಳಂಥ ಪ್ರಮಾಣ ಗ್ರಂಥಗಳೇ ಪವಿತ್ರವಾದವುಗಳಲ್ಲ, ಆದಾಗ್ಯೂ ಪವಿತ್ರವೆನಿಸಿಕೊಂಡ ವೇದಗಳಿಗಿಂತ ಹೆಚ್ಚು ಪ್ರಮಾಣ ಪೂರ್ವಕವೆಂದು ಮನ್ನಿತವಾಗಿವೆ ಎಂದೇ ಕಂಡುಬರುತ್ತದೆ.

**ಹಿಂದು ಧರ್ಮ ಹುಟ್ಟಲಿಲ್ಲ, ಸುಮ್ಮನೆ ಬೆಳೆಯಿತು**

ಇದು ನಮ್ಮನ್ನು ಹಿಂದುತ್ವದ ಮತ್ತೊಂದು ವಿಚಿತ್ರ ಲಕ್ಷಣದತ್ತ ಕರೆದೊಯ್ಯುತ್ತದೆ. ಅದೇಂದರೆ – ಹಿಂದು ಧರ್ಮವು ಎಂದೂ 'ಹುಟ್ಟಲಿಲ್ಲ', ಅದು 'ಸುಮ್ಮನೆ ಬೆಳೆಯಿತು' ಎಂಬುದು. (ಇದನ್ನು ಹೇಳುವಾಗ 'ಅಂಕಲ್ ಟಾಮ್ಸ್ ಕ್ಯಾಬಿನ್' ಎಂಬ ಆಂಗ್ಲ ಗ್ರಂಥದಲ್ಲಿ ಬರುವ ಒಬ್ಬ ನೀಗ್ರೋ ಗುಲಾಮ ಬಾಲಕಿಯ ನೆನಪು ಬರುತ್ತದೆ. ಹುಟ್ಟಿದಾಗಿನಿಂದ ಅವಳನ್ನು ಒಬ್ಬ ಗುಲಾಮ ಒಡೆಯನಿಂದ ಮತ್ತೊಬ್ಬನಿಗೆ ಮಾರಲಾಗುತ್ತ ಇರುತ್ತದೆ. ಹಾಗಾಗಿ ಅವಳಿಗೆ ತಾನು ಎಂದು 'ಹುಟ್ಟಿದೆ' ಎಂದು ಊಹಿಸಿಕೊಳ್ಳುವುದೂ ಸಾಧ್ಯವಿರಲಿಲ್ಲ. ನೀನು ಎಂದು ಹುಟ್ಟಿದೆ ಎಂದು ಯಾರೋ ಅವಳನ್ನು ಕೇಳಿದಾಗ ಅವಳು "ನಾನು ಎಂದೂ ಹುಟ್ಟಲೇ ಇಲ್ಲ ಸುಮ್ಮನೆ ಬೆಳೆದೆ" ಎಂದು ಉತ್ತರಿಸಿದಳಂತೆ. ಇದೇ ಮಾತನ್ನು ಹಿಂದು ಧರ್ಮಕ್ಕೂ ಹೇಳಬಹುದು.)

ಹಾಗೆ ನೋಡಿದರೆ 'ಹಿಂದು' ಹಾಗೂ 'ಹಿಂದು ಧರ್ಮ' ಎಂಬ ಪದಗಳೂ ಮುಸ್ಲಿಂ ದಾಳಿಕಾರರು ಕ್ರಿ.ಶ.

> **ಹಿಂದು ಧರ್ಮವು 'ಸುಮ್ಮನೆ ಬೆಳೆಯಿತಾ'ದ ಕಾರಣ ವೇದಗಳ ಕಾಲದ ಹಿಂದು ಧರ್ಮವು ಬ್ರಾಹ್ಮಣಗಳ ಮತ್ತು ಉಪನಿಷತ್ತುಗಳ ಕಾಲದ ಹಿಂದು ಧರ್ಮದಿಂದ ಬಹುಮಟ್ಟಿಗೆ ಭಿನ್ನವಾಗಿದ್ದಿತು. ಮತ್ತೆ ಬ್ರಾಹ್ಮಣಗಳ ಮತ್ತು ಉಪನಿಷತ್ತುಗಳ ಕಾಲದ ಹಿಂದು ಧರ್ಮವು ಸ್ಮೃತಿ, ಗೀತೆ, ಪುರಾಣಗಳು, ಮಹಾಭಾರತ ಇತ್ಯಾದಿಗಳ ಕಾಲದ ಮತ್ತು ಇಂದಿಗೂ ಮುಂದುವರಿದಿರುವ ಹಿಂದು ಧರ್ಮದಿಂದ ತುಂಬ ಭಿನ್ನವಾಗಿದ್ದಿತು. ಈ ಭಿನ್ನತೆ ಅಥವಾ ವ್ಯತ್ಯಾಸ ನಿಜಕ್ಕೂ ಎಷ್ಟು ಭಾರಿ ಪ್ರಮಾಣದ್ದೆಂದರೆ, ಋಗ್ವೇದ ಕಾಲದ ಋಷಿಯೊಬ್ಬ ಇಂದು ಮತ್ತೆ ಹುಟ್ಟಿಬಂದಲ್ಲಿ ಇಂದಿನ ಹಿಂದು ಧರ್ಮವನ್ನು ಕಂಡು ತನ್ನ ಧರ್ಮವೆಂದು ಎಂದೂ ಹೇಳಲಾರ.**

೮ನೇ ಅಥವಾ ೯ನೇ ಶತಮಾನಗಳ ನಂತರ ಸೃಷ್ಟಿಸಿದ ಪದಗಳು. ಋಗ್ವೇದ ಕಾಲದಿಂದ ಹಿಡಿದು ಶಂಕರರ ಕಾಲದವರೆಗೆ ಸುಮಾರು ೨೫೦೦ ವರ್ಷಗಳ ಅವಧಿಯಲ್ಲಿ ಈ ಪದಗಳು ಅಸ್ತಿತ್ವದಲ್ಲಿ ಇರಲೇ ಇಲ್ಲ.

ಹಿಂದು ಧರ್ಮವು 'ಸುಮ್ಮನೆ ಬೆಳೆಯಿತಾ'ದ ಕಾರಣ ವೇದಗಳ ಕಾಲದ ಹಿಂದು ಧರ್ಮವು ಬ್ರಾಹ್ಮಣಗಳ ಮತ್ತು ಉಪನಿಷತ್ತುಗಳ ಕಾಲದ ಹಿಂದು ಧರ್ಮದಿಂದ ಬಹು ಮಟ್ಟಿಗೆ ಭಿನ್ನವಾಗಿದ್ದಿತು. ಮತ್ತೆ ಬ್ರಾಹ್ಮಣಗಳ ಮತ್ತು ಉಪನಿಷತ್ತುಗಳ ಕಾಲದ ಹಿಂದು ಧರ್ಮವು ಸ್ಮೃತಿ, ಗೀತೆ, ಪುರಾಣಗಳು, ಮಹಾಭಾರತ ಇತ್ಯಾದಿಗಳ ಕಾಲದ ಮತ್ತು ಇಂದಿಗೂ ಮುಂದುವರಿದಿರುವ ಹಿಂದು ಧರ್ಮದಿಂದ ತುಂಬ ಭಿನ್ನವಾಗಿದ್ದಿತು. ಈ ಭಿನ್ನತೆ ಅಥವಾ ವ್ಯತ್ಯಾಸ ನಿಜಕ್ಕೂ ಎಷ್ಟು ಭಾರಿ ಪ್ರಮಾಣದ್ದೆಂದರೆ, ಋಗ್ವೇದ ಕಾಲದ ಋಷಿಯೊಬ್ಬ ಇಂದು ಮತ್ತೆ ಹುಟ್ಟಿಬಂದಲ್ಲಿ ಇಂದಿನ ಹಿಂದು ಧರ್ಮವನ್ನು ಕಂಡು ತನ್ನ ಧರ್ಮವೆಂದು ಎಂದೂ ಹೇಳಲಾರ.

**ಭಿನ್ನತೆಯ ಜೊತೆಗೆ ನಿರಂತರತೆ.....**

ಇಷ್ಟು ಭಿನ್ನತೆ ಇದ್ದಾಗ್ಯೂ ವೇದಗಳಿಗೂ ಇಂದಿನ ಹಿಂದು ಧರ್ಮಕ್ಕೂ ನಡುವೆ ನಿರಂತರತೆಯೂ, ಸ್ವಲ್ಪಮಟ್ಟಿಗಿನ ಸಾಮಾನ್ಯಾಂಶಗಳೂ ಇವೆ ಎಂಬುದೂ ನಿಜ. ಇದನ್ನು ಒಪ್ಪಿಕೊಳ್ಳಲೇಬೇಕು. ವೇದಕಾಲದ ಧರ್ಮಕ್ಕೂ ಅನಂತರದ ಹಿಂದು ಧರ್ಮಕ್ಕೂ ನಡುವೆ ಸಂಪೂರ್ಣ ಭಿನ್ನತೆ ಅಥವಾ ಒಡಕು ಎಂದೂ ಇರಲಿಲ್ಲ. ಇಂದು ಶಾಖೋಪಶಾಖೆಗಳಾಗಿ ಹರಡಿಕೊಂಡಿರುವ ಜಾತಿ ಪದ್ಧತಿಯ ಜನ್ಮದಾತೃವಾದ ಚಾತುರ್ವರ್ಣ್ಯವು ವೇದಕಾಲದಲ್ಲೇ ಹುಟ್ಟಿದುದು. ಅಷ್ಟೇ ಅಲ್ಲ, ವಿಗ್ರಹಾರಾಧನೆಯು ಇಂದಿನ ಹಿಂದುಗಳ ಪೂಜಾಕ್ರಮದ ಪ್ರಧಾನ ರೂಪವಾದರೂ, ವೇದಕಾಲದ ಯಜ್ಞವನ್ನೇನೂ ಬಿಟ್ಟುಕೊಟ್ಟಿಲ್ಲ. ಅದು ಇಂದು ಕೆಲವು ವಿಶಿಷ್ಟ ಧಾರ್ಮಿಕ ವಿಧಿಗಳಲ್ಲಿ ಮುಂದುವರಿದಿದೆ. ಇದರಲ್ಲಿ ನಾವು ಮತ್ತೆ ಅದೇ ಭಾರತೀಯ ವಿದ್ಯಮಾನವನ್ನು – ಬದಲಾವಣೆ ಹಾಗೂ ನಿರಂತರತೆಯ ವಿದ್ಯಮಾನವನ್ನು – ಕಾಣುತ್ತೇವೆ.

ನಿರಂತರತೆಯ ಲಕ್ಷಣವನ್ನು ಒತ್ತಿ ಹೇಳುವಾಗಲೇ ಕೆಲವು ಎದ್ದು ಕಾಣುವಂಥ ಬದಲಾವಣೆಗಳನ್ನೂ ಗಮನಿಸಲೇಬೇಕು.

ಋಗ್ವೇದ ಕಾಲದ ಧರ್ಮದ ಕೇಂದ್ರ ಕ್ರಿಯೆ ಯಜ್ಞ, ಅಗ್ನಿಕಾರ್ಯವಾಗಿದ್ದಿತು. ಹಾಗೆ ನೋಡಿದರೆ, ಋಗ್ವೇದ ಕಾಲದ ವಿಧಿ ಸಂಸ್ಕಾರಗಳು ಎಷ್ಟು ಮಾತ್ರವೂ ಇಂದು ನಾವು ಅಂದುಕೊಂಡಿರುವಂಥ 'ಧರ್ಮ'ವಾಗಿರಲಿಲ್ಲ. ಋಗ್ವೇದದಲ್ಲಿ ಸರ್ವಶಕ್ತನಾದ, ಸೃಷ್ಟಿಕರ್ತನಾದ, ಈ ಜಗತ್ತಿನ ಪರಿಪಾಲಕನಾದ ದೇವರು ಎಂಬ ಒಂದು ಶಕ್ತಿ ಇಲ್ಲವೇ ಇಲ್ಲ. ಋಗ್ವೇದದಲ್ಲಿ ಪೂಜೆಗೆ, ಪ್ರಾರ್ಥನೆಗೆ ಎಡೆಯೇ ಇಲ್ಲ. ಅದರಲ್ಲಿ ಆ ಭಗವಂತನ ಕೃಪೆಗಾಗಿ, ರಕ್ಷಣೆಗಾಗಿ, ಕಲ್ಯಾಣಕ್ಕಾಗಿ ಗೋಗರೆಯುವ, ಅವರ ಮುಂದೆ ಅಡ್ಡಬೀಳುವ ನಿಸ್ಸಹಾಯಕ ಮರ್ತ್ಯರಿಲ್ಲ.

ವೈದಿಕ ಯಜ್ಞವು ಮಾನವ ಶಾಸ್ತ್ರಜ್ಞರು ಏನನ್ನು ಮಂತ್ರ, ಮಾಟ, ಯಕ್ಷಿಣಿ ಎಂದು ಕರೆಯುತ್ತಾರೋ ಅದಾಗಿದ್ದಿತು. (ಸಂಸ್ಕೃತದಲ್ಲಿ ಇದನ್ನು ಯಾತು ಎಂದು ಕರೆಯುತ್ತಾರೆ.) ಯಜ್ಞವೇ ಸರ್ವಶಕ್ತವಾಗಿದ್ದಿತು. ಎಲ್ಲವನ್ನೂ ಸೃಷ್ಟಿಸುವ, ಎಲ್ಲದರ ಮೇಲೂ ಅಧಿಕಾರ ಹೊಂದಿರುವ ಶಕ್ತಿಯಾಗಿದ್ದಿತು. ಇಂದ್ರ, ವರುಣ, ಮಿತ್ರರಂಥ ವೈದಿಕ ದೇವರುಗಳೂ (ಆ ಕಾಲದಲ್ಲಿ ಒಬ್ಬ ದೇವ ಇರಲಿಲ್ಲ) ಯಜ್ಞದ ಆಣತಿಗೆ, ನಿಯಂತ್ರಣಕ್ಕೆ ಒಳಗಾಗಿದ್ದರು. ಅವರು ಯಜ್ಞದ ವಿಧಿಗಳಲ್ಲಿ ಭಾಗ ವಹಿಸುತ್ತಿದ್ದರು ಮತ್ತು ಯಜ್ಞದ ನಿಯಮಗಳನ್ನು ಉಲ್ಲಂಘಿಸಿದಲ್ಲಿ ಶಾಪಕ್ಕೊಳಗಾಗುತ್ತಿದ್ದರು, ಶಕ್ತಿಹೀನರಾಗುತ್ತಿದ್ದರು. ಯಜ್ಞವನ್ನು ನಿಯಮಿತವಾದ ಮಂತ್ರೋಚ್ಚಾರಣೆ ಮತ್ತು ಸಂಸ್ಕಾರಗಳಿಗನುಗುಣವಾಗಿ ಕಟ್ಟುನಿಟ್ಟಾಗಿ ಆಚರಿಸಿದಲ್ಲಿ, ಅದರಲ್ಲೂ ಮಂತ್ರೋಚ್ಚಾರಣೆಯನ್ನು ಕಟ್ಟುನಿಟ್ಟಾದ ತಾಳ ಲಯಗಳಿಗೆ ಬದ್ಧವಾಗಿ ನಡೆಸಿದಲ್ಲಿ ಯಜ್ಞಕರ್ತೃವಿನ ಆಶೋತ್ತರಗಳೆಲ್ಲ ಈಡೇರುತ್ತವೆಂಬುದು ಅಂದಿನ ನಂಬಿಕೆಯಾಗಿದ್ದಿತು. ಮತ್ತೆ ಅಂದಿನ (ಋಗ್ವೇದ ಕಾಲದ) ಜನರ ಆಶೋತ್ತರಗಳಾದರೂ ಏನಾಗಿದ್ದವು ? – ಯಾವತ್ತೂ ದೃಢಕಾಯರಾಗಿರಬೇಕು, ಆರೋಗ್ಯದಿಂದಿರಬೇಕು, ರಸವತ್ತಾದ ಭೋಜನ ಆಸ್ವಾದಿಸಬೇಕು, ಸಂತಾನ ಹಾಗೂ ಗೋಸಂಪತ್ತು, ಸ್ವರ್ಗ-ಸುಖಗಳನ್ನು ಅನುಭೋಗಿಸಬೇಕು ಇತ್ಯಾದಿಗಳೇ ಆಗಿದ್ದವು.

ತಪ್ಪು-ಒಪ್ಪುಗಳನ್ನು ನಿರ್ಧರಿಸುವುದಾಗಲೀ, ಅದಕ್ಕಾಗಿ ಅಸಹ್ಯ ಅಥವಾ ಬೇಸರಪಡುವುದಾಗಲೀ ಸಲ್ಲ.

ಅನಂತರ ಉಪನಿಷತ್ತುಗಳ ಕಾಲ. ಆಗ ವೈದಿಕ ದೇವತೆಗಳನ್ನು ಪದಚ್ಯುತಗೊಳಿಸಲಾಯಿತಷ್ಟೇ ಅಲ್ಲ ಅವರನ್ನು ಪರಿಹಾಸ್ಯಕ್ಕೆ ಗುರಿಮಾಡಲಾಯಿತು. ಸರ್ವೋಚ್ಚ ವಿಶ್ವಶಕ್ತಿಯೆಂದು ಪರಿಗಣಿಸಲಾಗಿದ್ದ ಯಜ್ಞವನ್ನು ಅಧೋಗತಿಗೆ ಇಳಿಸಲಾಯಿತು. ಋಗ್ವೇದ ಕಾಲದ ಋಷಿಗಳು ಉತ್ತಮ ಆರೋಗ್ಯ, ಉತ್ತಮ ಆಹಾರ, ಗೋವುಗಳು ಮತ್ತಿತರ ಲೌಕಿಕ ವಸ್ತುಗಳಲ್ಲಷ್ಟೇ, ಹೆಚ್ಚೆಂದರೆ ಸ್ವರ್ಗಕ್ಕೆ ಒಮ್ಮೆ ಹೋಗಿಬರುವುದರಲ್ಲಷ್ಟೇ, ಆಸಕ್ತರಾಗಿದ್ದರು ಎಂಬುದು ಉಪನಿಷತ್ತುಗಳ ಕಾಲದ ಋಷಿಗಳು ಅವರ ಬಗೆಗೆ ಮಾಡುತ್ತಿದ್ದ ದೂರಾಗಿದ್ದಿತು. ಏಕಮೇವಾದ್ವಿತೀಯನಾದ ಬ್ರಹ್ಮನ ಹಾಗೂ ಆತ್ಮದ ಅನಂತತೆಯನ್ನು ಸಾಕ್ಷಾತ್ಕರಿಸಿಕೊಳ್ಳುವುದು ಮತ್ತು ಶಾಶ್ವತ ಮೋಕ್ಷ ಸಂಪಾದನೆಗಾಗಿ ಬ್ರಹ್ಮನೊಂದಿಗೆ ಆತ್ಮದ ಏಕತೆಯನ್ನು ಸಾಧಿಸುವುದು ಉಪನಿಷತ್ ಕಾಲದ ಒಂದು ಬಣದ ಋಷಿಗಳ ಪರಮೋಚ್ಚ ಜೀವನ ಧ್ಯೇಯವಾಗಿದ್ದಿತು.

**ರಸವತ್ತು**

**ಬೊಟ್ಟ ತುದಿಯ**
**ತೊಟ್ಟು ಉಪ್ಪಿನ ಕಾಯಿ**
**ಜೀಪಿ ಹೀರಲು ಅರೆಗಳಿಗೆ**
**ಚಪ್ಪರಿಕೆ ಕೆಲಗಳಿಗೆ**
**ಬಾಯಿ ಚಪಲ ಹಲಗಳಿಗೆ**

**ಅಂತಹ**
**'ರಸ'ವತ್ತು ಬರಲಿ**
**ನನ್ನ ಚುಟುಕಗಳಿಗೆ**

---

**ನಾಗರಾಜ ಮಸ್ತಾರೆ**
೭೧೨, ೧೪ನೇ ಮೆಯಿನ್ ೨೦ನೇ ಕ್ರಾಸ್
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ಋಗ್ವೇದದಲ್ಲಿ 'ಆತ್ಮ'ಕ್ಕಾಗಲೀ ವಿಗ್ರಹ ಪೂಜೆಗಾಗಲಿ ಉಲ್ಲೇಖವೇ ಇಲ್ಲ.

ಇನ್ನೂ ಹೆಚ್ಚಿನ ಆಶ್ಚರ್ಯಕರ ಸಂಗತಿ ಎಂದರೆ ಋಗ್ವೇದ ಕಾಲದ ಋಷಿಗಳು ಗೋಮಾಂಸ ಭಕ್ಷಕರಾಗಿದ್ದರಷ್ಟೆ ಅಲ್ಲ ಎಷ್ಟು ಮಾತ್ರದ ಸಂಕೋಚವೂ ಇಲ್ಲದೆ ಅದನ್ನು ಆಸ್ವಾದಿಸುತ್ತಿದ್ದರು. ಇಂದು ನಾವು ಗೋಹತ್ಯೆ ಹಾಗೂ ಗೋಮಾಂಸ ಭಕ್ಷಣೆ ಅಕ್ಷಮ್ಯ ಘೋರ ಪಾಪಕೃತ್ಯ ಎಂದು ಪರಿಗಣಿಸುತ್ತಿದ್ದೇವಷ್ಟೆ. ಆದರೆ ಅಂದಿನ ಋಷಿಗಳು ಅಂತಹ ಯಾವುದೇ ತಪ್ಪಿತಸ್ಥ ಅಥವಾ ಅಪರಾಧಿ ಭಾವನೆ ಇಲ್ಲದೆಯೇ ಗೋಮಾಂಸ ಭಕ್ಷಣೆಯಲ್ಲಿ ತೊಡಗಿದ್ದರು. ಅದು ಅಂದಿನ ಕಾಲದ ಜೀವನ ವಿಧಾನಕ್ಕೆ ಅನುಗುಣವಾಗಿದ್ದಿತು. ಅದನ್ನು ಇಂದಿನ ಜೀವನ ವಿಧಾನಕ್ಕೆ ಹೋಲಿಸುವುದಾಗಲೀ, ಇಂದಿನ ಕಾಲಧರ್ಮದ ಮಾನದಂಡದಿಂದ ಅಳೆಯುತ್ತ

ವೈರಾಗ್ಯ, ಧ್ಯಾನ, ತಪಶ್ಚರ್ಯೆಗಳು ಆ ಗುರಿ ಸಾಧನೆಯ ಮಾರ್ಗಗಳಾಗಿದ್ದವು. ಅವರ ಪ್ರಕಾರ ಯಜ್ಞಗಳು ಸ್ವರ್ಗದ ಕೇವಲ ಕ್ಷಣಿಕ ಹಾಗೂ ದೈಹಿಕ ಸುಖವನ್ನಷ್ಟೇ ನೀಡುತ್ತಿದ್ದವು. ಹೀಗೆ ಪೂರ್ವ ಮೀಮಾಂಸಕರ (ವೈದಿಕ ಯಜ್ಞ ಸಮರ್ಥಕರ) ಹಾಗೂ ಉತ್ತರ ಮೀಮಾಂಸಕರ (ಉಪನಿಷತ್ತುಗಳ ಮಿಥ್ಯಾತ್ಮಕ ಆದರ್ಶ ಭಾವನೆಗಳ, ಅಂದರೆ ವೇದಾಂತದ, ಸಮರ್ಥಕರ) ನಡುವೆ ಅನೇಕ ಶತಮಾನಗಳ ಕಾಲ ಭಾರಿ ಸೈದ್ಧಾಂತಿಕ ಹೋರಾಟವೇ ನಡೆಯಿತು.

ಉಪನಿಷತ್ತುಗಳ ಕಾಲದ ವೇದಾಂತದೊಂದಿಗೆ ಪುನರ್ಜನ್ಮ ಹಾಗೂ ಕರ್ಮ ಸಿದ್ಧಾಂತವೂ ಬಂದಿತು.

ಇದೇ ಕಾಲದಲ್ಲೇ ಬೌದ್ಧ ಮತವೂ ತಲೆ ಎತ್ತಿದ್ದಿತು. ಅದು ಉಪನಿಷತ್ತುಗಳ ಸಿದ್ಧಾಂತಗಳಿಗೂ ಧರ್ಮಕ್ಕೂ ಆದ್ಯಂತ ಸವಾಲು ಹಾಕಿತು. ಆದರೆ ಅದೇ ಬೌದ್ಧ ಮತವು

ಅಧಃಪತನಗೊಂಡು ಕೊನೆಗೆ 'ಹೊಸ' ಹಿಂದುತ್ವದಿಂದ ಪರಾಭವಗೊಂಡಿತು. ಈ ಬೌದ್ಧ ಹಾಗೂ ಹಿಂದು ಧರ್ಮಗಳ ನಡುವಿನ ಸುದೀರ್ಘ ಘರ್ಷಣೆಯ ಕಾಲವನ್ನು ಬಿಟ್ಟು ಮುಂದುವರಿಯೋಣ.

ಈ 'ಹೊಸ' ಹಿಂದು ವಾದ ಅಥವಾ ಹಿಂದುತ್ವ ಎಂದು ನಾವು ಏನು ಹೇಳಿದೆವು ಅದು ಸ್ಮೃತಿಗಳ, ಗೀತೆಯ, ಮಹಾಭಾರತದ ಹಾಗೂ ಪುರಾಣಗಳ ಹಿಂದು ವಾದವಾಗಿದ್ದಿತು.

ಈಗ ನಾವು ಒಂದು ವ್ಯಕ್ತಿ ವಿಶಿಷ್ಟೀಕೃತ ದೇವರನ್ನು, ಅಂದರೆ ವಿಷ್ಣುವಿನ ಅವತಾರವಾದ ಕೃಷ್ಣನನ್ನು ಕಾಣುತ್ತೇವೆ. ಅದೇ ಹೊತ್ತಿನಲ್ಲಿ ಗೀತೆ ಬೋಧಿಸುವ ಭಕ್ತಿ ಭಾವನೆಯೂ ಹುಟ್ಟಿಕೊಳ್ಳುತ್ತದೆ. ಇದು ಪ್ರೀತಿಯ, ಶ್ರದ್ಧೆಯ ಹಾಗೂ ಪ್ರಾರ್ಥನೆಯ ಸರಳ ಮಾರ್ಗ. ಇದನ್ನು ವಿಶೇಷವಾಗಿ ಮಹಿಳೆಯರನ್ನು, ವೈಶ್ಯರನ್ನು ಹಾಗೂ ಶೂದ್ರರನ್ನು ದೃಷ್ಟಿಯಲ್ಲಿಟ್ಟುಕೊಂಡು, ಅವರೂ ಮೋಕ್ಷ ಸಾಧಿಸಲಿ ಎಂಬ ಗುರಿಯೊಂದಿಗೆ ಆಚರಣೆಗೆ ತರಲಾಯಿತು. ಈ ಹೊಸ ಹಿಂದುತ್ವದ ಮುನ್ನಿನ ಉಪನಿಷತ್ತುಗಳ ಕಾಲದಲ್ಲಿ ಮಹಿಳೆಯರಿಗೂ ವೈಶ್ಯರಿಗೂ, ಶೂದ್ರರಿಗೂ ಇದನ್ನು ನಿರಾಕರಿಸಲಾಗಿದ್ದಿತು. ಏಕೆಂದರೆ ಆಗ ಮೋಕ್ಷಕ್ಕೆ ಏಕೈಕ ಸಾಧನ ತಪಸ್ಸು ಹಾಗೂ ಧ್ಯಾನ, ಅಂದರೆ ಜ್ಞಾನ ಮಾರ್ಗ ಆಗಿದ್ದಿತು. ಈ ಜ್ಞಾನ ಮಾರ್ಗವು ಮಹಿಳೆಯರಿಗೂ ವೈಶ್ಯರಿಗೂ ಶೂದ್ರರಿಗೂ ಅರಿವಿಗೆ ಮೀರಿದ, ಅರ್ಥವಾಗದ ವಿಷಯವೆನ್ನಲಾಗಿದ್ದಿತು. ಭಕ್ತಿಯೊಂದಿಗೆ ವಿಗ್ರಹಾರಾಧನೆಯೂ ಬಂದಿತು. ಬಹುಶಃ ಆಗಲೇ ಗೋವುಗಳ ಬಗೆಗೆ ಪೂಜ್ಯ ಭಾವನೆಯೂ ಬೆಳೆದಿರಬೇಕು. ಏಕೆಂದರೆ ಬೌದ್ಧ ಧರ್ಮವು ಯಜ್ಞಗಳನ್ನೂ, ಯಜ್ಞ ಹೋಮಗಳಲ್ಲಿ ಗೋವು, ಎತ್ತು, ಕುದುರೆ ಮುಂತಾದ ಪ್ರಾಣಿಗಳನ್ನು ಆಹುತಿ ನೀಡುತ್ತಿದ್ದುದನ್ನೂ ಆವೇಶ ಪೂರಿತವಾಗಿ ವಿರೋಧಿಸಿತ್ತು.

**ತಾನೇ ತಾನಾಗಿ ಬೆಳೆದ ಧರ್ಮ......**

ಹೀಗೆ 'ಸುಮ್ಮನೆ ಬೆಳೆದ' ಹಿಂದು ಧರ್ಮವು ಮೂರನೆಯ ವಿಶಿಷ್ಟ ಲಕ್ಷಣವನ್ನು ತೋರಿಸಿಕೊಳ್ಳುತ್ತದೆ. ಅದೆಂದರೆ – ಪ್ರಪಂಚದ ಎಲ್ಲ ಧರ್ಮಗಳಿಗೂ ಹೋಲಿಸಿದಂತೆ, ಇದೊಂದು ತಾನೇ ತಾನಾಗಿ ಬೆಳೆದ ಧರ್ಮ. ಇದರಲ್ಲಿ ಸುಸಂಘಟಿತವಾದ ಚರ್ಚು ಇಲ್ಲ. ಕ್ರೈಸ್ತ, ಇಸ್ಲಾಂ ಮತ್ತು ಬೌದ್ಧ ಧರ್ಮಗಳಲ್ಲಿರುವಂತೆ ಇದರಲ್ಲಿ ಶ್ರೇಣೀಕೃತ ಸಾಂಸ್ಥೀಕೃತ ವ್ಯವಸ್ಥೆ ಇಲ್ಲ. ಚರ್ಚುಗಳ ಹಾಗೂ ಶ್ರೇಣೀಕೃತ ಸಂಸ್ಥೆಗಳ ಆಧಾರದಿಂದಲೇ ಕ್ರೈಸ್ತ, ಇಸ್ಲಾಂ ಹಾಗೂ ಬೌದ್ಧಮತಗಳನ್ನು ಊಹಿಸಿಕೊಳ್ಳುವುದೂ ಸಾಧ್ಯವಿಲ್ಲ. ನಿಜ, ಹಿಂದು ಧರ್ಮದಲ್ಲೂ ದೇವಸ್ಥಾನಗಳಿವೆ, ಬೀದಿ ಬದಿಯ ಗುಡಿಗಳಿವೆ, ಧಾರ್ಮಿಕ ಕ್ರಿಯೆಗಳನ್ನು ನಡೆಸುವ ಬ್ರಾಹ್ಮಣ ಪುರೋಹಿತರೂ, ಪೂಜಾರಿಗಳೂ ಇದ್ದಾರೆ. ಆದ್ದರಿಂದ ಹಿಂದು ಧರ್ಮದಲ್ಲಿ ಧಾರ್ಮಿಕ ಸಂಸ್ಥೆಗಳಿಲ್ಲ ಎಂದು ಹೇಳುವುದು ತಪ್ಪಾಗುತ್ತದೆ. ಇವೆ, ಆದರೆ ಇವು ಸಾಂಸ್ಥೀಕೃತ ಸಂಘಟನೆಗಳಲ್ಲ. ಹಿಂದು ಧರ್ಮದಲ್ಲಿ ಮೇಲಿನಿಂದ ನಿಯಂತ್ರಿಸುವ, ನಿರ್ದೇಶಿಸುವ ಅಧಿಕೃತ ಸಂಘಟನೆ ಎಂಬುದೊಂದಿಲ್ಲ. ಹಿಂದು ಧರ್ಮ 'ಸುಮ್ಮನೆ ಹಾಗೆಯೇ ಬೆಳೆಯಿತು', 'ಸುಮ್ಮನೆ ಹಾಗೇ ಕಾರ್ಯ ಜರುಗಿಸುತ್ತಿದೆ.' ಯಾವುದೇ ಸಾಂಪ್ರದಾಯಿಕ ನಿಯಂತ್ರಕ ಹಾಗೂ ಮಾರ್ಗದರ್ಶಕ ಅಧಿಕಾರಯುತ ಶಕ್ತಿ ಇಲ್ಲದೆಯೇ ಅದು ತಾನೇ ತಾನಾಗಿ ಬೆಳೆದು ಮುಂದುವರಿಯುತ್ತಿದೆ. ಶಂಕರ ಭಗವತ್ಪಾದರು ಅಂಥ ಒಂದು ಅಧಿಕಾರಯುತ ಸಂಸ್ಥೆಯನ್ನು ಸ್ಥಾಪಿಸಲು ಯತ್ನಿಸಿದರು. ಆದರೆ ಅಂತಹುದು ಅವಶ್ಯ ಎಂದೂ ಕಂಡುಬಂದುದಿಲ್ಲ. ಹಾಗಾಗಿ ಅದು ಕೇವಲ ಭಾವನಾತ್ಮಕವಾಗಿ ಉಳಿದುಕೊಂಡಿದೆ.

ಹಾಗಾದರೆ ಈ ಹಿಂದುಯಿಸಂ ಎಂಬ ಗಡಿಯಾರ ಹೇಗೆ ನಡೆಯುತ್ತಿದೆ? ಅದಕ್ಕೆ 'ವೈಂಡ್' ಮಾಡುವವರು ಯಾರೂ ಇಲ್ಲ. ಚಲನೆಯನ್ನು ಸರಿಹೊಂದಿಸುವಂಥ 'ರೆಗ್ಯುಲೇಟರ್' ಅದರಲ್ಲಿರಲಿಲ್ಲ. ಅದನ್ನು ಸರಿಪಡಿಸುವಂಥ 'ಮೆಕ್ಯಾನಿಕ್' ಎಂಬುವನಿಲ್ಲ. ಅದನ್ನು ಆಗಾಗ್ಗೆ 'ಆಯಿಲ್' ಮಾಡುತ್ತಿಲ್ಲ, 'ದುರಸ್ತು'ಗೊಳಿಸುತ್ತಿಲ್ಲ. ಆದರೂ ಈ ಹಿಂದುಯಿಸಂ ಎಂಬ ಗಡಿಯಾರ ಹೇಗೆ ನಡೆದುಕೊಂಡು ಹೋಗುತ್ತಿದೆ?

ಇದೇ ನಿಜವಾದ ಪ್ರಶ್ನೆ. ಇದಕ್ಕೆ ಉತ್ತರ ಕಂಡುಹಿಡಿದರೆ ಈ ವಿಚಿತ್ರ 'ಜೀವನ ವಿಧಾನ'ದ ಬಗೆಗೆ ಯಾವುದೇ ರೀತಿಯ ನಿಗೂಢತೆ ಇರಬೇಕಾದ್ದಿಲ್ಲ. ಆಗ ಹಿಂದು ಧರ್ಮದ ವಿಚಿತ್ರ ಲಕ್ಷಣಗಳು, ಅದು ವಿಕಾಸಗೊಂಡ ಹಾಗೂ ಬೆಳೆದ ಸಂದರ್ಭಗಳಲ್ಲೂ ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳಲ್ಲೂ ಸಹಜವಾದ ಸ್ಥಾನಗಳನ್ನು ಅನಿವಾರ್ಯವಾಗಿಯೇ ಕಂಡುಕೊಳ್ಳುತ್ತವೆ.

ಯಾವುದೇ ಸಮಾಜದಲ್ಲಿ ಮತಧರ್ಮ ಅನ್ನುವುದು ಒಂದು ಅಧಿರಚನೆ. ಆ ಸಾಮರ್ಥ್ಯದೊಂದಿಗೆ ಅದು ಮನುಷ್ಯನ ಹಾಗೂ ದೇವರ ನಡುವಿನ ಸಂಬಂಧವನ್ನು ನೋಡಿಕೊಳ್ಳುತ್ತದೆ. ಆದರೆ ಅಧಿರಚನೆಗೂ ವಸ್ತು ರೂಪದ ಬೇರು – ಅಡಿಪಾಯ – ಇರಬೇಕಷ್ಟೆ. ಅದು ತನ್ನ ವಸ್ತು ಅಡಿಪಾಯಗಳನ್ನು ಬಲಪಡಿಸದೆ ಹೋದರೆ ಅಧಿರಚನೆಯಾಗಿ ಉಳಿಯಲಾರದು.

ಈ ದೃಷ್ಟಿಯಿಂದ ನೋಡಿದಾಗ ಹಿಂದುಯಿಸಂನ ಐತಿಹಾಸಿಕ ಸಾಧನಗಳೇನು? (ನಾನಿಲ್ಲಿ ಆಸ್ತಿವಂತ ಹಾಗೂ ಆಳುವ ವರ್ಗಗಳ ಆಧ್ಯಾತ್ಮಿಕ ಹಾಗೂ ಸೈದ್ಧಾಂತಿಕ ಆಯುಧವಾಗಿ ಅದರ ಪಾತ್ರವನ್ನು ಉಲ್ಲೇಖಿಸುತ್ತಿಲ್ಲ. ಅದು ಎಲ್ಲ ಧರ್ಮಗಳ ಸಹಜ ಕ್ರಿಯೆ.)

ಇದಕ್ಕೆ ಸಂಬಂಧಿಸಿ ಗಮನಕ್ಕೆ ಬರುವ ಮೊದಲ ಸಂಗತಿ ಎಂದರೆ – ಇತರ ಮೂರು ಧರ್ಮಗಳಂತಲ್ಲದೆ ಹಿಂದು ಧರ್ಮವು ಆರಂಭದಿಂದಲೂ ಶೋಷಕ, ಮರ್ದಕ ಹಾಗೂ ಶಾಸಕ ವರ್ಗಗಳ ಧರ್ಮವಾಗಿದ್ದುಕೊಂಡು ಬಂದಿದೆ, ಎಂಬುದಾಗಿದೆ.

ಕ್ರೈಸ್ತ ಧರ್ಮದ ಹುಟ್ಟು, ಅದರ ಮೂಲ ಎಲ್ಲಿದ್ದಿತು? ಅದು ರೋಮ್‌ನ ಗುಲಾಮ ಜನರ ಸಂಕಷ್ಟದಲ್ಲಿದ್ದಿತು. ಆ ಸಂಕಷ್ಟದಿಂದ ಪಾರಾಗುವ ಅವರ ಹಂಬಲದ ಫಲವಾಗಿ ಅದು ಹುಟ್ಟಿಕೊಂಡಿತು. ಅದೇ ರೀತಿ ಬೌದ್ಧ ಮತವೂ ತುಳಿತಕ್ಕೊಳಗಾಗಿದ್ದ ಜಾತಿಗಳ ಬಗೆಗೆ ಬುದ್ಧ ಹೊಂದಿದ್ದ ಅನುಕಂಪದಿಂದ ಹುಟ್ಟಿಕೊಂಡಿತು. ಅವರ ದುಃಖವನ್ನೂ ನೋವನ್ನೂ ನಿವಾರಿಸಲು ಬುದ್ಧ ಹೊಂದಿದ್ದ ತೀವ್ರ ಆಸಕ್ತಿಯ ಪರಿಣಾಮವಾಗಿ ಅದು ಹುಟ್ಟಿಕೊಂಡಿತು. ಇಸ್ಲಾಂ ಧರ್ಮವೂ ಹಾಗೆಯೇ. ಏಕೈಕ ದೈವ ಅಲ್ಲಾನನ್ನೂ ಏಕೈಕ ಪ್ರವಾದಿ ಮಹಮ್ಮದನನ್ನೂ ಮನ್ನಿಸಿದ್ದಂತಹ ಎಲ್ಲರಿಗೂ ಸಮಾನತೆಯ ಆಶ್ವಾಸನೆ ಕೊಡುವ ಮೂಲಕ ಯುದ್ಧದಲ್ಲಿ ತೊಡಗಿದ್ದ ಎಲ್ಲ ಬುಡಕಟ್ಟು ಜನರನ್ನೂ ಒಂದುಗೂಡಿಸುವ ಚಳುವಳಿಯಾಗಿ ಇಸ್ಲಾಂ ಧರ್ಮ ಹುಟ್ಟಿಕೊಂಡಿತು.

**ಚಾತುರ್ವರ್ಣ್ಯ ರೂಪದಲ್ಲಿ ದಬ್ಬಾಳಿಕೆ.....**

ಆದರೆ ಹಿಂದು ಧರ್ಮದ ಮೂಲ ಏನು? ಆರ್ಯನ್ ಕ್ಷತ್ರಿಯರೂ ಬ್ರಾಹ್ಮಣರೂ ಶೂದ್ರರ ಹಾಗೂ ವೈಶ್ಯರ ಮೇಲೆ ಚಾತುರ್ವರ್ಣ್ಯದ ರೂಪದಲ್ಲಿ ತಮ್ಮ ಪ್ರಾಬಲ್ಯ ಹಾಗೂ ಪ್ರಭುತ್ವ ಸ್ಥಾಪಿಸುವ ಸಲುವಾಗಿ ಅದು ಹುಟ್ಟಿಕೊಂಡಿತು.

ವೇದಾಂತದ ಆಧ್ಯಾತ್ಮಿಕ ಚಿಂತನೆಯಲ್ಲಿ ಬ್ರಹ್ಮನ ಪ್ರಕಲ್ಪನೆಯೂ ಆದಿ ಮಧ್ಯಾಂತರಹಿತನಾದ, ರೂಪರಹಿತನಾದ, ನಿತ್ಯನಾದ, ಅಪರಿವರ್ತನೀಯನಾದ, ಅಚಿಂತ್ಯನಾದ, ನಿರ್ಗುಣ ಸತ್ಯನಾದ ಬ್ರಹ್ಮನ ಪ್ರಕಲ್ಪನೆಯೂ – ಸಾಮಾಜಿಕ

ಚಾತುರ್ವರ್ಣ್ಯ ವ್ಯವಸ್ಥೆಯನ್ನು ಸೃಷ್ಟಿಸಿದ ಹಾಗೂ ನಿಯಂತ್ರಿಸುವ ಶಕ್ತಿಯಾಗಿ ಬ್ರಹ್ಮನ ಪ್ರಕಲ್ಪನೆಯೂ ಸಮಾನ ಗತಿಯಲ್ಲಿ ವೃದ್ಧಿಗೊಂಡವು. ಈ ಅಂಶವನ್ನು ನಿಸ್ಸಂಶಯವಾಗಿ ಸಾಧಿಸಿ ತೋರಿಸಬಹುದು. ಇವೆರಡರ ನಡುವಿನ ಈ ಅಂತರ ಸಂಬಂಧವನ್ನು ಬಿಡಿಸಿ ತೋರಿಸಿದಾಗ ವೇದಾಂತದ ಭಾವನಾವಾದದಲ್ಲಿ ನಂಬಿಕೆ ಇರಿಸಿರುವವರು ಕೋಪದಿಂದ ಭುಗಿಲೇಳುತ್ತಾರೆ. ಆದರೆ ಏನು ಮಾಡುವುದಕ್ಕಾಗುತ್ತದೆ – ಎಷ್ಟೇ 'ಅಪವಿತ್ರ', 'ಅಸಹನೀಯ' ಎಂದು ತೋರಿದರೂ ವಾಸ್ತವವು ಯಾವತ್ತಿಗೂ ವಾಸ್ತವವೇ.

ಇಷ್ಟೇ ಅಲ್ಲದೆ ಬ್ರಾಹ್ಮಣ-ಕ್ಷತ್ರಿಯ ಸಮುದಾಯವು ತನ್ನದೇ ವರ್ಗದ ಹಿತಗಳನ್ನು ಸಂರಕ್ಷಿಸಿಕೊಳ್ಳಲೋಸುಗ ಮತ್ತೊಂದು ಸಿದ್ಧಾಂತವನ್ನೂ ಸೃಷ್ಟಿಸಿದೆ. ಅದೇಂದರೆ – ಪ್ರತಿಯೊಂದು ವರ್ಣದ ಪ್ರತಿಯೊಬ್ಬ ವ್ಯಕ್ತಿಯೂ ಅನೇಕ ಹುಟ್ಟು ಸಾವುಗಳ ನಂತರ ಮೋಕ್ಷ (ಅಂದರೆ ಪರ ಬ್ರಹ್ಮನೊಂದಿಗೆ ಐಕ್ಯತೆ) ಪಡೆಯಲು ಸಾಧ್ಯವಿದೆ. ಆದರೆ ಅದಕ್ಕೆ ಆ ವ್ಯಕ್ತಿ ತನ್ನ ವರ್ಣದ ಕರ್ತವ್ಯಗಳನ್ನು (ಹಿಂದು ಪವಿತ್ರ ಗ್ರಂಥಗಳಲ್ಲಿ ಇದನ್ನು ಕರ್ಮ ಎಂದು ಕರೆಯಲಾಗುತ್ತದೆ) ಕಟ್ಟುನಿಟ್ಟಾಗಿ ಪಾಲಿಸಬೇಕು!

ಹೀಗೆ ಪ್ರತಿಯೊಂದು ಧರ್ಮವೂ ಕಾಲಕ್ರಮೇಣ ಶೋಷಕ ವರ್ಗಗಳ ಉಪಯುಕ್ತ ಸಾಧನವಾಗಿ, ಸಾಮಾನ್ಯ ಜನಸಮೂಹದ ಚಿಂತನೆಯನ್ನು ಜಡಗೊಳಿಸುವ, ಅವರಿಗೆ ಮತ್ತು ಬರಿಸುವ ಮಾದಕ ವಸ್ತುವಾಗಿ, ಪರಿವರ್ತಿತವಾಗಿರುವುದನ್ನು ನಾವು ಕಾಣುತ್ತೇವೆ. ಈ ಸಾಮಾನ್ಯಾಂಶವನ್ನಲ್ಲದೆ ಹಿಂದು ಧರ್ಮದ ವಿಶಿಷ್ಟ ಲಕ್ಷಣಗಳನ್ನು ಅಧ್ಯಯನ ಮಾಡಬಯಸುವವರು, ಈ ಧರ್ಮವೂ ಇತರೆಲ್ಲ ಧರ್ಮಗಳಂತೆ ಆರಂಭದಿಂದಲೂ ಶೋಷಕ ವರ್ಗಗಳ ಸಾಧನವಾಗಿದ್ದುಕೊಂಡು ಬಂದಿದೆ ಎಂಬ ವಾಸ್ತವಾಂಶವನ್ನು ಕಡೆಗಣಿಸುವುದು ಸಾಧ್ಯವಿಲ್ಲ.

ಹಾಗಾಗಿ, ಚಾತುರ್ವರ್ಣ್ಯ ವ್ಯವಸ್ಥೆಯನ್ನು ಒಂದು ಧಾರ್ಮಿಕ ವ್ಯವಸ್ಥೆಯನ್ನಾಗಿ ಅಷ್ಟೇ ಅಲ್ಲ ಶೋಷಣೆಯ ಸಾಮಾಜಿಕ - ಆರ್ಥಿಕ ಸಾಧನವನ್ನಾಗಿ ವಿಕಾಸಗೊಳಿಸಿದುದೂ ಹಿಂದು ಧರ್ಮದ ಒಂದು ಚಾರಿತ್ರಿಕ ಕಾಣಿಕೆ (ಶೋಷಣೆ ಹಾಗೂ ದಬ್ಬಾಳಿಕೆಯ ವಿಧಾನವೊಂದನ್ನು 'ಕಾಣಿಕೆ' ಎಂದು ವರ್ಣಿಸುವುದು ಸೂಕ್ತವಲ್ಲವೆನಿಸಬಹುದು. ಆದರೂ ಈ ಚಾತುರ್ವರ್ಣ್ಯ ವ್ಯವಸ್ಥೆ ಬರದಿದ್ದರೆ ಆರಂಭಿಕ ಬುಡಕಟ್ಟುಗಳ ಇಂಡೋ – ಆರ್ಯನ್ ಸಮಾಜವು ಆ ಅವಿಕಸಿತ ಸ್ಥಿತಿಯಿಂದ ಅಭಿವೃದ್ಧಿಗೊಂಡು ಮುಂದುವರಿಯಲು ಸಾಧ್ಯವಿದ್ದೀತೇ ? ಇತಿಹಾಸವೇ ಇದಕ್ಕೆ ಉತ್ತರ ನೀಡಿದೆ. ಚಾತುರ್ವರ್ಣ್ಯ ವ್ಯವಸ್ಥೆಯು ಎಷ್ಟೇ ಶೋಷಕ ಹಾಗೂ ಮರ್ದಕ ಲಕ್ಷಣಗಳನ್ನು ಹೊಂದಿದ್ದರೂ ಅದು ಯಾವ ಸಮಾಜ ವ್ಯವಸ್ಥೆಯಿಂದ ಹೊರಹೊಮ್ಮಿತೋ ಆ ಆದಿಮ ರೂಪದ ಪಶುಪಾಲಕ ಬುಡಕಟ್ಟು ಸಮಾಜ ವ್ಯವಸ್ಥೆಗಿಂತ ಹೆಚ್ಚು ಉತ್ಪಾದಕವಾದ ಸಾಮಾಜಿಕ ವ್ಯವಸ್ಥೆಯಾಗಿದ್ದಿತು ಎಂಬುದನ್ನು ಅಲ್ಲಗಳೆಯಲಾಗದು.) ಎಂದು ಹೇಳಬಹುದು. ಹಿಂದು ಧರ್ಮವು ತನ್ನಷ್ಟಕ್ಕೆ ತಾನೇ ಮುಂದುವರಿದುಕೊಂಡು ಬರುತ್ತಿರುವುದಕ್ಕೆ ಮುಖ್ಯ ಕಾರಣವೆಂದರೆ, ಅದು ಹುಟ್ಟುಹಾಕಿದ ವೃತ್ತಿ ಆಧಾರಿತವಾಗಿದ್ದ ಹಾಗೂ ಸ್ವಜಾತಿ ಸಂಬಂಧಗಳಿಗಷ್ಟೇ ಸೀಮಿತಗೊಂಡಿದ್ದ ಜಾತಿ ಪದ್ಧತಿಯು ಸ್ವಯಂ - ಪುನರುತ್ಪಾದಕ ಲಕ್ಷಣ ಪಡೆದುದಾಗಿದ್ದಿತು.

ಇನ್ನೂ ಸ್ವಲ್ಪ ಮುಂದುವರಿದು ಹೇಳಬಹುದಾದರೆ, ಹಿಂದು ಧರ್ಮದ ನಿಜಕ್ಕೂ ಮಹತ್ತರವಾದ ಸಾಧನೆಯೆಂದರೆ – ಬೇಟೆಯಾಡುತ್ತ ಆಹಾರ ಹುಡುಕಿಕೊಂಡು ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುವ ಸ್ಥಿತಿಯಲ್ಲಿದ್ದ ಅಸಂಖ್ಯಾತ ಆದಿಮ ರೂಪದ ಬುಡಕಟ್ಟುಗಳನ್ನು ಒಂದೇ ಸ್ಥಳದಲ್ಲಿ ನಿಂತು ಕೃಷಿ, ಕೈಕಸುಬು, ಕುಶಲ ಕಲೆಗಳಲ್ಲಿ ತೊಡಗಿಕೊಳ್ಳುವಂತೆ ವಿಕಸಿತ ಸ್ಥಿತಿಗೆ ತಂದುದು. ಆ ಬುಡಕಟ್ಟುಗಳನ್ನು ವಿವಿಧ ಜಾತಿಗಳನ್ನಾಗಿ ಹಿಂದು ಧರ್ಮ ವ್ಯವಸ್ಥೆಯೊಳಕ್ಕೆ ತಂದುಕೊಳ್ಳುವ ಮೂಲಕ ಮತ್ತು ಆ ಬುಡಕಟ್ಟುಗಳಿಗೆ ಉತ್ಪಾದನಾ ತಂತ್ರಗಳನ್ನು ಸುಧಾರಿಸಿಕೊಳ್ಳಲು ನೆರವಾಗುವ ಮೂಲಕ, ಅದು ಈ ಕಾರ್ಯವನ್ನು ಸಾಧಿಸಿತು. ರಾಜರುಗಳೂ ವ್ಯಾಪಾರಸ್ಥರೂ, ಬ್ರಾಹ್ಮಣರಿಗೂ ದೇವಾಲಯ ಟ್ರಸ್ಟ್‌ಗಳಿಗೂ ಭೂದಾನ ನೀಡುತ್ತಿದ್ದುದು ಇದರಲ್ಲಿ ಮಹತ್ತರ ಪಾತ್ರ ನಿರ್ವಹಿಸಿತು. ದೇವಾಲಯಗಳು ಅಂದು ಹೇಗೋ ಇಂದೂ ಹಾಗೆಯೇ ಭೂಮಾಲೀಕತ್ವದ ಆಲಯಗಳಾಗಿವೆ. ಭಕ್ತರು ನೀಡಿದ ಭಾರೀ ಪ್ರಮಾಣದ ಚಿನ್ನ ಹಾಗೂ ಧನ ಧಾನ್ಯಗಳು ವ್ಯಾಪಾರ ಹಾಗೂ ದುಬಾರಿ ಬಡ್ಡಿ ಸಾಲ ನೀಡಿಕೆಗೆ ಬಂಡವಾಳವಾಗಿ ನೆರವಾಗುತ್ತ ಬಂದಿವೆ.

ಅನೇಕ ಶತಶತಮಾನಗಳವರೆಗೆ ಕ್ರಮೇಣ ವ್ಯಾಪಕವಾಗಿ ಹರಡಿಕೊಂಡು ಬಂದ ಈ ಪ್ರಕ್ರಿಯೆಯು, ತನ್ನ ಸರದಿಯಲ್ಲಿ, ಹಿಂದುತ್ವದ ಮೇಲೆ ಅದು ಒಂದು ಧರ್ಮವಾಗಿ ಬೆಳೆಯುವಂತೆ ಪ್ರಭಾವ ಬೀರಿತು ಮತ್ತು ಹಿಂದುತ್ವದ ಕೆಲವು ವಿಶಿಷ್ಟ ಲಕ್ಷಣಗಳನ್ನು ತಿಳಿಯಲು ನಮಗೆ ನೆರವಾಗುತ್ತದೆ.

**ದೇವನೊಬ್ಬ ನಾಮ ಹಲವು.....**

ದೇವರು ಒಂದೇ ಎಂಬುದರಲ್ಲಿ ಗಾಢ ನಂಬಿಕೆ ಒಂದು ಕಡೆ, ವಾಸ್ತವವಾಗಿ ಅಸಂಖ್ಯಾತ ದೇವ–ದೇವತೆಗಳ ಪೂಜೆ ಇನ್ನೊಂದು ಕಡೆ – ಈ ಎರಡೂ ಅಸಂಗತಗಳನ್ನು ಹಿಂದು ಧರ್ಮ ಒಂದುಗೂಡಿಸಿರುವಂತೆ ಜಗತ್ತಿನಲ್ಲಿ ಬೇರಾವ ಧರ್ಮವೂ ಮಾಡಲಾಗಿಲ್ಲ. ಅಂದರೆ, ಬೆರಗುಗೊಳಿಸುವಷ್ಟು ವಿಚಾರಪರವಾದ ಮೇಲುಮಟ್ಟದ ಬ್ರಾಹ್ಮಣ ಪುರೋಹಿತರಷ್ಟೇ ಒಬ್ಬ ದೇವರಲ್ಲಿ ನಂಬಿಕೆ ಇರಿಸಿದ್ದುದು. ಕೆಳಮಟ್ಟದ ಗ್ರಾಮೀಣ ಜನರು ಅಸಂಖ್ಯಾತ ದೇವ- ದೇವತೆಗಳಲ್ಲಿ ನಂಬಿಕೆ ಇರಿಸಿದ್ದರು. ಒಂದೊಂದು ಗುಂಪೂ ಅಥವಾ ಬುಡಕಟ್ಟೂ ತನ್ನದೇ ದೇವರನ್ನು ಪೂಜಿಸುತ್ತಿದ್ದುದು ಎಂದೇನೂ ಅಲ್ಲ.

ಇಲ್ಲ, ಹಾಗೇನೂ ಅಲ್ಲ. ಮೂಲೆ ಮೂಲೆಯಲ್ಲಿರುವ ಅತ್ಯಂತ ಅಶಿಕ್ಷಿತ ರೈತನೂ ಹೇಳುವುದು 'ದೇವನೊಬ್ಬ ನಾಮ ಹಲವು' ಎಂದೇ. ದೇವರು ಇರುವುದು ಒಬ್ಬನೇ. ಅವನನ್ನು ತಾನು ಅನುಸರಿಸುತ್ತಿರುವುದನ್ನೂ ಒಳಗೊಂಡಂತೆ ಯಾವುದೇ ಅಥವಾ ಎಲ್ಲ ರೂಪಗಳಲ್ಲೂ ಪೂಜಿಸಬಹುದು ಎಂಬುದು ತೀರ ಅಶಿಕ್ಷಿತ, ಅಸಂಸ್ಕೃತ ಎನಿಸಿಕೊಂಡವನೂ ಹೇಳುವ ಮಾತು. ಅನೇಕತ್ವದಲ್ಲಿ ಏಕತ್ವದ ಈ ಪ್ರಕಲ್ಪನೆ ದೇಶದ ಉದ್ದಗಲ ಮೂಲೆಮೂಲೆಗಳಿಗೂ ಹರಡಿದೆ. 'ವಿಭಾಜಕದಲ್ಲಿ ಅವಿಭಾಜಕ' ಎಂದು ಗೀತೆಯೂ ಹೇಳುತ್ತದೆ. ಈ ಅಸಾಂಗತ್ಯಗಳ ಸಾಂಗತ್ಯ ಹೇಗೆ ಉಂಟಾದೀತು? – ಅವಿರತವಾಗಿ ದೇಶದಾದ್ಯಂತ ನಡೆದುಕೊಂಡು ಬಂದಿರುವ ಭಜನೆ, ಕೀರ್ತನೆ, ಹರಿಕಥೆ, ಪೂಜೆ, ಉತ್ಸವ ಇತ್ಯಾದಿ ಇತ್ಯಾದಿಗಳ ಮೂಲಕ. ಈ ಒಂದುಗೂಡಿಕೆ ಕೇವಲ ಮೇಲುಮೇಲಿನ ತೇಪೆದಾರಿ ಏನಲ್ಲ. ಇದು ಈ ದೇಶದ ಕೋಟ್ಯಾಂತರ ಜನರ ಮೂಲ ಪ್ರಜ್ಞೆಯಲ್ಲಿ ಆಳವಾಗಿ ಬೇರುಬಿಟ್ಟಿರುವಂಥ ಅಚಲ ನಂಬಿಕೆ, ದೃಢ ವಿಶ್ವಾಸ.

ಇದಕ್ಕೆ ಏನು ವಿವರಣೆ ನೀಡಬಹುದು? – ದೇಶದಾದ್ಯಂತ ನೂರಾರು ಬುಡಕಟ್ಟುಗಳೂ ಅವು ಆರಾಧಿಸುತ್ತಿದ್ದಂತೆ ದೇವ ದೇವತೆಗಳೂ ಇದ್ದವಷ್ಟೆ. ಅವನ್ನೆಲ್ಲ ಹಿಂದು ಧರ್ಮದ ತೆಕ್ಕೆಯೊಳಕ್ಕೆ ತರುವ ಆವಶ್ಯಕತೆಯೇ ಇದಕ್ಕೆ ಮೂಲಕಾರಣ ಎಂದು ಹೇಳಬಹುದಷ್ಟೆ. ಈ ಸಮುದಾಯದ ಮೇಲ್ತುದಿಯಲ್ಲಿ ಜಗತ್ತಿನಲ್ಲೇ ಅತ್ಯಂತ ಸೂಕ್ಷ್ಮತರ ಕುಶಾಗ್ರಮತಿಯ ಶ್ರೇಷ್ಠ ಚಿಂತನಪರ ಬ್ರಾಹ್ಮಣ ಪುರೋಹಿತಶಾಹಿ ಇದ್ದಿತು. ವಿವಿಧ ಜಾತಿಪದ್ಧತಿಗಳು ಅನುಸರಿಸಬೇಕಾದ ನಿಯಮಗಳನ್ನು ರೂಪಿಸುವಾಗ, ಹಳೆಯ ಬುಡಕಟ್ಟು ಜೀವನ ಪದ್ಧತಿಯಲ್ಲಿದ್ದ ಒಂದು ನಿಯಮವನ್ನು – ಒಂದು ಬುಡಕಟ್ಟು ಅಥವಾ ಪಂಗಡಕ್ಕೆ ಸೇರಿದ ಹೆಣ್ಣು ಗಂಡುಗಳಷ್ಟೇ ಮದುವೆಯಾಗಬಹುದು ಎಂಬ ನಿಯಮವನ್ನು– ಒಳಮೂಡಿಸಲಾಯಿತು. ಈ ನಿಯಮದ ಉಲ್ಲಂಘನೆಗೆ ಎಷ್ಟು ಮಾತ್ರವೂ ಅವಕಾಶವಿರಲಿಲ್ಲ. (ಅಂದ ಮಾತ್ರಕ್ಕೇ ಎಲ್ಲ ಬುಡಕಟ್ಟುಗಳೂ ಜಾತಿಗಳೂ ಸರ್ವ ಸಮನಾಗಿದ್ದವೆಂದೇನೂ ಅಲ್ಲ. ಜಾತಿಗಳು ನಾನಾ ರೀತಿಗಳಲ್ಲಿ ನಾನಾ ಕಾರಣಗಳಿಂದಾಗಿ ಹುಟ್ಟಿಕೊಂಡವು. ಬುಡಕಟ್ಟುಗಳನ್ನು ಲೀನಗೊಳಿಸಿಕೊಂಡುದೂ ಆ ಕಾರಣಗಳಲ್ಲೊಂದಾಗಿದ್ದಿತು. ಜಾತಿಗಳೊಳಗಿನ ಸಜಾತಿ ವಿವಾಹ ಪದ್ಧತಿಯು ಬುಡಕಟ್ಟುಗಳ ನಡುವಿದ್ದ ಒಳ ಬಳಿ ವಿವಾಹ ಪದ್ಧತಿಯೊಂದಿಗೆ ಸ್ವಲ್ಪ ಸಂಬಂಧ ಹೊಂದಿದ್ದಿತೆಂಬುದೇನೋ ನಿಜ. ಇದರ ಬಗೆಗೆ ಇನ್ನಷ್ಟು ಪರಿಶೋಧನೆ ನಡೆಯಬೇಕಾಗಿದೆ.) ಯಾವ ದೇವತೆಗಳನ್ನು ಪೂಜಿಸಬೇಕು ಹೇಗೆ ಪೂಜಿಸಬೇಕು ಎಂಬ ಬಗೆಗೆ ಸಾಕಷ್ಟು ಸಡಿಲತೆ ಇದ್ದಿತು. ಬುಡಕಟ್ಟಿನ ದೇವತೆಗಳು ಕೆಳದರ್ಜೆಯ ಆರಾಧನಾ 'ರೂಪ'ಗಳಾಗಿದ್ದವು. ಮೇಲ್ತುದಿಯಲ್ಲಿ ಏಕ ದೈವಾರಾಧಕ ಸೂಕ್ಷ್ಮ ತಾರ್ಕಿಕ ಹಿಂದು ದೈವವಿದ್ದಿತು. ಈ ರೀತಿಯಲ್ಲೇ ಹಿಂದುತ್ವ ಪರಿಪಾಲಕರು ನಾನಾ ಬುಡಕಟ್ಟುಗಳನ್ನು ಹಿಂದು ಧರ್ಮದ ತೆಕ್ಕೆಯೊಳಕ್ಕೆ ತಂದುಕೊಳ್ಳುವ ಸಮಸ್ಯೆಯನ್ನು, ವೈವಿಧ್ಯತೆಯೊಂದಿಗೆ ಏಕತೆಯನ್ನು ಸಂಯೋಜಿಸುವ ಸಮಸ್ಯೆಯನ್ನು, ನಿಭಾಯಿಸಿದುದು.

ಏಕ ದೈವಾರಾಧನೆಯನ್ನು ಬಹುದೇವತಾರಾಧನೆಯೊಂದಿಗೆ ಮೇಳೈಸುವ ಈ ಪ್ರಕ್ರಿಯೆಯು ಮತ್ತೂ ಒಂದು ಜಾಣತನದ ತಂತ್ರದಲ್ಲಿ ವ್ಯಕ್ತಗೊಂಡಿತು. ಹಿಂದು ಧರ್ಮದಲ್ಲಿ ತ್ರಿಮೂರ್ತಿಗಳ ಪ್ರಸ್ತಾವನೆ ಇದೆಯಷ್ಟೆ. ಇವರು ಬ್ರಹ್ಮ, ವಿಷ್ಣು ಹಾಗೂ ಮಹೇಶ್ವರರು. ಇವರಲ್ಲಿ ಕೊನೆಯ ಮಹೇಶ್ವರನು ಅನಾರ್ಯ ಬುಡಕಟ್ಟುಗಳಿಂದ ಬಂದು ಆರ್ಯರಿಂದ ಸ್ವೀಕೃತನಾದವನು. ಹಾಗೆಂದು ಅವನನ್ನು ವರ್ಣಿಸುವ ಗುಣ ಲಕ್ಷಣಗಳೇ ತಿಳಿಸಿಕೊಡುತ್ತವೆ. ವೇದಗಳಲ್ಲಿ ಬರುವ ರುದ್ರನೇ ಬೇರೆ, ತದನಂತರದ ಹಿಂದು ಕಾಲಾವಧಿಯಲ್ಲಿ ಬರುವ ಶಿವ-ಶಂಕರನೇ ಬೇರೆ. ಅಷ್ಟೇ ಅಲ್ಲ ಹಿಂದುಳಿದ ಬುಡಕಟ್ಟುಗಳ ಇನ್ನೂ ಅನೇಕಾನೇಕ ಕುಲದೇವತೆಗಳನ್ನೂ ಹಿಂದು ದೇವತೆಗಳ ಗುಂಪಿನೊಳಕ್ಕೆ ''ಕ್ಷುದ್ರ (ಗೌಣ) ದೇವತೆ''ಗಳನ್ನಾಗಿ ಸ್ವೀಕರಿಸಲಾಯಿತು. ಗರುಡ,

ಮೂಷಿಕ, ಹನುಮ, ನಂದಿ, ಕೋಣ, ಕಾಳಿಂಗ ಸರ್ಪ – ಇವೆಲ್ಲ ಬುಡಕಟ್ಟುಗಳಿಂದ ಬಂದ ಅಧೀನ ದೇವತೆಗಳು. ಅಂತೆಯೇ ಅವನ್ನು – ಗರುಡನನ್ನು ವಿಷ್ಣುವಿನ, ಮೂಷಿಕವನ್ನು ಗಣಪತಿಯ, ನಂದಿಯನ್ನು ಶಿವನ, ಹನುಮನನ್ನು ರಾಮನ, ಕೋಣವನ್ನು ಯಮಧರ್ಮನ, ಕಾಳಿಂಗ ಸರ್ಪವನ್ನು ಕೃಷ್ಣನ – ವಾಹನಗಳನ್ನಾಗಿ ಮಾಡಲಾಯಿತು.

**ಜಾತಿ ಪದ್ಧತಿ....**

ಹಿಂದುತ್ವದ ಮತ್ತೊಂದು ವಿಶಿಷ್ಟ ಲಕ್ಷಣವೆಂದರೆ ಜಾತಿ ಪದ್ಧತಿ. ಇದಕ್ಕೆ ಸ್ವಲ್ಪ ಹೆಚ್ಚಿನ ವಿವರಣೆ ಅವಶ್ಯ. ಹಿಂದು ಧರ್ಮವೊಂದಷ್ಟೇ ಇಂತಹ ಅ-ಸಾಮಾನ್ಯ ಸಾಮಾಜಿಕ ಸಂಘಟನೆಯನ್ನು ಸೃಷ್ಟಿಸಿರುವುದು. ಇತರ ಧರ್ಮಗಳಂತೆ ಹಿಂದು ಧರ್ಮವೂ ಗುಲಾಮ, ಸಾಮಂತಶಾಹಿ ಹಾಗೂ ಬಂಡವಾಳಶಾಹಿ ಸಮಾಜ ಪದ್ಧತಿಗಳಿಗೆ ತನ್ನನ್ನು ಹೊಂದಿಸಿಕೊಂಡಿದೆ. ಆದರೆ ಜಾತಿಪದ್ಧತಿ ಮಾತ್ರ ಯಾವತ್ತೂ ಹಾಗೆಯೇ ಉಳಿದು ಕೊಂಡಿದೆ. ಹಾಗಾಗಿ ಹಿಂದುತ್ವವು ಜಾತಿ ಪದ್ಧತಿಯಿಂದ ಪ್ರತ್ಯೇಕಿಸಲಾಗದಂತಾಗಿದೆ. ಚರ್ಚುಗಳಂತಹ ಶ್ರೇಣೀಕೃತ ಧಾರ್ಮಿಕ ಸಂಸ್ಥೆಗಳಿಲ್ಲದೆ ಇತರ ಧರ್ಮಗಳನ್ನು ನಾವು ಹೇಗೆ ಕಲ್ಪಿಸಿಕೊಳ್ಳಲಾರೆವೋ ಹಾಗೆಯೇ ಜಾತಿ ಪದ್ಧತಿ - ರಹಿತ ಹಿಂದು ಧರ್ಮ ಕಲ್ಪನಾತೀತ. ಹಿಂದು ಧರ್ಮ ಇರುವವರೆಗೆ ಜಾತಿ ಪದ್ಧತಿ ಇದ್ದೇ ತೀರುತ್ತದೆ. ಇದೀಗ ಅಂತರ್ಜಾತೀಯ ವಿವಾಹಗಳ ಪರಿಪಾಠ ಬೆಳೆಯುತ್ತಿದೆಯಷ್ಟೇ. ಇದೇನಾದರೂ ಸಾರ್ವತ್ರಿಕ ಸಂಪ್ರದಾಯವಾಗಿ ಅಥವಾ ರೂಢಿಯಾಗಿ ಬೆಳೆದುಬಿಟ್ಟರೆ ಆದಲ್ಲಿ, ಅನೇಕ ಶತಮಾನ - ಸಹಸ್ರಮಾನಗಳ ಮೂಲಕ 'ಬೆಳೆದುಬಂದ' ಹಿಂದುತ್ವವು ಕೊನೆಗಾಣುತ್ತದೆಂದೇ ಹೇಳಬೇಕು. ಹಾಗಿಲ್ಲದಿದ್ದರೂ ಕೊನೆಯ ಪಕ್ಷ ಗುರುತಿಗೇ ಸಿಗದಂತೆ ಪರಿವರ್ತನೆಗೊಳ್ಳುತ್ತದೆಂಬುದಂತೂ ಖಚಿತ.

ಹಿಂದು ಧರ್ಮದಲ್ಲಿ ಜಾತಿ ಪದ್ಧತಿ ನಾನಾ ರೀತಿಗಳಲ್ಲಿ ವಿಕಾಸಗೊಂಡಿತು.

ಮೊದಲನೆಯದಾಗಿ, ಆದಿಮ ಇಂಡೋ - ಆರ್ಯನ್ ಬುಡಕಟ್ಟುಗಳ ಮಧ್ಯೆ ವರ್ಗ ಭೇದ ಬೆಳೆದುದು ಒಂದು ಕಾರಣವಾಗಿರಬೇಕು.

ಎರಡನೆಯದಾಗಿ, ಆದಿಮ ಇಂಡೋ ಆರ್ಯನ್ ಬುಡಕಟ್ಟುಗಳ ಹಾಗೂ ಅನಾರ್ಯ ಬುಡಕಟ್ಟುಗಳ ನಡುವೆ ಅವಿರತವಾಗಿ ಅಂತರ ಸಂಬಂಧಗಳು ಬೆಳೆಯುತ್ತಾ ಹೋದುದು. ಇದನ್ನು 'ವರ್ಣ ಸಂಕರ' ಎಂದು, ತಮ್ಮದು 'ಶುದ್ಧ ಆರ್ಯನ್ ರಕ್ತ' ಎಂದು ಜಂಭ ಕೊಚ್ಚಿಕೊಳ್ಳುವ ಜನ ಎಷ್ಟೇ ಖಂಡಿಸಿದರೂ, ಜರಿದರೂ, ಅಂತರ ಮಿಶ್ರ ಸಂಬಂಧ ಬೆಳೆಯುತ್ತಲೇ ಹೋಯಿತೆಂಬುದನ್ನು ಯಾರೂ ನಿರಾಕರಿಸಲಾಗದು. ಅಂತಹ ಕೆಲವು ಬೆರಕೆ ಹುಟ್ಟುಗಳಿಗೆ ಧಾರ್ಮಿಕ ನಿಯಮ ಹಾಗೂ ಪದ್ಧತಿಗಳು ಕೊನೆಗೆ ಅನುಮೋದನೆ ನೀಡಲೂಬೇಕಾಯಿತು. ಸುದಾಸ, ದಿವೋದಾಸ ಹಾಗೂ ಋಗ್ವೇದದ ವಸಿಷ್ಠ ಮಹರ್ಷಿ ಎಷ್ಟು ಮಾತ್ರವೂ ಶುದ್ಧ ಆರ್ಯನ್ ರಕ್ತದವರಾಗಿರಲಿಲ್ಲ (ವಸಿಷ್ಠ ಮಹಾಮುನಿಯು 'ಕಪ್ಪು ಜಾಡಿ'ಯಿಂದ ಹುಟ್ಟಿದನೆಂದು ಹೇಳಲಾಗುತ್ತದೆ). 'ದಾಸಿ' ಪದ್ಧತಿಯ ಮೂಲಕವೂ – ಅಂದರೆ ಆರ್ಯರ ಹಾಗೂ ಉಚ್ಚವರ್ಣ ಜನರ ಕುಟುಂಬಗಳಲ್ಲಿ ಜೀತಗಯ್ಯುತ್ತಿದ್ದ ಗುಲಾಮ ಸ್ತ್ರೀಯರ ಮೂಲಕವೂ ಕಲಬೆರಕೆ ಹುಟ್ಟುಗಳು ಬೆಳೆದವು. ಈ ದಾಸಿಯರೆಲ್ಲ ಅನಾರ್ಯ ಬುಡಕಟ್ಟುಗಳಿಂದ ಕೆಳಜಾತಿಗಳಿಂದ ಬಂದವರಾಗಿದ್ದರು. 'ದಾಸಿ'ಯಾಗುವುದು ಎಂದರೆ ಬೆಲೆವೆಣ್ಣು (ಮಿಂಡಗಾತಿ) ಆಗುವುದು ಎಂದೇ ಅರ್ಥವಾಗಿತ್ತು. ಈ ದಾಸಿಯರಿಗೆ ಹುಟ್ಟಿದವರನ್ನೆಲ್ಲ ನಾನಾ ಕೆಳಜಾತಿ ಜನರನ್ನಾಗಿ ವರ್ಗೀಕರಿಸಲಾಗುತ್ತಿತ್ತು.

ಮೂರನೆಯದಾಗಿ, ಉತ್ಪಾದನಾ ಸಾಧನಗಳು ವೃದ್ಧಿಗೊಂಡಂತೆ ಕೈಕಸುಬುಗಳೂ, ವ್ಯಾಪಾರವೂ ತ್ವರಿತವಾಗಿ ವೃದ್ಧಿಗೊಂಡು ವ್ಯಾಪಕವಾಗಿ ಹರಡಿದುದೂ ಜಾತಿಗಳನ್ನು ಉಂಟುಮಾಡಿದುದಕ್ಕೆ ಕಾರಣವೆನ್ನಬಹುದು.

ಕೊನೆಯಲ್ಲಿ ನಾಲ್ಕನೆಯದಾಗಿ, ಅಸಂಖ್ಯಾತ ಆದಿವಾಸಿ ಬುಡಕಟ್ಟುಗಳನ್ನು ವಿವಿಧ ಜಾತಿಗಳಾಗಿ ಹಿಂದು ತೆಕ್ಕೆಯೊಳಕ್ಕ ವಿಲೀನಗೊಳಿಸಿಕೊಂಡುದೂ ಜಾತಿ ಪದ್ಧತಿಯನ್ನು ಸೃಷ್ಟಿಸಿತು.




**ಹುಟ್ಟಿನಿಂದ ಜಾತಿ ನಿರ್ಣಯ....**

ಜಾತಿ ಎಂದರೆ ಅವಶ್ಯವಾಗಿಯೇ 'ಅಂತರ್ವಿವಾಹ' (ಒಂದೇ ಬುಡಕಟ್ಟು ಅಥವಾ ಪಂಗಡಕ್ಕೆ ಸೇರಿದ ಗಂಡು ಹೆಣ್ಣುಗಳ ನಡುವಿನ ವಿವಾಹ) ಎಂದರ್ಥ. ಏಕೆಂದರೆ, ಅಂತರ್ವಿವಾಹವಿಲ್ಲದೆ ಜಾತಿ ಇರಲು ಸಾಧ್ಯವೇ ಇಲ್ಲ. ಇದರ ಆನುಷಂಗಿಕ ಫಲವೇ ಪ್ರತಿಯೊಬ್ಬ ಹಿಂದು ಹಿಂದುವಾಗಿಯೇ ಹುಟ್ಟಬೇಕು ಎಂಬ ಸಿದ್ಧಾಂತ. ಏಕೆಂದರೆ, ಯಾವುದೇ ಜಾತಿಗೆ ಸೇರಿರದೆ ಯಾರೇ ಆಗಲಿ ಹಿಂದು ಆಗಲಾರ. ಮತ್ತೆ ಆ ಜಾತಿಯಲ್ಲಿ ಹುಟ್ಟದೆ ಆ ಜಾತಿಗೆ ಸೇರಲಾರ. ಅಂದರೆ ಯಾರೇ ಆಗಲಿ ಈ ಜಾತಿಗೆ ಸೇರಿದವರು ಎಂದರೆ ಆ ಜಾತಿಯಲ್ಲಿ ಹುಟ್ಟಿದವರು ಎಂದರ್ಥ.

ಆದ್ದರಿಂದಲೇ, ಅತ್ಯಂತ ಪುರಾತನ ಕಾಲದಲ್ಲಿ ಏನೇ ಜರುಗಿರಬಹುದಾದರೂ, ಇಂದು ನಿಜವಾಗಿ ಹೇಳುವುದಾದರೆ, ಹೊರಗಿನವನೊಬ್ಬ ಹಿಂದು ಧರ್ಮಕ್ಕೆ ಸೇರಲು ಯಾವ ಅವಕಾಶವೂ ಇಲ್ಲ. ಕಳೆದ ಎರಡು ಸಾವಿರ ವರ್ಷಗಳಿಂದಂತೂ ಇದು ಹೀಗೆಯೇ ಇದೆ. ಯಾವುದೇ ಒಬ್ಬ ವ್ಯಕ್ತಿ ಹೊರಗಿನಿಂದ ಹಿಂದು ಧರ್ಮ ಪ್ರವೇಶಿಸಲು ಸಾಧ್ಯವಿಲ್ಲ, ಏಕೆಂದರೆ, ನೀವು ಒಂದು ಜಾತಿಗೆ ಸೇರಿರದೆ ಹಿಂದು ಆಗಲಾರಿರಿ, ಮತ್ತೆ ಆ ಜಾತಿಯಲ್ಲೇ ಹುಟ್ಟದೆ ಆ ಜಾತಿಗೆ ಸೇರಿದವರಾಗಲಾರಿರಿ.

ಕಳೆದ ಆರೇಳು ದಶಕಗಳಿಂದ ಹಿಂದು ಶುದ್ಧೀಕರಣ ಚಳುವಳಿಯೊಂದು ಪ್ರಾರಂಭವಾಗಿದೆ. ಆದರೆ ಹೀಗೆ ಶುದ್ಧೀಕರಿಸಲ್ಪಟ್ಟ ಹೊಸ ವ್ಯಕ್ತಿ ಯಾವ ಜಾತಿಗೆ ಸೇರಿದವನಾಗುತ್ತಾನೆ ಎಂದು ಈ ಚಳುವಳಿಯ ಉತ್ಸಾಹಿಗಳು ಎಂದೂ ಹೇಳಲಾರರು. ಇದನ್ನವರು ಹೇಳಲಾರರು ಏಕೆಂದರೆ ಕಾರಣ ಸರಳ – ಯಾವುದೇ ಜಾತಿಯೂ ಹೊರಗಿನವನನ್ನು ತನ್ನೊಳಕ್ಕೆ ಬರುವ ಅವಕಾಶ ನೀಡುವುದಿಲ್ಲ. ಶುದ್ಧೀಕರಣ ಚಳವಳಿಗಾರರು ಎಷ್ಟೇ ಬೊಬ್ಬೆ ಹಾಕಿದರೂ, ಹಿಂದು ಧರ್ಮಕ್ಕೆ ಪರಿವರ್ತಿತನಾದ ವ್ಯಕ್ತಿಯ ಯಾವೊಂದು ಕಷ್ಟವನ್ನೂ, ಸಮಸ್ಯೆಯನ್ನೂ ಅವರು ಪರಿಹರಿಸಲಾರರು. ಉದಾಹರಣೆಗೆ, ಅಂಥ ವ್ಯಕ್ತಿ ಮದುವೆಯಾಗಲು ಒಂದು ಹೆಣ್ಣನ್ನು ಹುಡುಕಿ ಕೊಡಬಲ್ಲರೆ ? ಖಂಡಿತ ಸಾಧ್ಯವಿಲ್ಲ. ಏಕೆಂದರೆ ಜಾತಿ ಪದ್ಧತಿಯಲ್ಲಿ ವಿಶ್ವಾಸವಿಟ್ಟಿರುವ ಯಾರೂ ತಮ್ಮ ಮಗಳನ್ನು ಅಂಥವನಿಗೆ ಕೊಟ್ಟು ಮದುವೆ ಮಾಡಿಕೊಡಲು ಸಿದ್ಧರಿರುವುದಿಲ್ಲ. ಆದರೂ ಕೇವಲ ವಾದಕ್ಕಾಗಿಯೇ ವ್ಯಕ್ತಿಯೊಬ್ಬನನ್ನು ಹಿಂದು ಧರ್ಮಕ್ಕೆ ಪರಿವರ್ತಿಸುವುದು ಸಾಧ್ಯವಿದೆ ಎಂದು ಒಪ್ಪಿಕೊಂಡರೂ, ಅಂಥವನು ತ್ರಿಶಂಕುವಿನಂತೆ ಇತ್ತ ಭೂಮಿಯೂ ಇಲ್ಲ ಅತ್ತ ಸ್ವರ್ಗವೂ ಇಲ್ಲ ಎನ್ನುವಂತೆ ಗಾಳಿಯಲ್ಲಿ ತೂಗಿ ಬಿದ್ದಿರಬೇಕಾಗುತ್ತದಷ್ಟೆ.

ಹಾಗಾಗಿ ಹಿಂದುತ್ವವು ಒಂದು ಧರ್ಮವಲ್ಲ, ಅದೊಂದು 'ಜೀವನ ವಿಧಾನ' ಎಂದು ಮಿಥ್ಯಾತ್ಮಕವಾಗಿ ಅಥವಾ ಭಾವುಕವಾಗಿ ಹೇಳುವವರಿಗೆ ಒಂದು ಮಾತನ್ನು ಹೇಳಬೇಕಾಗುತ್ತದೆ. ನಿಜ, 'ಆ ಜೀವನ ವಿಧಾನ'ವೇ ಜಾತಿ; ಜಾತಿ ಎಂದರೆ ಹುಟ್ಟಿನಿಂದಲೇ ಸರಿಪಡಿಸಲಾಗದಂಥ ಅಸಮಾನತೆ; ಜಾತಿ ಎಂದರೆ ಸಾವಿರಾರು ವಿಭಾಗಗಳಾಗಿ ತುಂಡು ತುಂಡಾದ ಸಮಾಜ. ಇದೇ ನೋಡಿ ಅವರು ಹೇಳುವಂಥ ಆ 'ಜೀವನ ವಿಧಾನ' !

ಇವೆಲ್ಲಕ್ಕೂ ಕಾರಣವೇನು ಎಂದು ಮೂಲದಲ್ಲಿ ಶೋಧಿಸ ಹೊರಟಾಗ ನಿಮಗೆ ಕಾಣುವುದು – ಸಮಾಜವು ಅತ್ಯಂತ ಅಸಾಧಾರಣವಾದ ರೀತಿಯಲ್ಲಿ ತುಂಬ ನಿಧಾನವಾಗಿ ಆರ್ಥಿಕ ಬೆಳವಣಿಗೆಯನ್ನು ಸಾಧಿಸುತ್ತಿರುವುದು ; ಇನ್ನೂ ಉಳಿದುಕೊಂಡಿರುವ ಆದಿಮ ಬುಡಕಟ್ಟು ಪರಂಪರೆಗಳ ಜೊತೆಗೆ ನಿಧಾನವಾಗಿ ವಿಕಾಸಗೊಳ್ಳುತ್ತಿರುವ ವರ್ಗ ಸಮಾಜವು ಮಿಶ್ರಣ ಗೊಂಡಿರುವುದು. ಮತ್ತೆ ಈ ಸಮಾಜವೋ ಎಂದೂ 'ಹುಟ್ಟಿದುದಲ್ಲ', 'ಸುಮ್ಮನೆ ಬೆಳೆದುದು.'

**ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣರಾವ್**
ನಂ. ೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್, ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

# ಅನೇಕತೆಯಲ್ಲಿನ ಏಕತೆಯ ಸಂಕೇತ

ಪಿ. ಎಂ. ಎನ್. ಮೂರ್ತಿ

ನಮ್ಮ ರಾಷ್ಟ್ರದಲ್ಲಿಯ ವಿವಿಧ ಪಂಗಡಗಳು ಹಾಗೆಯೆ ವಿವಿಧ ಧರ್ಮಗಳನ್ನು ಅನುಸರಿಸುವ ಜನಸಮುದಾಯ ಕೋಮುಸಾಮರಸ್ಯ, ಸಂಸ್ಕೃತಿಗಳ ಸಂಗಮ, ಭಾವೈಕ್ಯತೆಗಳ ಕುರಿತು ಪ್ರಾಮಾಣಿಕವಾಗಿ ಪ್ರಕ್ರಿಯೆಯನ್ನು ಪ್ರಾರಂಭಿಸಿದ ಈ ಕಾಲಘಟ್ಟದಲ್ಲಿ ಹಿಂದುತ್ವವಾದಿಗಳು ಈ ಸಂಗಮದ ಪ್ರವಾಹವನ್ನು ಸೀಳುವ ಯತ್ನಗಳನ್ನು ನಡೆಸುತ್ತಿರುವುದು ನಮ್ಮ ರಾಷ್ಟ್ರಕ್ಕೆ ಹಾಗೆಯೇ ಅದರ ಸಂವಿಧಾನಕ್ಕೆ ಈ ಸಂವಿಧಾನದಲ್ಲಿ ಆದೇಶಿಸಲಾದ ಸೆಕ್ಯೂಲರಿಸಂಗೆ ಬೃಹತ್ ಪ್ರಮಾಣದ ದ್ರೋಹವನ್ನು ಬಗೆಯುತ್ತಿದ್ದಾರೆ, ಎಂದು ಹೇಳದೆ ನಿವೃತ್ತಿ ಇಲ್ಲ.

ನಮ್ಮ ಸಂಸ್ಕೃತಿಯು ಇಲ್ಲಿನ ಜನರ ನಿತ್ಯಜೀವನದ ಆವಿರ್ಭಾವ. ಅವರ ಜೀವನದ ಪ್ರತಿಯೊಂದು ಕಾರ್ಯಕಲಾಪಗಳಲ್ಲಿಯೂ ಇದು ವ್ಯಕ್ತವಾಗುತ್ತದೆ. ಉಡಿಗೆ-ತೊಡಿಗೆ, ಊಟ-ಉಪಚಾರ, ಮಾತು-ಬರೆವಣಿಗೆ, ಚಿಂತನೆ ಅರ್ಥೈಸುವಿಕೆ ಇವುಗಳು ಮಾನವ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

ನಮ್ಮ ರಾಷ್ಟ್ರದಲ್ಲಿ ವಿವಿಧ ಮತಗಳಿವೆ. ಪಕ್ಷ ಪಂಗಡಗಳಿವೆ. ಈ ಪಂಗಡಗಳಿಗೆ ಅವರದ್ದೇ ಆದ ಪ್ರಾಚೀನ ಕಾಲದಿಂದ ನಡೆದುಬಂದ ಪರಂಪರೆಗಳಿವೆ. ಹಾಗೆಯೇ, ಸಂಸ್ಕೃತಿಗಳಿವೆ. ಹೀಗೆ ಗತಕಾಲದಿಂದ ನಡೆದು ಬಂದ ವಿವಿಧ ಪರಂಪರೆಗಳು ಸಂಸ್ಕೃತಿಗಳು ಒಂದನ್ನೊಂದು ಸ್ಪಂದಿಸಿವೆ. ಒಂದರ ಮೇಲೊಂದು ಎಂಬಂತೆ ತಮ್ಮ ಪ್ರಭಾವಗಳನ್ನು ಬೀರಿರುತ್ತವೆ. ಇಂತಹ ಸ್ಪಂದನೆಗಳು ಅವುಗಳೊಡನೆ ಬೆಳೆದುಬಂದ ಬಾಂಧವ್ಯದ ಪರಿಣಾಮವಾಗಿ ಆಯಾಕಾಲಕ್ಕೆ ಸೂಕ್ತವಲ್ಲದ ಸಂಸ್ಕೃತಿಗಳನ್ನೂ ಅಂತೆಯೇ ಪರಂಪರೆಯ ಅಂಶಗಳನ್ನೂ ಕೈಬಿಡಲಾಗಿದೆ. ಹೊಸದಾದವುಗಳನ್ನು ಕೈಗೂಡಿಸಲಾಗಿದೆ. ಹೀಗೆ ನಮ್ಮ ರಾಷ್ಟ್ರವು ವಿವಿಧ ರಾಷ್ಟ್ರೀಯತೆ, ಧರ್ಮ, ಭಾಷೆ ಇವೇ ಮೊದಲಾದ ಭಿನ್ನವಿಭಿನ್ನತೆಗಳ ಆಯಾಮಗಳಿಂದ ಕೂಡಿದ್ದರೂ, ಈ ಅನೇಕತ್ವದ ಒಳಗೆ ಸುಗಮವಾದ ಆಂತರ್ಯದ ಸಂಬಂಧಗಳೂ ಅನ್ಯೋನ್ಯತೆಯ ಭಾವನೆಗಳೂ ಹಾಗೆಯೇ ಪರಸ್ಪರ ಹೊಂದಾಣಿಕೆಗಳು ಬೆಳೆದುಬಂದ ಒಂದು ಏಕತ್ವವನ್ನೂ ನಾವು ಕಾಣುತ್ತೇವೆ. ಇದೇ ಸಮಯದಲ್ಲಿ ಈ ಸಂಸ್ಕೃತಿ ಹಾಗೆಯೇ ಪರಂಪರೆಗಳ ಅನೇಕ ವಿವಿಧತೆಗಳು ಇನ್ನೂ ಜ್ವಲಂತವಾಗಿ ಉಳಿದಿರುವುದನ್ನೂ ನಾವು ನೋಡುತ್ತೇವೆ. ಇದುವೇ ಭಾರತದ ನಿಜವಾದ ಸಂಸ್ಕೃತಿ. ಬಹುತ್ವದಲ್ಲಿ ಅಡಗಿಕೊಂಡಿರುವ ಏಕತ್ವ. ಇದಿಲ್ಲದಿದ್ದರೆ ನಮ್ಮ ರಾಷ್ಟ್ರ ಇಷ್ಟರಮಟ್ಟಿಗಾದರೂ ಉಳಿಯುತ್ತಿರಲಿಲ್ಲ.

**ಭಾರತದ ಸಂಸ್ಕೃತಿಯ ಕೆಲವು ವೈಶಿಷ್ಟ್ಯಗಳು**

೧. ನಮ್ಮದು ಅತ್ಯಂತ ವೈವಿಧ್ಯತೆಗಳಿಂದ ಕೂಡಿದ ರಾಷ್ಟ್ರ. ಇಲ್ಲಿ ಸುಮಾರು ೪೬೩೫ ಪಂಗಡಗಳಿವೆ, ಜನರಿದ್ದಾರೆ. ಈ ಪಂಗಡಗಳಿಗೆ ಪರಂಪರೆಯಾಗಿ ನಡೆದುಬಂದ ಪ್ರತ್ಯೇಕತೆಗಳಿವೆ. ಭಾಷೆ, ಉಡಿಗೆ ತೊಡಿಗೆ, ತಿಂಡಿತಿನಿಸು, ಮದುವೆ ಮುಂಜಿಗಳನ್ನು ಆಚರಿಸುವ ಕ್ರಮಗಳ ಕುರಿತಾಗಿ ತಮ್ಮದೇ ಆದ ಸ್ವಂತಿಕೆಗಳಿವೆ.

೨. ನಮ್ಮ ರಾಷ್ಟ್ರದ ಜನರಲ್ಲಿ ಅನೇಕ ಬುಡಕಟ್ಟುಗಳಿವೆ. ಅಷ್ಟೇ ಹೇಳಿದರೆ ಸಾಲದು. ಅವುಗಳ ಮೂಲಗಳ ಕುರಿತು ತಿಳಿದಿರುವುದು ಅಗತ್ಯ. ಇಂಡೋ ಆರ್ಯನ್, ದ್ರಾವಿಡಿಯನ್, ನೀಗ್ರೋ, ಆಸ್ಟ್ರೇಲಿಯನ್ ಹಾಗೂ ಭೂಮಧ್ಯ ಸಮುದ್ರದ ಮೂಲಗಳ, ಅಂತೆಯೇ, ಮಂಗೋಲಿಯ, ಹೂಣ, ಅರೇಬಿಯ, ಟರ್ಕಿ, ಆಫ್ರಿಕಗಳ ಮೂಲಗಳಿಂದ ಸಮ್ಮಿಶ್ರಗೊಂಡ ಜನಾಂಗ ನಮ್ಮದು. ಅದನ್ನು ಬರೆ ಒಂದು - ಎಂದರೆ - ''ಹಿಂದು''- ಜನಾಂಗವೆಂದರೆ ವಸ್ತುಸ್ಥಿತಿಗೆ ವ್ಯತಿರಿಕ್ತವಾಗುವುದು. ''ಹಿಂದು'' ಎಂಬ ಪದ ಡಿ. ಡಿ. ಕೋಸಾಂಬಿಯವರ ಪ್ರಕಾರ ಇತ್ತೀಚೆಗೆ ಸುಮಾರು ೫೦೦ ವರ್ಷಗಳ ಪರಿಧಿಯಲ್ಲಿ ಬಂದದ್ದು.

೩. ನಮ್ಮಲ್ಲಿಯ ಜನರಲ್ಲಿ ಅವರ ಬಣ್ಣ, ಎತ್ತರ, ದೇಹದಾರ್ಢ್ಯತೆ ಹಾಗೆಯೇ ಅವರ ಪರಂಪರೆಯ ವೈಶಿಷ್ಟ್ಯ ಇವುಗಳನ್ನು ಗುರುತಿಸಿಕೊಂಡು ಅವರನ್ನು ಬೇರೆ ಬೇರೆಯಾಗಿ ವಿಂಗಡಿಸಲೂಬಹುದು. ಒಂದೇ ಧರ್ಮಕ್ಕೆ ಸೇರಿದವರಲ್ಲಿಯೂ ಪ್ರಾದೇಶಿಕವಾಗಿ ಎಷ್ಟೋ ಭಿನ್ನತೆಗಳಿವೆ. ಆದರೆ ನಮ್ಮಲ್ಲಿಯ ಮೇಲ್ಜಾತಿ, ಕೀಳುಜಾತಿ ಎಂಬುದಕ್ಕೆ ಉತ್ಪತ್ತಿ ಮೂಲತತ್ವದಲ್ಲಿ (genetic) ವ್ಯತ್ಯಾಸವಿಲ್ಲ ಎಂಬುದು ವಿಜ್ಞಾನಿಗಳ ಖಚಿತ ಅಭಿಪ್ರಾಯವಾಗಿದೆ. ಅಂತೆಯೇ, ಬಹುತೇಕ ಮುಸ್ಲಿಂ ಹಾಗೂ ಕ್ರೈಸ್ತರನ್ನು ಅವರು ಪರದೇಶಿಯರು ಎಂದು ತೆಗಳಿ ಅವರನ್ನು ಸಮಾಜದ ಪ್ರಧಾನ ಧಾರೆಯಿಂದ ಪ್ರತ್ಯೇಕಿಸಲು ಕೂಡಾ ವೈಜ್ಞಾನಿಕವಾಗಿ ಯಾವ ಆಧಾರಗಳೂ ಇಲ್ಲವೆಂಬುದು ಈ ವಿಜ್ಞಾನಿಗಳ ಅಭಿಮತವಾಗಿರುತ್ತದೆ. ಕಾರಣ ನಮ್ಮದು ಸಮ್ಮಿಶ್ರಗೊಂಡ ಜನಾಂಗ.

೪. ನಮ್ಮ ರಾಷ್ಟ್ರದಲ್ಲಿಯ ಹೆಚ್ಚಿನ ಎಲ್ಲಾ ವಿಭಾಗದವರು ಲೋಕದ ಇತರ ಕಡೆಗಳಿಂದ ಇಲ್ಲಿಗೆ ವಲಸೆ ಬಂದು ಈ ದೇಶದಲ್ಲಿ ನೆಲೆಸಿದವರು ಎಂಬುದನ್ನು ಜನಶ್ರುತಿಗಳು, ಸ್ಥಳ ಪುರಾಣಗಳು ಹಿಂದಿನಿಂದ ಹರಿದುಬಂದಿರುವ ನೆನಪುಗಳು, ವೈಜ್ಞಾನಿಕ ನೆಲೆಯಲ್ಲಿ ಒಪ್ಪಬೇಕಾದ ಇತಿಹಾಸಗಳು ಈ ಕುರಿತು ಸ್ಪಂದನೆ ನೀಡುತ್ತವೆ. ಈ ಜನರು ಪ್ರಾದೇಶಿಕವಾಗಿ ದೇಶದ ಯಾವ್ಯಾವ ಭಾಗಗಳಲ್ಲಿ ನೆಲೆಸಿದರೋ ಅವುಗಳಿಗನುಸಾರವಾಗಿ ಆಯಾ ಪ್ರದೇಶಕ್ಕನುಗುಣವಾಗಿರುವ ಸಾಮಾನ್ಯ ಪದ್ಧತಿಗಳನ್ನು ಸ್ವೀಕರಿಸಿಕೊಂಡು ಜೀವಿಸಿಕೊಂಡು ಬಂದಿರುವವರು. ಉದಾಹರಣೆಗಾಗಿ ಕೇರಳದಲ್ಲಿರುವ ಮುಸ್ಲಿಮರೇ ಆಗಲಿ ಕ್ರಿಸ್ತರೇ ಆಗಲಿ ಅವರೆಲ್ಲರೂ ಉಡುವುದು ಅಡ್ಡ ಪಂಚೆ. ಉತ್ತರ ಕರ್ನಾಟಕದಲ್ಲಿ ಬಹುತೇಕ ಮುಸ್ಲಿಮರು ಕಚ್ಚೆಪಂಚೆ ಉಡುತ್ತಾರೆ. ದ.ಕನ್ನಡದಲ್ಲಿಯ ಕ್ರೈಸ್ತರು (ಹಿಂದಿನ ತಲೆಮಾರಿನವರು) ಕಚ್ಚೆ ಹಾಕಿ ಪಂಚೆ ಉಡುತ್ತಿದ್ದರು. ರಾಷ್ಟ್ರದ ಇತರ ಕಡೆಗಳಲ್ಲಿ ಈ ಸಾಮ್ಯತೆ ಕಂಡುಬರುತ್ತಿತ್ತು. ಆದರೆ ಈಗ ಇಳಿಜಾರುಗಳ (trousers) ಉಡುಗೆಗಳು ಪ್ರಸ್ತುತವಾಗಿ ಬಂದಿರುವುದರಿಂದ ಈ ಸಾಮ್ಯತೆ ಇನ್ನಷ್ಟು ಅಧಿಕಗೊಂಡಿದೆ.

ಇಷ್ಟು ಮಾತ್ರವಲ್ಲ ನಮ್ಮ ಭಾರತೀಯ ಪರಂಪರೆಯು (ಹಿಂದುತ್ವದ ಪರಂಪರೆಯಲ್ಲ) ಇತರ ಅನೇಕ ಜನ ವಿಭಾಗಗಳನ್ನು ತನ್ನ ಕ್ರಮದ ಪರಿಧಿಯೊಳಗೆ ಸೆಳೆದುಕೊಂಡಿದೆ. ಕೊಡಗಿನ ಒಂದು ಪ್ರಮುಖ ವಿಭಾಗವಾದ ಕೊಡವರು ಮೊದಲಿಗೆ ಹಿಂದು ದೇವರ, ದೇವತೆಗಳ ಆರಾಧನೆಗಳಿಗೆ ಅಂಟಿಕೊಂಡಿರಲಿಲ್ಲ. ಬಹುತೇಕದ 'ಹಿಂದು' ಹಬ್ಬಗಳನ್ನು ಅವರು ಆಚರಿಸುತ್ತಿರಲಿಲ್ಲ. ಆದರೆ ಈಗ ಅವರು ಈ 'ಹಿಂದು' ಪರಂಪರೆಯಲ್ಲಿ ಹಾಸುಹೊಕ್ಕಾಗಿ ಸೇರಿಹೋಗಿದ್ದಾರೆ.

ಪಶ್ಚಿಮ ಕರಾವಳಿಯಲ್ಲಿ ನೆಲೆಸಿರುವ ಕ್ರೈಸ್ತರು ಈಗ ತಮ್ಮ ಹುಟ್ಟು ಹೆಸರಿನ ಮೊದಲಿಗೆ 'ಹಿಂದು' ಹೆಸರುಗಳನ್ನು ಸೇರಿಸಿಕೊಳ್ಳುತ್ತಿದ್ದಾರೆ. ಉದಾ : ಆನಂದ ಸಲ್ದಾನ, ಜ್ಯೋತಿ ಡಿಸೋಜ. ಅವರ ಮಹಿಳೆಯರು ಕರಿಮಣಿ ಸರಗಳನ್ನು ಕಟ್ಟಿಕೊಳ್ಳುತ್ತಾರೆ. ಹಣೆಗೆ ತಿಲಕವನ್ನು ಹಾಕಿಕೊಳ್ಳುತ್ತಾರೆ. ಆದರೆ ಸನ್ಯಾಸಿನಿಯರು ಮೊದಲು ಉದ್ದವಾದ ಲಂಗಗಳನ್ನು ಧರಿಸಿಕೊಳ್ಳುತ್ತಿದ್ದರು. ಇಂದು ಅವರು ಕೂಡಾ ಸೀರೆಗಳನ್ನೇ ಉಡುತ್ತಿದ್ದಾರೆ. ಮುಸ್ಲಿಮರಲ್ಲೂ ಕೆಲವು ಚಿಕ್ಕಪುಟ್ಟ ಬದಲಾವಣೆಗಳು ತೋರಿಬರುತ್ತವೆ. ಅಹಮ್ಮದಾಬಾದಿನ ಸುಹಾಗನ್ ಸೂಫಿ ವಿಭಾಗದ ಮುಸ್ಲಿಮರು ತಮ್ಮ ಹೆಣ್ಣು ಮಕ್ಕಳಿಗೆ ಸೀರೆ ಉಡುವ, ತಿಲಕ ಹಾಕಿಕೊಳ್ಳುವ ಪದ್ಧತಿಗಳನ್ನು ಪ್ರಸ್ತುತಗೊಳಿಸಿದ್ದಾರೆ. ಅವರಲ್ಲಿ ವಿದ್ಯಾಭ್ಯಾಸವನ್ನು ಪಡೆದ ಹೆಣ್ಣು ಮಕ್ಕಳು ಬುರ್ಕಾ ಪದ್ಧತಿಯನ್ನು ಕೇವಲ ತಲೆ ಸುತ್ತಾ ಕರಿವಸ್ತ್ರವನ್ನು ಕಟ್ಟಿಕೊಳ್ಳುವ ಸೀಮಿತೆಗೆ ಇಳಿಸಿದ್ದಾರೆ. ಮುಸ್ಲಿಮರಲ್ಲಿ ತೋರಿಬರುವ ಇನ್ನೊಂದು ಚಿಂತನೆಯೆಂದರೆ ಅವರು ಸಸ್ಯಾಹಾರವನ್ನೇ ಹೆಚ್ಚಾಗಿ ಬಯಸುವುದು. ಮೊದಲಿಗೆ ಇತರ ಧರ್ಮದವರಿಂದ ನೀರನ್ನೂ ಕೂಡ ಪಡೆದು ಕುಡಿಯಲು ಸಿದ್ಧವಿರದಿದ್ದ ಈ ಜನ ಇಂದು ಬಹುತೇಕವಾಗಿ ಸಸ್ಯಾಹಾರದ ಹೋಟೇಲುಗಳಲ್ಲಿ ತುಂಬಿಕೊಂಡಿರುವುದನ್ನು ವೀಕ್ಷಿಸಿದರೆ ರಾಷ್ಟ್ರವ್ಯಾಪಿಯಾಗಿ ಸಾಮಾನ್ಯವಾಗಿರುವ ಸಂಸ್ಕೃತಿಯು ಅವರನ್ನೂ ಆಕರ್ಷಿಸುತ್ತಿದೆ ಎಂಬುದಕ್ಕೆ ಸಾಕ್ಷಿಯಾಗುವಂತೆ ತೋರುತ್ತದೆ.

೫. ನಮ್ಮ ರಾಷ್ಟ್ರದಲ್ಲಿ ಸರ್ವಸಾಮಾನ್ಯವಾದ ಏಕತೆಯನ್ನು ರೂಪಿಸುವ ಇನ್ನೊಂದು ಮಾಧ್ಯಮವೆಂದರೆ ನಮ್ಮಲ್ಲಿಯ ಭಾಷೆಗಳು. ನಮ್ಮ ರಾಷ್ಟ್ರದಲ್ಲಿ ೩೨೫ ಭಾಷೆಗಳಿವೆ. (ಅವುಗಳಿಂದ ಉದ್ಭವವಾದ ಅರೆಭಾಷೆಗಳು ಬಹಳಷ್ಟು ಇರಬಹುದು.) ಅವುಗಳಲ್ಲಿ ೨೫ ಭಾಷೆಗಳಿಗೆ ಲಿಪಿಗಳಿವೆ. [illegible] ಇಂಡೊ ಆರ್ಯನ್, ದ್ರಾವಿಡಿಯನ್, ಇಂಡೋನೇಷ್ಯನ್ ಪ್ರೊಏಷ್ಯಾಟಿಕ್, ಟರ್ಕಿ, ಇರಾನ್ ಹಾಗೆಯೇ ಅಂಡಮಾನ್ ಇವೇ ಮೊದಲಾದ

ಮೂಲಗಳಿಂದ ಹೊರಹೊಮ್ಮಿದವುಗಳು. ಭಾಷೆಗಳು ಜನರನ್ನು ಒಂದುಗೂಡಿಸುವ ಒಂದು ಮಹಾ ಸಾಧನೆ.

ಕೇರಳದಲ್ಲಿ ಹಿಂದು ಮುಸ್ಲಿಂ ಹಾಗೂ ಕ್ರೈಸ್ತರು ಒಂದೇ ಭಾಷೆಯನ್ನು ಆಡುತ್ತಾರೆ. ಅವರ ಪತ್ರಿಕಾ ಹಾಗೂ ಸಾಹಿತ್ಯದ ಮಾಧ್ಯಮವೂ ಮಲೆಯಾಳವೇ ಆಗಿದೆ. ತಮಿಳುನಾಡು, ಒರಿಸ್ಸಾ, ಬಂಗಾಳ ರಾಜ್ಯಗಳಲ್ಲೂ ಭಾಷೆಗಳು ತಮ್ಮ ಕರ್ತವ್ಯಗಳನ್ನು ನೆರವೇರಿಸಿವೆ. ಹಾಗಾದುದರಿಂದ ಇವುಗಳು ಸಮಾಜದ ಸಾಮರಸ್ಯಕ್ಕೆ ಪೂರಕವಾಗುತ್ತವೆ. ಉದಾಹರಣೆಗಾಗಿ ದ. ಕನ್ನಡ, ಉಡುಪಿ, ಉತ್ತರಕನ್ನಡ ಜಿಲ್ಲೆಗಳಲ್ಲಿ ಸಾರಸ್ವತ, ಗೌಡ ಸಾರಸ್ವತ, ಕ್ರೈಸ್ತ ಹಾಗೂ ಭಟ್ಕಳದ ಮುಸ್ಲಿಮರು ಕೊಂಕಣಿ ಭಾಷೆಯನ್ನು ಆಡುವವರು. ಇವರೀಗ ಈ ಭಾಷೆಯನ್ನೂ ಅದರಲ್ಲಿ ರೂಪಗೊಂಡ ಸಾಹಿತ್ಯವನ್ನೂ ಶ್ರೀಮಂತಗೊಳಿಸಲು ಕೊಂಕಣಿ ಭಾಷೆಯ ಅಕಾಡೆಮಿಯೊಂದನ್ನು ಸ್ಥಾಪಿಸಿದ್ದಾರೆ. ಇಂತಹ ಪ್ರಕ್ರಿಯೆಗಳಿಂದ ಈ ಜನಾಂಗಗಳೊಳಗೆ ಅನ್ಯೋನ್ಯತೆಯ ನಿಕಟ ಸಂಬಂಧಗಳನ್ನು ಬೆಳೆಯಿಸಲು ಅವಕಾಶಗಳು ಪ್ರಾಪ್ತವಾಗುತ್ತವೆ ಎಂಬುದಕ್ಕೆ ಅಷ್ಟು ಮಾತುಗಳು ಇರಲಾರದು.

೬. ನಮ್ಮ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟಗಳು ಜನರಲ್ಲಿ ಬಹುತೇಕಮಟ್ಟಿಗೆ ಏಕತ್ವವನ್ನು ತರಲು ಸಹಾಯ ಮಾಡಿದ್ದವು. ಖಿಲಾಫತ್ ಚಳವಳಿಯಲ್ಲಿ ಹಿಂದು ಮುಸ್ಲಿಮರು ಸಮಾನವಾಗಿ ಹೋರಾಡಿದರು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಈ ಐಕ್ಯತೆಯು ಬಹಿರಂಗವಾಗಿ ಪ್ರದರ್ಶಿಸಲ್ಪಟ್ಟಿತ್ತು. ಅದು ಹಿಂದು ಮುಸ್ಲಿಮರ ಸಂಗಮದ ಅಧಿವೇಶನವಾಗಿತ್ತು. ಆಲಿ ಸಹೋದರರ ಸಕ್ರಿಯವಾದ ನೇತೃತ್ವವೇ ಇದಕ್ಕೆ ಕಾರಣ. ಈ ಅಧಿವೇಶನದ ಅಧ್ಯಕ್ಷ ಮಹಾತ್ಮಾ ಗಾಂಧಿಯವರಾಗಿದ್ದರು.

**ಹಿಂದುತ್ವವಾದಿಗಳ ಪ್ರತೀಕಾರ**

ಹಿಂದು ಕೋಮುವಾದಿಗಳಿಗೆ ಇಂತಹ ಒಂದು ಕೋಮು ಸಾಮರಸ್ಯದ ಸೃಜನಾತ್ಮಕ ಬೆಳವಣಿಗೆಯನ್ನು ಸಹಿಸಲು ಸಾಧ್ಯವಾಗಲಿಲ್ಲ. ಹಿಂದೂ ಮಹಾಸಭೆಯ ಸ್ಥಾಪಕರಲ್ಲಿ ಪ್ರಮುಖರಾದ ದಾಮೋದರ ಸಾವರಕರರು ಹಿಂದುತ್ವವಾದಿಗಳ ಪ್ರತಿನಿಧಿಯ ನೆಲೆಯಲ್ಲಿ ೧೯೨೩ರಲ್ಲಿ ತನ್ನ ಪ್ರತಿಕ್ರಿಯೆಯನ್ನು ಬಹಿರಂಗವಾಗಿ ವ್ಯಕ್ತಪಡಿಸಿದರು. ಭಾರತ ಎರಡು ರಾಷ್ಟ್ರಗಳಿಂದ ಕೂಡಿದೆ. ಒಂದು ಹಿಂದು ರಾಷ್ಟ್ರ ಮತ್ತೊಂದು ಮುಸ್ಲಿಂ ರಾಷ್ಟ್ರ. ಇವೆರಡೂ ಒಟ್ಟಾಗಿರಲು ಸಾಧ್ಯವೇ ಇಲ್ಲ ಎಂಬುದು ಅವರು ರಾಷ್ಟ್ರದ ಮುಂದಿಟ್ಟ ಸಿದ್ಧಾಂತದ ತಾತ್ಪರ್ಯ. ಅವರ ಈ ಸಿದ್ಧಾಂತವು ಪ್ರತಿಗಾಮಿ ಹಾಗೂ ಮೂಲಭೂತವಾದಿ ಮುಸ್ಲಿಂ ವ್ಯಕ್ತಿಗಳಿಗೆ ವರಪ್ರಸಾದವಾಗಿ ಒದಗಿಬಂತು. ತತ್ಪರಿಣಾಮವಾಗಿ ೧೯೪೭ರಲ್ಲಿ ದೇಶವನ್ನು ಭಾರತ, ಪಾಕಿಸ್ತಾನ ಎಂದು ವಿಭಜಿಸುವುದು ಅನಿವಾರ್ಯವಾಯಿತು.

ಹೀಗೆ ಹಿಂದುತ್ವವಾದಿಗಳು ರಾಷ್ಟ್ರವನ್ನು ವಿಭಜಿಸಲು ಶಂಕುಸ್ಥಾಪನೆ ಮಾಡಿದರು. ಕಾಶ್ಮೀರವನ್ನು ಹರಿದು ಮುಸ್ಲಿಂ ಹಾಗೆಯೇ ಬೌದ್ಧರ ಕಾಶ್ಮೀರಗಳೆಂದು ಹೋಳು ಮಾಡಲು ಅವರೀಗ ಉದ್ದೇಶಿಸಿರುವುದು ಈ ಕೋಮುವಾದಿ ದೃಷ್ಟಿಯಿಂದ. ರಾಷ್ಟ್ರವನ್ನು ತುಂಡು ಮಾಡಲು ಮೊದಲಿಗೆ ಸಿದ್ಧಾಂತವನ್ನು ಕಲ್ಪಿಸಿಕೊಟ್ಟ ಈ ಹಿಂದುತ್ವವಾದಿಗಳು ಈಗ ಭಾರತದ ಸಮಾಜದಲ್ಲಿ ಒಡಕನ್ನೂ ವಿಭಜನೆಗಳನ್ನೂ ತರುವ ಹುನ್ನಾರಗಳಲ್ಲಿ ಮುಳುಗಿದ್ದಾರೆ. ಅದಕ್ಕೆ ಅವರ ಈಗಿನ ಶತ ಪ್ರಯತ್ನಗಳು ನಡೆಯುತ್ತಿವೆ.

ನಮ್ಮ ರಾಷ್ಟ್ರದಲ್ಲಿಯ ವಿವಿಧ ಪಂಗಡಗಳು ಹಾಗೆಯೆ ವಿವಿಧ ಧರ್ಮಗಳನ್ನು ಅನುಸರಿಸುವ ಜನಸಮುದಾಯ ಕೋಮು ಸಾಮರಸ್ಯ, ಸಂಸ್ಕೃತಿಗಳ ಸಂಗಮ, ಭಾವೈಕ್ಯತೆಗಳ ಕುರಿತು ಪ್ರಾಮಾಣಿಕವಾಗಿ ಪ್ರಕ್ರಿಯೆಯನ್ನು ಪ್ರಾರಂಭಿಸಿದ ಈ ಕಾಲಘಟ್ಟದಲ್ಲಿ ಹಿಂದುತ್ವವಾದಿಗಳು ಈ ಸಂಗಮದ ಪ್ರವಾಹವನ್ನು ಸೀಳುವ ಯತ್ನಗಳನ್ನು ನಡೆಸುತ್ತಿರುವುದು ನಮ್ಮ ರಾಷ್ಟ್ರಕ್ಕೆ ಹಾಗೆಯೇ ಅದರ ಸಂವಿಧಾನಕ್ಕೆ, ಈ ಸಂವಿಧಾನದಲ್ಲಿ ಆದೇಶಿಸಲಾದ ಸೆಕ್ಯೂಲರಿಸಂಗೆ ಬೃಹತ್ ಪ್ರಮಾಣದ ದ್ರೋಹವನ್ನು ಬಗೆಯುತ್ತಿದ್ದಾರೆ, ಎಂದು ಹೇಳದೆ ನಿವೃತ್ತಿ ಇಲ್ಲ.

ಈ ಹಿಂದುತ್ವವಾದಿಗಳು ಸನಾತನವಾದದ ಹೆಸರಿನಲ್ಲಿ ತಮ್ಮ ದುಷ್ಕೃತ್ಯಗಳನ್ನು, ಟೊಳ್ಳು ಸಿದ್ಧಾಂತವನ್ನು ಸಮರ್ಥಿಸುತ್ತಿದ್ದಾರೆ. ಕೊಡಗಿನ ಕಾವೇರಿ ನದಿ ಹುಟ್ಟುವ ಬ್ರಹ್ಮಗಿರಿ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದರು ಎಂದು ಹೇಳಲಾದ ಅಗಸ್ತ್ಯ ಋಷಿ ಲೋಪಾಮುದ್ರೆ ಎಂಬ ಮಹಿಳಾ ಋಷಿಯಿಂದ ವಿಶ್ವಾವರ್ತಾ ಎಂಬ ಪುತ್ರನನ್ನು ಪಡೆದರು. ಅವರ ಈ ಮಗ ಆರ್ಯರ ಭರತ ಗುಂಪಿಗೆ ಸೇರಿದವನಾದ. ಹಿಂದೆ ಈ ಪ್ರದೇಶಗಳ ಮೂಲ ನಿವಾಸಿಗಳಾದ ಜನರನ್ನು ದಸ್ಯುಗಳೆಂದು ಈ ಆರ್ಯರು ಕರೆಯುತ್ತಿದ್ದರು. ಮಾತ್ರವಲ್ಲ ಅವರನ್ನು ನಾಶ ಮಾಡುವುದೇ ಈ ಆರ್ಯರ ಉದ್ದೇಶವೂ ಆಗಿತ್ತು. ವಿಶ್ವಾವರ್ತಾ ತಾನು ದಸ್ಯು ಹುಡುಗಿಯನ್ನೇ ಮದುವೆ ಮಾಡಿಕೊಳ್ಳಲು ಹಟ ಹಿಡಿದ. ದಸ್ಯುಗಳನ್ನು ನಾಶ ಮಾಡುವುದು ತಮ್ಮ ಉದ್ದೇಶವಾಗಿರಬಾರದು, ಬದಲು ಅವರನ್ನು ರಕ್ಷಿಸಬೇಕು; ತಮಗೆ ಸಮಾನರಂತೆಯೇ ಅವರನ್ನು ಕಾಣಬೇಕು. ಆದುದರಿಂದ ಈ ಉದ್ದೇಶವನ್ನು ಸಾಧಿಸಲು ಲೋಪಾಮುದ್ರೆ ತನ್ನ ಮಗನಿಗೆ ಬೋಧಿಸಿ ಆತನು ದಸ್ಯು ಹುಡುಗಿಯನ್ನು ಮದುವೆಯಾಗಲು ತನ್ನ ಸಮ್ಮತಿಯನ್ನು ನೀಡಿದ್ದು ಮಾತ್ರವಲ್ಲ ಈ ದಸ್ಯುಗಳನ್ನು ಗುಲಾಮರಂತೆ ಎಂದಿಗೂ ನೋಡಕೂಡದು ಎಂದು ಕೂಡಾ ಆದೇಶಿಸಿದಳು.

ಆರ್ಯರು ಮತ್ತು ದಸ್ಯು ಜನರು ಒಂದೇ ದೇವರಿಂದ ಜನ್ಮ ಪಡೆದವರು – ಅಂದರೆ ಪಶುಪತಿಯಿಂದ. ಎಲ್ಲರೂ ಸದ್ಧರ್ಮಗಳನ್ನು ಪಾಲಿಸುವ, ಆಗ್ಗೆ ಎಲ್ಲರೂ ಆರ್ಯಾವರ್ತದ ಒಂದೇ ಜನಾಂಗದವರಾಗುತ್ತೇವೆ ಎಂದು ಪರಶುರಾಮರೇ ಹೇಳಿದರೆಂದು ಕೆ. ಎಂ. ಮುನ್‌ಷಿಯವರು ಪರಶುರಾಮರ ಕುರಿತು ಬರೆದ ಪುಸ್ತಕದಲ್ಲಿ ಹೇಳಲಾಗಿದೆ. ಆದುದರಿಂದ ನಮ್ಮ ರಾಷ್ಟ್ರದ ಅತೀ ಪೂರ್ವಜರು ಕೂಡಾ ವಿವಿಧ ಪಂಗಡಗಳ ಸಾಮರಸ್ಯವನ್ನೇ ಬೋಧಿಸಿದ್ದರು ಎಂಬುದು ಈ ಹಿಂದುತ್ವವಾದಿಗಳ ನಿಲುವನ್ನು ಬರೇ ಕೃತ್ರಿಮವೆಂದೂ ನಿಜವಾದ ಸನಾತನ ಧರ್ಮವನ್ನು ಅವಹೇಳನ ಮಾಡುವ ಪ್ರವೃತ್ತಿಯೆಂದೂ ಸಮರ್ಥನೀಯ ಸಾಕ್ಷಿಗಳಿಂದ ಅವರ ಮೋಸ ಕೃತ್ಯಗಳನ್ನು ಬಯಲುಪಡಿಸಬಹುದು. ಸಂಘಪರಿವಾರದ ಇಂತಹ ದುಷ್ಕರ್ಮಗಳಿಂದ, ಜನವಿರೋಧಿ ಧ್ಯೇಯ-ಧೋರಣೆಗಳಿಂದ, ಅವರ ದುಷ್ಕೃತ್ಯಗಳಿಂದ ದೇಶದಲ್ಲಿ ಅರಾಜಕತೆ ಹರಡಿದೆ. ಕಾಶ್ಮೀರಕ್ಕೆ ಮಾತ್ರ ಸೀಮಿತವಾಗಿದ್ದ ಉಗ್ರವಾದಿಗಳ ಧ್ವಂಸ ಕಾರ್ಯಗಳು ಈಗ ಇಡೀ ರಾಷ್ಟ್ರವ್ಯಾಪಿಯಾಗಿದೆ. ಅವರ ಈ ನೀತಿಗಳು ದುರಾತ್ಮರಾದ ಮುಸ್ಲಿಂ ಉಗ್ರಗಾಮಿಗಳಿಗೆ ಅವಕಾಶಗಳನ್ನು ಕಲ್ಪಿಸಿಕೊಡುತ್ತವೆ. ಗುಜರಾತಿನ ಪ್ರಕರಣಗಳೇ ಇದಕ್ಕೆ ಸಾಕ್ಷಿ.

ದೇಶದಲ್ಲಿ ಶಾಂತಿ, ನೆಮ್ಮದಿ ಇಲ್ಲದಿದ್ದರೆ ನಮ್ಮ ರಾಷ್ಟ್ರ ಅಭಿವೃದ್ಧಿ ಪಥದಲ್ಲಿ ಸಾಗಲಾರದು. ಇದಕ್ಕೆ ಇನ್ನಷ್ಟು ಹೆಚ್ಚುತ್ತಿರುವ ಬಡತನವೇ ಸೂಚ್ಯಂಕ. ಕೈಗಾರಿಕೋದ್ಯಮಗಳು ಸ್ಥಗಿತವಾಗಿವೆ. ನಿರುದ್ಯೋಗವು ಶೇ. ೬.೨ರಷ್ಟಕ್ಕೆ ಏರಿದೆ. ಇಂಜಿನಿಯರಿಂಗ್ ಕಲಿತ ವ್ಯಕ್ತಿಗಳೇ ಕಳ್ಳಕಾಕರಾಗುತ್ತಿದ್ದಾರೆ. ಈ ನಕಾರಾತ್ಮಕ ಪ್ರಕ್ರಿಯೆಗಳಲ್ಲಿ ಅವರು ರಾಷ್ಟ್ರದ ಶತ್ರುಗಳಾಗಿಯೇ ಬದುಕಿದ್ದಾರೆ.

ತಾವು ತಮ್ಮ ಸುಮಾರು ನಾಲ್ಕೂವರೆ ವರ್ಷಗಳ ಅಧಿಕಾರದ ಅವಧಿಯಲ್ಲಿ ಮಾಡಿದ ಸಾಧನೆಗಳಿಗೆ ಸರಿಸಾಟಿ ಇಲ್ಲ ಎಂದು ಬಿ.ಜೆ.ಪಿ. ಮುಖಂಡ ನಾಯ್ಡು ಡಂಗುರ ಹೊಡೆದುಕೊಂಡು ದೇಶವಿಡೀ ಸುತ್ತುತ್ತಿದ್ದಾರೆ. ಆದರೆ ನಿಜಾಂಶವೇನು ?

ವಿದೇಶಿ ಬಂಡವಾಳದಿಂದ ನಮ್ಮ ಆರ್ಥಿಕ ವ್ಯವಸ್ಥೆಯನ್ನು ಪುನರ್ ಚೇತನಗೊಳಿಸಲು ಹೊರಟಿರುವ ಈ ಸರಕಾರಕ್ಕೆ ೨೦೦೦ನೇ ಇಸವಿಯಲ್ಲಿ ದೊರೆತ ಈ ಬಂಡವಾಳ ಬರೇ ೩.೪ ಬಿಲಿಯ ಡಾಲರುಗಳು. ಇದೇ ಅವಧಿಯಲ್ಲಿ ಚೀಣಾಕ್ಕೆ ೫೨.೭ ಬಿಲಿಯ ಡಾಲರುಗಳು. ರಾಷ್ಟ್ರಗಳ ಜನರ ಅಭಿವೃದ್ಧಿಯ ಸರಣಿಯಲ್ಲಿ ನಮ್ಮ ರಾಷ್ಟ್ರ ೧೨೦ನೇ ಸ್ಥಾನದಲ್ಲಿದೆ ಎಂದು ಅಂಕ್ಟಂಶ ವರದಿಯು ಹೇಳಿದೆ. ಆದುದರಿಂದ ಈ ಸರಕಾರದ ಸಾಧನೆ ಲೆಕ್ಕಾಚಾರಗಳು ಎಲ್ಲವೂ ಬರೇ ಸುಳ್ಳು ಕಂತೆ. ಅವರ ದುಸ್ಸಾಧನೆಗಳನ್ನು ಬಚ್ಚಿಟ್ಟ ಕುಂಭಕ್ಕೆ ಒಂದು ಮುಚ್ಚಳ. ಆದರೆ ಈ ಕುಂಭವು ಈಗಾಗಲೇ ಪಾರದರ್ಶಕವಾಗಿದೆ. ಅದರ ಪರಿಣಾಮ ಈಗಾಗಲೇ ತೋರಿಬರುತ್ತಿದೆ.

ಪಿ. ಎಮ್. ಎನ್. ಮೂರ್ತಿ
ಭಾರತೀನಗರ, ಬಿಜೈ, ಮಂಗಳೂರು - ೫೭೫ ೦೦೪



**ಘಮ್ಮೆಂದು**

ಒಗ್ಗರಿಸುವಾಗ
ಸಾಸುವೆ ಇಂಗು
ಬಂದ
ಚಟಚಟ ಖಯಾಲಿಗೆ
ಘಮ್ಮೆಂದು ಕವಿತೆ

**ನಾಗರಾಜ ವಸ್ತಾರೆ**
೭೮೨, ೧೪ನೇ ಮೇಯಿನ್ ೨೦ನೇ ಕ್ರಾಸ್
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦



# ರೆಂಬ್ರೆಂಟ್

ವೈ. ಶ್ರೀನಿವಾಸರಾವ್

ಹಾಲೆಂಡ್ ದೇಶದ ಸುಪ್ರಸಿದ್ಧ ಚಿತ್ರ ವಿಶಾರದನಾದ ರೆಂಬ್ರೆಂಟನು ೧೫.೭.೧೬೦೬ರಲ್ಲಿ ಲೇಡನ್ ನಗರದಲ್ಲಿ ಹುಟ್ಟಿದನು. ಇವನ ನಾಲ್ಕು ಜನ ಅಣ್ಣಂದಿರೂ ವ್ಯಾಪಾರದಲ್ಲಿ ನಿರತರಾಗಿದ್ದುದರಿಂದ ತಂದೆಯು ಇವನಿಗೆ ಓದು ಕಲಿಸಬೇಕೆಂದು ನಿಶ್ಚಯಿಸಿ ಈತನನ್ನು ಸ್ಕೂಲಿಗೆ ಕಳುಹಿಸುತ್ತಿದ್ದನು. ಆದರೆ ಸ್ಕೂಲಿಗೆ ಹೋಗುವುದು ರೆಂಬ್ರೆಂಟಿಗೆ ಒಪ್ಪಲಿಲ್ಲ. ಪಾಠಶಾಲೆಯಲ್ಲಿದ್ದಾಗಲೆಲ್ಲಾ ತನ್ನ ಪುಸ್ತಕಗಳಲ್ಲಿ ಚಿತ್ರಗಳನ್ನು ಬರೆಯುತ್ತಿದ್ದನೇ ಹೊರತು ಪಾಠಗಳಿಗೆ ಗಮನ ಕೊಡುತ್ತಿರಲಿಲ್ಲ. ವಿವೇಕಶಾಲಿಯಾದ ಈತನ ತಂದೆಯು ಈ ವಿಷಯವನ್ನು ತಿಳಿದೊಡನೆಯೇ ಹುಡುಗನನ್ನು ಪಾಠಶಾಲೆಯಿಂದ ತಪ್ಪಿಸಿ ಅದೇ ಪಟ್ಟಣದಲ್ಲಿದ್ದ ಜಾಕೆಟ್ ಎಂಬ ಚಿತ್ರಗಾರನ ಬಳಿಗೆ ಕಳುಹಿಸಿದನು. ರೆಂಬ್ರೆಂಟನು ಈ ಚಿತ್ರಗಾರನ ಬಳಿಯಲ್ಲಿ ಮೂರು ವರ್ಷಗಳ ಕಾಲ ಕಲಾಭ್ಯಾಸ ಮಾಡಿ ಪ್ರಾವೀಣ್ಯತೆಯನ್ನು ಪಡೆದುದಲ್ಲದೆ ಕಲೆಗೆ ಸಂಬಂಧವಾದ ಅನೇಕ ವಿಷಯಗಳನ್ನು ತಿಳಿದುಕೊಂಡನು. ೧೬೨೪ನೇ ಇಸ್ವಿಯಲ್ಲಿ, ಅಂದರೆ ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಹಾಲೆಂಡ್ ದೇಶದ ಆಂಸ್ಟೆರ್ಡಾಂ ನಗರಕ್ಕೆ ಪ್ರಯಾಣ ಮಾಡಿ ಅಲ್ಲಿದ್ದ ಪೀಟರ್ ಲಾಸ್ಟ್ ಮ್ಯಾನ್ ಎಂಬ ಚಿತ್ರಗಾರನ ಹತ್ತಿರ ಕಲಾಭ್ಯಾಸವನ್ನು ಮುಂದುವರಿಸಲು ಪ್ರಯತ್ನಿಸಿದನು. ಆದರೆ ಇಟಲೀ ದೇಶದ ಚಿತ್ರಗಾರರ ಶೈಲಿಯನ್ನೇ ಆದರ್ಶಪ್ರಾಯವಾಗಿಟ್ಟುಕೊಂಡಿದ್ದ ಪೀಟರ್ ಲಾಸ್ಟ್‌ಮ್ಯಾನ್‌ನ ಶೈಲಿಯು ರೆಂಬ್ರೆಂಟಿಗೆ ಸರಿಬೀಳದೆ ಕೊಂಚ ತಿಂಗಳುಗಳಲ್ಲಿಯೇ ಆತನು ತನ್ನ ಊರಿಗೆ ವಾಪಸು ಬಂದು ಸ್ವಂತವಾಗಿ ಕಲಾಭ್ಯಾಸ ಮಾಡುವುದಕ್ಕಾರಂಭಿಸಿದನು. ಹೀಗೆಯೇ ಏಳು ವರ್ಷಗಳ ಕಾಲ ಅಭ್ಯಾಸ ಮಾಡಿ ಕೊಂಚ ಖ್ಯಾತಿಯನ್ನು ಪಡೆದು ೧೬೩೧ನೇ ಇಸವಿಯಲ್ಲಿ ಈತನು ಪುನಃ ಆಂಸ್ಟೆರ್ಡಾಂ ನಗರಕ್ಕೆ ಬಂದು ಅಲ್ಲಿ ವಾಸಮಾಡುವುದಕ್ಕಾರಂಭಿಸಿದನು. ಇಲ್ಲಿ ಕೆಲಸಗಳಿಂದ ಸ್ವಲ್ಪ ಸ್ವಲ್ಪವಾಗಿ ಹಣವೂ ಬರುವುದಕ್ಕಾರಂಭಿಸಿತು. ಅನೇಕ ಜನ ಸ್ನೇಹಿತರೂ ಆದರು. ಇಂತಹ ಸ್ನೇಹಿತರಲ್ಲೊಬ್ಬನು ಇವನಿಗೆ ಉತ್ತೇಜನ ಕೊಡಬೇಕೆಂಬ ಅಭಿಲಾಷೆಯಿಂದ ಒಬ್ಬ ಹೆಂಗಸಿನ ಚಿತ್ರವನ್ನು ಬರೆಯಬೇಕೆಂದು ಒಪ್ಪಿಸಿ, ಮಾದರಿಗಾಗಿ ಒಬ್ಬ ತಬ್ಬಲಿ ಯುವತಿಯನ್ನು ಕೂಡಿಸಿದನು. ರೆಂಬ್ರೆಂಟನು ಅವಳ ಚಿತ್ರವನ್ನು ಸುಂದರವಾಗಿ ಚಿತ್ರಿಸಿದ್ದಲ್ಲದೆ, ಆಕೆಯನ್ನು ಪ್ರೀತಿಸಲಾರಂಭಿಸಿ ೧೬೩೪ನೇ ಇಸವಿಯಲ್ಲಿ ಅವಳನ್ನು ಮದುವೆ ಮಾಡಿಕೊಂಡನು. ಅವಳೇ ಈಗ ವಿಖ್ಯಾತವಾಗಿರುವ ಸಾಸ್ಕಿಯಾ. ಈ ಮದುವೆಯಾದಂದಿನಿಂದ ಇವನಿಗಾದ ಸಂತೋಷವನ್ನು ಹೇಳಲಸಾಧ್ಯ. ತನ್ನ ಹೆಂಡತಿಯನ್ನು ಸುಖದಿಂದಲೂ, ಸಂತೋಷದಿಂದಲೂ ಇಡಬೇಕೆಂದು ಈತನು ಮನಬಂದಂತೆ ಹಣವನ್ನು ಖರ್ಚುಮಾಡಿ ಅವಳ ಆನಂದಕ್ಕಾಗಿ ಚಿತ್ರಪಠಗಳನ್ನೂ, ಸುಂದರವಾದ ಪದಾರ್ಥಗಳನ್ನೂ ಕೊಂಡುತಂದು ಮನೆಯನ್ನಲಂಕರಿಸುತ್ತ ಬಂದನು. ಅಷ್ಟೂ ಸಾಲದೆ ತನ್ನ ಪತ್ನಿಯ ಚಿತ್ರವನ್ನು ಪದೇಪದೇ ಬರೆದನು. ಅವಳ ಪ್ರತಿಬಿಂಬವನ್ನು ತಾನು ಬರೆದಿರುವ ಕೆಲವು ಚಿತ್ರಗಳಲ್ಲಿ ಕಾಣುವಂತೆ ಮಾಡಿದನು. ಸಂತೋಷ ಸಾಗರದಲ್ಲಿ ಮುಳುಗಿದ್ದ ಈ ಚಿತ್ರಗಾರನ ಆಗಿನ ಮನೋಭಾವವನ್ನು ತಿಳಿಯಬೇಕಾದರೆ ಆತನು ಚಿತ್ರಿಸಿರುವ ''ರೆಂಬ್ರೆಂಟ್ ಮತ್ತು ಅವನ ಮೊದಲನೆ ಹೆಂಡತಿ'' ಎಂಬ ಚಿತ್ರವನ್ನು ನೋಡಬೇಕು. ಪ್ರೀತಿ ಪಾತ್ರಳಾದ ಸಾಸ್ಕಿಯಾ ಆತನ ತೊಡೆಯ ಮೇಲೆ ಕುಳಿತುಕೊಂಡಿದ್ದಂತೆ ಚಿತ್ರಿಸಿದ್ದಾನೆ. ಅವಳ ಮುಗುಳುನಗೆಯೂ, ಈತನ ಮುಖದ ಮೇಲೆ ತೋರಿಬರುವ ಆನಂದವೂ, ಇಬ್ಬರೂ ಧರಿಸಿರುವ ವಿಚಿತ್ರವಾದ ಉಡುಪೂ, ಆ ದಂಪತಿಗಳ ಸಂತೋಷಾತಿಶಯವನ್ನು ತೋರಿಸುವಂತಿದೆ. ಆದರೆ ಈ ಸುಖವು ಬಲುದಿನ ಶಾಶ್ವತವಾಗಿರಲಿಲ್ಲ. ವಿಧಿಗೆ ಇವರ ಆನಂದಾತಿಶಯದಲ್ಲಿ ತಾಳ್ಮೆಯಿದ್ದಂತೆ ಕಂಡುಬರುವುದಿಲ್ಲ. ಕೊಂಚ ದಿವಸಗಳಲ್ಲಿಯೇ ಇವನನ್ನು ಪ್ರೋತ್ಸಾಹಿಸುತ್ತಿದ್ದ ದೊಡ್ಡ ಮನುಷ್ಯರು ಕೈಬಿಡುವುದಕ್ಕಾರಂಭಿಸಿದರು. ಪ್ರಾರಂಭದಲ್ಲಿ ಆಗಿನ ಕಾಲದ ದೊಡ್ಡ ಮನುಷ್ಯರ ಮನವೊಪ್ಪುವಂತೆಯೇ ಚಿತ್ರಗಳನ್ನು ಬರೆಯುತ್ತಿದ್ದ ರೆಂಬ್ರೆಂಟನು, ಈಗ ಸ್ವತಂತ್ರವಾದ ತನ್ನ ಹೊಸ ಶೈಲಿಯನ್ನಾರಂಭಿಸಿದನು. ಇವನ ನೂತನಶೈಲಿಯ ಸವಿಯನ್ನು ಅವರೇನು ಬಲ್ಲರು! ಸ್ಪೇನ್ ದೇಶದ ರಾಜಭಟರನ್ನು ಹಾಲೆಂಡ್ ದೇಶದಿಂದ ಓಡಿಸಿ, ತಮ್ಮ ದೇಶವನ್ನು ಸ್ವತಂತ್ರ ರಾಜ್ಯವನ್ನಾಗಿ ಮಾಡಿದ ಸ್ವಾತಂತ್ರ್ಯಪ್ರಿಯರಾದ ಡಚ್ಚ ಮುಖಂಡರಿಗೆ ತಮ್ಮ ಮುಖಭಾವವನ್ನು ಚೆನ್ನಾಗಿ ತೋರಿಸುವ ಚಿತ್ರಗಳು ಬೇಕಾಗಿದ್ದಿತೇ ಹೊರ್ತು; ಇವನ ಶೈಲಿಯು ಬೇಕಾಗಿರಲಿಲ್ಲ. ಬೆಳಕನ್ನು ಚಮತ್ಕಾರವಾಗಿ ಉಪಯೋಗಿಸಿ, ಬರೆದದ್ದನ್ನೆಲ್ಲಾ ಮನಮೋಹಿಸುವಂತೆ ಮಾಡತಕ್ಕ ರೆಂಬ್ರೆಂಟನ ಶೈಲಿಯು ಆಗಿನ ಪ್ರಮುಖರಿಗೆ ಸರಿಬೀಳಲಿಲ್ಲ. ಈ ಪರಿಸ್ಥಿತಿಯಿಂದಲೇ ಈತನ ''ನೈಟ್‌ವಾಚ್'' ಎಂಬ ಚಿತ್ರವನ್ನು ಯಾರೂ ಮೋಹಿಸಲಿಲ್ಲ. ಈ ಚಿತ್ರದಲ್ಲಿ ಅನೇಕ ಡಚ್ ಮುಖಂಡರ ಮುಖಚಿತ್ರಗಳಿದ್ದರೂ, ಹಿಂದಿನ ಕ್ರಮದಂತೆ ಎಲ್ಲರ ಮುಖಗಳಿಗೂ ಒಂದೇ ಬಗೆಯ

ಪ್ರಾಮುಖ್ಯತೆ ಕೊಟ್ಟಿಲ್ಲ. ಇವರಲ್ಲಿ ಕೆಲವರ ಮೇಲೆ ಅತಿಶಯವಾಗಿ ಬೆಳಕು ಬಿದ್ದು ಅವರನ್ನು ಪ್ರಾಮುಖ್ಯರನ್ನಾಗಿ ಮಾಡಿದೆ. ಹಿಂದೆ ನಿಂತಿರುವಂತೆ ತೋರಿಸಿರುವ ಪ್ರಮುಖರಿಗೆಲ್ಲಾ ಅಸಮಾಧಾನದಿಂದ ಕೋಪಬಂದು ಅವನಿಗೆ ಉತ್ತೇಜನ ಕೊಡುವುದನ್ನೇ ನಿಲ್ಲಿಸಿದರು. ಜನಗಳ ಪ್ರೋತ್ಸಾಹ ನಿಂತಮೇಲೆ ಇವನಿಗೆ ಜೀವನ ನಡೆಯುವುದೇ ಕಷ್ಟವಾಯಿತು. ಸಾಲವೂ ಹೆಚ್ಚುತ್ತ ಬಂದು, ಸಾಲಗಾರರ ಬಾಧೆಯು ವಿಶೇಷವಾಯಿತು. ಸಾಲಗಾರರ ತಂಟೆ ತಪ್ಪಿಸಿಕೊಳ್ಳುವುದಕ್ಕಾಗಿ ಅವರಿಗೆಲ್ಲಾ ಚಿತ್ರಗಳನ್ನು ಉಚಿತವಾಗಿ ಬರೆದುಕೊಟ್ಟನು; ಆದರೂ ಅವರು ಹಿಂಸೆ ಮಾಡುವುದನ್ನು ಬಿಡಲಿಲ್ಲ. ಕಡೆಗೆ ಇವರ ಹಿಂಸೆಯನ್ನು ತಡೆಯಲಾರದೆ ಈತನು ಪಾಪರ್ ಅರ್ಜಿಯನ್ನು ಹಾಕಬೇಕಾಗಿ ಬಂದಿತು. ''ಕಷ್ಟಗಳು ಒಂಟಿಯಾಗಿ ಬರುವುದಿಲ್ಲ'' ಎಂಬ ನಾಣ್ಣುಡಿಯು ಈತನ ವಿಷಯದಲ್ಲಿ ಸತ್ಯವಾಯಿತು. ದುಃಖಪರಂಪರೆಯು ಬಂದೊದಗಿದವು. ಮೊದಲು ಮಕ್ಕಳು ಸತ್ತವು. ನಂತರ ಪ್ರೀತಿಪಾತ್ರಳಾದ ಹೆಂಡತಿಯು, ಟೈಟಸ್ ಎಂಬ ಸಣ್ಣ ಗಂಡುಮಗುವನ್ನು ಬಿಟ್ಟು ಸತ್ತಳು. ತನ್ನ ಸೇವಕಳಾಗಿದ್ದ ಹೆನ್ರಿ ಕೆಸ್ಟೋಫೆಲ್ಸ್ ಎಂಬುವಳನ್ನು ಮದುವೆ ಮಾಡಿಕೊಂಡರೂ ಈತನ ದುಃಖಗಳು ಕೊನೆಗಾಣಲಿಲ್ಲ. ಮೊದಲ ಹೆಂಡತಿಯಾದ ಸಾಸ್ಕಿಯಾ ನೆಂಟರು ಇವನ ಸೇವಕಳೊಡನೆ ಮದುವೆಯಾದುದು ಸರಿಯಲ್ಲವೆಂದೂ, ಮಾಸ್ಟರ್ ಟೈಟಸ್ಸಿನ ಪೋಷಣೆಯು ತಮ್ಮಲ್ಲಿರಬೇಕೆಂದೂ ದಾವಾಮಾಡಿ ಇವನನ್ನು ಪೀಡಿಸಿದರು. ಕೊಂಚ



ಟೈಟಸ್

ದಿವಸಗಳಲ್ಲಿಯೇ ಈತನ ಹೊಸ ಹೆಂಡತಿಯೂ ಗತಿಸಿಹೋದಳು. ತನ್ನ ಸಂಸಾರವು ಕೆಟ್ಟು ಹೋದರೂ, ಮಗನ ಸಂಸಾರ ಸುಖವನ್ನಾದರೂ ನೋಡಿ ಸಂತೋಷಪಡಬೇಕೆಂಬ ಈತನ ಆಶೆಯೂ ಕೈಗೂಡಲಿಲ್ಲ. ಗರ್ಭಿಣಿಯಾಗಿದ್ದ ಹೆಂಡತಿಯನ್ನು ಬಿಟ್ಟು ಮಗನು ಮೃತನಾದನು. ಈ ಬಗೆಯ ನಾನಾ ದುಃಖದಿಂದ ಬೆಂದಿದ್ದ ರೆಂಬ್ರೆಂಟನು ತನ್ನ ಉದರ ಭರಣಮಾಡಿಕೊಳ್ಳುವುದರ ಜೊತೆಗೆ ತನ್ನ ಸೊಸೆಯ ಸಂಸಾರವನ್ನೂ ನಡೆಸಬೇಕಾಗಿಬಂದಿತು. ದೇವರು, ವೃದ್ಧಾಪ್ಯದಲ್ಲಿ ಬಡತನದಿಂದ ನರಳುತ್ತಿದ್ದ ರೆಂಬ್ರೆಂಟನ ಕಷ್ಟವನ್ನು ನೋಡಲಾರದೆ ೬೩ನೇ ವಯಸ್ಸಿನಲ್ಲಿ ಆತನನ್ನು ತನ್ನ ಸನ್ನಿಧಿಗೆ ಕರೆಸಿಕೊಂಡನು. ಕಲೆಗಾಗಿ ತನ್ನ ಜೀವನವನ್ನು ತೇದು ಒಪ್ಪಿಸಿದ ರೆಂಬ್ರೆಂಟನ ಜೀವನಚರಿತ್ರೆಯು ಹೀಗೆ ಕಷ್ಟದಲ್ಲಿಯೇ ಪರ್ಯವಸಾನವಾಯಿತು. ಆದರೂ ಮೊನ್ನೆ ಮೊನ್ನೆಯವರಿಗೂ ಈತನ ಶೈಲಿಯನ್ನು ಅನುಮೋದಿಸಿ, ಅವನ ಚಿತ್ರಕಲೆಯ ಸೌಂದರ್ಯವನ್ನು ಜನಗಳು ಹೊಂದದಿರುವುದು ಶೋಚನೀಯವಾದುದು. ಈಚೀಚೆಗೆ ಈತನ ಚಿತ್ರಕೌಶಲ್ಯವನ್ನೂ, ಈತನ ಬಣ್ಣಗಳ ವಿಚಿತ್ರ ರೀತಿಯನ್ನೂ ಜನಗಳು ಅನುಮೋದಿಸಿರುವರು. ಈತನೇ ಡಚ್ ದೇಶದ ಚಿತ್ರಗಾರರಲ್ಲಿ ಪ್ರಾಮುಖ್ಯನೆಂದು ಗಣಿಸಲಾರಂಭಿಸಿರುವರು.

ರೆಂಬ್ರೆಂಟನು ತಾನು ಅನುಸರಿಸಿದ ಪ್ರತ್ಯೇಕ ಶೈಲಿಯಿಂದ ಜಗದ್ವಿಖ್ಯಾತನಾಗಿದ್ದಾನೆ. ಈಚಿನವರೆಗೂ ಇವನ ಶೈಲಿಯನ್ನು ಜನಗಳು ಪುರಸ್ಕರಿಸಿರಲಿಲ್ಲ. ಇವನ ವಿಷಯಗಳು ಗೊತ್ತಾದ ಹಾಗೆಲ್ಲಾ ಇವನ ಶೈಲಿಯ ಲಾವಣ್ಯವನ್ನು ಅನುಮೋದಿಸುತ್ತಿದ್ದಾರೆ. ಈತನ ಶೈಲಿಯನ್ನು ಈತನ ಪರಮಶಿಷ್ಯರಾದ ಬೋಲ್ಸ್, ಎಕಾರ್ಟ್ ಮತ್ತು ಜೆರಾರ್ಡ್ ಡ್ಯೂ ಮುಂತಾದವರು ಅನುಸರಿಸಲೆತ್ನಿಸಿದರೂ, ಈ ಕಲಾಭಿಜ್ಞನಷ್ಟು ನಿಪುಣತೆಯಿಂದ ಚಿತ್ರಿಸಿಲ್ಲ. ಇಂಗ್ಲೆಂಡ್ ದೇಶದ ಪ್ರಾಮುಖ್ಯ ಚಿತ್ರಗಾರನಾಗಿದ್ದ ರೇನಾಲ್ಡ್ಸ್ ಎಂಬ ಚಿತ್ರಗಾರನು ಮಾತ್ರ ತಕ್ಕಮಟ್ಟಿಗೆ ಈತನ ಶೈಲಿಯನ್ನು ಅನುಸರಿಸಿರುತ್ತಾನೆ. ರೇನಾಲ್ಡ್ಸ್, ಟರ್ನರ್ ಮತ್ತು ವೆಲಾಸ್ಕ್ವೆ ಮುಂತಾದವರ ಚಿತ್ರಗಳಂತೆಯೇ ಈತನ ಚಿತ್ರಗಳಲ್ಲಿಯೂ ಭಾಗಗಳನ್ನು ವಿಭಾಗಿಸಲು ಗೆರೆಗಳನ್ನು ಉಪಯೋಗಿಸಿದಂತೆ ಕಾಣುವುದಿಲ್ಲ. ಚಮತ್ಕಾರದಿಂದ ಚಿತ್ರಿಸಿದ ಮಚ್ಚೆಗಳು ಒಂದು ಭಾಗವನ್ನು ಮತ್ತೊಂದರಿಂದ ವಿಭಾಗಿಸುತ್ತವೆ. ಈತನ ವುಮನ್ ಟೇಕನ್ ಯಿನ್ ಅಡಲ್ಟರಿ, ಟೈಟಸ್, ರಿಟರ್ನ್ ಆಫ್ ದಿ ಪ್ರಾಡಿಗಲ್ ಸನ್ ಅಥವಾ ಇವನ ಮತ್ಯಾವ ಚಿತ್ರಗಳನ್ನಾಗಲೀ ನೋಡಿ. ಸ್ವತಃ ಚಿತ್ರಿಸಿರುವ ಆತನ ಭಾವಚಿತ್ರಗಳನ್ನು ನೋಡಿ. ಒಂದರಲ್ಲಾದರೂ ಗೆರೆಗಳು ಇದ್ದಂತೆಯೇ ಕಾಣಿಸುವುದಿಲ್ಲ. ಎಲ್ಲಿ ನೋಡಿದರೂ ಪಟ್ಟೆಪಟ್ಟೆಗಳ ಲಾವಣ್ಯವೇ ಹೊರ್ತು ಮೈಕೇಲ್ ಆನ್ಜೆಲೋ ಮುಂತಾದ ಚಿತ್ರಕಾರರ ಚಿತ್ರಗಳಲ್ಲಿ ಕಾಣುವಂತೆ ಚಿತ್ರಗಳನ್ನು ಗೆರೆಗಳು ಆವರಿಸಿಲ್ಲ.

ಉದ್ದ ಅಗಲ ಮಾತ್ರವಿರುವ ಕಾಗದದ ಮೇಲೆ ಅಥವಾ ಬಟ್ಟೆಯ ಮೇಲೆ ಪದಾರ್ಥಗಳ ದಪ್ಪ ಗಾತ್ರವನ್ನು ಪ್ರೇಕ್ಷಕರಿಗೆ ತೋರಿಸಬೇಕಾದರೆ ಮತ್ತು ಚಿತ್ರಗಾರರು ತಮ್ಮ ಚಿತ್ರಗಳಲ್ಲಿ ಬೆಳಕಿನ ವ್ಯತ್ಯಾಸಗಳನ್ನು ಸರಿಯಾಗಿ ತೋರಿಸಿ ಆ ಮೂಲಕ ಪದಾರ್ಥಗಳ ಗಾತ್ರವನ್ನು ತೋರಿಸುವರು. ಆದರೆ ರೆಂಬ್ರೆಂಟನಾದರೋ ಬೆಳಕನ್ನು ಇದೊಂದು ಕೆಲಸಕ್ಕೆ ಮಾತ್ರವೇ ಉಪಯೋಗಿಸದೆ, ಚಿತ್ರಗಳ ಲಾವಣ್ಯವನ್ನು ಹೆಚ್ಚು ಮಾಡುವುದಕ್ಕೂ ಬಹುಬುದ್ಧಿವಂತಿಕೆಯಿಂದ ಉಪಯೋಗಿಸಿದ್ದಾನೆ. ಈ ನಿಪುಣತೆಯು ಈತನನ್ನು ಲೋಕವಿಖ್ಯಾತನನ್ನಾಗಿ ಮಾಡಿದೆ. ಈ ಗುಣವು ಈತನ ಅನೇಕ ಚಿತ್ರದಲ್ಲಿ ಏಕೆ ಈತನು ಬರೆದಿರುವ ಎಲ್ಲ ಮುಖ್ಯ ಚಿತ್ರಗಳಲ್ಲಿಯೂ ಸಹಾ, ಕಂಡುಬರುತ್ತದೆ. ಈತನ ''ಪಶ್ಚಾತ್ತಾಪದಿಂದ ಹಿಂತಿರುಗಿದ ಮಗ'' ಎಂಬ ಚಿತ್ರದಲ್ಲಿ ಮುಖ್ಯವಾಗಿರುವ ತಂದೆ ಮತ್ತು ಆತನ ಬಳಿಗೆ ಪಶ್ಚಾತ್ತಾಪದಿಂದ ತೊಳಲಿ ಬಳಲಿ ಬಂದಿರುವ ಆತನ ಮಗ ಇವರುಗಳ ಮೇಲೆ ವಿಪರೀತವಾಗಿ ಬೆಳಕು ಬಿದ್ದಂತೆ ಕಾಣಿಸಿದೆ. ಚಿತ್ರಗಾರನಿಗೆ ಇವರಿಬ್ಬರೇ ಮುಖ್ಯವಾದವರು. ಇವರಿಬ್ಬರಲ್ಲೂ ಮಗನೇ ಅತಿ ಮುಖ್ಯನಾದವನು. ಈ ಮಗನ ಶರೀರದ ಮೇಲೆ ವಿಶೇಷವಾಗಿ ಬೆಳಕು ಬಿದ್ದಂತೆ ತೋರಿಸಿ ಇವನ ಶರೀರವೆಲ್ಲಾ ಪ್ರೇಕ್ಷಕರಿಗೆ ಕಾಣುವಂತೆ ಮಾಡಿ, ಈ ಹುಡುಗನ ಮುಖವೊಂದರ ಮೇಲೆಯೇ ನಮ್ಮ ದೃಷ್ಟಿಯು ನಿಲ್ಲದೆ ಆತನ ಶರೀರದ ಮೇಲೆಲ್ಲಾ ಹರಿದಾಡುವಂತೆ ಚಿತ್ರಕಾರನು ಆ ಹುಡುಗನ ಮುಖವನ್ನು ಪ್ರೇಕ್ಷಕರ ದೃಷ್ಟಿಗೆ ಪೂರ್ಣವಾಗಿ ಕಾಣದಂತೆ, ಒಂದು ಪಕ್ಕಕ್ಕೆ ತಿರುಗಿಸಿ, ಅದರ ಮೇಲೆ ಕೊಂಚ ಛಾಯೆಯನ್ನು ಬೀಳುವಂತೆ ಮಾಡಿದ್ದಾನೆ. ಇಲ್ಲಿ ಚಿತ್ರಕಾರನಿಗೆ ಬೇಕಾದದ್ದು ಮಗನೇ ಹೊರ್ತು, ಮಗನ ಮುಖವೊಂದೇ ಅಲ್ಲ. ಅದೂ ಅಲ್ಲದೆ ಮುಖದಲ್ಲಿ ತೋರಿಸಬಹುದಾದ ಭಾವಗಳನ್ನು ಚಿತ್ರಗಾರನು ಆ ಹುಡುಗನ ಶರೀರದಲ್ಲೇ ನಿಪುಣತೆಯಿಂದ ತೋರಿಸಿದ್ದಾನೆ. ಆ ಮಗನನ್ನು ಕರುಣದಿಂದ ಅಪ್ಪಿಕೊಂಡು, ಆತನ ಹಿಂದಿನ ತಪ್ಪುಗಳನ್ನೆಲ್ಲಾ ಮನ್ನಿಸುತ್ತಿರುವ ತಂದೆಯೂ ಮುಖ್ಯನಾದವನು. ಆದರೆ ಮಗನಷ್ಟು ಮುಖ್ಯನಾದವನಲ್ಲ. ಆದ್ದರಿಂದ ತಂದೆಯ ಅರ್ಧ ಶರೀರವೇ ನಮಗೆ ಕಾಣುತ್ತದೆ. ಮಗನ ಅಪರಾಧವನ್ನು ಕ್ಷಮಿಸಿ, ಆತನನ್ನು ಪ್ರೀತಿಯಿಂದ ತಬ್ಬಿಕೊಂಡು ಕಂಬನಿಗರೆಯುವ ತಂದೆಯ ಮುಖವನ್ನು ನಾವು ಈ ಚಿತ್ರದಲ್ಲಿ ಚೆನ್ನಾಗಿ ನೋಡಬಹುದು. ಉಳಿದ ವ್ಯಕ್ತಿಗಳು ಪ್ರಧಾನವಲ್ಲವಾದುದರಿಂದ ಅವುಗಳ ಮೇಲೆ ಇಷ್ಟೊಂದು ಬೆಳಕು ತೋರಿಸಲಿಲ್ಲ. ಈತನ ''ಹಾದರಗಿತ್ತಿಯಾದ ಹೆಂಗಸು'' ಎಂಬ ಚಿತ್ರದಲ್ಲೂ ಮುಖ್ಯ ವ್ಯಕ್ತಿಗಳ ಮೇಲೆ ಮಾತ್ರ ಬೆಳಕು



ಪಶ್ಚಾತ್ತಾಪದಿಂದ ಹಿಂದಿರುಗಿದ ಮಗ

ಬಿದ್ದು, ಅವರಿಗಿರುವ ಪ್ರಾಮುಖ್ಯತೆಯು ವ್ಯಕ್ತವಾಗುವಂತೆ ತೋರಿಸಿರುವನು; ಈ ಚಿತ್ರಪಟವನ್ನು ನೋಡಿ ದೊಡನೆಯೇ ಅಲ್ಲಿರುವ ತಪ್ಪಿತಸ್ಥಳಾದ ಹೆಂಗಸಿನ ಮೇಲೆ ನಮ್ಮ ದೃಷ್ಟಿಯು ಬೀಳುವುದು. ಅವಳ ಶಿರದಿಂದ ಪಾದದವರೆಗೂ ಬೆಳಕು ಬಿದ್ದು ಆ ವ್ಯಕ್ತಿಯ ಸಂಪೂರ್ಣ ರೂಪವು ಕಾಣಿಸುತ್ತದೆ. ದಯೆಯನ್ನು ತೋರಲು ದೈನ್ಯದಿಂದ ಬೇಡಿಕೊಳ್ಳುತ್ತಿರುವ ಮತ್ತೊಂದು ವ್ಯಕ್ತಿಯು ಆ ಬಳಿಕ ನಮ್ಮ ದೃಷ್ಟಿಪಥಕ್ಕೆ ಬರುತ್ತದೆ. ಈ ವ್ಯಕ್ತಿಯು ಹೆಂಗಸಿನಷ್ಟು ಪ್ರಾಮುಖ್ಯವಾಗಿಲ್ಲವಾದ್ದರಿಂದ, ಅದರ ಮೇಲೆ ಅಷ್ಟು ಬೆಳಕು ಬೀಳದೆ ಆ ವ್ಯಕ್ತಿಯ ಮಂಡಿಯ ತನಕ ನಮಗೆ ಕಾಣಿಸುತ್ತದೆ. ಈ ವ್ಯಕ್ತಿಗೂ ಹೆಂಗಸಿಗೂ ಮಧ್ಯನಿಂತು, ಅವಳ ಮೇಲೆ ದೋಷಾರೋಪಣೆ ಮಾಡುತ್ತಿರುವ ವ್ಯಕ್ತಿಯ ಕಡೆ ನೋಡಲು, ಆದರ ಕೈಮಾತ್ರ ಬಹಳ ವಿಜೃಂಭಣೆಯಿಂದ ಕಂಡು ಮತ್ತೆ ಉಳಿದ ಭಾಗವೆಲ್ಲಾ ಅಷ್ಟು ಸ್ಪಷ್ಟವಾಗಿಲ್ಲ. ಈ ಹಸ್ತಕ್ಕೆ ಕೊಟ್ಟಿರುವ ಪ್ರಾಮುಖ್ಯತೆಯಿಂದ ಅವಳ ಮೇಲೆ ಮಾಡುತ್ತಿರುವ ಆಪಾದನೆಯ ಕ್ರೂರತ್ವವು ನಮ್ಮ ಮನಸ್ಸಿಗೆ ತತ್‌ಕ್ಷಣ ಹೊಳೆಯುತ್ತದೆ. ಆ ಗುಂಪಿನಲ್ಲಿ ನಿಂತಿರುವ ಇತರ ವ್ಯಕ್ತಿಗಳ ಶರೀರಗಳು ಅಷ್ಟು ವ್ಯಕ್ತವಾಗಿ ಕಾಣಿಸುವುದಿಲ್ಲ. ಎಲ್ಲವೂ ಮಾಸಲು ಮಾಸಲಾಗಿ ಕಾಣುತ್ತವೆ. ಈ ಚಿತ್ರದಲ್ಲಿ ಮತ್ತೊಂದು ಚಮತ್ಕಾರ ಮಾಡಿರುವನು. ಒಟ್ಟು ಚಿತ್ರವೂ ಹಿಂಭಾಗ ಮುಂಭಾಗಗಳಾಗಿ ಕತ್ತರಿಸಿದಂತೆ ಕಂಡು ಬರುವುದು. ಎರಡು ಭಾಗಕ್ಕೂ ಪರಸ್ಪರ ಸಂಬಂಧವಿಲ್ಲದಂತೆ ಇದ್ದಿದ್ದರೆ ಮೇಲ್ಭಾಗವೆಲ್ಲಾ ಛಾಯೆಯಿಂದ ತುಂಬಿ ಕೆಳಭಾಗದಲ್ಲಿ ಮಾತ್ರ ಬೆಳಕು ಬಿದ್ದು ಚಿತ್ರವು ನೋಡಲ ಸಹ್ಯವಾಗಿ ಕಾಣುತ್ತಿತ್ತು. ಈ ನ್ಯೂನತೆಯನ್ನು ಸರಿಮಾಡಲು ಚಿತ್ರಗಾರನು ಮುಖ್ಯವಾದ ಗುಂಪಿನಲ್ಲಿರುವ ವ್ಯಕ್ತಿಗಳನ್ನು ನೆಲದಮೇಲೆ ನಿಲ್ಲಿಸಿ, ಎರಡನೆಯ ಅಂತಸ್ತಿನಲ್ಲಿ ಒಂದು ದರ್ಬಾರು ನಡೆಯುವಂತೆ ಉಪಚಿತ್ರವನ್ನು ಬರೆದು ಕೆಳಗಿನ ಚಿತ್ರಕ್ಕೂ ಮೇಲಿರುವ ಉಪಚಿತ್ರಕ್ಕೂ ಸಂಬಂಧವನ್ನು ಕಲ್ಪಿಸುವುದಕ್ಕೋಸ್ಕರ ಬಲಗಡೆ ಕಂಡುಬರುವ ಎರಡು ಕಂಬಗಳನ್ನು ಹೂಡಿ, ಅವುಗಳ ಮೇಲೆ ಭಾರಿಯಾಗಿ ಬೆಳಕು ಬಿದ್ದು ನಮ್ಮ ದೃಷ್ಟಿಯನ್ನು ಎಳೆಯುವಂತೆ ಮಾಡಿದ್ದಾನೆ. ಆ ಕಂಬಗಳನ್ನು ದೃಷ್ಟಿಸಿ ನೋಡಿದಲ್ಲಿ ನಮ್ಮ ದೃಷ್ಟಿಯು ಮೇಲಿನಿಂದ ಕೆಳಕ್ಕೆ ಬಂದು ಕೆಳಗೆ ಬೆನ್ನು ಪಾರೆಮಾಡಿಕೊಂಡು ನಿಂತಿರುವ ಎರಡು ವ್ಯಕ್ತಿಗಳ ಮೇಲೆ ಬಿದ್ದು ದುಃಖಿಸುತ್ತಿರುವ ಅಬಲೆಯ ಸೆರಗಿನ ಮೂಲಕ ಅವಳ ಶರೀರದ ಮೇಲೆ ಬಿದ್ದು ನಮಗೆ ಪಶ್ಚಾತ್ತಾಪವನ್ನುಂಟುಮಾಡುವುದು. ಅಲ್ಲಿಂದ ಮುಂದೆ ದೃಷ್ಟಿಯು ಮುಂದುವರಿಯಲು ಆಶಿಸುವಂತೆಯೇ ಕಾಣಿಸುವುದಿಲ್ಲ. ಪ್ರೇಕ್ಷಕನು ದುಃಖಿಸುವ ಅಬಲೆಯನ್ನು ವಿವರವಾಗಿ ನೋಡಿದ ಮೇಲೆ ಅವಳೆದುರಿಗಿರುವ ವ್ಯಕ್ತಿಯ ಮೇಲೆ ದೃಷ್ಟಿಯು ಹಾರಿ ಆತನ ಕಣ್ಣುಗಳ ರೀತಿಯಿಂದ ಪುನಃ ಆ ಅಬಲೆಯ ಮೇಲೆಯೇ ಬೀಳುವುದು. ಹೀಗೆ ಹಿಂತಿರುಗಿ ಅಬಲೆಯ ಮೇಲೆ ದೃಷ್ಟಿಯು ಬೀಳುವಾಗ ಅಪಾದನೆಯನ್ನು ಮಾಡುತ್ತಿರುವ ವ್ಯಕ್ತಿಯ ಹಸ್ತದ ಮೂಲಕ ನಮಗೆ ಗೋಚರವಾಗುವುದು. ಆ ವ್ಯಕ್ತಿಯ ಹಸ್ತದ ರೀತಿಯನ್ನು ನೋಡಿ. ಬೆಟ್ಟುಗಳೆಲ್ಲವೂ ಅಬಲೆಯ ಕಡೆ ತೋರಿಸುತ್ತಾ ಅವಳ ಕಡೆ ನಮ್ಮ ನೋಟವನ್ನು ಎಳೆಯುವುವು. ಸುತ್ತುಮುತ್ತಲಿರುವ ವ್ಯಕ್ತಿಗಳನ್ನು ನೋಡಿ : ಅವುಗಳಲ್ಲಿ ಅನೇಕವು ಈ ಅಬಲೆಯ ಕಡೆ ಬಾಗಿಕೊಂಡು ಅವಳನ್ನು ನೋಡಿ ಅವಳಿಗೋಸ್ಕರ ಪಶ್ಚಾತ್ತಾಪಪಡುತ್ತಾ ನಮ್ಮ ದೃಷ್ಟಿಯನ್ನೆಲ್ಲಾ ಸಂಪೂರ್ಣವಾಗಿ ಅವಳ ಕಡೆಗೆ ಎಳೆಯುತ್ತವೆ. ಕ್ಷಮಿಸಲು ನಿಂತಿರುವ ಮನುಷ್ಯನ ಎಡಗಡೆ ನಿಂತಿರುವ ವ್ಯಕ್ತಿಗಳೆಲ್ಲವೂ ಆತನು ಏನು ಮಾಡುವನೋ ಎಂದು ಕುತೂಹಲದಿಂದ ಆತನ ಕಡೆ ನೋಡಿ, ಅವನ ದೃಷ್ಟಿಯ ಮೂಲಕ ಪುನಃ ಆ ಅಬಲೆಯ ಕಡೆಗೆ ನಮ್ಮ ಮನಸ್ಸನ್ನು ಎಳೆಯುವುವು. ಮಧ್ಯದಲ್ಲಿ ನಿಂತಿರುವ ವ್ಯಕ್ತಿಯ ಮೇಲೆ ಬಿದ್ದಿರುವ ಬೆಳಕಿನ ರೀತಿಯನ್ನು ನೋಡಿ. ಅವನ ಶಿರದಿಂದ ಹೊರಟು ಅವನ ಮೈಮೇಲೆ ಸೊಟ್ಟವಾಗಿ ಹರಿದು ಅರ್ಧ ಚಕ್ರದೋಪಾದಿಯಲ್ಲಿ ನೆಲದ ಮೇಲೆ ಬಿದ್ದು ಮುಖ್ಯ ವ್ಯಕ್ತಿಯ ಮೇಲೆ ಬಿದ್ದು ಕಡೆಗೆ ಬಲಪಾರ್ಶ್ವದ ಕಡೆ ಹೊರಟು, ಮಾಸಲಾಗುತ್ತದೆ. ಇದರಿಂದ ನಮ್ಮ ದೃಷ್ಟಿಯೆಲ್ಲವೂ ಸಂಪೂರ್ಣವು ಅವಳ ಮೇಲೆ ಬೀಳುವಂತಾಗುತ್ತದೆ. ಹಿಂದುಗಡೆ ದೂರದಲ್ಲಿ ಕಾಣಬರುವ ಕಂಬವು ಚಿತ್ರದ ಅಗಲವನ್ನು ಸಮನಾಗಿ ವಿಭಾಗಿಸಿದಂತೆ ಕಾಣುವುದು. ಇದರ ಮೇಲೆ ನಮ್ಮ ದೃಷ್ಟಿಯು ಬಿದ್ದ ತಕ್ಷಣವೇ ಕಂಬದ ಮೂಲಕ ಹರಿದು ಕೆಳಗೆ ನಿಂತಿರುವ ಮುಖ್ಯವಾದ ಗುಂಪಿನ ಕಡೆ ಬೀಳುವುದು. ಕಂಬದ ಬಲಕ್ಕೆ ಇರುವ ಬಾಗಿಲು ಕಂಬದ ಸೊಗಸನ್ನು, ಅದರ ಗಾತ್ರವನ್ನು ನಮ್ಮ ದೃಷ್ಟಿಗೆ ತರುವುದಲ್ಲದೆ ಚಿತ್ರದ ಮುಖ್ಯ ವ್ಯಕ್ತಿಯ ಕಡೆಗೆ ನಮ್ಮ ದೃಷ್ಟಿಯನ್ನು ಎಳೆದು ವ್ಯಕ್ತಿಗೆ ತಕ್ಕ ಗೌರವವನ್ನು ಕೊಡುತ್ತದೆ. ಕಂಬಕ್ಕೂ ಅದರ ಪಕ್ಕದಲ್ಲಿರುವ ಬಾಗಿಲಿಗೂ ಬೆಳಕು ಬಿದ್ದಂತೆ ತೋರಿಸಿದ್ದರೆ ಚಿತ್ರವು ಎರಡು ಭಾಗವಾಗಿ ಹರಿದಂತೆ ಕಾಣುವುದಲ್ಲದೆ ಕಂಬವೂ, ಬಾಗಿಲೂ ಕೆಳಗೆ ನಿಂತಿರುವ ವ್ಯಕ್ತಿಗಳ ತಲೆಯ ಮೇಲೆ ಕೂತುಕೊಂಡಿರುವಂತೆ ಕಾಣಬರುತ್ತಿತ್ತು. ಈ ದುರ್ದೆಶೆಯು ಬಾರದಂತೆ


ರೆಂಬ್ರೆಂಟ್‌ರ ಒಂದು ರೇಖಾಚಿತ್ರ

ಕಂಬದ ಮೇಲೂ, ಬಾಗಿಲಿನ ಮೇಲೂ ಬೆಳಕು ಬಿದ್ದಿಲ್ಲ. ಹೀಗೆಯೇ ಈತನು ತನ್ನ ಇತರ ಚಿತ್ರಗಳಲ್ಲಿಯೂ ಚಮತ್ಕಾರವಾಗಿ ಬೆಳಕನ್ನೂ, ಛಾಯೆಯನ್ನೂ ಉಪಯೋಗಿಸಿ ಮನ ಒಪ್ಪುವಂತೆ ಮಾಡಿರುತ್ತಾನೆ.

ವ್ಯಕ್ತಿಗಳು ಗುಂಪುಗುಂಪಾಗಿರುವ ಚಿತ್ರಗಳೊಂದರಲ್ಲಿ ಮಾತ್ರವೇ ಅಲ್ಲದೆ, ಒಂದೇ ವ್ಯಕ್ತಿಗಳನ್ನೊಳಗೊಂಡ ಮುಖ ಚಿತ್ರಗಳಲ್ಲಿಯೂ ಈತನು ಈ ಚಮತ್ಕಾರವನ್ನು ತೋರಿಸಿದ್ದಾನೆ. ಚಿತ್ರಗಾರನ ಮಗನಾದ ಟೈಟಸ್ಸಿನ ಚಿತ್ರವನ್ನು ನೋಡಿದರೆ, ಚಿತ್ರದಲ್ಲಿರುವ ಹುಡುಗನ ಕಡೆಗೇ ಮನಸ್ಸು ಎಳೆಯುವುದು. ಚಿತ್ರದ ಮತ್ತೆಲ್ಲಿಯೂ ಬೆಳಕು ಬೀಳದೆ ಹುಡುಗನ ಮುಖದ ಮೇಲೆಯೇ ಬೆಳಕು ವಿಪರೀತವಾಗಿ ಬಿದ್ದು, ನಮ್ಮ ದೃಷ್ಟಿಯು ಹುಡುಗನ ಮುಖದ ಕಡೆಗೇ ಸೆಳೆಯುತ್ತದೆ. ತಲೆಯಿಂದ ಭುಜದ ತನಕ ಬಂದಿರುವ ಗುಂಗುರುಗುಂಗುರಾಗಿ ಬಿದ್ದಿರುವ ಕೂದಲಿನ ಮೇಲೆ ಅಲ್ಲಲ್ಲಿ ಬಿದ್ದಿರುವ ಬೆಳಕೂ, ಹುಡುಗನ ಉಡುಪಿನ ಮೇಲೆ ಸರದಂತಿರುವ ಪದಾರ್ಥದ ಮೇಲೆ ಬಿದ್ದಿರುವ ಬೆಳಕೂ ಸೇರಿ ಹುಡುಗನ ಮುಖವನ್ನು ಆವರಿಸಿಕೊಂಡಿರುವ ಕೋಳಿಮೊಟ್ಟೆಯಂತೆ ಕಾಣುತ್ತದೆ. ಇದರಿಂದ ನಮ್ಮ ದೃಷ್ಟಿ ಅಲ್ಲಿ ಬಿದ್ದರೂ ಕೂಡಲೇ ಅದು ಮುಖದ ಕಡೆಗೆ ಎಳೆಯುತ್ತದೆ. ಚಿತ್ರದ ಕೆಳಗಿನ ಮೂಲೆಗಳಿಂದ ಹೊರಟಿರುವ ಬೆಳಕನ್ನು ನೋಡಿ. ಮೂಲೆಗಳಿಂದ ಅಗಲವಾಗಿ ಹೊರಟು ಭುಜದೆಡೆಗೆ ಬರುವಾಗ ಮೊನೆಯಾಗಿ ಮತ್ತೆ ನಮ್ಮ ದೃಷ್ಟಿಯನ್ನು ಹುಡುಗನ ಮುಖದ ಕಡೆಗೆ ಸೆಳೆಯುತ್ತದೆ. ಈ ಚಿತ್ರದಲ್ಲಿ ಚಿತ್ರಗಾರನು ಹುಡುಗನ ಗಲ್ಲದ ರೂಪವನ್ನು ಹೆಚ್ಚಿಸಲು ಮಾಡಿರತಕ್ಕ ಉಪಾಯವು ಬಹಳ ಆಶ್ಚರ್ಯವಾಗಿರುವುದು. ಹುಡುಗನ ಎದೆಯ ಮೇಲೆ ಹರಿದಾಡುವ ಅವನ ಹಾರವು ಆತನ ಗಲ್ಲದ ರೂಪವನ್ನೇ ಅನುಸರಿಸಿ ಆತನ ಗಲ್ಲದ ರೂಪಕ್ಕೆ ಉತ್ತೇಜನವನ್ನು ಕೊಡುತ್ತದೆ. ಈ ಸರದಿಂದ ಚಿತ್ರದ ಕೆಳಭಾಗದ ತನಕ ಬಂದಿರುವ

ಛಾಯೆಯೂ ಇದೇ ಕಾರ್ಯವನ್ನು ಮಾಡುತ್ತದೆ. ಹುಡುಗನ ಬಲಗಣ್ಣಿನ ಕಡೆ ನಮ್ಮ ದೃಷ್ಟಿಯು ಹೋಗುವಂತೆ ಮಾಡಿರುವ ಚಮತ್ಕಾರವೂ ಹೀಗೆಯೇ. ಈತನು ಚಿತ್ರಿಸಿರುವ ಇವನ ಎರಡನೇ ಹೆಂಡತಿ ''ಹೆಂಡ್ರಿ ಕೆಸ್ಟೋಫೆಲ್ಸ್''ಯವಳ ಚಿತ್ರವನ್ನು ನೋಡಿದರೂ ಈತನು ಮುಖ್ಯ ಪಾತ್ರಗಳಲ್ಲಿ ತೋರಿಸಿರತಕ್ಕ ನಿಪುಣತೆಯು ಕಂಡುಬರುವುದು ! ಅವಳ ಮುಖದ ಮೇಲೆ ಬೆಳಕು ಬಿದ್ದು ಅವಳ ಎದೆ ಮತ್ತು ಹಸ್ತಗಳ ಮೇಲೆ ಓಡಾಡುತ್ತದೆ. ಅವಳ ಬಲಹಸ್ತದ ಮೇಲೆ ಬಿದ್ದ ಬೆಳಕು ನಮ್ಮ ದೃಷ್ಟಿಯನ್ನು ಆಕರ್ಷಿಸಿ ಮುಂಗೈ ಮೂಲಕ ಹರಿದು ಅವಳ ಉಡುಪಿನ ಮಾರ್ಗವಾಗಿ ಜೊತೆಯಾಗಿ ಹರಿದು ಅವಳ ಎಡ ಹಸ್ತವನ್ನು ತಲಪಿ ಎಡಗೈ ಮೂಲಕ ಭುಜದಿಂದ ಅವಳ ಮುಖವನ್ನು ಸೇರುತ್ತದೆ. ಅದೇ ಬಲಹಸ್ತದ ಮೇಲೆ ಬಿದ್ದ ಮತ್ತೊಂದು ದೃಷ್ಟಿಯು ಅರ್ಧ ಚಂದ್ರದಂತೆ ಅವಳ ಬಲಗೈ ಮೂಲಕ ಹರಿದು ಮುಖವನ್ನು ಅವಸರವಾಗಿ ಸೇರುತ್ತದೆ. ಇವೆರಡೂ ನಮ್ಮ ದೃಷ್ಟಿಯನ್ನು ಆಕರ್ಷಿಸಿ ಚಂದ್ರ ದಂತಿರುವ ಅವಳ ಮುಖಕ್ಕೆ ನಮ್ಮ ಮನಸ್ಸನ್ನು ಎಳೆಯುತ್ತವೆ. ಅವಳ ತಲೆಗೆ ಕಟ್ಟಿರುವ ಬಟ್ಟೆಯ ಮೇಲೆ ಬಿದ್ದ ಬೆಳಕು ಮುಂಗುರುಳಿನಿಂದ ಹೊರಟು ತಲೆಯನ್ನು ಆವರಿಸಿ ಅವಳ ಕತ್ತಿನ ಮಾರ್ಗವಾಗಿ ಹೊರಟು ಬಲಭುಜವನ್ನು ಸೇರಿ ಸುಂದರವಾದ ತಲೆಯ ಸುತ್ತಲೂ ಒಂದು ಚಕ್ರವನ್ನು ಚಿತ್ರಿಸುತ್ತದೆ : ತಲೆಯ ಸುತ್ತಲೂ ಈ ಚಕ್ರವಿರುವುದರಿಂದ ಚಕ್ರದ ಮಧ್ಯದಲ್ಲಿರುವ ಅವಳ ಮುಖವು ನಮ್ಮ ದೃಷ್ಟಿಗೆ ಬೀಳದೇ ಹೋಗುವುದಿಲ್ಲ. ಟೈಟಸ್‌ನ ಚಿತ್ರದಲ್ಲಿದ್ದಂತೆಯೇ ಇವಳ ಕೊರಳಲ್ಲಿರುವ ಕರೀದಾರದ ಸರವೂ, ಅವಳ ಕತ್ತಿನಿಂದ ಇಳಿದು ಬಂದಿರುವ ಉಡುಪೂ ಇವಳ ಬಲ ಪಾರ್ಶ್ವದಲ್ಲಿ ಕಾಣಬರುವ ಅವಳ ಸೆರಗೂ ಎಲ್ಲ ಊರಿ ಅವಳ ಮುಖದ ಬಿಂಬದ ರೂಪವನ್ನು ನಮ್ಮ ಮನಸ್ಸಿಗೆ ತೋರುವಂತೆ ಮಾಡುತ್ತಿವೆ. ಹೀಗೆಯೇ ಅವಳ ಎಡಗಣ್ಣು ಅವಳ ತುಟಿ ಮುಂತಾದವುಗಳ ಲಾವಣ್ಯವನ್ನು ತೋರಿಸುವುದಕ್ಕೆ ಮಾಡಿರುವ ಉಪಾಯಗಳೂ ಶ್ಲಾಘ್ಯವಾದುವು. ಹೀಗೆಯೇ ಈತನು ತಾನು ಚಿತ್ರಿಸಿರುವ ಇತರ ಮುಖ್ಯ ಚಿತ್ರಗಳಲ್ಲಿಯೂ ಇದೇ ಚಮತ್ಕಾರವನ್ನು ತೋರಿಸಿ ಹೃದಯಂಗಮವಾಗುವಂತೆ ಮಾಡಿದ್ದಾನೆ. ತನ್ನ ಕಾಲದವರೆವಿಗೂ ವಿಧಿಯಿಲ್ಲದೆ ತೋರಿಸಬೇಕಾಗಿದ್ದ ಬೆಳಕೂ ಛಾಯೆಯೂ ಇವನ ಕೈಯಲ್ಲಿ ರೂಪವನ್ನೂ ಸೌಂದರ್ಯವನ್ನೂ ಕೊಡುವ ಸಾಧಕಗಳಾದವು. ಈತನು ವ್ಯಕ್ತಿಗಳ ದಪ್ಪ ಗಾತ್ರವನ್ನು ತೋರಿಸುವುದಕ್ಕೆ ಬೆಳಕನ್ನೂ ಛಾಯೆಯನ್ನೂ ಉಪಯೋಗಿಸುವುದು ಮಾತ್ರವಲ್ಲದೆ ಬಣ್ಣಗಳಂತೆ ಇವುಗಳನ್ನು ಚಿತ್ರಗಾರನ ಸಾಮಗ್ರಿಗಳಾಗಿ ಉಪಯೋಗಿಸಿ ತನ್ನ ಚಿತ್ರಗಳನ್ನು ಅತಿ ಶ್ರೇಷ್ಠವುಗಳನ್ನಾಗಿ ಮಾಡಿದ್ದಾನೆ. ಇವುಗಳನ್ನು ಉಪಯೋಗಿಸುವ ರೀತಿಯಲ್ಲಿ ಕೂಡಾ ಇವನಿಗೂ ಇತರರಿಗೂ ಬಹಳ ವ್ಯತ್ಯಾಸವಿದೆ. ಇವನ ಕೈಕೆಳಗೆ ತರಬೇತಾಗಿ ಈತನನ್ನೇ ಉದಾಹರಣೆಯಾಗಿಟ್ಟುಕೊಂಡು; ಈತನ ಪದ್ಧತಿಯನ್ನೇ ಅನುಸರಿಸಿದ ಇವನ ಶಿಷ್ಯರುಗಳ ಚಿತ್ರಗಳಿಗೂ ಇವನ ಚಿತ್ರಗಳಿಗೂ ಬಹಳ ವ್ಯತ್ಯಾಸವಿದೆ. ಶಿಷ್ಯರೆಲ್ಲರೂ ಅವನಂತೆಯೇ ಮಾಡಲೆತ್ನಿಸಿ ಬೆಳಕನ್ನೂ ಸಾಮಗ್ರಿಯಾಗಿ ಉಪಯೋಗಿಸಿದ್ದರೂ ಆತನು ಮಾಡಿರುವಷ್ಟು ಚಮತ್ಕಾರವಾಗಿ ಮಾಡಿಲ್ಲ. ಅವರೆಲ್ಲರೂ ಬೆಳಕನ್ನು ವಿಪರೀತವಾಗಿ ತಮ್ಮ ಚಿತ್ರದಲ್ಲಿ ತೋರಿಸಿ ತಮ್ಮ ಗುರುವಿಗೂ ತಮಗೂ ಇರುವ ವ್ಯತ್ಯಾಸವನ್ನು ತೋರ್ಪಡಿಸಿಕೊಂಡಿದ್ದಾರೆ. ರೆಂಬ್ರೆಂಟನ ಚಿತ್ರಗಳಲ್ಲಿ ಬೆಳಕು ಒಂದು ಸಾಮಗ್ರಿಯಂತೆ ಉಪಯೋಗಿಸಲ್ಪಟ್ಟಿದ್ದರೂ, ಅದಕ್ಕೆ ಉನ್ನತ ಪದವಿ ಬಂದಿಲ್ಲ. ಅದೂ ಇತರ ಸಾಮಗ್ರಿಗಳಂತೆ ತನಗೆ ತಕ್ಕ ಸ್ಥಾನದಲ್ಲಿಯೇ ಇದೆ. ಇವನ ಚಿತ್ರಗಳಲ್ಲಿ ಬೆಳಕು, ಛಾಯೆಯ ಮಧ್ಯದಿಂದ ಕದ್ದುಬಂದು ತನ್ನ ಕರ್ತವ್ಯವನ್ನು ಅನುಸರಿಸುವಂತೆ ಕಾಣುತ್ತದೆ. ಇದೇ ಇವನ ಚಿತ್ರಗಳಿಗೂ, ಇವನ ಶಿಷ್ಯರುಗಳ ಚಿತ್ರಗಳಿಗೂ ಇರುವ ವ್ಯತ್ಯಾಸ.

ಮೇಲೆ ಹೇಳಿದ ಚಿತ್ರಗಳಲ್ಲದೆ ರೆಂಬ್ರೆಂಟನು ಇನ್ನೂ ಅನೇಕ ಪ್ರಖ್ಯಾತವಾದ ಚಿತ್ರಗಳನ್ನು ಬರೆದಿದ್ದಾನೆ. ರೆಂಬ್ರೆಂಟನು ಚಿತ್ರಿಸಿರತಕ್ಕ ಮುಖಚಿತ್ರಗಳಿಗೂ ಉಳಿದ ಚಿತ್ರಗಾರರ ಮುಖಚಿತ್ರಗಳಿಗೂ ವ್ಯತ್ಯಾಸವಿದೆ. ಉಳಿದವರಂತೆ ಹೊರಗೆ ಕಾಣುವ ಶರೀರದ ರೂಪವನ್ನು ಮಾತ್ರವೇ ತೋರಿಸದೆ ಅದರ ಜೊತೆಗೆ ಆತನು ವ್ಯಕ್ತಿಯ ಆತ್ಮದ ರೂಪವನ್ನೂ ತೋರಿಸಲೆತ್ನಿಸುತ್ತಿದ್ದನು. ಆತನು ಚಿತ್ರಿಸಿರುವ ತನ್ನ ಚಿತ್ರಗಳಲ್ಲಿಯೂ, ಟೈಟಸ್, ಓಲ್ಡ್ ವುಮನ್, ಮ್ಯಾನ್ ಇನ್ ಆರ್ಮರ್ ಎಂಬ ಚಿತ್ರಗಳಲ್ಲಿ ಈತನ

ಮುಖಚಿತ್ರಗಳನ್ನು ಚಿತ್ರಿಸಿರುವ ರೀತಿಯು ಗೊತ್ತಾಗುತ್ತದೆ. ಚಿತ್ರವನ್ನು ನೋಡಿದ ಕೂಡಲೇ ಚಿತ್ರದಲ್ಲಿರುವ ವ್ಯಕ್ತಿಯ ಗುಣರೂಪಗಳನ್ನು ತಿಳಿಯಬಹುದು. ಈತನು ಬಹು ಅಪರೂಪವಾಗಿ ನಗ್ನ ಚಿತ್ರಗಳನ್ನು ಬರೆಯುತ್ತಿದ್ದನು. ನಾನಾ ವರ್ಣಗಳಿಂದ ಕೂಡಿದ ಉಡುಪನ್ನು ಧರಿಸಿದ್ದ ವ್ಯಕ್ತಿಗಳನ್ನು ಬರೆಯಲು ಬಹು ಇಷ್ಟ. ಆದರೂ ಕೆಲವು ನಗ್ನ ವ್ಯಕ್ತಿಗಳನ್ನುಳ್ಳ ಚಿತ್ರಗಳನ್ನು ಬರೆದಿರುತ್ತಾನೆ. ಇವುಗಳಲ್ಲಿ 'ಡ್ಯಾನೇ' ಎಂಬ ಚಿತ್ರವು ಪ್ರಾಮುಖ್ಯವಾದುದು.

ಈತನ ಚಿತ್ರರಚನೆಯ ಕ್ರಮವು ರೆಂಬ್ರೆಂಟನ ನಿಪುಣತೆಯನ್ನು ತೋರಿಸುತ್ತದೆ. ಈತನ ಚಿತ್ರಗಳಲ್ಲೆಲ್ಲಾ ಸುಲಭವಾಗಿ ಗುರ್ತಿಸಬಹುದಾದ ತ್ರಿಕೋಣಾಕೃತಿಯುಳ್ಳ ವ್ಯಕ್ತಿಗಳನ್ನು ಜೋಡಿಸಿದ್ದಾನೆ. ಮುಖ್ಯವಾದ ವ್ಯಕ್ತಿಗಳ ಕಡೆಗೆ ನಮ್ಮ ದೃಷ್ಟಿಯು ಹೋಗುವಂತೆ ಕಂಬಗಳನ್ನು ಬಾಗಿಲುವಾಡಗಳನ್ನು ಉಪಯೋಗಿಸಿದ್ದಾನೆ. ಪ್ರೇಕ್ಷಕರ ದೃಷ್ಟಿಯು ಚಿತ್ರದಿಂದಾಚೆಗೆ ಚಲಿಸದೆ ಚಿತ್ರದಲ್ಲಿಯೇ ದೃಷ್ಟಿಯು ಸ್ಥಳದಿಂದ ಸ್ಥಳಕ್ಕೆ ಓಡಾಡುವಂತೆ ವ್ಯಕ್ತಿಗಳನ್ನೂ, ಪದಾರ್ಥಗಳನ್ನೂ ಜೋಡಿಸಿ ಅವುಗಳ ಮೇಲೆ ಅನುಗುಣವಾಗಿ ಛಾಯಾ ತೇಜಗಳು ಬೀಳುವಂತೆ ಮಾಡಿದ್ದಾನೆ. ತಾನು ಚಿತ್ರಿಸಿರುವ ಮುಖಚಿತ್ರಗಳಲ್ಲಿಯೂ ಈತನು ಈ ಕ್ರಮವನ್ನು ಅನುಸರಿಸಿದ್ದಾನೆ. ಅವನಲ್ಲಿ ಮತ್ತೊಂದು ಅಭ್ಯಾಸವಿತ್ತು. ಒಂದೇ ವಿಷಯವನ್ನು ಅನೇಕ ವೃತ್ತಿ ವಿವಿಧ ರೀತಿಯಿಂದ ಬರೆಯುವ ಅಭ್ಯಾಸವನ್ನಿಟ್ಟದ್ದನು. ಒಂದೊಂದು ವೇಳೆ ಒಂದೊಂದು ತರಹೆ ಉಡುಪನ್ನು ಧರಿಸಿದ್ದಂತೆಯೇ ಈತನು ತನ್ನನ್ನು ತಾನೇ ಚಿತ್ರಿಸಿಕೊಂಡಿದ್ದಾನೆ. ತನ್ನ ಇಬ್ಬರು ಹೆಂಡತಿಯರನ್ನೂ ಹೀಗೆಯೇ ಅನೇಕ ವೇಳೆ ಚಿತ್ರಿಸಿದ್ದಾನೆ.

ಈತನ ಸ್ವತಂತ್ರ ಬುದ್ಧಿಯೂ, ಪ್ರತಿಭಾಶಕ್ತಿಯೂ, ಚಿತ್ರಿಸಿರುವ ವಿಷಯಗಳಲ್ಲಿ ಈತನ ಐಕ್ಯವೂ, ಈತನ ವಿಚಿತ್ರವಾದ ಬೆಳಕಿನ ಕ್ರಮವೂ, ರೂಪವನ್ನು ತೋರಿಸುವ ವಿಧವೂ, ಮನಒಪ್ಪುವ ವರ್ಣವೂ, ವಿಷಯಗಳನ್ನು ತೋರಿಸುವುದರಲ್ಲಿ ಹೃದಯಂಗಮವಾದ ಈತನ ರೀತಿಯೂ, ಈತನನ್ನು ಯೂರೋಪ್ ದೇಶದಲ್ಲೆಲ್ಲಾ ಶ್ರೇಷ್ಠ ಚಿತ್ರಗಾರರಲ್ಲಿ ಒಬ್ಬನನ್ನಾಗಿ ಮಾಡಿದುದಲ್ಲದೆ; ಹಾಲೆಂಡ್ ದೇಶದ ಶೈಲಿಗೆ ಇವನನ್ನು ಆದರ್ಶಪ್ರಾಯನನ್ನಾಗಿ ಮಾಡಿವೆ. ಈತನಲ್ಲಿ ಪ್ರತಿಭೆಯೂ ಚಿತ್ರಕೌಶಲವೂ ಉನ್ನತವಾಗಿದ್ದುದರಿಂದಲೇ ಈತನನ್ನು ಹಾಲೆಂಡ್ ದೇಶದ ಷೇಕ್ಸ್‌ಪಿಯರ್ ಎಂದು ಕರೆಯುತ್ತಾರೆ. ಹೀಗಿದ್ದರೂ ಬಡತನವೂ, ದುಃಖವೂ, ಬಂಧು ವಿಯೋಗವೂ ಇವನನ್ನು ಎಡೆಬಿಡದೆ ಹಿಂಬಾಲಿಸಿದ್ದು ಬಹಳ ಶೋಚನೀಯವಾಗಿದೆ. ತನ್ನಲ್ಲಿ ಎಷ್ಟು ಪಾಂಡಿತ್ಯವಿದ್ದಾಗ್ಯೂ ಈ ಕಲಾ ಸಾರ್ವಭೌಮನು ತನ್ನ ಉದರ ಭರಣಕ್ಕೆ ತಕ್ಕಷ್ಟು ಇಲ್ಲದೆ ಆಪ್ತಬಂಧುಗಳ ವಿಯೋಗದಿಂದ ದುಃಖಿಸಿ; ಯಾವ ದೇಶದ ಕಲಾ ಔನ್ನತ್ಯಕ್ಕಾಗಿ ಕಲಾದೇವಿಯನ್ನು ಉಪಾಸಿಸಿದನೋ ಆ ದೇಶದವರಿಂದಲೂ ಪುರಸ್ಕರಿಸಲ್ಪಡದೆ ೧೬೬೯ನೇ ಇಸವಿ ಅಕ್ಟೋಬರ್ ೪ರಲ್ಲಿ ತನ್ನ ದೇಹವನ್ನು ಬಿಟ್ಟು ಪರಲೋಕ ಯಾತ್ರೆ ಮಾಡಿದನು.

*"ಕಲಾ" ಪತ್ರಿಕೆಯಲ್ಲಿ ಪ್ರಕಟಣೆ: ಕಲಾಮಂದಿರ, ಬೆಂಗಳೂರು (೧೯೩೦) ಸಂ: ಎ. ಎನ್. ಸುಬ್ಬರಾವ್*

■




ಸಂತ ಹರಿಯುತಿಹ ನದಿ
ಇಂದು ನಾನು
ಅಂದು ಬೆಟ್ಟದ ಮೇಲಿದ್ದಾಗ
ಪಶ್ಚಿಮ ಘಟ್ಟದ ಮೇಲಿದ್ದಾಗ
ನನ್ನದೇ ಆ ಎತ್ತರ ಎಂಬ ಏರಿನಲ್ಲಿ
ಮೆರೆದಿದ್ದೆ ಹರುಷದಿಂದ
ಮೊರೆದಿದ್ದೆ ರೋಷದಿಂದ

ದಟ್ಟ ಕಾನನದ ಹಸಿರಿನ ನಡುವೆ
ಇಲ್ಲಿ ಮುಚ್ಚಿಕೊಂಡು
ಅಲ್ಲಿ ಕಾಣಿಸಿ ಮತ್ತೆ ಬಚ್ಚಿಕೊಂಡು
ಸಿಕ್ಕಿದನೆಲ್ಲ ಕೊಚ್ಚಿಕೊಂಡು
ನನ್ನ ಕುಣಿತವ ನಾನೆ ಮೆಚ್ಚಿಕೊಂಡು

ಉಕ್ಕುವ ಹರೆಯ ಕುದಿಯುವ ಕೆಚ್ಚು
ಕೊರೆದು ಬೆಟ್ಟದ ಅಂಚು
ಭೋರ್ಗರೆದು ಧುಮ್ಮಿಕ್ಕಿ
ಹಾರಿದ್ದೆ ಧಬಧಬೆಯಾಗಿ
ಸುತ್ತಣ ಜಗವನು ಬೆಚ್ಚಿಸುತ

ದಂಡೆಗಳ ಜತೆ ಸೆಣಸಾಟ
ಬಂಡೆಗಲ್ಲುಗಳ ಜತೆ ನಿತ್ಯ ಕಾದಾಟ
ಇಲ್ಲಿ ಕೆರಳಿ ಅಲ್ಲಿ ಹೊರಳಿ
ಹೆಸರಿಗಾಗಿ ಕೊಸರಾಡಿ ಬಿರುದಿಗಾಗಿ ಉರುಳಿ
ಹಾರಾಡಿದ್ದೆ ದಾರಿ ನನ್ನದೊಬ್ಬನದೆ ಎಂದು

ಓಡುವ ಹೆಜ್ಜೆ ಎಡವಿ
ಬಾಳ ಬವಣೆಗಳು ಮತ್ತೆ ಮತ್ತೆ ಕೆಡವಿ
ಸಾಲು ಅಡಚಣೆ ತಲೆಗೆ ಬಡಿದಾಗ
ದಿಕ್ಕು ಕಾಣದೆ ಮುಂದೆ ಸರಿಯದೆ
ಸುತ್ತಿ ತಿರುಗುವ ಸುಳಿಯಾದೆ
ಒಳಗೊಳಗೇ ನೋಡಿಕೊಳ್ಳುತ
ನನಗೇ ನಾ ಬಳಿಯಾದೆ

ಅಂತರಂಗದ ನೂರು ತೊಡಕು
ಬಿಡಿಸಿಕೊಳ್ಳುತ ಧ್ಯಾನದ ಬೆಳಕಿನಲಿ
ಕಪ್ಪು ಕಣಿವೆಯ ಕೆಳಗೆ ಬೆಳ್ಳಿ ಗೆರೆಯಾಗಿ
ದೂರ ದಾರಿ ಹರಿದು
ಇಳಿದು ಬಂದೆ ಕೊನೆಗೆ
ಶಾಂತತೆಯ ಮಡಿಲಿಗೆ
ಹೊಳೆವ ಹೊಳೆಯಾಗಿ ತೆರೆದ ತೀರಾಗಿ

ಈಗ ಸುತ್ತಲೂ ವಿಶಾಲ ಬಯಲು
ನನ್ನ ನಿಜದ ಪರಿಚಯ ನನಗೆ
ಒಳಗೆ ಜಗಳವಿಲ್ಲ
ದಂಡೆಗಳೊಂದಿಗೆ ಸ್ನೇಹ ಸಂತೋಷ
ಆಳದ ಆಳದಲ್ಲಿ
ನಿಧಾನ ಹರಿಯುವ ಸಮಾಧಾನ

ದಟ್ಟ ಕಾನನ ಅಲ್ಲಿ ಬಟ್ಟಬಯಲು ಇಲ್ಲಿ
ಕೊಟ್ಟಿದ್ದು ಏನು ನಾ
ಗಿಡಮರ ಪಕ್ಷಿ ಜೀವ ಸಂಕುಲಕೆ
ಪಡೆದದ್ದು ಏನು ಅವರಿಂದ ಮರಳಿ
ಈ ಕೊಡುಕೊಳುವ ಲೆಕ್ಕ ಮುಚ್ಚಿಡುವ ಲೆಕ್ಕ
ಎಲ್ಲ ಲೆಕ್ಕದ ಆಚೆ ಇಂದು ನಾನು

ಸಂತ ಹರಿಯುತಿಹೆ ಸಾಗರದತ್ತ
ಎಲ್ಲ ತೆರೆದುಕೊಂಡು ಗೊಮ್ಮಟನಂತೆ
ಸಕಲವನೂ ಸ್ವೀಕರಿಸುವ
ನನ್ನ ಆದಿ ಅಂತ್ಯ ತಾನೇ ಆಗಿರುವ ತಾನೆಂಬ
ಅರಿವಿನ ಆಚೆಗಿರುವ
ಆ ಬೆರಗಿನ ಸಾಗರದಲಿ ಸೇರಿ
ಕರಗಿ ಹೋಗಲು
ಬೆರೆತು ಬಯಲಾಗಲು
ಮತ್ತೆ ನೀಲಿ ಮುಗಿಲಾಗಲು

**ಸಂಕುಲಜೀವ**
**ಮಲ್ಲಿಗೆ**, ೧೯/೨, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ-೫೮೦ ೦೦೭

# ನರಕಕ್ಕೆ ನೂರು ದಾರಿ

ಪ್ರೊ|| ಎಂ. ಆರ್. ಎನ್. ಮೂರ್ತಿ

ಗರುಡ ಪುರಾಣದಲ್ಲಿ ನರಕದ ವಿವರವಾದ ವರ್ಣನೆಯಿದೆ. ಪಾಪಿಗಳಿಗೆ ಅಲ್ಲಿ ಬಗೆಬಗೆಯ ಶಿಕ್ಷೆ ಕೊಡುತ್ತಾರೆ. ಅವರ ಮೇಲೆ ಕಾದ ಎಣ್ಣೆ ಸುರಿಯುತ್ತಾರೆ. ಈಟಿಯಿಂದ ತಿವಿಯುತ್ತಾರೆ. ಅಲ್ಲಿಯ ವರ್ಣನೆಗಳನ್ನೆಲ್ಲಾ ಗಮನಿಸಿದರೆ, ಯಮಕಿಂಕರರ ದಡ್ಡತನ ಎದ್ದು ಕಾಣುತ್ತದೆ. ಅವರು ಕೊಡುವ ಶಿಕ್ಷೆಗಳೆಲ್ಲ ನಮಗೆ ಚೆನ್ನಾಗಿ ಪರಿಚಿತವಿರುವ ಕಷ್ಟಗಳೆ. ನಾಲ್ಕು ದಿನ ನೆಟ್ಟಗೆ ಅಡುಗೆ ಮಾಡಿದ ಎಲ್ಲರೂ ಒಂದಲ್ಲ ಒಂದು ಸಲ, ಒಗ್ಗರಣೆ ಹಾಕುವಾಗಲೋ, ಬೋಂಡ ಕರಿಯುವಾಗಲೋ ಕಾದೆಣ್ಣೆ ಹಾರಿಸಿಕೊಂಡಿರುತ್ತಾರೆ. ತರಕಾರಿ ಹೆಚ್ಚುವಾಗ ಕುಯ್ದುಕೊಂಡ ಬೆರಳುಗಳು ನಿಂಬೆ ಹಿಂಡುವಾಗ ವಿಪರೀತ ಉರಿ ಹುಟ್ಟಿಸಿರುತ್ತವೆ. ಯಮಕಿಂಕರರು ಕೊಡುವ ಕಷ್ಟ ಪ್ರಮಾಣದಲ್ಲಿ ಇದಕ್ಕಿಂತ ದೊಡ್ಡದಾದರೂ, ಮಾದರಿಯಲ್ಲಿ ಬೇರೆಯಲ್ಲ. ಅವೆಲ್ಲಾ ಹೊರದೇಹಕ್ಕೆ ನೀಡುವ ಶಿಕ್ಷೆಗಳು. ಕರುಳು ಹಿಂಡಿದಂತಾಯಿತು ಎಂದು ಹೇಳುತ್ತೇವಲ್ಲಾ, ಅಂತಹ ಶಿಕ್ಷೆ ಅಲ್ಲಿ ಕೊಡಲಾರರು. ಯಮಕಿಂಕರರಿಗೆ ನಮ್ಮ ಒಳ ಅಂಗಗಳನ್ನು ಹಿಂಸಿಸುವ ಉಪಾಯ ತಿಳಿದಿಲ್ಲ. ಇತ್ತೀಚೆಗೆ, ವಿಪರೀತ ಬುದ್ಧಿ ಬೆಳೆಸಿಕೊಂಡ ಮನುಷ್ಯ ಒಳದೇಹಕ್ಕೆ ಶಿಕ್ಷೆ ಕೊಡುವ ಕಲೆಯನ್ನು ಕರಗತಮಾಡಿಕೊಂಡಿದ್ದಾನೆ. ಜನರನ್ನು ಸಾರಾಸಗಟಾಗಿ ನರಕಕ್ಕೆ ನೂಕುವ ನೂರಾರು ಹೆದ್ದಾರಿಗಳನ್ನು ಕಂಡುಕೊಂಡಿದ್ದಾನೆ. ಇವುಗಳಲ್ಲಿ ಮೂರು ಹೆದ್ದಾರಿಗಳು ಪ್ರಮುಖವಾಗಿ ಎದ್ದು ಕಾಣುತ್ತವೆ. ಇವೇ ರಾಸಾಯನಿಕ, ಜೈವಿಕ ಹಾಗೂ ಅಣ್ವಸ್ತ್ರಗಳನ್ನು ಬಳಸಿ ಕೊಡುವ ಶಿಕ್ಷೆಗಳು.

ರಾಸಾಯನಿಕ ಅಸ್ತ್ರಗಳನ್ನು ಬಳಸಿ ಹೋರಾಡುವ ಮಾರ್ಗಗಳ ಪರಿಚಯ ಪುರಾತನ ಕಾಲದಿಂದಲೇ ಇದ್ದಿತೆಂದು ಹೇಳಬಹುದಾದರೂ, ಅವುಗಳ ವಿಸ್ತೃತ ಬಳಕೆ ಮೊದಲನೆ ಮಹಾಯುದ್ಧದ ಸಮಯದಲ್ಲಿ (೧೯೧೪-೧೯೧೮) ಪ್ರಾರಂಭವಾಯಿತು. ಇವುಗಳನ್ನು ಬಳಕೆಗೆ ತಂದವರಲ್ಲಿ ಸಮರ್ಥ ರಸಾಯನ ಶಾಸ್ತ್ರಜ್ಞರೂ, ನೊಬೆಲ್ ಪಾರಿತೋಷಕ ವಿಜೇತರೂ ಆದ ಜರ್ಮನಿಯ ಹೇಬರ್‌ರವರು ಮೊದಲಿಗರು. ಹೈಡ್ರೋಜನ್ ಮತ್ತು ನೈಟ್ರೋಜನ್ನುಗಳ ರಾಸಾಯನಿಕ ಸಂಯೋಜನೆಯಿಂದ ಅಮೋನಿಯ ಉತ್ಪಾದಿಸುವುದನ್ನು ಇವರೇ ಕಂಡುಹಿಡಿದದ್ದು. ಈ ಸಂಶೋಧನೆಯಿಂದ ರಾಸಾಯನಿಕ ಗೊಬ್ಬರಗಳ ಸಂಶ್ಲೇಷಣೆ ಸಾಧ್ಯವಾಯಿತು. ಇದರಿಂದ ಕೃಷಿರಂಗಕ್ಕೆ ಅತ್ಯಧಿಕ ಲಾಭವಾಗಿದೆ. ಹೇಬರರು ವಿಷಾನಿಲಗಳನ್ನು ಉತ್ಪಾದಿಸುವ ಮಾರ್ಗಗಳನ್ನು ನಾಜೀ ಜರ್ಮನಿಗೆ ತೋರಿಸಿಕೊಟ್ಟರು. ಇಂದು ಲಭ್ಯವಿರುವ ಅನೇಕ ವಿಷಾನಿಲಗಳಲ್ಲಿ ಮೊತ್ತಮೊದಲಿಗೆ ಬಳಕೆಯಾದದ್ದು ಕ್ಲೋರಿನ್ ಅನಿಲ. ಕ್ಲೋರಿನ್ನಿನ ಸಾಂದ್ರತೆ ಗಾಳಿಗಿಂತ ಹೆಚ್ಚಿರುವುದರಿಂದ, ಸಂಗ್ರಹ ಟ್ಯಾಂಕುಗಳಿಂದ ಹೊರಬಿಟ್ಟಾಗ ಕ್ಷಿಪ್ರವಾಗಿ ಮೇಲೇರಿ ಹರಡಿಹೋಗದೇ ಹೆಚ್ಚು ಸಮಯ ನೆಲಕ್ಕೇ ಅಂಟಿಕೊಂಡಿರುತ್ತದೆ. ಪ್ರಕೃತಿಯಲ್ಲಿರುವ ೯೨ ಸಹಜ ಮೂಲಧಾತುಗಳಲ್ಲಿ ಕ್ಲೋರಿನ್ ಅನಿಲವೂ ಸೇರಿದೆ. ಸಾಧಾರಣ ಉಷ್ಣತೆಯಲ್ಲಿ ಅನಿಲ ರೂಪದಲ್ಲಿರುವ ಈ ವಿಷಾನಿಲ ಕಣ್ಣು, ಮೂಗು, ಗಂಟಲುಗಳಲ್ಲಿ ಉರಿ ಹುಟ್ಟಿಸುತ್ತದೆ. ಎದೆಯ ಗೂಡಿನಲ್ಲಿ ಹಳದಿ ಬಣ್ಣದ ದ್ರವ ತುಂಬಿಸಿ ಉಸಿರುಕಟ್ಟಿಸಿ ಸಾವನ್ನುಂಟುಮಾಡುತ್ತದೆ. ಇದನ್ನು ಮೊದಲು ಬಳಸಿದ್ದು ಜರ್ಮನಿಯವರಾದರೂ, ಕೂಡಲೇ ಬ್ರಿಟಿಷರೂ ಇದರ ಬಳಕೆ ಕಲಿತರು. ಮೊದಲನೆಯ ಮಹಾಯುದ್ಧದಲ್ಲಿ ಈ ಅನಿಲ ೫೦೦೦ಕ್ಕೂ ಮೇಲ್ಪಟ್ಟು ಸೈನಿಕರನ್ನು ಸಾಯಿಸಿ, ಇನ್ನೂ ಹತ್ತಾರು ಸಹಸ್ರ ಜನರಿಗೆ ನರಕದ ದರ್ಶನ ಮಾಡಿಸಿತು. ಇದರ ಬೆನ್ನ ಹಿಂದೇ ಫಾಸ್ಜೀನ್ ಎಂಬ ಅನಿಲ ಬಳಕೆಗೆ ಬಂದಿತು. ಕ್ಲೋರಿನ್ ಮತ್ತು ಫಾಸ್ಜೀನ್ ಅನಿಲಗಳಿಂದ ಸಾಯುವ ಸಂಕಟ, ನೀರಿನಲ್ಲಿ ಮುಳುಗಿ ಸಾಯುವಂತೆ. ಈ ಅನಿಲಗಳ ಬಳಕೆಯ ನಂತರ, ಇನ್ನೂ ಹತ್ತು ಪಟ್ಟು ಪ್ರಬಲವಾದ ಮಸ್ಟರ್ಡ್ ಗ್ಯಾಸ್ (ವಾಸನೆಯಿಂದಾಗಿ ಇದನ್ನು ಸಾಸಿವೆ ಅನಿಲ ಎನ್ನಬಹುದು) ರಂಗಪ್ರವೇಶ ಮಾಡಿತು. ಮಸ್ಟರ್ಡ್ ಗ್ಯಾಸ್ ಗಂಧಕಯುಕ್ತ ಅನಿಲ. ಇದರ ಸ್ಪರ್ಶಕ್ಕೆ ಒಳಗಾದಾಗ, ಕಣ್ಣು ಕುರುಡುಗಟ್ಟುತ್ತದೆ, ಚರ್ಮ ಸುಟ್ಟಂತೆ ಮುರುಟುತ್ತದೆ. ಸುಟ್ಟಗಾಯದಷ್ಟು ಸುಲಭದಲ್ಲಿ ಅಥವಾ ಶೀಘ್ರದಲ್ಲಿ ಚರ್ಮದ ಗಾಯ ಮಾಗುವುದಿಲ್ಲ. ಅನಿಲದ ಪ್ರಮಾಣ ಹೆಚ್ಚಾದಾಗ ಸಾವುಂಟಾಗುತ್ತದೆ. ಇದೇ ಜಾತಿಗೆ ಸೇರಿದ ಇನ್ನೊಂದು ಅನಿಲಕ್ಕೆ ಲೆವಿಸೈಟ್ ಎನ್ನುತ್ತಾರೆ. ಇದರಲ್ಲೂ ಗಂಧಕವಿದ್ದು ಮಸ್ಟರ್ಡ್ ಗ್ಯಾಸಿನಂತೆ ವರ್ತಿಸುತ್ತದೆ. ಈ ಅನಿಲಗಳ ನಂತರ ಹೈಡ್ರೋಜನ್ ಸೈನೈಡ್ ಮತ್ತು ಪ್ರುಸ್ಸಿಕ್ ಆಸಿಡ್ಡುಗಳ ಆವಿಷ್ಕಾರ ಮಾಡಲಾಯಿತು. ಇವು ನಮ್ಮ ರಕ್ತದ ಕೆಂಪು ಕಣಗಳಲ್ಲಿರುವ ಹಿಮೋಗ್ಲಾಬಿನ್ ಪ್ರೋಟೀನ್ ಅಣುಗಳಿಗೆ ಅಂಟಿಕೊಳ್ಳುತ್ತವೆ. ಹಿಮೋಗ್ಲಾಬಿನ್ ನಮ್ಮ ದೇಹದ ಎಲ್ಲ ಜೀವಕೋಶಗಳಿಗೆ ಅತ್ಯಂತ ಅಗತ್ಯವಿರುವ ಆಕ್ಸಿಜನ್ನನ್ನು ಪೂರೈಕೆ ಮಾಡುವ ಅಣು. ಆದ್ದರಿಂದ ಹೈಡ್ರೋಜನ್ ಸೈನೈಡ್ ಅನಿಲವನ್ನು ಎಳೆದುಕೊಂಡಾಗ, ಉಸಿರು ಕಟ್ಟಿದಂತಾಗಿ, ತಕ್ಷಣ ಮರಣವುಂಟಾಗುತ್ತದೆ. ಗ್ಯಾಸ್ ಚೇಂಬರಿನಲ್ಲಿ ಸಹಸ್ರಾರು ಜನರನ್ನು ಏಕಕಾಲದಲ್ಲಿ ನರಕಕ್ಕೆ ದೂಡಲು ಇವು ಸೂಕ್ತ ಅನಿಲಗಳು. ಈ ಅನಿಲಗಳಲ್ಲದೇ ಸಸ್ಯಗಳಿಗೆ ಹಾನಿಮಾಡುವ ಅನಿಲಗಳೂ ಇಂದು ಲಭ್ಯವಿವೆ. ಈ ಅನಿಲಗಳು ಸಸ್ಯಗಳ ಎಲೆಗಳನ್ನು ಉದುರಿಸುತ್ತವೆ. ಶತ್ರು ಕಾಡು ಮರಗಳ ಮರೆಯಲ್ಲಿ ರಕ್ಷಣೆ ಪಡೆಯುವುದನ್ನು ತಪ್ಪಿಸುತ್ತವೆ. ಇಂತಹ ಅನಿಲಗಳನ್ನು ಅಮೇರಿಕಾದವರು ವಿಯಟ್ನಾಂ ಯುದ್ಧದಲ್ಲಿ ಬಳಸಿದ್ದಾರೆ.

ರಾಸಾಯನಿಕ ಅನಿಲಗಳನ್ನು ಬಳಸಿದವರು ಕೆಲವೊಮ್ಮೆ ಸತ್ತ ಹುಲಿಗೆ ಜೀವತುಂಬಿದ ಮಂತ್ರವಾದಿಯ ಪಾಡು ಪಡೆಯುತ್ತಾರೆ. ಅನಿಲವನ್ನು ತಾವೆ ಉಸಿರಾಡಿ, ಸಂಕಟಪಟ್ಟು ಸಾಯುತ್ತಾರೆ. ಅದಲ್ಲದೇ, ಈ ಅನಿಲಗಳನ್ನು ಉತ್ಪಾದಿಸುವ ಕೇಂದ್ರಗಳಿಂದ ಸೋರಿಕೆಯಾಗಿ, ಸಮೀಪದಲ್ಲಿರುವ ಜನರಿಗೆ ಹಾನಿಯಾಗಬಹುದು, ಭೂಪಾಲಿನಲ್ಲಿ ಆದಂತೆ. ಜೊತೆಗೇ ಯುದ್ಧ ಬರುವವರೆಗೂ, ಅನಿಲ ತುಂಬಿಸಿರುವ ಟ್ಯಾಂಕುಗಳನ್ನು ಜತನದಿಂದ ಕಾಪಾಡಬೇಕಾಗುತ್ತದೆ. ವಿಷಾನಿಲಗಳನ್ನು ಬಿಡುಗಡೆ ಮಾಡುವ ಸೈನಿಕರು ತಮ್ಮನ್ನು ತಾವೇ ರಕ್ಷಿಸಿಕೊಳ್ಳಬೇಕಾಗುತ್ತದೆ. ಈ ಕಾರಣಗಳಿಂದ ವಿಷಾನಿಲಗಳ ಉತ್ಪಾದನೆ ಸೀಮಿತವಾಗಿದೆ. ಪರಿಸ್ಥಿತಿ ಹೀಗಿದ್ದರೂ, ಎರಡನೇ ಮಹಾಯುದ್ಧದ ನಂತರ ವಿಷಾನಿಲಗಳನ್ನು ಸ್ವತಃ ಹಾನಿಗೊಳಗಾಗದೇ ಬಳಸುವ ಹಲವಾರು ತಂತ್ರಗಳನ್ನು ರೂಪಿಸಲಾಗಿದೆ. ವಿಷವಲ್ಲದ ಎರಡು ಅನಿಲಗಳನ್ನು ಬೆರಕೆ ಮಾಡಿ ಪ್ರಯೋಗಿಸಿದಾಗ ಮಾತ್ರ ಅವುಗಳ ರಾಸಾಯನಿಕ ವರ್ತನೆಯಿಂದ ವಿಷಾನಿಲ ಹೊರಹೊಮ್ಮುವಂತೆ ಮಾಡಲು ಕಲಿಯಲಾಗಿದೆ. ಆದ್ದರಿಂದ ಇಂತಹ ಅನಿಲಗಳ ತಯಾರಿಕೆಯಲ್ಲಿ, ಶೇಖರಣೆಯಲ್ಲಿ ಹೆಚ್ಚಿನ ಅಪಾಯ ಬಾರದು. ವಿಷಾನಿಲಗಳನ್ನು ಉತ್ಪಾದಿಸಲು ರಸಾಯನ ಶಾಸ್ತ್ರದ ಅಗಾಧ ಪಾಂಡಿತ್ಯ ಬೇಕಾಗುವುದಿಲ್ಲ. ಆದ್ದರಿಂದಲೇ ಭಯೋತ್ಪಾದಕರಿಗೆ ವಿಷಾನಿಲಗಳನ್ನು ಪಡೆದುಕೊಳ್ಳುವುದು ಕಷ್ಟವಲ್ಲ.

ಜೈವಿಕ ಅಸ್ತ್ರಗಳು ವಿಷಾನಿಲಗಳಿಗಿಂತ ಹೆಚ್ಚು ಹಾನಿ ಮಾಡಬಲ್ಲವು. ವಿಷಾನಿಲಗಳು ಪ್ರಯೋಗಿಸಿದ ಸ್ವಲ್ಪ ಸಮಯ ಮಾತ್ರ ಹಾನಿಮಾಡುತ್ತವೆ. ಹೆಚ್ಚಿನವು ಒಂದೆರಡು ದಿನಗಳಲ್ಲಿ ಸಹಜವಾಗಿ ನಡೆಯುವ ರಾಸಾಯನಿಕ ಬದಲಾವಣೆಗಳಿಂದ ಸುರಕ್ಷಿತ ಧಾತುಗಳಾಗಿ ಮಾರ್ಪಡುತ್ತವೆ. ಜೈವಿಕ ಅಸ್ತ್ರಗಳನ್ನು ಒಮ್ಮೆ ಪ್ರಯೋಗಿಸಿದರೆ, ಒಬ್ಬರಿಂದ ಇನ್ನೊಬ್ಬರಿಗೆ ಹರಡಿ ವ್ಯಾಪಕ ಹಾನಿ ಮಾಡಬಲ್ಲವು.

ರಾಸಾಯನಿಕ ಅನಿಲಗಳನ್ನು ಬಳಸಿದವರು ಕೆಲವೊಮ್ಮೆ ಸತ್ತ ಹುಲಿಗೆ ಜೀವತುಂಬಿದ ಮಂತ್ರವಾದಿಯ ಪಾಡು ಪಡೆಯುತ್ತಾರೆ. ಅನಿಲವನ್ನು ತಾವೆ ಉಸಿರಾಡಿ, ಸಂಕಟಪಟ್ಟು ಸಾಯುತ್ತಾರೆ. ಅದಲ್ಲದೇ, ಈ ಅನಿಲಗಳನ್ನು ಉತ್ಪಾದಿಸುವ ಕೇಂದ್ರಗಳಿಂದ ಸೋರಿಕೆಯಾಗಿ, ಸಮೀಪದಲ್ಲಿರುವ ಜನರಿಗೆ ಹಾನಿಯಾಗಬಹುದು.



ರಾಸಾಯನಿಕ ಅಸ್ತ್ರಗಳಂತೆ, ಜೈವಿಕ ಅಸ್ತ್ರಗಳು ಬಹು ಹಿಂದಿನಿಂದ ಬಳಕೆಯಾದದ್ದಕ್ಕೆ ಪುರಾವೆಗಳಿವೆ. ಲಭ್ಯವಿರುವ ಚಾರಿತ್ರಿಕ ಮೂಲಗಳ ಪ್ರಕಾರ, ೧೩೪೬ರಲ್ಲಿ ಟಾರ್ಟರರು ಭದ್ರವಾಗಿದ್ದ ಕಪ್ಪನ್ನರ ಕೋಟೆಯನ್ನು ಮುತ್ತಿದರು. ಅವರಿಗೆ ಕೋಟೆಯನ್ನು ಭೇದಿಸಲಾಗಲಿಲ್ಲ, ಟಾರ್ಟರರು ಬೀಡು ಬಿಟ್ಟಿದ್ದ ಪಾಳಯದಲ್ಲಿ ಪ್ಲೇಗ್ ಕಾಣಿಸಿಕೊಂಡಿತು. ಸತ್ತವರ ದೇಹಗಳನ್ನು ಟಾರ್ಟರರು ಕೋಟೆಯೊಳಗೆ ತಳ್ಳಿದರಂತೆ. ಒತ್ತಾದ ಜನಸಾಂದ್ರತೆಯಿದ್ದ ಕಪ್ಪ ನಗರದಲ್ಲಿ ಪ್ಲೇಗ್ ಕಾಳ್ಗಿಚ್ಚಿನಂತೆ ಹರಡಿ, ಅಲ್ಲಿಯ ಜನ ಟಾರ್ಟರರಿಗೆ ಶರಣಾಗತರಾದರಂತೆ. ಅಮೇರಿಕಾ ಖಂಡವನ್ನು ಯೂರೋಪಿಯನ್ನರು ಗುರುತಿಸುವ ಮುನ್ನ ಅಲ್ಲಿ ಸಿಡುಬು ಕಾಯಿಲೆ ಇರಲಿಲ್ಲ. ಆದ್ದರಿಂದ ಅಲ್ಲಿ ವಾಸ ಮಾಡುತ್ತಿದ್ದ ಇಂಡಿಯನ್ನರಲ್ಲಿ ಸಿಡುಬು ನಿರೋಧಕ ಶಕ್ತಿ ಸ್ವಲ್ಪವೂ ಇರಲಿಲ್ಲ. ಯೂರೋಪಿನ ಒಬ್ಬ ನಾವಿಕ ಅಮೇರಿಕಾದ ಇಂಡಿಯನ್ ಜನಕ್ಕೆ ಉದ್ದೇಶಪೂರ್ವಕವಾಗಿ ಸಿಡುಬಿನಿಂದ ಸತ್ತವರು ಧರಿಸಿದ್ದ ಬಟ್ಟೆಗಳನ್ನು ಕೊಡುಗೆಯಾಗಿ ನೀಡಿದ. ಸಿಡುಬು ಸಾವಿರಾರು ಇಂಡಿಯನ್ನರನ್ನು ಬಲಿ ತೆಗೆದುಕೊಂಡಿತು. ಇಂತಹ ಉದಾಹರಣೆಗಳು ಇವೆಯಾದರೂ, ಮೊದಲ ಮಹಾಯುದ್ಧಕ್ಕೆ ಮೊದಲು ಜೈವಿಕ ಅಸ್ತ್ರಗಳ ಬಗ್ಗೆ ವ್ಯವಸ್ಥಿತ ಸಂಶೋಧನೆ ನಡೆದಿರಲಿಲ್ಲವೆಂದೇ ಹೇಳಬಹುದು. ಇಂದು ಇಂತಹ ಅಸ್ತ್ರಗಳ ಬಗ್ಗೆ ಬಹಳಷ್ಟು ಮಾಹಿತಿಯಿದೆ. ಯಾರು ಬೇಕಾದರೂ ಈ ಮಾಹಿತಿಯನ್ನು ಸುಲಭವಾಗಿ ದೊರಕಿಸಿಕೊಳ್ಳಬಹುದು.

ಮೊದಲನೇ ಮಹಾಯುದ್ಧದ ನಂತರ ಸೂಕ್ಷ್ಮಾಣುಜೀವಿಗಳನ್ನು ಅಸ್ತ್ರಗಳನ್ನಾಗಿ ಬಳಸುವ ಬಗ್ಗೆ ವ್ಯವಸ್ಥಿತ ಸಂಶೋಧನೆ ನಡೆದಿದೆ. ಸೂಕ್ಷ್ಮಾಣುಜೀವಿಯನ್ನು ಪ್ರಯೋಗಾಲಯದಲ್ಲಿ ಇರಿಸಿಕೊಳ್ಳುವುದು, ಬೆಳೆಸುವುದು, ವರ್ಷಗಟ್ಟಲೆ ನಾಶವಾಗದಂತೆ ಜೋಪಾನವಾಗಿ ಕಾಪಾಡುವುದು ಈ ಸಂಶೋಧನೆಗಳ ಗುರಿ. ಜೈವಿಕ ಅಸ್ತ್ರಗಳ ಬಳಕೆ ಸಾಮಾನ್ಯವಾಗಿ ಬೇರೊಂದು ದೇಶದ ಜನರ ಮೇಲಾದ್ದರಿಂದ, ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಇವುಗಳನ್ನು ಸಾಗಿಸುವಾಗ ಗಡಿ ರಕ್ಷಕ ಪಡೆಗೆ ಗೊತ್ತುಹಚ್ಚುವುದು ಸಾಧ್ಯವಾಗಬಾರದು. ಹಾಗೆಯೇ, ಅಲ್ಪ ಪ್ರಮಾಣದಲ್ಲಿ ಸಾಗಿಸಿದರೂ, ಹೆಚ್ಚಿನ ಹಾನಿ ಮಾಡಬೇಕು. ಅಂತಹ ಸೂಕ್ಷ್ಮಾಣುಜೈವಿಕ ಅಸ್ತ್ರವಾಗಬಲ್ಲದು. ಹೆಚ್ಚಿನ ಜೈವಿಕ ಅಸ್ತ್ರಗಳು ಈ ನಿಟ್ಟಿನಲ್ಲಿ ಸೂಕ್ತವಾಗಿಯೆ ಇವೆ ಎಂದು ತೋರಿಬರುತ್ತದೆ. ಈಗ ಒಂದೆರಡು ವರ್ಷಗಳ ಹಿಂದೆ ಅಮೇರಿಕಾದಲ್ಲಿ ಕೆಲವು ರಾಜಕಾರಣಿಗಳಿಗೆ ಕಳಿಸಲ್ಪಟ್ಟ ಲಕೋಟೆಗಳಲ್ಲಿ ಆಂಥ್ರಾಕ್ಸ್ ಎಂಬ ಸೂಕ್ಷ್ಮಾಣುವಿದ್ದಿತೆಂದು ವರದಿಯಾಗಿತ್ತು. ಈ ಸೂಕ್ಷ್ಮಾಣು ವಿಪರೀತ ಸುಸ್ತು ಮಾಡುವ ಜ್ವರ ಬರಿಸಿ, ೩-೫ ದಿನಗಳಲ್ಲಿ ಸಾವನ್ನುಂಟು ಮಾಡಬಲ್ಲದು. ಯೆರ್ಸಿನ ಪೆಸ್ಟಿಸ್ (ಪ್ಲೇಗ್), ಬ್ರುಸೆಲ್ಲ ಸುಲ್ಸ್ (ಜ್ವರ, ತಲೆನೋವು, ಮಾನಸಿಕ ಅಸ್ವಾಸ್ಥ್ಯ, ಸುಸ್ತು), ಪಾಸ್ತೆರೆಲ್ಲ ಟುಲರೆನ್ಸಿಸ್ (ಗಂಟಲು ಕೆರೆತ, ಮೈಕೈ ನೋವು) ಮುಂತಾದ ಬ್ಯಾಕ್ಟೀರಿಯಾಗಳೂ, ವೆನೆಜುವೆಲ ಬರ್ನೆಟ್ಟಿ ವೈರಾಣು (ಜ್ವರ, ಚಳಿ, ವಾಂತಿ, ತಲೆನೋವು) ಬ್ಯಾಕ್ಟೀರಿಯಾಗಳಿಂದ ದೊರಕಿಸಿಕೊಂಡ ವಿಷವಸ್ತುಗಳಾದ ಸಕ್ಸಿ ಟಾಕ್ಸಿನ್ (ಕೈಕಾಲುಗಳಲ್ಲಿ ತ್ರಾಣಹಾನಿಯಾಗಿ, ನಿಮಿಷಗಳಲ್ಲಿ ಮರಣ), ಬುಟುಲಿನಮ್ ಟಾಕ್ಸಿನ್ (ದೃಷ್ಟಿಮಾಂದ್ಯತೆ, ಮಾಂಸಖಂಡಗಳಲ್ಲಿ ಬಲಹೀನತೆ, ಉಸಿರು ನಿಲ್ಲುವುದು) ಮುಂತಾದುವು ಶತ್ರುಗಳನ್ನು ಮಣಿಸಲು ಸೂಕ್ತ ಜೈವಿಕ ಅಸ್ತ್ರಗಳು ಎಂದು ತಿಳಿದುಬಂದಿದೆ. ಕಡೆಯ ಎರಡು ಅಸ್ತ್ರಗಳನ್ನು 'ಜೈವಿಕ' ಎನ್ನುವುದರ ಬದಲು 'ರಾಸಾಯನಿಕ' ಎಂದೂ ಕರೆಯಬಹುದು. ಏಕೆಂದರೆ, ಇವು ಜೀವಕಣಗಳಿಂದ ಪಡೆದ ರಾಸಾಯನಿಕ ಧಾತುಗಳು. ಸೂಕ್ಷ್ಮಾಣುಗಳಂತೆ ಒಬ್ಬರಿಂದ ಇನ್ನೊಬ್ಬರಿಗೆ ಹರಡುವುದಿಲ್ಲ. ಆದರೂ ಜೀವಕಣಗಳಿಂದ ಪಡೆದುವಾದ್ದರಿಂದ ಸಾಮಾನ್ಯವಾಗಿ 'ಜೈವಿಕ' ಅಸ್ತ್ರಗಳೆಂದೇ ಪರಿಗಣಿಸಲ್ಪಟ್ಟಿವೆ. ರಾಸಾಯನಿಕ ಅಸ್ತ್ರಗಳಿಗೆ ಅನ್ವಯವಾಗುವಂತೆ, ಜೈವಿಕ ಅಸ್ತ್ರಗಳಿಗೂ ಸಹ ದೊಡ್ಡ ಪ್ರಯೋಗಾಲಯಗಳು ಬೇಕಾಗುವುದಿಲ್ಲ. ಸೂಕ್ಷ್ಮಾಣುಜೀವಿಗಳನ್ನು ನಿಯಂತ್ರಣದಲ್ಲಿಡಲು ಕಲಿತಿರುವ ಸಾಧಾರಣ ವಿಜ್ಞಾನಿಗಳು ಸಣ್ಣ ಪ್ರಯೋಗಾಲಯಗಳಲ್ಲಿ ಈ ಅಸ್ತ್ರಗಳ ಬಗ್ಗೆ ಸಂಶೋಧನೆ ನಡೆಸಲು, ಅಸ್ತ್ರಗಳನ್ನು ತಯಾರು ಮಾಡಲು ಸಾಧ್ಯವಿದೆ. ನೂತನ ಜೀವರಸಾಯನ ಶಾಸ್ತ್ರದ ಪ್ರಯೋಗಗಳಲ್ಲಿ ಪರಿಶ್ರಮ ಉಳ್ಳವರು, ಸಹಜವಾಗಿ ದೊರಕುವ ಸೂಕ್ಷ್ಮಾಣುಜೀವಿಗಳನ್ನೇ ಬದಲು ಮಾಡಿ, ಇನ್ನೂ ಹೆಚ್ಚು ಹಾನಿಮಾಡುವ ಸೂಕ್ಷ್ಮಾಣುಜೀವಿಗಳನ್ನು ಸೃಷ್ಟಿಮಾಡಲು ಸಾಧ್ಯ. ಇಷ್ಟೇ ಅಲ್ಲದೇ ನೂತನ ಜೀವರಸಾಯನ ಶಾಸ್ತ್ರ ಹೊಸಬಗೆಯ ಜೈವಿಕಾಸ್ತ್ರಗಳನ್ನು ಸೃಷ್ಟಿ ಮಾಡಲೂ ಸಹಕಾರಿಯಾಗಬಹುದು. ಉದಾಹರಣೆಗೆ, ಈಗಾಗಲೇ ಇರುವ ವೈರಾಣು ಬಳಸದೇ, ಪೋಲಿಯೊ ವೈರಾಣು ಜೀವತಂತುವಿನ ಸಂಪೂರ್ಣ ಸಂಶ್ಲೇಷಣೆ ಸಾಧ್ಯವೆಂದು ತೋರಿಸಲಾಗಿದೆ. ಹಣವಂತ ದೇಶಗಳು, ಬ್ರಹ್ಮಾಸ್ತ್ರಗಳಾದ ಅಣ್ವಸ್ತ್ರಗಳನ್ನು ಹೊಂದಿ ಜೋರು ಮಾಡಿದರೆ, ಬಡ ದೇಶಗಳ 'ಭಯೋತ್ಪಾದಕರು' ಇಂತಹ ಅಸ್ತ್ರಗಳ ಮೊರೆಹೋಗುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ.

ಅಣ್ವಸ್ತ್ರಗಳು ಬ್ರಹ್ಮಾಸ್ತ್ರಗಳೇ. ಅವುಗಳನ್ನು ಪ್ರಯೋಗಿಸಿದ ತಕ್ಷಣ ರೌರವ ನರಕವಲ್ಲದೇ, ಅವು ಸಿಡಿದಾಗ ಸುತ್ತಲೆಲ್ಲಾ ಚೆಲ್ಲಿ ಹೋಗುವ ವಿಕಿರಣಯುಕ್ತ ಧಾತುಗಳು ವರ್ಷಗಟ್ಟಲೆ ಸುತ್ತಲಿನ ವಾತಾವರಣವನ್ನು ಕಲುಷಿತಗೊಳಿಸುತ್ತವೆ. ಹಿರೋಶಿಮಾ ನಗರದ ಮೇಲೆ ಎರಡನೇ ಮಹಾಯುದ್ಧದಲ್ಲಿ ಪ್ರಯೋಗಿಸಲ್ಪಟ್ಟ ಅಸ್ತ್ರಕ್ಕಿಂತ ನೂರಾರು ಪಟ್ಟು ಶಕ್ತಿಶಾಲಿಯಾದ ಸಹಸ್ರಾರು ಬಾಂಬುಗಳು ಈಗ ಸಜ್ಜಾಗಿವೆ. ಇವುಗಳ ಅತ್ಯಂತ ನಾಶಕಾರಿ ಗುಣದಿಂದಾಗಿ, 'ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ ?' ಎನ್ನುವಂತೆ ಇವನ್ನು ಪ್ರಯೋಗಿಸುವ ತೀರ್ಮಾನ ತೆಗೆದುಕೊಳ್ಳುವುದು ಅವುಗಳನ್ನು ಹೊಂದಿದವರಿಗೆ ಸುಲಭವಲ್ಲ. ಆದ್ದರಿಂದಲೇ, ಈಗ ಅಮೇರಿಕಾದಲ್ಲಿ ಸಣ್ಣ ಪ್ರಮಾಣದಲ್ಲಿ ಹಾನಿಮಾಡುವ ಅಣ್ವಸ್ತ್ರಗಳ ಬಗ್ಗೆ ಸಂಶೋಧನೆಗಳನ್ನು ಕೈಗೊಳ್ಳುವ ಗುಪ್ತಾಲೋಚನೆ ನಡೆಯುತ್ತಿದೆ. ನಮ್ಮ ದೇಶ ಪೋಕ್ರಾನಿನಲ್ಲಿ ಅಣುಬಾಂಬ್ ಸ್ಫೋಟಿಸಿದಾಗ, ಅದೊಂದು ದುರ್ದಿನ ಎಂದುಕೊಂಡ ಜನಕ್ಕಿಂತ ನಾವು ಏನನ್ನೋ ಮಹತ್ತಾದುದನ್ನು ಸಾಧಿಸಿದೆವು ಎಂದುಕೊಂಡವರೇ ಜಾಸ್ತಿ. ಇದರ ಫಲಶ್ರುತಿ, ಬೆನ್ನ ಹಿಂದೇ ಪಾಕೀಸ್ತಾನವೂ ಅಣ್ವಸ್ತ್ರ ಸ್ಫೋಟಿಸಿ ತಾನೇನೂ ಕಡಿಮೆಯಿಲ್ಲವೆಂದು ವಿಕಟನಗೆ ನಕ್ಕಿತು.

ಇಂತಹ ಅಸ್ತ್ರಗಳನ್ನು ಸದ್ದಾಂ ಹುಸೇನರಂತಹ ದಂಡನಾಯಕರು ಎಷ್ಟು ಆಶ್ರಯಿಸಿದ್ದರೋ ಸರಿಯಾಗಿ ತಿಳಿದಿಲ್ಲ. ಆದರೆ, ಅವರ ಬಳಿ ರಾಸಾಯನಿಕ, ಜೈವಿಕ ಅಸ್ತ್ರಗಳಿವೆಯೆಂದು ಆರೋಪಿಸಿ, ಬಲಿಷ್ಠ ದೇಶಗಳು ಇರಾಕಿನಂತಹ ದೇಶಗಳ ಮೇಲೆ ಏಕಪಕ್ಷೀಯವಾಗಿ ಯುದ್ಧ ಹೂಡುವುದಂತೂ ಸಾಧ್ಯವಿದೆ.

ಒಟ್ಟಿನಲ್ಲಿ ಇಂತಹ ಸಂಶೋಧನೆಗಳು ಹೊಸಬಗೆಯ ಅಸ್ತ್ರಗಳನ್ನು ಹುಟ್ಟುಹಾಕುತ್ತವೆ, ಪ್ರಪಂಚದ ಜನರನ್ನೆಲ್ಲಾ ಇನ್ನೂ ಅಪಾಯಕಾರಿ ಪರಿಸ್ಥಿತಿಗೆ ತಳ್ಳುತ್ತವೆ. ನೆಮ್ಮದಿಯ ನಾಳೆಯನ್ನು ಬಯಸುವವರು, ಮುಂದಿನ ಪೀಳಿಗೆಗಳು, ಎಂತಹ ನರಕಗಳನ್ನು ಕಾಣಬೇಕಾದೀತು ಎನ್ನುವುದನ್ನು ಊಹಿಸದಿರುವುದೇ ಲೇಸು !

**ಪ್ರೊ|| ಎಂ. ಆರ್. ಎನ್. ಮೂರ್ತಿ**
ಮಾಲಿಕ್ಯುಲರ್ ಬಯೋಫಿಸಿಕ್ಸ್ ವಿಭಾಗ
ಭಾರತೀಯ ವಿಜ್ಞಾನ ಮಂದಿರ, ಬೆಂಗಳೂರು - ೧೨




ಬಡಾವಣೆಯಿಂದ ಬಡಾವಣೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನದ ಅಂಗವಾಗಿ, ಬೆಂಗಳೂರು ರಾಜಾಜಿನಗರದಲ್ಲಿರುವ ಸ್ಪಂದನ ನರ್ಸಿಂಗ್ ಹೋಂನಲ್ಲಿ ಪುಸ್ತಕ ಪ್ರದರ್ಶನ ಮತ್ತು ಮಾರಾಟ ನಡೆಯಿತು. ತಾ ೮-೧೧-೦೩ರಂದು ಸ್ಪಂದನ ನರ್ಸಿಂಗ್ ಹೋಂನ ನಿರ್ದೇಶಕರಾದ ಡಾ|| ಎಂ. ಶ್ರೀನಿವಾಸ್ ಮತ್ತು ಕಾರ್ಪೊರೇಟರ್ ಶ್ರೀ ಶ್ರೀನಿವಾಸ್ ಪುಸ್ತಕ ಪ್ರದರ್ಶನ ಉದ್ಘಾಟಿಸಿದರು. ನವಕರ್ನಾಟಕ ಪ್ರಕಾಶನದ ಹಾಗೂ ವೈದ್ಯಸಾಹಿತ್ಯ ಪರಿಷತ್ತಿನ ಪ್ರತಿನಿಧಿಗಳು ಭಾಗವಹಿಸಿದ್ದರು.

[ಕಲಾನಿವೇದನ. ಸಂ : ಎ. ಎನ್. ಸುಬ್ಬರಾವ್, ೧೯೨೯. ಮಹಾರಾಜರ ಆಳ್ವಿಕೆಯ ರಜತೋತ್ಸವದ ನೆನಪಿನಲ್ಲಿ ಕಲಾಮಂದಿರ ಪ್ರಕಟಿಸಿದ್ದು]

**ಮೊದಲ ಮಾತು**

ಕಲೆಗಳು ನಾಗರಿಕತೆಯ ಗುರುತುಗಳೆಂದೊಪ್ಪಿ, ಕಲೆಗಳ ಸ್ಥಿತಿಯಿಂದ ದೇಶದ ನಾಗರಿಕತೆಯನ್ನು ಅಳೆಯುವುದಾದರೆ, ನಾಗರಿಕ ಪ್ರಪಂಚದಲ್ಲಿ ನಮಗೆ ಅಷ್ಟು ಮಾನ್ಯವಾದ ಸ್ಥಾನವು ದೊರೆಯುವಂತೆ ತೋರುವುದಿಲ್ಲ. ಕಲೆಗಳು ದೇಶದ ಆರ್ಥಿಕ, ಧಾರ್ಮಿಕ ಉನ್ನತಿಗಳಿಗೆ ಸಾಧನಗಳು ಎಂದು ಒಪ್ಪುವುದಾದರೆ, ಸಾವು ಕಲೆಗಳನ್ನು ಹೀಗೆ ಅಡವಿಗೆ ಅಟ್ಟುವ ಯತ್ನ ಮಾಡಿರುವುದು ಎಂದಿಗೂ ಯೋಗ್ಯವಲ್ಲ.

ಕರ್ನಾಟಕವು ಹಿಂದಿನ ಕಾಲದಲ್ಲಿ ಕಲಾ ಪ್ರಪಂಚದಲ್ಲಿ ಹಿರಿಯದಾಗಿತ್ತೆಂಬುದಕ್ಕೆ ಇನ್ನೂ ನಿದರ್ಶನಗಳಿವೆ. ಸಂಗೀತ ಪ್ರಪಂಚದಲ್ಲಿ ದಕ್ಷಿಣಾದಿ ಸಂಗೀತವು ಈಗಲೂ ಕರ್ನಾಟಕ ಸಂಗೀತವೆಂದು ಪ್ರಸಿದ್ಧವಾಗಿದೆ. ಶಿಲ್ಪದಲ್ಲಿ ಹೊಯಿಸಳ ಸಂಪ್ರದಾಯವು ಪ್ರಪಂಚವನ್ನೇ ತಲೆದೂಗಿಸುತ್ತಿದೆ. ಚಿತ್ರಕಲೆಯಲ್ಲಿ ಅಜಂತ ಎಲ್ಲೋರಗಳ ಪ್ರಾಚೀನ ಕಲಾವೈಭವದ

# ಕಲಾಭಿವೃದ್ಧಿಯ ಕೆಲವು ಮಾರ್ಗಗಳು



ಅವಶೇಷಗಳು ನಮ್ಮ ಚಿತ್ರಗಾರರಲ್ಲಿ ಇನ್ನೂ ಅಲ್ಲಲ್ಲಿ ನಿಂತಿವೆ. ಹೀಗೆ ''ಕೊರೆಯುವ, ಕಟ್ಟುವ, ಆಡುವ ಹಾಡುವ'' ಶಕ್ತಿಯು ನಮ್ಮಲ್ಲಿ ಬೂದಿ ಮುಚ್ಚಿದ ಕೆಂಡವಾಗಿ, ಕುಳಿತಿದೆ. ಹೀಗೆ ಅಡಗಿ ಕುಳಿತಿರುವ ಶಕ್ತಿಯು ಮತ್ತೆ ಪ್ರವೃದ್ಧವಾಗುವಂತೆ ಮಾಡಿ, ಕಲೆಯನ್ನು ಕಾಪಾಡಿಕೊಂಡು ಕಲಾವಂತರಾಗಿ ಬೆಳಗಲು ನಮಗೆ ಸಾಧ್ಯವಿಲ್ಲವೇನು ?

**ಆಶ್ರಯದ ಅಭಾವ**

ಹಿಂದಿನ ಕಾಲದಲ್ಲಿ ವಿಜಯಲಕ್ಷ್ಮಿಯ ಸ್ವಯಂವರ ಮಾಲಿಕೆಯಿಂದೊಪ್ಪುವ ಹೆಗ್ಗತ್ತಿನ, ಅಗ್ಗಳದ ಶೂರರು ಗೆದ್ದು, ಸಾಮ್ರಾಜ್ಯವನ್ನು ಬೆಳೆಸಿ ಪಡೆದ ಅಂದಿನ ಹೆಸರನ್ನು ಮುಂದಿನ ಜನಾಂಗಗಳಿಗೂ ತೋರಿಸಬೇಕೆಂದು; ಕಾಲನ ಕೋರೆದಾಡೆಗೆ ಸಿಕ್ಕಿ ತಾವು ಜೀರ್ಣರಾಗಿ ಹೋದರೂ, ತಮ್ಮ ಹೆಸರು ಮಾತ್ರ ಶಾಶ್ವತವಾಗಿ ನಿಂತಿರಬೇಕೆಂದು; ಅಥವಾ ಜೀವನು ದೇವನಂಶನಾಗಿ ತನ್ನಲ್ಲಿಟ್ಟುಕೊಂಡಿರುವ ಸಿಸೃಕ್ಷಾ ಶಕ್ತಿಯ (ಕ್ರಿಯೇಟಿವ್ ಫೋರ್ಸ್) ಪ್ರಭಾವವನ್ನು ಹೊರಗೆಡವಲೆಂದು; ಮಾಡುವ ಯತ್ನಗಳ ಫಲವಾಗಿ ಕಲೆಗಳಿಗೂ ಕಲಾವಂತರಿಗೂ ಆಶ್ರಯವಿತ್ತರು. ರಾಜರನೇಕರು ತಾವೇ ಚಿತ್ರಗಳನ್ನು ಬರೆಯುತ್ತಿದ್ದರು. ಅಮೋಘವಾಗಿ ಹಾಡುತ್ತಿದ್ದರು; ಅದ್ವಿತೀಯ ಕಾವ್ಯಗಳನ್ನು ರಚಿಸುತ್ತಿದ್ದರು; ಅವರ ಮತ್ತು ಅವರ ಆಶ್ರಿತರ ಆಶ್ರಯದಲ್ಲಿ, ಕಲಾವಂತರು ದೇವರನ್ನೂ ಕೂಡ ಒಲಿಸುವಂತಹ, ಮಹಿಮಾ ಸಂಪನ್ನವಾದ ಕಾರ್ಯಗಳನ್ನು ಮಾಡಿದರು. ಭರತಖಂಡದಲ್ಲಿ ಅಂತಹ ರಾಜರಿದ್ದಾಗ ಭಾರತಿಯಿಲ್ಲಿ ನಾಟ್ಯವಾಡುತ್ತಿದ್ದಳು; ಶಾರದೆಯ ನೆಲೆಬೀಡಿನಲ್ಲಿ ಲಕ್ಷ್ಮಿಯೂ ನಲಿಯುತ್ತಿದ್ದಳು.

ಆ ಕಾಲಗಳೆಲ್ಲವೂ ಈಗ ಕವಿಗಳ ಕಪೋಲದಲ್ಲುಳಿಯಿತು. ಕಲೆಗಳನ್ನು ತಾವು ಅಭ್ಯಾಸಿಸುವುದಿರಲಿ, ಕಲಾವಂತರಿಗೆ ಆಶ್ರಯ ಕೊಡುವುದಿರಲಿ, ಪ್ರಾಚ್ಯ ಕಲೆಯೆಂದರೆ ಮೋರೆಯನ್ನು ಓರೆ ಮಾಡುವ ಕಾಲ ಬಂದಿತು. ಹೊರ ದೇಶದವರು ಅರಸರಾದರು. ಅರಸರನ್ನು ಹಿರಿಯರೆಂದು ಓಲೈಸುವುದು ಭಾರತೀಯನಿಗೆ ಬಂದ ಹುಟ್ಟು ಗುಣ. ಅದಕ್ಕೆ ಅನುಗುಣವಾಗಿ ನಮ್ಮ ಅರಸರೆನಿಸಿಕೊಂಡ ಸಾಮಂತರು ಸಮ್ರಾಜರನ್ನು ಒಲಿಸುವ ಯತ್ನ ಮಾಡಿದರು. ನಡೆನುಡಿಗಳಲ್ಲಿ ಉಡುಗೆ ತೊಡುಗೆಗಳಲ್ಲಿ, ಆಟ ಪಾಟಗಳಲ್ಲಿ ಆಹೋತ್ತರಗಳಲ್ಲಿ ರೀತಿ ನೀತಿಗಳಲ್ಲಿ ಅವರನ್ನು ಅನುಕರಿಸುತ್ತ ಬಂದರು. ಅವರನ್ನು ಆಶ್ರಯಿಸಿದ ಪ್ರಜಾವರ್ಗವು ಅವರಿಗಿಂತಲೂ ಹೆಚ್ಚಾಗಿ ಕುಣಿಯಿತು. ಆಗಿರುವುದೇನು ಎನ್ನುವುದನ್ನು ಯಾರೂ ಹೇಳಬೇಕಾಗಿಲ್ಲ; ಹೇಳಬೇಕಾಗಿ ಬಂದರೆ ಒಂದೇ ಮಾತು ಸಾಕು. ''ನಮ್ಮದೆನ್ನುವುದೂ ಒಂದು ಇದೆಯೇನು ?'' ಎಂದು ಕೇಳುತ್ತಾರೆ ನಮ್ಮವರು.

ಆದರೆ ಕವಿದಿರುವ ಕಾರ್ಗಾಲದ ಮೋಡದಲ್ಲಿಯೇ ಕಗ್ಗತ್ತಲನ್ನುಳಿಸುವ ಮಿಂಚು

**ದೇವುಡು**

೧೯೨೯ ರಷ್ಟು ಹಿಂದೆ ಪ್ರಕಟವಾಗಿದ್ದ ಈ ಲೇಖನವನ್ನು 'ಹೊಸತು' ಓದುಗರಿಗಾಗಿ ಪುನರ್ಮುದ್ರಿಸಲಾಗಿದೆ. ಖ್ಯಾತ ಕಲಾವಿದರಾಗಿದ್ದ ಶ್ರೀ ಎ. ಎನ್. ಸುಬ್ಬರಾವ್ ಅವರು ಪ್ರಕಟಿಸಿದ್ದ ಈ ಲೇಖನವನ್ನು ದೊರಕಿಸಿಕೊಟ್ಟವರು ಡಾ|| ವಿಜಯಾ.

ಮೂಡುವಂತೆ, ಈಗ ನಮ್ಮ ಸಂಸ್ಕೃತಿಯ ಮೇಲೆ ಬಿದ್ದು ತಿಂದು ಅರಗಿಸಿಕೊಳ್ಳಬೇಕೆಂದು ಹವಣಿಸುತ್ತಿರುವ ಪರಸಂಸ್ಕೃತಿಯ ಪ್ರಭಾವದಿಂದಲೇ, ಈಗೊಂದು ಹೊಸ ಚಳುವಳಿಯೆದ್ದಿದೆ. ಹಿಂದೆ ಭರತಖಂಡದಲ್ಲಿ ಎಲ್ಲಿಯೋ ಎಂದೋ ಆಗಿರಬಹುದು; ಆದರೆ ಈ ರೀತಿಯಾಗಿ ಆಸೇತು ಹಿಮಾಚಲ ಪರ್ಯಂತವಾಗಿ ಈ ಚಳುವಳಿಯು ಹೀಗೆ ವ್ಯಾಪಿಸಿತ್ತೆಂದು ಮಾತ್ರ ಹೇಳಲಾಗುವುದಿಲ್ಲ.

ಹೊಸ ಚಳುವಳಿಯು ಪ್ರಜಾಸತ್ತಾತ್ಮಕವಾದುದು. ಹಗ್ಗದಲ್ಲಿರುವ ಹುರಿಗಳು ಮಾತ್ರವಲ್ಲ, ಈ ಹುರಿಗಳನ್ನು ಹೆಣೆದಿರುವ ಎಳೆಗಳಿಗೂ ಜೀವ ಬಂದಿದೆ. ಎಳೆಯೆಳೆಯೂ "ನಾನಿರಲು ನೀನುಂಟು, ನಾನಿಲ್ಲದಿರೆ ನೀನಿಲ್ಲ" ಎಂದು ಹಗ್ಗಕ್ಕೆ ಎಚ್ಚರ ಕೊಡುವ ಕಾಲ ಬಂದಿದೆ. ಅಲ್ಲದೆ ಬೀಸುವ ಗಾಳಿಯಿಂದ ಆದ ಮರದ ಬಗ್ಗುವಿಕೆಯಂತೆ, ಕ್ಷಣಿಕವಾಗಿ, ಅಸ್ಥಿರವಾಗಿ ಇರುವುದಕ್ಕೆ ಪ್ರತಿಯಾಗಿ ಸಮುದ್ರದ ಚಾಂಚಲ್ಯದಂತೆ ಶಾಶ್ವತವಾಗಿ ನಿಲ್ಲುವ ಸೂಚನೆಗಳೂ ತೋರಿಬಂದಿವೆ. ಮೇಲಿಂದ ಮೇಲೆ ಸಾಗಿಬರುತ್ತಿರುವ ತೆರೆಗಳ ಕುಲದಂತೆ, ಈ ಚಳುವಳಿಯು ಮುಂದುವರಿಯುತ್ತಲೇ ಇದೆ. ಇಲ್ಲಿ ನಮಗಿರುವ ಆಶೆ! ನಮ್ಮ ದೇಶವನ್ನುದ್ಧರಿಸುವ, ನಮ್ಮ ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ, ಮಹತ್ತರವಾದ ಬಲವಿರುವುದಿಲ್ಲ! ಇವರಿಗೆ ನಮ್ಮ ದೇಶವೆಂಬಭಿಮಾನ ವುಂಟು. ನಮ್ಮದೆಂಬ ಅಕ್ಕರೆಯುಂಟು. ಈ ಅಭಿಮಾನ ಅಕ್ಕರೆಗಳಲ್ಲಿ ಮುಂದಕ್ಕೆ ಆಗಬೇಕಾದ ಕಾರ್ಯಗಳನ್ನೆಲ್ಲ ಮಾಡುವ ಶಕ್ತಿಯು ಕುಳಿತಿದೆ. ಇವರಿಗೆ ಪರದೇಶದ ಅರಸರನ್ನೂ ಅವರ ಪ್ರತಿನಿಧಿಗಳನ್ನೂ ಆಶ್ರಯಿಸಿ, ಆಗ ಬೇಕಾದುದು ಏನೂ ಇಲ್ಲ. ಆಳುವುದಕ್ಕೆ ಬರುವ ಅರಸ ರೆಲ್ಲ ಅವರ ಮನೆಯಲ್ಲಿ ಆಳುಗಳೇ ಆದರೆ, ಇಲ್ಲಿಯೂ ಏಕೆ ಹಾಗೆಯೇ ಆಗಬಾರದೆಂದು ಕೇಳುವ ಈ ಜನ ವರ್ಗವು, ಅರಸರನ್ನು ಆಶ್ರಯಿಸಿ ಒಲಿಸಿ ಕೊಳ್ಳುವಿದಿರಲಿ, ತಾವು ಒಲಿದುದನ್ನು ಅವರೂ ಮೆಚ್ಚಬೇಕೆಂದು ಪ್ರತಿಭಟಿಸಿ ಹೇಳುತ್ತಿದೆ. ಇಂತಹ ಕಾಲ ಬಂದಿದೆ.

ಹಿಂದೆ ಕೃತವಿದ್ಯರಾದ ರಾಜರನ್ನು ಆಶ್ರಯಿಸಿ ಕಲಾ ವಂತರು ಬಾಳುತ್ತಿದ್ದರು. ಒಬ್ಬ ಯಜಮಾನನ ಅಂಕೆಯಲ್ಲಿ ಎಲ್ಲರೂ ಇರುತ್ತಿದ್ದುದರಿಂದ, ಒಬ್ಬನನ್ನು ಮೆಚ್ಚಿಸಿದರೆ ಎಲ್ಲರನ್ನೂ ಮೆಚ್ಚಿಸಿದಂತೆ ಆಗುತ್ತಿತ್ತು. ಈಗ ಹಾಗಲ್ಲ. ಒಬ್ಬೊಬ್ಬರನ್ನಾಗಿ ಮೆಚ್ಚಿಸಬೇಕು. ಅದರಲ್ಲಿ ಎಷ್ಟು ಜನ ಮೆಚ್ಚದವರು ಇರುವರೋ ಯಾರು ಬಲ್ಲರು? ಈಗಾಗಿರುವುದೆಂದರೆ ಮೆಚ್ಚದವರ ಸಂಖ್ಯೆ ಹೆಚ್ಚಾಗಿರು ವುದು ಮೊದಲನೆಯದು. ಮೆಚ್ಚುವವರ ಇಚ್ಛೆಯಂತಾ ಗಲು, ಅವಕಾಶವಿಲ್ಲದಂತೆ, ಅವರ ಕೈಯು ಬರಿದಾಗಿರು ವುದು ಎರಡನೆಯದು. ಈ ಎರಡು ಕೊರತೆಗಳನ್ನೂ ನಿವಾರಿಸಿದರೆ, ಮತ್ತೊಮ್ಮೆ ಕಲೆಗಳ ಕೃತಯುಗವು ಬಂದರೂ ಬರಬಹುದು. ಆದರೆ ಅದು ಆಗುವುದು ಹೇಗೆ?

**ಪ್ರೌಢ ಕಲಾ ಶಿಕ್ಷಣ**

ಗಿಡವು ಬೆಳೆಯಬೇಕಾದರೆ ನೆಲವು ಹಸನಾಗಿರ ಬೇಕು. ಅದಕ್ಕೆ ತಕ್ಕ ಗೊಬ್ಬರ ಬೇಕು. ಸಕಾಲಕ್ಕೆ ನೀರು ಒದಗಬೇಕು. ಅದನ್ನು ಸಾಯಿಸುವ ಕಳೆಗಳ ಕಾಟವಿರ ಬಾರದು. ಹಾಗೆಯೇ ಕಲೆಗಳು ಬೆಳೆಯ ಬೇಕಾದರೆ, ಕಲಾವಂತರ ಸಂಖ್ಯೆ ಹೆಚ್ಚಾಗಬೇಕಾದರೆ ಕಲಾಭಿಮಾನಿ ಗಳು ಬೆಳೆಯಬೇಕು. ಅಥವಾ ಜನರ ಮನಸ್ಸಿನಲ್ಲಿ, ಕಲೆಯೆಂದರೇನು? ಇದರಿಂದಾಗುವ ಲಾಭವೇನು? ಇದಿಲ್ಲದಿದ್ದರೆ ನಷ್ಟವೇನು? ಎಂಬ ವಿಚಾರಗಳು ಮೂಡಿ, ಮಡಲಿಟ್ಟು ಮನೆ ಮಾಡಿರಬೇಕು. ಈ ಪ್ರಶ್ನೆಗಳಿಗೆ ಅಡಿಗಡಿಗೆ ಉತ್ತರ ಹೇಳಿ ಹೇಳಿ, ಮನಸ್ಸು ದಣಿದಿರ ಬೇಕು. ಅಂತಹ ಆವರಣದಲ್ಲಿ ಕಲಾವಂತನ, ಸೊಗಸು ಗಾರನ, ಸವಿಗನಸುಗಳು ಮೊಳೆಗಂಡು, ಬೆಳೆದು, ಹೂ ವಡೆದು ಮೆರೆಯುವುದು.

ಇಂತಹ ಅನುಕೂಲ ಪರಿಸ್ಥಿತಿಯು ಸೃಷ್ಟಿಯಾಗ ಬೇಕಾದರೆ, ಕಲೆಗಳ ಬೆಳವಣಿಗೆಗೆ ತಕ್ಕ ವಾತಾವರಣವು ಮೂಡಬೇಕಾದರೆ, ಜನಗಳೊಪ್ಪಿರುವ ಮಾರ್ಗದಲ್ಲಿಯೇ, ಅವರಿಗೆ ಅಭ್ಯಾಸವು ದೊರೆಯಬೇಕು. ವಿಶ್ವವಿದ್ಯಾ ನಿಲಯಗಳ ಮುದ್ರೆಯು ಬಿದ್ದಲ್ಲದೆ, ದೊಡ್ಡತನವೆಲ್ಲಿಂದ ಬಂದೀತು? ಎಂದು ಕೇಳುವ ಈಗಿನ ಕಾಲದಲ್ಲಿ, ಅಲ್ಲಿಯ ಮುದ್ರೆಯಿಂದಲೂ ಅಲಂಕರಿಸಿಕೊಂಡು ಮೆರೆಯುವ ಭಾಗ್ಯವು ಕಲೆಗಳಿಗೂ ಬರಬೇಕು. ಕಲಾಧ್ಯಾಪಕರಿಗೂ, ಕಲಾರ್ಥಿಗಳಿಗೂ ಕಲಾವಂತರಿಗೂ, ವಿಶ್ವವಿದ್ಯಾನಿಲಯದ ಇತರ ಅಧ್ಯಾಪಕ, ವಿದ್ಯಾರ್ಥಿಗಳಿಗೆ ಇರುವ ಮಾನ ಮನ್ನಣೆಗಳೇ ಆಗಬೇಕು. ಇತರ ಶಾಸ್ತ್ರಗಳಿಗೆ ಹಾಕಿರುವ ಹಾಗೆಯೇ, ಕಲೆಗಳಿಗೂ ಒಂದು

ಮಣೆ ಹಾಕಬೇಕು. ಸಾಹಿತ್ಯಕ್ಕೆ ಸ್ಥಾನವುಂಟು; ಸಂಗೀತಕ್ಕೆ ಇಲ್ಲ; ಚಿತ್ರಕ್ಕೆ ಬೇಕಾಗಿಲ್ಲ; ಮತ್ತೊಂದಕ್ಕೆ ಆವಶ್ಯಕವಿಲ್ಲ; ಎಂಬ ಭೇದ ಭಾವದ ಸಂಕೋಚದ ಬುದ್ಧಿಯು ಮಾಯವಾಗಿ, ''ಎಲ್ಲರೂ ದೇವರ ಮಕ್ಕಳೇ'' ಎನ್ನುತ್ತಿರುವಂತೆ ಯೋಗ್ಯತೆಯಲ್ಲಿ ಎಲ್ಲವೂ ಸಮಾನವೇ! ಎಲ್ಲ ವಿದ್ಯೆಗಳೂ, ಜೀವನದಲ್ಲಿ ಅಡಗಿರುವ ದೇವನನ್ನು ಈಚೆಗೆ ತರಬಲ್ಲವೇ! ಎಂಬ ಉದಾರ ಚಿತ್ತತೆಯು ತಲೆದೋರಬೇಕು. ಒಟ್ಟಿನಲ್ಲಿ, ಮೊದಲ ಮೆಟ್ಟಲಿನಿಂದ ಹಿಡಿದು ಕೊನೆಯ ಶಿಖರದವರೆಗೂ, ವಿದ್ಯಾಭ್ಯಾಸದ ಪ್ರತಿಯೊಂದು ಅಂತಸ್ತಿನಲ್ಲಿಯೂ ಕಲೆಗಳಿಗೆ ಗೌರವದ ಸ್ಥಾನವು ದೊರೆಯುವಂತೆ ಮಾಡಬೇಕು. ಇತರ ಶಾಸ್ತ್ರಗಳನ್ನು ಬೋಧಿಸಲು ದಪ್ಪ ಸಂಬಳದ ದೊಡ್ಡ ತಲೆಗಳಿರುವಂತೆ ಇವಕ್ಕೂ ಆಗಬೇಕು. ಐಚ್ಛಿಕ ಭಾಗಗಳಲ್ಲಿ ಇವುಗಳಿಗೂ ಎಡೆಯಾಗಬೇಕು. ಇತರ ಶಾಸ್ತ್ರಗಳಲ್ಲಿರುವಂತೆ ಇವುಗಳಲ್ಲೂ ತಕ್ಕ ಪಠ್ಯಪುಸ್ತಕ ಪಾಠಕ್ರಮಗಳಿರಬೇಕು. ಇತರ ಶಾಸ್ತ್ರಗಳ ವಿದ್ಯಾರ್ಥಿಗಳಿಗೆ ದೊರೆಯುವಂತೆ ಕಲಾ ವಿದ್ಯಾರ್ಥಿಗಳಿಗೂ ವಿದ್ಯಾರ್ಥಿ ವೇತನವು ದೊರೆಯಬೇಕು. ಪರದೇಶಕ್ಕೆ ಹೋಗಿ ಬಂದರೆ ಪ್ರಯೋಜನವೆಂದು ಕಂಡುಬಂದರೆ, ಅದಕ್ಕೂ ಸಾಧನಗಳನ್ನು ಕಲ್ಪಿಸಬೇಕು.

ಹೀಗೆ ಮಾಡುವುದರಿಂದ, ಇತರ ಶಾಸ್ತ್ರಗಳ ಪರಿಚಯವನ್ನು ಜನರಿಗೆ ಉಂಟು ಮಾಡಲು ಕಲ್ಪಿಸಿರುವ, ಕ್ರಮವಾದ ಶಾಲಾ ಶಿಕ್ಷಣ, ಆಗಿಂದಾಗ ಭಾಷಣಗಳು, ವಿದ್ಯಾರ್ಥಿಗಳಿಗೆ ವೇತನವನ್ನು ಕೊಡುವುದು, ಆ ಸಂಬಂಧವಾದ ಪ್ರದರ್ಶನಗಳನ್ನು ಮಾಡುವುದು ಮೊದಲಾದ ಎಲ್ಲಾ ಉಪಾಯಗಳನ್ನೂ ಕಲೆಗಳಿಗೂ ಅವಲಂಬಿಸುವುದರಿಂದ, ಜನರಲ್ಲಿ ಕ್ರಮಕ್ರಮವಾಗಿ ಒಂದು ಪರಿಸ್ಥಿತಿಯು ಏರ್ಪಡುವುದು. ಇದು ಮೊದಲಾಗಬೇಕು.

ಜಗತ್ತಿನ ಭೋಗಭಾಗ್ಯಗಳಿಗೆ ಬೆರೆಯದೆ, ಅವನ್ನು ತೃಣಕ್ಕಿಂತಲೂ ಕಡೆಯೆಂದು ತಿರಸ್ಕರಿಸಿ, ಮೂಗು ಹಿಡಿದು ಮೂಲೆಯಲ್ಲಿ ಕುಳಿತು ಮೂರು ಲೋಕಕ್ಕೂ ದೊಡ್ಡವಾಗುತ್ತಿದ್ದ ನಮ್ಮ ನಾಡಿನಲ್ಲಿ, ನಮ್ಮ ದೌರ್ಭಾಗ್ಯದಿಂದ, ಹೊಟ್ಟೆಗೆ ದೊರೆಯುವುದೇ ದುರ್ಲಭವಾಗಿ, ಎಲ್ಲರೂ ಹೊಟ್ಟೆಯ ಪಾಡನ್ನು ಮೊದಲು ನೋಡಿಕೊಳ್ಳಬೇಕಾಗಿ ಬಂದಿದೆ. ಹೀಗಿರುವುದರಿಂದ, ಕಲೆಗಳನ್ನು ಕೇವಲ ಕಲಾರ್ಥವಾಗಿಯೇ ಕಲಿಯಬೇಕೆಂಬ ಉಚ್ಚತರದ ಆದರ್ಶದ ಶಿಕ್ಷಣಕ್ಕೆ ಸಹಾಯಕಾರಿಯಾಗಿ, ಕಲೆಗಳನ್ನು ಉಪಯೋಗಿಸಿಕೊಳ್ಳಬಲ್ಲ ಕಸುಬುಗಳನ್ನು ಬೋಧಿಸಬೇಕು. ಈಗ ಕಲೆಯು ಕೀಳಾಗುತ್ತಿರುವುದಕ್ಕೆ ಈ ಕುಸುಬುಗಳ ಅವನತಿಯೇ ಕಾರಣ. ಈ ಕಸುಬುಗಳು ಮತ್ತೆ ಬೆಳೆದರೆ, ಕಲೆಗಳು ಬೆಳೆಯುವುವು. ಕಸುಬುಗಳು ತೋಟದ ಹೆಮ್ಮರಗಳಂತೆ ಕಲೆಗಳು ಅವುಗಳ ನೆರಳಿನಲ್ಲಿ ಅವುಗಳನ್ನು ಅವಲಂಬಿಸಿ ಬೆಳೆಯುವ ಬಳ್ಳಿಗಳಂತೆ; ಈ ಕಸುಬುಗಳು ಬೆಳೆದಲ್ಲದೆ ಕಲೆಗಳು ಎಂದಿಗೂ ಬೆಳೆಯಲಾರವು.

**ಯಾರು ಮಾಡಬೇಕು?**

''ಆಯಿತು. ಎಲ್ಲವನ್ನೂ ಒಪ್ಪಿಕೊಳ್ಳೋಣ. ಆದರೆ ಇಷ್ಟನ್ನು ಮಾಡುವವರು ಯಾರು?'' ಎಂಬುದು ಮಹತ್ಪ್ರಶ್ನೆ. ಆಳುವವರು ಅನ್ಯದೇಶದವರು. ಅಧಿಕಾರಿಗಳು ಅವರ ಚಿತ್ತವೃತ್ತಿಯನ್ನು ಹಿಡಿದು ನಡೆಯುವವರು. ಆದರಿಂದ ಸರಕಾರದವರಿಂದ ಈ ಕೆಲಸವಾಗುತ್ತದೆ ಎಂಬ ನಂಬಿಕೆಯನ್ನು ಮಾತ್ರ ಮೊದಲು ತೊರೆಯಬೇಕು. ಅಷ್ಟಾಗಲಿ, ಇಷ್ಟಾಗಲಿ, ಮಹಾಜನರೇ ಅದನ್ನು ಸಾಧಿಸಬೇಕು. ಅಲ್ಲದೆ ನಮ್ಮ ದೇಶದಲ್ಲಿರುವಂತೆ ಪ್ರಜಾ ಹಿತೈಕ ತತ್ಪರವಾದ ಸರಕಾರವಾದರೂ ಮಾಡೀತು, ಎಂದರೆ, ಸರಕಾರದವರು ಮಾಡುವ ಕೆಲಸಗಳಿಗೆ ಮಿತಿಯುಂಟು. ಅಲ್ಲದೆ ಪ್ರತಿಯೊಂದಕ್ಕೂ ಸರಕಾರವನ್ನು ಬೇಡುವುದು ಅಷ್ಟು ಯೋಗ್ಯವಲ್ಲ. ಅವರು ಮಾಡುತ್ತಿ ರುವ ಕೆಲಸಕ್ಕೆ ನೆರವಾಗಿ, ಅವರು ಮಾಡದೆಯಿರುವ ಕೆಲಸವನ್ನು ನಾವು ಮಾಡೋಣ. ದೇಶವು ಸರಕಾರ ದವರದು ಮಾತ್ರವಲ್ಲ; ನಮ್ಮದೂ ಹೌದು. ದೇಶದ ಒಳ್ಳೆಯ ಸ್ಥಿತಿಗೆ ಸರಕಾರವು ಹೇಗೆ ಕಾರಣವೋ ಹಾಗೆಯೇ ನಾವೂ ಕಾರಣರು. ನಾವು ಯತ್ನ ಮಾಡೋಣ। ಬೇಕಾದರೆ ಆಮೇಲೆ ಸರಕಾರವನ್ನೂ ಸಹಾಯ ಮಾಡಿ ಎನ್ನೋಣ. ಮೊದಲೇ ಭಿಕ್ಷುಕರಾಗುವ ಬದಲು, ಆಮೇಲೆ ಸಹಾಯ ಕೇಳುವ ನೆರೆಹೊರೆಯವರಾಗೋಣ.

**ವ್ಯಕ್ತಿ ಪ್ರಯತ್ನ**

ಸರಕಾರದವರೂ ಸಮಾಜದವರೂ ಕಲಾಭಿವೃದ್ಧಿಗೆ ಯತ್ನಿಸುವ ಮೊದಲು ಇನ್ನೊಂದು ಕೆಲಸವಾಗಬೇಕು. ಕಲಾವಿಶ್ವಾಸಿಗಳಾದವರು ಅಲ್ಲಲ್ಲಿ ಇಲ್ಲದೆ ಇಲ್ಲ. ಇನ್ನು ಮುಂದೆ ಆಗಬೇಕಾದ ಕೆಲಸದ ಬಹ್ವಂಶವು ಇವರನ್ನು ಸೇರಿದೆ. ಇವರು ಕಲಾಕೋವಿದರು ಆಗಿರದಿದ್ದರೂ ಚಿಂತೆಯಿಲ್ಲ, ಕಲಾ ವಿಷಯದಲ್ಲಿ ಇವರಿಗಿರುವ ಅಭಿಮಾನವು ಸಾಕು. ತಮ್ಮಂತೆಯೇ ಅಭಿಮಾನಿಗಳಾದ ಇನ್ನು ಕೆಲವರನ್ನು ಸೇರಿಸಿಕೊಂಡು ಅವರು ಸೌಂದರ್ಯೋಪಾಸನೆಯನ್ನು ಆರಂಭಿಸಬೇಕು. ಸಾಹಿತ್ಯ ಸೇವಾ ಮಂಡಳಿಗಳೂ, ಗಾಯನ ಸಮಾಜಗಳೂ ಈಗ ಸಾಹಿತ್ಯಕ್ಕೂ, ಗಾನವಿದ್ಯೆಗೂ ಒದಗಿಸಿಕೊಡುತ್ತಿರುವಷ್ಟು ಅನುಕೂಲತೆಯನ್ನಾದರೂ, ಚಿತ್ರಕ್ಕೂ, ಇತರ ಲಲಿತಕಲೆಗಳಿಗೂ ಒದಗಿಸಿ ಕೊಡುವ ಸಮಾಜಗಳು ಬೆಳೆಯಬೇಕು. ಈ ಸಮಾಜಗಳು ಬೆಳೆದ ಹಾಗೆಲ್ಲಾ ಮುಂದಿನ ಕಲಾಭಿವೃದ್ಧಿಯ ಮಾರ್ಗವು ನಿರಾತಂಕವಾಗುವುದು.

**ಪೂರ್ವ ಸಿದ್ಧತೆ**

ಹಿಂದಿನ ಕಾಲದಲ್ಲಿ ಒಂದೊಂದು ಕಸುಬಿನವರೂ ಒಂದೊಂದು ಜಾತಿಯಾಗುತ್ತಿದ್ದರು. ಅವರವರ ಅನುಭವವು ಆಯಾ ಜಾತಿಯವರಿಗೆ ಸುಲಭವಾಗಿದ್ದುದಲ್ಲದೆ, ಆ ಜಾತಿಯವರ ಮನೆಗಳಲ್ಲಿಯ ವಿಶಿಷ್ಟ ಸಂಪ್ರದಾಯಗಳೂ, ನಡೆ ನುಡಿಗಳೂ ಆ ಕಸುಬನ್ನು ಅನುಸರಿಸಿರುತ್ತಿದ್ದು ಮನೆಯಲ್ಲಿ ಒಂದು ತೆರೆದ ಸಂಸ್ಕೃತಿ, ಒಂದು ಪೂರ್ವ ಸಿದ್ಧತೆಯಿರುತ್ತಿದ್ದವು. ಜಾತಿಯ ಪ್ರತಿಯೊಬ್ಬನಿಗೂ ಕಸುಬು ಕುಲ ಕ್ರಮಾಗತವಾಗಿರುತ್ತಿದ್ದುದರಿಂದ ಆ ಕುಲದಲ್ಲಿ ಹುಟ್ಟಿದ ಯಾವನಾದರೊಬ್ಬ ವಿಶೇಷ ವ್ಯಕ್ತಿಗೆ ಖ್ಯಾತಿಯನ್ನು ಸಂಪಾದಿಸುವುದು ಅಷ್ಟು ಕಷ್ಟವಾಗುತ್ತಿರಲಿಲ್ಲ. ಶಿಲ್ಪದವನು ದೈನಂದಿನ ವ್ಯವಹಾರಕ್ಕೆ ಬೇಕಾದಷ್ಟನ್ನು ತಿಳಿದುಕೊಂಡಿರುತ್ತಿದ್ದನು. ಅವನ ಮನೆಯಲ್ಲಿ ಹುಟ್ಟಿದ ಶಿಲ್ಪ ವಿಶಾರದ ಶಿಖಾಮಣಿಗೆ ಬೇಕಾದ ಪೂರ್ವ ಸಿದ್ಧತೆಯಿದ್ದು ಹಿಂದಿನವರು ಮುಂದಿನವರಿಗೆ ಬೇಕಾದ ಆಶ್ರಯವನ್ನು ಕೊಡಬಲ್ಲವರಾಗುತ್ತಿದ್ದರು. ಈಗ ಈ ಪದ್ಧತಿಯು ತಪ್ಪಿಹೋಗಿರುವುದರಿಂದ ಪ್ರತಿಯೊಬ್ಬ ಅಭಿಮಾನಿಯೂ ತನ್ನ ಕೈಲಾದಷ್ಟು ಕೆಲಸ ಮಾಡಬೇಕಾಗಿದೆ. ಸೌಂದರ್ಯ, ಸೌಖ್ಯಗಳ ವಿಚಾರವಾಗಿ ಪ್ರತಿಯೊಬ್ಬರೂ ಒಂದಲ್ಲ ಒಂದು ತೆರೆದ ಅಭಿಪ್ರಾಯವನ್ನು ಇಟ್ಟುಕೊಂಡೇ ಇದ್ದಾರೆ. ಸೌಂದರ್ಯ, ಸೌಖ್ಯಗಳ ಪರಿಚಯವಿಲ್ಲದವರು ಇಲ್ಲವೇ ಇಲ್ಲವೆಂದರೂ ಒಪ್ಪುವುದು. ಆದರೆ ಇರುವ ವ್ಯತ್ಯಾಸವೆಂದರೆ, ಕೆಲವರು ಕೂಲಂಕುಷವಾಗಿ ವಿಚಾರ ಮಾಡಿ ತಿಳಿದುಕೊಂಡಿರುತ್ತಾರೆ. ಇನ್ನು ಕೆಲವರಿಗೆ ಅಭಿಪ್ರಾಯಗಳು ಸ್ಫುಟಾಸ್ಫುಟವಾಗಿ ಇರುತ್ತವೆ. ಸಮಾಜಗಳು ಮಾಡಬೇಕಾದ ಕೆಲಸವೆಂದರೆ, ಸ್ಫುಟಾಸ್ಫುಟವಾಗಿರುವ ಅಭಿಪ್ರಾಯಗಳನ್ನು ಒಪ್ಪಹಾಕಿ ಬೆಳಗಿಸುವುದು. ಸೌಂದರ್ಯವೆಂದರೇನು? ಸೌಂದರ್ಯ ದರ್ಶನದಿಂದ ಸೌಖ್ಯವು ಹೇಗೆ ಲಭಿಸುವುದು? ಸೌಖ್ಯದಲ್ಲಿ ಸಾಧು ಯಾವುದು? ಅಸಾಧು ಯಾವುದು? ಎಂಬ ವಿಚಾರವಾಗಿ, ರೂಪಾಯಿಗೆ ಹದಿನಾರಾಣೆಯಷ್ಟು ಅಲ್ಲದಿದ್ದರೆ ಹೋಗಲಿ, ಎಂಟಾಣೆಯಷ್ಟಾದರೂ ಸರಿಯಾದ ಅಭಿಪ್ರಾಯಗಳು, ಪ್ರಜಾವರ್ಗದಲ್ಲಿ ಹರಡಲು ಈ ಸಮಾಜಗಳು ಅತ್ಯಂತ ಸಾಧಕಗಳಾಗುತ್ತವೆ. ಸರಕಾರದವರ ಪ್ರೋತ್ಸಾಹಗಳು ಎರಡನೆಯ ಮೆಟ್ಟಲು, ಮೊದಲನೆಯ ಮೆಟ್ಟಲು ಸಮಾಜದ ಕಾರ್ಯಗಳು ಎಂದರೂ ಒಪ್ಪುವುದಿಲ್ಲ.

**ಕೋವಿದರ ಕರ್ತವ್ಯ**

ಕಲಾಕೋವಿದರಾದವರು ನಮ್ಮಲ್ಲಿ ಇಲ್ಲದೇ ಇಲ್ಲ. ತುಂಬಿದ ಕೊಡವು ತುಳುಕುವುದಿಲ್ಲವೆಂಬ ಗಾದೆಯು ಸಾಧುವಾದುದು ನಿಜ. ಆದರೆ, ನಮ್ಮ ನಾಡಿಗೆ ಮಿಷನರಿಗಳು ಬಂದು, ತಮ್ಮ ಜಾತಿಯ ಸಂಖ್ಯೆಯನ್ನು ಬೆಳೆಸಬೇಕೆಂದು ಇತರರನ್ನು ಹೀಯಾಳಿಸುವುದಕ್ಕೆ ಆರಂಭಿಸುವುದಕ್ಕಿಂತ ಮುಂಚೆ, ಪರದೇಶದ ಆದಿ ಭೌತಿಕ, ಐಹಿಕ ಪ್ರಮುಖ ಸಂಸ್ಕೃತಿಯು ಬಂದು ನೆಲೆಯಾಗಿ ನಿಲ್ಲುವುದಕ್ಕೆ ಮುಂಚೆ ಇಂತಹ ಕೋವಿದರು ಮಾಡಬೇಕಾಗಿದ್ದ ಕೆಲಸವು ಬೇರೆ. ಈಗ ಈ ದುಷ್ಕಾಲದಲ್ಲಿ ಮಾಡಬೇಕಾಗಿರುವ ಕೆಲಸ ಬೇರೆ. ಹೊರದೇಶದವರು ತಾವು ಪಡೆದಿರುವ ಅನುಭವವನ್ನು ಮುಚ್ಚಿಡುವುದಿಲ್ಲವೆಂಬ ಅಭಿಪ್ರಾಯವು ತರುಣ ವರ್ಗದಲ್ಲಿ ಪರದೇಶದ ಪುಸ್ತಕಗಳ ಪರಿಚಯದಿಂದ ಹೆಚ್ಚುತ್ತಿದೆ. ಇಂತಹ ಕಾಲದಲ್ಲಿ ವಿಶಾರದರಾದವರು ಬಾಯಿಬಿಡದೆ ಕುಳಿತೆಡೆಯಲ್ಲಿ ಮೌನವಾಗಿ ಕುಳಿತಿದ್ದರೆ, ಅದರಿಂದ ಹಾನಿಯೂ ಅಪಕಾರವೂ ಆಗಲೇ ಆಗುತ್ತದೆಂದು ಖಂಡಿತವಾಗಿ ಹೇಳಬಹುದು. ಬೆಳೆಯುವ ಗಿಡವು ತಾನು ಸಂಪೂರ್ಣವಾಗಿ ಬೆಳೆದು ಬಂದಲ್ಲದೆ ಯಾರ ಕಣ್ಣಿಗೂ ಕಾಣಿಸೆನೆಂದು ಕುಳಿತಿರುವುದು ಸಾಧ್ಯವೇನು? ಹಾಗೆಯೇ, ವಿಶಾರದನಾದವನು, ಪಾರಂಗತನಾಗುವವರೆಗೂ ನಾನು ಹೊರಗೆ ಬರುವುದಿಲ್ಲವೆಂದು ಕುಳಿತುಕೊಳ್ಳಕೂಡದು. ಮೆಟ್ಟಲು ಮೇಲೇರಿದಂತೆಲ್ಲ ತನಗೆ ಲಭಿಸಿದ ಜ್ಞಾನವನ್ನು ಕೊಂಚವಾಗಿದ್ದರೂ ಚಿಂತೆಯಿಲ್ಲ, ತನ್ನ ಸಮಾಜಕ್ಕೆ ಕೊಡಬೇಕು. ವಿಶಾರದನಿಂದು ಒಂದು ಸುಂದರ ರೇಖೆಯನ್ನು ಎಳೆಯಬಲ್ಲವನಾಗಿದ್ದರೆ, ಕುರೂಪಿ ರೇಖೆಗಳನ್ನು ಒಂದು ಸಹಸ್ರವಾದರೂ ಎಳೆದೇ ಇರಬೇಕು. ಕೋತಿ ಗೆರೆಗಳನ್ನು ಎಳೆಯುತ್ತಿದ್ದವನು, ಇಂದು ಸರಿಯಾದ ರೇಖೆಗಳನ್ನು

ಎಳೆಯಬಲ್ಲವನಾಗಬೇಕಾದರೆ, ಆತನಿಗೆ ಎಷ್ಟೋ ಅನುಭವ ಬಂದಿರಬೇಕಲ್ಲವೆ? ಹಾಗೆ ತನಗೆ ಬಂದಿರುವ ಅನುಭವವನ್ನು ಕ್ರೋಢೀಕರಿಸಿ, ರೇಖಾ ಸೌಂದರ್ಯವನ್ನು ಕುರಿತು ಆತನು ಒಂದು ಗ್ರಂಥವನ್ನು ಬರೆದನೆಂದರೆ, ಅದು ಮುಂದಿನವರಿಗೆ ಅನುಕೂಲವಾಗುವುದು. ಇಂದಿನ ದಿನ ಈ ಹಾದಿಯಲ್ಲಿ ನಡೆದವನು, ಮೈಲಿಗಳನ್ನು ಗುರುತು ಮಾಡಿದ್ದರೆ, ಮುಂದೆ ಬರುವವರಿಗೆ, ಹಾದಿಯನ್ನಳೆಯುವ ಕಷ್ಟತಪ್ಪುವುದು.

ಗ್ರಂಥವಾಗಿಯೇ ಬರೆಯಬೇಕೆನ್ನುವುದರಲ್ಲಿಯೂ ಒಂದು ಸ್ವಾರಸ್ಯವುಂಟು. ಸಾವಿರ ಮಾತುಗಳನ್ನಾಡುವುದೂ ಒಂದೇ, ಹತ್ತು ಮಾತು ಬರೆಯುವುದೂ ಒಂದೇ. ಮಾತನಾಡುವಾಗ ಇರುವ ಹೊಣೆಗಾರಿಕೆಗಿಂತಲೂ, ಬರೆದಾಗ ಹೆಚ್ಚು ಹೊಣೆಗಾರಿಕೆಯುಂಟು. ಮಾತುಗಳನ್ನಾಡುವುದರಿಂದ ಕ್ಷಣಿಕ ಪ್ರಯೋಜನವಾಗುವುದಲ್ಲದೆ, ಗ್ರಂಥದಂತೆ ಶಾಶ್ವತ ಪ್ರಯೋಜನವಾಗುವುದಿಲ್ಲ. ಗ್ರಂಥವನ್ನು ಬರೆಯುವಾಗ ಆದರ್ಶ ಗ್ರಂಥಗಳನ್ನೇ ಬರೆಯಬೇಕೆಂಬ ಆಶೆಯಿರುವುದಂತೂ ಸಹಜ ಮತ್ತು ನ್ಯಾಯ. ಈಗ ಬರೆಯಬಲ್ಲವರಿದ್ದಾರೆ; ಆದರೆ ಆದರ್ಶ ಗ್ರಂಥಗಳನ್ನು ಬರೆಯುವವರು ಇದ್ದಾರೆಂಬ ವಿಷಯದಲ್ಲಿ ಮಾತ್ರ ಸಂದೇಹಪಡಬೇಕಾಗಿದೆ. ಬರೆಯುವವರು, ಆದರ್ಶ ಗ್ರಂಥಗಳನ್ನು ಬರೆಯಬೇಕೆಂಬ ಆಶೆಗಿಂತಲೂ, ಹತ್ತು ಜನರಿಗೆ ತಿಳಿಯಲಿ ಎಂಬ ಆಶೆಯನ್ನು ಇಟ್ಟುಕೊಂಡು ಬರೆದರೆ, ಎಷ್ಟೋ ಅನುಕೂಲವಾದೀತು. ಪಾಶ್ಚಾತ್ಯರು ಮುಂದರಿಯುತ್ತಿರುವುದರ ಗುಟ್ಟಿದು. ಅವರಲ್ಲಿ ಯಾರೂ ನಾನು ಬರೆದಿರುವುದೇ ಕೊನೆಯ ಮಾತೆಂದು ಹೇಳುವಂತೆ ಕಾಣಲಿಲ್ಲ. ಮುಂದಿನ ಮಾರ್ಗಣಕ್ಕೆ ಅಂದರೆ ಹುಡುಕುವುದಕ್ಕೆ ಅನುಕೂಲವಾಗಲೆಂದು ಬರೆಯುವರು ಚಕ್ರದಲ್ಲಿ ಮೊದಲು ಕೊನೆಯೆಂದು ಗೊತ್ತು ಮಾಡುವುದು ಹೇಗೆ? ಗೊತ್ತು ಮಾಡದಿದ್ದರೆ, ಮುಂದಕ್ಕೆ ಹೊರಡುವುದು ಹೇಗೆ? ಅದಕ್ಕಾಗಿಯಾದರೂ ಎಲ್ಲಿಯಾದರೂ ಒಂದು ಗುರುತು ಮಾಡಿ ಮುಂದಕ್ಕೆ ಹೊರಡಬೇಕಾಗಿದೆ. ಈಗ ಆಗಬೇಕಾಗಿರುವ ಗ್ರಂಥಗಳಿಂಥವು. ಬರೆಯುವವರು, ಶಾಶ್ವತವಾಗದ ಗ್ರಂಥಗಳನ್ನು ಬರೆಯುವುದು ಹೇಗೆಂದು ಅಶಂಕಿಸದೆ, ಮುಂದಿನ ಉದ್ಗ್ರಂಥಗಳಾಗುವುದಕ್ಕೆ ಇಂದು ಕೊನೆಗಳನ್ನು ನೆಡಬೇಕು.

**ಕಲಾಂಗಗಳು**

ಕಲೆಗೆ ಅಭ್ಯಾಸ, ಶಾಸ್ತ್ರ ಎಂಬ ಎರಡು ಅಂಗಗಳಿವೆ. ಅಭ್ಯಾಸಿಯು ಕಲಾವಂತನಾಗುವನು. ಅಧ್ಯಾಯಿಯು ಶಾಸ್ತ್ರಿಯಾಗುವನು. ಶಾಸ್ತ್ರಿಯು, ಕುಂದು ಕೊರತೆಗಳನ್ನು ತೋರಿಸಿ, ಮೇಲ್ಮೈಯ ಹಾದಿಯನ್ನು ತೋರುವನು; ಕಲಾವಂತನು ಅದನ್ನು ನಡೆದು ಅದರ ಕೊನೆಯಲ್ಲಿರುವ ಸೌಖ್ಯವನ್ನು ಸಾಧಿಸಿ ತರುವನು. ಒಬ್ಬನು ಗಣಿತಜ್ಞನಂತೆ, ಗುಣಾಕಾರ ಮಾಡಿ, ಎಲ್ಲೋ ಒಂದೆಡೆಯಲ್ಲಿ ಸಾಮಾನ್ಯರ ದೃಷ್ಟಿಗೆ ಬೀಳದೆ ಅಡಗಿರುವ ಸೌಖ್ಯದ ನೆಲೆಯನ್ನು ಗುರ್ತಿಸುವನು. ಇನ್ನೊಬ್ಬನು ಅದನ್ನು ಹುಡುಕಿಕೊಂಡು ಹೋಗಿ, ಮಾರ್ಗದಲ್ಲಿ ಅನೇಕಾನೇಕ ಕಷ್ಟ ಸುಖಗಳನ್ನು ಅನುಭವ ಮಾಡಿ, ಕೊನೆಗೆ ಬಹುಪ್ರಯತ್ನದಿಂದ ಅದನ್ನು ಸಾಧಿಸಿ ತರುವನು. ದೇಶದ ಭಾಗ್ಯದಿಂದ, ಸಮಾಜದ ಅದೃಷ್ಟದಿಂದ, ಕಲಾವಂತನೂ ಶಾಸ್ತ್ರಿಯೂ ಏಕತ್ರ ಸೇರಬೇಕು. ಒಬ್ಬನಲ್ಲಿಯೇ ಅಲ್ಲದಿದ್ದರೆ ಹೋಗಲಿ, ಹಾಲು ಸಕ್ಕರೆಗಳಂತೆ ಸಾಂಖ್ಯರ ಪ್ರಕೃತಿ ಪುರುಷರಂತೆಯಾದರೂ ಸೇರಬೇಕು. ವಿದ್ಯಾಭ್ಯಾಸದ ಉದ್ದೇಶವು ಹೀಗೆ ಸೇರಿಸುವುದಾಗಬೇಕು. ಅಲ್ಲಿಗೆ, ಕಳೆಗಳು ಮಾತ್ರವಲ್ಲ, ಪ್ರಪಂಚವೇ ಕಳೆ ಕೊಳೆಗಳಿಲ್ಲದೆ ಬೆಳೆದು ಆನಂದದ ಸುಗ್ಗಿಯಾಗುವುದು.

ಕಲಾವಿಷಯಕ ಗ್ರಂಥವನ್ನು ಬರೆಯುವವನು ಕೇವಲ ಲಾಕ್ಷಣಿಕನಾದರೆ, ಗ್ರಂಥವು "ಪುಸ್ತಕದ ಬದನೆಕಾಯಿಯಾಗುವುದು." ಕಲಾವಂತನು ಮಾತ್ರವಾದರೆ, ತನ್ನ ಅನುಭವವನ್ನು ಗ್ರಂಥಸ್ಥವನ್ನಾಗಿ ಮಾಡುವ ಯೋಗ್ಯತೆಯಿರುವುದು ಅಸಂಭವ. ನಮ್ಮಲ್ಲಿ ಕಲಾವಂತರನೇಕರಿದ್ದರೂ ಕಲೆಯು ಮುಂದರಿಯದೆ ಇರುವುದಕ್ಕೆ ಇದೂ ಒಂದು ಕಾರಣ.

ಆಚಾರ್ಯ ದಂಡಿಯು ಕಾವ್ಯ ಲೇಖನ ಶಕ್ತಿಯನ್ನು ಸಂಪಾದಿಸುವ ಮಾರ್ಗವನ್ನು ಕುರಿತು ವಿಚಾರಿಸುತ್ತ ದೇವರು ಕೊಟ್ಟ ಬುದ್ಧಿ, ತಾನು ಕಷ್ಟಪಟ್ಟು ಮಾಡಿದ ಶಾಸ್ತ್ರಗಳ ಅಧ್ಯಯನ, ಹಿಡಿದ ಮೇಲೆ ಸಾಧಿಸುವವರೆಗೂ ಬಿಡೆನೆಂಬ ಹಟದಿಂದ ನಡೆಸುವ ಯತ್ನಗಳು ಇವು ಇರಲು ಸಾರಸ್ವತ ಸಂಪದವು ಖಂಡಿತವಾಗಿಯೂ ಲಭ್ಯವಾಗುವುದು ಎನ್ನುತ್ತಾನೆ. ಮೊದಲನೆಯದು ಅನೇಕರಲ್ಲಿ ಉಂಟು; ಇನ್ನೆರಡನ್ನು ಕಷ್ಟಪಟ್ಟರೆ ಸಾಧಿಸ ಬಹುದು. ಹೀಗಿರಲು ಕಲೆಗಳೇಕೆ ಹಿಂದುಳಿಯಬೇಕು?

■ ದೇವುಡು



## ಸ್ವ(ವ)ರ್ಣ ಭಾರತಕ್ಕೆ

ಕೆಂಪು ಕೋಟೆ ಮೇಲೆ
ಏರುವ ಹಾರುವ ನಮ್ಮ
ತ್ರಿವರ್ಣ ಧ್ವಜ....
ಬಿಳಿ ಪಾರಿವಾಳ ಹಾರಿಸಿ
ಸ್ವತಂತ್ರರಾದವರೆಂದು :
ಆ ಬಣ್ಣಗಳೆಲ್ಲಾ ಒಂದಾಗಿ ಸಂಜೆಯವರೆಗೂ
ದೇಶದಲ್ಲೆಲ್ಲಾ ವಿಜೃಂಭಿಸಿ..
ಒಳಗೊಳಗೆ.ಕುದಿಯುವ
ಕದಿಯುವ ಖಾಕಿ
ಖಾದಿ ಕೇಸರ ವರ್ಣಗಳು ವಿಭಜಿಸಿ
ಅಬ್ಬರದ ಆಶ್ವಾಸನೆಯ ಮೆರವಣಿಗೆ -
(ಅ)ಹಿಂಸಾ ತತ್ವ ಪರಿಪಾಲನೆ
ಸುವರ್ಣ ಭಾರತದ ಪರಿಕಲ್ಪನೆ
ತಲೆ ಬರಹದ ಸಮಾನತೆ
ಗೋಡೆಗೆ ಹಚ್ಚಿದ ಸ್ಲೋಗನ್‌ಗಳ
ಗೋಂದು ಹಿಡಿದ ಕಾಗದದಷ್ಟೇ ಗಟ್ಟಿ;
ಗುಡಿಸಿಲುಗಳೇ ದಟ್ಟವಾಗಿ
ಗಾಳಿಗೊಡ್ಡಿದ ದೀಪದಂತೆ
ಕಮರುವ ಬಾಳ್ವೆಗಳು...
ಹಲವಿಧದ ಕಾರ್ಯಕ್ಕೆ
ಡಾರ್ವಿನನಿಂದ ರೋಬರ್ಟ್‌ನಾದ
ಈ ಮಾನವ
ಮೌಲ್ಯಗಳ ಕಳಚಿಟ್ಟು
ಬತ್ತಲಾಗುತ್ತಾನೆ
"ಹೊಸಯುಗದ ಈ - ಅಭ್ಯುದಯಕ್ಕೆ"

ರಜಿಯಾ ಡಿ. ಬಿ., ಶ್ರೀನಿವಾಸನಗರ ಅಂಚೆ, ಸುರತ್ಕಲ್-೫೭೪ ೧೫೭



# ಸಾಮಾಜಿಕ ಚರಿತ್ರೆಯ ಭಾಗವಾಗಿ ಕಾರಂತರ ಕಾದಂಬರಿಗಳು

**ನಾ**ವು ಒಪ್ಪಲಿ ಅಥವಾ ಬಿಡಲಿ - ಪ್ರತಿಯೊಂದು ಸಾಹಿತ್ಯ ಕೃತಿಗಳು ಒಂದು ಕಡೆಯಿಂದ ಪ್ರಾರಂಭವಾಗುತ್ತವೆ ಮತ್ತು ಮತ್ತೊಂದು ಕಡೆಯಿಂದ ಮುಕ್ತಾಯವಾಗುತ್ತವೆ. ಮೊದಲ ಪುಟದ ಮೊದಲ ಪದವೇ ನಮಗೆ ಪ್ರವೇಶದ ಹಾದಿ ಹಾಗು ಕೊನೆಯ ಪುಟದ ಕೊನೆಯ ಸಾಲುಗಳು ಮುಕ್ತಾಯದ ಮುಚ್ಚಿದ ಬಾಗಿಲುಗಳು. ಪ್ರಾರಂಭ ಮತ್ತು ಕೊನೆಯ ನಡುವೆ ಒಂದು ಭಾಷಿಕ ಜಗತ್ತು ಇರುತ್ತದೆ. ಅದು ಕತೆಯೋ, ಕಾದಂಬರಿಯೋ; ನಾಟಕವೋ ಆದರೆ ಘಟನೆ; ಕ್ರಿಯೆ; ಪ್ರದೇಶ ಇತ್ಯಾದಿಗಳಿರುತ್ತವೆ. ಆದುದರಿಂದಲೇ ಬರವಣಿಗೆಯೆನ್ನುವುದು ಒಂದು ಭಾಷಿಕ ಜಗತ್ತಿನ ನಿರ್ಮಾಣದ ಪ್ರಕ್ರಿಯೆ. ಸಾಹಿತ್ಯ ಕೃತಿಗಳೇ ಒಂದು ಜಗತ್ತು. ಪ್ರತಿಯೊಬ್ಬ ಲೇಖಕನೂ ತನ್ನ ಸಾಹಿತ್ಯ ಕೃತಿಯಲ್ಲಿ ಒಂದು ಜಗತ್ತನ್ನು ನಿರ್ಮಾಣ ಮಾಡುತ್ತಾನೆ. ಹೀಗೆ ನಿರ್ಮಾಣಗೊಳ್ಳುವ ಸಾಹಿತ್ಯ ಕೃತಿಗಳು ಎರಡು ಪ್ರಶ್ನೆಗಳನ್ನು ಎದುರಿಸಲೇಬೇಕಾಗುತ್ತದೆ; ಒಂದನೆಯದಾಗಿ, ಕಲಾಕೃತಿಯು ಅಥವಾ ಸಾಹಿತ್ಯ ಕೃತಿಯು ಯಾವ ರೀತಿಯ ಜಗತ್ತನ್ನು ಹೊಂದಿರುತ್ತದೆ ? ಸಾಹಿತ್ಯ ಕೃತಿಯ ರಚನೆ; ಅದರ ಸಾಧ್ಯತೆ, ಅದರ ಆಂತರಿಕ ತರ್ಕಗಳು ಯಾವ ಬಗೆಯವು ? ಎರಡನೆಯದಾಗಿ, ಅವನ ದೈನಂದಿನ ಜೀವನಾನುಭವ ಮತ್ತು ಅವನು ರಚಿಸಿದ ಕೃತಿಗೆ ಯಾವ ಮಾದರಿಯ ಸಂಬಂಧವಿದೆ ? ಆದರೆ, ಈ ಎರಡೂ ಪ್ರಶ್ನೆಗಳು ಒಂದು ಸಾಹಿತ್ಯ ಕೃತಿಯ ಚರ್ಚೆಯಲ್ಲಿ ಅತ್ಯಂತ ಕಷ್ಟದಾಯಕ. ಸಾಹಿತ್ಯ ಕೃತಿಗೂ ಲೇಖಕನಿಗೂ ಇರುವ ಸಂಬಂಧವನ್ನು ನಾವು ತಾಯಿ ಮತ್ತು ಮಗುವಿನ ಸಂಬಂಧವೆಂದೋ; ಲೇಖಕನ ಒಟ್ಟು ಅನುಭವವೇ ಕೃತಿಯಲ್ಲಿ ಸಾಕ್ಷಾತ್ಕಾರಗೊಂಡಿದೆಯೆಂದೋ ಹೇಳುವುದು ತುಂಬಾ ಸಮಸ್ಯೆಗಳಿಗೆ ಎಡೆಮಾಡಿಕೊಡುತ್ತದೆ. ಒಂದು ದೃಷ್ಟಿಯಿಂದ ಕಲಾಕೃತಿಯ ಜಗತ್ತು ಮತ್ತು ನಮ್ಮ ನಿಜವಾದ ಜಗತ್ತು ಎರಡೂ ಆಂತರಿಕವಾಗಿ ಬೇರೆ ಬೇರೆ ಮಾದರಿಯ ತರ್ಕಗಳನ್ನು ಒಳಗೊಂಡಿರುತ್ತವೆ. ಮತ್ತು ದೈನಂದಿನ ಜಗತ್ತು ಹೇಳುವ ತರ್ಕಗಳಿಗೆ ಬೇರೆ ಬೇರೆ ಸಮಸ್ಯೆಗಳ ಕೊಂಡಿಗಳಿವೆ. ದೈನಂದಿನ ಜಗತ್ತನ್ನು ಯಾರೋ ಒಬ್ಬ ಇದ್ದಕ್ಕಿದ್ದಂತೆ ಪ್ರಾರಂಭಿಸಿಲ್ಲ. ಇದ್ದಕ್ಕಿದ್ದಂತೆ ಮುಗಿಸಿಯೂ ಇಲ್ಲ. ನಮ್ಮ ದಿನದಿನದ ಬದುಕಿಗೆ ಮತ್ತು ಜಗತ್ತಿಗೆ ನಾವು ಒಂದೇ ರೀತಿಯ ವಾಹಕಗಳಿವೆಯೆಂದು ತಿಳಿಯುವುದಂತೂ ಸಾಧ್ಯವಿಲ್ಲದ ಮಾತು. ಆದರೆ, ಯಾವುದೋ ಒಂದು ಸಣ್ಣ ಕತೆಯನ್ನೋ; ಕಾದಂಬರಿಯನ್ನೋ; ನಾಟಕವನ್ನೋ ಓದತೊಡಗಿದರೆ ನಮಗೆ ಬೇರೆ ಭಾವನೆಯು ಬರುತ್ತದೆ. ಅದಕ್ಕೆ ಪ್ರಾರಂಭ ಮತ್ತು ಮುಕ್ತಾಯಗಳಿವೆ. ಹಾಗೂ ಇವುಗಳ ಜಗತ್ತು ಎನ್ನುವುದು ನಿರ್ಮಾಣಗೊಂಡಿರುವುದೇ ಭಾಷೆಯೆಂಬ ವಾಹಕದಲ್ಲಿ. ಹೀಗಾಗಿ ಸಾಹಿತ್ಯ ಕೃತಿಗಳು ವಾಸ್ತವವಾದಿ ಮಾರ್ಗದಲ್ಲಿ ವಾಸ್ತವದ ಬೇರೆ ಬೇರೆ ಮುಖಗಳನ್ನು ಹಿಡಿಯುತ್ತವೆ. ಹೀಗಾಗಿ ಸಾಹಿತ್ಯ ಕೃತಿಗಳು ಸಮಾಜವನ್ನು ತಮ್ಮ ಆಯ್ಕೆಗೆ ಅನುಸಾರವಾಗಿ ಬೇರೆ ಬೇರೆ ರೀತಿಯಲ್ಲಿ ನೋಡುತ್ತವೆ. ಸಾಹಿತ್ಯ ಕೃತಿಯು ಭಾಷೆಯಲ್ಲಿ ಮೂರ್ತರೂಪಗೊಳ್ಳುವ ಪ್ರಕ್ರಿಯೆಯಾಗಿರುವುದರಿಂದ ಈ ಸಮಸ್ಯೆಯಿದೆ. ಭಾಷೆಯ ಪ್ರಾತಿನಿಧೀಕರಣಕ್ಕೆ ಗುರಿಯಾಗುವ ಸಮಾಜ; ಜಗತ್ತು ಕೃತಿಯೊಳಗೆ ಬರುವಾಗ 'ಸೋಸಿದ ಪಠ್ಯ'ವಾಗಿ ಪರಿವರ್ತನೆಗೊಳ್ಳುತ್ತದೆ. ಬರಹ ರೂಪದಲ್ಲಿ ಇಳಿದ ಜಗತ್ತು ನಿಜವಾದ ಜಗತ್ತಿನ ಎಲ್ಲಾ ಅಂಶಗಳನ್ನು ಒಳಗೊಂಡಿರುವುದಿಲ್ಲ. ಒಳಗೊಳ್ಳುವುದು ಸಾಧ್ಯವೂ ಇಲ್ಲ. ಸಾಹಿತ್ಯ ಕೃತಿಗಳನ್ನು ಸಾಂಸ್ಕೃತಿಕ ಪಠ್ಯವೆಂದೋ, ಸಾಮಾಜಿಕ ಪಠ್ಯವೆಂದೋ ಕರೆಯುವಾಗ ಕೆಲವು ಅಂಶಗಳನ್ನು ನಾವು ಗಮನಿಸಬೇಕಾಗುತ್ತದೆ. ಬರಹದ ಜಗತ್ತನ್ನು ನಾವು ಚರ್ಚಿಸುವಾಗ ಅದು ಸಮಾಜದ ಭಾಗಶಃ ಚರ್ಚೆಯೇ ಹೊರತು ಅದು ಸಂಪೂರ್ಣವಾದ ಸಮಾಜದ ಚರ್ಚೆಯ ಭಾಗವಲ್ಲ; ಸಂಪೂರ್ಣವೂ ಅಲ್ಲ. ಕೃತಿಯೊಂದನ್ನು ಸಾಂಸ್ಕೃತಿಕ ಪಠ್ಯವಾಗಿ ಓದುವಾಗ ಸಂಸ್ಕೃತಿಗಳಲ್ಲಿರುವ ಭಿನ್ನ ಸ್ತರಗಳನ್ನು ಗಮನಿಸುವುದು ಅವಶ್ಯವಿದೆ. ರೇಮಾಂಡ್ ವಿಲಿಯಮ್ಸ್ ಸಂಸ್ಕೃತಿಯ ಬಗ್ಗೆ ಹೇಳುತ್ತಾ ಮೂರು ರೀತಿಯ ವರ್ಗೀಕರಣವಿರುವುದನ್ನು ಪ್ರಸ್ತಾಪಿಸುತ್ತಾನೆ. (1961. **The Long Revolution**, ಪುಟ ೪೧)

೧. **ಆದರ್ಶ ಸಂಸ್ಕೃತಿ :** ಸಂಸ್ಕೃತಿಯು ಒಂದು ರಾಜ್ಯವ್ಯವಸ್ಥೆ ಅಥವಾ ವಿಶ್ವಾತ್ಮಕ ಮೌಲ್ಯಕ್ಕೆ ಸಂಬಂಧಿಸಿದಂತೆ ರೂಪುಗೊಳ್ಳುವ ಸಂಸ್ಕೃತಿಯ ಪರಿಕಲ್ಪನೆ.

೨. **ದಾಖಲೆ ಸಂಸ್ಕೃತಿ :** ಬುದ್ಧಿಜೀವಿಗಳ; ಕಲಾವಿದರ ಸೃಜನಶೀಲ ಪ್ರಕ್ರಿಯೆಯಲ್ಲಿ ರೂಪುಗೊಳ್ಳುವ ಸಂಸ್ಕೃತಿ. ಇದರಲ್ಲಿ ಮನುಷ್ಯ ಆಲೋಚನೆ ಮತ್ತು ಅನುಭವಗಳನ್ನು ಬೇರೆ ಬೇರೆ ರೀತಿಯಲ್ಲಿ ದಾಖಲುಗೊಳಿಸಲಾಗುತ್ತದೆ.

೩. **ಸಾಮಾಜಿಕ ಸಂಸ್ಕೃತಿ :** ನಿರ್ದಿಷ್ಟ ಬಗೆಯ ಜೀವನ ಕ್ರಮಕ್ಕೆ ಇದು ಸಂಬಂಧಿಸಿದೆ. ದೈನಂದಿನ ಜೀವನದ ನಡವಳಿಕೆಯಲ್ಲಿ ವ್ಯಕ್ತವಾಗುವ ಮೌಲ್ಯಗಳಿಗೆ : ಅದರ ಅರ್ಥಗಳಿಗೆ ಅನುಸಾರವಾಗಿ ಇದರ ನಿರ್ವಚನ ನಡೆಯುತ್ತದೆ.

ನಾವು ಬರಹಗಳಲ್ಲಿ ಸಾಮಾನ್ಯವಾಗಿ ಸಮಾಜವೆನ್ನುವುದರ ಬದಲಿಗೆ ಸಂಸ್ಕೃತಿಯೆಂದು ಕರೆದು ಅದಕ್ಕೆ

> ಜೀವನವೆನ್ನುವುದು ನಿಗೂಢ.
> ಅದರ ಮೌಲ್ಯಗಳ ಹುಡುಕಾಟ ಮುಖ್ಯ.
> ಬದಲಾಗುತ್ತಿರುವ ಸಮಾಜದಲ್ಲಿ
> ಒಬ್ಬ ವ್ಯಕ್ತಿ; ಒಂದು ಕುಟುಂಬ; ಒಬ್ಬನ
> ಅಂತರಂಗ ಏನಾಗುತ್ತದೆಯೆಂದು ಮಾತ್ರ
> ಕಾರಂತರು ಕೇಳುತ್ತಾರೆ. ಜೀವನದ
> ವಿಮುಖತೆಯಿಂದ ಮನುಷ್ಯ ಏನೂ
> ಮಾಡಲಾರ. ಈ ಅರ್ಥದಲ್ಲಿ ಕಾರಂತರ
> ಕಾದಂಬರಿಗಳಲ್ಲಿ ಮನುಷ್ಯರು ದಿನದಿನದ
> ಸಾಮಾಜಿಕ ಚರಿತ್ರೆಯಲ್ಲಿ ಬಂಧಿಗಳು.

**ಡಾ|| ಕೇಶವ ಶರ್ಮ ಕೆ.**

ಪರಿಮಿತಿಗಳನ್ನು ಹಾಕಿದ್ದೇವೆ. ಹೀಗಾಗಿಯೇ ಸಾಹಿತ್ಯ ಕೃತಿಗಳನ್ನು 'ಸಾಂಸ್ಕೃತಿಕ ಪಠ್ಯ'ಗಳೆಂದು ಸಾಮಾಜಿಕ ಪಠ್ಯವೆನ್ನುವುದರ ಬದಲಿಗೆ ಕರೆಯುತ್ತಿದ್ದೇವೆ ಅಷ್ಟೆ ಮತ್ತು ವಸಾಹತೋತ್ತರ ಸಂದರ್ಭದಲ್ಲಿಯಂತೂ ಸಂಸ್ಕೃತಿಯ ಚರ್ಚೆಯ ಭಾರ ದೊಡ್ಡದು. ನಮ್ಮ ಅನುಭವಕ್ಕೆ ಬಂದಿರುವ ಸಾಮಾಜಿಕ ವಾಸ್ತವದ ಹಿನ್ನೆಲೆಯಿಂದಲೇ ನಮ್ಮ ಅನುಭವಕ್ಕೆ ತಕ್ಕನಾಗಿ ಬರೆಯದ ಲೇಖಕನನ್ನು ವೈರಿಬಣದಲ್ಲಿ ಗುರುತಿಸುವುದು ಕೂಡಾ ಇದೇ ಕಾರಣಕ್ಕೆ. ಲೇಖಕ ತನ್ನ ಬರಹಗಳಿಗೆ ಬೇಕಾದುದನ್ನು ಮಾತ್ರ ಆಯ್ಕೆಮಾಡುತ್ತಾನೆ. ಅವನು ಯಾವ ಗುಂಪಿನಲ್ಲಿದ್ದಾನೆ ಮತ್ತು ಯಾವುದನ್ನು ತನ್ನ ಕೃತಿಯಲ್ಲಿ ಹೇಳಬಯಸುತ್ತಾನೆ. ಅದಕ್ಕೆ ಅನುಸಾರವಾಗಿ ಅವನ ಆಯ್ಕೆಯು ರೂಪುಗೊಳ್ಳುತ್ತದೆ.

ಈ ಹಿನ್ನೆಲೆಯಿಂದ ಶಿವರಾಮ ಕಾರಂತರ ಕಾದಂಬರಿಗಳನ್ನು ನೋಡಬಹುದು. ಶಿವರಾಮ ಕಾರಂತರ ಮೊದಲ ಕಾದಂಬರಿಯು ಪ್ರಕಟವಾದುದು ೧೯೨೪ರಲ್ಲಿ (ವಿಚಿತ್ರ ಕೂಟ). ಅವರ ಕೊನೆಯ ಕಾದಂಬರಿ 'ನಷ್ಟ ದಿಗ್ಗಜಗಳು' ಪ್ರಕಟವಾದುದು ೧೯೮೩ರಲ್ಲಿ. ಹೆಚ್ಚು ಕಡಿಮೆ ೬೯ ವರ್ಷಗಳ ಕಾಲಾವಧಿಯಲ್ಲಿ ಬರೆದ ಅವರ ಕಾದಂಬರಿಗಳು ಒಂದೇ ನಮೂನೆಯವಲ್ಲ. 'ವಿಚಿತ್ರ ಕೂಟ' ಕಾದಂಬರಿಯು ಪತ್ತೇದಾರಿ ಮಾದರಿಯ ಕಾದಂಬರಿ. ಪತ್ತೇದಾರಿ ಮಾದರಿಯ ಕಾದಂಬರಿಯನ್ನು ಬರೆಯಲು ಪ್ರಾರಂಭಿಸಿದ ಕಾರಂತರು ಅನಂತರದಲ್ಲಿ ವಾಸ್ತವವಾದಿಯ ಕಡೆಗೆ ಒಲಿದರು. ಅಲ್ಲಿಂದ ಅನಂತರ ವ್ಯಂಗ್ಯದ ಧಾಟಿಯಲ್ಲಿ ಬರೆದರು. ಪತ್ತೇದಾರಿ ಕಾದಂಬರಿಗಳು ಸಾಮಾಜಿಕ ಮೌಲ್ಯದೊಂದಿಗೆ ಮುಖಾಮುಖಿಯಾಗುವುದಿಲ್ಲ ಮತ್ತು ಪತ್ತೇದಾರಿ ಕಾದಂಬರಿಗಳೆಂದು ನಾವು ಯಾವುದನ್ನು ಕರೆಯುತ್ತೇವೋ ಅದಕ್ಕೆ ಈಗ ನಾವು ಹೇಳುವ 'ಸಾಂಸ್ಕೃತಿಕ ಪಠ್ಯ'ವೆಂಬ ಗುಣವಿಲ್ಲ. ಕಾರಂತರು ಪತ್ತೇದಾರಿ ಕಾದಂಬರಿಯಿಂದ ವಾಸ್ತವವಾದಿ ಕಾದಂಬರಿಯ ಜಗತ್ತಿಗೆ; ಅಲ್ಲಿಂದ ವಿಡಂಬನಾತ್ಮಕ ಕಾದಂಬರಿಯ ಜಗತ್ತಿಗೆ ಪರಿವರ್ತನೆ ಹೊಂದಿರುವುದೇ ಸಾಂಸ್ಕೃತಿಕವಾಗಿ ವಿಶೇಷದ್ದು ಮತ್ತು ಬರಹಗಳಲ್ಲಿಯೂ ಕೂಡಾ ಅಷ್ಟೆ: ಒಮ್ಮೆ ಯಕ್ಷಗಾನ: ಮತ್ತೊಮ್ಮೆ ವಿಜ್ಞಾನ; ಇನ್ನೊಮ್ಮೆ ಕಾದಂಬರಿ - ಹೀಗೆ ಕಾರಂತರು ಬರೆಯುತ್ತಾ ಹೋದರು. ಅವರ ವೈಜ್ಞಾನಿಕ ವಿಚಾರಧಾರೆಗೂ, 'ಕುಡಿಯರ ಕೂಸು' ಕಾದಂಬರಿಯಲ್ಲಿ ಬರುವ ನೇಮಕ್ಕೂ ಯಾವುದೇ ಸಂಬಂಧವಿಲ್ಲ. ಭೂತ ಕೋಲದಲ್ಲಿ ಕಾರಂತರು ವಿಜ್ಞಾನವನ್ನು ತರುವುದಿಲ್ಲ ಮತ್ತು ವಿಜ್ಞಾನದ ಬರಹಗಳಲ್ಲಿ ಭೂತಗಳು ಕುಣಿಯುವುದಿಲ್ಲ. ಕಾರಂತರ ಬರಹಗಳ ಹಿಂದಿರುವ ವಿಸ್ಮಯವು ಕೂಡಾ ಇದೆ. ಸ್ವಾತಂತ್ರ್ಯಪೂರ್ವದ ಸಾಮಾಜಿಕ ಪಲ್ಲಟಗಳು ಅವರ ಕೆಲವು ಕಾದಂಬರಿಗಳಲ್ಲಿ ಮುಖ್ಯವಾದರೆ ಇನ್ನು ಕೆಲವು ಕಾದಂಬರಿಗಳಲ್ಲಿ ಸ್ವಾತಂತ್ರ್ಯದ ಅನಂತರದ ಸಾಮಾಜಿಕ ಸಂಗತಿಗಳ ನಿರೂಪಣೆಗಳು ಮುಖ್ಯವಾಗಿವೆ. ವಸಾಹತುಶಾಹಿ ಸಂದರ್ಭ ಮತ್ತು ವಸಾಹತೋತ್ತರ ಸಂದರ್ಭದ ಪ್ರಕ್ರಿಯೆಗಳು ಅವರ ಬರಹಗಳಲ್ಲಿ ಎದ್ದು ಕಾಣುತ್ತವೆ. ಯುರೋಪಿನ ಕೇಂದ್ರದಿಂದ ಹೊರಗೆ ಇರುವ; ಮತ್ತು ಅದರ ಜೊತೆಗೆ ಯಾವ ಸಂಪರ್ಕವೂ ಇಲ್ಲದ ಸಾಮಾಜಿಕ ಸ್ಥಿತಿಯಿಂದ ಪ್ರಾರಂಭಿಸಿ, ಯುರೋಪಿನ ಕೇಂದ್ರದ ಜೊತೆಗೆ ಅನುಸಂಧಾನ ಮಾಡುವ ಹಾಗೂ ಬಿಡುಗಡೆ ಹೊಂದುವವರೆಗೆ ಬೇರೆ ಬೇರೆ ಕಾದಂಬರಿಗಳನ್ನು ಕಾರಂತರು ಬರೆದಿದ್ದಾರೆ. ಉದಾಹರಣೆಗೆ 'ಚೋಮನ ದುಡಿ' ಕಾದಂಬರಿಯಲ್ಲಿ ಯೂರೋಪ್ ಇಲ್ಲ, ಆದರೆ ಅದರ ವಕ್ತಾರರಾದ ಪಾದ್ರಿಗಳಿದ್ದಾರೆ. ಪಾದ್ರಿಗಳ ಗಮನ ಕೆಳಜಾತಿಯವರ ಮೇಲಿದೆ. ಅವರು ಆಸ್ತಿಯ ಆಸೆಯನ್ನು ಒಡ್ಡುತ್ತಾರೆ. 'ಚೋಮನ ದುಡಿ' ಕಾದಂಬರಿಯಲ್ಲಿ ಭೂ ಹಿಡುವಳಿಯ ಪ್ರಶ್ನೆಯಿದೆ. ಸ್ವಾತಂತ್ರ್ಯದ ಅನಂತರದ ಭಾರತದಲ್ಲಿ ಸಂವಿಧಾನವು ಬಂದಾಗ ಅದರ ಎದುರು ಕೂಡ ಇದ್ದ ಪ್ರಶ್ನೆಗಳು ಇದುವೆ; ಅದು ಜಮೀನುದಾರಿ ಪದ್ಧತಿಯ ವಿನಾಶ ಹಾಗೂ ಆಸ್ತಿಯ ಹಕ್ಕು. ಕಾರಂತರ ಚೋಮನ ದುಡಿಯ ಪ್ರಾದೇಶಿಕ ವಿವರ ದಕ್ಷಿಣ ಕನ್ನಡ ಜಿಲ್ಲೆಯ ತುಳುನಾಡಿಗೆ ಸಂಬಂಧಿಸಿದ್ದು. ಆ ಕಾದಂಬರಿಯಲ್ಲಿ ಬರುವ ಸಂಕಪ್ಪಯ್ಯ ಬ್ರಾಹ್ಮಣ. ಜಾತಿ ದೃಷ್ಟಿಯಿಂದ ಸಾಮಾಜಿಕವಾಗಿ ಮೇಲುಸ್ತರಕ್ಕೆ ಸೇರಿದವನು. ಒಂದು ವೇಳೆ ಆ ಕಾದಂಬರಿಯು ಬಿಜಾಪುರದಲ್ಲಿಯೋ; ಮಂಡ್ಯದಲ್ಲಿಯೋ ನಡೆದಿದ್ದರೆ ಏನಾಗುತ್ತಿತ್ತು ? ಸಂಕಪ್ಪಯ್ಯನ ಬದಲು ಯಾರಿರುತ್ತಿದ್ದರು ? ಈ ಮಾತನ್ನು ಹೇಳಲು ಕಾರಣವಿಷ್ಟೆ; ಪ್ರಾದೇಶಿಕವಾಗಿಯೂ ಯಜಮಾನಿಕೆಯ ರೂಪಗಳು ಬೇರೆ. ಹಾಗೆಯೇ ಊಳಿಗದ ರೂಪಗಳು ಬೇರೆ. ಚೋಮನಿಗೆ ಭೂಮಿಯು ಬೇಕಾಗಿದೆ. ಅದರ ಉಳುಮೆಯನ್ನು ಮಾಡಬೇಕಾಗಿದೆ. ಭೂಮಿಯೆನ್ನುವುದು ಸಂಪತ್ತಿನ ದ್ಯೋತಕವಾಗಿದೆ. ಚಾರಿತ್ರಿಕವಾಗಿ

ವಸಾಹತುಶಾಹಿ ಕಾಲ ಘಟ್ಟದಲ್ಲಿ ಭೂ ಯಜಮಾನಿಕೆಯ ಚಹರೆಗಳು; ಅದರ ಕಾನೂನುಗಳು ಬದಲಾದವು. ಕಾರಂತರು ಚೋಮನ ದುಡಿ ಕಾದಂಬರಿಯಲ್ಲಿ ಎತ್ತಿಕೊಳ್ಳುವುದು ಈ ಪ್ರಶ್ನೆಯನ್ನು.

ಅದುವೇ ಕಾರಂತರ ಸಮೀಕ್ಷೆ (೧೯೫೬) ಒಂಟಿದನಿ (೧೯೬೬)ಯಂಥಾ ಕಾದಂಬರಿಗಳು ಎತ್ತಿಕೊಳ್ಳುವುದು ಬೇರೆ ಮಾದರಿಯ ಸಮಸ್ಯೆಗಳನ್ನು; ಅದೇ ಊರು, ಅದೇ ಮರ (೧೯೭೭) ಕಾದಂಬರಿಯು ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯದ ಅನಂತರದ ಸಾಮಾಜಿಕ ಸ್ಥಿತ್ಯಂತರದ ಕುರಿತು ತನ್ನ ವಿಚಾರಗಳನ್ನು ಮಂಡಿಸುತ್ತದೆ. ಈ ಮಾತುಗಳನ್ನು ಹೇಳಲು ಕಾರಣವಿಷ್ಟೆ; ಕಾರಂತರ ಕಾದಂಬರಿಗಳಲ್ಲಿ ಆಂತರಿಕ ತರ್ಕದ ವೈವಿಧ್ಯತೆಯಿದೆ. ವಿವಿಧ ಆಶಯಗಳಿವೆ; ಆಕೃತಿಗಳಿವೆ.

ಕಾರಂತರ ಕಾದಂಬರಿಗಳ ಜಗತ್ತು ಸಾಮಾನ್ಯರದ್ದು. ಕಾರಂತರು ಪೌರಾಣಿಕ ಹಾಗೂ ಸಂಸ್ಕೃತದ ಪರಂಪರೆಯಲ್ಲಿ ಬಂದಿರುವ ಸಂಗತಿಗಳನ್ನು ಕಾದಂಬರಿಗೊಳಿಸಿಲ್ಲ. ಸಾಮಾನ್ಯ ಮನುಷ್ಯರ ಸಾಮಾನ್ಯ ವಿವರಗಳನ್ನು ಅವರು ಕಾದಂಬರಿಯಲ್ಲಿ ಹೇಳಿರುವುದರಿಂದಲೇ ಅವರ ಕಾದಂಬರಿಯಲ್ಲಿ ಬರುವ ಮನುಷ್ಯರಿಗೆ ಅತಿಮಾನುಷ ಗುಣವಿಲ್ಲ. ಈ ದೃಷ್ಟಿಯಿಂದ ಕಾರಂತರು ದೇವುಡು, ಗಳಗನಾಥರ ಹತ್ತಿರವಿಲ್ಲ. ವಸಾಹತುಶಾಹಿ ಜಗತ್ತು ನಮ್ಮ ಸಾಮಾನ್ಯರ ಜೀವನ ಕ್ರಮಕ್ಕೆ ವಿಶೇಷ ಅರ್ಥವನ್ನು ಕಲ್ಪಿಸಿತಷ್ಟೆ. ಕಾರಂತರು ಈ ಸಾಮಾನ್ಯರ ಕುರಿತು ಬರೆಯುತ್ತಲೆ ಜೀವನಕ್ರಮದ ಪಲ್ಲಟಗಳನ್ನು ಸೂಚಿಸುತ್ತಾರೆ. ಕಾರಂತರ ಕಾದಂಬರಿಗಳು ಸಾಮಾನ್ಯ ಮನುಷ್ಯರ ಜೀವನ ಕ್ರಮದ ಬಗ್ಗೆ ಒಂದು ನಿರ್ಲಿಪ್ತ ದೃಷ್ಟಿಕೋನ ಇಟ್ಟುಕೊಂಡಿವೆ. ಸಾಮಾನ್ಯರ ಜೀವನವೆಂದು ಯಾವುದನ್ನು ಗುರುತಿಸುತ್ತೇವೋ ಅದಕ್ಕೆ ಸಾಂಪ್ರದಾಯಿಕ ಚರಿತ್ರೆಯಲ್ಲಿ ಜಾಗವಿಲ್ಲ. ಕಾರಂತರ ಕಾದಂಬರಿಗಳು ಒಂದು ಸಾಮಾನಿಕ ಪಠ್ಯವಾಗಿ ಮುಖ್ಯವಾಗುವುದು ಕೂಡಾ ಇದೇ ಕಾರಣಕ್ಕೆ.

ಕಾರಂತರ ಕಾದಂಬರಿಗಳು ಎರಡು ದಾರಿಗಳನ್ನು ಒಳಗೊಂಡಿವೆ: ಒಂದು, ನಿಜವಾದ ಜೀವನ ಕ್ರಮದ ಸತ್ಯಗಳೇನು ಎಂಬುದರ ಹುಡುಕಾಟ. ಗಾಂಧೀವಾದವು ಎಷ್ಟರ ಮಟ್ಟಿಗೆ ಉಪಯುಕ್ತವೆಂದು ಕೇಳುವ 'ಔದಾರ್ಯದ ಉರುಳಲ್ಲಿ' ಕಾದಂಬರಿಯಾಗಲಿ, 'ಜಾರುವ ದಾರಿಯಲ್ಲಿ' ಕಾದಂಬರಿಯಲ್ಲಿ ಬರುವ ಜೀವನದ ಆದರ್ಶದ ಪ್ರಶ್ನೆಯಾಗಲಿ, ಬದುಕಲು ಒಂದು ನಂಬಿಕೆ ಬೇಕು; ಆ ನಂಬಿಕೆಯನ್ನು ಸ್ವಲಾಭಕ್ಕಾಗಿ ಬಳಸುವ ಉಪಾಯವೂ ಜೀವಜಗತ್ತಿನ ಮಾರ್ಗವೆಂದು ಹೇಳುವ ಜಗದೋದ್ಧಾರ... ನಾ ಕಾದಂಬರಿಗಳು ಈ ಮಾದರಿಯ ಹುಡುಕಾಟ ಮತ್ತು ಪ್ರಶ್ನೆಗಳನ್ನು ನಮ್ಮ ಮುಂದೆ ಇಡುತ್ತವೆ.

ಎರಡನೆಯದಾಗಿ, ಕಾರಂತರ ಕಾದಂಬರಿಗಳಲ್ಲಿ ಬರುವ ಸಾಮಾಜಿಕ ಪ್ರದೇಶಗಳ ವ್ಯಾಖ್ಯಾನ ಹಾಗೂ ಅದರ ಹಿಂದಿರುವ ಬೇರೆ ಬೇರೆ ಒತ್ತಡಗಳು. ಕಾರಂತರ ಕಾದಂಬರಿಗಳಲ್ಲಿ ಬರುವ ಸಾಮಾಜಿಕ ಪ್ರದೇಶಗಳು ಮತ್ತು ಅವುಗಳ ನಡೆನುಡಿಗಳು ಒಂದೇ ಬಗೆಯವು ಅಲ್ಲ. ಕಾರಂತರ ಕಾದಂಬರಿಗಳಲ್ಲಿ ಮೂರು ಪ್ರದೇಶಗಳು ಪ್ರಮುಖವಾಗಿ ಎದ್ದುಕಾಣುತ್ತವೆ; ಒಂದು ಪುತ್ತೂರು ಸೀಮೆಯ ಸುತ್ತುಮುತ್ತಲಿನ ಪ್ರದೇಶ. ಇನ್ನೊಂದು ಉಡುಪಿ-ಕುಂದಾಪುರದ ಸುತ್ತಮುತ್ತಲಿನ ಪ್ರದೇಶ. ಹಾಗೂ ಮೂರನೆಯದಾಗಿ ಈ ಯಾವುದಕ್ಕೆ ಸಂಬಂಧವಿಲ್ಲದ ಮುಂಬಾಯಿ. ವಾಸ್ತವವಾಗಿ ಪುತ್ತೂರು ಸೀಮೆಯಲ್ಲಿ ಬ್ರಾಹ್ಮಣರು; ಸಾರಸ್ವತರು; ಬಂಟರು; ಮತ್ತು ಹಿಂದುಳಿದ ಜಾತಿಗಳಿಗೆ ಕೊರಗರು; ಮಿರರು ಮುಂತಾದವರು ಹೆಚ್ಚಿದ್ದಾರೆ. ಅದರಲ್ಲಿ ಬ್ರಾಹ್ಮಣರು ಭೂ ಯಜಮಾನಿಕೆಯ ಸವಲತ್ತನ್ನು ಪಡೆದುಕೊಂಡವರು. ಸಾರಸ್ವತರು ವ್ಯಾಪಾರೋದ್ದಿಮೆಗಳಿಗೆ ಹೆಸರಾದವರು. ಹಿಂದುಳಿದ ಜಾತಿಗಳು ಕೂಲಿ ಕಾರ್ಮಿಕ ವರ್ಗಕ್ಕೆ ಸೇರಿದವರು. ಕಾರಂತರ ಕಾದಂಬರಿಗಳಲ್ಲಿ ಬರುವ ಪುತ್ತೂರು ಸೀಮೆಯ ಕತೆಗಳಿಗೆ ಕೇಂದ್ರವಿರುವುದು - ಬ್ರಾಹ್ಮಣ ಮತ್ತು ಹಿಂದುಳಿದ ಜಾತಿಗಳಲ್ಲಿ; ಕುಡಿಯರ ಕೂಸು, ಚೋಮನ ದುಡಿ, ಬೆಟ್ಟದ ಜೀವ (ಕೊಡಗು-ಪುತ್ತೂರು ಸೀಮೆಗೆ ಇರುವ ಪ್ರಾದೇಶಿಕ-ಸಾಂಸ್ಕೃತಿಕ ಸಂಬಂಧಗಳು ಗಮನಾರ್ಹ). ಜಾರುವ ದಾರಿಯಲ್ಲಿ ಬರುವ ಸಾಮಾಜಿಕ ಪ್ರದೇಶಗಳಲ್ಲಿ ಕಾಡನ್ನು ಮಣಿಸುವ; ನಿಸರ್ಗದೊಂದಿಗೆ ಸೆಣಸಾಡುವ ಸಂಗತಿಗಳಿವೆ. ಪ್ರಾದೇಶಿಕವಾಗಿಯೂ ಈ ಪುತ್ತೂರು ಸೀಮೆಗೂ ಕಡಲಿಗೂ ಸಂಬಂಧವಿಲ್ಲ ಮತ್ತು ಕುತೂಹಲದಾಯಕ ಸಂಗತಿಯೆಂದರೆ ಪುತ್ತೂರು ಸೀಮೆಯ ಸುತ್ತುಮುತ್ತು ಇರುವ ಹವ್ಯಕ ಬ್ರಾಹ್ಮಣರು ಕೃಷಿಯ ವಿಚಾರದಲ್ಲಿ ಎತ್ತಿದ ಕೈ. ಈಗಲೂ ಪುತ್ತೂರು ಸೀಮೆಯ ಸುತ್ತುಮುತ್ತು ಹವ್ಯಕ ಬ್ರಾಹ್ಮಣರು ಗುಡ್ಡಗಳನ್ನು ಕಡಿದು ಸಮತಟ್ಟುಮಾಡಿ ಅದರಲ್ಲಿ ಅಡಿಕೆ ನೆಟ್ಟುದನ್ನು ಕಾಣಬಹುದು. ಈ ಹವ್ಯಕ ಬ್ರಾಹ್ಮಣರು ಸಾಮಾಜಿಕವಾಗಿಯೂ ಉನ್ನತ ದರ್ಜೆಯಲ್ಲಿಯೇ ಇದ್ದರು. ಅರಸು ಭೂ ಮಸೂದೆ ಕಾಯಿದೆಯಿಂದ ಅಲ್ಲಿ ಸಾಮಾಜಿಕ ಪರಿವರ್ತನೆಗಳಾಗಿವೆ. ಮತ್ತು ಪುತ್ತೂರು ಸೀಮೆಯಲ್ಲಿ ಮನೆಗಳು ಕೂಡಾ ಒತ್ತು-ಒತ್ತಾಗಿ ಇರುವುದಿಲ್ಲ. ಭೂ ಹಿಡುವಳಿಯ ಸಮೀಪದಲ್ಲಿಯೇ ಒಂಟಿಯಾದ ಮನೆಗಳು. ಬೇರೆ ಜಾತಿಗಳು ಏನಾಗಿವೆ, ಏನಾಗುತ್ತಿವೆ, ಎಂಬುದು ಕಾರಂತರಿಗೆ ಆಸಕ್ತಿಯ ವಿಷಯಗಳಲ್ಲ. ಸಾಮಾಜಿಕವಾಗಿ ಕಾರಂತರು ಅತ್ಯಂತ ಮೇಲ್ತುದಿಯಲ್ಲಿರುವ ಮತ್ತು ಅತ್ಯಂತ ಕೆಳಭಾಗದಲ್ಲಿರುವ ಜಾತಿಗಳಲ್ಲಿ ಉಂಟಾಗಿರುವ ಪಲ್ಲಟಗಳನ್ನು ಗುರುತಿಸಿದರು. ಅದು ಅವರ ಆಯ್ಕೆಯ ಪ್ರಶ್ನೆಯಾಗಿತ್ತು. ಈ ಕಾದಂಬರಿಗಳಲ್ಲಿ ಬರುವ ಬ್ರಾಹ್ಮಣರೂ ಸುಖಿಗಳಲ್ಲ; ಕೆಳಜಾತಿಯವರೂ ಸುಖಿಗಳಲ್ಲ ಮತ್ತು ಜಾತಿಯ ಬಿಗಿಯೊಂದು ಬದಲಾಗುತ್ತಿದೆ ಎಂದು ಕಾರಂತರು ಪ್ರಾಯಶಃ ಈ ಕಾದಂಬರಿಗಳಲ್ಲಿ ಪ್ರತಿಪಾದಿಸುತ್ತಿದ್ದಾರೆ. ಇದು ಕಾರಂತರ ಕಾದಂಬರಿಗಳ ಸಾಂಸ್ಕೃತಿಕ ಪುನರ್ ಸೃಷ್ಟಿ. ಹಳೆಯ ಮಾದರಿಯ ಸಾಮಾಜಿಕ ರಚನೆಯು

## ಲೇಖನಿ

ತಲೆಗೆ ತುಂಬಿದ್ದರೂ ಬರಹಕಿಳಿಯುವ ಪೂರ್ವ
ಗರ್ಭಧಾರಣೆ ಕಾಲ: ಹಡೆದ ಮುನ್ನಿನ ತಾಯ
ಬಸಿರೊಳಗಡಗಿದ ಭ್ರೂಣ. ದಿನವು ತುಂಬುವ ಮೊದಲೇ
ಅಚ್ಚಿಗವಸರಿಸೆ ಅಲೆಸಾರ : ಬೇನೆ ಎಂದೇ
ತಿಳಿದ ತಪ್ಪು ಮನಸಾಕ್ಷಿಯ ಮಾರಿ, ತನ್ನ
ನಿಜ ನಂಬಿಕೆಗೆ ವ್ಯತಿರಿಕ್ತದಭಿವ್ಯಕ್ತಿ ಕೃತಕ
ಗರ್ಭಪಾತ: ಸತ್ತ ಭ್ರೂಣ. ತಲೆಯಲ್ಲಿ ಹೊಕ್ಕ
ಬಿರುಗಾಳಿ ಗುಂಗು ಅಂಗಾಂಗದಲಿ ಸುತ್ತಿ ಸುಳಿ
ಗೊಂಡು ಅಕ್ಷರದಿ ಪಡೆಯುವ ಮೋಕ್ಷ : ಪ್ರತ್ಯಕ್ಷ
ತನ್ನ ಮಗುವಿಗೆ ತಾಯಿ ಕೊಡುವ ಮಮತೆಯ ಮುದ್ದು
ಸ್ವಂತದ್ದು ಕರ್ತೃವಿಗೆ ಅಂತ್ಯಕಾಣದ ಜಿದ್ದು
ಸೂರ್ಯನಿಗು ಆಗೀಗ ದಟ್ಟ ಮೋಡದ ಮುಸುಕು

ಬರೆಬರೆದಂತೆ ಲೇಖನಿ ಹರಿತ : ಮೋಚಿಯ ಉಳಿ
ಆದೀತು ರೇಶಿಮೆ ಕಸೂತಿ ಹಾಕುವ ಸೂಜಿ

**ಚೆನ್ನವೀರ ಕಣವಿ**
'ಚೆಂಬೆಳಕು', ಕಲ್ಯಾಣನಗರ, ಧಾರವಾಡ - ೫೮೦ ೦೦೭

ಬದಲಾಗುತ್ತಿದೆ. ಹೊಸದೊಂದು ಮೌಲ್ಯವು ಇವುಗಳಲ್ಲಿ ಹಾಜರಾಗುತ್ತಿದೆ. ಕಾರಂತರು ಈ ಕಾದಂಬರಿಗಳ ಮುಖೇನ ಸಾಹಿತ್ಯದ ಸಮಾಜಶಾಸ್ತ್ರವೆಂಬುದನ್ನು ನಮ್ಮ ಮುಂದಿಟ್ಟರು ಮತ್ತು ಅವುಗಳಲ್ಲಿ ಕಾರಂತರಿಗೆ ಆಯ್ಕೆಗಳಿದ್ದವು.

ಕಾರಂತರ ಕಾದಂಬರಿಗಳ ಸಾಮಾಜಿಕ ಪ್ರದೇಶವು ಮತ್ತೊಂದು ರೀತಿಯಲ್ಲಿ ರೂಪುಗೊಂಡಿದ್ದು ಕುಂದಾಪುರ; ಬಾರಕೂರು; ಉಡುಪಿ ಸೀಮೆಗಳಲ್ಲಿ, 'ನಂಬಿದವರ ನಾಕ-ನರಕ'ದ ಶೀರೂರು, 'ಇನ್ನೊಂದೇ ದಾರಿ'ಯ ಗಿಳಿಯಾರು; 'ಮೈಮನಗಳ ಸುಳಿಯಲ್ಲಿ'ಯಲ್ಲಿನ ಬಸರೂರು; ಉಕ್ಕಿದ ನೊರೆಯ ಬ್ರಹ್ಮಾವರದ ಹತ್ತಿರದ ಬಿಲ್ಲಾಡಿ; ಕೇವಲ ಮನುಷ್ಯರು ಕಾದಂಬರಿಯ ಉಡುಪಿ... ಹೀಗೆ. ಈ ಸಾಮಾಜಿಕ ಪ್ರದೇಶದಲ್ಲಿ ಬ್ರಾಹ್ಮಣರು : ಬಂಟರು : ಸಾರಸ್ವತರು : ಮೊಗವೀರರು : ಹಾಗೂ ಕೆಳಜಾತಿಯವರು ಮುಖ್ಯ. ಗದ್ದೆಗಳು ಇಲ್ಲಿಯ ಕೃಷಿ ಮೂಲದ ಸಂಪನ್ಮೂಲಗಳು. ಕಾಡು ಕಡಿಯುವುದು ಇಲ್ಲಿಯ ಜನರ ಬದುಕಿನ ಪ್ರಶ್ನೆಯಲ್ಲ. ಕಡಲು ಹತ್ತಿರದಲ್ಲಿದೆ. ಇಲ್ಲಿಯ ಜನರಿಗೆ ಕಡಲು ತುಂಬಾ ರೊಮ್ಯಾಂಟಿಕ್ ಆಗಿರುವಂಥದ್ದಲ್ಲ. ಬ್ರಾಹ್ಮಣರಲ್ಲಿ ಉಪಪಂಗಡವಾದ ಹವ್ಯಕರು ಇಲ್ಲಿ ಪ್ರಧಾನವಾದ ಜಾತಿಯಲ್ಲ. ಬ್ರಾಹ್ಮಣರ ಉಪಪಂಗಡದವರಾದ ಇತರ ಬ್ರಾಹ್ಮಣರು ಈ ಪ್ರದೇಶದಲ್ಲಿ ಹೆಚ್ಚು. ಇಲ್ಲಿಯ ಬಂಟ ಸಮುದಾಯಕ್ಕೆ ಹಿಡುವಳಿಯಿದೆ. ಬ್ರಾಹ್ಮಣರದು ತುಂಡು ಭೂಮಿ. ಪುತ್ತೂರು ಸೀಮೆಯವರನ್ನು ನೋಡಿದರೆ ಇವರು ಅವರಷ್ಟು ಆರ್ಥಿಕವಾಗಿ ಬಲಿಷ್ಠರಲ್ಲ, ಅಷ್ಟು ನೆಮ್ಮದಿಯನ್ನು ಕಂಡವರಲ್ಲ.

'ಬತ್ತದ ತೊರೆ', 'ಇದ್ದರೂ ಚಿಂತೆ'ಯಲ್ಲಿ ಮುಂಬೈ ಇದೆ. ಇಲ್ಲಿಗೆ ಬಂದವರು ಊರಿನಲ್ಲಿ ಸೋತು ಬಂದವರು. ಹೊಸ ಕೆಲಸ ಹುಡುಕಿಕೊಂಡು ಬಂದವರು. ಈ ಮಾತುಗಳನ್ನು ಹೇಳಲು ಕಾರಣವಿಷ್ಟೆ: ಕುವೆಂಪು ಕಾದಂಬರಿಗಳಲ್ಲಿ ಬರುವ ಸಾಮಾಜಿಕ ಪ್ರದೇಶ ನೇರವಾಗಿ ತೀರ್ಥಹಳ್ಳಿಯ ಸುತ್ತಮುತ್ತಣ ಪ್ರದೇಶಕ್ಕೆ ಸೇರುತ್ತದೆ. ಬೇಂದ್ರೆಯವರ ಕವಿತೆಗಳಲ್ಲಿಯೂ ಧಾರವಾಡ ನಿರ್ದಿಷ್ಟ ಸಾಮಾಜಿಕ ಪ್ರದೇಶ. ಆದರೆ ಕಾರಂತ ಕಾದಂಬರಿಗಳಲ್ಲಿ ಈ ಸಾಮಾಜಿಕ ಪ್ರದೇಶವೆಂಬುದು ಮೂರು ಬಗೆಯ ಕ್ರಿಯಾಕೇಂದ್ರಗಳನ್ನು ಇರಿಸಿಕೊಂಡಿದೆ. ಈ ಪ್ರದೇಶಗಳಿಗೆ ಅನುಸಾರವಾಗಿಯೇ ಕಾಡು; ಸಮಾಜ; ನಗರದ ವ್ಯಾಖ್ಯೆಗಳು ಕಾರಂತರ ಕಾದಂಬರಿಗಳಲ್ಲಿ ರೂಪುಗೊಂಡಿವೆ. ಸಾಮಾಜಿಕ ಪರಿವರ್ತನೆಗಳು ಕೂಡಾ ಕಾರಂತರಲ್ಲಿ ಭಿನ್ನ ಅವಸ್ಥಾಂತರಗಳಲ್ಲಿ ಹರಳುಗಟ್ಟಿವೆಯೆಂದು ಅನಿಸುತ್ತದೆ.

ಕಾರಂತರ ಕಾದಂಬರಿಗಳಲ್ಲಿ ಕೆಲವು ಪ್ರಶ್ನೆಗಳು ಮುಖ್ಯವಾಗಿವೆ : ಮನುಷ್ಯನ ನೈತಿಕತೆ ಮತ್ತು ಅವುಗಳ ಪರಿವರ್ತನೆಗಳಿಗೆ ಇವು ಸಂಬಂಧಿಸಿವೆ. ಕಲಾಜೀವನದ ಸಾರ್ಥಕತೆಯ ಕುರಿತ 'ಮೊಗ ಪಡೆದ ಮನ' ಬಾಳಿನ ಸಮೀಕ್ಷೆಯನ್ನು ನಡೆಸುವ 'ಸಮೀಕ್ಷೆ' ಬದುಕಿನ ನಂಬಿಕೆಯ ಕುರಿತು ಪ್ರಶ್ನೆಗಳನ್ನು ಎತ್ತುವ 'ಜಗದೋದ್ಧಾರ... ನಾ' ದೇವರು ಧರ್ಮ ನಂಬಿಕೆಗಳನ್ನು ಪರಿಶೀಲಿಸುವ ಆಳ-ನಿರಾಳ ಬಾಳುವುದಕ್ಕಾಗಿ ಹೇಳಬೇಕು. ಬಾಳದೆ ಹೋದರೆ ಬೋಳುಮಾತಾದೀತು ಎನ್ನುವ 'ಇನ್ನೊಂದೇ ದಾರಿ' ಕಾದಂಬರಿಗಳು ಇದಕ್ಕೆ ಕೆಲವು ಉದಾಹರಣೆಗಳು. ಮನುಷ್ಯ ಮನುಷ್ಯನಾಗಿ ಹೇಗಿರಬೇಕು ? ಯಾವುದು ನ್ಯಾಯವೂ, ಸಮ್ಮತವೂ ಆದ ಬಾಳಿನ ಕ್ರಮ ಎಂಬುದರ ಶೋಧನೆಯು ಕಾರಂತರಿಗೆ ಮುಖ್ಯ. ಯಾವುದು ನೈತಿಕ ಮತ್ತು ಯಾವುದು ಅನೈತಿಕವೆಂಬುದರ ವಿವರಣೆಯು ಕಾರಂತರ ಕಾದಂಬರಿಗಳಲ್ಲಿ ಎದ್ದುಕಾಣುತ್ತದೆ. ಕಾರಂತರ ಕಾದಂಬರಿಗಳಲ್ಲಿ ಬರುವ ನೈತಿಕತೆಯು ಒಂದು ನಿರ್ದಿಷ್ಟ ಸನ್ನಿವೇಶದಿಂದ ಕೂಡಿದ್ದು ; ಅದರ ನೈತಿಕ ಸಿದ್ಧಾಂತಗಳು ಆಯಾ ಸಾಮಾಜಿಕ ಪರಿಸರವು ಬದಲಾಗುತ್ತಿರುವ ಸನ್ನಿವೇಶದಲ್ಲಿ ಹುಟ್ಟಿಕೊಂಡವುಗಳಾಗಿವೆ. ಕಾರಂತರ ಕಾದಂಬರಿಗಳು ಎತ್ತುವ ಕೆಲವು ಪ್ರಶ್ನೆಗಳಿಗೆ ನಿರ್ದಿಷ್ಟ ಉತ್ತರಗಳಿಲ್ಲ. ಮತ್ತು ಅವು ಬದಲಾಗುತ್ತಿದ್ದ ಸಾಮಾಜಿಕ ಪರಿಸರದಲ್ಲಿ ಮಹತ್ವದ ಪ್ರಶ್ನೆಗಳಾಗಿವೆ. ಕಾರಂತರ ಕಾದಂಬರಿಗಳಲ್ಲಿ ಬರುವ ನೈತಿಕ ನಿಲುವು, ವ್ಯಕ್ತಿಯ ಘನತೆಯ ಪ್ರಶ್ನೆಗಳು ಸಾಮಾಜಿಕ ಪರಿಪ್ರೇಕ್ಷ್ಯದಲ್ಲಿ ರೂಪುಗೊಳ್ಳುವುದಿಲ್ಲವೆನ್ನುವುದು ಅಷ್ಟೇ ಗಮನಾರ್ಹ. ವಿಘಟಿತ ಕುಟುಂಬಗಳು; ಗಂಡು ಮತ್ತು ಹೆಣ್ಣಿನ ಸಂಬಂಧದಲ್ಲಿ ಬರುವ ಅನೈತಿಕತೆ; ಮನುಷ್ಯ ತಾನಾಗಿಯೇ ಬದುಕಿನ ಬಗ್ಗೆ ಒಳ್ಳೆಯ ಹಂಬಲ ಮತ್ತು ಆದರ್ಶವನ್ನು ಇಟ್ಟುಕೊಳ್ಳಬೇಕು ಎಂಬಂತಹ ಧೋರಣೆಗಳು ವ್ಯಕ್ತಿಯ ಮಟ್ಟದಲ್ಲಿಯೇ ಕಾರಂತರ ಕಾದಂಬರಿಗಳಲ್ಲಿ ಉಳಿಯುತ್ತವೆ. ವ್ಯಕ್ತಿಯ ನೈತಿಕತೆಯು ಕಾರಂತರ ಕಾದಂಬರಿಗಳಲ್ಲಿ ಸೂಚಿತವಾಗುವುದು ಜೀವನ ವಿಧಾನದಲ್ಲಿ, ಆಯಾ ವ್ಯಕ್ತಿಯ ನಡವಳಿಕೆಯಲ್ಲಿ ಮತ್ತು ನಿರ್ದಿಷ್ಟ ನೈತಿಕ ಮೌಲ್ಯದ ಪರಿಶೋಧನೆಯಲ್ಲಿ. ನಡವಳಿಕೆಗಳು ಸರಿಯೇ, ತಪ್ಪೇ ಎಂದು ನಿರ್ಧಾರವಾಗುವುದು ಕೂಡಾ ಜೀವನದ ನಿರ್ಣಾಯಕವಾದ ಗಳಿಗೆಯಲ್ಲಿ. ಕಾರಂತರ ವೈಯಕ್ತಿಕ ದೃಷ್ಟಿಕೋನಕ್ಕೆ ಅನುಸಾರವಾಗಿಯೇ ಈ ಸರಿ ತಪ್ಪುಗಳ ನಿರ್ಧಾರವಾಗುತ್ತದೆ. ವ್ಯಕ್ತಿಯ ಘನತೆ ಮತ್ತು ಜೀವನದ ಮೌಲ್ಯಗಳ ಬಗೆಗೆ ಕೊಡುವ ಒತ್ತು ಕಾರಂತರಿಗೆ ಮುಖ್ಯವಾಗುತ್ತದೆ. ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಬರುವ ಲಚ್ಚ ನೈತಿಕವಾಗಿ ಸರಿಯಿಲ್ಲ. ಕಾರಂತರ ಪ್ರಕಾರ ಅವನು ಅಡ್ಡದಾರಿ ಹಿಡಿದವನು. ಅಡ್ಡ ದಾರಿ ಹಿಡಿದವನ ಬದುಕು ಸುಖವಾದುದಲ್ಲ. ಅದರಲ್ಲಿ ಒಂದು ದುರಂತದ ಛಾಯೆಯಿದೆ. 'ಹೆತ್ತಳಾತಾಯಿ' ಕಾದಂಬರಿಯ ಕುಸುಮೆಯೂ ಕೂಡಾ ಕೊನೆಗೆ ತನ್ನ ಜೀವನದ ದಾರಿಯಿಂದಾಗಿ ಪಶ್ಚಾತ್ತಾಪ ಪಡುತ್ತಾಳೆ. ಹಾಗಿದ್ದರೆ ಸರಿ ಅಥವಾ ತಪ್ಪು ಎನ್ನುವುದು ನಿರ್ಧಾರವಾಗುವುದು ಯಾವುದರಲ್ಲಿ? ಆಯಾ ಸಂದರ್ಭದಲ್ಲಿ ಸರಿ ಅಥವಾ ತಪ್ಪುಗಳು ಒಂದೋ ನಾಯಕನಲ್ಲಿ ಇಲ್ಲವೇ ಅವನನ್ನು ರೂಪಿಸಿದ ಸಾಮಾಜಿಕ ಸ್ಥಿತಿಯಲ್ಲಿ ಈ ಸರಿ ತಪ್ಪುಗಳ ನಿರ್ಧಾರವಾಗುತ್ತದೆ. ನೈತಿಕವಾದ ನಿಲುವುಗಳಿಗೆ ಸಂಬಂಧಿಸಿದಂತೆ ಕೆಲವಕ್ಕೆ ಹಿಂದೂ ಹಾಗೂ ಬ್ರಾಹ್ಮಣೀಕರಣದ ನಿಲುವುಗಳು ಕೂಡಾ ಕಾರಣವಾಗಿವೆ.

ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬರುವ ಸರಸೋತಿ; ಪಾರೋತಿಯರ ಪಾತ್ರಗಳು ತುಂಬಾ ಆಕಸ್ಮಿಕವಾಗಿ ಹುಟ್ಟಿದೆಯೆಂದು ಅನಿಸುವುದಿಲ್ಲ. ಅವು ಆ ಕಾದಂಬರಿಯ ವಸ್ತುವನ್ನು ನಿರ್ವಹಿಸಿದ ಪಾತ್ರಗಳೂ ಹೌದು. ಆ ಕಾದಂಬರಿಯಲ್ಲಿ ಆ ಪಾತ್ರಗಳು ಇಡೀ ಕಾದಂಬರಿಯನ್ನೇ ಆಕ್ರಮಿಸಿಕೊಂಡ ಪಾತ್ರಗಳೂ ಆಗಿರುವುದಂತೂ ನಿಜ. ತುಂಬಾ ಸುರುಳೀತವಾಗಿ ಮಂಡನೆಯಾದ ಪಾತ್ರಗಳಂತೂ ಅಲ್ಲ. ಹಾಗೆಯೇ ನಾಗವೇಣಿಯೂ ಕೂಡಾ. ಅಂದರೆ ಕಾದಂಬರಿಯಲ್ಲಿ ಮೊದಲಿನಿಂದ ಕೊನೆಯ ತನಕ ಈ ಪಾತ್ರಗಳೇ ಬರುತ್ತವೆಯೆಂದು ಅರ್ಥವಲ್ಲ. ಕಾದಂಬರಿಯಲ್ಲಿ ಸ್ತ್ರೀಯರು ವಸ್ತು ನಿರ್ವಹಣೆಯಲ್ಲಿ ನಿರ್ಣಾಯಕರಾಗಿದ್ದಾರೆಂದು ಮಾತ್ರ. ನಿಮಿತ್ತ ಮಾತ್ರವಾಗಿ ಬರುವ ಪಾತ್ರಗಳಾಗಿ ಮಾತ್ರ ಅವುಗಳ ನಿರ್ವಹಣೆಯಿಲ್ಲ. ಈ ದೃಷ್ಟಿಯಿಂದಲೇ ಇವುಗಳು ತುಂಬಾ ತಾತ್ವಿಕ ಪ್ರಶ್ನೆಗಳನ್ನು ಎತ್ತಿಕೊಳ್ಳುತ್ತವೆ. ಬೇರೊಂದು ರೀತಿಯಲ್ಲಿ ಹೇಳಬೇಕೆಂದರೆ ಕಾರಂತರ ಕಾದಂಬರಿಗಳಲ್ಲಿ ಬರುವ ಸ್ತ್ರೀಯರು ಕಷ್ಟ ಸಹಿಷ್ಣುಗಳು, ತಾಳ್ಮೆಯವರು. ಅಂದರೆ : ಪರ್ಯಾಯವಾಗಿ ಕಾರಂತರು ಸ್ತ್ರೀತ್ವದ ಪ್ರಧಾನ ಶಕ್ತಿಯನ್ನು ಅಭಿವ್ಯಕ್ತಿಸುತ್ತಾರೆ. ಹೆಣ್ತನವು ಶಾಪವೆಂಬ ಕಲ್ಪನೆಯು ಅವರಿಗಿಲ್ಲ. ಅವರಿಗೊಂದು ಶಕ್ತಿಯಿದೆ. ಗೃಹಕೃತ್ಯವೂ ಅವರ ಪಾಲಿಗೆ ಮಹತ್ವದ್ದು ಮತ್ತು ಕುಟುಂಬದ ಹೊಣೆಗಾರಿಕೆಯು ಅವರಿಗಿದೆ. ಕಾರಂತರ ಕಾದಂಬರಿಗಳಲ್ಲಿ ಬರುವ ಈ ಬಗೆಯ ದೃಷ್ಟಿಕೋನವು ಗಮನಾರ್ಹ. ಕಾರಂತರ ಕಾದಂಬರಿಗಳಲ್ಲಿ ಮನೆಯ ಒಳಗಿನ ಸ್ತ್ರೀಯರ ಗಟ್ಟಿ ಚಿತ್ರಣವು ಯಾಕೆ ಬರುತ್ತದೆಯೆಂಬುದನ್ನು ಆಲೋಚಿಸಬೇಕು. ಇವರು ಮನೆಯೊಳಗಿನ ಗಟ್ಟಿಗಿತ್ತಿಯರು; ತಮ್ಮ ಅದೃಷ್ಟ ಮತ್ತು ವಿಧಿಗಾಗಿ ಶಪಿಸಿಕೊಳ್ಳುತ್ತಲೇ ಜೀವನವನ್ನು ಎದುರಿಸುವವರು. ಕಾರಂತರ ಕಾದಂಬರಿಗಳಲ್ಲಿ ಬರುವ ಸ್ತ್ರೀಯರು ಸಾಮಾಜಿಕ ಚರಿತ್ರೆಯ ಒಂದು ಭಾಗವಾಗಿರುವಂತೆ ಭಾಸವಾಗುತ್ತದೆ. ಅದುವೇ ಕಾರಂತರ ಕಾದಂಬರಿಗಳಲ್ಲಿ ಬರುವ ಸುಶಿಕ್ಷಿತ ಸ್ತ್ರೀಯರ ಧೋರಣೆಯು ಭಿನ್ನ. ತುಂಬಾ ಸರಳವಾಗಿ ಹೇಳಬೇಕೆಂದರೆ, ಹಿಂದೂ-ವೈದಿಕ ಪರಂಪರೆಯೊಳಗೆ ಬಂದ ಸ್ತ್ರೀಯರ ಬದುಕಿನ ಬಗೆಗಿನ ದೃಷ್ಟಿಕೋನವು ಒಂದು ಬಗೆಯದಾದರೆ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಮಾನಸಿಕವಾಗಿ ತೆರೆದುಕೊಂಡ ಸ್ತ್ರೀಯರ ಜೀವನದ ಬಗೆಗಿನ ದೃಷ್ಟಿಕೋನವು ಇನ್ನೊಂದು ಬಗೆಯದು. ವಿದ್ಯಾವಂತ ಸ್ತ್ರೀಯರು ಸ್ವತಂತ್ರರಾಗಲು ಇಷ್ಟಪಡುತ್ತಾರೆ. ಸ್ವಂತ ಸ್ವಾತಂತ್ರ್ಯವೇನೆನ್ನುವುದು ಅವರಿಗೆ ಮುಖ್ಯ.

ಕಾರಂತರ ಕಾದಂಬರಿಗಳ ಪ್ರಧಾನ ಆಸಕ್ತಿ ಕುಟುಂಬ ಮತ್ತು ದಾಂಪತ್ಯ ಜೀವನ. ಕುಟುಂಬವು ಒಡೆಯುವುದು ಬೇರೆ ಬೇರೆ ಕಾರಣಗಳಿಗೆ. ಅದರಲ್ಲಿ ಅನೈತಿಕ ಸಂಬಂಧವೂ ಸೇರಿಕೊಂಡಿದೆ. 'ಹೆತ್ತಳಾತಾಯಿ', 'ಮುಗಿಯದ ಯುದ್ಧ', 'ಕರುಳಿನ ಕರೆ', 'ಒಡಹುಟ್ಟಿದವರು' – ಹೀಗೆ ಬೇರೆ ಬೇರೆ ಕಾದಂಬರಿಗಳು ಇದರ ಚಿತ್ರಣವನ್ನು ಕೊಡುತ್ತವೆ. ಮದುವೆಯಾಚೆಗಿನ ಸಂಬಂಧಗಳೆಲ್ಲವೂ ಅನೈತಿಕವೆಂಬಂಥ ನಿಲುವು ಕಾರಂತರ ಕಾದಂಬರಿಗಳಿಗೆ ಇದೆ. ಹಾಗೆ ನೋಡುವುದಿದ್ದರೆ ನೈತಿಕ ಮತ್ತು ಅನೈತಿಕವೆಂಬುದು ಒಂದು ಸಾಮಾಜಿಕ ವಿವರಣೆ ಮಾತ್ರ. ಗಂಡು ಹೆಣ್ಣಿನ ಲೈಂಗಿಕ ಸಂಬಂಧವೆನ್ನುವುದು ಒಂದು ಸರಳ ಹಾಗೂ ಸಹಜ ಪ್ರಕ್ರಿಯೆ. ಆದರೆ ಆ ಸಂಬಂಧಗಳು ನೈತಿಕ ವಿವರಣೆಯಲ್ಲಿ ಬೇರೆಯಾಗುತ್ತವೆ. ಕಾರಂತರು ಕೂಡಾ ಈ ಬಗೆಯ ನೈತಿಕ ವಿವರಣೆಯಲ್ಲಿಯೇ ನಿಂತುಕೊಳ್ಳುತ್ತಾರೆ ಎಂದು ಅನಿಸುತ್ತದೆ.

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬರುವ ರಾಮ ಊರಿಗೆ ಬರುವುದು, ರಾಮೈತಾಳರ ನಿಧಿಯ ಪ್ರಸಂಗ, ಚಿಗುರಿದ ಕನಸು ಕಾದಂಬರಿಯಲ್ಲಿ ಶಂಕರ ಊರಿಗೆ ಬರುವುದು – ಇತ್ಯಾದಿ ಪ್ರಸಂಗಗಳನ್ನು ನೋಡಿದರೆ ಇವುಗಳಲ್ಲಿ ನಾಟಕೀಯ ಗುಣವಿರುವುದು ಕಾಣಿಸುತ್ತದೆ. ಕಾದಂಬರಿ ಮತ್ತು ನಾಟಕ – ಎರಡರ ಗುಣಗಳೂ

ಒಂದಕ್ಕೊಂದು ಸೇರಿಕೊಂಡ ಹಾಗೆ ಅನಿಸುತ್ತದೆ. ಕಾರಂತರ ಕಾದಂಬರಿಗಳಲ್ಲಿ ಬರುವ ಸಾಮಾನ್ಯ ವರ್ಗದ ಹೆಂಗಸರು ಜಗತ್ತನ್ನು ನೋಡುವುದೇ ತಮ್ಮ ಗೃಹಕೃತ್ಯದ ಮುಖೇನ. ಕಾರಂತರ ಎಲ್ಲಾ ಕಾದಂಬರಿಗಳಲ್ಲಿಯೂ ಇದು ವರ್ಣಿತವಾಗಿದೆಯೆಂದು ಅರ್ಥವಲ್ಲ. ಉದಾಹರಣೆಗೆ ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಒಂದು ವ್ಯತ್ಯಾಸವಿದೆ. ಅದು ಗಂಡು-ಹೆಣ್ಣಿನದು. ಮನೆಯ ಹೆಂಗಸರ ಬಗ್ಗೆ ಒಂಚೂರು ಗೌರವವಿಲ್ಲದ ರಾಮೈತಾಳ : ಇಂಗ್ಲಿಷ್ ಶಿಕ್ಷಣದಿಂದಲೇ ಪರಕೀಯವಾದ ಲಚ್ಚ. ಒಬ್ಬ ಆದರ್ಶವಾದಿ, ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೋತು ಸುಣ್ಣವಾದ ರಾಮ – ಇವರು ಒಂದೊಂದು ನೆಲೆಯಿಂದ ವರ್ತಿಸುತ್ತಾರೆ. ಲಚ್ಚ ಒಂದು ದೃಷ್ಟಿಯಿಂದ ಪಾಶ್ಚಾತ್ಯೀಕರಣಕ್ಕೆ ಗುರಿಯಾದವನು. ಅವನು ಕೊನೆಗೂ ಪರಕೀಯ. ವಸಾಹತುಶಾಹಿ ನಾಗರಿಕತೆಯ ಬಿಂಬಗಳು ಅವನ ವ್ಯಕ್ತಿತ್ವದಲ್ಲಿವೆ. ಆದರೆ, ಸರಸೋತಿ; ಪಾರೋತಿ; ನಾಗವೇಣಿಯರು ಊರಿಗೆ ಪರಕೀಯರಲ್ಲ. ಅವರಿಗೆ ಒಂದು ದೃಷ್ಟಿಯಿಂದ ಹೊರಗಿನ ಜಗತ್ತು ಗೊತ್ತೂ ಇಲ್ಲ. ಅದರ ಅರಿವೂ ಅವರಿಗಿಲ್ಲ. ಭೂಮಿಯ ಜೊತೆಗೆ ಕುಟುಂಬದ ಜೊತೆಗೆ ಅವರಿಗಿರುವುದು ಭಾವನಾತ್ಮಕ ಸಂಬಂಧ. ಸಾಮಾಜಿಕ ಹಾಗೂ ಸಾಂಪ್ರದಾಯಿಕ ಸಮಾಜವು ರೂಪಿಸಿಕೊಂಡಿರುವ ಕ್ರಮಗಳಿವು. ಲಚ್ಚನು ಸರಿಯಿಲ್ಲವಾದುದರಿಂದಲೇ ಅವನಿಗೆ ಆಸ್ತಿಯ ಹಕ್ಕು ಇಲ್ಲ. ಪಿತ್ರಾರ್ಜಿತವೋ; ಸ್ವಯಾರ್ಜಿತವೋ ಪ್ರಶ್ನೆಯಲ್ಲ. ನಾಗವೇಣಿಯ ಹೆಸರಿಗೆ ರಾಮೈತಾಳರು ಆಸ್ತಿಯನ್ನು ಬರೆಯುತ್ತಾರೆ. ಇಲ್ಲಿ ವಿಲ್ಲು ಬರೆಯುವುದು ವಸಾಹತುಶಾಹಿಯ ನ್ಯಾಯ ಕಾನೂನಿನ ವಿಚಾರ. ಆದರೆ, ಕೆಲಸ ಮಾಡುವುದು ಪಿತೃಕೇಂದ್ರಿತ ದೃಷ್ಟಿ. ಗಂಡಸರು ಮನೆಯ ಹೊರಗಿನವರು. ಸ್ತ್ರೀಯರು ಮನೆಯ ಒಳಗಿನವರು. ಪುರುಷರು ಪಿತೃಕೇಂದ್ರಿತ ಆಲೋಚನಾ ಕ್ರಮದ ದ್ಯೋತಕ. ನೇರ ನಿರ್ಧಾರ ಮಾಡಬಲ್ಲ ಗುಣವುಳ್ಳವರು. ಆದರೆ ಸ್ತ್ರೀಯರು ಪರೋಕ್ಷ ನಿರ್ಧಾರವನ್ನು ಕೈಗೊಳ್ಳಬಲ್ಲ ಸಮರ್ಥರು. ಮನೆಯ ವಿಷಯದಲ್ಲಿ; ಆಸ್ತಿಯ ವಿಷಯದಲ್ಲಿ ನೇರ ಮುಖಾಮುಖಿಯಾಗಲಾರರು. ಮನೆಯ ಆಗು-ಹೋಗುಗಳ ಬಗ್ಗೆ ಸರಸೋತಿ; ನಾಗವೇಣಿ; ಪಾರೋತಿಯರು ಬಳಸಿಕೊಳ್ಳುವ ಅಧಿಕಾರವು ಬೇರೆ ಮಾದರಿಯದು. ರಾಮೈತಾಳನದು ಹಳೆಯ ಸಾಂಪ್ರದಾಯಿಕ ಸಮಾಜವು ರೂಪಿಸಿದ ಮನೋವೃತ್ತಿಯಾದರೆ, ಲಚ್ಚನದು ಸ್ವತಂತ್ರ ಮನೋವೃತ್ತಿ (ಕಾರಂತರಿಗೆ ಲಚ್ಚನ ಬಗ್ಗೆ ಸಹನೆಯಿಲ್ಲ). ಆದರೆ ಲಚ್ಚನಿಗೆ ಯಾವುದೇ ಸಾಂಸ್ಕೃತಿಕ ಬಿಕ್ಕಟ್ಟು ಕಾಣಿಸುವುದಿಲ್ಲ. ರಾಮೈತಾಳ ಹುಂಬ; ಅಧಿಕಾರ ಮನೋವೃತ್ತಿಯವನು. ಒಂದು ದೃಷ್ಟಿಯಿಂದ ಪ್ರಯೋಜನಕ್ಕೆ ಬಾರದಿರುವಂಥದ್ದು. ಮೂರನೆಯ ತಲೆಮಾರಿನ ರಾಮ ಆದರ್ಶವಾದಿ. ಆದರೆ ಹೆಂಗಸರು ಪ್ರಯೋಗಶೀಲರು. ರಾಮೈತಾಳ ನಾಗವೇಣಿಗೆ ಆಸ್ತಿಯನ್ನು ಬರೆಯುವುದು ಅಸಹಜವಾದ ದಾರಿ. ಪ್ರಾಯಶಃ ಇದರ ಮೇಲೆ ಬ್ರಿಟಿಷ್ ಮಾದರಿಯ ಕಾನೂನಿನ ಕ್ರಮವು ಕೆಲಸ ಮಾಡಿದೆ. ನಾಗವೇಣಿಯು ಈ ಕಾದಂಬರಿಯಲ್ಲಿ ಒಬ್ಬಳು ಆದರ್ಶ ಮಹಿಳೆ. ಇಷ್ಟಿದ್ದರೂ ಈ ಕಾದಂಬರಿಯಲ್ಲಿ ಸ್ತ್ರೀಯರಿಗೆ ಪ್ರತ್ಯೇಕವಾದ ಅನನ್ಯತೆಯಿಲ್ಲ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿಯೇ ಪುರುಷ ಜಗತ್ತು ಮತ್ತು ಮಹಿಳಾ ಜಗತ್ತು – ಅವುಗಳ ವರ್ತನೆಯ ವಿಧಾನವು ಬೇರೆಯಿದೆ.

ಮದುವೆ; ಗಂಡು ಹೆಣ್ಣಿನ ಸಂಬಂಧ, ಕೌಟುಂಬಿಕ ಸ್ಥಿರತೆ; ಅನೈತಿಕ ಸಂಬಂಧ, ಕುಟುಂಬದ ಸ್ಥಿರತೆಯು ಮುರಿದುಹೋಗುವುದು – ಇವುಗಳನ್ನು ಕಾರಂತರು ಚಿತ್ರಿಸುವ ಕ್ರಮ ಅನನ್ಯವಾದುದು. ಈ ದೃಷ್ಟಿಯಿಂದ ಹಿಂದೂ ನೈತಿಕ ನಿಲುವುಗಳು ಮತ್ತು ಲೈಂಗಿಕ ಸಂಬಂಧಗಳ ಕುರಿತು ಅವುಗಳ ವ್ಯಾಖ್ಯಾನ ಮಂಡಿಸುವಾಗ ಕಾರಂತರು ಒಬ್ಬ ಪ್ರಯೋಗಶೀಲ ಲೇಖಕನ ಹಾಗೆಯೇ ಕಾಣಿಸುತ್ತಾರೆ. ಲೈಂಗಿಕ ಸಂಬಂಧಗಳಲ್ಲಿ ಸಹಜತೆಯನ್ನು ಅವರು ಹೇಗೆ ವಿವರಿಸುತ್ತಾರೋ ಅದೇ ರೀತಿಯಲ್ಲಿ ಲೈಂಗಿಕ ಸಂಬಂಧಗಳಲ್ಲಿ ಇರುವ ಅನೈತಿಕತೆಯನ್ನೂ ಅವರು ವಿವರಿಸುತ್ತಾರೆ. ಇವು ಕಾರಂತರ ಸಾಮಾಜಿಕ ಜಗತ್ತಿನ ಗ್ರಹಿಕೆಯೆಂದೇ ನಾವು ಕರೆಯಬಹುದು.

ಕಾರಂತರ ಕಾದಂಬರಿಗಳಲ್ಲಿನ ಕೇಂದ್ರ ವಿಷಯಗಳಿವು. ನಿಜವಾದ ಸಾಮಾಜಿಕ ಚರಿತ್ರೆಯು ಬೇರೆಯಿರಬಹುದು. ಕಾರಂತರು ಸಾಮಾಜಿಕ ಚರಿತ್ರೆಯನ್ನು ನಿರೂಪಿಸುವ ಬಗೆ ಮಾತ್ರ ಬೇರೆ. ದೈನಂದಿನ ವಾಸ್ತವವೆನ್ನುವುದು ಮುಖ್ಯ. ಹಾಗೆಯೇ ದೈನಂದಿನ ವಾಸ್ತವದ ನಿರೂಪಣೆಯು ಕೂಡಾ ಕಾರಂತರಿಗೆ ಮುಖ್ಯ. ಈ ವಾಸ್ತವವೆನ್ನುವುದು ಕಾವ್ಯಾತ್ಮಕವಲ್ಲ.

ಜೀವನವೆನ್ನುವುದು ನಿಗೂಢ. ಅದರ ಮೌಲ್ಯಗಳ ಹುಡುಕಾಟ ಮುಖ್ಯ. ಬದಲಾಗುತ್ತಿರುವ ಸಮಾಜದಲ್ಲಿ ಒಬ್ಬ ವ್ಯಕ್ತಿ; ಒಂದು ಕುಟುಂಬ; ಒಬ್ಬನ ಅಂತರಂಗ ಏನಾಗುತ್ತದೆಯೆಂದು ಮಾತ್ರ ಕಾರಂತರು ಕೇಳುತ್ತಾರೆ. ಜೀವನದ ವಿಮುಖತೆಯಿಂದ ಮನುಷ್ಯ ಏನೂ ಮಾಡಲಾರ. ಈ ಅರ್ಥದಲ್ಲಿ ಕಾರಂತರ ಕಾದಂಬರಿಗಳಲ್ಲಿ ಮನುಷ್ಯರು ದಿನದಿನದ ಸಾಮಾಜಿಕ ಚರಿತ್ರೆಯಲ್ಲಿ ಬಂಧಿಗಳು. ಕಾರಂತರ ಕಾದಂಬರಿಗಳಲ್ಲಿ ಬರುವವರು ಸಾಮಾನ್ಯ ಮನುಷ್ಯರು. ಅವರಿಗೆ ಸಮಸ್ಯೆಯಿದೆ. ಆದರೆ ಅವರು ವಿಚಲಿತರಲ್ಲ. ಕಾರಂತರ ಈ ಬಗೆಯ ಮನೋಭಾವ ಮತ್ತು ಅದರ ಹುಡುಕಾಟ – ಶುದ್ಧಾಂಗವಾಗಿ ಭಾರತೀಯವೆ ? ಜೀವನವನ್ನು ನೋಡುವ ಅವರ ಕ್ರಮ ಶುದ್ಧಾಂಗವಾಗಿ ಪಶ್ಚಿಮವೆ ? ಒಂದು ಕಡೆಯಿಂದ ಬ್ರಿಟಿಷ್ ಮಾದರಿಯ ಶಿಕ್ಷಣ ಕ್ರಮದಿಂದ ಬಂದ ಪಶ್ಚಿಮದ ಅದರಲ್ಲಿಯೂ ವಿಕ್ಟೋರಿಯಾ ಕಾಲದ ತಾತ್ವಿಕತೆ (ನೈತಿಕತೆ; ಜೀವನದ ಮೌಲ್ಯ ಯಾವುದರ ಬೇರು ? ಢೋಂಗಿ ಸನ್ಯಾಸಿಗಳು ಇತ್ಯಾದಿ) ಮತ್ತು ಪಲ್ಲಟಗೊಳ್ಳುತ್ತಿರುವ ಸಾಮಾನ್ಯ ಜನರ ಸಂಸ್ಕೃತಿಯ ಚಿತ್ರಣ – ಇವುಗಳು ಕಾರಂತರಿಗೆ ಮುಖ್ಯವಾದ ಹಾಗೆ ಭಾಸವಾಗುತ್ತದೆ. ಕಾರಂತರ ಬಹುತೇಕ ಕಾದಂಬರಿಗಳು – ಸಾಮಾನ್ಯ ಜನರು ಹೇಗಿದ್ದಾರೆ ? ಮತ್ತು ಯಾಕೆ ಹೀಗಿದ್ದಾರೆ ಎಂಬ ಪ್ರಶ್ನೆಗಳನ್ನೇ ಕೇಳುತ್ತವೆ. ಕಾರಂತರು ಬರೆದ ಕಾದಂಬರಿಗಳ ಸಂದರ್ಭಗಳ ಹಿಂದಿರುವ ಪ್ರಮುಖ ಚಾರಿತ್ರಿಕ ಪ್ರಶ್ನೆಗಳು ಕೂಡಾ ಇದುವೆ. ಆದುದರಿಂದಲೇ ಶಿವರಾಮ ಕಾರಂತರ ಕಾದಂಬರಿಗಳ ಸಾಮಾಜಿಕ ಜಗತ್ತು ಸಂಕೀರ್ಣವಾಗಿದೆ. ಮತ್ತು ಅವು ಎತ್ತುವ ಪ್ರಶ್ನೆಗಳಿಗೆ ಉತ್ತರವೂ ಸೂರ್ಯ ಸ್ಪಷ್ಟವಲ್ಲ.

ಈಗ ಮೊದಲಿನ ಪ್ರಶ್ನೆಗಳ ಕಡೆಗೆ ಬರಬಹುದು : ವಸಾಹತುಶಾಹಿ ಅನುಭವದಿಂದ ಪ್ರೇರಿತವಾದ ಚಾರಿತ್ರಿಕ-ಸಾಮಾಜಿಕ ಸಂದರ್ಭಗಳಲ್ಲಿ ಕಾರಂತರು ಆಯ್ಕೆ ಮಾಡಿಕೊಂಡ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವರಗಳು ಅವರ ಆಯ್ಕೆಗೆ ಸಂಬಂಧಿಸಿದೆ. ಅದು ಸರಿಯೋ, ತಪ್ಪೋ ಅನ್ನುವ ಪ್ರಶ್ನೆಯಲ್ಲ. ಆದರೆ, ಅವರ ಕೃತಿಗಳು ನಿರ್ದಿಷ್ಟ ಸಾಮಾಜಿಕ ಪಠ್ಯಗಳೇ ಆಗಿವೆ.

ಡಾ॥ ಕೇಶವ ಶರ್ಮ, ಕೆ.
ಉಪನ್ಯಾಸಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ - ೫೭೭ ೪೫೧, ಶಿವಮೊಗ್ಗ ಜಿಲ್ಲೆ

ಡಾ|| ಸಿ. ಆರ್. ಚಂದ್ರಶೇಖರ್



# ಯುವ ಜನರಲ್ಲಿ ಹೆಚ್ಚುತ್ತಿರುವ ಅಪರಾಧಗಳು
## ನಾಲ್ವರು ವೃತ್ತಿತಜ್ಞರ ಅಭಿಪ್ರಾಯಗಳು

೨೦೦೩ರ ನವೆಂಬರ್ ೨೭ರಂದು ಕನ್ನಡ ಭವನದ ನಯನ ಸಭಾಂಗಣದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಬೆಂಗಳೂರು ನಗರದ ಪೋಲಿಸ್ ಆಯುಕ್ತರಾದ ಶ್ರೀ ಮರಿಸ್ವಾಮಿ, ಖ್ಯಾತ ವಕೀಲರೂ, ಬರಹಗಾರ್ತಿಯೂ ಆದ ಶ್ರೀಮತಿ ಹೇಮಲತಾ ಮಹಿಷಿ, ದಿ ಹಿಂದೂ ಪತ್ರಿಕೆಯ ಹಿರಿಯ ವರದಿಗಾರರಾದ ಶ್ರೀ ಅರಕೆರೆ ಜಯರಾಮ್ ಮತ್ತು ನಿಮ್ಹಾನ್ಸ್ ಆಸ್ಪತ್ರೆಯ ಮನೋವೈದ್ಯ ಪ್ರಾಧ್ಯಾಪಕ ಹಾಗೂ ವೈದ್ಯ ಸಾಹಿತಿ ಡಾ|| ಸಿ. ಆರ್. ಚಂದ್ರಶೇಖರ್ ಪಾಲ್ಗೊಂಡಿದ್ದರು. ಯುವ ಜನರಲ್ಲಿ ಅಪರಾಧಗಳು ಹೆಚ್ಚುತ್ತಿವೆಯೇ, ಅದಕ್ಕೆ ಕಾರಣಗಳೇನು ಮತ್ತು ಪರಿಹಾರಗಳೇನು ಎಂದು ಈ ವೃತ್ತಿ ತಜ್ಞರು ಹೇಳಿದ್ದನ್ನು ಈ ಲೇಖನದಲ್ಲಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಸಂಕಿರಣದ ಪ್ರಾರಂಭದಲ್ಲಿ ಅಭಿರುಚಿ ಸಾಂಸ್ಕೃತಿಕ ವೇದಿಕೆಯ ಅಧ್ಯಕ್ಷರು ಹಾಗೂ ಜನಪ್ರಿಯ ಹಾಸ್ಯ ಸಾಹಿತಿ ಶ್ರೀ ಎಂ. ಎಸ್. ನರಸಿಂಹಮೂರ್ತಿಯವರು ತಮ್ಮ ಪ್ರಸ್ತಾವನೆಯಲ್ಲಿ 'ಯುವ ಜನರಲ್ಲಿ ಅಪರಾಧ ಪ್ರವೃತ್ತಿ ಹೆಚ್ಚುತ್ತಿರುವುದಷ್ಟೇ ಅಲ್ಲ, ಕ್ರೌರ್ಯವೂ ಹೆಚ್ಚಾಗುತ್ತಿದೆ. ಹಿಂದೆ ಸರಗಳ್ಳರು ಸರವನ್ನಷ್ಟೇ ಕಿತ್ತುಕೊಂಡು ಹೋಗುತ್ತಿದ್ದರು. ಈಗ ಅದರ ಜೊತೆಗೆ ಚೂರಿಯಿಂದ ಇರಿದು ಹೋಗುತ್ತಾರೆ' ಎಂದರು. ಯುವ ಜನತೆ ಒಂದು ರೀತಿಯ Identity crisisಗೆ ತುತ್ತಾಗಿದ್ದಾರೆ. ತಮಗೆ ಇತರರು ಗಮನ ಕೊಡುತ್ತಿಲ್ಲ, ತಾವು ಉದಾಸೀನಕ್ಕೆ ಒಳಗಾಗಿದ್ದೇವೆ ಎಂದು ಭಾವಿಸುವ ಇವರು ಅಪರಾಧ ಮಾಡುವುದರ ಮೂಲಕ ಸಮಾಜದ ಗಮನ ಸೆಳೆಯುತ್ತಿರಬಹುದು. ಇಂದು ಇವರ ಮುಂದೆ ಗಾಂಧಿ, ನೆಹರೂ ಅವರಂತಹ ಮಾದರಿ ನಾಯಕರಿಲ್ಲ. ಶಾಲೆಗಳಲ್ಲಿ ನೀತಿಪಾಠಗಳ ಪೀರಿಯಡ್‌ಗಳು ಮಾಯವಾಗಿವೆ. ನೈತಿಕ ಪ್ರಜ್ಞೆಕುಸಿಯುತ್ತಿದೆ. ಸಾಂಸ್ಕೃತಿಕ ಪರಿಸರದಲ್ಲಿ ಬದಲಾವಣೆಗಳಾಗಿ ಗೊಂದಲ ಸೃಷ್ಟಿಯಾಗಿದೆ ಎಂದು ಹೇಳಿ ವಿಚಾರ ಸಂಕಿರಣಕ್ಕೆ ಚಾಲನೆ ನೀಡಿದರು.

**ಶ್ರೀ ಮರಿಸ್ವಾಮಿ**

ಯುವ ಜನರಲ್ಲಿ ಅಪರಾಧ ಪ್ರವೃತ್ತಿ 'ಹೆಚ್ಚುತ್ತಿದೆ' ಎನ್ನಲು ಅಂಕಿ ಅಂಶಗಳಿಲ್ಲ. ಮೂರು ನಾಲ್ಕು ದಶಕಗಳ ಹಿಂದೆ ಯುವ ಜನಸಂಖ್ಯೆಯ ಶೇಕಡಾ ಎಷ್ಟು ಮಂದಿಯಲ್ಲಿ ಅಪರಾಧ ಪ್ರವೃತ್ತಿ ಇತ್ತು. ಈಗ ಎಷ್ಟಿದೆ ಎಂಬುದರ ಬಗ್ಗೆ ಖಚಿತ ಮಾಹಿತಿ ಇಲ್ಲ. ಆದರೆ ಅಪರಾಧ ಪ್ರವೃತ್ತಿ ಹೆಚ್ಚುತ್ತಿದೆ ಎಂಬ ಸಾರ್ವತ್ರಿಕ ಭಾವನೆಯಂತೂ ಇದೆ. ನಮ್ಮ ಕರ್ನಾಟಕ ರಾಜ್ಯದಲ್ಲಿ, ಕಳೆದ ಹತ್ತು ವರ್ಷಗಳಲ್ಲಿ ಒಟ್ಟು ಅಪರಾಧಗಳ ಸಂಖ್ಯೆಯಲ್ಲಿ (ಭಾರತ ದಂಡ ಸಂಹಿತೆ I.P.C.ಯಲ್ಲಿ ನಮೂದಾಗಿರುವ ಅಪರಾಧಗಳು) ಪ್ರಧಾನ ಏರಿಳಿತಗಳಿಲ್ಲ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ವರ್ಷ ಒಂದಕ್ಕೆ ಸರಾಸರಿ ೧ ಲಕ್ಷದ ಹತ್ತು ಸಾವಿರ ಅಪರಾಧಗಳು ಘಟಿಸುತ್ತಿವೆ. ಅವುಗಳಲ್ಲಿ ಮೂರನೇ ಒಂದು ಭಾಗದ ಅಪರಾಧಗಳು ಬೆಂಗಳೂರು ನಗರದಲ್ಲೇ ನಡೆಯುತ್ತಿವೆ. ೨೫ ವರ್ಷ ವಯಸ್ಸಿನ ಮೇಲ್ಪಟ್ಟವರು ಹಾಗೂ ೨೫ ವರ್ಷ ವಯಸ್ಸಿಗೆ ಕೆಳಪಟ್ಟವರು ಮಾಡುವ ಅಪರಾಧಗಳು ಹೀಗಿವೆ :

| ಅಪರಾಧ | ೧೯೯೯ | | ೨೦೦೦ | | ೨೦೦೧ | | ೨೦೦೨ | | ೨೦೦೩ | |
|---|---|---|---|---|---|---|---|---|---|---|
| | ಅಪರಾಧಿಗಳ ಒಟ್ಟು ಸಂಖ್ಯೆ | ೨೫ವರ್ಷಕ್ಕಿಂತ ಚಿಕ್ಕವರ ಸಂಖ್ಯೆ | ಅಪರಾಧಿಗಳ ಒಟ್ಟು ಸಂಖ್ಯೆ | ೨೫ವರ್ಷಕ್ಕಿಂತ ಚಿಕ್ಕವರ ಸಂಖ್ಯೆ | ಅಪರಾಧಿಗಳ ಒಟ್ಟು ಸಂಖ್ಯೆ | ೨೫ವರ್ಷಕ್ಕಿಂತ ಚಿಕ್ಕವರ ಸಂಖ್ಯೆ | ಅಪರಾಧಿಗಳ ಒಟ್ಟು ಸಂಖ್ಯೆ | ೨೫ವರ್ಷಕ್ಕಿಂತ ಚಿಕ್ಕವರ ಸಂಖ್ಯೆ | ಅಪರಾಧಿಗಳ ಒಟ್ಟು ಸಂಖ್ಯೆ | ೨೫ವರ್ಷಕ್ಕಿಂತ ಚಿಕ್ಕವರ ಸಂಖ್ಯೆ |
| ಕೊಲೆ | ೧೫೩ | ೬೭% | ೧೨೭ | ೬೧% | ೧೫೯ | ೬೨% | ೨೩೮ | ೫೬% | ೨೨೬ | ೫೦% |
| ಡಕಾಯಿತಿ ದರೋಡೆ | ೫೮೪ | ೬೮% | ೪೦೨ | ೬೭% | ೪೩೨ | ೬೬% | ೫೮೯ | ೬೩% | ೪೮೫ | ೬೯% |
| ಮನೆಗೆ ನುಗ್ಗಿ ಕಳ್ಳತನ | ೫೧೩ | ೫೪% | ೪೬೮ | ೬೫% | ೩೯೧ | ೭೦% | ೪೭೦ | ೬೮% | ೩೬೩ | ೬೨% |
| ಕಳ್ಳತನ | ೧೧೧೬ | ೬೧% | ೧೧೫೮ | ೫೯% | ೬೮೫ | ೬೬% | ೧೧೯೮ | ೬೧% | ೧೦೭೯ | ೬೦% |

ಅಂದರೆ ಶೇ. ೬೩ ಜನ ಅಪರಾಧಿಗಳು ೨೫ ವರ್ಷಕ್ಕಿಂತ ಕೆಳಪಟ್ಟವರು. ಈ ಐದು ವರ್ಷಗಳಲ್ಲಿ ಸಂಖ್ಯಾ ಪ್ರಮಾಣ ಜಾಸ್ತಿ ಆಗಿಲ್ಲ!

ಅಪರಾಧ ಪ್ರಚೋದನೆಗೆ ಟಿವಿ, ಸಿನೆಮಾಗಳೂ ಕಾಣಿಕೆ ನೀಡುತ್ತಿವೆ. ಒಂದು ಧಾರಾವಾಹಿಯಲ್ಲಿ ಸೊಸೆಯನ್ನು ಹಿಂಸಿಸಲು, ಕೊಲ್ಲಲು ವಿವಿಧ ವಿಧಾನಗಳನ್ನು, ಅತ್ತೆ ನಾದಿನಿಯರು ಮಾಡುವ ಮಸಲತ್ತುಗಳನ್ನು ಎಷ್ಟು ವಿವರವಾಗಿ ತೋರಿಸಿದ್ದಾರೆಂದರೆ, ಅದನ್ನು ಅನುಕರಿಸಲು ಯಾರು ಬೇಕಾದರೂ ಸಿದ್ಧರಾದಾರು! ಮಾಧ್ಯಮಗಳು ತಮ್ಮ ಜವಾಬ್ದಾರಿಗಳನ್ನು ಮರೆಯಬಾರದು. ಅಪರಾಧ ತಡೆಗಟ್ಟುವುದಕ್ಕೆ ಎಲ್ಲ ವ್ಯವಸ್ಥೆಗಳನ್ನು, ಸಂಸ್ಥೆಗಳನ್ನು ಬಿಗಿಗೊಳಿಸಬೇಕಾದ ಅಗತ್ಯವಿದೆ.

ಇಷ್ಟೊಂದು ಪ್ರಮಾಣದ ಯುವ ಜನ ಅಪರಾಧ ಮಾಡಲು ಕಾರಣಗಳು ನನ್ನ ಅನುಭವ – ಅನಿಸಿಕೆ ಪ್ರಕಾರ

೧) **ಕುಟುಂಬ ವ್ಯವಸ್ಥೆ ಶಿಥಿಲಗೊಂಡಿರುವುದು :** ಅವಿಭಕ್ತ ಕುಟುಂಬಗಳು ಒಡೆದು ಚಿಕ್ಕ ಚಿಕ್ಕ ಕುಟುಂಬಗಳಾಗಿವೆ. ಪ್ರತಿಯೊಬ್ಬ ವ್ಯಕ್ತಿ ತನ್ನ ಸುಖ-ಕ್ಷೇಮದ ಬಗ್ಗೆ ಚಿಂತನೆ ಮಾಡುತ್ತಾನೆಯೇ ಹೊರತು ಇತರರ ಕ್ಷೇಮ-ಅನುಕೂಲಗಳ ಬಗ್ಗೆ ಯೋಚಿಸುವುದಿಲ್ಲ. ಈಗಿನ ಮಕ್ಕಳು ಹೆಚ್ಚು ಬುದ್ಧಿವಂತರು, ಹೆಚ್ಚು ಮಾಹಿತಿ ಉಳ್ಳವರಾಗಿದ್ದರೂ ಅವರಿಗೆ ಸರಿಯಾದ ಮಾರ್ಗದರ್ಶನ ಸಿಗುತ್ತಿಲ್ಲ. ಭೋಗಭಾಗ್ಯದ ಆಕರ್ಷಣೆಗಳಿಗೆ-ಅಪರಾಧಗಳಿಗೆ ಅವರು expose ಆಗುತ್ತಿದ್ದಾರೆ.

೨) **ತಂತ್ರಜ್ಞಾನದ ಅಭಿವೃದ್ಧಿಯಿಂದಾಗಿ,** ಜೀವನಮಟ್ಟ ಹೆಚ್ಚುತ್ತಿದೆ. ಅಗತ್ಯಗಳು ಹೆಚ್ಚುತ್ತಿವೆ. ಅವುಗಳನ್ನು ಬೇಗ ಮತ್ತು ಹೆಚ್ಚಾಗಿ ಪಡೆಯುವ ಸ್ಪರ್ಧೆ ಏರ್ಪಟ್ಟು, ನೈತಿಕ ನಿಯಮಗಳು ಕುಸಿದಿವೆ. ಯಾವ ಅಡ್ಡಹಾದಿ, ಅಕ್ರಮಗಳನ್ನು ತುಳಿದಾದರೂ, ಇವುಗಳನ್ನು ಪಡೆಯಲು ಜನ ಮುನ್ನುಗ್ಗುತ್ತಿದ್ದಾರೆ. ಐಶಾರಾಮದ ಹೋಟೆಲ್‌ಗಳು, ಕಾರುಗಳು, ಜೀವನಶೈಲಿಯನ್ನು ಅನುಕರಿಸಲು ಹಾತೊರೆಯುವ ಕಾಲೇಜು ವಿದ್ಯಾರ್ಥಿಗಳು ಅಪರಾಧಗಳನ್ನು ಮಾಡುತ್ತಿದ್ದಾರೆ. ಸೀಸನ್ ರೌಡಿಗಳು ವಿದ್ಯಾರ್ಥಿಗಳನ್ನು ಬಗೆಬಗೆಯ ಆಮಿಷಗಳನ್ನು ತೋರಿಸಿ ಅಪರಾಧ ಜಗತ್ತಿಗೆ ಎಳೆಯುತ್ತಿದ್ದಾರೆ.

೩) **ಅಪರಾಧಗಳ ವೈಭವೀಕರಣದಿಂದಾಗಿ,** ಅಪರಾಧ ಮಾಡುವುದು ಯುವಜನ ಇಷ್ಟಪಡುವ ಚಟುವಟಿಕೆಯಾಗಿಬಿಟ್ಟಿದೆ. ಹಣ ಅಧಿಕಾರದ ಬಲದಿಂದ ಅಪರಾಧ ಮಾಡಿ ತಪ್ಪಿಸಿಕೊಳ್ಳಬಹುದು ಎಂಬ ಭಾವನೆ ಜನರಲ್ಲಿ ಬೆಳೆಯುತ್ತಿದೆ.

೪) ಶೈಕ್ಷಣಿಕ ವ್ಯವಸ್ಥೆಯ ಗುಣಮಟ್ಟ ಕುಸಿದಿದೆ. Mass production ರೀತಿ, ಯುವ ಜನ ಪದವಿಗಳನ್ನು ಪಡೆಯುತ್ತಿದ್ದಾರೆ. ಅವರಿಗೆ ವೈಯ್ಯಕ್ತಿಕ ಗಮನವನ್ನು ಯಾರೂ ಕೊಡುತ್ತಿಲ್ಲ. ನಿರಾಶೆ, ಸಿನಿಕತನ ಅವರನ್ನು ಆವರಿಸಿದೆ.

೫) **ಹಿಂಸೆ-ಅಪರಾಧಗಳನ್ನು ಕ್ರೂರ ರೀತಿಯಲ್ಲಿ ತೋರಿಸುವ, ಬರೆಯುವ ಮಾಧ್ಯಮಗಳು** ಯುವಕರ ಮನಸ್ಸನ್ನು ಕೆರಳಿಸಿ, ಅಂತಹುದೇ ಕೆಲಸ ಮಾಡಲು ಪ್ರಚೋದನೆ ನೀಡುತ್ತಿವೆ. ಅಪರಾಧಿಗಳು 'ಹೀರೋ'ಗಳಾಗಿ ಪ್ರದರ್ಶಿಸಲ್ಪಡುತ್ತಿದ್ದಾರೆ. ಹೀಗಾಗಿ ಯುವಕ-ಯುವತಿಯರು ಯೋಗ್ಯ ಮಾರ್ಗದರ್ಶಕರಿಲ್ಲದೆ ದಾರಿ ತಪ್ಪುತ್ತಿದ್ದಾರೆ.

**ಶ್ರೀಮತಿ ಹೇಮಲತಾ ಮಹಿಷಿ**

ನಮ್ಮ ಯುವಜನ ಏಕೆ ಹಿಂಸೆ-ಅಪರಾಧಗಳತ್ತ ವಾಲುತ್ತಿದ್ದಾರೆ ಎಂಬುದಕ್ಕೆ 'ಇಂಥದೇ ಕಾರಣ' ಎಂಬ ಸ್ಪಷ್ಟ ಉತ್ತರ ಸಿಗುವುದಿಲ್ಲ. ಸಮಾಜ ತನ್ನನ್ನೇ ಈ ಕುರಿತು ಪ್ರಶ್ನಿಸಿಕೊಳ್ಳಬೇಕು. ಕೇವಲ ಆರ್ಥಿಕ ಕಾರಣಗಳಾದ ಬಡತನ, ನಿರುದ್ಯೋಗಗಳಿಂದ ಅಪರಾಧ ಹೆಚ್ಚುತ್ತಿದೆ ಎಂಬುದನ್ನು ನಾನು ಒಪ್ಪುವುದಿಲ್ಲ. ಇತ್ತೀಚಿನ ಮೂರು ಉದಾಹರಣೆಗಳಾದ ಶಾಸಕರ ಭವನದಲ್ಲಿ ಬಾಂಬ್ ಇಟ್ಟ ಯುವಕ ಗಿರೀಶ್ ಮಟ್ಟಣ್ಣವರ್, ಕಾರ್ಕಳದಲ್ಲಿ ಪೋಲಿಸರ ಗುಂಡಿಗೆ ಬಲಿಯಾದ ನಕ್ಸಲೈಟ್‌ಗಳೆಂದು ಹೇಳಲಾದ ಯುವತಿಯರು ಹಾಗೂ ತನಗೆ ಕಿರುಕುಳ ಕೊಟ್ಟ ಮನೆಯೊಡತಿಯನ್ನೇ ಕೊಂದ ಕೆಲಸದ ಹುಡುಗಿಯ ಪ್ರಕರಣಗಳಲ್ಲಿ ಅವರ ವರ್ತನೆಗೆ ವಿಭಿನ್ನ ಕಾರಣಗಳಿವೆ, ಅಲ್ಲವೇ? ನಮ್ಮ ಯುವಜನರಲ್ಲಿ ಇನ್ನೊಬ್ಬರನ್ನು ಕೊಲ್ಲುವಂತಹ ಹೀನ ಮನೋಭಾವ ಏಕೆ ಬಂದಿದೆ, ಈ ಹಿಂಸೆ ಏಕೆ? ತತ್‌ಕ್ಷಣದ ಪ್ರಚೋದನೆಯಿಂದ ಕೆಲವರು ಅಪರಾಧ ಮಾಡಿದರೆ, ಲೆಕ್ಕಾಚಾರ ಮಾಡಿ, ಯೋಜಿಸಿ ಕೆಲವರು ಅಪರಾಧ ಮಾಡುತ್ತಾರೆ. ನಂಬಿದ ತತ್ವಗಳಿಗಾಗಿ ಕೆಲವರು ಅಪರಾಧ ಮಾಡುತ್ತಾರೆ. ಹಿಂಸೆ-ಬೆದರಿಕೆಗಳಿಂದ ಕೆಲಸ ಆಗುತ್ತದೆ ಎಂಬ ಭಾವನೆ ಯುವಕರಲ್ಲಿ ಬೆಳೆಯುತ್ತಿರುವುದು ಆತಂಕ ಹುಟ್ಟಿಸುವ ವಿಚಾರ. ನಲವತ್ತು ಐವತ್ತು ವರ್ಷಗಳ ಹಿಂದೆ ನಡೆಯುತ್ತಿದ್ದ ಚಳವಳಿಗಳಿಗೆ ಒಂದು ತತ್ವ, ಒಂದು ನಿರ್ದಿಷ್ಟ ನಂಬಿಕೆ ಇರುತ್ತಿತ್ತು. ಈಗ ನಡೆಯುವ ಚಳವಳಿಗಳ ರೂಪವನ್ನು ಕಂಡರೆ ಭಯವಾಗುತ್ತದೆ. ರೋಷ, ದ್ವೇಷಗಳು ಹಸಿಹಸಿಯಾಗಿ ಪ್ರಕಟಗೊಳ್ಳುತ್ತವೆ. ಇದನ್ನು ಕಾಣುವ ಯುವ ಜನ ತಾವೂ ಅದೇ ಹಾದಿಯನ್ನು ತುಳಿಯುತ್ತಿರಬಹುದೆನ್ನಿಸುತ್ತದೆ. ಅಪರಾಧ ಮಾಡಿ ಅರೆಸ್ಟಾದರೂ, ಪ್ರಕರಣಗಳು ಇತ್ಯರ್ಥವಾಗುವುದಿಲ್ಲ. ಸಾಕ್ಷ್ಯಾಧಾರಗಳ ಕೊರತೆ-ಲೋಪ-ದೋಷಗಳಿಂದ, ಕೊನೆಗೆ ಬಿದ್ದುಹೋಗುತ್ತವೆ. ಅಪರಾಧಿಗಳು ಶಿಕ್ಷೆಯಿಂದ ತಪ್ಪಿಸಿಕೊಳ್ಳುತ್ತಾರೆ. ಶೇ. ಒಂದರಷ್ಟು ಕೇಸುಗಳಲ್ಲಿ ಮಾತ್ರ ಶಿಕ್ಷೆಯಾಗಿ ಉಳಿದ ೯೯ ಕೇಸ್‌ಗಳು ವಿವಿಧ ಹಂತಗಳಲ್ಲಿ ಬಿದ್ದುಹೋಗುವುದರಿಂದ, ಅಪರಾಧ ಮಾಡಲು ಜನ ಈಗ ಹೆದರುವುದಿಲ್ಲ! ಹಣ, ಅಧಿಕಾರ, ವಶೀಲಿ ಇದ್ದರೆ, ಕಾನೂನಿನಿಂದ ತಪ್ಪಿಸಿಕೊಳ್ಳಬಹುದೆಂದು ಜನ ಹೇಳುತ್ತಾರೆ!

ನಾಯಕತ್ವದ ಕೊರತೆ, ರಾಜಕೀಯ ರಂಗದಲ್ಲಿ ಅಷ್ಟೇ ಅಲ್ಲ ಎಲ್ಲ ರಂಗಗಳಲ್ಲಿ ಮಾದರಿ, ಆದರ್ಶ ನಾಯಕರು, ವ್ಯಕ್ತಿತ್ವ ಉಳ್ಳವರು ಇಲ್ಲ. ಒಳ್ಳೆಯ ನಾಯಕವರ್ಗ ತಯಾರಾಗಬೇಕು.



*ಬೆಂಗಳೂರಿನ ಅಭಿರುಚಿ ಸಾಂಸ್ಕೃತಿಕ ವೇದಿಕೆ 'ಯುವಜನರಲ್ಲಿ ಹೆಚ್ಚುತ್ತಿರುವ ಅಪರಾಧಗಳು' ಕುರಿತು ವಿಚಾರ ಸಂಕಿರಣ ಏರ್ಪಡಿಸಿತ್ತು. ವೇದಿಕೆಯಲ್ಲಿರುವವರು ಎಡದಿಂದ ಬಲಕ್ಕೆ : ಪತ್ರಕರ್ತ ಅರಕೆರೆ ಜಯರಾಂ, ವಕೀಲರಾದ ಶ್ರೀಮತಿ ಹೇಮಲತಾ ಮಹಿಷಿ , ಹಾಸ್ಯ ಸಾಹಿತಿ ಎಂ. ಎಸ್. ನರಸಿಂಹಮೂರ್ತಿ, ಪೊಲೀಸ್ ಆಯುಕ್ತ ಶ್ರೀ ಮರಿಸ್ವಾಮಿ ಮತ್ತು ಲೇಖಕ, ಮನೋರೋಗ ತಜ್ಞ ಡಾ|| ಸಿ. ಆರ್. ಚಂದ್ರಶೇಖರ್.*

ಅಪರಾಧ ಪ್ರಚೋದನೆಗೆ ಟಿವಿ, ಸಿನೆಮಾಗಳೂ ಕಾಣಿಕೆ ನೀಡುತ್ತಿವೆ. ಒಂದು ಧಾರಾವಾಹಿಯಲ್ಲಿ ಸೊಸೆಯನ್ನು ಹಿಂಸಿಸಲು, ಕೊಲ್ಲಲು ವಿವಿಧ ವಿಧಾನಗಳನ್ನು – ಅತ್ತೆ ನಾದಿನಿಯರು ಮಾಡುವ ಮಸಲತ್ತುಗಳನ್ನು ಎಷ್ಟು ವಿವರವಾಗಿ ತೋರಿಸಿದ್ದಾರೆಂದರೆ, ಅದನ್ನು ಅನುಕರಿಸಲು ಯಾರು ಬೇಕಾದರೂ ಸಿದ್ಧರಾದಾರು! ಮಾಧ್ಯಮಗಳು ತಮ್ಮ ಜವಾಬ್ದಾರಿಗಳನ್ನು ಮರೆಯಬಾರದು. ಅಪರಾಧ ತಡೆಗಟ್ಟುವುದಕ್ಕೆ ಎಲ್ಲ ವ್ಯವಸ್ಥೆಗಳನ್ನು, ಸಂಸ್ಥೆಗಳನ್ನು ಬಿಗಿಗೊಳಿಸಬೇಕಾದ ಅಗತ್ಯವಿದೆ.

**ಶ್ರೀ ಅರಕೆರೆ ಜಯರಾಮ್**

ಹಿಂಸೆ ಅಪರಾಧಗಳನ್ನು ಇಂದಿನ ಪತ್ರಿಕೆಗಳು, ದೃಶ್ಯ ಮಾಧ್ಯಮಗಳು ವೈಭವೀಕರಿಸುತ್ತಿವೆ ಎಂಬುದನ್ನು ನಾನೂ ಒಪ್ಪುತ್ತೇನೆ. ಇತ್ತೀಚಿನ ವರ್ಷಗಳಲ್ಲಿ ಅಪರಾಧಗಳ ತೀವ್ರತೆ ಮತ್ತು ಅವುಗಳಲ್ಲಿ ಕಂಡುಬರುವ ಕ್ರೌರ್ಯ ಖಂಡಿತವಾಗಿ ಹೆಚ್ಚುತ್ತಿದೆ. ಉದಾಹರಣೆಗೆ ಗುಜರಾತಿನ ಗೋದ್ರಾ ದುರಂತ ಹಾಗೂ ಆನಂತರದ ಪಾಶವೀಕೃತ್ಯಗಳಾಗಬಹುದು. ನಮ್ಮ ಕರ್ನಾಟಕದ ಕಂಬಾಲಪಲ್ಲಿಯಲ್ಲಿ ನಡೆದ ಏಳು ಜನರ ಜೀವಂತ ದಹನವಾಗಬಹುದು. ಇಂದು ನೀವು ಎಲ್ಲೇ ನೋಡಿ ಅಸಹನೆ-ಸಿಡುಕುತನ ಜಗಳಗಂಟತನವನ್ನು ಕಾಣುತ್ತೀರಿ. ಒಂದು ಸಣ್ಣ ಅಪಘಾತವಾಗಲಿ, ಜನ ಕಾಲು ಕೆರೆದುಕೊಂಡು ಜಗಳಕ್ಕೆ ನಿಲ್ಲುತ್ತಾರೆ. ನಮ್ಮ ಜನರಲ್ಲಿ ನಿರಾಶೆ ಹೆಚ್ಚುತ್ತಿದೆ, ನಿರುದ್ಯೋಗವೂ ಹೆಚ್ಚುತ್ತಿದೆ. ಎಲ್ಲೆಡೆ ಯಂತ್ರಗಳು ಬಂದು ದುಡಿಯುವ ಕೈಗಳಿಗೆ ಕೆಲಸವಿಲ್ಲವಾಗುತ್ತಿದೆ. ತಂತ್ರಜ್ಞಾನ ಹೆಚ್ಚಿದಂತೆಲ್ಲ, ದುಡಿಮೆ ಮಾಡುವ ಅವಕಾಶಗಳು ಕಡಿಮೆಯಾಗುತ್ತಿವೆ. ನಮ್ಮ ಶಾಲಾ ಕಾಲೇಜುಗಳು ಕಾರ್ಖಾನೆಗಳಂತಿವೆ. ಆಟದ ಮೈದಾನಗಳಿಲ್ಲ, ಶಿಕ್ಷಣದಲ್ಲಿ ಗುಣಮಟ್ಟವಿಲ್ಲ. ಇದು ಯುವಕರ ಮನಸ್ಸಿನ ಆರೋಗ್ಯವನ್ನು ಹಾಳುಮಾಡುತ್ತಿದೆ.

ಸಿನೆಮಾಗಳಲ್ಲಿ ೧೯೪೦, ೫೦ರ ಸುಮಾರಿನಲ್ಲೂ ಅಪರಾಧ, ಅಪರಾಧಿಗಳ ಬಗ್ಗೆ ಒತ್ತು ನೀಡಲಾಗುತ್ತಿತ್ತು. ಆದರೆ ಈಗಿನ ಸಿನಿಮಾಗಳಲ್ಲಿ ಕ್ರೌರ್ಯಕ್ಕೇ ಪ್ರಾಧಾನ್ಯತೆ. ಕೊಲೆ, ಕೊಚ್ಚಿಹಾಕುವ ದೃಶ್ಯಗಳು, ರಕ್ತಮಾಂಸಗಳು ಚೆಲ್ಲಾಡುವ ದೃಶ್ಯಗಳು, ಬಲಾತ್ಕಾರ ದೃಶ್ಯಗಳೂ ಹೇರಳವಾಗಿ ಕಾಣಸಿಗುತ್ತವೆ. ಇದನ್ನೇ ಮನೋರಂಜನೆ ಎಂದು ಉಣಬಡಿಸಲಾಗುತ್ತಿದೆ. ಟಿವಿ ಚಾನೆಲ್‌ಗಳಲ್ಲಿ ಪೈಪೋಟಿಯ ಮೇಲೆ ಕ್ರೈಂ ಸ್ಟೋರಿಗಳನ್ನು ತೋರಿಸುತ್ತಿದ್ದಾರೆ. ಈ ಬೀಭತ್ಸ ದೃಶ್ಯಗಳನ್ನು ನಿತ್ಯ ನೋಡುವ ಯುವ ಜನರು ಪ್ರಭಾವಿತರಾಗುತ್ತಿದ್ದಾರೆ.

ನಮ್ಮ ಪತ್ರಿಕೆಗಳಲ್ಲಿ ಶ್ರೀಮಂತರನ್ನು, ಅವರ ಜೀವನ ಶೈಲಿಯನ್ನು ವೈಭವೀಕರಿಸುತ್ತಾರೆ. ಆದರೆ ವಿಜ್ಞಾನಿ, ಸಮಾಜದ ಕೆಲಸ ಮಾಡುವವರ ಬಗ್ಗೆ ಬರೆಯುವುದಿಲ್ಲ. ಸಚಿನ್ ತೆಂಡೂಲ್ಕರ್‌ನ ಆದಾಯ ಎಷ್ಟು ಕೋಟಿಗಳು, ಅವನಲ್ಲಿ ಎಂತೆಂಥ ಕಾರುಗಳಿದ್ದಾವೆ, ಆತ ಮೋಜು ಮಾಡಲು ಎಲ್ಲಿ ಎಲ್ಲಿ ಹೋಗುತ್ತಾನೆ ಎಂದು ಜೊಲ್ಲು ಸುರಿಸಿಕೊಂಡು ಬರೆಯುತ್ತಾರೆ. ಆದರೆ ಅವನಷ್ಟೇ ಪ್ರತಿಭಾವಂತ, ಹಿರಿಯ ಕ್ರಿಕೆಟಿಗ ಹೇಮು ಅಧಿಕಾರಿ ಸತ್ತಾಗ, ಅದು ಸುದ್ದಿಯೇ ಆಗುವುದಿಲ್ಲ.

ಇತ್ತೀಚೆಗೆ ನಮ್ಮ ದೇಶದಲ್ಲಿ ಮಾನವ ಹಕ್ಕುಗಳ ರಕ್ಷಣೆ ಹೆಸರಿನಲ್ಲಿ ಅನೇಕ

ಜನ, ಸಂಸ್ಥೆಗಳು ಪೈಪೋಟಿ ನಡೆಸುತ್ತಿವೆ. ಅಪರಾಧಿಗಳಿಗೆ ಸಹಾನುಭೂತಿ ತೋರಿಸುವುದು, ಅವರ ಬಗ್ಗೆ ಅನುಕಂಪ ಬರುವಂತೆ ಮಾತನಾಡುವುದು ಇವರ ಹವ್ಯಾಸವಾಗುತ್ತಿದೆ.

ನಮ್ಮಲ್ಲಿ ಟಿವಿ ಮಾಧ್ಯಮಕ್ಕೆ ಯಾವ ಅಂಕುಶವಿಲ್ಲ. ಸಿನೇಮಾಗೆ ಸೆನ್ಸಾರ್ ಇರುವ ಹಾಗೆ, ಪ್ರೆಸ್‌ನವರಿಗೆ ಪ್ರೆಸ್ ಕೌನ್ಸಿಲ್ ಇರುವ ಹಾಗೆ, ದೃಶ್ಯ ಮಾಧ್ಯಮಕ್ಕೂ 'ಮೀಡಿಯಾ ಕೌನ್ಸಿಲ್' ಬರಬೇಕು. ಇಲ್ಲವೇ ಟಿವಿಗಳು 'ಸ್ವಯಂ ನಿಯಂತ್ರಣ'ವನ್ನು ಅಳವಡಿಸಿಕೊಳ್ಳಬೇಕು.

ನಮ್ಮಲ್ಲಿ ಕಾನೂನುಗಳಿವೆ. ಅವನ್ನು ಬಿಗಿಯಾಗಿ ಪಾಲಿಸಲು ವ್ಯವಸ್ಥೆ ಇಲ್ಲ. ಹಾಗೆಯೇ ಸಂಪ್ರದಾಯ, ಅಘೋಷಿತ ನೀತಿ ನಿಯಮಗಳ ಪದ್ಧತಿಯೂ ಇಲ್ಲ. Enforced ಶಿಸ್ತಿಗಿಂತ, Self imposed ಶಿಸ್ತೇ ಬಹಳ ಪರಿಣಾಮಕಾರಿ ಅಲ್ಲವೇ ? ಯುವಜನರಲ್ಲಿ ಅಪರಾಧ ಪ್ರವೃತ್ತಿ ತಗ್ಗಿಸಲು, ಮುದ್ರಣ ಮತ್ತು ದೃಶ್ಯ ಮಾಧ್ಯಮಗಳು ಈ ಶಿಸ್ತನ್ನು ಪಾಲಿಸಬೇಕಾಗಿದೆ.

**ಡಾ|| ಸಿ. ಆರ್. ಚಂದ್ರಶೇಖರ್**

ಇತರ ಎಲ್ಲ ವಯಸ್ಸಿನವರಿಗೆ ಹೋಲಿಸಿದರೆ, ಯುವ ಜನರಲ್ಲಿ ಅಪರಾಧ ಪ್ರವೃತ್ತಿ ಹೆಚ್ಚು. ಕಾರಣಗಳು ಹಲವಾರು.

**A) ಸಮಾಜ-ಪರಿಸರದ ಕಾರಣಗಳು**

೧) ಪರೀಕ್ಷಾ ನಿರ್ವಹಣೆ-ಅಂಕಗಳ ಮೇಲೆ ಒತ್ತು ನೀಡುವ, ವಿದ್ಯಾರ್ಥಿಗಳಿಗೆ ವೈಯ್ಯಕ್ತಿಕ ಗಮನ ಕೊಡದ, ವ್ಯಕ್ತಿತ್ವದ ಸರ್ವಾಂಗೀಣ ಬೆಳವಣಿಗೆಗೆ ಸಹಾಯ ಮಾಡದ, ಅಹಿತಕರ ಶಾಲಾ-ಕಾಲೇಜಿನ ಪರಿಸರ. ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಶೇ. ೨೦ರಷ್ಟು ವಿದ್ಯಾರ್ಥಿಗಳು ಸಂತುಷ್ಟರಾದರೆ, ಶೇ. ೮೦ರಷ್ಟು ಮಂದಿ ನಿರಾಶರಾಗುತ್ತಾರೆ. ಅವಮಾನಿತರಾಗುತ್ತಾರೆ. ತಮಗೆ ಒಳ್ಳೆಯ ಭವಿಷ್ಯವಿಲ್ಲ ಎಂದು ತಿಳಿಯುತ್ತಾರೆ. ನಕಾರಾತ್ಮಕ ನಿಲುವು ಧೋರಣೆಗಳನ್ನು ಬೆಳೆಸಿಕೊಳ್ಳುತ್ತಾರೆ.

೨) ನಿರುದ್ಯೋಗ, ಪಕ್ಷಪಾತ, ವಶೀಲಿ, ಶೋಷಣೆ, ಸಂಪನ್ಮೂಲಗಳು ಕೆಲವೇ ಮಂದಿಯ ಪಾಲಾಗುವುದು, ಅವ್ಯವಸ್ಥೆ, ಅಭದ್ರತೆ, ಅನಿಶ್ಚಯತೆ, ರಾಜಕೀಯ ಲೋಪದೋಷಗಳುಳ್ಳ ಸಮಾಜ ಅಪರಾಧ ಪ್ರವೃತ್ತಿಯನ್ನು ಪೋಷಿಸುತ್ತದೆ. ನ್ಯಾಯಮಾರ್ಗಗಳಿಗಿಂತ ಅಡ್ಡಮಾರ್ಗಗಳೇ ಯುವಜನರಿಗೆ ಪ್ರಿಯವಾಗಿ ಕಾಣುವಂತಾಗುತ್ತದೆ.

೩) ಭೋಗ ಜೀವನ ಶೈಲಿಗೆ ಆದ್ಯತೆ, ಅದನ್ನು ಬೇಗ ಹಾಗೂ ಯಥೇಚ್ಛವಾಗಿ ಪಡೆಯುವ ಬಯಕೆ ಯುವಕ/ಯುವತಿಯರ ತತ್‌ಕ್ಷಣದ ಗುರಿಯಾಗಿರುವುದು.

೪) ಸಮೂಹ ಮಾಧ್ಯಮಗಳಲ್ಲಿ ಲೈಂಗಿಕತೆ, ಶ್ರೀಮಂತಿಕೆ, ಅಪರಾಧಗಳು, ಆಕ್ರಮಣ ಶೀಲತೆ ಮತ್ತು ಹಿಂಸಾಚಾರಗಳನ್ನು ಪ್ರಚೋದನಾತ್ಮಕವಾಗಿ ಪ್ರದರ್ಶಿಸಲ್ಪಡುವುದು. ಗುರಿ ಮುಖ್ಯವೇ ಹೊರತು, ಮಾರ್ಗ ಮುಖ್ಯವಲ್ಲ; ಸುಖ ಸಾಧನೆಗೆ, ಹಣ-ಸ್ಥಾನ-ಅಧಿಕಾರ ಗ್ರಹಣಕ್ಕೆ ಏನು ಮಾಡಿದರೂ ಸರಿಯೇ ಎಂದು ಬಿಂಬಿತವಾಗುವುದು ಮತ್ತು ಅಂತಹ ವ್ಯಕ್ತಿಗಳು ನಮ್ಮ ಸಮೂಹ ಮಾಧ್ಯಮಗಳಲ್ಲಿ ವ್ಯಾಪಕ ಪ್ರಚಾರ ಪಡೆಯುವುದು.

**B) ತಂದೆ ತಾಯಿಗಳು, ಅವರ ಲಾಲನಾ-ಪಾಲನಾ ವೈಖರಿ ಹಾಗೂ ಕುಟುಂಬದ ಪರಿಸರ.**

ತಂದೆ ತಾಯಿಗಳ ನಡುವೆ 'ದಾಂಪತ್ಯ ವಿರಸ', ತಂದೆ ತಾಯಿ ದೂರ ದೂರ ಇರುವುದು ಅಥವಾ ತಂದೆಯೋ, ತಾಯಿಯೋ ಇಲ್ಲದಿರುವುದು, ತಂದೆ ತಾಯಿಯಲ್ಲಿ ತೀವ್ರ ಮಾನಸಿಕ ಅಸ್ವಸ್ಥತೆ ಭಾವೋದ್ರೇಕಗಳಿರುವುದು, ಅವರು ತಮ್ಮ ಮಕ್ಕಳನ್ನು ವಿಪರೀತ ಮುದ್ದು ಮಾಡುವುದು ಅಥವಾ ಹೀನಾಯವಾಗಿ ಶಿಕ್ಷಿಸುವುದು, ಸದಾ ಇತರರೊಡನೆ ಮಗುವನ್ನು ಹೋಲಿಸುತ್ತಾ ಟೀಕಿಸುವುದು, ಮಕ್ಕಳಿಂದ ಅವಾಸ್ತವಿಕ ನಿರೀಕ್ಷೆ ಮಾಡುವುದು, ತಂದೆ ಅಥವಾ ಕುಟುಂಬದ ಸದಸ್ಯರು ಮದ್ಯ-ಮದ್ದು ಸೇವನೆಯ ಚಟಕ್ಕೆ ಬೀಳುವುದು, ಅನೈತಿಕ ಹಾಗೂ ಅಕ್ರಮ ವ್ಯವಹಾರಗಳನ್ನು ಇಟ್ಟುಕೊಳ್ಳುವುದು, ತಂದೆ ತಾಯಿ ಮಕ್ಕಳಿಗೆ ತದ್ವಿರುದ್ಧದ ಗೊಂದಲಮಯ ಬುದ್ಧಿವಾದ, ಸೂಚನೆಗಳನ್ನು ನೀಡುವುದು. ಭಾವನಾತ್ಮಕ ಆಸರೆ ನೀಡದಿರುವುದು. ಶಾಲಾ-ಕಾಲೇಜಿನಲ್ಲಿ ಚೆನ್ನಾಗಿ ಓದದ, ಫೇಲಾದ ಮಗನನ್ನು ಹೀನಾಯವಾಗಿ ತಿರಸ್ಕಾರದಿಂದ ಕಾಣುವುದು, ತಂದೆ ತಾಯಿ ಮಕ್ಕಳ ನಡುವೆ ನೇರ ಸಮರ್ಪಕ ಸಂಹವನವಿಲ್ಲದಿರುವುದು. ಪರಸ್ಪರ ಅವಿಶ್ವಾಸ ಅಪನಂಬಿಕೆ ಇರುವುದು.

**C) ವ್ಯಕ್ತಿಯಲ್ಲಿ ಕಾರಣಗಳು**

೧) ಗರ್ಭಧಾರಣೆ ಅವಧಿಯಲ್ಲಿ, ಹೆರಿಗೆ ಆಗುವಾಗ ಹಾಗೂ ಆನಂತರ ಮಗುವಿನ ಮಿದುಳಿಗೆ ಅಲ್ಪಮಟ್ಟದ ಹಾನಿ (Minimum Brain Damage)ಆಗಬಹುದು. ಈ ಮಕ್ಕಳು ಬೆಳೆಯುತ್ತಿದ್ದಂತೆ ಏಕಾಗ್ರತೆಯ ಕೊರತೆ, ಅತಿ ಚಟುವಟಿಕೆ, ಓದು, ಬರೆಯುವ ನ್ಯೂನತೆಗಳು (ಡಿಸ್‌ಲೆಕ್ಸಿಯ), ಶಾಲೆಯಲ್ಲಿ ಹಿಂದುಳಿಯುವುದು, ಗುಣ ದೋಷದ ನಡೆವಳಿಕೆಗಳನ್ನು ಪ್ರದರ್ಶಿಸುತ್ತಾರೆ. ಕ್ರಮೇಣ ಸಮಾಜ ವಿರೋಧಿ ಧೋರಣೆ, ನೀತಿ ನಿಯಮಗಳನ್ನು ಪಾಲಿಸದಿರುವುದು, ಹಿಂಸಾಚಾರದತ್ತ ವಾಲುತ್ತಾರೆ ಎಂದು ಕಂಡುಬಂದಿದೆ.

೨) ತಂದೆ ತಾಯಿ ಅಥವಾ ಇತರರಿಂದ ದೈಹಿಕ-ಮಾನಸಿಕ ಹಿಂಸೆ, ಲೈಂಗಿಕ ಅತ್ಯಾಚಾರಕ್ಕೆ ಒಳಗಾದ ಮಕ್ಕಳಲ್ಲಿ, ಅದೇ ಹಿಂಸೆ, ಲೈಂಗಿಕ ಅತ್ಯಾಚಾರ-ಸ್ವೇಚ್ಛಾಚಾರ ಹಾಗೂ ಅಪರಾಧ ಮನೋಭಾವಕ್ಕೆ ಬೇಕಾದ ಕೋಪ, ದುರಾಶೆ, ದ್ವೇಷ ಭಾವನೆಗಳು ಮನೆ ಮಾಡುತ್ತವೆ.

೩) ಪದೇಪದೇ, ಮೇಲಿಂದ ಮೇಲೆ ವ್ಯಕ್ತಿ ನಿರಾಶೆ ಹಾಗೂ ನಕಾರಾತ್ಮಕ ಭಾವನೆಗಳಿಗೆ ಒಳಗಾಗುವುದು.

೪) ಆತ್ಮವಿಶ್ವಾಸದ ಕೊರತೆ, ಕೀಳರಿಮೆ, ತನ್ನನ್ನು ಇತರರು ತಿರಸ್ಕರಿಸಬಹುದು ಎಂಬ ಆತಂಕ-ಅನುಮಾನಗಳು.

೫) ವ್ಯಕ್ತಿತ್ವ ದೋಷಗಳು : ಬಾರ್ಡರ್‌ಲೈನ್, ಆಂಟಿ ಸೋಶಿಯಲ್ ಪರ್ಸನಾಲಿಟಿ ಡಿಸಾರ್ಡರ್ – ಇಲ್ಲಿ ವ್ಯಕ್ತಿ ಅತಿ ಸ್ವಾರ್ಥಿ, ತತ್‌ಕಾಲದ ಲಾಭಕ್ಕೆ ಹಾತೊರೆಯುವವನು, ನೀತಿ ನಿಯಮಗಳ ಪಾಲನೆಗೆ ಸಿದ್ಧನಿಲ್ಲದಿರುವುದು, ತಪ್ಪು-ಶಿಕ್ಷೆಯಿಂದ ಪಾಠ ಕಲಿಯುಲು ಆಗದಿರುವುದು, ಒಂಟಿತನ-ಸಂಶಯದ ಪ್ರವೃತ್ತಿ ಹೆಚ್ಚು.

೬) ಆಲ್ಕೋಹಾಲ್-ಮಾದಕ ವಸ್ತುಗಳ ಸೇವನೆಯ ಚಟ.

೭) ಅಸ್ವಸ್ಥ ಮನಸ್ಸು – ವ್ಯಕ್ತಿತ್ವದ ಮುನ್ಸೂಚಕ ಲಕ್ಷಣಗಳಿವು.

* ಪ್ರೌಢತೆ ಇಲ್ಲ, ವಯಸ್ಸಿಗೆ ತಕ್ಕ ವಿವೇಚನೆ ಇಲ್ಲ, ಪರಾವಲಂಬಿತನ, ಹಠಮಾರಿತನ.
* ಪ್ರೌಢನಾದರೂ, ಮಕ್ಕಳಂತೆ ವರ್ತಿಸುವುದು, ಬೇಜವಾಬ್ದಾರಿತನ, ಅಸಹಾಯಕತೆಯನ್ನು ಪ್ರದರ್ಶಿಸುವುದು.
* ಕೀಟ-ಪ್ರಾಣಿ-ಜನರ ಮೇಲೆ ಹಿಂಸೆ ತೋರಿಸಿ, ಸಂತೋಷಪಡುವುದು.
* ಕುಟುಂಬ, ಶಾಲೆ, ಸಮಾಜದ ನೀತಿ-ನಿಯಮಗಳನ್ನು ಸಂಪ್ರದಾಯಗಳನ್ನು ಮುರಿಯುವ ಪ್ರವೃತ್ತಿ, ಸುಳ್ಳು, ಕಳ್ಳತನ, ಮೋಸ ವಂಚನೆ ಮಾಡಲು ಹಿಂಜರಿಯದಿರುವುದು.
* ಅಹಂಕಾರದಿಂದ ವರ್ತಿಸುವುದು, ಸಣ್ಣಪುಟ್ಟ ಕಾರಣಗಳಿಗೆ ಬಂಡಾಯ, ಪ್ರತಿಭಟನೆ ಮಾಡುವುದು. ಹಿರಿಯರನ್ನು ಅಧಿಕಾರಸ್ಥರನ್ನು ವಿರೋಧಿಸುವುದು.
* ಆತ್ಮಹತ್ಯಾ ಆಲೋಚನೆಗಳು-ಪ್ರಯತ್ನಗಳು. ಯಾವುದೇ ವಯಸ್ಸಿನವರಿಗೆ ಹೋಲಿಸಿದರೆ, ಹದಿವಯಸ್ಸಿನವರು, ಯುವಜನರಲ್ಲಿ ಆತ್ಮಹತ್ಯಾ ಪ್ರಕರಣಗಳು ಹೆಚ್ಚು. ಸಣ್ಣಪುಟ್ಟ ನಿರಾಶೆಗಳಿಗೂ ಸಾಯಲು ಸಿದ್ಧರಾಗುವುದು.

ಹೀಗೆ ಮುಖ್ಯವಾಗಿ ಸೋಲು-ನಿರಾಶೆಗಳು, ಭಾವನಾತ್ಮಕ ಆಸರೆ-ಮಾರ್ಗದರ್ಶನಗಳ ಕೊರತೆ, ಅಪರಾಧಕ್ಕೆ ಪ್ರೇರೇಪಿಸುವ ಜನರ ಸಹವಾಸಗಳಿಂದ ಹೆಚ್ಚು ಯುವಜನ ಅಪರಾಧಗಳನ್ನು ಮಾಡತೊಡಗುತ್ತಾರೆ.

ಅಪರಾಧ ಮಾಡುವ ಮಕ್ಕಳನ್ನು ಶಿಕ್ಷಿಸದೆ, ಸುಧಾರಣಾ ಗೃಹಗಳಿಗೆ ಕಳುಹಿಸುವ ವ್ಯವಸ್ಥೆ ಇದೆ. ಆದರೆ ಅಪರಾಧ ಮಾಡುವ ಯುವಜನರನ್ನು ಬಂದೀಖಾನೆಯಲ್ಲಿ, ವೃತ್ತಿನಿರತ ಅಪರಾಧಿಗಳ ಜೊತೆಗೆ ಹಾಕಲಾಗುತ್ತದೆ. ಇದರಿಂದ ಯುವಜನರ ಅಪರಾಧ ಪ್ರವೃತ್ತಿ ವೃದ್ಧಿಸುತ್ತದೆ. ಇದನ್ನು ತಪ್ಪಿಸಬೇಕು.

## ಹೇಗೆ ಸಿರಿವಂತನಾಗಲಿ ಹೇಳು ಪ್ರಭುವೇ?

ಬಡತನದ ಬೆಂಕಿಯಲಿ ಬೆಂದು ಬಸವಳಿದಿರುವೆ
ಹೇಗೆ ಸಿರಿವಂತನಾಗಲಿ ಹೇಳು ಪ್ರಭುವೇ...

ಭೂತಾಯ ನಂಬಿದೆ, ನೆತ್ತರ ಬಸಿದೆ, ಬೆವರ ಹರಿಸಿದೆ
ಉತ್ತಿದೆ, ಬಿತ್ತಿದೆ, ಹರಕೆ ಹೊತ್ತೆ, ಮುಡಿಪನಿಟ್ಟೆ
ಏನು ಮಾಡಿದರೇನು ? ಬರಿಗೈ, ಬರಿಮೈ
ಜತೆಗೆ ಸಾಲದಾ ಹೊರೆ...

ಓದಿರುವೆ, ಬರೆದಿರುವೆ, ಕಲಿತಿರುವೆ, ಅರಿತಿರುವೆ
ಕಾಯಕದ ಕನಸಲ್ಲೇ ತಿರುತಿರುಗಿ ದಣಿದಿರುವೆ...

ಕಾಲಲ್ಲಿ ಕಸುವಿದೆ, ತೋಳಲ್ಲಿ ಬಲವಿದೆ, ಮನದಲ್ಲಿ ಛಲವಿದೆ
ಏನಿದ್ದರೇನಂತೆ ದಾರಿಯಿಲ್ಲವೋ ದುಡಿಮೆಗೆ...

ಕೂಡಿಟ್ಟ ಹಣವಿಲ್ಲ, ಕಸುಬಿಗೆ ನೆಲೆಯಿಲ್ಲ
ಕುಶಲಿ ನಾನಾದರೂ ಕುಸುರಿಗೆ ಬೆಲೆಯಿಲ್ಲ
ಮೂಲೆ ಗುಂಪಾಗಿದೆ ತಾಳ ಮದ್ದಲೆ
ಆಶೆಯ ತಿದಿಯೊತ್ತಿ ಸೋತು ಕೈಚೆಲ್ಲಿರುವೆ...

ಮುದಿತಾಯ ಕನಸು ನನಸಾಗಲಿಲ್ಲ
ಮಡದಿ ಮಕ್ಕಳ ಬಾಳು ಹಸನಾಗಲಿಲ್ಲ
ಹಣೆಬರಹವ ಅಳಿಸೆಂದು ಮೊರೆಯಿಟ್ಟಿರುವೆ ಶಿವನಿಗೆ...

ಕಣ್ಣು ತುಂಬಿದೆ ನಿನ್ನರಮನೆ, ಸಾರೋಟು, ಚಿನ್ನದ ಗದ್ದುಗೆ
ಎಷ್ಟು ಮೆತ್ತಗಿದೆ ನಿನ್ನೀ ಹಾಸುಗೆ, ಹೊಳೆವ ಬೆಳ್ಳಿಯ ಚಮಚೆ
ಬೆರಗಾಗಿರುವೆ ನಿನ್ನೀ ಐಭೋಗಕೆ ಸಕಲ ಸೌಭಾಗ್ಯಕೆ...

ಹೇಗೆ ಸಿರಿವಂತನಾದೆ ಹೇಳು... ಹೇಗೆ ? ಹೇಗೆ ?
ವಂಚನೆಯ ಮಾಡದೆ ಹಂಚಿಕೊ ಎಲ್ಲವ ಎಲ್ಲರೊಂದಿಗೆ
ಸಮತೆಯ ಸಂಕಲ್ಪ ತೊಡು, ಸಿರಿವಂತನಾಗು ನಿಜಾರ್ಥದಲಿ...

**ಸವಿತಾ ನಾಗಭೂಷಣ**, ೧೨/೩, ವಸುಪ್ರದ, ೮ನೇ ಕ್ರಾಸ್, ೨ನೇ ಮೈನ್, ಗುಜರಾತಿ ಸಮಾಜದ ಹಿಂಭಾಗ, ಯಾದವಗಿರಿ, ಮೈಸೂರು-೫೭೦ ೦೨೦

### ನಿವಾರಣೆ-ಮುಂಜಾಗ್ರತೆ

ಯುವಜನರಲ್ಲಿ ಅಪರಾಧಪ್ರವೃತ್ತಿಯನ್ನು ತಗ್ಗಿಸಬೇಕಾದರೆ, ನಿವಾರಣಾ ಕ್ರಮಗಳು ಅವರು ಬಾಲ್ಯದಲ್ಲಿರುವಾಗಲೇ ಪ್ರಾರಂಭವಾಗಬೇಕು. ತಂದೆ ತಾಯಿಗಳು ತಮ್ಮ ಮಕ್ಕಳ ದೈಹಿಕ ಮತ್ತು ಬೌದ್ಧಿಕ ಬೆಳವಣಿಗೆಗೆ ಮಾತ್ರ ಗಮನಕೊಟ್ಟರೆ ಸಾಲದು. ಮಕ್ಕಳ ಭಾವನಾತ್ಮಕ, ಸಾಮಾಜಿಕ, ನೈತಿಕ ಬೆಳವಣಿಗೆಯ ಕಡೆಗೂ ಲಕ್ಷ್ಯ ಕೊಡಬೇಕು. ವ್ಯಕ್ತಿತ್ವದ ಸರ್ವಾಂಗೀಣ ಬೆಳವಣಿಗೆಗೆ ಶಿಕ್ಷಣ ಮತ್ತು ತರಪೇತಿಯನ್ನು ರೂಪಿಸಬೇಕು. ತಮ್ಮ ಮಕ್ಕಳೊಂದಿಗೆ ಮುಕ್ತ ಸಂಭಾಷಣೆ ಸಂವಾದದಲ್ಲಿ ತೊಡಗಿ, ಅವರ ಕಷ್ಟ, ಸೋಲು, ನಿರಾಶಾಭಾವನೆಗಳನ್ನು ಅರ್ಥಮಾಡಿಕೊಳ್ಳಬೇಕು. ಜೀವನ ನಡೆಸಲು ಬೇಕಾದ ಕೌಶಲಗಳನ್ನು ಕಲಿಸಬೇಕು. ಅವರಲ್ಲಿ ಆತ್ಮವಿಶ್ವಾಸ-ಸ್ವಾಭಿಮಾನವನ್ನು ಹೆಚ್ಚಿಸಬೇಕು.

ಸಿ. ಆರ್. ಚಂದ್ರಶೇಖರ್
ನಂ. ೩೮, ೨ನೇ ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಕಾಲೋನಿ
ಅರೆಕೆರೆ, ಬನ್ನೇರಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬






ಡಿಸೆಂಬರ್-೨ ರಂದು ಬಸವಣ್ಣನವರ ಐಕ್ಯಸ್ಥಳ ಕೂಡಲಸಂಗಮದಲ್ಲಿ ಉದ್ಘಾಟನೆಗೊಂಡ 'ಸೌಹಾರ್ದ ಸಂಚಾರ'.

# ಜನಜಾಗೃತಿಯತ್ತ ಯುವಕರ ಯತ್ನ

ಅಖಿಲ ಭಾರತ ಯುವಜನ ಫೆಡರೇಷನ್ ಡಿಸೆಂಬರ್-೭ರಂದು ಸೌಹಾರ್ದ ಸಮಾವೇಶ ಹಾಗೂ ೮ ರಂದು ಭಾವೈಕ್ಯತಾ ದತ್ತ ಜಯಂತಿ ಆಚರಣೆ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಇದಕ್ಕೆ ಪೂರಕವಾಗಿ ರಾಜ್ಯದ ಮೂರು ಭಾವೈಕ್ಯ ಕೇಂದ್ರಗಳಾದ ಕೂಡಲಸಂಗಮ, ಶಿಶುನಾಳ ಹಾಗೂ ಶ್ರೀಕ್ಷೇತ್ರ ಕದ್ರಿಯಿಂದ ಮೂರು ಜಾಥಾಗಳನ್ನು ಆಯೋಜಿಸಿತ್ತು. ಜಾಥಾಗಳು ಸಂಚರಿಸಿದ ದಾರಿಯುದ್ದಕ್ಕೂ ಕೋಮುಸೌಹಾರ್ದ ಸಂದೇಶವನ್ನು ಸಾರುತ್ತ ಕರ್ನಾಟಕದ ಬಹುಮುಖೀ ಸಂಸ್ಕೃತಿಯನ್ನು ಎತ್ತಿ ಹಿಡಿಯಲು ಜನ ಜಾಗೃತಿ ಉಂಟುಮಾಡಿದವು. ಸೌಹಾರ್ದ ಸಮಾವೇಶಕ್ಕೆ ಬೆಂಬಲಿಸಿ ರಾಜ್ಯದ ನೂರಾರು ಸಂಘ ಸಂಸ್ಥೆಗಳು, ನಾಡಿನ ಚಿಂತನಶೀಲರು, ಸಾಹಿತಿಗಳು, ಕಲಾವಿದರು, ಪತ್ರಕರ್ತರು ಅಪಾರ ಸಂಖ್ಯೆಯಲ್ಲಿ ಭಾಗವಹಿಸಿ ಧರ್ಮನಿರಪೇಕ್ಷ ಸಿದ್ಧಾಂತವನ್ನು ಎತ್ತಿ ಹಿಡಿಯುವ ತಮ್ಮ ಕಾಳಜಿ ಹಾಗೂ ಬದ್ಧತೆಯನ್ನು ವ್ಯಕ್ತಪಡಿಸಿದ್ದಾರೆ.




ಗಜೇಂದ್ರಗಡದಲ್ಲಿ ನಡೆದ ಬಹಿರಂಗ ಸಭೆಯಲ್ಲಿ ಮಾತನಾಡುತ್ತಿರುವ ಜಾಥಾದ ನಾಯಕ ಶೌಕತ್ ಅಲಿ ಆಲಾರ.




ಡಿಸೆಂಬರ್- ೯ರಂದು ಹಾವೇರಿಯ ಶಿಶುನಾಳ ಗ್ರಾಮದಲ್ಲಿ ಉದ್ಘಾಟನೆಯಾದ ೨ನೇ ಜಾಥಾ.

ಇದೇ ಸಂದರ್ಭದಲ್ಲಿ ವಿಶ್ವ ಹಿಂದು ಪರಿಷತ್ ಹಾಗೂ ಬಜರಂಗದಳಗಳು ಶೋಭಾಯಾತ್ರೆ, ರಥಯಾತ್ರೆ, ದತ್ತ ಜಯಂತಿಯನ್ನು ನಡೆಸಿ ತಮ್ಮ ಮುಸ್ಲಿಂ ವಿರೋಧಿ ಭಾವನೆ ಪಸರಿಸಲು, ಬಾಬಾ ಬುಡನ್ ಗಿರಿಯ ಸೂಫಿ ಸಂಪ್ರದಾಯವನ್ನು ಬದಲಾಯಿಸಿ ಇಡೀ ಗಿರಿಯನ್ನು ಹಿಂದೂಕರಣ ಮಾಡುವ ತಮ್ಮದೇ ಆದ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದವು. ಜಿಲ್ಲಾಡಳಿತ ಹಾಗೂ ಆಳುವ ರಾಜಕೀಯ ಪಕ್ಷದ ಧುರೀಣರು ಈ ಎರಡು ಬಣಗಳ ನಡುವಿನ ಸಂಘರ್ಷವನ್ನು ತಪ್ಪಿಸುವ ಹೆಸರಿನಲ್ಲಿ ಪ್ರಗತಿಪರ ಸೌಹಾರ್ದ ಸಮಾವೇಶ ವನ್ನು ನಿಷೇಧಿಸಿದುವು. ಚಿಕ್ಕಮಗಳೂರು ಜಿಲ್ಲೆ ಪ್ರವೇಶಿಸದಂತೆ ಗಡಿ ಕಾವಲು ಹಾಕಿ ಸಮಾವೇಶಕ್ಕೆ ತೆರಳುತ್ತಿದ್ದವರನ್ನು ಬಂಧಿಸಿದರು. ಸೌಹಾರ್ದ ಸಂಚಾರ ಜಾಥಾಗಳಲ್ಲಿ ಮಂಗಳೂರಿನ ಜಾಥಾ ವನ್ನು ತಡೆಹಿಡಿದು ಕಾರ್ಯಕರ್ತರನ್ನು ಬಂಧಿಸ ಲಾಯಿತು. ಹತ್ತು ಸಾವಿರಕ್ಕೂ ಹೆಚ್ಚು ಪೊಲೀಸ್ ಪಡೆಯನ್ನು ಜಿಲ್ಲಾಡಳಿತ ನಿಯೋಜಿಸಿದ್ದರೂ ಅವರಿಗೆ ಚಳ್ಳೆ ಹಣ್ಣು ತಿನ್ನಿಸಿ ಒಂದೂವರೆ ಸಾವಿರಕ್ಕೂ ಮಿಕ್ಕು ಸೌಹಾರ್ದ ಪ್ರಿಯ ಜನತೆ ಹಾಗೂ ಕೂಡಲಸಂಗಮದಿಂದ ಮತ್ತು ಶಿಶುನಾಳ ದಿಂದ ಬಂದ ಸೌಹಾರ್ದ ಸಂಚಾರ ಜಾಥಾಗಳು ಡಿಸೆಂಬರ್ - ೭ರಂದು ಚಿಕ್ಕಮಗಳೂರಲ್ಲಿ ಸೇರಿ ಸೌಹಾರ್ದ ಸಮಾವೇಶವನ್ನು ಯಶಸ್ವಿ ಗೊಳಿಸಿದ್ದಾರೆ. ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ದ್ದಕ್ಕಾಗಿ ಅವರನ್ನೆಲ್ಲಾ ಬಂಧಿಸಿ ಎರಡು ದಿನ ಜೈಲಿನಲ್ಲಿ ಇಡಲಾಗಿತ್ತು. ಜೈಲಿನಲ್ಲಿಯೇ ಭಾವೈಕ್ಯ ದತ್ತ ಜಯಂತಿಯನ್ನು ಆಚರಿಸಲಾಯಿತು.

ಈ ಸಮಾವೇಶದಲ್ಲಿ ವಿವಿಧ ತಾತ್ವಿಕ ನೆಲೆಯನ್ನು ಹೊಂದಿರುವ ಸಾವಿರಾರು ಜನ, ನೂರಾರು ಸಂಘ ಸಂಸ್ಥೆಗಳು, ಅನೇಕ ಜಾತ್ಯಾತೀತ ಹಾಗೂ ಎಡಪಂಥೀಯ ರಾಜಕೀಯ ಪಕ್ಷಗಳು ಒಂದೆಡೆ ಸೇರಿ ಪ್ರತಿಭಟಿಸಿದ್ದು ಕೋಮುವಾದದ ಬಗೆಗಿನ ಕಳಕಳಿಯಾಗಿದೆ.

*ಶಿವರಾಜ . ರಾ. ಬಿರಾದಾರ*
*ಛಾಯಾಚಿತ್ರಗಳು : ವಸಂತ ಕುಲಕರ್ಣಿ*


ಸರಕಾರದ ನಿರ್ಬಂಧವನ್ನು ಮೆಟ್ಟಿ ನಿಂತ ಸೌಹಾರ್ದ ಸಮಾವೇಶದ ಸಾಹಸಿಗರು.


ಸೌಹಾರ್ದ ಸಮಾವೇಶದಲ್ಲಿ ಲಂಕೇಶ್ ಪತ್ರಿಕೆಯ ಸಂಪಾದಕಿ ಗೌರಿ ಲಂಕೇಶ್.


ಸೌಹಾರ್ದ ಸಮಾವೇಶವನ್ನು ಉದ್ದೇಶಿಸಿ ಸಿಪಿಐನ ರಾಷ್ಟ್ರ ಕಾರ್ಯದರ್ಶಿ ಡಾ|| ಸಿದ್ದನಗೌಡ ಪಾಟೀಲ ಮಾತಾಡುತ್ತಿರುವುದು.

## ಕೆ.ಪಿ.ಸಿ.ಎಲ್. : ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ

ವಿದ್ಯುತ್ ಕ್ಷೇತ್ರದ. ಬಹಳಷ್ಟು ಉದ್ದಿಮೆಗಳು ಸುಧಾರಣೆಗಳ ಒತ್ತಡಗಳಿಗೆ ಪ್ರತಿಕ್ರಿಯಿಸುತ್ತಿರುವ ಕಾಲದಲ್ಲಿ, ಕೆ.ಪಿ.ಸಿ.ಎಲ್. ನಿಜಕ್ಕೂ ಮುಂಚೂಣಿಯಾಗಿ ಸ್ಪಂದಿಸಿದೆ. ಕಠಿಣ ಸುಧಾರಣೆಗಳಿಂದಾಗಿ ಈ ಕ್ಷೇತ್ರದ ಮೇಲಿರುವ ಒತ್ತಡಗಳ ನಡುವೆಯೂ ಸಹ, ಕೆ.ಪಿ.ಸಿ.ಎಲ್. ಪರಿಸ್ಥಿತಿಗೆ ಸೂಕ್ತ ನೂತನ ಉಪಕ್ರಮಗಳಿಗೆ ತಕ್ಕಂತೆ ತನ್ನ ಕಾರ್ಯಾಚರಣೆಯನ್ನು ಬದಲಿಸಿಕೊಂಡು, ಮುನ್ನುಗ್ಗಿ ಇಂದು ಇತರ ಉಪಯುಕ್ತತೆಗಳಿಗೆ ಮಾದರಿಯಾಗಿ ನಿಂತಿದೆ. ವಾಣಿಜ್ಯಾತ್ಮಕ, ಸುಗಮ ಮತ್ತು ಗುಣಮಟ್ಟ ಇಂಧನ ಸರಬರಾಜಿಗಾಗಿ ಪರಿಣಾಮಕಾರಿ ಒಪ್ಪಂದ, ದೇಶೀಯ ಮತ್ತು ರಫ್ತು ಕಲ್ಲಿದ್ದಲ ವೈಜ್ಞಾನಿಕ ಮಿಶ್ರಣ, ಹೆಚ್ಚು ಬಡ್ಡಿಯ ಸಾಲವನ್ನು ಕಡಿಮೆ ಬಡ್ಡಿ ದರದ ಸಾಲವನ್ನಾಗಿ ಪರಿವರ್ತಿಸುವಲ್ಲಿ ಆರ್ಥಿಕ ತಂತ್ರಜ್ಞಾನ ಬಳಕೆ, ಹೊಸ ಯೋಜನೆಗಳಿಗೆ ನೂತನ ರೀತಿಯಲ್ಲಿ ಬಂಡವಾಳ ಹೂಡಿಕೆ ಮತ್ತು ಹಾಲಿ ಇರುವ ಘಟಕಗಳ ಕಾರ್ಯಾಚರಣೆ ಮತ್ತು ಪಾಲನಾಕ್ರಿಯೆಗಳ ನೂತನ ಪರಿಯಿಂದಾಗಿ ಕೆ.ಪಿ.ಸಿ.ಎಲ್. ರಾಷ್ಟ್ರದ ವಿದ್ಯುತ್ ಕ್ಷೇತ್ರದಲ್ಲಿ ಮುಂಚೂಣಿ ಸಂಸ್ಥೆಯಾಗಿ ವಿಜೃಂಭಿಸಿದೆ.

**ಕೆ.ಪಿ.ಸಿ.ಎಲ್.ನ ಹಾಲಿ ಇರುವ ಸ್ಥಾಪಿತ ಸಾಮರ್ಥ್ಯ : ೪೩೫೦ ಮೆಗಾವಾಟ್**

**ನಿರ್ಮಾಣ ಮತ್ತು ನೂತನ ಯೋಜನೆಗಳ ಸಾಮರ್ಥ್ಯ : ೨೬೭೫ ಮೆಗಾವಾಟ್**

*ಹಾರ್ದಿಕ ಶುಭಾಶಯಗಳೊಂದಿಗೆ:*




ಕರ್ನಾಟಕ ವಿದ್ಯುತ್ ನಿಗಮ ನಿಯಮಿತ
೮೨, ಶಕ್ತಿಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೫ ೬೫೬೮, ಫ್ಯಾಕ್ಸ್ : ೨೨೫ ೨೧೪೪
ಇ-ಮೇಲ್ : cccm@karnatakapower.com

# ಕಾಣೆಯಾಗುತ್ತಿರುವ ಜೀವಿಗಳು

ಡಾ|| ಬಿ. ಎಸ್. ಶೈಲಜಾ

ದಿನವೂ ಆಫೀಸಿಗೆ ಹೋಗಲು ನಮ್ಮ ತಂದೆಯ ಬಳಿ ಇದ್ದ ವಾಹನ ಬೈಸಿಕಲ್. ಆಫೀಸಿಗೇ ಏಕೆ ಎಲ್ಲಿಗೆ ಹೋಗಲೂ ಅದೇ ಬೇಕಾಗಿತ್ತಲ್ಲ. ಕತ್ತೆಯಂತೆ ಅದು ಸಾಮಾನನ್ನೂ ಹೊರುತ್ತಿತ್ತು. ದೂರದ ಬಡಾವಣೆಯ ಹೊಸಮನೆಯೊಂದರ ಗೃಹಪ್ರವೇಶಕ್ಕೆ ನಮ್ಮೆಲ್ಲರನ್ನೂ ಹೊತ್ತೊಯ್ದಿತ್ತು. ಐದು ಮಕ್ಕಳ ಭಾರ ಹೊತ್ತ ಈ ಬಡಪಾಯಿಯನ್ನು ನಮ್ಮ ತಂದೆ ತಳ್ಳಿಕೊಂಡು ಬರುತ್ತಿದ್ದರು. ಯಾವುದಾದರೊಂದು ದಿನ ಟೈರ್ 'ಟುಸ್' ಎಂದಾಗಲೂ ಅದಕ್ಕೆ ವಿಶ್ರಾಂತಿ ಇರಲಿಲ್ಲ. ಪಕ್ಕದ ಸೈಕಲ್ ಶಾಪ್‌ಗೆ ತಳ್ಳಿಕೊಂಡು ಹೋಗಿಬಿಟ್ಟು ಬರುವ ಕೆಲಸ ನಮ್ಮದಾಗುತ್ತಿತ್ತು. ನಮ್ಮ ತಂದೆಯವರು ಆಫೀಸಿಗೆ ಹೊರಡುವ ಹೊತ್ತಿಗೆ 'ಪಂಚೇರು' ಮುಗಿಯುತ್ತಿತ್ತು.

ಈ ಸೈಕಲ್ ಶಾಪ್ ನಡೆಸುತ್ತಿದ್ದಾತ ಒಮ್ಮೆ ತನ್ನ ಬೀಬಿಯನ್ನು 'ಮುಮ್ತಾಜ್' ಎಂದು ಗಟ್ಟಿಯಾಗಿ ಕೂಗಿ ಕರೆದದ್ದು ನಮಗೆ ಕೇಳಿಸಿಬಿಟ್ಟಿತು. ನಮ್ಮ ಇಂದಿನ ಇತಿಹಾಸ ಜ್ಞಾನವನ್ನು ಉಪಯೋಗಕ್ಕೆ ತಂದು, ಮುಮ್ತಾಜ್‌ಳ ಗಂಡನಿಗೆ 'ಶಾಹಜಹಾನ್' ಎಂದು ಹೆಸರಿಟ್ಟುಕೊಂಡೆವು. ಅವನ ಇಬ್ಬರು ಗಂಡುಮಕ್ಕಳಿಗೆ ದಾರಾ, ಶೂಜ ಎಂದು ಹೆಸರಿಸಿದೆವು. ಎರಡನೆಯ ತರಗತಿಯಲ್ಲಿದ್ದ ನನ್ನ ತಮ್ಮನ ಬಾಯಲ್ಲಿ ಅವು 'ದಾರ', 'ಸೂಜಿ' ಆಗಿ ಹಾಗೆಯೇ ಉಳಿದುಕೊಂಡವು. ''ದಾರ ಚೆನ್ನಾಗಿ ಕೆಲಸ ಮಾಡ್ತಾನೆ; ಸೂಜಿ ಸೋಮಾರಿ'' ಎಂದು ಎಲ್ಲರೂ ಈ ಹೆಸರುಗಳನ್ನು ಬಳಸುತ್ತಿದ್ದರು.

ಶಾಹಜಹಾನನ ಅಂಗಡಿಯಲ್ಲಿ ಏಳೆಂಟು ಸೈಕಲ್‌ಗಳಿರುತ್ತಿದ್ದವು. ಮಕ್ಕಳು ಅಪ್ಪ ಅಮ್ಮಂದಿರನ್ನು ಕಾಡಿ ಬೇಡಿ ಐವತ್ತು ಪೈಸೆ ವಸೂಲಿ ಮಾಡಿ, ಈ ಸೈಕಲ್‌ಗಳನ್ನು ಬಾಡಿಗೆಗೆ ಪಡೆಯುತ್ತಿದ್ದರು. ಅವರ ಸೈಕಲ್ ಕಲಿಕೆ, ಡಬಲ್ ರೈಡ್, ಏಳುವುದು ಬೀಳುವುದು, ಕತ್ರಿ, ಸ್ಲೋ ಸೈಕಲ್ ರೇಸ್ ಎಲ್ಲವೂ ಬಾಡಿಗೆ ಸೈಕಲ್‌ಗಳಲ್ಲೇ ನಡೆಯಬೇಕಾಗಿತ್ತು. ಒಂದು ಗಂಟೆಯ ಅವಧಿಯಲ್ಲಿ ಒಂದು ನಿಮಿಷವೂ ಪೋಲಾಗದ ಹಾಗೆ ಆ ಸೈಕಲ್‌ಗಳನ್ನು ದುಡಿಸಿಕೊಳ್ಳುವ ಛಾತಿ ಮಕ್ಕಳಿಗಿತ್ತು.

ಆ ದಿನಗಳಲ್ಲಿ ಅನೇಕ ಬಡಪಾಯಿಗಳು ನಾಣ್ಯಗಳನ್ನು ಕಳೆದುಕೊಳ್ಳುತ್ತಿದ್ದರು. ಅನಾಥವಾಗಿ ರಸ್ತೆಯಲ್ಲಿ ಬಿದ್ದಿರುತ್ತಿದ್ದ ಇವು ಸಾಮಾನ್ಯವಾಗಿ ಅತಿ ಚಿಕ್ಕ ಮಕ್ಕಳಿಗೇ ಕಾಣುತ್ತಿದ್ದವು. ಅವರ ಕಣ್ಣುಗಳು (ಉಳಿದ ದೊಡ್ಡ ಮಕ್ಕಳ ಕಣ್ಣುಗಳಿಗಿಂತ) ರಸ್ತೆಗೆ ಹತ್ತಿರದಲ್ಲಿರುವುದೇ ಇದಕ್ಕೆ ಕಾರಣ ಎಂದು ಕೆಲವರು ಸಿದ್ಧಾಂತ ನಿರೂಪಿಸಿದ್ದರು. (ನಾಣ್ಯ ಸಿಗದಿದ್ದ ದೊಡ್ಡ ಮಕ್ಕಳದೇ ಈ ಸಿದ್ಧಾಂತ ಎಂದು ಬೇರೆಯಾಗಿ ಹೇಳಬೇಕಿಲ್ಲವಲ್ಲ.) ಹೀಗೊಂದು ನಿಧಿ ಸಿಕ್ಕಾಗ ರಹಸ್ಯ ಸಮಾಲೋಚನೆ ನಡೆದು, ಆ ದುಡ್ಡಿನಲ್ಲಿ ಬಾಡಿಗೆ ಸೈಕಲ್ ತೆಗೆದುಕೊಳ್ಳಬೇಕು ಎಂದು ನಿರ್ವಿವಾದವಾಗಿ ಇತ್ಯರ್ಥವಾಗುತ್ತಿತ್ತು. ನಿಧಿಯ ಯಜಮಾನನಿಗೆ ಸೈಕಲ್ ಓಡಿಸಲು ಬರದಿದ್ದಾಗ ಮಾತ್ರ ಈ ನಿರ್ಣಯಕ್ಕೆ ಸ್ವಲ್ಪಮಟ್ಟಿನ ವಿರೋಧ ಒದಗುತ್ತಿತ್ತು. ಆದರೆ ಡಬಲ್ ರೈಡ್ ಅಥವಾ ಕತ್ರಿ ಹೊಡೆಯುವುದನ್ನು ಕಲಿಯುವ ಆಮಿಷ ಆ ಸೊಲ್ಲನ್ನು ಅಡಗಿಸಿಬಿಡುತ್ತಿತ್ತು. ನಿಧಿಯ ಯಜಮಾನನಿಗೆ ಎರಡು ರೌಂಡು, ಉಳಿದವರಿಗೆ ಒಂದೊಂದು ಹೀಗೆ ಹಂಚಿಕೆ. ಒಟ್ಟಿನಲ್ಲಿ ಶಾಹಜಹಾನನ ಹೊಟ್ಟೆಪಾಡು ಕಳೆಯುತ್ತಿತ್ತು.

ಸಾಮಾನ್ಯವಾಗಿ ಕಛೇರಿಯ ಕೆಲಸ ಕಾರ್ಯಗಳಿಗೆ ಬೇರೆ ಊರಿಂದ ಬರುತ್ತಿದ್ದ ನೆಂಟರಿಷ್ಟರೂ ಬಾಡಿಗೆ ಸೈಕಲ್ ಅವಲಂಬಿಸಿರುತ್ತಿದ್ದರು. ಅವರ ಮಕ್ಕಳಿಗೂ ಸೈಕಲ್ ಚಪಲ. ಆದ್ದರಿಂದ ಹಿರಿಯರು ಕೆಲಸ ಮುಗಿಸಿ ವಾಪಸ್ ಬಂದೊಡನೆ ''ಇನ್ನೂ ಎಷ್ಟು ನಿಮಿಷ ಓಡಿಸಬಹುದು?'' ಎಂದು ವಿಚಾರಿಸಿಕೊಂಡು, ಆ ಹತ್ತು-ಹದಿನೈದು ನಿಮಿಷ ಸೈಕಲ್‌ನ ಮೇಲೆ ತಮ್ಮ ಹಕ್ಕನ್ನು ಚಲಾಯಿಸುತ್ತಿದ್ದರು. ಪರಿಚಯವಿಲ್ಲದ ರಸ್ತೆಗಳಲ್ಲಿ ಓಡಿಸಲು ಧೈರ್ಯವಿಲ್ಲದೇ ಮನೆಯಂಗಳದಲ್ಲೇ ಸುತ್ತಿ ಆಮೇಲೆ ಶಾಹಜಹಾನ್‌ಗೆ ವಾಪಸ್ ಕೊಡುತ್ತಿದ್ದರು. ಹಿರಿಯರೊಡನೆ ಮಕ್ಕಳು ಬಂದಿಲ್ಲದಿದ್ದರೆ, ಈ ಹತ್ತು ನಿಮಿಷಗಳ ಸೌಭಾಗ್ಯವೂ ನಮಗೇ ದೊರಕುತ್ತಿತ್ತು.

ನಮ್ಮ ಕ್ಲಾಸ್‌ನಲ್ಲಿ (ತರಗತಿಯಲ್ಲಿ) ಓದುತ್ತಿದ್ದ ಹುಡುಗನೊಬ್ಬನ ಕುರಿತು ಉಳಿದವರಿಗೆಲ್ಲಾ ''ಒಂಥರಾ'' ಹೊಟ್ಟೆಕಿಚ್ಚು. ಟ್ಯೂಷನ್‌ಗೆ ಹೋಗುವುದು ಅಪಮಾನಕರ ಎನಿಸಿದ್ದ ಆ ದಿನಗಳಲ್ಲಿ ಟ್ಯೂಷನ್‌ಗೆ ಹೋಗಲೇಬೇಕಾಗಿತ್ತು. ಅವನಿಗೆ ಟ್ಯೂಷನ್‌ಗೆ ಹೋಗಲು ದಿನಾ ಸೈಕಲ್ ಸಿಗುತ್ತಿತ್ತು ಎಂಬುದೇ ಹೊಟ್ಟೆಕಿಚ್ಚಿಗೆ ಕಾರಣ. ಅವನೆಂತಹ 'ಅದೃಷ್ಟಶಾಲಿ' ಎಂಬ ಪಿಸುಮಾತೂ ಕೇಳಿಬರುತ್ತಿತ್ತು.

ಒಮ್ಮೆ ತಂದೆಯವರಿಗೆ ತುರ್ತಾಗಿ ಯಾವುದೋ ಸಾಮಾನು ಬೇಕಿತ್ತು. ಇಂತಹ ಸಂದರ್ಭದಲ್ಲಿ 'ಸೈಕಲ್ ಮೇಲೆ ಹೋಗಿ ಬಾ' ಎಂದು ಹೇಳುತ್ತಿದ್ದುದು ವಾಡಿಕೆ. ಅಂದು ಸೈಕಲ್ ಪಂಕ್ಚರ್ ಆಗಿತ್ತು. ಆದ್ದರಿಂದ ಅದನ್ನು ಶಾಹಜಹಾನನಿಗೆ ಕೊಟ್ಟು ಬಾಡಿಗೆ ಸೈಕಲ್ ಮೇಲೆ ಹೋಗಿ ಬಾ ಎಂದು ಹೇಳಬಹುದು ಎಂದು ನಾವು ನಿರೀಕ್ಷಿಸಿದ್ದೆವು. ಹಾಗೆಯೇ ಆಯಿತು. ಯಾರಿಗೆ ಅದೃಷ್ಟ ಎಂದು ನಾವು ಎದುರು ನೋಡುತ್ತಿರುವಾಗಲೇ ಮನೆಗೆ ಬಂದಿಳಿದಿದ್ದ ನೆಂಟರ ಹುಡುಗನಿಗೆ ಆಜ್ಞೆ ಮಂಜೂರಾಯಿತು. ಅವನು ವಯಸ್ಸಿನಲ್ಲಿ ದೊಡ್ಡವನು. ಆದರೇನು? ಅವನಿಗೆ ಅಂಗಡಿ ಗೊತ್ತಿಲ್ಲವಲ್ಲ ಎಂದು ನಾವು ಮುಂದಿನ ಛಾನ್ಸ್ ಯಾರಿಗೆ ಎಂದು ಕಾಯುತ್ತಿದ್ದೆವು. ಆದರೆ ಅದಕ್ಕೆ ಅವಕಾಶ ಸಿಗಲಿಲ್ಲ. ಅವನಿಗೆ ಅಂಗಡಿಯ ಗುರುತು ಹೇಳಿ ಚೀಟಿ ಬರೆದುಕೊಟ್ಟು ಕಳುಹಿಸಿಬಿಟ್ಟರು. ಅರ್ಧಗಂಟೆಯಾದರೂ ಅವನು ಬರಲಿಲ್ಲ. ದಾರಿ ತಪ್ಪಿಸಿ ಕೊಂಡನೇನೋ ಎಂದು ತಂದೆಯವರಿಗೆ ಆತಂಕ. ನಮ್ಮ ಯೋಚನೆ ಬೇರೆ ದಿಕ್ಕಿನಲ್ಲಿ ಹರಿದಿತ್ತು. ಸೈಕಲ್‌ನ ಬಾಡಿಗೆಗೆ ಕನಿಷ್ಠ ಅವಧಿ ಅರ್ಧಗಂಟೆ. ಆದ್ದರಿಂದ ಅವನು 'ಮಜಾ' ಮಾಡುತ್ತಿದ್ದಾನೆ ಎಂದು ನಮ್ಮ ಎಣಿಕೆ. ಅವನು ಬೆವರು ಸುರಿಸುತ್ತಾ ಬಂದ ಕೂಡಲೇ ನಮ್ಮ ತಂದೆ 'ಯಾಕೆ ಇಷ್ಟು ಹೊತ್ತು?' ಎಂದರು. ಅವನು ಏದುಸಿರು ಬಿಡುತ್ತಾ, 'ಸುಮ್ಮನೆ ನಡಕೊಂಡು ಹೋಗಿ ಬಂದಿದ್ದರೆ ಇನ್ನೂ ಬೇಗ ಬರುತ್ತಿದ್ದೆ. ಆ ಸೈಕಲ್ಲನ್ನೂ ತಳ್ಳಿಕೊಂಡು ಬರುವ ಹೊತ್ತಿಗೆ ತಡವಾಯಿತು' ಎಂದ. ಅವನಿಗೆ ಸೈಕಲ್ ಓಡಿಸಲು ಬರುತ್ತಿರಲಿಲ್ಲ ಎಂದು ಆಗ ನಮಗೆ ಜ್ಞಾನೋದಯವಾಯಿತು.

ಈಗ ಶಾಹಜಹಾನ್ ಎಲ್ಲಿ ಹೋದನೋ ಏನೋ. ಅವನ ಅಂಗಡಿ ಇರುತ್ತಿದ್ದ ಫುಟ್‌ಪಾತ್‌ನಲ್ಲಿ ಒಂದು ಟೈರ್ ಬಹಳ ವರ್ಷ ಮರಕ್ಕೆ ನೇತಾಡಿಕೊಂಡಿತ್ತು. ಈಗ ಬಾಡಿಗೆ ಸೈಕಲ್‌ಗಳೂ ಸಿಗುವುದಿಲ್ಲ. ಎಲ್ಲ ಮಕ್ಕಳೂ ಸೈಕಲ್‌ಗಳ ಒಡೆಯರಾಗಿಬಿಟ್ಟಿರುತ್ತಾರಲ್ಲ!

* * *

ಅಂದಿನ ದಿನಗಳಲ್ಲಿ ಹಾಲು ಪಡೆದುಕೊಳ್ಳಲು 'ವರ್ತನೆ' ಮಾಡಿಕೊಳ್ಳುವ ಪದ್ಧತಿ ಇತ್ತು. ಮನೆ ಬಾಗಿಲಿಗೆ ಹಾಲು ತಂದು ಹಾಕುವಾಗ ಋತುಮಾನಕ್ಕೆ ತಕ್ಕ ಹಾಗೆ ಅದರಲ್ಲಿನ ನೀರಿನ ಪ್ರಮಾಣ ವ್ಯತ್ಯಾಸವಾಗುತ್ತಿದ್ದ ಸಂಗತಿ ಎಲ್ಲರಿಗೂ ಗೊತ್ತು. ಇದನ್ನು ತಪ್ಪಿಸಲು ನಮ್ಮ ಮನೆಯ ಮುಂದೆಯೇ ಬಂದು ಕರೆಯುವಂತೆ ಎಮ್ಮೆಯೊಂದನ್ನು ಗೊತ್ತುಮಾಡಿದ್ದರು. ಅದರ ಒಡತಿಯ ಹೆಸರು ಮುನಿಯಮ್ಮ. ಬೆಳಿಗ್ಗೆ ಆರು ಗಂಟೆಯಲ್ಲೇ ಅವಳ ದವಡೆಯಲ್ಲಿ ತಂಬಾಕಿನ ಉಂಡೆ ಪ್ರತಿಷ್ಠೆಯಾಗಿರುತ್ತಿತ್ತು. ಕರುವನ್ನು ಭುಜದ ಮೇಲೆ ಹೊತ್ತು ಬರುತ್ತಿದ್ದ ಆಕೆ ಎಮ್ಮೆಯ ಕೋಡುಗಳಿಗೆ ಹಾಲಿನ ಡಬ್ಬಗಳನ್ನು ತಗಲುಹಾಕಿ ಕಲಗಚ್ಚಿನ ಬಕೇಟನ್ನು ಕೈಲಿ ಹಿಡಿದು ಠೀವಿಯಿಂದ ನಡೆದು ಬರುತ್ತಿದ್ದಳು. ಅವಳು ಬಂದ ತಕ್ಷಣ ಅವಳಿಗೆ ಒಂದು ಬಕೆಟ್ ನೀರು ಸರಬರಾಜಾಗುತ್ತಿತ್ತು. ಹಾಲಿನ ಡಬ್ಬ, ಅಳತೆಯ ಪಾವು, ಚಟಾಕುಗಳನ್ನು ಅಲ್ಲದೆ ಎಮ್ಮೆಯ ಕೆಚ್ಚಲನ್ನೂ ತೊಳೆದು ಹಾಲು ಕರೆಯಲು ಆರಂಭಿಸುವವರೆಗೂ ಅಮ್ಮ ಎದುರಿನಲ್ಲೇ ನಿಂತಿರುತ್ತಿದ್ದರು. ''ಯಾವುದೋ ಮಾಯದಲ್ಲಿ ನೀರು ಬೆರೆಸಿ, ನೊರೆ ಸುರಿದು ಓಡುತ್ತಾಳೆ'' ಎಂಬುದು ಎಲ್ಲ ಮುನಿಯಮ್ಮಂದಿರ ಬಗ್ಗೆ ಎಲ್ಲ ಅಮ್ಮಂದಿರ ದೂರು. ಆದ್ದರಿಂದ

ಡೋ ಡೋ ಎಂಬ ಹಕ್ಕಿ [illegible] ಈ ಹಕ್ಕಿ ಮಡಗಾಸ್ಕರ್‌ನಲ್ಲಿ ಓಡಾಡಿಕೊಂಡಿತ್ತಂತೆ. ಆ ದ್ವೀಪಕ್ಕೆ ಕಾಲಿಟ್ಟ ಯುರೋಪಿಯನ್ನರು, ಓಡಲೂ ಬಾರದ, ಹಾರಲೂ ಆಗದ ಈ ಹಕ್ಕಿಗಳನ್ನೆಲ್ಲಾ ತಿಂದುಹಾಕಿಬಿಟ್ಟರಂತೆ.



ಹಾಲಿನ ಕೆಲಸ ಮುಗಿಯುವವರೆಗೂ ನಾವು ಎಮ್ಮೆಯ ಸುತ್ತಮುತ್ತ ಓಡಾಡಿಕೊಂಡಿರುತ್ತಿದ್ದೆವು. ನೀರು ಬೆರಕೆಯಾಗದಂತೆ ನೋಡಿಕೊಳ್ಳಬೇಕಾಗಿತ್ತಲ್ಲ. ಎಮ್ಮೆಯ ಚಾಚಿದ ಕೋಡುಗಳಿಗೆ ಬಣ್ಣದ ಚಾಕ್‌ನಿಂದ ಅಲಂಕಾರ ಮಾಡುತ್ತಿದ್ದೆವು. ಅದರ ಮೈ ಬ್ಲಾಕ್ ಬೋರ್ಡ್‌ನಂತೆ ಬಳಕೆಯಾಗುತ್ತಿತ್ತು. ಮಗ್ಗಿಗಳು, ಕಾಗುಣಿತ, ಸೂರ್ಯನ ಚಿತ್ರ ಎಲ್ಲವನ್ನೂ ಅಲ್ಲಿ ಬರೆಯುತ್ತಿದ್ದೆವು. ಅದು ಚೂರೂ ತಕರಾರಿಲ್ಲದೇ ಎಲ್ಲ ಉಪಚಾರಗಳನ್ನೂ ಮಾಡಿಸಿಕೊಳ್ಳುತ್ತಿತ್ತು. ಅದರ ಕಲಗಚ್ಚಿನ ಬಕೀಟಿನಲ್ಲಿ ದಪ್ಪದಪ್ಪ ಕಲ್ಲುಗಳನ್ನು ಮುನಿಯಮ್ಮ ಹಾಕಿರುತ್ತಿದ್ದಳು. ಕಲಗಚ್ಚು ತಿನ್ನಲು ಅಡ್ಡಡ್ಡ ಬರುವ ಈ ಕಲ್ಲುಗಳನ್ನು ಅತ್ತಿತ್ತ ತಳ್ಳಿ ಅದು ತಿಂದು ಮುಗಿಸುವಷ್ಟರಲ್ಲಿ ಹಾಲು ಕರೆದು ಮುಗಿಸಬಹುದು ಎಂದವಳ ಉಪಾಯ. ಹಾಲು ಕರೆದಾಗಿ, ಕರು ಹಾಲು ಕುಡಿದಾದ ಮೇಲೂ, ಪಾಪ ಆ ಎಮ್ಮೆ ಕಲ್ಲುಗಳನ್ನು ಡಬಡಬ ಎಂದು ಸದ್ದು ಮಾಡುತ್ತಾ ನೆಕ್ಕುತ್ತಲೇ ಇತ್ತು.



ಮುಂದಿನ ದಿನಗಳಲ್ಲಿ ಮುನಿಯಮ್ಮ ಬೇರೆ ಎಮ್ಮೆ ತಂದಳು. ಇದರ ಕರುವನ್ನು ನಡೆಸಿಕೊಂಡೇ ಬರುತ್ತಿದ್ದಳು. ಅಷ್ಟೇ ಅಲ್ಲ; ಅದಕ್ಕೆ ಹಾಲು ಕುಡಿಯಲೂ ಅವಕಾಶ ಕೊಡದೇ ಎಮ್ಮೆಯನ್ನು ಹೊರಡಿಸುತ್ತಿದ್ದಳು. ನಿಲ್ಲಲೂ ಶಕ್ತಿಯಿರದಿದ್ದ ಆ ಕರು ಏಳುತ್ತಾ ಬೀಳುತ್ತಾ ಹಿಂದೆ ಮುಂದೆ ಹೋಗುತ್ತಿತ್ತು. ಇದೇಕೆ ಈ ಕರುವಿಗೆ ನಿರ್ಲಕ್ಷ್ಯ ಎಂದು ನಮಗೆ ಆಶ್ಚರ್ಯ. ಹಾಗೆಂದು ಕೇಳಿದಾಗ ಅವಳು ಪಿಚಕ್ಕನೆ ತಂಬಾಕು ಉಗುಳಿ, 'ಏ ಬಿಡಮ್ಮಾ.... ಅದು ಹೋರಿಕರ' ಎಂದಳು. ಹೋರಿಕರು ಎಂಬುದೊಂದು ದಂಡಪಿಂಡ ಎಂಬ ಜ್ಞಾನೋದಯವಾದದ್ದು ಹೀಗೆ.

ಇಂಗ್ಲಿಷ್ ಕಲಿತ ಹೊಸದರಲ್ಲಿ ಎಮ್ಮೆಯ ಮೇಲೆ A,B,C ಎಲ್ಲವನ್ನೂ ಬರೆದಿಟ್ಟಿದ್ದೆವು. ಆಗೊಂದು ಅದ್ಭುತ ಯೋಜನೆ ಹೊಳೆಯಿತು. ''ಮುನಿಯಮ್ಮಾ, ಈ ಎಮ್ಮೆ ಕಳೆದು ಹೋದರೆ ನಿನಗೆ ಹೇಗೆ ಗೊತ್ತಾಗುತ್ತೆ?'' ಎಂದು ಕೇಳಿದೆವು. ''ನೀವು ಯಾವ ಮಂದೆಯಲ್ಲಿ ಮುಚ್ಚಿಟ್ಟರೂ ಇದನ್ನು ನಾನು ಪತ್ತೆ ಮಾಡ್ತೀನಿ'' ಎಂದಳು ಮುನಿಯಮ್ಮ. ಆದರೂ ನಮಗೇನೋ ಆತಂಕವಾಯಿತು. ''ಈ ಎಮ್ಮೆಯ ಹೆಸರೇನು'' ಎಂದೆವು. ಪುಣ್ಯಕೋಟಿ ಪದ್ಯದಲ್ಲಿ ಬರುವ ಗಂಗೆ, ಗೌರಿ.... ಇತ್ಯಾದಿ ಹೆಸರುಗಳಲ್ಲೊಂದನ್ನು ನಿರೀಕ್ಷಿಸಿದ್ದೆವು. ಆದರೆ ಅವಳು ಕೊಟ್ಟ ಉತ್ತರ – ''ಮಂಗಮ್ಮ!'' ಪ್ರತಿದಿನವೂ ಶುಭ್ರವಾಗಿ ಬರುತ್ತಿದ್ದ ಬ್ಲಾಕ್ ಬೋರ್ಡ್ (ಎಮ್ಮೆಯ ಮೈ) ಮೇಲೆ ದಪ್ಪದಪ್ಪ ಅಕ್ಷರಗಳಲ್ಲಿ 'ಮಂಗಮ್ಮ' ಎಂದು ಬರೆದೆವು. ದೊಡ್ಡ ಕ್ಲಾಸಿನಲ್ಲಿದ್ದು ಇಂಗ್ಲಿಷ್ ಚೆನ್ನಾಗಿ ಕಲಿತಿದ್ದ ನಮ್ಮಕ್ಕ ಇಂಗ್ಲಿಷ್‌ನಲ್ಲಿ (ಇನ್ನೊಂದು ಭಾಗದಲ್ಲಿ) ಬರೆದಳು. ಆಮೇಲೆ c/o ಮುನಿಯಮ್ಮ, ಮಾರನಹಳ್ಳಿ ಎಂದು ವಿಳಾಸವನ್ನೂ ಬರೆದೆವು. ''ಏನದು ನೀವು ಬರೆದಿರೋದು'' ಎಂದಳು ಓದುಬಾರದ ಮುನಿಯಮ್ಮ. ''ನಿನ್ನ ಹೆಸರು, ಅಡ್ರೆಸ್ಸು'' ಎಂದಾಗ, ''ಐ... ನಾಳೆ ಇದನ್ನ ಮಾರಾಕ್ತೀನಿ'' ಎಂದಳು.

ಎರಡು ಮೂರು ದಿನಗಳ ಬಳಿಕ ಹೊಸ ಎಮ್ಮೆ ಬಂದಿತು. ಇದರ ಕೋಡು ನೇರವಾಗಿರಲಿಲ್ಲ, ಒಂದು ಮುರಿದಿತ್ತು. ಮೈಮೇಲೆ ಬರೆಯಲು ಹೋದರೆ ಬಾಲ ಬೀಸಿ ಪ್ರತಿಭಟಿಸುತ್ತಿತ್ತು. ಒದೆಯುತ್ತೇನೆ ಎಂಬಂತೆ ಕಾಲು ಝಾಡಿಸುತ್ತಿತ್ತು. ಕಲಗಚ್ಚಿನ ಬಕೀಟಿಗೆ ಕಲ್ಲು ಹಾಕಿದರೆ ಒದ್ದು ಬಿಡುತ್ತಿತ್ತು. ಮುನಿಯಮ್ಮ ಜೋರಾಗಿ ಗದ್ದರಿಸುತ್ತಿದ್ದಳು. 'ಸಿಡುಕಿ' ಎಂದು ಬೈಯುತ್ತಿದ್ದಳು. ಈ ಎಮ್ಮೆಗೆ 'ಸಿಡುಕಮ್ಮ' ಎಂದು ನಾವು ಹೆಸರಿಟ್ಟೆವು. ಅದೊಂದು ದಿನ ಅದು ಶಾಂತವಾಗಿ ಮೆಲುಕು ಹಾಕುತ್ತಾ ಕುಳಿತಿದ್ದಾಗ ಆ ಹೆಸರನ್ನು ಅದರ ಮೇಲೆ ಬರೆದೂಬಿಟ್ಟೆವು.

ಪ್ಯಾಕೆಟ್ ಹಾಲಿನ ಯುಗ ಆರಂಭವಾದಂತೆ ಮಂಗಮ್ಮಗಳೂ ಸಿಡುಕಮ್ಮಗಳೂ ಕಾಣೆಯಾದವು. ಮುನಿಯಮ್ಮಂದಿರೂ ಮೂಲೆ ಸೇರಿರಬೇಕು. ಈಗ ಮಕ್ಕಳನ್ನು ಕೇಳಿ – ''ನೀವು ಕುಡಿಯುವ ಹಾಲು ಎಲ್ಲಿಂದ ಬರುತ್ತೆ?'' ಎಂದು. ''ಅಂಗಡಿಯಿಂದ'' ಎಂದೋ, ''ರಾಮು ಅಂಕಲ್‌ನ ಸೈಕಲ್ ಮೇಲಿಂದ'' ಎಂದೋ ಉತ್ತರ ಬರಬಹುದು. ಹಾಲಿನ ಪ್ಯಾಕೆಟ್ ಮೇಲೆ ಹಸುವಿನ ಚಿತ್ರ ಇರುತ್ತದೆ. ಆದ್ದರಿಂದ ಎಮ್ಮೆ ಹಾಲಿನ ವಿಷಯ ಪ್ರಸ್ತಾಪಿಸಿದರೆ ''ಥೂ'' ಎಂದು ಅಸಹ್ಯಪಟ್ಟುಕೊಂಡರೆ ಆಶ್ಚರ್ಯವೇನಿಲ್ಲ.

ಡೋ ಡೋ ಎಂಬ ಹಕ್ಕಿ ಇತ್ತಂತೆ. ಕೋಳಿಗಿಂತ ದಪ್ಪಕ್ಕಿದ್ದ ಈ ಹಕ್ಕಿ ಮಡಗಾಸ್ಕರ್‌ನಲ್ಲಿ ಓಡಾಡಿಕೊಂಡಿತ್ತಂತೆ. ಆ ದ್ವೀಪಕ್ಕೆ ಕಾಲಿಟ್ಟ ಯುರೋಪಿಯನ್ನರು, ಓಡಲೂ ಬಾರದ, ಹಾರಲೂ ಆಗದ ಈ ಹಕ್ಕಿಗಳನ್ನೆಲ್ಲಾ ತಿಂದುಹಾಕಿಬಿಟ್ಟರಂತೆ. ಈಗಂತೂ ಆ ಹಕ್ಕಿ ಇಲ್ಲ. ಹೀಗೆ ಅನೇಕ ಪ್ರಾಣಿಪಕ್ಷಿಗಳು ವಿನಾಶದ ಅಂಚಿನಲ್ಲಿವೆ ಎಂದು ಪರಿಸರವಾದಿಗಳು ಆತಂಕಪಡುತ್ತಿದ್ದಾರೆ. ನಮ್ಮ ಮಾನವ ಜನಾಂಗದಲ್ಲೂ ಹೀಗೇ ಕೆಲವು ಸಂತತಿಗಳು ನಿರ್ನಾಮವಾಗುತ್ತಿವೆ. ಬಾಡಿಗೆ ಸೈಕಲ್‌ಗಳು, ಮಂಗಮ್ಮ, ಸಿಡುಕಮ್ಮಗಳನ್ನೂ ಅಲ್ಲದೆ ಶಾಹಜಹಾನ್, ಮುನಿಯಮ್ಮ ಇವರನ್ನೂ ಈ ಗುಂಪಿಗೆ ಸೇರಿಸಬಹುದು. ಬೆಂಗಳೂರಿನಲ್ಲಿ ಗುಬ್ಬಚ್ಚಿಗಳ ಜೊತೆ ಇವರುಗಳೂ ಕಾಣೆಯಾಗಿದ್ದಾರೆ. ಬೇರೆ ಊರುಗಳಲ್ಲಿಯಾದರೂ ಇವರ ಸಂತತಿ ನಶಿಸದಂತೆ ಹೇಗಾದರೂ ಉಳಿಸಬೇಕು ಎಂದು ಪರಿಸರವಾದಿಗಳಲ್ಲಿ ನನ್ನ ಕಳಕಳಿಯ ವಿನಂತಿ.


ಡಾ|| ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು-೫೬೦ ೦೦೧

"Indians have no sense of humour" ಎಂದು ಹಂಗೇರಿಯ ವ್ಯಂಗ್ಯಚಿತ್ರ ಕಾರನೊಬ್ಬ ೩೦ರ ದಶಕದಲ್ಲಿ ಅಪ್ಪಣೆ ಕೊಡಿಸಿದ ಪರಿಣಾಮ ಕನ್ನಡ ಸಾಹಿತ್ಯ ವಿನೋದ ಶೂನ್ಯವಾದುದು ಎಂಬಲ್ಲಿಗೂ ಆ ನಂಬುಗೆ ಹಬ್ಬಿ ಒಟ್ಟು ಹಾಸ್ಯ ಪ್ರಕಾರವನ್ನು ಲಘುವಾಗಿ ಪರಿಗಣಿಸಿ ಗಂಭೀರವಾಗಿ ಉಪೇಕ್ಷಿಸಲಾಗುತ್ತಿದೆ ಎಂಬ ಕೊರಗು ಅಲ್ಲಲ್ಲಿ ವ್ಯಕ್ತವಾದದ್ದಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಹಾಸ್ಯ ಪ್ರಕಾರವೂ ಗಂಭೀರವಾಗಿ 'ಪರಿಗಣನಾರ್ಹ' ಎಂದು ಪರಿಗಣಿಸಲ್ಪಡುತ್ತಿರುವುದು ಹಾಸ್ಯ ಪ್ರಕಾರವನ್ನು ನೆಚ್ಚಿ ಕೊಂಡವರಿಗೆ ತುಂಬ ಸಂತಸದ ಸಂಗತಿ. ನಮ್ಮ ಅಕಾಡೆಮಿ, ಪರಿಷತ್ತುಗಳು, ಲೇಖಕಿಯರ ಸಂಘ ಇವುಗಳೆಲ್ಲ ವಿನೋದ ಸಾಹಿತ್ಯ ಸಂಕಲನವನ್ನು ವಾರ್ಷಿಕವಾಗಿ ತರುವದು, ಸಾಹಿತ್ಯ ಸಮ್ಮೇಳನಗಳಲ್ಲಿ ವಿನೋದ, ಸಾಹಿತ್ಯಗೋಷ್ಠಿ, ಚರ್ಚೆಗಳನ್ನು ಏರ್ಪಡಿಸುವದು ಸ್ವಾಗತಾರ್ಹವಾದುದು. ಇವೆಲ್ಲದರಿಂದ ಹಾಸ್ಯ ಸಾಹಿತ್ಯ ಪ್ರಕಾರ ಇನ್ನೂ ಹೆಚ್ಚು ಶ್ರೀಮಂತವಾಗಿ ಬೆಳೆಯಲು ಕಾರಣವಾದೀತೆಂದು ಯಾರೂ ಆಶಿಸಬಹುದಾಗಿದೆ.

ಹಾಸ್ಯ ಅಥವಾ ವಿನೋದ ಮನುಷ್ಯತನಕ್ಕೆ ಹಳೆಯದಾದರೂ ಹಾಸ್ಯ ಸಾಹಿತ್ಯವೆನ್ನುವುದು ಅನಂತರದಲ್ಲಿ ರೂಪುಗೊಂಡಿದ್ದು. ಲಾವಣಿ ಒಗಟುಗಳಂಥ ಜಾನಪದ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ರೂಪ ಪಡೆದುಕೊಂಡ ಹಾಸ್ಯ ಲಿಖಿತ ಸಾಹಿತ್ಯದಲ್ಲಿ ಹಳಗನ್ನಡ, ನಡುಗನ್ನಡದ ಕಾವ್ಯ ನಾಟಕಗಳಲ್ಲಿ ಅಲ್ಲಲ್ಲಿ ವ್ಯಕ್ತವಾಗಿದ್ದು ಕಂಡುಬರುತ್ತದೆ. ಆದರೆ ಇಂಥ ಆಂಶಿಕವಾದ ವಿನೋದ ಸಾಹಿತ್ಯವನ್ನು ಪ್ರತ್ಯೇಕವಾಗಿ ನೋಡುವುದಾಗಲೀ ಅಥವಾ ಅವನ್ನೂ ಹಾಸ್ಯ ಸಾಹಿತ್ಯ ಎಂದು ಕರೆಯುವುದಾಗಲೀ ಸಮಂಜಸವಲ್ಲ. ಆದ್ದರಿಂದ ಹಾಸ್ಯ ಸಾಹಿತ್ಯದ ಮಾರ್ಗ ನಿರ್ಮಾಣದ ಮೂಲ ಹುಡುಕಲು ನಾವು ಹೊಸಗನ್ನಡವನ್ನೇ ಆಶ್ರಯಿಸಬೇಕಾಗುತ್ತದೆ.

ನಮ್ಮ ನವೋದಯದ ಪ್ರಮುಖ ಸಾಹಿತಿಗಳೆಲ್ಲರೂ ದ. ರಾ. ಬೇಂದ್ರೆ, ಕುವೆಂಪು, ಪು. ತಿ. ನ., ಗೋಕಾಕ, ಕಾರಂತ, ಕಸ್ತೂರಿ, ಗೊರೂರು, ವಿ. ಸಿ., ರಾಶಿ, ಪಾ. ವೆಂ., ತೀ. ನಂ. ಶ್ರೀ., ರಾಜರತ್ನಂ ಹೀಗೆ ಯಾರನ್ನೇ ತೆಗೆದುಕೊಂಡರೂ ಒಂದಿಷ್ಟು ಲಲಿತ ಪ್ರಬಂಧ ಹರಟೆಗಳನ್ನು ರಚಿಸಿದ್ದಾರೆ. ಆ ಪ್ರಕಾರಕ್ಕೆ ಜನಪ್ರಿಯತೆಯನ್ನು ತಂದು ಕೊಟ್ಟಿದ್ದಾರೆ. ಇವರೆಲ್ಲ ಕಾವ್ಯ, ನಾಟಕ, ಕಾದಂಬರಿ ಕ್ಷೇತ್ರಗಳಲ್ಲಿ ಪರಿಣತರಾದುದರಿಂದ ಇವರ ಕೈಯಲ್ಲಿ ಹಾಸ್ಯ ಮಣಿಯುವ ಸೊಗಸನ್ನು ಓದುವುದೇ ಒಂದೊಳ್ಳೆ ಅನುಭವ. ಇವರಲ್ಲಿ ಕೆಲವರು ಮಾತ್ರ ನಾ. ಕಸ್ತೂರಿ, ಗೊರೂರು, ರಾಶಿ, ಲಾಂಗೂಲಾಚಾರ್ಯ, ಮೂರ್ತಿರಾಯರು, ನಾಡಿಗೇರರು ಹಾಗೂ ಇತರ ಕೆಲವರು ಹಾಸ್ಯ ಸಾಹಿತ್ಯಕ್ಕೇ ಬದ್ಧರಾಗಿ ಹಾಸ್ಯಕ್ಕೆ ಮೊದಲ ಮಣೆ ಹಾಕಿದವರು.

**ಅಣಕವಾಡು :** ಈ ತಲೆಮಾರಿನವರ ಹಾಸ್ಯ ಕೃತಿಗಳ ಒಂದು ವೈಶಿಷ್ಟ್ಯವೆಂದರೆ ಒಂದು ಕೃತಿಯಲ್ಲಿ ಅರ್ಧದಷ್ಟು ಹರಟೆ ಅಥವಾ ಕತೆ ಅನಂತರ ಒಂದಿಷ್ಟು ಅಣಕವಾಡುಗಳು. (ಉದಾ : ನಿರಾಭರಣ ಸುಂದರಿ – ದ. ರಾ. ಬೇಂದ್ರೆ, ಪುರುಷ ಸರಸ್ವತಿ – ರಾಜರತ್ನಂ, ಬುಳ್ಳನ ಬುರುಡೆಗಳು – ವಿ. ಕೆ. ಶ್ರೀನಿವಾಸನ್, ಕೆಣಕೋಣ ಬಾರಾ – ರಾ. ಶಿ.). ಅಣಕು ದಾಂಡಿಗರು ಎಂದು ಕರೆಯಲ್ಪಟ್ಟ ನಾ. ಕಸ್ತೂರಿ, ರಾಶಿ, ರಾಜರತ್ನಂ ಮೊದಲಾದವರು ಪ್ರಸಿದ್ಧ ಕವಿಗಳ ಪ್ರಸಿದ್ಧ ಕವನಗಳನ್ನು ಅಣಕವಾಡುಗಳನ್ನಾಗಿ ಪ್ರಕಟಿಸಿದ್ದಾರೆ. ಇಂಗ್ಲಿಷಿನ Parody ಪ್ರಕಾರದಿಂದ ಪ್ರೇರಿತವಾದ ಈ ಅಣಕವಾಡುಗಳಲ್ಲಿ ಕೆಲವಂತೂ ಮೂಲ ಕವನಗಳಿಗಿಂತ ಹೆಚ್ಚು ಜನಪ್ರಿಯವಾಗಿದ್ದವು. ಬೇಂದ್ರೆಯಂಥ ಕವಿಗಳು ತಮ್ಮ ಹಾಡನ್ನೇ ತಾವು ಅಣಕವಾಡಿದ್ದು ಈ ಪ್ರಕಾರಕ್ಕೆ ಸಂದಿದ್ದ ಸಮ್ಮತಿಗೆ ಸಾಕ್ಷಿಯಾಗಿದೆ (ಬೆಕ್ಕು ಹಾರುತಿದೆ ನೋಡಿದಿರಾ ?). ಹಾಗೇ ಕುಣಿಯೋಣ

# ಕನ್ನಡ ಹಾಸ್ಯ ಸಾಹಿತ್ಯ ನಡೆದುಬಂದ ದಾರಿ

> **ಲಾವಣಿ ಒಗಟುಗಳಂಥ ಜಾನಪದ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ರೂಪ ಪಡೆದುಕೊಂಡ ಹಾಸ್ಯ ಲಿಖಿತ ಸಾಹಿತ್ಯದಲ್ಲಿ ಹಳಗನ್ನಡ, ನಡುಗನ್ನಡದ ಕಾವ್ಯ ನಾಟಕಗಳಲ್ಲಿ ಅಲ್ಲಲ್ಲಿ ವ್ಯಕ್ತವಾಗಿದ್ದು ಕಂಡುಬರುತ್ತದೆ. ಆದರೆ ಇಂಥ ಆಂಶಿಕವಾದ ವಿನೋದ ಸಾಹಿತ್ಯವನ್ನು ಪ್ರತ್ಯೇಕವಾಗಿ ನೋಡುವುದಾಗಲೀ ಅಥವಾ ಅವನ್ನೂ ಹಾಸ್ಯ ಸಾಹಿತ್ಯ ಎಂದು ಕರೆಯುವುದಾಗಲೀ ಸಮಂಜಸವಲ್ಲ.**

**ಭುವನೇಶ್ವರಿ ಹೆಗಡೆ**

ಕಳೆದ ಶತಮಾನದ ಉಳಿದೆಲ್ಲ ಸಾಹಿತ್ಯ ಪ್ರಕಾರಗಳ ಹಾಗೆ ವಿನೋದ ಸಾಹಿತ್ಯ ಪ್ರಕಾರವೂ ಇಂಗ್ಲಿಷಿನಿಂದ ಪ್ರೇರಣೆ ಪುಷ್ಟಿ ಪಡೆದುಕೊಂಡು ತನ್ನ ವಿಸ್ತಾರದ ಹರಹನ್ನೂ, ವೈವಿಧ್ಯವನ್ನೂ ಹೆಚ್ಚಿಸಿಕೊಂಡಿತು.

ಹೊಸಗನ್ನಡದ ಮುಂಗೋಳಿ ಎಂದು ಕರೆಸಿಕೊಂಡ ಮುದ್ದಣ ತನ್ನ ಕೃತಿ ರಾಮಾಶ್ವಮೇಧದಲ್ಲಿ ತನ್ನ ಮನೋರಮೆಯೊಂದಿಗೆ ನಡೆಸುವ ಸರಸ ಸಲ್ಲಾಪ ಕನ್ನಡದ ವಿಡಂಬನ ಸಾಹಿತ್ಯದ ನಾಂದಿ ಹಾಡಿತೆನ್ನುತ್ತಾರೆ. ಬಡತನ, ಹಸಿವಿನಂಥ ಕ್ರೂರ ವ್ಯಂಗ್ಯಗಳ 'ಸಂತಾಪವನ್ನು ಸಲ್ಲಾಪವಾಗಿಸಿದ' ಕವಿ ಮುದ್ದಣ ಮೇಲ್ತರಗತಿಯ ಹಾಸ್ಯದ ಒಂದು ಮಾದರಿಯನ್ನು (ಭವತೀ ಭಿಕ್ಷಾಂ ದೇಹಿ... ಸಪ್ತಾಕ್ಷರೀ ಮಂತ್ರ.) ರಚಿಸಿಟ್ಟು ಹೋಗಿದ್ದಾನೆ. ಮನೋರಮೆಯು ''ಪೋ ಮಾಣತಿ ರಮಣ! ನೀಂ ಕಬ್ಬಿಗನೋ ಸಬ್ಬವಕಾರನೋ?'' ಎನ್ನುತ್ತಾಳೆ. ಹೀಗೆ ಕನ್ನಡದ ಮೊದಲ ಸಬ್ಬವಕಾರ ಮೂಡಿಬಂದುದು ಮುದ್ದಣನ ಕಾವ್ಯದಲ್ಲಿ.

**ನಗೆಗಡಲು (೧೯೧೦) :** ಹೊಸಗನ್ನಡ ಗದ್ಯದ ಮೊದಲ ಹಾಸ್ಯ ಕೃತಿ ಎಂದು ಪರಿಗಣಿಸಲ್ಪಟ್ಟಿರುವ ಈ ಪುಸ್ತಕವನ್ನು ಬರೆದವರು ಪ್ರಾಕ್ತನ ವಿಮರ್ಶಾ ವಿಚಕ್ಷಣ ರಾವಬಹದ್ದೂರ್ ರಾ. ನರಸಿಂಹಾಚಾರ್ಯರು. ಇದು 'ಗಾಂಪರೊಡೆಯ'ರೆಂಬ ಅದ್ವಿತೀಯ ಮಡೆಯ ಮಡ್ಡಿಗಳನ್ನು ಪರಿಚಯಿಸಿ ಕನ್ನಡಿಗರಿಗೆ ಗಹಗಹಿಸಿ ನಗಲು ಕಲಿಸಿದ ಕೃತಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

೧೯೦೦-೧೯೩೦ ಹೊಸಗನ್ನಡ ಸಾಹಿತ್ಯ ಹರಳುಗಟ್ಟುತ್ತಿರುವ ಕಾಲ. ಈ ಅವಧಿಯಲ್ಲೇ ಕನ್ನಡದ ಮೊದಲ ಕತೆ ಪಂಜೆ ಮಂಗೇಶರಾಯರ 'ನನ್ನ ಚಿಕ್ಕ ತಾಯಿ' ಬಂದಿತೆಂದು ಹೇಳುತ್ತಾರೆ. ಆದರೆ ಈ ಕತೆಯಲ್ಲಿ ವಿನೋದವೇ ಪ್ರಧಾನ ಗುಣವಾಗಿದೆಯಾದ್ದರಿಂದ ದಕ್ಷಿಣ ಕನ್ನಡದಲ್ಲಿ ಹಾಸ್ಯ ಬರವಣಿಗೆಗೆ ಆದ್ಯ ಪ್ರವರ್ತಕರು ಪಂಜೆಯವರೇ ಆಗಿದ್ದಾರೆ. ಹರಟೆಮಲ್ಲ ಎನ್ನುವ ಕಾವ್ಯನಾಮದಲ್ಲಿ ಅನೇಕ ಹರಟೆಗಳನ್ನು ಅವರು ಬರೆದಿದ್ದಾರೆ.

ಬಾರಾ ಅಂತ ಬೇಂದ್ರೆ ಬರೆದರೆ, ಕೆಣಕೋಣ ಬಾರ ಅಂತ ರಾಶಿ ಬರೆದಾಯ್ತು. ಕಾರಂತರು ಅರ್ಥಕೋಶ ರಚಿಸಿದರೆ ನಾ. ಕಸ್ತೂರಿ ಅನರ್ಥಕೋಶ ರಚಿಸಿದರು. ಮರಣಮಂಡಲ ಮಧ್ಯದೊಳಗೆ 'ಬೇಸಿಗೆ ಬಂತು ಬೇಸಿಗೆ ತಂತು ಹೇಸಿಗೆ' ಹೀಗೆ ಬೇಕಷ್ಟು ಅಣಕವಾಡುಗಳು ರಚಿತವಾಗಿವೆ. ಸ್ವಂತ ಹಾಡುಗಳನ್ನು ಅಣಕವಾಡಾಗಿಸುವ ಪದ್ಧತಿ ಮಾತ್ರ ಬೇಂದ್ರೆ ನಂತರ ಮುಂದುವರಿದಂತಿಲ್ಲ.

ಈ ತಲೆಮಾರಿನ ಹಾಸ್ಯ ಲೇಖಕರ ಇನ್ನೊಂದು ವೈಶಿಷ್ಟ್ಯ ಅವರುಗಳ ನಾಮ ನಿರ್ಮೋಹಿತ್ವ. ಪಾತಾಳಿ ದಿಬ್ಬಯ್ಯ ರುದ್ರಯ್ಯ ಇಂಥ ವಿನೋದ ಸೂಸುವ ಕಾವ್ಯನಾಮದಲ್ಲೇ ಬರೆದು ಕೊನೆಗೂ ತಮ್ಮ ನಿಜ ನಾಮಧೇಯ ಪ್ರಕಟಿಸದೇ ಇರುವ ಎಷ್ಟೋ ಲೇಖಕರ ಕುರಿತು ಸಂಶೋಧನೆಗೆ ಅವಕಾಶವಿದೆ. ೧೯೪೯ರಲ್ಲಿ ಪ್ರಕಟವಾದ 'ಬುಳ್ಳನ ಮಹಾಬುರುಡೆಗಳು' ಕೃತಿ ಇದಕ್ಕೊಂದು ಉದಾಹರಣೆ. ಈ ಪುಸ್ತಕದಲ್ಲಿ Author's name ಇದ್ದಲ್ಲಿ ಬಡಾಯಿ ಬುಳ್ಳ ಅಂತ ಮಾತ್ರ ಇದೆ. ಹಿಂದಿನ ಪೇಜಿನಲ್ಲಿ ಯೆಂಡ್ಕುಡುಕನಿಗೆ ಕಳ್ಳುಡುಕನ ಕಾಣ್ಕೆ ಎಂದಿದೆ. ಪರಿವಿಡಿಯಲ್ಲಿ ಬುರುಡೆಗವನಗಳು ಹಾಗೂ ಪೊಳ್ಳು ಹರಟೆ ಎಂಬೆರಡು ಭಾಗ. ನಮ್ಮ ಈಗಿನ 'ಮುನ್ನುಡಿ'ಗೆ ವ್ಯತಿರಿಕ್ತವಾಗಿ ಆ ಪುಸ್ತಕದ 'ಮುಂಬುರುಡೆ' ಹೀಗಿದೆ.

| | | |
|---|---|---|
| ವ್ಯಕ್ತಿ ಪರಿಚಯ | : | ಬೇಕಿಲ್ಲ |
| ಜೀವಿತ ಕಾಲ | : | ಹಾಲಿ ಈಗ ಇದ್ದಾನೆ. |
| ಸ್ಥಳ ಗುಣ | : | ಮೈಸೂರು ದೇಶದವನು... ಎಂದು ಅವನಿಗೆ ಸ್ವಲ್ಪ ಅಹಂಕಾರ. |
| ಅಂತಸ್ತು | : | ಹೊಟ್ಟೆಗೆ ಬಟ್ಟೆಗೆ ದೇವರು ಸ್ವಲ್ಪ ಅನುಕೂಲವಾಗಿಟ್ಟಿದ್ದಾನೆ. |
| ಫಲ | : | ಆದ್ದರಿಂದ ಅವನು ಶುದ್ಧ ಸೋಮಾರಿ ಎಂದು ಜನರಲ್ಲಿ ಒಂದು ನಂಬಿಕೆ. |
| ಪ್ರತಿಫಲ | : | ಈ ನಂಬಿಕೆಯನ್ನು ಹೋಗಲಾಡಿಸಲು ಅವನು ಏನೇನೋ ಪ್ರಯತ್ನಪಟ್ಟು ಸಫಲವಾಗದೇ ಕೊನೆಗೆ ಸೋಮಾರಿಯಾಗಿಯೇ ಇದ್ದು |

ಜಿಡ್ಡೋಣವೆಂದು ನಿಶ್ಚಯಿಸಿದ್ದಾನೆ. ಈ ಕಾಲದಲ್ಲಿ ಹೀಗಿರುವುದೇ ಪರಮೋತ್ಕೃಷ್ಟವೆಂದು ಆತನ ಅಭಿಮತ.

ಹೀಗೆ ವಿನೋದವಾಡುತ್ತ ಕೊನೆಯಲ್ಲಿ ಇತಿ 'ಅಹಂ' ಎಂದು ಮುಗಿಯುತ್ತದೆ. ತಮ್ಮನ್ನು ತಾವು ಲೇವಡಿ ಮಾಡಿಕೊಳ್ಳುವ ಧಾರ್ಷ್ಟ್ಯದ ಹಾಸ್ಯದ ಮಾದರಿ ಇಲ್ಲಿದೆ.

ಕನ್ನಡ ಹಾಸ್ಯ ಸಾಹಿತ್ಯದ ರಾಜ ಮಾರ್ಗದ ನಿರ್ಮಾಣ ಮಾಡಿದ ಮಹಾನ್ ಚೇತನಗಳನ್ನು ಪ್ರಬಂಧದ ಅನುಕೂಲಕ್ಕಾಗಿ ನಾಲ್ಕು ಪ್ರಾಂತ್ಯಗಳಲ್ಲಿ ಸ್ಥೂಲವಾಗಿ ವಿಂಗಡಿಸಿಕೊಳ್ಳಬಹುದು.

ಒಂದು : ಮಂಗಳೂರು ಕೇಂದ್ರವಾಗಿಯುಳ್ಳ ಕರಾವಳಿಯ ಹಾಸ್ಯ ಲೇಖಕರ ದಂಡು.

ಎರಡು : ಬೆಂಗಳೂರು ಹಳೆ ಮೈಸೂರು ಪ್ರಾಂತ್ಯದ ಕೊರವಂಜಿ ಗರಡಿಯಲ್ಲಿ ಮೂಡಿದ ರಾಶಿ ನಗೆ ಸೈನ್ಯ.

ಮೂರು: ಉತ್ತರ ಕನ್ನಡವೂ ಸೇರಿದಂತೆ ಉತ್ತರ ಕರ್ನಾಟಕದ ಹಾಸ್ಯ ಲೇಖಕರ ಗುಂಪು.

ನಾಲ್ಕು : ಹೈದರಾಬಾದ್ ಕರ್ನಾಟಕದ ಕೊಡುಗೆ.

ದಕ್ಷಿಣ ಕನ್ನಡದಲ್ಲಿ ೧೯೩೦ರಷ್ಟೊತ್ತಿಗೆ ಪಂಜೆಯವರಿಂದ ಆರಂಭವಾದ ವಿನೋದ ಸಾಹಿತ್ಯದ ಬರವಣಿಗೆ ಎಂ. ಎನ್. ಕಾಮತ್, ಉಳ್ಳಾಲ ಮಂಗೇಶರಾವ್, ಪೇಜಾವರ ಸದಾಶಿವರಾವ್, ಕಡಂಗೋಡ್ಲು ಶಂಕರಭಟ್, ಹುರುಳಿ ಭೀಮರಾವ್, ಪಡುಕೋಣೆ ರಮಾನಂದರಾವ್, ಕುಡ್ವಿ ವಾಸುದೇವ ಶೆಣೈ, ಜೆ. ವಾಮನ ಭಟ್ಟ, ರಮಾನಂದ ಘಾಟೆ ಮೊದಲಾದವರ ಲೇಖನಿಯಿಂದ ಅಷ್ಟೇ ತ್ವರಿತವಾಗಿ ಬೆಳೆಯಿತು. ಆಗಿನ ಕರಾವಳಿ ಕನ್ನಡ ಪತ್ರಿಕೆಗಳಾದ ಸುವಾಸಿನಿ, ಕಂಠೀರವ, ಉದಯ ಭಾರತ, ಸ್ವದೇಶಾಭಿಮಾನಿ ಮುಂತಾದವು ಹಾಸ್ಯ ಬರಹಗಳಿಗೆ ಪ್ರತ್ಯೇಕವಾದ ಸ್ಥಾನವನ್ನೇ ಮೀಸಲಿಟ್ಟು ಬೆಳೆಸಿದವು. ಹೀಗೆ ಪ್ರಕಟಗೊಂಡ ಹಾಸ್ಯ ಬರಹಗಳನ್ನು ಸಂಗ್ರಹಿಸಿ ಮಂಗಳೂರಿನ ಮಿತ್ರ ಮಂಡಳಿಯವರು ೧೯೩೩ರಲ್ಲಿ ವಿನೋದ ಚಿತ್ರಗಳು ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಬಹುಶಃ ದಕ್ಷಿಣ ಕನ್ನಡ ಜಿಲ್ಲೆಯ ಹಾಸ್ಯ ಸಾಹಿತ್ಯವನ್ನು ದಾಖಲಿಸುವಲ್ಲಿ ಇದೇ ಮೊದಲ ಕೃತಿಯೆಂದು ಕಾಣುತ್ತದೆ. ಹಾಸ್ಯದ ಗದ್ಯ ಬರಹಗಳೆಲ್ಲ 'ವಿನೋದ ಕತೆ'ಗಳೆಂದೇ ಕರೆಯಲ್ಪಡುತ್ತಿದ್ದ ಆ ಕಾಲದಲ್ಲಿ ಕತೆ, ಹರಟೆ, ವಿನೋದ, ಪ್ರಬಂಧಗಳೆಂದೆಲ್ಲ ಪ್ರತ್ಯೇಕವಾಗಿ ಚೌಕಟ್ಟು ನಿರ್ಮಾಣವಾಗಿರಲಿಲ್ಲವೆನಿಸುತ್ತದೆ.

ಕರಾವಳಿಯ ಎಲ್ಲ ಹಾಸ್ಯ ಲೇಖಕರಲ್ಲಿ ಅಂದಿನ ಬ್ರಿಟಿಷ್ ದೊರೆಗಳ ವೇಷ ಭೂಷಣಗಳ ಲೇವಡಿ, ಪರಂಗಿಯವರನ್ನು ಓಲೈಸುತ್ತಿದ್ದ ದೇಶೀಯರ ವಿಡಂಬನೆ, ಜಮೀನ್ದಾರಿ ಪದ್ಧತಿ, ಅಧಿಕಾರಶಾಹಿಯ ಟೀಕೆ, ಸಾಮಾಜಿಕ ಮೌಢ್ಯ ಇವೇ ವಿನೋದಕ್ಕೆ ಮುಖ್ಯ ಸಾಮಗ್ರಿಗಳಾಗಿದ್ದವು. ಪಂಜೆ ಮಂಗೇಶರಾಯರ 'ಸಬ್ ಅಸಿಸ್ಟಾಂಟನ ಸುಳ್ಳು ಡೈರಿಯಿಂದ' ಒಂದು ಅಧಿಕಾರಶಾಹಿಯನ್ನು ವಿಡಂಬಿಸುವ ಉತ್ಕೃಷ್ಟ ಹಾಸ್ಯ ಬರಹ.

ತಮ್ಮ ಒಂದೇ ಕೃತಿ 'ಹುಚ್ಚು ಬೆಳದಿಂಗಳಿನ ಹೂಬಾಣ'ದ ಮೂಲಕ ವಿಮರ್ಶಕರ ಮೆಚ್ಚುಗೆಗೆ ಪಾತ್ರವಾದ ಪಡುಕೋಣೆ ರಮಾನಂದರಾಯರು ತಮ್ಮ ಉತ್ಪ್ರೇಕ್ಷೆಯ ಶೈಲಿಯಿಂದ ಬರೆದ ನನ್ನ ಭಾವ, ಅಂಕುಡೊಂಕು ಸಂಕಪಾಲದಂತಹ ನಗೆಬರಹಗಳು ೧೯೨೦-೩೦ರ ನಡುವೆ ಕನ್ನಡ ಹಾಸ್ಯ ಸಾಹಿತ್ಯದಲ್ಲಿ ಒಂದು ಹೊಸ ಅಲೆಯನ್ನು ಹುಟ್ಟಿಸಿದವು.



''ಕನ್ನಡದ ಸಬ್ಯವಕಾರ ಇನ್ನೂ ಕೀಳರಿಮೆಯಿಂದ ತಲೆತಗ್ಗಿಸಿ ಓಡಾಡಿಕೊಂಡಿದ್ದಾಗ ಹೊರಬಂದ ಪಡುಕೋಣೆ ರಮಾನಂದರ 'ಹುಚ್ಚು ಬೆಳದಿಂಗಳಿನ ಹೂಬಾಣ' (೧೯೩೮) ತನ್ನ ವಿನೂತನ ಶೈಲಿ, ಆಹ್ಲಾದಕರ ಅಂತಃಸತ್ವಗಳಿಂದಾಗಿ ಓದುಗರ, ವಿಮರ್ಶಕರ ಅಭಿಪ್ರಾಯವನ್ನು ಬದಲಾಯಿಸಿ ಕನ್ನಡದಲ್ಲಿ ಹಾಸ್ಯ ಸಾಹಿತ್ಯಕ್ಕೆ ವಿಶೇಷ ಮನ್ನಣೆ ದೊರಕಿಸಿಕೊಟ್ಟ ಕೃತಿಯೆಂದು ಹೆಸರಾಯ್ತು.''

**ಕೊರವಂಜಿಯೆಂಬ ವಿನೋದ ವಿಶ್ವವಿದ್ಯಾಲಯ**

೧೯೪೨ರಲ್ಲಿ ಇಂಗ್ಲಿಷ್ ಪಂಚ್ ಪತ್ರಿಕೆಯಿಂದ ಪ್ರೇರಿತರಾದ ಡಾ|| ಶಿವರಾಂ ಅವರು ನಾ ಕಸ್ತೂರಿ ಜೊತೆ ಸೇರಿ ಬೆಂಗಳೂರಿನಿಂದ ಹೊರತಂದ 'ಕೊರವಂಜಿ' ಹಾಸ್ಯ ಪತ್ರಿಕೆ ನಗೆ ಲೇಖಕರ ಒಂದು ದೊಡ್ಡ ಪಡೆಯನ್ನೇ ಹುಟ್ಟು ಹಾಕಿ 'ವಿನೋದ ವಿಶ್ವವಿದ್ಯಾಲಯ'ವೆಂದು ಕರೆಸಿಕೊಳ್ಳುವಷ್ಟರಮಟ್ಟಿಗೆ ಕನ್ನಡ ಹಾಸ್ಯ ಸಾಹಿತ್ಯದ ಕಣಜವನ್ನು ವೈವಿಧ್ಯಮಯ ಹಾಸ್ಯ ಬರಹಗಳಿಂದ ತುಂಬಿತು.

ನಾ. ಕಸ್ತೂರಿ, ದಾಶರಥಿ ದೀಕ್ಷಿತ್, ಅ.ರಾ.ಸೆ., ಕೇಫ, ಸುನಂದಮ್ಮ, ನಾಡಿಗೇರ, ಶ್ರೀರಂಗ, - ಗೊರೂರು, ಲಕ್ಷ್ಮಣ್ ಒಬ್ಬರಲ್ಲ ಇಬ್ಬರಲ್ಲ ನಗೆ ಲೇಖಕರ ಒಂದು ದಂಡೇ ನಿರ್ಮಾಣವಾಗಿತ್ತು. ೧೯೪೨ರ ಯುದ್ಧಕಾಲ ದಿಂದ ಆರಂಭಿಸಿ ಕೊರವಂಜಿ ಕನ್ನಡ ನಾಡಿಗೆ ವಿದಾಯ ಹೇಳಿ ಕಾಡಿಗೆ ಹೋಗುವ ತನಕವೂ ಅತ್ಯುತ್ಕೃಷ್ಟವಾದ ಹಾಸ್ಯದ ಫಸಲನ್ನು ನೀಡಿದ ಹೆಗ್ಗಳಿಕೆ ರಾಶಿ ಪುತ್ರಿ ಕೊರವಂಜೀದು. ಈ ಗರಡಿಯಲ್ಲಿ ಪಳಗಿದ ಅ.ರಾ.ಸೆ. ಯಂಥ ಹಾಸ್ಯ ಲೇಖಕರು ಕೊರವಂಜಿಯ ಮಗಳು 'ಅಪರಂಜಿ' ಪತ್ರಿಕೆಯಲ್ಲಿ ಈಗಲೂ ಬರೆಯುತ್ತಿದ್ದಾರೆ. ಕೊರವಂಜಿ ಗರಡಿಯಲ್ಲಿ ತರಬೇತಾದ ಹಾಸ್ಯದ ಪೈಲ್ವಾನರ 'ನಗೆ ವರಸೆ'ಗಳಾದ ಅಣಕವಾಡು, ಕುಹಕಿಡಿ, ಉರಿಗಾಳು ಕೊರವಾವಲೋಕನ, ವ್ಯಂಗ್ಯ ಚಿತ್ರ, ಇವೆಲ್ಲವುಗಳ ಕರ್ತೃಗಳನ್ನು ಪ್ರತ್ಯೇಕವಾಗಿ ಸಮೀಕ್ಷಿಸುವ ಅಗತ್ಯವಿದೆ.

೧೮೮೪-೧೯೪೬ರವರೆಗೆ ಕೈಲಾಸಂ ಸೃಷ್ಟಿಸಿದ ಹಾಸ್ಯಲೋಕ, ಬೀಚಿಯವರ ತಿಮ್ಮನ ವಿಡಂಬನಾ ಪ್ರಪಂಚ, ರಾಜರತ್ನಂರ ರತ್ನನ ಪದಗಳು, ಗೊರೂರರ ಗ್ರಾಮೀಣ ವಿನೋದ ಚಿತ್ರಗಳು, ಬಿ. ಜಿ. ಎಲ್. ಸ್ವಾಮಿ ಅವರ ಮೀನಾಕ್ಷಿ ಸೌಗಂಧ ಎಂಬ ಅಣುಕು ಲಾವಣಿ (೧೯೪೭) ಹಾಗೂ ಆಮೇಲಿನ ಕಾಲೇಜು ರಂಗದಿಂದ ಹಿಡಿದು ಹಸಿರು ಹೊನ್ನು ತನಕದ ಅನೇಕ ಕೃತಿಗಳು, ಎ. ಎನ್. ಮೂರ್ತಿರಾಯರ ಲಲಿತ ಪ್ರಬಂಧಗಳು, ನಾಡಿಗೇರರ ಕಚಗುಳಿ, ರಾಶಿ ಅವರ ಮೃದು ಮಾನವೀಯ ಹಾಸ್ಯ.... ಎಲ್ಲ ಹೆಸರುಗಳನ್ನೂ ಬಿಡದೇ ನೆನಪಿಸಿಕೊಳ್ಳುವದು ಕಷ್ಟಸಾಧ್ಯ... ಒಟ್ಟಾರೆ ಈ ಕಾಲದಲ್ಲಿ ಬೆಂಗಳೂರು, ಮೈಸೂರು ಪ್ರದೇಶದ ಈ ಎಲ್ಲ ಹಾಸ್ಯ ಲೇಖಕರಿಂದ ಕನ್ನಡಿಗರು ಹೆಮ್ಮೆ ಪಡಬಹುದಾದ ಹಾಸ್ಯ ಸಾಹಿತ್ಯ ನಿರ್ಮಾಣವಾಗಿದೆ. ಹೆಸರಿಸಬೇಕಾದ ಇನ್ನೂ ಎಷ್ಟೋ ಬರಹಗಾರರು ಈ ಕಾಲದಲ್ಲಿ ಆಗಿ ಹೋಗಿದ್ದಾರೆ.

ಈ ದಿಕ್ಕಿನಲ್ಲಿ ರಾಜಾರಾಂ ಮತ್ತು ಝೂರಂಥ ಮೇಧಾವಿಗಳು ತಮ್ಮ ಎಲ್ಲ ತಂತ್ರ ಕುತಂತ್ರಗಳ ಕುಶಲತೆಯಿಂದ ಶ್ರಮಿಸುತ್ತಿರುವುದನ್ನು ಇಂದು ನಾವು ನೋಡುತ್ತಿದ್ದೇವೆ.

ಈಗ ಗೋಹತ್ಯಾ ನಿಷೇಧವನ್ನು ಜಾರಿಗೆ ತರಬೇಕೆಂದು ಒಂದು ಚಳವಳಿ ಪ್ರಾರಂಭವಾಗಿದೆ. ಪ್ರಾಣಿ ದಯಾ ದೃಷ್ಟಿಯಿಂದ ಯಾವುದೇ ಪ್ರಾಣಿಯನ್ನು ಹಿಂಸಿಸಿ ಕೊಲ್ಲುವುದು ಅಮಾನವೀಯ ಎಂಬುದು ನಿಜ. ಕಸಾಯಿಖಾನೆಗಳಲ್ಲಿ ಪ್ರಾಣಿಗಳನ್ನು ಕ್ರೂರವಾದ ರೀತಿಯಲ್ಲಿ ಕೊಲ್ಲುವುದನ್ನು ತಪ್ಪಿಸಲು ಕಳೆದ ಎಂಬತ್ತರ ದಶಕದಲ್ಲಿ ಸರ್ಕಾರ ಒಂದು ಯೋಜನೆಯನ್ನು ರೂಪಿಸಿತ್ತು. ಬೆಂಗಳೂರಿನ ಸಮೀಪದ ಕಾಚರಕನಹಳ್ಳಿಯ ಸಮೀಪ ಒಂದು ಆಧುನಿಕ ಕಸಾಯಿಖಾನೆಯನ್ನು ಸ್ಥಾಪಿಸಿ ಅಲ್ಲಿ ಪ್ರಾಣಿಗಳನ್ನು ಕೊಲ್ಲುವ ಮೊದಲು ಅವುಗಳನ್ನು stunning ಮೂಲಕ ಅರಿವಳಿಕೆಗೆ ಒಳಪಡಿಸುವ ಆ ಯೋಜನೆಗೆ ಕೆಲವು ಮಠಾಧೀಶರೇ ವಿರೋಧವನ್ನು ವ್ಯಕ್ತಪಡಿಸಿದರು. ಗೋಹತ್ಯಾ ನಿಷೇಧ ಆ ವೇಳೆಗೆ ಆಗಲೇ ಕರ್ನಾಟಕದಲ್ಲಿ ಜಾರಿಯಲ್ಲಿತ್ತು. ೧೨ ವರ್ಷ ಮೀರಿದ ಎತ್ತು, ಎಮ್ಮೆ ಕೋಣ ಮತ್ತು ಇತರ ಚಿಕ್ಕ ಪ್ರಾಣಿಗಳನ್ನು ಕೊಲ್ಲುವ ಮೊದಲು ಅವುಗಳಿಗೆ ಹಿಂಸೆಯ ಅರಿವಾಗದಂತೆ ಎಚ್ಚರವಹಿಸಲು ಕಸಾಯಿಖಾನೆಗಳ ಆಧುನಿಕೀಕರಣ ಯೋಜನೆ ಅದಾಗಿತ್ತು.

ಭಾರತೀಯ ಆಡಳಿತ ಸಂಸ್ಥೆಯ ಮಾಜಿ ನಿರ್ದೇಶಕರಾದ ಎನ್. ಎಸ್. ರಾಮಸ್ವಾಮಿ ಅವರು ಆ ಯೋಜನೆಯ ಧ್ಯೇಯೋದ್ದೇಶಗಳನ್ನು ಸ್ಪಷ್ಟಪಡಿಸಿ ವಿವರಿಸಿದರಾದರೂ ಮಠಾಧಿಪತಿಗಳ ವಿರೋಧ ನಿಲ್ಲಲಿಲ್ಲ. ಭಾರತದಲ್ಲಿ ಶೇ. ೬೦ಕ್ಕಿಂತ ಹೆಚ್ಚು ಜನ ಆಗೊಮ್ಮೆ ಈಗೊಮ್ಮೆಯಾದರೂ ಮಾಂಸಾಹಾರ ಸೇವಿಸುತ್ತಾರೆ. ಅವರನ್ನು ಪೂರ್ಣ ಸಸ್ಯಾಹಾರಿಗಳನ್ನಾಗಿ ಪರಿವರ್ತಿಸುವುದು ಸಾಧ್ಯವಿಲ್ಲ. ಇನ್ನೊಂದು ಕಡೆ ಅನುತ್ಪಾದಕವಾದ ಪ್ರಾಣಿಗಳನ್ನು ಸಾಕಲು ಒಂದು ಪ್ರಾಣಿಗೆ ದಿನವೊಂದಕ್ಕೆ ರೂ. ೩೦-೪೦ರಂತೆ ಅಪಾರ ಹಣ ವೆಚ್ಚ ಮಾಡಬೇಕಾಗುತ್ತದೆ. ಇದು ಬಡ ರೈತರು, ಪಶು ಪಾಲಕರಿಗೆ ಸಾಧ್ಯವಾಗದ ಮಾತು ಎಂಬುದನ್ನು ಅಂಕಿ ಅಂಶಗಳ ಆಧಾರದಿಂದ ಎನ್. ಎಸ್. ರಾಮಸ್ವಾಮಿ ಸ್ಪಷ್ಟಪಡಿಸಿದ್ದರು.

ಕೊನೆಗೆ ಆ ಯೋಜನೆ ನಿಂತುಹೋಯಿತು. ಇಂದಿಗೂ ಶೇ. ೬೦ಕ್ಕಿಂತ ಹೆಚ್ಚು ಭಾರತೀಯರು ಕೊಳಚೆ ಕೊಚ್ಚೆಗಳಲ್ಲಿ ಸಿದ್ಧಪಡಿಸಿದ ಅಶುಚಿಯ ಮಾಂಸವನ್ನೇ ಸೇವಿಸುತ್ತಿದ್ದಾರೆ. ಸಾಯುವ ಮುನ್ನ ಪ್ರಾಣಿಗಳಿಗೆ ಆಗುವ ಹಿಂಸೆಯೂ ಕಡಿಮೆ ಯಾಗಿಲ್ಲ. ಕಸಾಯಿಖಾನೆಗಳ ನಿರ್ವಹಣೆಯಲ್ಲಿ ಮಠಾಧೀಶರು ಮೂಗು ತೂರಿಸಿದುದೇ ಇದಕ್ಕೆ ಕಾರಣ ಎಂಬುದು ಒಂದು ಐತಿಹಾಸಿಕ ದಾಖಲೆ.

ಕಸಾಯಿಖಾನೆಗಳ ಆಧುನಿಕತೆಯನ್ನು ವಿರೋಧಿಸಿದವರಲ್ಲಿ ಹಿಂದು ಸ್ವಾಮಿಗಳ ಜೊತೆಗೆ ಮುಸ್ಲಿಂ ಮುಲ್ಲಾಗಳೂ ಸೇರಿದ್ದರು. ಯಾಂತ್ರೀಕೃತ ಹತ್ಯೆ ಇಸ್ಲಾಂನ 'ಹಲಾಲ್'ಗೆ ಅಡ್ಡಿಯಾಗುವುದಂತೆ. ಪ್ರಾಣಿಯ ಕೊರಳಿನ ನರ ಕತ್ತರಿಸಿ ರಕ್ತ ಹರಿಯಬಿಟ್ಟು, ನಂತರ ಕೊಂದ ಪ್ರಾಣಿಯ ಮಾಂಸ ಮಾತ್ರ ಮುಸ್ಲಿಮರಿಗೆ ಸ್ವೀಕಾರ ಯೋಗ್ಯವಂತೆ. ಅದರ ಮೂಲ ಉದ್ದೇಶ ಪ್ರಾಣಿಯನ್ನು ಎಚ್ಚರ ತಪ್ಪಿಸಿ ಸಾಯಿಸುವುದೇ ಆಗಿದೆ. ಇಸ್ಲಾಂ ಧರ್ಮ ಪ್ರಾಣಿ ದಯೆಗೆ ವಿಶೇಷ ಮಹತ್ವ ನೀಡುತ್ತದೆ. 'ಹಲಾಲ್' ರೂಢಿಗೆ ಬಂದ ಕಾಲದಲ್ಲಿ ಪ್ರಾಣಿ ದಯೆಯನ್ನು ಅದಕ್ಕಿಂತ ಉತ್ತಮ ರೀತಿಯಲ್ಲಿ ತೋರಿಸುವುದು ಗೊತ್ತಿರಲಿಲ್ಲ. ಆಧುನಿಕ ವಿಜ್ಞಾನ ಅದಕ್ಕಿಂತ ಉತ್ತಮ ರೀತಿಯಲ್ಲಿ ನೋವಿಲ್ಲದೆ ಎಚ್ಚರ ತಪ್ಪಿಸುವ ವಿಧಾನವನ್ನು ಬಳಕೆಗೆ ತಂದಿದೆ. ಸೌದಿ ಅರೇಬಿಯಾ, ಕುವಾಯಿತ್‌ನಂತಹ ಅಪ್ಪಟ ಇಸ್ಲಾಮಿಕ್ ದೇಶಗಳಲ್ಲಿ ಆಧುನಿಕ ಕಸಾಯಿಖಾನೆಗಳು ಅಸ್ತಿತ್ವದಲ್ಲಿವೆ. ಹೀಗಿದ್ದೂ ಭಾರತೀಯ ಮುಲ್ಲಾಗಳು ಆಧುನಿಕ ಕಸಾಯಿಖಾನೆಗಳನ್ನು ವಿರೋಧಿಸುವುದು ವಿಚಿತ್ರವಾಗಿದೆ. ಮತಾಂಧತೆ ಹಿಂದು ಇರಲಿ, ಮುಸ್ಲಿಂ ಇರಲಿ ಮೂಲಭೂತವಾಗಿ ಒಂದೇ ಅಲ್ಲವೇ ?

ಪುರಾಣವನ್ನು ಇತಿಹಾಸಗೊಳಿಸುವ ಪ್ರಕ್ರಿಯೆಯನ್ನು ಕುರಿತು ವಿಚಾರ ಮಾಡುವಾಗ ಪುರಾಣಗಳ ಇತಿಹಾಸವನ್ನೇ ಸ್ವಲ್ಪ ಗಮನಿಸುವುದು ಅಪ್ರಸ್ತುತವಾಗಲಾರದು. ಪರಾಶರ ಮುನಿಯಿಂದ ಮತ್ಸ್ಯಗಂಧಿ ಎಂಬ ಬೆಸ್ತರ ಹುಡುಗಿಯಲ್ಲಿ ಜನಿಸಿ ಒಂದು ದ್ವೀಪದಲ್ಲಿ ಬೆಳೆದನೆಂದು ಹೇಳಲಾದ ವ್ಯಾಸ ತನ್ನ ಹಿಂದಿನವರು ಬಾಯಿಮಾತಿನಲ್ಲಿ ಹೇಳುತ್ತಾ ಕೇಳುತ್ತಾ ಜಾನಪದವಾಗಿ ಲಭ್ಯವಿದ್ದ ಕಥೆಗಳನ್ನು ಆಯ್ದು 'ಜಯ' ಎಂಬ ಕಾವ್ಯವನ್ನು ಮತ್ತು 'ಪುರಾಣ ಸಂಹಿತೆ' ಎಂಬ ಒಂದು ಪೌರಾಣಿಕ ಕೃತಿಯನ್ನು ರಚಿಸಿದ. ವ್ಯಾಸನ ಕಾಲಾನಂತರ 'ಪುರಾಣ ಸಂಹಿತ'ದಿಂದ ಬ್ರಹ್ಮ, ಬ್ರಹ್ಮಾಂಡ ವಾಯು ಮತ್ತು ಮತ್ಸ್ಯ ಎಂಬ ನಾಲ್ಕು ಪುರಾಣಗಳು ರೂಪತಾಳಿದುವು. ನೈಮಿಷಾರಣ್ಯದಲ್ಲಿ ತಪಸ್ಸನ್ನಾಚ ರಿಸುತ್ತಿದ್ದ ಋಷಿಗಳಿಗೆ ಸೂತ ಲೋಮಹರ್ಷಣನು ಈ ಪುರಾಣಗಳನ್ನು ಹಾಡಿ ಹೇಳುತ್ತಿದ್ದನಂತೆ. ಅವನ ಪುರಾಣ, ಗಾಯನ ಋಷಿಗಳ ಮೈಕೂದಲನ್ನು ನೆಟ್ಟಗೆ ನಿಮಿರುವಂತೆ ಮಾಡಿತಂತೆ. ಆದ್ದರಿಂದಲೇ ಅವನಿಗೆ ಲೋಮಹರ್ಷಣ (ರೋಮಾಂಚನಗೊಳಿಸುವವ) ಎಂಬ ಹೆಸರು ಬಂದಿತೆಂದು ದಾಖಲಾಗಿದೆ. ಕ್ರಮೇಣ ಜನಸಾಮಾನ್ಯರೂ ಈ ಪುರಾಣಗಳನ್ನು ಆಸಕ್ತಿಯಿಂದ ಕೇಳಲಾರಂಭಿಸಿದರು. ಪುರೋಹಿತವರ್ಗ ತಮ್ಮ ಮತಗಳ ಪ್ರಚಾರಕ್ಕಾಗಿ ಈ ಪುರಾಣಗಳನ್ನು ಬಳಸಿಕೊಂಡು ಅವುಗಳಲ್ಲಿ ನಾನಾ ರೀತಿಯ ಪವಾಡ ಕಥೆಗಳನ್ನು ಸೇರಿಸುತ್ತಾ ಹೋದರು. ಪುರಾಣಗಳ ಸಂಖ್ಯೆಯೂ ೧೮ಕ್ಕೆ ಬೆಳೆಯಿತು. ಮೊದಲಿನ ಪುರಾಣಗಳಲ್ಲಿ ಇದ್ದ ಹೆಚ್ಚು ಐತಿಹಾಸಿಕ ಅಂಶಗಳು ಕ್ರಮೇಣ ಕಡಿಮೆಯಾಗಿ ಕೊನೆಯ ಪುರಾಣಗಳಲ್ಲಿ ಪೌರಾಣಿಕ ಅಂಶಗಳೇ ಹೆಚ್ಚಾದುವು.

ಸೂತ ಲೋಮಹರ್ಷಣನ ಕಾಲಾನಂತರ ಕೂರ್ಮ, ಲಿಂಗ, ಗರುಡ ಮತ್ತು ವಿಷ್ಣು ಪುರಾಣಗಳು ರಚನೆಯಾದುವು. ಅಗ್ನಿ, ಭಾಗವತ ಮತ್ತು ಪದ್ಮ ಪುರಾಣಗಳು ಇನ್ನೂ ಅನಂತರದವಾಗಿವೆ. ನಾರದ, ಬ್ರಹ್ಮ ವೈವರ್ತ, ವರಾಹ, ವಾಮನ ಮತ್ತು ಸ್ಕಂದ ಪುರಾಣಗಳು ಇತ್ತೀಚಿನ ವಾಗಿದ್ದು ಅವುಗಳಲ್ಲಿ ಯಾವ ಐತಿಹಾಸಿಕ ಅಂಶಗಳೂ ಇಲ್ಲ.

ಆದರೆ ಈ ೧೮ ಪುರಾಣಗಳ ಕಾಲಾನುಕ್ರಮವನ್ನು ಸ್ಥೂಲವಾಗಿ ಮಾತ್ರ ನಿರ್ಧರಿಸಬಹುದು. ಅತಿ ಪ್ರಾಚೀನ ವಾದ ವಾಯು, ಬ್ರಹ್ಮಾಂಡ ಮತ್ತು ಮತ್ಸ್ಯ ಪುರಾಣಗಳಲ್ಲಿ ಅಲ್ಲಲ್ಲಿ ಸೇರಿರುವ ಪ್ರಕ್ಷಿಪ್ತ ಭಾಗಗಳನ್ನು ಬಿಟ್ಟರೆ ಮೂಲ ಕೃತಿಗಳು ೪ನೇ ಶತಮಾನದ ಆರಂಭದಲ್ಲಿ ರಚಿತವಾದಂತೆ ಕಾಣುತ್ತವೆ.

ಪುರಾಣಗಳ ರಚನೆಗೆ ಏನು ಅನ್ವಯಿಸುತ್ತದೋ ಅದೇ ಮಹಾಭಾರತದ ರಚನೆಗೂ ಅನ್ವಯಿಸುತ್ತದೆ. ಅದೂ ಸಹ ವ್ಯಾಸನಿಂದಲೇ ರಚಿತವಾಯಿತೆಂಬ ನಂಬಿಕೆ ಜನಜನಿತ ವಾಗಿದೆ. ಕೃತಿಯ ಆಂತರಿಕ ಆಧಾರಗಳಿಂದ ಹೇಳುವು ದಾದರೆ ಪ್ರಾರಂಭದಲ್ಲಿ ಅದನ್ನು 'ಜಯ' ಎಂದು ಕರೆಯಲಾಗುತ್ತಿತ್ತು. ಏಕೆಂದರೆ ಅದರಲ್ಲಿ ಕೇವಲ ಕೌರವರ ವಿರುದ್ಧ ಪಾಂಡವರು ಗಳಿಸಿದ ವಿಜಯದ ಕಥೆ ಮಾತ್ರ ಅಡಕವಾಗಿದೆ. ಮೂಲಕಾವ್ಯ ಕೇವಲ ೮೮೦೦ ಶ್ಲೋಕ ಗಳಿಂದ ಕೂಡಿತ್ತು. ಅದು ಕ್ಲಿಷ್ಟವೂ, ಸಂಕೀರ್ಣವೂ ಆಗಿ ಕಂಡಿದ್ದರಿಂದ ಅನಂತರ ಕಾಲದಲ್ಲಿ ಅದನ್ನು ೨೪೦೦೦ ಶ್ಲೋಕಗಳಿಗೆ ವಿಸ್ತರಿಸಲಾಯಿತು. ಆಗ ಅದನ್ನು 'ಭಾರತ' ಎಂದು ಕರೆಯಲಾಗುತ್ತಿತ್ತು. ಇನ್ನೂ ಅನಂತರ ಅದರಲ್ಲಿ ಕಥೆಗಳು ಉಪಕಥೆಗಳು ಮತ್ತು ನೀತಿಕಥೆಗಳು ಸೇರಿ ಅದರ ಗಾತ್ರ ೧,೦೦,೦೦೦ ಶ್ಲೋಕಗಳಷ್ಟು ಬೆಳೆಯಿತು. ಆಗ ಅದು 'ಮಹಾಭಾರತ'ವಾಯಿತು. ಹೀಗೆ ಇತಿಹಾಸಕ್ಕೆ ಸಮೀಪವಿದ್ದ 'ಜಯ', 'ಮಹಾಭಾರತ'ವೆನಿಸಿಕೊಂಡು ಭಾರತ ಸಂಸ್ಕೃತಿಯ ವಿವಿಧ ಹಂತಗಳ ಕಲಸು ಮೇಲೋಗರವಾಗಿದೆ.

ಆಧುನಿಕ ಕಾಲದಲ್ಲಿ ಮೂಲಭಾರತದ ಶೋಧನೆಗೆ ತೊಡಗಿದ ಸುಕ್ತಂಕರ್ ಅವರ ಪ್ರಕಾರ ಅದರಲ್ಲಿ ದ್ರೌಪದಿಯ ವಸ್ತ್ರಾಪಹರಣದ ಪ್ರಸಂಗವೇ ಬರುವುದಿಲ್ಲ. ಜನರ ರಂಜನೆಗಾಗಿ ಅದು ಅನಂತರ ಕಾಲದಲ್ಲಿ ಪ್ರಕ್ಷಿಪ್ತ ವಾಗಿರಬಹುದು.

ಪ್ರಾಚೀನ ಸಂಸ್ಕೃತ ವಿದ್ವಾಂಸರಾದ ಜಿ. ಎಸ್. ಖೇರ ಅವರ ಪ್ರಕಾರ ಮಹಾ ಭಾರತದ ಮುಖ್ಯ ಭಾಗವಾದ 'ಭಗವದ್ಗೀತೆ' ಬೇರೆ ಬೇರೆ ಕಾಲದ ಮೂವರು ಬೇರೆ ಬೇರೆ ಲೇಖಕರಿಂದ ರಚನೆಯಾಗಿದೆ ಎಂಬುದು ಸಾಬೀತಾಗುತ್ತದೆ. ಅವರು ಭಗವದ್ಗೀತೆಯ ಆಂತರಿಕ ಆಧಾರಗಳನ್ನು ಮುಂದಿಟ್ಟುಕೊಂಡೇ ತಮ್ಮ ನಿರ್ಧಾರಕ್ಕೆ ಬರುತ್ತಾರೆ.

ಜಿ. ವಿ. ವೀರಭದ್ರಪ್ಪ
ಜಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫




'ಪುಸ್ತಕ ಪ್ರಕಾಶನ' ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ಒಂದು ಅಸದೃಶ ಸಾಹಸ. ವಸ್ತು, ವಿಷಯ, ಪುಸ್ತಕದ ಕಾಗದ, ರಕ್ಷಾಪುಟ ವಿನ್ಯಾಸ, ಶ್ರೇಷ್ಠ ಮುದ್ರಣ, ಓದುಗರಿಗೆ ವಿಚಾರ ತಲುಪಿಸುವ ಗದ್ಯಶೈಲಿ, ಪ್ರತಿಯೊಂದರಲ್ಲೂ ಜಗತ್ತಿನ ಅತ್ಯುತ್ತಮ ಪ್ರಕಾಶನಗಳಿಗೆ ಸರಿಗಟ್ಟುವ ಸಾಧನೆ ಮಾಡಬೇಕೆಂಬ ನಿರ್ಧಾರದಿಂದ ನಾಡಿನ ಅಗ್ರಮಾನ್ಯ ಲೇಖಕರ, ಕಲಾವಿದರ, ತಂತ್ರಜ್ಞ, ಮುದ್ರಕರ ಅವಿರತ ಶ್ರಮ, ಸಾಧನೆ, ಸಹಕಾರಗಳೊಂದಿಗೆ ಹೊರಟಿರುವ ಸಾಹಸ. ನೆನಪಿರಲಿ 'ಪುಸ್ತಕ ಪ್ರಕಾಶನ' ಕೇವಲ ಪುಸ್ತಕಗಳನ್ನು ಬಿಕರಿ ಮಾಡುವ ವ್ಯಾಪಾರಿ ಸಂಸ್ಥೆಯಲ್ಲ, ಅದೊಂದು ಗುರಿ ಮತ್ತು ಆದರ್ಶಗಳನ್ನುಳ್ಳ ಉದ್ದೇಶಪೂರ್ವಕ ಸಾಹಸ.

# ಪುಸ್ತಕಗಳ ಪಟ್ಟಿ

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

| | | |
|---|---|---|
| 1. | ಕರ್ವಾಲೋ | 66-00 |
| 2. | ಕಿರಗೂರಿನ ಗಯ್ಯಾಳಿಗಳು | 60-00 |
| 3. | ಚಿದಂಬರ ರಹಸ್ಯ | 105-00 |
| 4. | ಪರಿಸರ ಕತೆ | 60-00 |
| 5. | ಸಹಜ ಕೃಷಿ | 36-00 |
| 6. | ಮಿಸ್ಸಿಂಗ್ ಲಿಂಕ್ | 60-00 |
| 7. | ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 72-00 |
| 8. | ಜುಗಾರಿ ಕ್ರಾಸ್ | 105-00 |
| 9. | ಏರೋಪ್ಲೇನ್ ಚಿಟ್ಟೆ ಹಾಗೂ ಇತರ ಕತೆಗಳು | 45-00 |
| 10. | ಫ್ಲೇಯಿಂಗ್ ಸಾಸರ್ಸ್ ಭಾಗ 1,2 | ತಲಾ 45-00 |
| 11. | ಕಾಡಿನ ಕತೆಗಳು 1, 2, 3, 4 | ತಲಾ 45-00 |
| 12. | ಮಿಂಚುಳ್ಳಿ | 72-00 |
| 13. | ಹೆಜ್ಜೆ ಮೂಡದ ಹಾದಿ | 57-00 |
| 14. | ಹಕ್ಕಿ ಪುಕ್ಕ | 300-00 |
| 15. | ರುದ್ರಪ್ರಯಾಗದ ಭಯಾನಕ ನರಭಕ್ಷಕ | 66-00 |
| 16. | ಅಣ್ಣನ ನೆನಪು | 120-00 |
| 17. | ಅಬಚೂರಿನ ಪೋಸ್ಟಾಫೀಸು | 50-00 |
| 18. | ಹುಲಿಯೂರಿನ ಸರಹದ್ದು ಮತ್ತು ನಿಗೂಢ ಮನುಷ್ಯರು | 60-00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಶ್ರೀ ಪ್ರದೀಪ ಕೆಂಜಿಗೆ**

| | | |
|---|---|---|
| 19. | ವಿಸ್ಮಯ 1, 2, 3, | ತಲಾ 45-00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಶ್ರೀ ಬೆಳವಾಡಿ**

| | | |
|---|---|---|
| 20. | ನಡೆಯುವ ಕಡ್ಡಿ ಹಾರುವ ಎಲೆ | 45-00 |

**ಶ್ರೀ ಪ್ರದೀಪ ಕೆಂಜಿಗೆ**

| | | |
|---|---|---|
| 21. | ಬರ್ಮುಡಾ ಟ್ರ್ಯಾಂಗಲ್ | 43-00 |
| 22. | ಅದ್ಭುತ ಯಾನ | 60-00 |

**ಶ್ರೀ ಕೃಪಾಕರ ಸೇನಾನಿ**

| | | |
|---|---|---|
| 23. | ಸೆರೆಯಲ್ಲಿ ಕಳೆದ 14 ದಿನಗಳು | 93-00 |

**ಶ್ರೀ ಎಂ. ಶಿವಕುಮಾರ್**

| | | |
|---|---|---|
| 24. | ಕಂಪ್ಯೂಟರ್ ಕಲಿಯಿರಿ | 108-00 |
| 25. | ಸೈಕಲ್‌ವಾಲ | 40-00 |
| 26. | ಯೋಗಿ ಮತ್ತು ಅಪ್ಸರೆ | 66-00 |

**ಶ್ರೀ ಶ್ರೀಕೃಷ್ಣ ಆಲನಹಳ್ಳಿ**

| | | |
|---|---|---|
| 27. | ಗೋಡೆ | 66-00 |

**ಶ್ರೀ ಜಿ. ಪಿ. ಬಸವರಾಜು**

| | | |
|---|---|---|
| 28. | ಭೂಕಂಪದ ಅಂತರಂಗ | 40-00 |

**ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣಗೌಡರು**

| | | |
|---|---|---|
| 29. | ಅಚ್ಚಗನ್ನಡ ನುಡಿಕೋಶ | 360-00 |

**ಶ್ರೀ ನರೇಂದ್ರ ರೈ ದೇರ್ಲ**

| | | |
|---|---|---|
| 30. | ಸಾವಯವ ಕೃಷಿ | 36-00 |

**ದೇವನೂರ ಮಹಾದೇವ**

| | | |
|---|---|---|
| 31. | ಕುಸುಮಬಾಲೆ | 60-00 |

ಶ್ರೀ ಪೂರ್ಣಚಂದ್ರ ತೇಜಸ್ವಿಯವರ ಮಿಲನಿಯಂ ಸರಣಿಯ ಹದಿನಾರು ಪುಸ್ತಕಗಳು (ಒಟ್ಟು ರೂ. 720-00)

ಲಾರಾ ಇಂಗಲ್ಸ್ ವೈಲ್ಡರ್‌ರವರ ಒಂಬತ್ತು ಜನಪ್ರಿಯ ಕಾದಂಬರಿಗಳು (ಒಟ್ಟು ರೂ. 636-00)

ಅರಣ್ಯ ಪಾಲಕ ಶ್ರೀ ಕೆ. ಎಂ. ಚಿಣ್ಣಪ್ಪ ಅವರ ಆತ್ಮಕತೆ 'ಕಾಡಿನೊಳಗೊಂದು ಜೀವ' (3 ಭಾಗಗಳಲ್ಲಿ ತಲಾ ರೂ. 45)

*ವಿವರಗಳಿಗೆ*

**ಪುಸ್ತಕ ಪ್ರಕಾಶನ**

91, 9ನೇ ಮೇನ್, ಸರಸ್ವತಿಪುರಂ, ಮೈಸೂರು-570 009
ಫೋನ್ : 0821-545774 bnsrama@sancharnet.in

*ಪೋಸ್ಟ್ ಮುಖಾಂತರ ವ್ಯವಹರಿಸುವವರಿಗೆ*

**ಪುಸ್ತಕ ಪ್ರಕಾಶನ**

ಪೋಸ್ಟ್ ಬಾಕ್ಸ್ 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ - 577 132 ptejasvi@sancharnet.in




# ಎದೆಯ ಬಾವ್ಯಾಗಿನ ಜೋಗಾತಿ ನೀರು

ಬಿಸಿಲಳ್ಳಿಗೆ ಬರದೇ ಹತ್ತತ್ತಿರ ಇಪ್ಪತ್ತು ವರ್ಷಗಳೇ ಆಗಿರಬೇಕು. ಬಾಲ್ಯದ ಭಿತ್ತಿಯಲಿ ಮೆತ್ತಿಕೊಂಡ ಬಿಸಿಲು, ಕಣ್ಣಲ್ಲಿ ಅಚ್ಚುಕೂತ ಪರಿಸರ, ಕಿವಿಯಲ್ಲಿ ಅಮ್ಮ ನೆನಪಿಸಿಕೊಂಡಾಗಷ್ಟ ನೆನಪಾಗುವ ಅದೇ ದನಿಗಳ ಹೊರತಾಗಿ ಬಿಸಿಲಳ್ಳಿ ನನ್ನಿಂದ ದೂರವಾಗಿತ್ತೆ? ಅಥವಾ ಬಿಸಿಲಳ್ಳಿಯಿಂದ ನಾನೇ ದೂರವಾಗಿದ್ದೆನೆ? ಇದು ನನ್ನಿಷ್ಟಕ್ಕೆ ನನಗೆ ಯಕ್ಷ ಪ್ರಶ್ನೆಯಂತೆ ಕಾಡತೊಡಗಿದ್ದು ಅಂದು ಬಿಸಿಲಳ್ಳಿಯ ಕ್ರಾಸಿನಲ್ಲಿ ಬಸ್ಸಿಂದ ಇಳಿದಾಗ. ನನ್ನದೇ ಊರು, ನಾನು ಬಾಲ್ಯದಲ್ಲಿ ಆಟವಾಡಿದ ಬಯಲುಗಳು, ತುಡುಗು ಮಾಡಿದ ತೋಟ-ಹೊಲಗಳು, ಹರೆಯದ ದಿನಗಳಲ್ಲಿ ಕಾಲೇಜು ಬಸ್ಸಿಗಾಗಿ ಕಾದಿದ್ದ ಅದೇ ಬಸ್ ನಿಲ್ಲುವ ಕ್ರಾಸ್ – ಎಲ್ಲ ಈ ಹೊತ್ತು ಅದೇನೋ ಒಂದು ಅಪರಿಚಿತ, ಮುಜುಗರದ ನಗೆ ಹೊತ್ತಂತೆ ಭಾಸವಾಗಿತ್ತು. ಪರಿಚಿತ ನಗೆ ನಕ್ಕಿದ್ದು ವೆಂಕೋಬ ಮಾತ್ರ. ಅವನು ಅದೇನೋ ಕಾಳಜಿಯಿಂದ ಈ ಇಳಿ ಸಂಜೆಗೆ ಮುಟ್ಟುವ ಬಸ್‌ಗಾಗಿ ಕಾದು ನಿಂತಿದ್ದ. ಬಹುಶಃ ನನಗೆ ದಾರಿ ತಪ್ಪೀತು ಎಂದು ಭಾವಿಸಿದ್ದಿರಬೇಕು!

''ಬಾ ಮಾರಾಯ. ಅದೆಷ್ಟು ವರ್ಷವಾದ ಮ್ಯಾಲೆ ಊರಿಗೆ ಬರಕತ್ತಿ ಗೊತ್ತದೇನು? ಏನು ಆ ಪ್ಯಾಟೆ ನಿನ್ನ ಈ ಊರ ಮರೆಸೂಹಾಂಗ ಆವರಿಸಿಕೊಂಡದೇನು? ಬಾ, ಪ್ರಯಾಣಾ ಆರಾಮಿತ್ತು ಹೌದಿಲ್ಲೋ?'' ಎಂದು ಪ್ರಶ್ನೆಯ ಮೇಲೆ ಪ್ರಶ್ನೆ ಕೇಳಿ ವಿಚಾರಿಸಿಕೊಂಡ.

''ಸುಮ್ನಿರೋ... ಯಾರೋ ಪರದೇಶಿಗಳಿಗೆ ಮೊದಲನೇ ಸಲ ಊರಿಗೆ ಕರ್‍ಕೊಂಡ್ಹೋಗೋ ಹಂಗೆ ವಿಚಾರಿಸ್ತಿದ್ದೀಯಲ್ಲ. ನಾನೇನು ಬ್ಯಾರೆ ಊರ್‍ನೋನೇನು? ಇದೇ ಬಿಸಿಲಳ್ಳಾಗೆ ಹುಟ್ಟಿ ಬೆಳೆದೋನು ತಗಾ. ಏನು ಪ್ಯಾಟಿ ಸೇರ್‍ಕಂಡ್ರೆ ಊರು ಮರ್‍ತು ಹೋಗಂಗಿಲ್ಲಾ ಬಿಡು. ನಿನ್ನ ದೇಖರೇಕೆ ಜಾಸ್ತಿ ಆಯ್ತು ನೋಡಪಾ...'' ಎಂದು ಮೆಲ್ಲಗೆ ಗದರಿಕೊಂಡೆ.

ವೆಂಕೋಬ ಅದೇ ಹುಕಿಯಲ್ಲಿದ್ದ. ಕ್ರಾಸಿನಿಂದ ಊರಿಗೆ ಬರೋ ದಾರಿಲೇ ಊರಿನ ವರ್ತಮಾನ, ಹೊಲದ ಬದುಗಳಿಗೆ ಅಂಟಿಕೊಂಡ ವ್ಯಾಜ್ಯ, ತೋಟ-ತುಡಿಕೆಗಳ ಹಿಂದಿನ ವೈಮನಸ್ಸು, ಬದಲಾಗಿರೋ ಬಿಸಿಲಳ್ಳಿಯ ರಾಜಕೀಯದ ಬಗ್ಗೆ ಏನೇನೋ ಹೇಳುತ್ತಲೇ ಇದ್ದ. ಕೊರೆಯುತ್ತಲೇ ಬಂದ. ನಾನು ಅದೆಲ್ಲವನ್ನೂ ಕೇಳಿಸಿಕೊಂಡವನಂತೆ 'ಹ್ಞೂಂ'ಗುಟ್ಟುತ್ತಲೇ ನನ್ನ ಬಿಸಿಲಳ್ಳಿಯನ್ನ ಧ್ಯಾನಿಸತೊಡಗಿದ್ದೆ. ಮಾತಿನಲ್ಲೇ ದಾರಿ ಸವೆದು ಬಿಸಿಲಳ್ಳಿಯ ಗುಡೀಕೇರಿಯ ವೆಂಕೋಬನ ಮನೆ ಮುಂದೆ ನಿಂತಾಗ ನನಗೆ ಅವಕ್ಕಾಗುವಂತೆ ಪರಿಸರ ಅಪರಿಚಿತ ಅನ್ನಿಸತೊಡಗಿತು! ಬಾಲ್ಯದ ಕಣ್ಣಗಲಕ್ಕೆ ಕಂಡ ಆ ವಿಶಾಲ ಬೀದಿ, ಬಹುತೇಕ ವಾಡೆಯಂತಹ ದೊಡ್ಡ ಮನೆಗಳು, ಪ್ರತೀ ಮನೆ ಮುಂದಿನ ಆ ಕಲಾತ್ಮಕ ಅಗಸಿ ಎಲ್ಲಾ ಈ ಹೊತ್ತು ಇಕ್ಕಟ್ಟಿನ ಬೀದಿಯೊಂದರಲ್ಲಿ ಇಡಕಿರಿದಂತೆ ಭಾಸವಾಯ್ತು. ಸಂಜೆಗೆ ಕತ್ತಲು ಮೆತ್ತಿಕೊಳ್ಳುತ್ತಿದ್ದ ಆ ಘಳಿಗೆಯಲ್ಲಿ ಕೇರಿ ಮತ್ತಷ್ಟು ಮಸುಕಾಗಿ, ಮನೆ ಮನೆಯೊಳಗೆ ಅದೇ ಹಳೇ ಕ್ಯಾಂಡಲ್ ಬಲ್ಬಿನ ಬೆಳಕು ಹೊಮ್ಮಿದ್ದು ನಿಯಾನ್ ಬೆಳಕಿನ ನಗರದಿಂದ ಮಸುಕು ಬೆಳಕಿನ ಕನಸಿನಂತಹ ಸುಷುಪ್ತ ಚಿತ್ರದಲ್ಲಿ ನನ್ನ ನಾನೇ ನಿಂತು ನೋಡುತ್ತಿರುವಂತೆ ಭಾವಿಸಿಕೊಂಡು ನಕ್ಕೆ.

ವೆಂಕೋಬನ ಮನೆ ಮಂದಿಯೆಲ್ಲಾ ನಕ್ಕರು. ಆ ನಗೆಯಲ್ಲಿ ಎಲ್ಲಾ ಇತ್ತು. ಅದೆಷ್ಟೋ ವರ್ಷಗಳ ನಂತರ ಕಂಡ ವೆಂಕೋಬನ ಹೆಂಡತಿ, ಎದೆಯುದ್ದ ಬೆಳೆದು ನಿಂತ ಅವನ ಮಗಳ ನಸುನಾಚಿಕೆಯ ನಗು, ವಯಸ್ಸು ಕೊಂಚ ಹೆಚ್ಚು ಆದಂತೆ ಭಾಸವಾಗುವ ರಾಧಾಮೌಸಿ, ಪಡಸಾಲೆಯ ಗೋಡೆಗೆ ನೇತುಬಿದ್ದು ನಗುತ್ತಿದ್ದ ವೆಂಕೋಬನ ತಂದೆಯ ಫೋಟೋ.... ನಾನು ಮತ್ತೆ ನಗುವೊಂದನ್ನ ಮುಖದಲ್ಲಿ ಧರಿಸಿಕೊಂಡೆ. ವೆಂಕೋಬ ಬಣ್ಣ ಮಾಸಿದ ವಸ್ತ್ರವೊಂದನ್ನು ತಂದು, ''ಮಖಾ ತೊಳಿಯಲ್ಲ...'' ಎಂದು ಬಚ್ಚಲಿಗೆ ದೂಡಿದ. ಅದೇ ಬಚ್ಚಲು. ಪಕ್ಕದಲ್ಲೇ ಬಾವಿ, ರಾಟೆಯ ಕಂಬ, ಅದರಲ್ಲಿ ನೇತು ಬಿದ್ದ ಹಗ್ಗ-ಬಿಂದಿಗೆ! ನಾನು ಅನಿವಾರ್ಯವಾಗಿ ವೆಂಕೋಬನ ಮನೆಯ ಬಾವಿಗೆ ಬಿಂದಿಗೆ ಇಳಿಸಿ ಒಮ್ಮೆ ಇಣುಕಿ ನೋಡಿದೆ. ಬಿಸಿಲಳ್ಳಿಯ ಗುಡೀಕೇರಿಯ ವೆಂಕೋಬನ ಮನೆಯ ಬಾವಿಯೂ ನನ್ನನ್ನ ಮಾತನಾಡಿಸಿತು. ನಾನು ಹಳೇ ಪರಿಚಯ ಹೇಳುವವನಂತೆ ''ಹೋಽಽ'' ಎಂದು ಬಾವಿಗೆ ಕೂಗಿ ಹೇಳಿದೆ. ಪ್ರತಿಯಾಗಿ ಬಾವಿ ಏನೇನೆಲ್ಲ ಪ್ರತಿಧ್ವನಿಸಿತು.

ಬೆಳಿಗ್ಗೆಯಿಂದಲೇ ಶುರುವಾದ ವೆಂಕೋಬನ ಮನೆಗೆ ಬರುವ ಕೇರಿಯ ಜನರ ಭೇಟಿ – ನನ್ನ ಬರುವಿಕೆಯ ಹಿನ್ನೆಲೆಯಿಂದ – ಉದ್ದೇಶ ಪೂರ್ವಕವಾದುದು ಎಂದೆನ್ನಿಸಿ ಬಹುತೇಕ ಮುಜುಗರಗೊಂಡಿದ್ದೆ.

''ನೀನು.... ನಮ್ಮ ಕ್ರಿಷ್ಣಾಚಾರಿ ಮಗ ಅಲ್ಲೇನು? ಏನು ಪ್ಯಾಟಿಗೆ ಸೇರಿದ ಮ್ಯಾಲೆ ಕೇರಿಗೆ ಈಗ ಬಂದದ್ದು? ನಿನ್ನ ಅಮ್ಮ – ಅದೇ ಸುಭದ್ರಮ್ಮ – ಛೇಷದಾಳಾ?'' ಎಂದು ವಿಚಾರಿಸಿಕೊಂಡ ಬಕ್ಕತಲೆಯ ಮನುಷ್ಯ ನನ್ನ ಸಹಪಾಠಿ ರುಕುಮಾಯಿಯ ತಂದೆ ಎಂದು ಗುರುತಿಸಿಕೊಂಡೆ.

''ಏನು... ನಿನ್ನ ಹೆಸರೇನೋ ಇದೆಯಲ್ಲ ಮರೆತೆ, ಅಂದ್ಹಂಗೆ... ಈಗ ಬಂದಿದ್ದು ವೆಂಕೋಬನ ಮನೆಗೆಂದೋ? ವೆಂಕೋಬ ನಿನ್ನ ವಾರಿಗೆಯವನಲ್ವೇ? ಮತ್ತೇನು ವಿಶೇಷ....'' ಎಂದೋ,

''ನಿಮ್ಮಪ್ಪ ಕ್ರಿಷ್ಣಾಚಾರಿಗೂ ಅವನ ದೊಡ್ಡಪ್ಪನ ಮಗ ಗರುಡಾಚಾರಿಗೂ ಇದ್ದ ಹೊಲದ ವ್ಯಾಜ್ಯ ಮುಗೀತಂತಲ್ಲ. ನಿಮ್ಮ ಕಡೆಗೇ ಆಯ್ತಂತೆ ನ್ಯಾಯ. ಪಾಪ ಅದು ಅವತ್ತೆ ಆಗಿದ್ದರೆ ನೀನು ಈ ಕೇರ್‍ಯಾಗೇ ಗೇಣಿ ತಕ್ಕೊಂಡು ಆರಾಮ ಇರ್‍ಬೋದಿತ್ತು. ಅಂತೂ ಆಯ್ತಲ್ಲ.. ಅದರ ಸಂಬಂಧ ಬಂದಿದ್ದೇನು ? ಈಗ ಏನ್ಮಾಡೀರಿ ನಿಮ್ಮ ಹೊಲ ತಗೊಂಡು ?'' ಎಂದೆಲ್ಲಾ ವಿವರವಾಗಿ ನನ್ನ ಭೇಟಿಯ ಉದ್ದೇಶ, ಅದರ ಹಿಂದಿನ ಈ ಕೌಟುಂಬಿಕ ಕಲಹ, ಕೋರ್ಟು ವ್ಯಾಜ್ಯ ಎಲ್ಲವನ್ನೂ ನನಗೇ ಮನವರಿಕೆ ಮಾಡಿ ಕೊಡುವ ಪ್ರಯತ್ನದಲ್ಲಿ ಮಠದ ಕೇರಿ ಪ್ರಹ್ಲಾದರಾಯರು, ಜೋಯಿಸರ ಕೇರಿ ರಾಮಣ್ಣ, ವಿಠೋಬ ಎಲ್ಲಾ ಮಾತನಾಡ ತೊಡಗಿದ್ದರು. ಈ ಉಭಯ ಕುಶಲೋಪರಿಯಿಂದ ನನಗೆ ತಲೆಚಿಟ್ಟು ಹಿಡಿದಿತ್ತು. ನನ್ನಪ್ಪನ ವಾರಿಗೆಯ ಈ ಮಂದಿಯೆಲ್ಲ ಇನ್ನೂ ಅದೇ ಬಿಸಿಲಳ್ಳಿಯಲ್ಲಿ, ನನ್ನ ಬಾಲ್ಯದ ದಿನಗಳಲ್ಲಿ ಅದ್ಯಾವುದೋ ಶತಮಾನದ ಸೆರಗಿನಲ್ಲಿ ಇದ್ದಂತೆನ್ನಿಸಿ ಕಸಿವಿಸಿ ಜಾಸ್ತಿಯಾಯ್ತು. ಬೆಳಗ್ಗೆಯಿಂದ ಇದೇ ವ್ಯವಹಾರ, ನಡುವೆ ಹೊಲದ ವಿಲೇವಾರಿ ಕುರಿತಂತೆ ಬಿಟ್ಟಿ ಮಾರ್ಗದರ್ಶನ ಕೇಳಿ ಸಂಜೆಗೆ ವೆಂಕೋಬನ ಮನೆಯಿಂದ ಒಂಟಿಯಾಗಿ ಹೊರಬಿದ್ದೆ.

ಗುಡೀ ಕೇರಿ ಹಾಗೇ ಇದೆ. ಅದೇ ಕೇರಿಯ ಮಧ್ಯದಲ್ಲಿ ವಿಠೋಬನ ಗುಡಿ, ಎದುರಿನ ಕಲಾತ್ಮಕ ದೀಪಕಂಬ. ಪಕ್ಕದಲ್ಲಿ ತೀರಾ ಹಾಳುಬಿದ್ದಿದ್ದ ಕಲ್ಲಿನ ಮಂಟಪ, ಅದರ ಆಸುಪಾಸಿನಲ್ಲಿ ನಾಲ್ಕಾರು ಮನೆಗಳು ಮಾಸಿವೆ. ಇನ್ನೆರಡು ಮೂರು ಮುರಿದುಬಿದ್ದಿವೆ – ಯಾವುದೋ ಕಾಲದ ಕೊತ್ತಳದಂತೆ ! ಗುಡಿಯ ಬಲಗಡೆಯಿಂದ ತಿರುಗಿದರೆ ಜೋಯಿಸರ ಕೇರಿಯಲ್ಲಿ ಆ ಮರಳು ತುಂಬಿದ ಬಯಲು, ಅದರೆದುರಿನ ಕುಲಕರ್ಣಿ ಮಾಸ್ತರ ಹಳೇಮನೆ, ಬಯಲ ಹನುಮಪ್ಪನ ಗುಡಿ. ಅದರ ಮುಂದಿನಿಂದ ಸಾಗಿ ಎಡಕ್ಕೆ ತಿರುಗಿದರೆ ಜೈನರ ಕೇರಿಯ ನೂರು ಕಂಬದ ಬಸದಿ. ಅದರಿಂದ ಮುಂದಿನ ಬಸವಣ್ಣನ ಪೇಟೆಯಲ್ಲಿ ತರಕಾರಿ ಮಾರ್ಕೆಟ್‍ನ ಗಿಜಿಗಿಜಿ. ಅದರ ಪಕ್ಕದಲ್ಲಿ ಗಲ್ಲಿಯ ಕಟ್ಟೆಗಳ ಮೇಲೆ ದಿನಸಿ ಮಾರುವ ಅಂಗಡಿ ಮುಂಗಟ್ಟುಗಳ ಲಿಂಗಾಯ್ತರ ಕೇರಿ. ನಂತರ ಮಡಿವಾಳರದು, ಅಲ್ಲಿಂದ ಮಠದಕೇರಿ ಹಾದು ತುಸುವೇ ದೂರದಲ್ಲಿ ಕೆಳಗೇರಿ. ಬಿಸಿಲಳ್ಳಿ ಹಾಗೇ ಇದೆ. ಅದ್ಯಾವುದೋ ಕಾಲದಲ್ಲಿ ವರ್ಣಾಶ್ರಮವನ್ನು ವಿಭಜಿಸಿ ಗೆರೆ ಕೊರೆದು ಜನಾಂಗಗಳನ್ನು ಕೇರಿಗಳಲ್ಲಿ ಪ್ರತಿಷ್ಠಾಪಿಸಿದಂತೆ ! ಅದೇ ಚಿರಪರಿಚಿತ ಕಟ್ಟಡಗಳ ಮುಂದೆ ಬೀದಿಗಳಲ್ಲಿ ಅಲೆದಾಡಿದರೂ, ನನ್ನ ಪರಿಚಯವನ್ನು ಎದುರಾದ ಯಾವ ಕಣ್ಣುಗಳೂ ಹಿಡಿಯಲಿಲ್ಲ ಅನ್ನೋದು ಒಂಥರಾ ಖೇದ ಅಷ್ಟೇ ಸಮಾಧಾನ ಕೂಡಾ ಆಯ್ತು.



ಬಂದವ ವೆಂಕೋಬನ ಮನೆಯ ಕಟ್ಟೆಯ ಮೇಲೆ ಕೂತೆ. ಆಕಾಶದಲ್ಲಿ ಆಗತಾನೇ ಒಂದು ನಕ್ಷತ್ರ ಮಿನುಗುತ್ತಿತ್ತು. ಇಂತಹುದೇ ಸಂಜೆಗಳಲ್ಲಿ ಈ ವೆಂಕೋಬ, ಮಠದ ಕೇರಿ ರಾಘವ, ಗುಡೀ ಕೇರಿ ದ್ವಾರಕ, ಜೋಯಿಸರ ಕೇರಿ ಶ್ರೀನಿಧಿ ಎಲ್ಲಾ ಮನೆಯ ಮಾಳಿಗೆ ಮೇಲೆ ಅಂಗಾತ ಮಲಗಿ ನಕ್ಷತ್ರಗಳನ್ನು ಎಣಿಸುತ್ತಿದ್ವಿ ಎಂಬುದಾಗಿ ನೆನಪಾಗಿ ವೆಂಕೋಬನಿಗೆ ಹೇಳಬೇಕು ಎಂದುಕೊಂಡೆ. ನಕ್ಷತ್ರ ನೋಡುತ್ತಲೇ ಏನೋ ಕೊರತೆಯೆಂದು ಗ್ರಹಿಕೆಗೆ ಬಂದು ಲೆಕ್ಕ ಹಾಕಿದೆ. ಮನದ ಮೂಲೆಯಲ್ಲಿ ಇವತ್ತು ಫಾಲ್ಗುಣ ಶುದ್ಧ ಪಾಡ್ಯ ಅಂತೊಂದು ಮಾಹಿತಿ ಮೂಡಿ ಇನ್ನು ಹದಿನೈದು ದಿನಕ್ಕೆ ಕಾಮನ ಹುಣ್ಣಿಮೆ ಎಂದು ನೆನಪಾಗಿ ಕಿವಿಗಳು ಬೀಳಬಹುದಾದ ಹಲಗೆಯ ಶಬ್ದ ಕಾದುಕೊಂಡಂತೆ ತೆರೆದುಕೊಂಡವು. ಇಲ್ಲ, ನಕ್ಷತ್ರಗಳು ಒಂದರ ಮೇಲೊಂದರಂತೆ ಕಣ್ಣಿಗೆ ಬಿದ್ದರೂ ಹಲಗೆ ಬಡಿತದ ಸದ್ದೇ ಕೇಳಲಿಲ್ಲ.

ಆ ದಿನಗಳಲ್ಲಿ ಈ ಪಾಡ್ಯದ ಸಂಜೆಯ ಮೊದಲ ನಕ್ಷತ್ರವನ್ನು ಸ್ವಾಗತಿಸುತ್ತಿದ್ದುದೇ ಹಾಗೆ. ಯಾರದೋ ಕಣ್ಣಿಗೆ ಮೊದಲ ನಕ್ಷತ್ರ ಬಿದ್ದಂತೆ ಹಲಗೆಯೊಂದು ''ಢಂಗು ಣಕುಣ ಣಕುಣ....'' ಎಂದು ಬಾರಿಸಿಕೊಂಡು ಸಾರತೊಡಗುತ್ತಿತ್ತು. ಆಗಷ್ಟೇ ಶಾಲೆಯಿಂದ ಬಂದ ನಾನು, ವೆಂಕೋಬ ಈ ಹಲಗೆಯ ದುಡಿ ಕೇಳಿದವರೇ ಹೋದ ವರ್ಷ ಎತ್ತಿಟ್ಟಿದ್ದ ಹಲಗೆಗಳಿಗಾಗಿ ನಿಲುವಿನ ಮೇಲೆ, ಅಟ್ಟದ ಮೇಲೆ ತಡಕಾಡುತ್ತಿದ್ವಿ. ಸಿಕ್ಕ ಹಲಗೆ ಎಷ್ಟೋ ಬಾರಿ ಸಡಿಲಾಗಿರುತ್ತಿತ್ತು ಇಲ್ಲವೇ ಅಟ್ಟದ ಮೇಲೆ ಇಲಿ ಕಡಿದು ತೂತು ಬಿದ್ದಿರುತ್ತಿತ್ತು. ಆಗೆಲ್ಲ ಎಲ್ಲ ಮ್ಯಾಗನ ಕೇರಿಯ ಹುಡುಗರು, ಪಡ್ಡೆ ಯುವಕರು ಓಡುತ್ತಿದ್ದುದು ಕೆಳಗೇರಿಯ ಉಜ್ಜಿನಪ್ಪನ ಮನೆಯ ಅಂಗಳಕ್ಕೆ. ನಮ್ಮ ಕೇರಿಗಳಿಂದ ಮೊದಲ ಹಲಗೆಯ ದನಿ ಕೇಳಿದ್ದೇ ಉಜ್ಜಿನಪ್ಪ ಹುರುಪುಗೊಂಡಂತೆ ಹದ ಮಾಡಿದ ಚರ್ಮದ ಕಟ್ಟುಗಳನ್ನು ಬಿಚ್ಚಿ ಕಬ್ಬಿಣದ ಗಾಲಿಗೆ ಎಳೆದು ಬಡಿದು ಕಟ್ಟಿ ಹಲಗೆ ಸಿದ್ಧಮಾಡುವ ಕಾಯಕದಲ್ಲಿರುತ್ತಿದ್ದ. ವರ್ಷಪೂರ ಮಠದಲ್ಲಿ, ಗುಡಿಯಲ್ಲಿ ಸನಾತನ ಸಂಸ್ಕೃತಿ ಗೋಹತ್ಯೆಯ ಪಾಪದ ಬಗ್ಗೆ ಎಲ್ಲ ಹತ್ತಾರು ಚರ್ಚೆ, ಹರಿಕಥೆ, ಪುಣ್ಯಕತೆ ಕೇಳಿಸಿಕೊಂಡ ಅದೇ ಹುಡುಗರು ಉಜ್ಜಿನಪ್ಪನ ಬಳಿ ವಾಗ್ವಾದಕ್ಕಿಳಿಯುತ್ತಿದ್ದರು. ಈ ವಾದದಲ್ಲಿ ವೆಂಕೋಬ ಶ್ರೀನಿಧಿಯರು ಕಡಿಮೆಯೇನಲ್ಲ. ಹಲಗೆಗೆ ಬಿಗಿದೆಳೆದ ಚರ್ಮ ಯಾವುದರದ್ದು? ಅದು ಯಾವ ಜಾತಿಯ ರಾಸು ? ಅದು ಸತ್ತಾಗ ಅದರ ವಯಸ್ಸೇನು ? ಅದು ಮುದಿಯಾಗಿ ಸತ್ತಿದ್ದರೆ, ಗೊಡ್ಡಾಗಿ ಗೊಟಕ್ ಎಂದಿದ್ದರೆ ಅದರ ಚರ್ಮ ತನ್ನ ಬಿಗಿತ ಕಳೆದುಕೊಂಡಿರುತ್ತದೆ. ಅದಕ್ಕೇ ಆ ಹಲಗೆಯನ್ನ ಎಷ್ಟು ಕಾಯಿಸಿದರೂ ಬರೋ ನಾದ ಭಲೋ ಇರೋದಿಲ್ಲ. ಏನಿದ್ದರೂ ಹರೆಯದ ಹೋರಿ ಹಸುವಿನದ್ದಾದರೆ, ಇಲ್ಲ ಬಲಶಾಲಿ ಎತ್ತಿನದಾದರೆ ಆ ನಾದ ಕೇರಿಯೊಳಗೇ ನಿಮ್ಮ ಹಲಗೆಯನ್ನ ಗುರ್ತು ಹಿಡಿಯೋ ಹಂಗೆ ಮಾಡ್ತದೆ ಅನ್ನೋದು ಅವರ ವಾದ. ಉಜ್ಜಿನಪ್ಪ ವರ್ಷಪೂರ್ತಿ ಊರ ಆಲದ ಬಳಿ ಚಮ್ಮಾರಿಕೆ ಮಾಡೋ ಅಜ್ಜ – ಈ ಬ್ರಾಹ್ಮಣ ಹುಡುಗರ ಚರ್ಮ ವ್ಯಾಖ್ಯಾನ ಕೇಳಿ ಬಸವಳಿದುಬಿಡುತ್ತಿದ್ದ. ಫಾಲ್ಗುಣ ಶುದ್ಧ ಪಾಡ್ಯವಾದ ನಮ್ಮ ಹಲಗೆಯ ಮಿಡಿತ, ಗೆಣ್ಣು-ಗೀಟು ಕಡ್ಡಿಗಳಿಂದ ಹೊಮ್ಮುವ ಮಟ್ಟುಗಳಿಗಾಗಿ ಪಂದ್ಯಗಳು, ಪ್ರತಿ ಮಟ್ಟುಗಳು ಮುಗಿಲು ಮುಟ್ಟುತ್ತಿದ್ದವು. ಕಾಮನ ಸುಡುವ ಮುಂಚಿನ ಈ ನಾದ ಸಂಭ್ರಮಕ್ಕೆ ನಕ್ಷತ್ರಗಳೂ ನಕ್ಕಿರಬೇಕು.

ಈ ಇಡೀ ಸಂಜೆ ಒಂದೇ ಒಂದು ಹಲಗೆ ಬಡಿದುಕೊಳ್ಳದಿದ್ದುದಕ್ಕೆ ಏನೋ ಕಳೆದುಕೊಂಡಂತೆ ಭಾಸವಾಗಿ ವೆಂಕೋಬನ್ನ ಕೇಳಿದೆ. ಅವ ಕೊಂಚ ಸುಮ್ಮನೇ ಕೂತಿದ್ದ. ''ನಿನಗ್ಗೊತ್ತದಲ್ಲೋ... ಆ ಬರಗಾಲದಾಗ ಒಂದು ಹುಣ್ಣಿಮೆ ಆತು ನೋಡು. ಅದಾ ಕಡೀ ಕಾಮನ ಹುಣ್ಣಿಮೆ, ನಮ್ ಕೇರ್‍ಯಾಗಿನ ಶ್ರೀಧರ, ಶ್ರೀಪತಿ, ಅಂಬಕ್ಕ ಎಲ್ಲಾ ಮೆಟ್ರಿಕ್‍ನಾಗಿದ್ದಾಗಿನ ವರ್ಷ... ಆಗ ನಡೆದದ್ದಾ ಕೊನೆ ಕಾಮನ ದಹನ ಈ ಕೇರ್‍ಯಾಗೆ. ಅವತ್ತಿಂದ ನಮ್ಮ ಹಲಗೆಗಳೂ ನುಡಿಯೋದನ್ನ ಮರ್‍ತುಕೊಂಡವು. ಇವತ್ತು ಕೇರ್‍ಯಾಗ ಯಾರ್‍ದ್ದಾರ ಮನ್ಯಾಗ ಹಲಗೆ ಇದಾವಿಲ್ಲೋ ಗೊತ್ತಿಲ್ಲ...''

ಅವನ ದನಿಯಲ್ಲಿ ಒಂದು ಖಾಲಿತನವಿತ್ತೇ !?

ನನ್ನ ಕಿವಿಯಲ್ಲಿ ಮಾತ್ರ ಆ ದಿನದ ಅವೆ ಹಲಗೆಯ ಮಟ್ಟುಗಳು ರಿಂಗಣಿಸಿದವು.

ನಾನು, ವೆಂಕೋಬ, ದ್ವಾರಕ, ಶ್ರೀನಿಧಿ, ರಾಘವ ಎಲ್ಲಾ ಆಗ ಐದನೇ ಇಯತ್ತೆಯಲ್ಲಿರಬೇಕು, ಸರಿಯಾಗಿ ನೆನಪಿಲ್ಲ. ಆದರೆ ಆ ಹಲಗೆ ಬಡಿತದ ಕಾಮನ ಹುಣ್ಣಿಮೆ ಮಾತ್ರ ಕಣ್ಣಿಗೆ ಕಟ್ಟುತ್ತಲೇ ಇದೆ.

ಶಾಲೆ ಬಿಟ್ಟ ಕೂಡಲೇ ಗುಡೀ ಕೇರ್‍ಯಾಗಿನ ನನ್ನ ಮನೆಗೆ ಓಡಿಬಂದಾಗ ಇನ್ನೂ ನೆಲದ

**ಉತ್ತರ ಕರ್ನಾಟಕದ ಕೊಡುಗೆ**

"ಧಾರವಾಡದಲ್ಲಿ ಸಾಧನಕೇರಿಯ ಬೇಂದ್ರೆ ಅವರ ಗೆಳೆಯರ ಗುಂಪಿನ ಚುರ್‌ಮುರಿ ಕ್ಲಬ್ ಸಾಹಿತ್ಯ ಕ್ರೀಡೆಗಳಿಂದ ಹಿಡಿದು ವಿದ್ಯಾವರ್ಧಕ ಸಂಘದ, ಅಟ್ಟದ ಮೇಲಿನ ಸಾಹಿತ್ಯ ಮಂಟಪದ ಮಿರ್ಚಿ, ಚುರಮುರಿ ಕ್ಲಬ್‌ವರೆಗೂ ನಡೆದುಕೊಂಡು ಬಂದು ಹರಟೆಯ ಪ್ರಕಾರಕ್ಕೆ ಹುರುಪು ತಂದುಕೊಟ್ಟಿದ್ದವು" ಎಂದು ಈಗಲೂ ಹಾಸ್ಯ ಬರಹ ಬರೆಯುತ್ತಿರುವ ಧಾರವಾಡದ ಎನ್ಕೆ ಅವರು ನೆನಪಿಸಿಕೊಳ್ಳುತ್ತಾರೆ.

ವರಕವಿ ಬೇಂದ್ರೆಯವರೆ ಸ್ವತಃ ನಗೆನಾಟಕ ಅಣಕವಾಡು ಹರಟೆಗಳನ್ನು ಬರೆದರು. ಶ್ರೀರಂಗರ ನಾಟಕಗಳು, ರಾಕು ಅವರ ಗಾಳಿಪಟ, ರಾ. ಯು. ಧಾರವಾಡಕರ, ಎಂ. ಎಸ್. ಸುಂಕಾಪುರ, ಶ್ರೀನಿವಾಸ ವೈದ್ಯ, ಎನ್ಕೆ, ಸರೋಜಿನಿ ಶಿಂತ್ರಿ... ಹೀಗೆ ಧಾರವಾಡದ ಮಣ್ಣಿನ, ಭಾಷೆಯ ಸತ್ವವನ್ನು ತುಂಬಿಕೊಂಡ ವಿಶಿಷ್ಟ ಹಾಸ್ಯ ಈ ಭಾಗದಿಂದ ಮೂಡಿಬಂದಿದ್ದಿದೆ. ೧೯೫೦ರಿಂದ 'ಕರ್ಮವೀರ' ಪತ್ರಿಕೆಯಲ್ಲಿ ಲಾಂಗೂಲಾಚಾರ್ಯರ ಹರಟೆಗಳು ಬರತೊಡಗಿ ಬುದ್ಧಿವಂತ ಬರಹಗಳೂ ಆಗಿದ್ದು ಮನರಂಜನೆಗೆ ಗ್ರಾಸ ಒದಗಿಸುವ ವಿಶಿಷ್ಟ ಹರಟೆಗಳ ಒಂದು ಅಧ್ಯಾಯ ಪ್ರಾರಂಭವಾಯ್ತು. ನಾಡಿಗೇರ, ನೆರಂಗ, ದ. ಬಾ. ಕುಲಕರ್ಣಿ, ಎಸ್. ಬಿ. ಮನಗೋಳಿ, ಹುಕ್ಕೇರಿ ಬಾಳಪ್ಪ.... ಇವರಿಗೆಲ್ಲರಿಗೂ ಹಿರಿಯರಾದ ಕೌಜಲಗಿ ಹನುಮಂತರಾಯರು ಹೀಗೆ ಧಾರವಾಡ-ಹುಬ್ಬಳ್ಳಿ ಪ್ರಾಂತ್ಯಗಳ ಸಾಹಿತಿಗಳು ವಿನೋದ ಸಾಹಿತ್ಯಕ್ಕೆ ಗಟ್ಟಿಯಾದ ಸ್ಥಾನ ಕಲ್ಪಿಸಲೂ ಕಾರಣರಾಗಿದ್ದಾರೆ.

ಉತ್ತರ ಕನ್ನಡಕ್ಕೆ ಬಂದರೆ (ಅದು ನನ್ನ ಜಿಲ್ಲೆ) ಚುಟುಕು ಬ್ರಹ್ಮ ದಿನಕರ ದೇಸಾಯಿ ಉತ್ತರ ಕನ್ನಡ ಜಿಲ್ಲೆಗೆ ಚುಟುಕು ಪಂಥಕ್ಕೆ ದಾರಿ ತೋರಿದವರು.

ಕೋತಿಗೂ ನಮಗೂ ಅಂತರವೊಂದೇ
ಕಪಿಗಿರುವುದು ಸೊಂಟಕ್ಕೆ ಬಾಲ
ಈ ಭೇದವೊಂದನು ಬದಿಗಿಟ್ಟರೆ
ಇಬ್ಬರ ವರ್ತನೆ ಸಮತೋಲ

ಈ ಮಾದರಿಯ ಚತುಷ್ಪದಿಗಳಲ್ಲಿ ಹರಿದ ದೇಸಾಯಿಯವರ ರಾಜಕೀಯ ವಿಡಂಬನೆ ಮುಂದೆ ಅನೇಕ ಹನಿಗವಿಗಳಿಗೆ ಸ್ಫೂರ್ತಿ ನೀಡಿದೆ. ಅವರು ಲೋಕಸಭೆಗೆ ಆರಿಸಿ ಹೋದಾಗ ಯಾರೋ ಲೋಕಸಭೆಗೆ ನೀವೇಕೆ ಬಂದಿರಿ ? ಎಂದಾಗ "ಯಾರಾದರೊಬ್ಬ ಲಫಂಗ ಇಲ್ಲಿ ಕುಳ್ಳಿರುವುದನ್ನು ತಡೆಗಟ್ಟುವುದಕ್ಕಾಗಿ" ಎಂದವರು ದಿನಕರ ದೇಸಾಯಿ. ಹಾಗೆಯೇ ವಿ. ಜಿ. ಭಟ್ಟರ ತುಂಟನ ಪದ್ಯಗಳು ಉತ್ತರ ಕನ್ನಡದ ಬೇಂದ್ರೆ ಎಂದೇ ಖ್ಯಾತರಾಗಿದ್ದ ಬಿ. ಎಚ್. ಶ್ರೀಧರ ಅವರ ವಿಡಂಬನೆಗಳು, ವಿನೋದ ಸಾಹಿತ್ಯವನ್ನೇ ನೆಚ್ಚಿಕೊಂಡು ಆ ಹಾಸ್ಯಕೃತಿಗಳ ಪ್ರಕಟಣೆಯ ಅಪರಾಧವನ್ನು ಧೈರ್ಯದಿಂದ ಮಾಡಿರುವ ಈ ಪ್ರಬಂಧ ಬರೆದಾಕೆ ಇವರೆಲ್ಲ ಉತ್ತರ ಕನ್ನಡದ ಕಾಡು ಜಿಲ್ಲೆಗೆ ಹಾಸ್ಯದ ಕನ್ನಡಿ ಹಿಡಿದವರು.

**ಹೈದ್ರಾಬಾದ್ ಕರ್ನಾಟಕ**

ಉತ್ತರ ಕರ್ನಾಟಕದ ಜತೆಗೇ ಸೇರಿಸಬಹುದಾದರೂ ಈ ಭಾಗದಲ್ಲಿ ೫೦ರ ದಶಕದಲ್ಲೇ ಹಾಸ್ಯದ ಕೃತಿ ರಚಿಸಿದ ರಾಘವೇಂದ್ರ ಕುಷ್ಟಗಿ, ಬತ್ತದೇಶ ಕಿಂಕರ, ರಾಮಚಂದ್ರರಾವ್ ಪಟವಾರಿ ಅಂಥವರಿದ್ದರು. ಇವರ ಸಂಪ್ರದಾಯವನ್ನು ನಂತರ ಮುಂದುವರಿಸಿರುವ ಪ್ರೊ|| ವಸಂತ ಕುಷ್ಟಗಿ, ಬೀದರಿನ ವಿ. ಎನ್. ಸಿಂಪಿ, ಗುರುರಾಜ ಕುಲಕರ್ಣಿ, ಜಾಲವಾದಿ, ಪೊಲೀಸ್ ಪಾಟೀಲ್, ಹುಲಗಬಾಳಿ, ಭೈರನಟ್ಟಿ, ಕೃಷ್ಣಮೂರ್ತಿ ಕಿತ್ತೂರ, ಅನಂತ ಕಲ್ಲೋಳ, ಪ್ರಾಣೇಶ ಗುಡಿ ಇವರನ್ನೆಲ್ಲ ಹೆಸರಿಸಲೇಬೇಕು.

**ಮಹಿಳಾ ಹಾಸ್ಯ ಸಾಹಿತ್ಯ**

ಕೊರವಂಜಿ ಕಟ್ಟಿದ ನಗೆ ಸೈನ್ಯದಲ್ಲಿ ಏಕೈಕ ಮಹಿಳಾ ಸೇನಾನಿ ಟಿ. ಸುನಂದಮ್ಮ. ಕನ್ನಡದ ಮಹಿಳೆಯರಲ್ಲಿ ಅತಿ ಹೆಚ್ಚಿನ ಸಂಖ್ಯೆಯ ಹಾಸ್ಯ ಬರಹಗಳನ್ನು ಬರೆದು ಹಾಸ್ಯಕ್ಕೊಬ್ಬಳೆ ಸುನಂದಮ್ಮ ಎಂದು ಖ್ಯಾತರಾಗಿದ್ದವರು. ಕೊರವಂಜಿಯ ಕಾಲದಲ್ಲಿ ಬರೆಯಲು ಪ್ರಾರಂಭಿಸಿ ಇವತ್ತಿಗೂ ಹಾಸ್ಯ ಲೇಖನ ಬರೆಯುವ ಉತ್ಸಾಹ ಇಟ್ಟುಕೊಂಡಿರುವ ಇವರು ಸೃಷ್ಟಿಸಿದ ಮೈಲಾರಯ್ಯ ಸರಸು ಕನ್ನಡ ನಾಡಿನ ಮಧ್ಯಮ ವರ್ಗದವರ ಪ್ರತಿನಿಧಿಯಾಗಿ ಕನ್ನಡಿಗರನ್ನು ನಗಿಸಿಯೇ ನಗಿಸಿದ್ದಾರೆ, ಗಣನೀಯ ಪ್ರಮಾಣದ ಹಾಸ್ಯ ಕೃತಿಗಳು ಹೊರಬಂದಿವೆ.

**ಎಂ. ಕೆ. ಇಂದಿರಾ :** ಮೂಲತಃ ಕಾದಂಬರಿಗಾರ್ತಿಯಾಗಿರುವ ಸರಳ ಸಂಪನ್ನ ಮನಸ್ಸಿನ ಇಂದಿರಾರ ನವಿರು ಹಾಸ್ಯ ಅವರ 'ನಗಬೇಕು' ಹಾಸ್ಯ ಲೇಖನ ಸಂಗ್ರಹದಲ್ಲಿ ಸಾಂದ್ರವಾಗಿ ಸಿಗುತ್ತದೆ. ಅನುಭವ ಶ್ರೀಮಂತಿಕೆಯಿಂದ ಕೂಡಿದ ಚುರುಕು ಹಾಸ್ಯ ಇಂದಿರಾರದ್ದು. ರಾ. ಶಿ. ಪುತ್ರಿಯರಾದ ಕಮಲಾ ರಾಮಸ್ವಾಮಿ, ಲೀಲಾ ಮಿರ್ಲೆ ಅವರದ್ದು ಸುಸಂಸ್ಕೃತ ಹಾಸ್ಯದ ಮಾದರಿಗಳಾಗಿ ಪ್ರಕಟವಾಗಿವೆಯಾದರೂ ತಮ್ಮ ಪಿತ್ರಾರ್ಜಿತ ಆಸ್ತಿಯಲ್ಲಿ ಇವರೀರ್ವರು ಇನ್ನೂ ಹೆಚ್ಚಿನ ಪ್ರಮಾಣದ ಹಾಸ್ಯ ಕೃಷಿ ಮಾಡಬಹುದಿತ್ತೆನ್ನಿಸುತ್ತದೆ. ಇವರುಗಳು ತೋರಿಸಿದ ದಾರಿಯಲ್ಲಿ ಮುಂದೆ ಹಾಸ್ಯ ಲೇಖಕಿಯರ ಗುಂಪೇ ಸೇರಿಕೊಂಡಿದ್ದು ಹಾಸ್ಯ ಸಾಹಿತ್ಯ ಲೇಖಕಿಯರನ್ನಾಕರ್ಷಿಸಿರುವುದಕ್ಕೆ ಸಾಕ್ಷಿ. ಕುಮುದಾ ಪುರುಷೋತ್ತಮ್, ನಂದಿನಿ ಕಾಪಿಡಿ, ಲಲಿತಾಂಬಾ ಚಂದ್ರಶೇಖರ್, ಲೀಲಾ ಶೇಖರ್, ಸುಧಾ ಸರನೋಬತ್, ಜಯಶ್ರೀ ದೇಶಪಾಂಡೆ, ಲಲಿತಾ ಸಿದ್ಧಬಸಯ್ಯ, ಟಿ. ಎಸ್. ಅಂಬುಜಾ, ಸತ್ಯವತಿ ಸುರತ್ಕಲ್, ಗುರುದೇವಿ, ಶೈಲಾ ಭಬ್ಬಿ, ಶೈಲಜಾ ಹಾಸನ್, ಪ್ರಭಾಮಣಿ ನಾಗರಾಜ್,.... ಇನ್ನೂ ಹೊಸಬರ ಸೇರ್ಪಡೆ ಆಗುತ್ತಲೇ ಇದ್ದು ಇವರಲ್ಲಿ ಎಷ್ಟು ಜನ ಹಾಸ್ಯಕ್ಕೇ ಬದ್ಧರಾಗಿ 'ನಿಲ್ಲು'ತ್ತಾರೆಂಬುದನ್ನು ಕಾಲವೇ ನಿರ್ಧರಿಸಬೇಕು.

**ಹಾಸ್ಯ ಪತ್ರಿಕೆಗಳು :** ಕೊರವಂಜಿ, ನಗುವ ನಂದಗಳ ನಂತರ ಜಿ. ನಾರಾಯಣರ ವಿನೋದವೊಂದೇ ದೀರ್ಘಕಾಲದಿಂದ ಹಾಸ್ಯ ಪತ್ರಿಕೆಯಾಗಿ ಹಾಸ್ಯ ಸೇವೆ ಸಲ್ಲಿಸಿದ್ದು, ಕೊರವಂಜಿಯ ಕಾಡಿನ ಪಯಣದ ನಂತರ ಅವರದ್ದೇ ಮುಂದರಿಕೆಯಾಗಿ 'ಅಪರಂಜಿ' ಪತ್ರಿಕೆ ಹುಟ್ಟಿ(೧೯೮೩) ರಾ. ಶಿ. ಅವರ ಮಗ ಅಪರಂಜಿ ಶಿವು ನೇತೃತ್ವದಲ್ಲಿ ಆರೋಗ್ಯಕರ ಹಾಸ್ಯದ ಹೂರಣವನ್ನು ಕನ್ನಡಿಗರಿಗೆ ನೀಡುತ್ತ ಬಂದಿದೆ. ಕಳೆದ ನಾಲ್ಕು ವರ್ಷಗಳಿಂದ ತುಮಕೂರಿನ 'ನಗೆ ಮುಗುಳು' ಈ ಶತಮಾನದ ಪ್ರಥಮ ಹಾಸ್ಯ ಪತ್ರಿಕೆ ವೈವಿಧ್ಯಮಯ ಹೂರಣದ ಸಮೃದ್ಧ ಹಾಸ್ಯ ಪತ್ರಿಕೆಯಾಗಿ ಬರುತ್ತಿದೆ. ಕನ್ನಡದ ಎಲ್ಲ ಪತ್ರಿಕೆಗಳೂ ಹಾಸ್ಯ ಬರಹಗಳಿಗೆ, ಲಲಿತ ಪ್ರಬಂಧಗಳಿಗೆ ಪ್ರತ್ಯೇಕ ಸ್ಥಾನ ಮೀಸಲಿಟ್ಟು ಅನೇಕ ಹಾಸ್ಯ ಲೇಖಕರನ್ನು, ಲೇಖಕಿಯರನ್ನು ಪರಿಚಯಿಸಿ ಬೆಳೆಸಿವೆ. ಎಲ್ಲರ ಪಟ್ಟಿಯನ್ನೂ 'ಸಂಪೂರ್ಣವಾಗಿ' ಒದಗಿಸುವುದು ಕಷ್ಟವಾದರೂ ಎಂ. ಎಸ್. ನರಸಿಂಹ ಮೂರ್ತಿ, ಎಂ. ಪಿ. ಮನೋಹರಚಂದ್ರ, ಎಸ್. ಎನ್. ಶಿವಸ್ವಾಮಿ, ಎಚ್. ಎಲ್. ಕೇಶವಮೂರ್ತಿ, ವೈ. ವಿ. ಗುಂಡೂರಾವ್, ಸೂರಿ ಹಾರ್ದಳ್ಳಿ, ತುರುವೇಕೆರೆ ಪ್ರಸಾದ್, ಅ. ರಾ. ಮಿತ್ರ, ಡಾ|| ಪಿ. ಎಸ್. ರಾಮಾನುಜಂ, ಇನ್ನೂ ಅನೇಕರು ಪತ್ರಿಕೆಗಳ ಮೂಲಕವೇ ಪ್ರಸಿದ್ಧ ಹಾಸ್ಯ ಲೇಖಕರಾಗಿ ರೂಪುಗೊಂಡಿದ್ದಾರೆ.

**ಬಾನುಲಿ ನಾಟಕಗಳು :** ಕರ್ನಾಟಕದ ಎಲ್ಲಾ ಬಾನುಲಿ ಕೇಂದ್ರಗಳೂ ಹಾಸ್ಯ ನಾಟಕ ಪ್ರಸಾರಕ್ಕೆ ಆದ್ಯತೆ ನೀಡಿ ೭೦-೮೦ರ ದಶಕದಲ್ಲಿ ಅತ್ಯುತ್ತಮ ನಗೆ ನಾಟಕಗಳು ಕರ್ನಾಟಕದಾದ್ಯಂತ ಪ್ರಸಾರವಾಗುತ್ತಿದ್ದವು. ಎ. ಎಸ್. ಮೂರ್ತಿ, ಯಮುನಾ ಮೂರ್ತಿ ಮುಂತಾದವರ ಕೊಡುಗೆ ಅಪಾರ.

**ಹನಿಗವನಗಳು :** ಪತ್ರಿಕೆಗಳ ಸಂಖ್ಯೆ ಹೆಚ್ಚುತ್ತಿರುವುದು ಕನ್ನಡ ಸಾಹಿತ್ಯದಲ್ಲಿ ಒಂದು ಪ್ರಸಾರ ಕ್ರಾಂತಿಯನ್ನು ತಂದಿರುವುದು ಈಚಿನ ದಿನಗಳ ಬೆಳವಣಿಗೆ. ಎಲ್ಲ ನಿಯತಕಾಲಿಕಗಳೂ ವಿಶೇಷಾಂಕಗಳನ್ನು ಹೊರ ತರುತ್ತವೆ. ಇವುಗಳ ಮೂಲಕ 'ಹನಿ ಗವನ' ಪ್ರಕಾರ ಈಚೆಗೆ ಸಮೃದ್ಧವಾಗಿ ಬೆಳೆದುಬಂದಿದೆ. ಕರಾವಳಿ ಪ್ರಾಂತ್ಯದ ಹಾಸ್ಯ ಕವಿ ಶ್ರೀ ಡುಂಡಿರಾಜ್ ಈ ಕ್ಷೇತ್ರದ ಅನಭಿಷಿಕ್ತ ಚುಟುಕು ಸಾಮ್ರಾಟ್ ಎನ್ನಿಸಿ ಅನೇಕ ಹೊಸ ಹನಿಗವನಗಳಿಗೆ ದಾರಿ ತೋರಿದ್ದಾರೆ.

**ಉಪಸಂಹಾರ :** ಈ ಶತಮಾನದ ಆದಿಯಲ್ಲಿ ಬರೆಯುತ್ತಿರುವ ಇಂದಿನ ಹಾಸ್ಯ ಬರಹಗಾರರಿಗೆ ವರ್ತಮಾನದ ಆವಿಷ್ಕಾರಗಳು ಕೆಲವು ಸವಾಲುಗಳನ್ನು ತಂದೊಡ್ಡಿವೆ. ಟಿ.ವಿ.ಯಂಥ ಜನಪ್ರಿಯ ಮಾಧ್ಯಮಗಳು ಸೃಷ್ಟಿಸುತ್ತಿರುವ ಹಾಸ್ಯ ಧಾರಾವಾಹಿ, ವಿದೇಶಿ ಚಾನೆಲ್‌ಗಳು, ಇಂಟರ್‌ನೆಟ್ ಜಾಲ, ವಿದೇಶಿ ಜೋಕುಗಳನ್ನಷ್ಟೆ ಆಸ್ವಾದಿಸಬಲ್ಲ ಯುವಜನಾಂಗ... ಇವೆಲ್ಲವುಗಳ ಆಕರ್ಷಣೆ ಒತ್ತಡಗಳಿಂದ ತಮ್ಮನ್ನು ನಿಯಂತ್ರಿಸಿಕೊಂಡು ಹಾಸ್ಯದ ಮೂಲ ಸೊಗಸು ಮರೆಯಾಗದ ರೀತಿಯಲ್ಲಿ ಜೀವನಪ್ರೀತಿಯನ್ನು ಸ್ಫುರಿಸುವ, ನಶಿಸಿಹೋಗುತ್ತಿರುವ ಜೀವನ ಮೌಲ್ಯಗಳ ಕಡೆಗೆ ತುಡಿಯುವ ಮಾನವೀಯ ಹಾಸ್ಯದ ನಿರ್ಮಾಣ ಆಗಲೆಂಬ ಆಶಯದಿಂದ ವಿರಮಿಸುತ್ತೇನೆ.

---


ಭುವನೇಶ್ವರಿ ಹೆಗಡೆ
ನಂ. ೧೦೧, ರತ್ನಾ ಅಪಾರ್ಟ್‌ಮೆಂಟ್ಸ್, ಕದ್ರಿ ಮಾರ್ಕೆಟ್.
ಮಂಗಳೂರು - ೫೭೫ ೦೦೧


---

*(ಜುಲೈ ೧೫, ೨೦೦೫ರಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದ ಹಾಸ್ಯಗೋಷ್ಠಿಯಲ್ಲಿ ಮಂಡಿಸಲಾದ ಪ್ರಬಂಧ)*

# ಪುರಾಣವನ್ನು ಇತಿಹಾಸಗೊಳಿಸುವ ಪ್ರಕ್ರಿಯೆ

ಇತ್ತೀಚೆಗೆ ಹಿಂದುತ್ವವಾದವನ್ನು ಎತ್ತಿಹಿಡಿಯುವ, ಇತಿಹಾಸದ ಗಂಧಗಾಳಿಯೂ ಇಲ್ಲದ ಡಾ॥ ನವರತ್ನ ರಾಜಾರಾಂ ಮತ್ತು ನಟವರ್ ಝೂರವರು ಆರ್ಯೀಕರಣದ ಪುರಾಣಗಳನ್ನು ಸೃಷ್ಟಿಸುತ್ತಿದ್ದಾರೆ.

ಅವರ ಪ್ರಕಾರ ಆರ್ಯರು ಹೊರಗಿನಿಂದ ಭಾರತಕ್ಕೆ ಬಂದವರಲ್ಲ. ಅವರು ಹರಪ್ಪ ಸಂಸ್ಕೃತಿಗಿಂತ ಹಿಂದಿನಿಂದಲೂ ಭಾರತದಲ್ಲೇ ಇದ್ದರು. ಹರಪ್ಪ ನಾಗರಿಕತೆಯಲ್ಲಿ ಕುದುರೆಯ ಮುದ್ರಿಕೆಗಳು ಯಥೇಚ್ಛವಾಗಿ ದೊರೆಯುತ್ತವೆ, ಋಗ್ವೇದ ಕಾಲದ ಸಮಾಜ ಸಮುದ್ರಯಾನೀ ಜೀವನ ನಡೆಸುತ್ತಿತ್ತು, ಸಿಂಧು ಲಿಪಿ ಸಂಸ್ಕೃತ ಭಾಷೆಯದು, ಇತ್ಯಾದಿ ವಾದಗಳನ್ನು ಅತ್ಯುಗ್ರವಾಗಿ ಮಂಡಿಸಿ ಹಿಂದಿನ ಇತಿಹಾಸಕಾರರನ್ನು ವಸಾಹತುವಾದಿಗಳು, ಎಡಪಂಥೀಯರು ಎಂದು ವ್ಯಂಗ್ಯವಾಗಿ ಟೀಕಿಸಿದ್ದಾರೆ.

ಗಣಿತ ಶಾಸ್ತ್ರಜ್ಞರೂ, ಗಣಕಯಂತ್ರ ತಜ್ಞರೂ ಆದ ನವರತ್ನ ರಾಜಾರಾಂ ಅವರು 'ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ' ಎಂಬ ತಮ್ಮ ಗ್ರಂಥದಲ್ಲಿ ಮಾಡಿದ ಒಂದು ಪವಾಡದ ಗುಟ್ಟು ಈಗ ಬಯಲಾಗಿದೆ. ಅದರಲ್ಲಿ ಅವರು ಸಿಂಧು ಕಣಿವೆಯ ಮುದ್ರಿಕೆಗಳಲ್ಲಿ ಅನ್ವೇಷಿಸಿದ ಕುದುರೆ ನಿಜವಾಗಿಯೂ ಕುದುರೆಯಾಗಿರದೆ ಅದೊಂದು 'ಪಿಲ್ಟ್‌ಡೌನ್ ಕುದುರೆ'ಯಾಗಿದೆ.

ಬಿ. ವಿ. ವೀರಭದ್ರಪ್ಪ

**ಪ್ರಾ**ಚೀನ ಕಾಲದಲ್ಲಿ ವೇದವ್ಯಾಸರು ಅಷ್ಟಾದಶ ಪುರಾಣಗಳನ್ನು ರಚಿಸಿದರು ಎಂದು ನಾವು ಇತಿಹಾಸದ ಪಾಠಗಳಲ್ಲಿ ಓದುತ್ತಿದ್ದೆವು. ಆದರೆ ಇಂದೂ ಸಹ ನಮ್ಮ ಕಣ್ಣೆದುರೇ ಪುರಾಣಗಳು ಸೃಷ್ಟಿಯಾಗುತ್ತಿವೆ, ಅಷ್ಟೇ ಅಲ್ಲ ಅವುಗಳನ್ನೇ ಇತಿಹಾಸವೆಂದು ಸಾರುವ ಪ್ರಕ್ರಿಯೆಯೂ ಸಹ ಪ್ರಾರಂಭವಾಗಿದೆ.

ಆಧುನಿಕ ಪುರಾಣಗಳ ಧ್ಯೇಯೋದ್ದೇಶಗಳನ್ನು ಹೀಗೆ ಗುರುತಿಸಬಹುದು. ಆರ್ಯರು ಭಾರತಕ್ಕೆ ವಲಸೆ ಬಂದವರಲ್ಲ, ಅವರು ಭಾರತದ ಮೂಲ ನಿವಾಸಿಗಳು ಎಂದು ಸಾಧಿಸುವುದು ಅವುಗಳಲ್ಲಿ ಮುಖ್ಯವಾದುದಾಗಿದೆ. ಭಾರತದಿಂದಲೇ ಆರ್ಯರು ಪಶ್ಚಿಮದ ಕಡೆ ವಲಸೆಹೋಗಿ ಭಿನ್ನ ಸಂಸ್ಕೃತಿಗಳ ಜನಕರಾದರು ಎಂಬುದನ್ನು ಅವರು ತಮ್ಮ ಪುರಾಣಗಳ ಮೂಲಕ ಸಾಧಿಸಹೊರಟಿದ್ದಾರೆ. ಒಂದು ಸುಳ್ಳನ್ನು ಮೇಲಿಂದ ಮೇಲೆ ಹೇಳುತ್ತಾ ಹೋದರೆ ಕೊನೆಗೆ ಅದು ಸತ್ಯವಾಗಿಬಿಡುತ್ತದೆ ಎಂಬ ಕಟ್ಟಾ ಆರ್ಯೋಕ್ತಿ (Goebbel's Theory)ಯಲ್ಲಿ ಅಚಲವಾದ ವಿಶ್ವಾಸವಿರುವ ಹಿಂದುತ್ವವಾದಿಗಳು ತಮ್ಮ ಭ್ರಮಾತ್ಮಕ ಕಲ್ಪನೆಗಳನ್ನೇ ಇತಿಹಾಸವನ್ನಾಗಿ ಪರಿವರ್ತಿಸುವ ಸಾಹಸಕ್ಕೆ ಕೈಹಾಕಿದ್ದಾರೆ.

ಆರ್ಯರು ವಾಯವ್ಯ ಮಾರ್ಗವಾಗಿ ಭಾರತಕ್ಕೆ ಪ್ರವೇಶಿಸುವ ಮೊದಲೇ ಹರಪ್ಪ ನಾಗರಿಕತೆಯ ಜನರು ನಗರವಾಸಿಗಳಾಗಿ ನೆಮ್ಮದಿಯ ಜೀವನ ನಡೆಸುತ್ತಿದ್ದರು. ಅನಾಗರಿಕ ಆಕ್ರಮಣಕಾರರಾದ ಆರ್ಯರು ಸಿಂಧು ಕಣಿವೆಯ ಮೂಲನಿವಾಸಿಗಳ ನಗರಗಳನ್ನು ಕೊಳ್ಳೆ ಹೊಡೆದು ಕಟ್ಟಡಗಳನ್ನು ಕೆಡಹಿದ್ದು ಇತಿಹಾಸದಲ್ಲಿ ದಾಖಲಾಗಿದೆ. ವಾಸ್ತುಶಾಸ್ತ್ರಗ್ರಂಥಗಳಲ್ಲಿ ಉಕ್ತವಾದ ವಾಸ್ತುಪುರುಷ ಮಂಡಲದ ಚಿತ್ರ ಗಮನಾರ್ಹವಾಗಿದೆ. ವಾಸ್ತು ಪುರುಷ ಅಲ್ಲಿ ಮುಖ ಕೆಳಗೆ ಮಾಡಿ, ಕೈಕಾಲು ಮುದುಡಿಕೊಂಡು ಬೋರಲು ಬಿದ್ದಿದ್ದಾನೆ. ಅವನ ಮೇಲೆ ಕುಳಿತಿರುವ ಇಂದ್ರ, ಅಗ್ನಿ, ಯಮ, ಮಿತ್ರ, ವರುಣ ಇತ್ಯಾದಿ ದೇವತೆಗಳು ಹರಪ್ಪ ನಾಗರಿಕತೆಯನ್ನು ನಾಶಗೊಳಿಸಿದವರಾಗಿದ್ದಾರೆ. ಋಗ್ವೇದದ ವಾಸ್ತೋಷ್ಪತಿ ಸೂಕ್ತ ಇದನ್ನು ದಾಖಲಿಸಿದೆ. ಆದರೆ ಇಂದು ಅದೇ ಆರ್ಯರ ಉತ್ತರಾಧಿಕಾರಿಗಳಾದ ವಾಸ್ತು ಪಂಡಿತರು ಕಟ್ಟಡಗಳ ನಿರ್ಮಾಣದ ಆರಂಭದಲ್ಲಿ ವಾಸ್ತು ಪುರುಷನ ಪೂಜೆ ಮಾಡುತ್ತಾರೆ. ಏಕೆಂದರೆ ತಾವು ಕಟ್ಟಡಗಳನ್ನು ಕೆಡಹಬಲ್ಲವರಾಗಿದ್ದರೇ ಹೊರತು ಹೊಸ ಕಟ್ಟಡಗಳನ್ನು ನಿರ್ಮಾಣ ಮಾಡುವ ಕಲೆ ಅವರಿಗೆ ಕರಗತವಾಗಿರಲಿಲ್ಲ. ತಾವು ಗೆದ್ದ ಹರಪ್ಪ ನಗರದ ವಾಸ್ತು ಶಿಲ್ಪಿಗಳನ್ನು ತಮ್ಮ ಅಧೀನ ಮಾಡಿಕೊಂಡು ಅವರಿಂದ ವಾಸ್ತು ವಿದ್ಯೆಯನ್ನು ಕಲಿಯುವ ಹಂಬಲವುಳ್ಳವರಾಗಿದ್ದರು.

ಗುರುವನ್ನು ಗೌರವದಿಂದ ಕಾಣುತ್ತಾ, ಅವನ ಸೇವೆಯನ್ನು ಮಾಡುತ್ತಾ ವಿದ್ಯೆಯನ್ನು ಕಲಿಯಬೇಕೆಂದು ಹೇಳುವ ಅವರೇ ವಾಸ್ತು ಪುರುಷನನ್ನು ತಮ್ಮ ಅಡಿಯಾಳನ್ನಾಗಿ ಮಾಡಿಕೊಂಡು ಅವನನ್ನು ಹಿಂಸಿಸುತ್ತಾಹೋದುದರಿಂದ ಅವರಿಗೆ ವಾಸ್ತು ವಿದ್ಯೆ ಕರಗತವಾಗಲೇ ಇಲ್ಲ. ಹರಪ್ಪ ನಗರಗಳಿಗೆ ಸರಿಸಮಾನವಾದ ನಗರಗಳು ಮತ್ತೆ ತಲೆ ಎತ್ತಬೇಕಾದರೆ ಮೌರ್ಯರ ಕಾಲದವರೆಗೂ ಕಾಯಬೇಕಾಯಿತು. ಇದು ಇತಿಹಾಸದಲ್ಲಿ ದಾಖಲಾಗಿದೆ. ಇದಕ್ಕೆ ಉತ್ಖನನ ಶಾಸ್ತ್ರ ಮತ್ತು ಪುರಾತತ್ವ ಶಾಸ್ತ್ರಗಳ ಆಧಾರಗಳಿವೆ.

ಇತ್ತೀಚೆಗೆ ಹಿಂದುತ್ವವಾದವನ್ನು ಎತ್ತಿಹಿಡಿಯುವ, ಇತಿಹಾಸದ ಗಂಧಗಾಳಿಯೂ ಇಲ್ಲದ ಡಾ॥ ನವರತ್ನ ರಾಜಾರಾಂ ಮತ್ತು ನಟವರ್ ಝೂರವರು ಆರ್ಯೀಕರಣದ ಪುರಾಣಗಳನ್ನು ಸೃಷ್ಟಿಸುತ್ತಿದ್ದಾರೆ.

ಅವರ ಪ್ರಕಾರ ಆರ್ಯರು ಹೊರಗಿನಿಂದ ಭಾರತಕ್ಕೆ ಬಂದವರಲ್ಲ. ಅವರು ಹರಪ್ಪ ಸಂಸ್ಕೃತಿಗಿಂತ ಹಿಂದಿನಿಂದಲೂ ಭಾರತದಲ್ಲೇ ಇದ್ದರು. ಹರಪ್ಪ ನಾಗರಿಕತೆಯಲ್ಲಿ ಕುದುರೆಯ ಮುದ್ರಿಕೆಗಳು ಯಥೇಚ್ಛವಾಗಿ ದೊರೆಯುತ್ತವೆ, ಋಗ್ವೇದ ಕಾಲದ ಸಮಾಜ ಸಮುದ್ರಯಾನೀ ಜೀವನ ನಡೆಸುತ್ತಿತ್ತು, ಸಿಂಧು ಲಿಪಿ ಸಂಸ್ಕೃತ ಭಾಷೆಯದು, ಇತ್ಯಾದಿ ವಾದಗಳನ್ನು ಅತ್ಯುಗ್ರವಾಗಿ ಮಂಡಿಸಿ ಹಿಂದಿನ ಇತಿಹಾಸಕಾರರನ್ನು ವಸಾಹತುವಾದಿಗಳು, ಎಡಪಂಥೀಯರು ಎಂದು ವ್ಯಂಗ್ಯವಾಗಿ ಟೀಕಿಸಿದ್ದಾರೆ. ರಾಜಾರಾಂ ಅವರ ಅದ್ಭುತ ಸಂಶೋಧನೆ ಎಂದರೆ ಹರಪ್ಪದ ವೃಷಭ ಮುದ್ರಿಕೆಯನ್ನು ಗಣಕಯಂತ್ರದ ನೆರವಿನಿಂದ ಕುದುರೆಯನ್ನಾಗಿ ಪರಿವರ್ತಿಸಿ ವಿಶ್ವದ ಇತಿಹಾಸಕಾರರ ಕಣ್ಣಿಗೆ ಸ್ವಲ್ಪ ಕಾಲ ಮಣ್ಣೆರಚುವಲ್ಲಿ ಯಶಸ್ವಿಯಾಗಿದ್ದುದಾಗಿದೆ. ಆದರೆ ಅವರ ಕುತಂತ್ರಗಳೆಲ್ಲಾ ಈಗ ಬಯಲಾಗಿ ಅವರು ಅಪಹಾಸ್ಯಕ್ಕೀಡಾಗಿದ್ದಾರೆ.

ಗಣಿತ ಶಾಸ್ತ್ರಜ್ಞರೂ, ಗಣಕಯಂತ್ರ ತಜ್ಞರೂ ಆದ ನವರತ್ನ ರಾಜಾರಾಂ ಅವರು 'ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ' ಎಂಬ ತಮ್ಮ ಗ್ರಂಥದಲ್ಲಿ ಮಾಡಿದ ಒಂದು ಪವಾಡದ ಗುಟ್ಟು ಈಗ ಬಯಲಾಗಿದೆ. ಅದರಲ್ಲಿ ಅವರು ಸಿಂಧು ಕಣಿವೆಯ ಮುದ್ರಿಕೆಗಳಲ್ಲಿ ಅನ್ವೇಷಿಸಿದ ಕುದುರೆ ನಿಜವಾಗಿಯೂ ಕುದುರೆಯಾಗಿರದೆ ಅದೊಂದು 'ಪಿಲ್ಟ್‌ಡೌನ್ ಕುದುರೆ'ಯಾಗಿದೆ.

ಬಹು ಹಿಂದೆ ಸುಮಾರು ೧೯೦೮-೧೨ರ ನಡುವೆ ಬ್ರಿಟನ್ನಿನಲ್ಲಿ-ಸಸೆಕ್ಸ್‌ನ ಒಂದು ಸಾಧಾರಣ ಪ್ರದೇಶವಾದ ಪಿಲ್ಟ್‌ಡೌನ್‌ನಲ್ಲಿ ಒಂದು ಪವಾಡ ನಡೆದಿತ್ತು! ಅಲ್ಲಿ ಮಾನವ ಮತ್ತು ಮಂಗನ ನಡುವಿನ ಕೊಂಡಿ (Missing Link) ಸಿಕ್ಕಿತ್ತು. ಮಾನವ ತಲೆಬುರುಡೆ, ಆದರೆ ಮಂಗನ ದವಡೆಹಲ್ಲು ಇರುವ ಒಂದು ಪಳೆಯುಳಿಕೆ ೪೦ ವರ್ಷಗಳ ಕಾಲ ವಿಶ್ವದಾದ್ಯಂತ ಜೀವ ವಿಜ್ಞಾನಿಗಳನ್ನು ದಿಗಿಲುಗೊಳಿಸಿತ್ತು. ಕೊನೆಯಲ್ಲಿ ಒಬ್ಬ ಸಂಶೋಧಕನಿಗೆ ಸಂಶಯ ಬಂದು ರೇಡಿಯೋ ಕಾರ್ಬನ್ ವಿಧಾನದಿಂದ ಪಳೆಯುಳಿಕೆಯ ವಯೋಮಾನವನ್ನು ನಿರ್ಧರಿಸಿದಾಗ ಅದು ೧೩ನೇ ಶತಮಾನದ

ಮಾನವ ತಲೆಬುರುಡೆ ಎಂದು ಪತ್ತೆಯಾಯಿತು. ಡಾಸನ್ ಎಂಬ ರಾಜಾರಾಂ ವಂಶದ ಪೂರ್ವಜ (!) ಮಾನವ ತಲೆಬುರುಡೆಯ ಹಲ್ಲನ್ನೆಲ್ಲಾ ಅರದಿಂದ ಉಜ್ಜಿ, ಉಜ್ಜಿ ಮಂಗನ ಹಲ್ಲಿನಂತೆ ಮಾಡಿದ್ದ.

ಅಂಥದೇ ಪ್ರಕರಣ ಈಗ ಇನ್ನೊಮ್ಮೆ ಪುನರಾವರ್ತನೆಗೊಂಡಿದೆ. ಹಾರ್ವರ್ಡ್ ವಿಶ್ವವಿದ್ಯಾಲಯದ ಭಾರತ ಶಾಸ್ತ್ರಜ್ಞ ಮೈಕೇಲ್ ವಿಟ್ಜಲ್ (Michael Witzel) ಮತ್ತು ತೌಲನಿಕ ಇತಿಹಾಸಕಾರ ಸ್ಟೀವ್ ಫಾರ್ಮರ್ (Steve Farmer) ಜೊತೆಗೂಡಿ ರಾಜಾರಾಂ ಕುದುರೆ ಮುದ್ರೆ ಎಂದು ತೋರಿಸುತ್ತಿರುವುದು ವಾಸ್ತವಿಕವಾಗಿ ಕಂಪ್ಯೂಟರ್ ಸಹಾಯದಿಂದ ವಿರೂಪಗೊಳಿಸಿದ ಒಂದು ಭಗ್ನವಾದ 'ಏಕಶೃಂಗಿ ವೃಷಭ' (Unicorn Bull), ಅದೊಂದು ಹರಪ್ಪದ ಪುರಾಣ ಕಲ್ಪಿತ ಪ್ರಾಣಿಯ ಮುದ್ರಿಕೆ ಎಂದು ತೋರಿಸಿಕೊಟ್ಟರು. ಅದನ್ನು ಇಂದು ಭಾರತ ಶಾಸ್ತ್ರಜ್ಞರು 'ಸಿಂಧು ಕಣಿವೆಯ ಪಿಲ್ಟ್ಡೌನ್ ಕುದುರೆ' ಎಂದು ಕರೆದು ತಮಾಷೆ ಮಾಡುವಂತಾಗಿದೆ.

ರಾಜಾರಾಂ ಅವರು ವೃಷಭವನ್ನು ಕುದುರೆಯನ್ನಾಗಿ ಮಾಡುವ ಉದ್ದೇಶ ಸ್ಪಷ್ಟವಾಗಿದೆ. ಹರಪ್ಪ ಉತ್ಖನನಗಳಲ್ಲಿ ದೊರೆತ ಪಳೆಯುಳಿಕೆಗಳಿಂದ ಅಲ್ಲಿ ಕುದುರೆ ಇದ್ದ ಗುರುತುಗಳಾವುವೂ ಇಲ್ಲ. ಆರ್ಯರು ಹೊರಗಿನಿಂದ ಭಾರತಕ್ಕೆ ಪ್ರವೇಶಿಸಿದಾಗ ಅವರೊಡನೆ ಕುದುರೆಯೂ ಪ್ರವೇಶವಾಯಿತು ಎಂಬುದು ಐತಿಹಾಸಿಕ ಸತ್ಯ. ಆದರೆ ಹರಪ್ಪ ಸಂಸ್ಕೃತಿ ಆರ್ಯರ ವೈದಿಕ ಸಂಸ್ಕೃತಿಗಿಂತ ಭಿನ್ನವಾದುದಲ್ಲ ಎಂದು ಸಾಧಿಸಬೇಕಾದರೆ ಹರಪ್ಪ ಸಂಸ್ಕೃತಿಯಲ್ಲೂ ಕುದುರೆಗಳಿದ್ದುವು ಎಂಬುದನ್ನು ತೋರಿಸಬೇಕಾಗಿತ್ತು. ಅದಕ್ಕಾಗಿ ಹರಪ್ಪ ಸಂಸ್ಕೃತಿಯ ಏಕಶೃಂಗಿ ವೃಷಭವನ್ನೇ ಗಣಕಯಂತ್ರದ ನೆರವಿನಿಂದ ಕುದುರೆಯನ್ನಾಗಿ ಮಾಡಲಾಗಿತ್ತು. ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ ಅವರು ತಮ್ಮ ಇತ್ತೀಚಿನ 'ಇತಿಹಾಸದ ರಾಜಕೀಯ' ಎಂಬ ಕೃತಿಯಲ್ಲಿ (ನವಕರ್ನಾಟಕ ಪ್ರಕಾಶನ, ಬೆಂಗಳೂರು) ರಾಜಾರಾಂ ಮತ್ತು ಝಾರವರ ಹುಂಬುತನವನ್ನು ಬಟಾ-ಬಯಲು ಮಾಡಿದ್ದಾರೆ.

ಹರಪ್ಪ ಲಿಪಿಯನ್ನು ಓದಿ ಅದರಲ್ಲಿ ತಮ್ಮದೇ ಅರ್ಥಗಳನ್ನು ಕಲ್ಪಿಸಿದ ರಾಜಾರಾಂ ಆ ಲಿಪಿ ಮುಂದೇಕೆ ಬಳಕೆಯಾಗಲಿಲ್ಲ, ವೇದಗಳನ್ನು ಹರಪ್ಪ ಲಿಪಿಯಲ್ಲಿ ಏಕೆ ಬರೆದಿಡಲಿಲ್ಲ ಎಂಬುದಕ್ಕೆ ಎಲ್ಲೂ ಉತ್ತರ ಕೊಟ್ಟಿಲ್ಲ. ಅದಕ್ಕಿಂತ ಪೂರ್ಣ ಭಿನ್ನವಾದ ದೇವನಾಗರಿ ಲಿಪಿ ಏಕೆ ಮೂಡಿಬಂತು ಎಂಬ ಪ್ರಶ್ನೆಗೆ ಎಲ್ಲೂ ಉತ್ತರ ನೀಡಿಲ್ಲ. ಅವರು ಹರಪ್ಪ ಲಿಪಿಯಲ್ಲಿ 'ಓಂ' ಎಂಬ ಮುದ್ರಿಕೆ ಇರುವುದನ್ನೂ ಕಂಡುಹಿಡಿದಿದ್ದಾರೆ!

ವೇದಗಳಲ್ಲಿ ಉಕ್ತವಾದ ನದಿಗಳೆಲ್ಲ ಭಾರತದಲ್ಲೇ ಇರುವುದರಿಂದ ಆರ್ಯರು ಹೊರಗಿನಿಂದ ಬಂದವರಲ್ಲ, ಅವರು ಭಾರತದಲ್ಲೇ ಉಗಮವಾದವರು ಎಂಬುದು ಅವರ ಇನ್ನೊಂದು ವಾದ. ಹಾಗಾದರೆ ಋಗ್ವೇದದಲ್ಲಿ ಭಾರತದ ವಾಯವ್ಯ ದಿಕ್ಕಿಗಿತ್ತೆಂದು ತಿಳಿದುಬರುವ ಸರಸ್ವತಿ ನದಿಯ ಉಲ್ಲೇಖವಿರುವಂತೆ ಗಂಗಾ, ಯಮುನಾ ನದಿಗಳ ಉಲ್ಲೇಖವೇಕಿಲ್ಲ ಎಂಬುದಕ್ಕೆ ಅಲ್ಲಿ ಉತ್ತರವಿಲ್ಲ. ಕಾಲಾನುಕ್ರಮವಾಗಿ ಆರ್ಯರು ವಾಯವ್ಯ ದಿಕ್ಕಿನಿಂದ ಇಂದಿನ ಪಂಜಾಬಿನತ್ತ ಪ್ರವೇಶಿಸಿದರು. ಅವರು ನಿಧಾನವಾಗಿ ಪೂರ್ವ ಮತ್ತು ಮಧ್ಯ ಭಾರತದತ್ತ ಚಲಿಸಿದರು. ಆದ್ದರಿಂದ ಅಲ್ಲಿ ಗಂಗಾ, ಯಮುನೆಯರ ಪ್ರಸ್ತಾಪ ಇರಲು ಸಾಧ್ಯವಿಲ್ಲ ಎಂಬುದನ್ನು ಮರೆಯುತ್ತಾರೆ.

ನಮ್ಮ ಈಗಿನ ಮಾನವ ಸಂಪನ್ಮೂಲ ಸಚಿವರಾದ ಮುರಳಿ ಮನೋಹರ ಜೋಶಿ ಅವರು ಋಗ್ವೇದ ಕಾಲದ ಆರ್ಯರು ಗೋಮಾಂಸ ಭಕ್ಷಕರಾಗಿದ್ದರು ಎಂಬ ಐತಿಹಾಸಿಕ ಸತ್ಯವನ್ನು ಒಪ್ಪಲು ತಯಾರಿಲ್ಲ, ಅದನ್ನು ಋಗ್ವೇದದಿಂದ ತೆಗೆದುಹಾಕಬೇಕೆಂಬುದು ಅವರ ವಾದ. ಹಾಗಾದರೆ ಋಗ್ವೇದವನ್ನು ಏಕೆ ಭಾರತದಿಂದ ಬಹಿಷ್ಕರಿಸಬಾರದು? ಆರ್ಯರ ಗೋಮಾಂಸ ಭಕ್ಷಣೆಗೆ ಋಗ್ವೇದ ಮಾತ್ರ ಸಾಕ್ಷಿಯಾಗಿಲ್ಲ. ಶುಕ್ಲ ಯಜುರ್ವೇದ, ಶತಪಥ ಬ್ರಾಹ್ಮಣ, ಗೃಹ್ಯ ಸೂತ್ರಗಳು, ಮನುಧರ್ಮಶಾಸ್ತ್ರ, ರಾಮಾಯಣ, ಮಹಾಭಾರತಗಳಲ್ಲಿ ಆರ್ಯೋತ್ತಮರು ಗೋಮಾಂಸ ಸೇವಿಸುವ ಪ್ರಸಂಗಗಳು ಹೇರಳವಾಗಿವೆ. ಆ ಪ್ರಾಚೀನ ಸಂಸ್ಕೃತ ಸಾಹಿತ್ಯವನ್ನೆಲ್ಲಾ ಜೋಶಿಯವರು ಭಾರತದಿಂದ ಉಚ್ಚಾಟಿಸಲು ಏಕೆ ಮುಂದಾಗಬಾರದು? ಹಾಗೆ ಮಾಡದೆ ಕೇವಲ ಪ್ರೊ|| ಆರ್. ಎಸ್. ಶರ್ಮರು ರಚಿಸಿರುವ ಒಂದು ಐತಿಹಾಸಿಕ ಪಠ್ಯಪುಸ್ತಕದಿಂದ ಅಂತಹ ಭಾಗಗಳನ್ನು ತೆಗೆದುಹಾಕಿದರೆ ಸಾಕೆ? ವಿದ್ಯಾರ್ಥಿಗಳ ಭಾವನೆಗಳ ಪಾವಿತ್ರ್ಯವನ್ನು ಕಾಪಾಡಲು ಅದು ಖಂಡಿತ ಸಾಲದು. ಅದಕ್ಕಾಗಿ ಹೊಸ ಕಂತೆ ಪುರಾಣಗಳನ್ನೇ ರಚಿಸಬೇಕು, ಅವುಗಳನ್ನೇ ಐತಿಹಾಸಿಕ ದಾಖಲೆಗಳೆಂದು ಪರಿಗಣಿಸಬೇಕು ಎಂಬುದು ಅವರ ಇಂಗಿತ.



ಮರಳು ಸುಡುತ್ತಿದ್ದವು. ನನಗೋ ಅವತ್ತು ಪಾಡ್ಯ, ಮೊದಲ ಹಲಗೆಯ ದನಿ ನನ್ನದೇ ಆಗಬೇಕು ಎಂಬೋ ಉಮೇದು. ನಾನು ಓಡಿ ಬಂದು ನಿಲುವಿನ ಮೇಲಿನ ಹಲಗೆಯ ಎತ್ತಿಕೊಂಡು ಗೆಣ್ಣು ಬಿದಿರ ಕಟ್ಟಿ ಗೀಟುಗಳಿಗಾಗಿ ತಡಕಾಡಿ, ಎಲ್ಲೂ ಸಿಕ್ಕದೇ ನನ್ನ ಚಿನ್ನಿದಾಂಡಿನ ಚಿನ್ನಿಯನ್ನೇ ಹಿಡಿದು ಅಮ್ಮನ ಕಡ್ಡಿ ಬರಲಿನಿಂದ ಕಡ್ಡಿ ಎಳೆದುಕೊಂಡು ಹಲಗೆ ಬಡಿದೆ. ಹಲಗೆ ಕಾಸಿರಲಿಲ್ಲಾಂತ ನಾದ ಬರುತ್ತಲೇ ಇರಲಿಲ್ಲ. ಅದನ್ನ ಕಾವಿಗೆ ಹಿಡಿದು ಒಂದು ಬಾರಿ 'ಢಂಗ್' ಎಂದು ನಾದ ಪರೀಕ್ಷಿಸುವ ಹೊತ್ತಿಗೆ ಮುಗಿಲಿನಾಗ ಮೊದಲ ನಕ್ಷತ್ರ ಮೂಡಿಬಿಟ್ಟಿತ್ತು. ಅದನ್ನ ತಾನೇ ಮೊದಲು ನೋಡಿದ್ದು ಎಂದು ಸಾರುವಂತೆ ನಮ್ಮ ಕೇರಿಯ ಶ್ರೀಪತಿ ಮನೆ ಜಗುಲಿಯಿಂದ ಹಲಗೆ ಹೊಡಕೊಳ್ಳತೊಡಗಿತು. ನಾನು ಶಪಿಸಿಕೊಳ್ಳುತ್ತಲೇ ಕಾಮನ ಮಂಟಪಕ್ಕೆ ಓಡಿದೆ. ವಿಠೋಬನ ಗುಡಿಯ ಪಕ್ಕದ ಆ ಹಾಳು ಮಂಟಪ ಈ ಪಕ್ಕದಲ್ಲೇ ಸುಣ್ಣ-ಬಣ್ಣ, ಸಾರಣೆ-ಕಾರಣೆ ಕಂಡು ಮದುವೆ ಮನೆ ಚಪ್ಪರದಂತೆ ಬೀಗುತ್ತಿತ್ತು. ಅಲ್ಲಿಂದ ಶುರುವಾಗುವುದು ಕಾಮನ ಸುಡಲು ಕಟ್ಟಿಗೆ ಕಲೆ ಹಾಕೋದು. ಕೇರಿಯ ದೊಡ್ಡ ಹುಡುಗರು ಗೋಣಚೀಲ ಹಿಡಿದು ಮನೆಮನೆಯ ಮುಂದೆ ''ಕಾಮಣ್ಣನ ಮಕ್ಕಳು ಕಳ್ಳ ಸೂಳೆ ಮಕ್ಕಳು.... ಲಬೋ ಲಬೋ...'' ಎಂದು ಬಾಯಿ ಬಡಿದುಕೊಂಡು ಐದೇ ಕಟ್ಟಿಗೆ, ಆರೇ ಕುಳ್ಳು ಎಂದು ಆಗ್ರಹಿಸಿ ಪಡೆಯುತ್ತಿದ್ದರೆ, ನಾನು ನನ್ನ ಎಳೆಯರ ತಂಡ ಸಂತೆಮಾಳದಲ್ಲಿ ನಿಂತ ಗಾಡಿಗಳಿಂದ ಕಣಗ ಕದಿಯಲು, ಬೇರೆ ಮನೆಯ ಬಾಗಿಲಿನ ಕಾಲ್ಲೊರೆಸು, ಮೂಲೆಯಲ್ಲಿನ ಕಸಬರಿಗೆ, ಕಣ್ಣಿಗೆ ಕಾಣುವ ಗೋಣೀ ತಟ್ಟು, ಎಲ್ಲೋ ಬಿದ್ದ ಕೊರಡು, ಯಾರೋ ನೆಟ್ಟ ಗೂಟ ಕದ್ದು ತಂದು ಕಾಮನ ಮಂಟಪದ ಪರದೆಯ ಹಿಂದೆ ಕಲೆ ಹಾಕತೊಡಗಿದ್ವಿ. ನಾವು ಯಾರೆಲ್ಲ ಮನೆಯಲ್ಲಿ ಅಷ್ಟೇ ಏಕೆ, ನಮ್ಮದೇ ಮನೆಗಳಲ್ಲಿ ಕಟ್ಟಿಗೆ ಕದ್ದರೂ ಕೇರಿಯಲ್ಲಿ ಕದೀಲಾರದ ಮನೆ ಅಂದ್ರೆ ಅದು ಅಂಬಕ್ಕನದು. ಅಂಬಕ್ಕನ ಅಜ್ಜಿ ಚನ್ನಜ್ಜಿ ಅಂದರೆ ನಮಗೆಲ್ಲಾ ಒಂಥರಾ ಭಯ. ಆ ಬಿಳಿ ತಲೆಗೂದಲ ಹಣ್ಣುಮುದುಕಿ ನಮ್ಮ ಈ ಕಳ್ಳ ಬೆಕ್ಕಿನ ಹೊಂಚಿಗೆ ತಕ್ಷಣ ಗುರ್‍ತು ಹಿಡಿದು...

''ಲೇ, ಕ್ರಿಷ್ಣಾಚಾರಿ ಮಗ ಹಯವದನ ಅಲ್ವೇನೊ? ಬಾರೋ ಇಲ್ಲಿ, ಏನು ಕಟ್ಟಿಗೆ ಕದಿಯಾಕ ಬಂದೀಯಾ? ಎಲ್ಲಿ ಕರ್‍ಕಂಡ್ಬಾ ನಿನ್ನಪ್ಪನ್ನ, ಅವನ್ನೇ ಕೇಳ್ತೀನಿ ಇವ ಯಾವ ಕಾಡಿಂದ ತಂದು ಒಡ್ಯಾನ ಅಂತ. ಕದೀಯಾಕ ಬಂದಾವ ಮಂಗ್ಯಾಗಳು...'' ಎಂದು ಗದರಿದರೆ ದ್ವಾರಕ ಮತ್ತು ನಾನು ಕಣ್ಣು ಮೂಗಿನಿಂದ ಅಷ್ಟೇಕೆ ಚಡ್ಡಿಯಿಂದಲೂ ತೊಟ್ಟಿಕ್ಕುತ್ತಾ ಓಡಿಬಿಡುತ್ತಿದ್ವಿ.

ಆದರೆ ಅಂಬಕ್ಕ ಅವಳ ಅಜ್ಜಿಯ ಹಾಗಲ್ಲ. ಅದೇನೋ ಸೆಳೆತ ನಮಗೆಲ್ಲಾ ಅಂಬಕ್ಕ ಅಂದ್ರೆ. ನಾಲ್ಕನೇ ಇಯತ್ತೆಯ ತನಕ ಕೇರ್‍ಯಾಗಿನ ಶಾಲೆಗೆ ಹಚ್ಚಿ ಓದಿದ ನಮಗೆಲ್ಲಾ ಮಿಡ್ಲ್ ಸ್ಕೂಲಿಗೆ ಎರಡು ಮೈಲಿ ದೂರದ ಅಮರಾವತಿಗೇ ಹೋಗ್ಬೇಕಿತ್ತು. ಆಗೆಲ್ಲ ನಮ್ಮ ವಾರಿಗೆಯವರಿಗೆ ಅಂಬಕ್ಕನೇ ಗುರು. ಮಾರ್ಗದರ್ಶಿ. ಆಕೆಯೇ ನಮ್ಮನ್ನೆಲ್ಲ ಶಾಲೆಗೆ ಕರ್‍ಕೊಂಡು ಹೋಗಿ, ಮಧ್ಯಾಹ್ನ ಬುತ್ತಿ ತಿನ್ನಿಸಿ, ಸಂಜೆ ಬರೋವಾಗ ''ಕಾಲು ನೋಯ್ತದೆ ಅಂಬಕ್ಕ...'' ಎಂದು ಅತ್ತರೆ ಕಾಲು ನೀವಿ ಮಂತ್ರ ಹಾಕಿದಂತೆ ಪಿಟಿಪಿಟಿಸಿ ಕತೆ ಹೇಳುತ್ತಾ ಕೇರಿ ತಲುಪಿಸುತ್ತಿದ್ದ ಏಕೈಕ ಬಂಧು. ಆಕೆ ಆಗ ಮೆಟ್ರಿಕ್. ಆಕೆಯೊಂದಿಗೆ ನಮ್ ಕೇರ್‍ಯಾಗಿನ ಶ್ರೀಪತಿ, ಶ್ರೀಧರ, ಲಿಂಗಾಯ್ತರ ಕೇರಿ ಬಸಣ್ಣ, ಕೆಳಗೇರಿ ಚಂದ್ರಪ್ಪ ಎಲ್ಲರೂ ಮೆಟ್ರಿಕ್ ಕಟ್ಟಿದ್ದರು. ನಮ್ಮ ಹಿಂಡು ಕಟಗೊಂಡು ಅಂಬಕ್ಕ ಬರ್‍ತಿದ್ದರೆ ಆ ಕೆಳಗೇರಿ ಉಜ್ಜಿನಪ್ಪನ ಮಗ ಚಂದ್ರಪ್ಪ ಆಕಿ ಹಿಂದೇನೇ ಬರ್‍ತಾ ಮಾತಾಡ್ತ ಇರ್‍ತಿದ್ದ. ಶ್ರೀಪತಿ, ಶ್ರೀಧರ ಮಾತ್ರ ಮಾತಾಡ್ತಿದ್ದ ಅವರನ್ನು ನೋಡ್ತಾ ತೀರಾ ಹಿಂದೆ ಏನೇನೋ ಮಾತಾಡಿಕೊಂಡು ಕಿಸಿಕಿಸಿ ನಗ್ತಿದ್ದರು.

ನಮ್ಮ ದ್ವಾರಕ ''ಅಂಬಕ್ಕ, ಅವರೆಲ್ಲ ಹಂಗ್ಯಾಕ ನಗ್ತಾರ?'' ಅಂತ ಕೇಳಿದರೆ ''ಅದೆಲ್ಲ ನಿನಗ್ಯಾಕೋ ಖೋಡಿ. ಅವು ಮಂಗ್ಯಾಗಳು, ಕಿಸಿಯೋದು ಅವಕ್ಕ ಸಹಜ. ನೀನೂ ಸಣ್ಣ ಮಂಗ್ಯಾನಂಗ ಆಡಬ್ಯಾಡ ಗೊತ್ತಾತಿಲ್ಲೋ...'' ಎಂದು ಮೃದುವಾಗಿ ಗದರುತ್ತಿದ್ದಳು. ನಮಗೆಲ್ಲ ಅಂಬಕ್ಕನ ಹಿಂದೆ ಬರೋ ಚಂದ್ರಪ್ಪನ್ನ ನೋಡಿ, ಅವರು ನಗ್ತಾರ ಅಂತ ಅನ್ನಿಸಿ ಆತನ ಮ್ಯಾಲೆ ಒಂಥರಾ ಸಿಟ್ಟು!

ಆ ವರ್ಷಾ ಮಳೀನಾ ಇರ್‍ಲಿಲ್ಲ. ಹಂಗಾಗೇ ನಾವು ಬರ್‍ತಿದ್ದ ಅಮರಾವತೀ ದಾರೀಲಿ ಬರೀ ಬಿಸಿಲಿನ ಬಯಲೋ ಬಯಲು. ಒಂದೆರಡು ಹೊಲದಾಗ ಮಾತ್ರ ಒಂದಷ್ಟು ಹಸಿರು ಹುಲ್ಲು ಬಣವೆ ಇರ್‍ತಿತ್ತು – ಪಂಪ್ಸೆಟ್ಟಿಂದು. ಉಳಿಕೀದು ನಮ್ಮ ಆಟಕ್ಕೆ, ಓಟಕ್ಕೆ ನೆಗೆದಾಟಕ್ಕೆ ಸವಾಲಾಗುವಷ್ಟು ಬಯಾಲಾ. ಚಂದ್ರಪ್ಪ ಯಾವಾಗ್ಲೂ ಮಳಿ, ಹೊಲ, ಬೇಸಾಯ, ಸಾವಯವ ಅಂತೆಲ್ಲ ಮಾತಾಡ್ತಿದ್ದ. ಅಂಬಕ್ಕನೂ ನಮಗೆ ತಿಳಿಯದ ಮಾತುಗಳಿಂದ ಅವನ ಜೋಡಿ ಮಾತಾಡೋಳು. ಅವತ್ತೊಂದು ದಿನ ಸಂಜೆ ನಾನು ದ್ವಾರಕ ಕೆಳಗೇರಿಗೆ ಚಂದ್ರಪ್ಪನ ಹತ್ತಿರ ನೋಟ್ಸ್ ತಗೊಂಬಾ ಅಂದ ಅಂಬಕ್ಕನ ಅಪ್ಪಣೆ ತಗೊಂಡು ಹೋಗಿದ್ವಿ. ಚಂದ್ರಪ್ಪ ಪುಸ್ತಕ ಹಿಡಿದುಕೊಂಡು ಕೇರಿಯ ನಡೂಕ ಇರೋ ಬಾವಿ ಕಟ್ಟೆಮ್ಯಾಲೆ ಕೂತು ಓದುತ್ತಿದ್ದ. ದ್ವಾರಕ ಸ್ವಲ್ಪ ಬಿಗುವಿನಿಂದಲೇ ಹೋಗಿ ''ಚಂದ್ರಪ್ಪ ಅಂಬಕ್ಕಗ ಅದ್ಯಾವ್ದೋ ನೋಟ್ಸ್ ಕೊಡಬೇಕಂತ. ಆಕಿ ನಾಳೆ ಶಾಲ್ಯಾಗ ಕೊಡ್ತಾಳಂತ'' ಎಂದು ಹೆಚ್ಚು ಕಮ್ಮಿ ದಬಾಯಿಸಿದ. ನಾನು ಕೆಳಗೇರಿಯನ್ನ ಮೊದಲ ಬಾರಿ ಆಮೂಲಾಗ್ರ ನೋಡುವವನಂತೆ ಹಟ್ಟಿಗಳ ಮೇಲೆಲ್ಲಾ ಕಣ್ಣಾಡಿಸಿ, ಕಾಲಬಳಿ ತಿಪ್ಪೆ ಹೆಕ್ಕುತ್ತಿದ್ದ ಕೋಳಿ ಹಿಂಡನ್ನು ನೋಡಿ ಹೆದರಿ ಬಾವಿಯ ಹತ್ತಿರ ಓಡಿಹೋದೆ. ನನಗಿಂತ ಎತ್ತರದ ಕಟ್ಟೆಯನ್ನು ಎಗರೆಗರಿ ಬಗ್ಗಿ ನೋಡಿದಾಗ – ಅದರ ಆಳದಲ್ಲಿ ಎಲ್ಲೋ ಒಂಚೂರು ನೀರು ಇದ್ದಂತೆ ಕಂಡು – ''ದ್ವಾರಕಾ ಈ ಬಾವ್ಯಾಗ ನೀರೇ ಇಲ್ಲ ಕಾಣ್ತದಲೇ...'' ಎಂದು ಗಾಬರಿಯಲ್ಲೇ ಕೂಗಿದೆ. ನನ್ನ ಕೂಗಿಗೆ ಉತ್ತರವೇನೋ ಎಂಬಂತೆ ಕೇರಿಯ ನಾಲ್ಕಾರು ಮಂದಿ ಹಾರೆ, ಸಲಿಕೆ, ಪುಟ್ಟ ಮಂಕರಿ ಹೊತ್ತು ಬಾವಿ ಹತ್ತಿರ ಬಂದರು. ಒಬ್ಬಾತ ಸೊಂಟಕ್ಕೆ ಹಗ್ಗ ಕಟಗೊಂಡು ಒಳಗೆ ಇಳಿದು ಹಾರೆ ಸಲಿಕೆಯಿಂದ ಬತ್ತಿದ ಬಾವಿಯನ್ನ ಅಗೆಯತೊಡಗಿದ. ಉಳಿದವರು ರಾಟೆಯಿಂದ ಮಂಕರಿ ಇಳಿಸಿ ಮಣ್ಣ ಎಳೆದೂ ಎಳೆದೂ ಪಕ್ಕದಲ್ಲಿ ಗುಡ್ಡೆ ಹಾಕಿದರು. ಅದೆಷ್ಟೋ ಹೊತ್ತು. ಆಗಲೇ ಕತ್ತಲಾಗಿತ್ತು. ಚಂದ್ರಪ್ಪ, ಉಜ್ಜಿನಪ್ಪ ಎಲ್ಲಾ ಸೇರಿ ಮಕರಿ ಹೊತ್ತಾರೆ ಸೋತಂತಿದ್ದರು. ಆದರೂ ಬಾವಿಯಲ್ಲಿ ನೀರಿನ ಸೆಲೆ ಕಾಣುತ್ತಿಲ್ಲ ಎಂದು ಕೇರ್‍ಯಾಗಿನ ಹೆಂಗಸರೆಲ್ಲ ಕಳವಳಿಸಿ ಮಾತಾಡಿಕೊಳ್ತಿದ್ದರು. ''ಆ ಕೆಳಗೇರ್‍ಯಾಗ ಬಾವಿ ಬತ್ತಿಹೋಗ್ಯದ. ಅದರಾಗ ಹನಿ ಅಂದ್ರ ಒಂದು ಹನಿ ನೀರಿಲ್ಲ. ಅದೆಷ್ಟು ಅಗಿದು ಮಣ್ಣು ಎತ್ತಿದ್ರೂ ನೀರು ಬರ್‍ಲೇ ಇಲ್ಲ'' ಎಂದು ನಾನು, ದ್ವಾರಕ ಹೇಳಿದ ಸುದ್ದಿಯೇ ಗುಡೀಕೇರಿಯಿಂದ ಎಲ್ಲ ಮ್ಯಾಗಳ ಗೇರಿಗಳಲ್ಲಿ ಹಬ್ಬಿ ನಾವು ನಿಂತಲ್ಲಿ, ಹೋದಲ್ಲಿ ಅದೇ ಚರ್ಚೆ ನಡೆಯತೊಡಗಿತ್ತು.

ದಿನಗಳೆಂದಂತೆ ಚರ್ಚೆಯ ಮಾತುಗಳು, ಚರ್ಚಿಸುವ ಮುಖಗಳು ಮತ್ತಷ್ಟು ಗಂಭೀರವಾದಂತೆ ಏನೋ ಅಪಾಯ ಕಾದಿದೆ ಎಂದು ದಿಗಿಲಿನಲ್ಲಿದ್ದಂತೆ ಭಾಸವಾಗುತ್ತಿತ್ತು. ನಾನು, ದ್ವಾರಕ, ವೆಂಕೋಬ ಎಲ್ಲಾ ಸಂಜೆಗಳಲ್ಲಿ ಅವರಿವರ ನಡುವೆ ನಿಂತು ಮಾತುಗಳನ್ನು ಕೇಳಿಸಿಕೊಂಡು ಬಂದು ಒಟ್ಟುಗೂಡಿಸಿ ಕೇರಿಯಲ್ಲಿ ನಡಿತಿರೋದೇನು ಅಂತ ಅರ್ಥೈಸುವ ಪ್ರಯತ್ನ ನಡೆಸಿದ್ದಿವಿ. ಹಾಗಾಗಿ ನಮ್ಮ ತಂಡದ ನಡುವೆ ಯಾರ್‍ಯಾರದ್ದೋ ಮಾತುಗಳು ಅರ್ಥವಾಗದೆಯೂ ಯಥಾವತ್ ದಾಖಲಾಗತೊಡಗಿದವು. ಅಂದು ಬೆಳಗ್ಗೆ

ಮ್ಯಾಗಳಗೇರಿಗಳಲ್ಲಿ ಮೈಮೇಲೆ ಹಾವು ಬಿದ್ದವರಂತೆ ಉದ್ವಿಗ್ನತೆ ಆವರಿಸಿಕೊಂಡಿತು.

''ಏನ್ರೀ ಆಚಾರ್ರ.... ಎಂಥಾ ಅನಾಹುತ ಆತು ಅಂತೀನಿ. ಅಲ್ಲಾರೀ ಆ ಕೆಳಗೇರಿಯ ಮಂದಿ ಹಿಂಗಾ ಮಾಡಬಹುದು ಅಂತ ನನಗೊಂದು ಅನುಮಾನ ಇದ್ದಾ ಇತ್ತು. ಅಲ್ಲ ಅದೆಷ್ಟು ಕೊಬ್ಬು ಬಂದದರೀ ಅವರಿಗೆ. ರಾತ್ರಿ ಅರಳೀ ಕಟ್ಟಿ ಬಾವ್ಯಾಗ ನೀರನ್ನ ತಾವ ಸೇದ್ಕೊಂಡಾರಂತಲ್ರೀ.... ಮೈಲಿಗೆ ಮಾಡಿಬಿಟ್ಟವು ಮುಂಡೇವು.... ಇನ್ನೆಲ್ಲ ನಾಶನ ಆಗಿ ಹೋಗ್ತದಲ್ರಿ ಆಚಾರ್ರ....'' ಎಂದು ಒಂದು ಧ್ವನಿ ಹಲುಬುತ್ತಿತ್ತು.

''ಹೂಂನ್ರೀ.... ನನಗೂ ಸುದ್ದಿ ಕೇಳಿ ಮೈಮೇಲಿನ ಖಬರು ಕೆಟ್ಟಂಗಾಯ್ತು ನೋಡ್ರಿ. ಅಲ್ಲಿ ನಮಗೂ ಗೊತ್ತದ ಅವರ ಕೇರ್‍ಯಾಗಿನ ಬಾವಿ ಬತ್ತದಾಂತ. ಅವರಿಗೆ ಕುಡಿಯಾಕ ನೀರು ಬೇಕಿತ್ತಂದ್ರ ನಮ್ಮ ಕೇರ್‍ಯಾಗೆ ಕೇಳಬೇಕಿತ್ತು. ಅದಬಿಟ್ಟು ಅವರಾ ಅರಳೀ ಕಟ್ಟಿ ಬಾವ್ಯಾಗ ನೀರು ಸೇದುದೂ ಅಂದ್ರ... ಇದೆಲ್ಲಾ ಅತೀ ಆತು ಬಿಡ್ರೀ... ನಮ್ಮ ಸನಾತನ ವಿಚಾರಕ್ಕೂ ಅಪಮಾನ ಆಯ್ತು...'' ಎಂದು ಧ್ವನಿಯೊಂದು ಆತಂಕವನ್ನು ದೃಢಪಡಿಸಿತ್ತು.

''ಕೇಳದು ಅಂದ್ರೇನು ಮಾರಾಯ್ರ.... ನಮ್ ಹುಡುಗನ ಆ ಉಜ್ಜಿನಪ್ಪನ ಮಗ ಚಂದ್ರ ಕೇಳಿದ್ನಂತ, ನಿಮ್ ಕೇರ್‍ಯಾಗ ಮನಿಮನಿಗೊಂದು ಬಾವಿ ಅದಾವ. ನಮಗ ಆ ಅರಳಿಕಟ್ಟಿ ಬಾವಿ ಬಿಟ್ಟುಕೊಡ್ರೀ ಅಂತ! ಎಂಥ ಉದ್ಧಟತನ ಅಂತೀನಿ. ಬಾವ್ಯಾಗಿನ ನೀರು ಕೇಳಿದ್ರ ಹೆಂಗೋ ಕೊಡಬಹುದ..... ಆದ್ರ ಹಾಲು ಕೊಡ್ತಿ ಅಂತ ಕೆಚ್ಚಲನ್ನ ಕೋಯ್ಕೊಂಡ್ರ ಹೆಂಗ್ರೀ... ಇವರನ್ನ ಹಿಂಗಾ ಬಿಟ್ಟರ....'' ಎಂದು ಮಗದೊಂದು ಧ್ವನಿ ಮಧ್ಯ ಪ್ರವೇಶಿಸಿ ಆದ ಘಟನೆ ಪೂರ್ವಯೋಜಿತ ಎಂದು ವಿವರಿಸುತ್ತಿತ್ತು.

ಇದೇ ಮಾತುಗಳು ತರಾವರಿ ರೂಪದಲ್ಲಿ, ಬೇರೆ ಬೇರೆ ತಾತ್ವಿಕ ಚರ್ಚೆಗಳಲ್ಲಿ ಮ್ಯಾಗಳಗೇರಿಯ ಬಹುತೇಕ ಕೇರಿಗಳಲ್ಲಿ ಆಡಿಕೊಂಡವು, ಕೇಳಿಸಿಕೊಂಡವು. ಇದಕ್ಕೇನಾದರೂ ಪ್ರತಿಯಾಗಿ ಮಾಡಬೇಕೆಂದು ಆವೇಶಗಳೂ, ಅವರಿಗೆ ಊರಿಂದ ಕಟ್ಟು ಹಾಕಬೇಕೆಂದು ಹೊಸ ನಿರ್ಣಯಗಳೂ ಆಗಿ ಕೂತವು. ಕಾಮನ ಹುಣ್ಣಿಮೆ ಇನ್ನೇನು ಸಮೀಪವಿತ್ತು. ನಮಗೆ ಈ ಮಾತುಗಳ ನಡುವೆ ನಮ್ಮ ಕಟ್ಟೆಗೆ ಸಂಗ್ರಹ, ಹೊರಕೇರಿಯಿಂದ ಮಾಡಿಸಿತಂದ ಕಾಮಣ್ಣನ ಮೇಣದ ಮೂರ್ತಿಯ ಬೆರಗು, ಮಠದ ಕೇರಿಯಲ್ಲಿ ಕೂರಿಸುವ ಕಾಮಣ್ಣನ ಜೋಲ್ಯಾಗ ಪೋಲಿ ಚಿತ್ರ ಅಂಟಿಸಿರ್ತಾರಂತೆ ಎಂಬ ವರ್ತಮಾನ ಎಲ್ಲಾ ಸೇರಿ ಆ ಹೊತ್ತಿನ ವಿದ್ಯಮಾನ ಅನ್ನೋದು ಯಾವ್ಯಾವುದೋ ಸಂಗತಿಗಳಿಂದ ತುಂಬಿಹೋದಂತೆ ಗಲಿಬಿಲಿ! ಆದರೆ ಈ ವರ್ತಮಾನದ ಮಾತುಗಳು, ಅಸಮಾಧಾನದ ಹೊಗೆ ಮತ್ತೆ ನಮ್ಮನ್ನು ಸೆಳೆದಿತ್ತು ಅಂಬಕ್ಕನಿಂದಾಗಿ.

ಏಕಾಏಕಿ ಕೇರಿಯೊಳಗೆ ಬಿರುಗಾಳಿಯಂತೆ ಸುದ್ದಿಯೊಂದು ಸುಳಿದಾಡಿತು. ಕೆಳಗೇರಿ ಮಂದಿ ಮುಟ್ಟಿದರು ಅಂತ ಅರಳೀ ಕಟ್ಟೆ ಬಾವಿಗೆ ಪಂಚಗವ್ಯ ಹಾಕಿ ಶುದ್ಧ ಮಾಡಿ ಬೇರಿ ಕಟ್ಟಿದ್ದರೆ, ಇತ್ತ ಕೆಳಗೇರಿ ಮಂದಿಗೆ ಚನ್ನಜ್ಜಿಯ ಮೊಮ್ಮಗಳು – ತಂದೆ ತಾಯಿ ಇಲ್ಲದ ಆ ಅನಾಥ ಹುಡುಗಿ – ಅಂಬುಜಾ ತನ್ನ ಮನಿ ಬಾವಿಯಿಂದ ನೀರು ಸೇದಿ ಸೇದಿ ಕೊಡ್ತದಾಳ ಅನ್ನೋದು. ಅಷ್ಟೇ ಅಲ್ಲದೇ ಆ ಕೆಳಗೇರಿ ಮಂದೀನೇ ಆಕೆಯ ಹಿತ್ತಲದಾಗ ನಿಂತು, ಪಡಸಾಲೆಗೆಲ್ಲ ಬಂದು ನೀರು ತುಂಬಿಸ್ಕೊಂಡು ಹೋಗ್ತಾರಂತೆ ಅನ್ನೋದು ಅದನ್ನ ಗಹನ ಗಂಭೀರ ಸುದ್ದಿಯಾಗಿಸಿತ್ತು. ಮತ್ತೆ ಕೇರಿಗಳು ಮಾತಾಡಿದವು, ಬೀದಿಗಳು ಚರ್ಚಿಸಿದವು, ಗುಡಿಯ ಅಂಗಳಗಳು ಘರ್ಜಿಸಿದವು. ಮಠದ ಗಂಟೆಗಳು, ಜಾಗಟೆಗಳು ಜಿರುಸಾಗಿ ಬಾರಿಸಿಕೊಂಡವು.

ಅವತ್ತು ಸಂಜೆ ವಿಠೋಬನ ಗುಡಿಯೊಳಗೆ ಸೇರಿದ ಪಂಚಾಯ್ತಿಯಲ್ಲಿ ಅಂಬಕ್ಕ ಮುಖಾಮುಖಿ ಮಾತಾಡಿಬಿಟ್ಟಳು!

''ನಿಮಗೆಲ್ಲಾ ಏನಾಗದ ಅಂತ ಅರ್ಥ ಆಗವಲ್ದು. ಅಲ್ರೀ ಇಷ್ಟು ಮಂದಿ ಸೇರಿ ಆ ಕೆಳಗೇರಿಗೆ ನೀರು ಯಾಕ ಬಿಟ್ಟೆ ಅಂತ ಪಂಚಾಯ್ತಿ ಮಾಡ್ತದೀರಲ್ಲಾ, ಆ ಮಂದಿ ಕುಡಿಯಾಕ ನೀರಿಲ್ದೆ ಒದ್ದಾಡ್ತದೆ ಅಂತ ಕಾಳಜಿ ಇಲ್ಲೇನು? ಇವತ್ತು ಬರಗಾಲದಾಗ ಮೊದ್ಲು ಅವರ ಬಾವಿ ಒಣಗ್ಯದ... ನಾಳೆ ನಿಮ್ದೂ ಒಣಗಿದ್ರ ನಿಮ್ ಮಡೀ ನೀರಿಗೆ ಏನು ಮಾಡ್ತೀರಿ.... ಯಾವ ನೀರನ್ನ ಮಡೀ ಮಾಡ್ತೀರಿ? ಅವರು ಮುಟ್ಟಿದರು ಅಂತ ಕುಡಿಯೋ ನೀರಿಗೆ ಬಿಂದಿಗೆ ತುಂಬಾ ಪಂಚಗವ್ಯ ಹಾಕಿ ಶುದ್ಧ ಮಾಡಿದ್ರಲ್ಲ... ಅದನ್ನ ಯಾರಾದ್ರೂ ತಿಳಿದೋರು ಶುದ್ಧಿ ಅಂತಾರೇನು? ನೀವು ಮನುಷ್ಯರಾ ಆದ್ರ ಅವರಿಗೆ ಮರುಗಿ ಮನೆಮನೆಯಿಂದ ಸೇದಿ ನೀರು ಕೊಡ್ತಿದ್ರಿ. ಏನು ಮಾಡೋದು ನಮ್ ಮಂದಿ ಬಾವ್ಯಾಗೇ ನೀರಿಲ್ಲ! ಅಂತನೇ ನಾನು ನಮ್ಮ ಮನೀಯಿಂದ ನೀರು ಕೊಟ್ಟೇನಿ. ಅದರಾಗ ತಪ್ಪೇನದಾ? ನೀವೇನಾದ್ರೂ ಪಂಚಾಯ್ತಿ ಮಾಡ್ಕೊಳ್ರೀ.... ನಾನಂತೂ ನಮ್ಮ ಬಾವ್ಯಾಗಿನ

ನೀರು ಕೊಡುವಾಕೀನ. ಅದು ನಮ್ಮಜ್ಜ ತೋಡಿಸಿದ್ದ ಬಾವಿ... ನಿಮ್ ಪಂಚಾಯ್ತಿದಲ್ಲ...''

ಅಂಬಕ್ಕ ಪಂಚಾಯ್ತಿಯಿಂದ ದುರ್ದಾನ ತೆಗೆದುಕೊಂಡಂತೆ ಹೋದರೆ, ನಾವೆಲ್ಲಾ ಆಕೆಯ ಹಿಂದೇ – ಧೈರ್ಯ ಮಾಡಿ – ಹೋಗಿಬಿಟ್ಟೆವ್ವಿ. ಆಕಿ ಎಂದಿನಂತೇ ಬಾವ್ಯಾಗಿನ ನೀರು ಸೇದಿ ಹಿತ್ತಲಾಗ ಸಾಲು ನಿಂತ ಕುಡಿಯೋ ಕೊಡಪಾನಗಳನ್ನು ತುಂಬಿಸುತ್ತಿದ್ದರೆ, ಕೆಳಗೇರಿಯ ಎಲ್ಲ ಹೆಂಗಸರೂ ಅವರವರ ಕಣ್ಣಿಂದ, ಮಾತಿಂದ ಆಕೆಯ ಬಗ್ಗೆ ಪ್ರೀತಿಯನ್ನೇ ಸೂಸುತ್ತಿದ್ದರು. ನಮಗೂ ಅವರೆಲ್ಲ ಅಂಬಕ್ಕನ ಹೊಗಳೋದಕ್ಕೆ ಹೆಮ್ಮೆ. ಆದರೆ ಈ ಗರ್ವ ನಮ್ಮಲ್ಲಿ ಹೆಚ್ಚು ಹೊತ್ತಿರಲಿಲ್ಲ. ಅಂಬಕ್ಕ ಪಂಚಾಯ್ತಿಯಲ್ಲಿ ಜಾಡಿಸಿ ಕೇರಿಗಳ ನಿಷ್ಠುರ ಕಟ್ಟಿಕೊಂಡಿದ್ದಳು. ಕೆಳಗೇರಿ ಪ್ರೀತಿಸಿದರೆ, ಮ್ಯಾಗಳ ಕೇರಿಗಳೆಲ್ಲ ಆಕೆಯ ಕುರಿತು ಕಟಿಕಟಿಸಿ ಕುದಿಯತೊಡಗಿದ್ವು.

''ಅಲ್ಲೋ, ಆ ಅಂಬುಜಾ ನಮ್ಮನ್ನ ನೀರಿಲ್ಲದ ಮಂದಿ ಅಂತಾಳಲ್ಲ ಮಾರಾಯ ? ಈ ನೀರು ಅಂದ್ರೇನು ಅಂತ ಆಕಿಗೆ ಗೊತ್ತದೇನು ?! ಬರೀ ಬಾವ್ಯಾಗಿಂದ ಕೊಡಪಾನ ಕೆಳಗೇರಿಗೆ ಹರಿಸ್ದಾಂಗೆ ಅಲ್ಲ ನೀರಿನ ಸಮಾಚಾರ ಅಂದ್ರ....''

''ಹೂನಪ್ಪ... ಆ ಪೋರಿಗೆ ನೀರು ಅಂದ್ರ ನನ್ನದಾ ಅಂತ ಗರ್ವ ಬಂದದ. ಏನು ಆಕಿ ಹತ್ರ ಮಾತ್ರ ನೀರು ತುಂಬದೇನು ? ನಮ್ಮ ತುಂಬಿದ ನೀರನ್ನು ಆಕೀಗಿಷ್ಟು ಕೊಟ್ಟರ ಪೊಗರು ಇಳೀತದ... ಏನಂತೀ ?''

''ಹೌದೌದು... ಆಕಿಗೆ ಮಠದ ಮಾತು, ಗುಡೀ ಪಂಚಾಯ್ತಿ ಅಪ್ಪಣೆ ಅಂದ್ರ ಉದಾಸೀನ. ಏನು ಧಿಮಾಕದಾ ನೋಡು ಆಕಿಗೆ. ಏನು ಮಾನವೀಯತೆ, ಅಂತಃಕರಣ ಎಲ್ಲಾ ಈಕೀನ ಗುತ್ತಿಗೆ ತಗೊಂಡಾಳೇನು ?''

''ಅಯ್ಯ... ಅದು ಅಂತಃಕರಣ ಅಲ್ರೋ ಮಾರಾಯ್ರ. ಅದು ಬಾಯಾರಿಕೆ, ದಾಹ, ಗೊತ್ತದೇನು ? ಆಕಿಗೆ ಆ ಕೆಳಗೇರಿ ಚಂದ್ರನ ಜೊತೆ ದೋಸ್ತಿ ಅದಂತ. ಅದು ಈಕಿ ಬಾಯಾರಿಕೆ ಆರಿಸಿರ್ಬೇಕು. ಅದಕ್ಕ ಆಕಿ ಆತನ ಕೇರಿಗೇ ಆಸರಿಗೆ ಕೊಡ್ಹಕ್ಕತ್ಯಾಳ ಗೊತ್ತಾತ ? ಆಕಿ ಬಾಯಾರಿಕೆಗೆ ನಾವಾ ಕೊಟ್ಟ ಆಗ ಎಲ್ಲ ಬರೋಬರಿ ಧರ್ಮ, ಕರ್ಮ ಅರ್ಥ ಆಗ್ತದ ನೋಡು...''

ಇಂತಹುದೇ ಮಾತುಗಳು ನಾಲ್ಕು ಪಡ್ಡೇ ಯುವಕರು ನಿಂತಲ್ಲಿ ಮೂರು ನಡು ಹರೆಯದವರು ಕೂತಲ್ಲಿ ಕೇಳಿಬಂದವು. ಮಾತುಗಳ ತೀವ್ರತೆ ಜಾಸ್ತಿಯಾಗತೊಡಗಿ ನಮಗೆಲ್ಲ ಅಂಬಕ್ಕನಿಗೆ ಇವರೇನೋ ಮಾಡ್ತಾರ ಅಂತ ಭಯ ಹುಟ್ಟಿಕೊಂಡಿತು. ಈ ನಡುವೆ ಯಾರ್ಯಾರೋ ಹಿರಿಯರು ಅಂಬಕ್ಕನ ಮನೆಗೆ ಹೋಗಿ ಆಕೀ ಹತ್ರ ಬೈಸಿಕೊಂಡು ಬಂದದ್ದೂ ಸೇರಿ ಆಕೆಯ ಮೇಲೆ ಹತ್ತಾರು ಕಣ್ಣುಗಳು ಕೆಂಪಗೆ ನೋಡುತ್ತಿದ್ದವು.

ಅವತ್ತು ಹುಣ್ಣಿವೆ ;

ಕಾಮಣ್ಣನ್ನ ಸುಡೋದು ಸಾಮಾನ್ಯವಾಗಿ ರಾತ್ರಿ ಎರಡನೇ ಜಾವದಲ್ಲಿ. ನಾನು ಮತ್ತು ವೆಂಕೋಬ ಪ್ರತಿವರ್ಷ ಕಾಮಣ್ಣನ ಸುಡೋದು ನೋಡೋಣ ಅಂತ ಅಂದುಕೊಂಡ್ರೆ ಅದೇನೋ ಆ ಹೊತ್ತಿಗೆ ಎಲ್ಲೋ ಮಲಗಿಬಿಟ್ಟಿರ್ತಿದ್ವಿ. ಎದ್ದಾಗ ಸುಟ್ಟಬೂದಿ, ಹೋಳೀ ಹಬ್ಬಕ್ಕೆ ಕಲಸಿ ಕಾಯಿಸಿದ ಬಣ್ಣ ಮಾತ್ರ ಕಣ್ಣಿಗೆ ಬೀಳೋದು. ಈ ಬಾರಿ ಸುಡೋದು ನೋಡದೇ ಮಲಗಬಾರ್ದು ಅಂತ ನಾವೆಲ್ಲ ತೀರ್ಮಾನಿಸಿ ಹಲಗೆ ಹೊಡೆಯುತ್ತಾ ಮಂಟಪದೆದುರು ಕುಣಿಯುತ್ತಿದ್ವಿ. ರಾತ್ರಿ ಆಗಲೇ ಸುಮಾರು ಹೊತ್ತು ಆಗಿರಬೇಕು. ನಮಗೆ ಆಗಲೇ ಕಣ್ಣೆಳೆದು ಆಕಳಿಕೆ. ಕೇರಿಯ ಹುಡುಗರ ಹಲಗೆ ಮೇಲಾಟ ನೋಡಲೆಂದು ಮಾಳಿಗೆಯಲ್ಲಿ ಜಮಾಯಿಸಿದ್ದ ಹೆಂಗಸರೆಲ್ಲಾ ಆಗಲೇ ಜಾಗ ಖಾಲಿ ಮಾಡಿದ್ದರು. ನಾವೂ ಹಲಗೆ ಬಡಿದೂ ಬಡಿದೂ ಮಟ್ಟುಗಳು ಮರೆತುಹೋಗಿ, ಕೈಗಳು ಸೋತು, ಸದ್ದು ನಿಲ್ಲಿಸಿದಾಗ ಮಠದ ಕೇರಿಯಿಂದ ಬೇರೆ ಬೇರೆ ಕೇರಿಗಳ ಹಾದುಕೊಂಡು ಗುಡೀಕೇರಿ ಕಾಮನ ಮಂಟಪಕ್ಕೆ ಬಲಿಷ್ಠ ಹುಡುಗರ ತಂಡವೊಂದು ಬಂದು ಮ್ಯಾಳ ಹುಟ್ಟಿಕೊಂಡಿತು. ಅದೆಷ್ಟೇ ಹೊತ್ತಾದರೂ ಅವರು ಕೈಸೋಲದೇ ಮಟ್ಟುಗಳನ್ನು ಬದಲಾಯಿಸಿ, ಪೆಟ್ಟುಗಳು ನಾದವನ್ನು ದೊಡ್ಡದಾಗಿ ಹೊಮ್ಮಿಸತೊಡಗಿದವು. ನೋಡುತ್ತಿದ್ದಂತೇ ತಂಡ ಎರಡಾಗಿ ಒಂದು ಅಂಬಕ್ಕನ ಮನೆಯ ಮುಂದೆ ಹಲಗೆ ಬಾರಿಸತೊಡಗಿತು. ಎಲ್ಲರ ಗಮನ ಇತ್ತ ಸೆಳೆಯೋ ಹಂಗ ಉಳಿದ ತಂಡ ನಮ್ಮೆಲ್ಲರನ್ನೂ ಕರೆದುಕೊಂಡು ಹಲಗೆ ಬಾರಿಸುತ್ತಿತ್ತು. ಆದರೂ ನಮ್ಮ ಹುಡುಗರಲ್ಲಿ ವೆಂಕೋಬನೋ ಅಥವಾ ದ್ವಾರಕನೋ ಅಂಬಕ್ಕನ ಮನೀ ಮುಂದಿದ್ದ ತಂಡ ಆಕೀ ಮನೀ ಹಿತ್ತಲದಾಗ ನಿಂತು ಹಲಗೆ ಬಾರಿಸ್ತದೆ ಎಂದು ಕಂಡುಕೊಂಡು ಭಯ, ಗಾಬರಿ, ಕುತೂಹಲದಿಂದ ಮಾಳಿಗೆ ಹತ್ತಿ ಹಲಗೆ ಬಡಿಯಾಟ ನೋಡಲು ಹೋಗಿರಬೇಕು. ಹೋದವನು ಜೋರಾಗಿ ಚೀರಿದ್ದು ಅಷ್ಟೆ. ಹಲಗೆಯ ನಾದ ನಿಂತು ಹೋಗಿ ಒಂಥರಾ ವಿಲಕ್ಷಣ ಮೌನ ಆವರಿಸಿಕೊಂಡಿತು. ಚೀರಿದ ಸದ್ದಿನ ಕಡೆಗೆ ಓಡಿದ ನಾವು, ನಮ್ಮ ಹಿಂದೇ ಬಂದ ಕೇರಿಯ ಕೆಲವಾರು ಮಂದಿ ಕಂಡದ್ದು; ಅರೆಬರೆ ಬೆತ್ತಲೆ ಅಂಬಕ್ಕ ಹಿತ್ತಲಲ್ಲಿ ಎಚ್ಚರದಪ್ಪಿ ಬಿದ್ದಿದ್ದಳು !

ಬೆಳಕು ಹರಿದದ್ದೇ ತಡ ಅಂಬಕ್ಕನ ಅಜ್ಜಿ ಚನ್ನಜ್ಜಿ ಗುಡಿಯೊಳಗೆ ಕೂಗಾಡಿ ಚೀರಾಡಿ, ಪಂಚಾಯ್ತಿಗೆಂಬಂತೆ ಜನರನ್ನು ಸೇರಿಸಿತ್ತು. ಸುದ್ದಿ ಕೇಳಿದವರಂತೆ ಕೆಳಗೇರಿಯ ಚಂದ್ರಪ್ಪ ಮತ್ತಷ್ಟು ಹುಡುಗರು ಕೈಯಲ್ಲಿ ಮಚ್ಚು ಕುಡುಗೋಲು ಹಿಡಿದು ಎಂದೂ ಇಲ್ಲದ ಆವೇಗದಿಂದ ಧಾವಿಸಿ ಗುಡೀ ಮುಂದೆ ಬಂದರು. ಕೆಳಗೇರಿಯ ಅಷ್ಟೂ ಜನ ಹೆಂಗಸರು ಅಂಬಕ್ಕನ ಹಿತ್ತಲದಲ್ಲೇ ಜಮಾಯಿಸಿ ಕೂತಿದ್ದರು. ಚನ್ನಜ್ಜಿ ಕೂಗಾಡುತ್ತಲೇ ಇತ್ತು. ಚೀರಾಡುತ್ತಲೇ ಶಾಪ ಹಾಕುತ್ತಿತ್ತು. ಯಾರ್ಯಾರನ್ನೋ ಹಿಡಿದು ಪ್ರಶ್ನೆ ಕೇಳುತ್ತಿತ್ತು. ಒಂದು ಹತ್ತು ನಿಮಿಷಕ್ಕೆ ಗುಡೀ ಪುರೋಹಿತ ಆಚಾರ್ಯರು, ದೊಡ್ಡ ಮನೆ ತಿರುಮಲ ದೇಸಾಯರು, ಮಠದ ರಾಮಕೃಷ್ಣಾಚಾರ್ರು ಎಲ್ಲ ಕಟ್ಟೆ ಮ್ಯಾಲೆ ಕೂತು ಪಂಚಾಯ್ತಿ ಶುರು ಮಾಡಿದರು. ಅಲ್ಲಿದ್ದ ಐದಾರು ಹುಡುಗರು ''ಅಂಬುಜಾ ಧರ್ಮದ್ರೋಹ ಮಾಡಿ ತಪ್ಪು ಮಾಡಿದ್ದಕ್ಕ ಸರಿಯಾಗಿ ಶಿಕ್ಷೆಯಾಗ್ಯಾದ'' ಅಂತ ಮಾತಾಡಿದ್ದಕ್ಕೆ ಚಂದ್ರಪ್ಪ ಮತ್ತವನ ಗೆಳೆಯರು ಕುಡುಗೋಲು ಹಿಡಿದು ಗುಡೀಯೊಳಕ್ಕೆ ಧಾವಿಸಿ ಬಂದದ್ದನ್ನು ಕೇರ್ಯಾಗಿನ ದೊಡ್ಡೋರು ಸಮಾಧಾನ ಹೇಳುತ್ತ ಹೊರಗೆ ತಳ್ಳಿದರು. ಆಗ ಬಂದಳು ಅಂಬಕ್ಕ. ನಡುರಾತ್ರಿಯಾಗ ಹೇಗಿದ್ದಳೋ ಹಾಗೇ ತಲೀ ಕೆದರಿಕೊಂಡು, ಹರಿದ ಲಂಗ ಪೋಲಕದಲ್ಲೇ ಮೈಮುಚ್ಚಿಕೊಳ್ತಾ ತರಗೆಲೆಯೊಂದು ಗಾಳಿಯಲ್ಲಿ ತೇಲಿಬಂದಂತೆ ತೇಲು ಹೆಜ್ಜೆ ಹಾಕಿಕೊಂಡು ಗುಡಿಗೆ ಬಂದಳು. ಚಂದ್ರಪ್ಪ ಬೊಗಸೆಯಲ್ಲಿ ಮುಖ ಮುಚ್ಚಿಕೊಂಡ. ನಾನು ವೆಂಕೋಬ ಹೋಗಿ ಆಕೆಯನ್ನು ಹಿಡಿದುಕೊಂಡ್ವಿ. ದೇಸಾಯರು ಆಕಿಗೇನೋ ಕೇಳಿದರು. ಆಕಿ ಮಾತಾಡಲಿಲ್ಲ. ಒಂದ್ಸಲ ಸೇರಿದ ಕೇರಿಯ ಎಲ್ಲಾ ಮಂದಿಯನ್ನ, ಹೆಂಗಸರನ್ನ, ಹುಡುಗರನ್ನ ಕೆಕ್ಕರಿಸಿ ನೋಡಿದಳು. ಸಾವರಿಸಿಕೊಂಡು ನಿಂತವಳೇ ಕ್ಯಾಕರಿಸಿ ಅವರೆಲ್ಲರ ಕಡೆ ತಿರುಗಿ ಜೋರಾಗಿ ಉಗುಳಿದಳು ಅಂಬಕ್ಕ ! ಆಕಿ ವಾಪಸ್ ನಡೆಯ ತೊಡಗಿದಾಗ ಗುಡಿಯಾಗಿನ ಅಷ್ಟು ಮಂದಿಯಲ್ಲಿ ಯಾರಂದ್ರ ಯಾರೂ ಮಾತಾಡಲಿಲ್ಲ!!

ಆಮೇಲೇನಾಯ್ತು ಈ ಹೊತ್ತು ನೆನಪಾಗ್ತಿಲ್ಲ. ಆದರೆ ನಾನು ನೋಡುತ್ತಿದ್ದಂತೆ ಅಂಬಕ್ಕ ಮೆಟ್ರಿಕ್ ಅದೇ ವರ್ಷ ಪಾಸಾದಳು. ಯಾರ ಜೊತೆಗೂ ಬೆರೆಯದೇ, ನಮ್ಮನ್ನೂ ಮಾತಾಡಿಸದೇ ತನ್ನ ಪಾಡಿಗೆ ತಾನಿದ್ದ ಅಂಬಕ್ಕ ಅಮರಾವತಿ ಕಾಲೇಜಿಗೆ ಹೋಗಿಬಂದು ಕಲಿತು ಬಿಸಿಲಳ್ಳಿಯ ಶಾಲೆಗೇ ಟೀಚರ್ ಆಗಿದ್ದು ನನ್ನ ಹೈಸ್ಕೂಲಿನ ದಿನಗಳಲ್ಲಿ ನೆನಪಿದೆ. ಆಗೆಲ್ಲ ಅಂಬಕ್ಕ ಕೇರಿಯಲ್ಲಿ ಹೊರಟರೆ ಯಾರೂ ತಲೆ ಎತ್ತಿ ನೋಡುತ್ತಿರಲಿಲ್ಲ. ಮಾತಾಡುತ್ತಿದ್ದ ಮಾತುಗಳು ಸ್ತಬ್ಧವಾಗುತ್ತಿದ್ದವು. ಅಂಗಳದ ಹೆಂಗಸರೂ ಮುಖಾಮುಖ ನೋಡಿಕೊಂಡು ಸುಮ್ಮನಾಗಿಬಿಡುತ್ತಿದ್ದರು.

ಸಂಜೆಯ ಕತ್ತಲು ಗಾಢವಾಗುತ್ತಿತ್ತು. ವೆಂಕೋಬ ಬಂದು ''ಒಳಗೆ ಬಾರಲೇ... ಅದ್ಯಾಕೆ ಹಂಗೆ ಕುಂತೀ ? ಏನು ನೆನಪು ಮಾಡ್ಕೊಂಡಪ್ಪ...'' ಎಂದು ಹಾಸ್ಯ ಮಾಡಿದ. ನಾನು ಶುಷ್ಕವಾಗಿ ''ಅಂಬಕ್ಕ ಈಗ ಹೆಂಗದಾರೋ ?'' ಎಂದೆ. ವೆಂಕೋಬನಲ್ಲಿ ಅದೇ ಬಾಲ್ಯದ ಹುರುಪು, ಕೇರಿಯ ನಡುವಯಸ್ಕನ ಗಂಭೀರತೆ ಎರಡೂ ಸೇರಿಕೊಂಡಂತೆ ''ಅಂಬಕ್ಕ ಹಂಗೇ ಅದಾಳೋ. ಆಕಿ ನಮ್ಮ ಕೇರಿ ಅಷ್ಟ್ಯಾಕೆ ಬಿಸಿಲಳ್ಳಿಗೇ ನೈತಿಕತೆಯ ರೂಪ ಅನ್ನೋ ಹಂಗೆ ಅದಾಳೆ ನೋಡು. ಆಕಿ ಈ ಊರಿನ ಸ್ಕೂಲಿಗೆ ಟೀಚರ್ ಆಗಿ ಬಂದ ಮ್ಯಾಲೆ ಒಳ್ಳೇ ಟೀಚರ್ ಆಗಿ, ಮಹಿಳಾ ಕೇಂದ್ರ ಶುರು ಮಾಡಿ ಹೊಲಿಗೆ, ಕಸೂತಿಯನ್ನ ಹುಡುಗಿಯರಿಗೆ ಕಲಿಸಿಕೊಡ್ತಾ, ಕೆಳಗೇರಿ ಹೆಂಗಸರಿಗೆಲ್ಲ ಸ್ವ ಉದ್ಯೋಗ ತರಬೇತಿಗೆ ಕಳಿಸಿ ಭಾಳ ದೊಡ್ಡಾಕಿ ಆಗ್ಯಾಳ. ನಮ್ ಕೇರ್ಯಾಗಿನ ಹೆಂಗಸರೂ ಅಂಬಕ್ಕ ಅಂದ್ರ ಭಾಳ ಹಚ್ಚಿ ಕೊಳ್ತಾವ. ಆದ್ರ ನಮ್ ಯಾವ ಕೇರಿ ಯಜಮಾನ್ರಿಗೂ, ಗಂಡಸರಿಗೂ ಆಕೀನ ಮಾತಾಡ್ಸೋ ಧೈರ್ಯ ಬಂದಿಲ್ಲ ನೋಡು. ಅವತ್ತಿಂದ ಯಾವ ಗಂಡಸಿಗೂ ಹಲಗೆ ಹೊಡಿಯೋ ಧೈರ್ಯ, ಕಾಮಣ್ಣನ ಕೂರಿಸುವ ಸಡಗರ ಉಡುಗಿಹೋಗ್ಯದ'' ಎಂದು ಸುಮ್ಮನಾದ.

ಬಿಸಿಲಳ್ಳಿಯ ಕೇರಿ ಕೇರಿಗಳಿಂದ ಅಂಬಕ್ಕನ ಮನೆಪಾಠಕ್ಕೆ ಹುಡುಗರು ಕತ್ತಲಲ್ಲಿ ಬ್ಯಾಟರಿಯ ಮಿಣಿಮಿಣಿ ಬೆಳಕ ಚೆಲ್ಲಿಕೊಂಡು – ಕತ್ತಲಲ್ಲಿ ನಕ್ಷತ್ರಗಳನ್ನು ನಡೆಸಿ ತಂದಂತೆ – ಬಂದು ಅಂಬಕ್ಕನ ಮನೆ ತುಂಬಿಕೊಂಡರು.

**ಆನಂದ್ ಋಗ್ವೇದಿ**
ನಂ. ೬೮೬/೭ಬಿ, 'ದುರ್ಗಾಂಬಿಕಾ ನಿಲಯ', ಮಹಡಿ. ೧ನೇ ಮೇನ್
೪ನೇ ಕ್ರಾಸ್, ಭಗತ್‌ಸಿಂಗ್ ನಗರ ದಾವಣಗೆರೆ - ೫೭೭ ೦೦೨

ಶ್ರೀ ರಮಾನಂದ ಘಾಟೆಯವರು (೧೯೧೯- ೧೯೯೨) ದಕ್ಷಿಣ ಕನ್ನಡದ ಅಪರೂಪದ ಸಾಹಿತಿಗಳಲ್ಲಿ ಒಬ್ಬರು. ವೃತ್ತಿಯಲ್ಲಿ ಕಂಪೌಂಡರ್ ಆಗಿದ್ದ ಇವರು, ಕನ್ನಡ, ಮರಾಠಿ, ಆಂಗ್ಲ ಭಾಷೆಗಳಲ್ಲಿ ಪ್ರಾವೀಣ್ಯ ಹೊಂದಿದ್ದರು. ಶ್ರೀ ಜೆ. ವಾಮನಭಟ್ಟ ಮತ್ತು ಶ್ರೀ ಟಿ. ನಾರಾಯಣಭಟ್ಟರ ಪ್ರೋತ್ಸಾಹದಿಂದ ಸಾಹಿತ್ಯ ಕೃಷಿಯಲ್ಲಿ ತೊಡಗಿದ ರಮಾನಂದ ಘಾಟೆಯವರು ವಿನೋದ ಸಾಹಿತ್ಯದಲ್ಲಿ ತಮ್ಮ ಛಾಪನ್ನು ಮೂಡಿಸಿದವರು. ಆದರೆ ಕಾರಣಾಂತರಗಳಿಂದ ಹೆಚ್ಚು ಪ್ರಸಿದ್ಧಿಗೆ ಬಾರದೆ ಎಲೆಮರೆಯ ಕಾಯಂತೆ ಉಳಿದುಹೋದವರು. ಕಾಂತಾವರದ ಕನ್ನಡ ಸಂಘದವರು ೧೯೮೫ರಲ್ಲಿ ಅವರಿಗೆ ಸನ್ಮಾನ ಮಾಡಿದ್ದನ್ನು ಬಿಟ್ಟರೆ, ಅವರನ್ನು ಗುರುತಿಸಿದವರು ಕಡಿಮೆ. ಈ ಹಿನ್ನೆಲೆಯಲ್ಲಿ ಅವರ ಬರಹದ ವೈಶಿಷ್ಟ್ಯವನ್ನು ಗುರುತಿಸುವ ಪ್ರಯತ್ನ ಈ ಲೇಖನದಲ್ಲಿದೆ.

ದಕ್ಷಿಣ ಕನ್ನಡ ಜಿಲ್ಲೆ ಸಾಹಿತ್ಯ ವಲಯದಲ್ಲಿ ಹಲವು ಪ್ರಥಮ ದಾಖಲೆಗಳಿಗೆ ಹೆಸರಾದಂತೆ, ವಿನೋದ ಸಾಹಿತ್ಯಕ್ಕೂ ಭದ್ರ ಬುನಾದಿಯನ್ನು ಹಾಕಿಕೊಟ್ಟಿದೆ. ಪಂಜೆ ಮಂಗೇಶ ರಾವ್, ಎಂ. ಎನ್. ಕಾಮತ್ ಮುಂತಾದವರು ವಿನೋದ ಸಾಹಿತ್ಯ ಪರಂಪರೆಯ ಮುಂದುವರಿಕೆಯಲ್ಲಿ ಪ್ರಮುಖರು. ಪಡುಕೋಣೆ ರಮಾನಂದರಾಯರ ಹೆಸರೂ ಮರೆಯುವಂತಿಲ್ಲ. ಈ ಸರಪಳಿಯ ಮುಂದಿನ ಕೊಂಡಿಯಾಗಿ ರಮಾನಂದ ಘಾಟೆಯವರನ್ನು ಗುರುತಿಸಬಹುದಾಗಿದೆ.

ರಮಾನಂದ ಘಾಟೆಯವರು 'ಕಾನ್ವೆಂಟ್ ಗರ್ಲ್' (೧೯೫೨) ಮತ್ತು 'ಸೀತಾರತ್ನ' (೧೯೫೪) ಎಂಬ ಎರಡು ಕೃತಿಗಳನ್ನು ಮಾತ್ರ ರಚಿಸಿದ್ದರೂ ಅವೇ ಅವರ ಒಟ್ಟು ಬರಹಗಳ ಸಾಧ್ಯತೆಗಳ ಸೂಚಿಯಾಗಿ ನಿಂತಿವೆ. ಈ ಕೃತಿಗಳ ಮೂಲಕ ಅವರು ಚಿತ್ರಿಸಿದ ಸೀತೆಯ ಪಾತ್ರ ಚಿರಂಜೀವಿಯೆನಿಸಿದೆ. ಯಾರು ಈ ಸೀತೆ? ಹೆಸರಿನ ಹೋಲಿಕೆ ಬಿಟ್ಟರೆ ಪುರಾಣದ ಸೀತೆಗೂ ಈ ಸೀತೆಗೂ ಅಜಗಜಾಂತರವಿದೆ. ಈಕೆ ಬದಲಾದ ಸಮಯಕ್ಕೆ ತಕ್ಕಂತೆ ಆಂಗ್ಲ ಶಿಕ್ಷಣವನ್ನು ಪಡೆದಾಕೆ; ಆದರೆ ಆಂಗ್ಲ ಸಂಸ್ಕೃತಿಯ ಅಂಧ ಅನುಕರಣೆಯಾಕೆಯಲ್ಲ. ವೇಷಭೂಷಣ ಜೀವನ ಶೈಲಿಗಳಲ್ಲಿ ಆಂಗ್ಲೀಕರಣಗೊಂಡಿದ್ದ ನಿರೂಪಕನನ್ನು ತನ್ನ ಪ್ರೇಮವೆಂಬ ಪಾಕದಲ್ಲಿ ಹದಗೊಳಿಸಿ, ಭಾರತೀಕರಣಗೊಳಿಸುವ ಸಾಮರ್ಥ್ಯ ಹೊಂದಿದಾಕೆ. ಕೆಲವೊಮ್ಮೆ ಹೊಸ ಸೀರೆಗಾಗಿ ಹಂಬಲಿಸುವ, ಹೊಸ ಸಿನೆಮಾ ಬಂದಾಗ ನೋಡಲು ಕಾತರಿಸುವ ತೀರಾ ಸಾಮಾನ್ಯ ಹೆಣ್ಣಿನ ಮಾದರಿಯಂತೆ ಕಂಡುಬಂದರೂ, ಅದು ಅವಳ ವ್ಯಕ್ತಿತ್ವದ ಒಂದು ಕಿರು ಅಂಶ ಮಾತ್ರವಾಗಿದೆ. ಸೀತೆ ನಮ್ಮ ನೆನಪಲ್ಲಿ ಖಾಯಂಗೊಳ್ಳುವುದು ತನ್ನ ಬುದ್ಧಿಮತ್ತೆ, ಚಾಣಾಕ್ಷತೆ, ಸಮಯ ಪ್ರಜ್ಞೆ, ವಿನೋದಗುಣಗಳಿಂದ ಹಾಗೂ ಇವೆಲ್ಲವುಗಳಿಗೆ

# ಮರೆಯಬಾರದ ಮಹನೀಯರು

# ರಮಾನಂದ ಘಾಟೆ



ಕಳಸವಿಟ್ಟಂತೆ ಸ್ವತಂತ್ರ ಅಭಿಪ್ರಾಯವನ್ನು, ವ್ಯಕ್ತಿತ್ವವನ್ನು ಹೊಂದಿದ ಪರಿಪೂರ್ಣ ವ್ಯಕ್ತಿ ಎಂಬ ಕಾರಣಕ್ಕೆ. ಕತೆಯಿಂದ ಕತೆಗೆ ಆಕೆಯ ವ್ಯಕ್ತಿತ್ವ ಹಿಗ್ಗುತ್ತ ಹೋಗಿದೆ. ಕಾನ್ವೆಂಟ್ ಹುಡುಗಿ, ವಧುವಾಗಿ ನಿರೂಪಕನ ಮನೆ ಲಕ್ಷ್ಮಿಯಾಗಿ ಪ್ರವೇಶ ಪಡೆದಿದ್ದಾಳೆ; ಆರಂಭದ ದಿನಗಳಲ್ಲಿ ತವರಿನ ಮೋಹ ಬಿಡದೆ, ಒಂದೊಂದೇ ಕುಂಟುನೆಪಗಳನ್ನು ಒಡ್ಡಿ ತವರಲ್ಲೇ ದೀರ್ಘ ಕಾಲ ಉಳಿದು ಗಂಡನನ್ನು ಸತಾಯಿಸಿದ್ದಾಳೆ; ಹಿಂದಿರುಗಿ ಆತನ ಮನೆ ಮನಗಳಲ್ಲಿ ತನ್ನ ಅಸ್ಮಿತೆಯನ್ನು ಮೂಡಿಸಿದ್ದಾಳೆ. ಮಾತಿನಲ್ಲಿ, ತರ್ಕದಲ್ಲಿ, ವಿಚಕ್ಷತೆಯಲ್ಲಿ ಅವಳಿಗೆ ಸರಿ ಸಮಾನ ಬಲರು ಇಲ್ಲ. ಭಗಿನೀ ಸಮಾಜದ ಸದಸ್ಯೆಯಾಗಿ, ಶಿಶುವಿಹಾರ, ಪಿಕ್ನಿಕ್ ಪಾರ್ಟಿಗಳ ಒತ್ತಡದಲ್ಲಿ, ಅಡುಗೆಗೆ ಎರಡನೆ ಸ್ಥಾನವನ್ನು ನೀಡಿದವಳಾಗಿ, ಸ್ತ್ರೀ ಸಮಾನತೆಯ ಭಾಷಣಕಾರಳಾಗಿ, ಸ್ತ್ರೀಯರಿಗಾಗೇ ಬರುವ ಪತ್ರಿಕೆಗೆ ಲೇಖನ ಬರೆದುಕೊಡುವವಳಾಗಿ, ಪ್ರಾಣಿದಯಾ ಪ್ರಚಾರಕ ಸಮಿತಿಯ ಕಾರ್ಯದರ್ಶಿಯಾಗಿ ಬೆಳೆಯುತ್ತಾ ಸಾಗಿದ್ದಾಳೆ. ೫೦ರ ದಶಕದಲ್ಲಿ ಇಂತಹ ಸಶಕ್ತ ಸ್ತ್ರೀ ಚೇತನವನ್ನು ಘಾಟೆಯವರು ಓದುಗರಿಗೆ ಪರಿಚಯಿಸಿದ್ದಾರೆ; ಆಪ್ತಗೊಳಿಸಿದ್ದಾರೆ. ಹಾಗೂ ಆ ಮೂಲಕ ಸಮಾಜದ ಸ್ಥಿತ್ಯಂತರ ಕಾಲಘಟ್ಟದಲ್ಲಿ ಬದಲಾಗಬೇಕಿರುವ ಸ್ತ್ರೀ ಮಾದರಿಯನ್ನು ಕಟ್ಟಿಕೊಟ್ಟಿದ್ದಾರೆ. ಇದು ಇಂದು ನಮಗೆ ಮುಖ್ಯವೆನಿಸುವ ಸಂಗತಿಯಾಗಿದೆ.

ಶ್ರೀ ರಮಾನಂದ ಘಾಟೆಯವರು (೧೯೧೯- ೧೯೯೨) ದಕ್ಷಿಣ ಕನ್ನಡದ ಅಪರೂಪದ ಸಾಹಿತಿಗಳಲ್ಲಿ ಒಬ್ಬರು. ವೃತ್ತಿಯಲ್ಲಿ ಕಂಪೌಂಡರ್ ಆಗಿದ್ದ ಇವರು, ಕನ್ನಡ, ಮರಾಠಿ, ಆಂಗ್ಲ ಭಾಷೆಗಳಲ್ಲಿ ಪ್ರಾವೀಣ್ಯ ಹೊಂದಿದ್ದರು. ಶ್ರೀ ಜೆ. ವಾಮನಭಟ್ಟ ಮತ್ತು ಶ್ರೀ ಟಿ. ನಾರಾಯಣ ಭಟ್ಟರ ಪ್ರೋತ್ಸಾಹದಿಂದ ಸಾಹಿತ್ಯ ಕೃಷಿಯಲ್ಲಿ ತೊಡಗಿದ ರಮಾನಂದ ಘಾಟೆಯವರು ವಿನೋದ ಸಾಹಿತ್ಯದಲ್ಲಿ ತಮ್ಮ ಛಾಪನ್ನು ಮೂಡಿಸಿದವರು. ಆದರೆ ಕಾರಣಾಂತರಗಳಿಂದ ಹೆಚ್ಚು ಪ್ರಸಿದ್ಧಿಗೆ ಬಾರದೆ ಎಲೆಮರೆಯ ಕಾಯಂತೆ ಉಳಿದುಹೋದವರು.

ರಮಾನಂದ ಘಾಟೆಯವರ ಕಥಾ ಸಾಹಿತ್ಯವನ್ನು ಓದುವಾಗ, ಅದೇ ತಾನೇ ವಿವಾಹವಾದ ದಂಪತಿಗಳ ಪ್ರೀತಿ-ಸರಸ-ಹುಸಿಮುನಿಸು, ಜಗಳ-ಒಪ್ಪಂದಗಳ ಸಂದರ್ಭಗಳ ಲೋಕ ತನ್ನಿಂದತಾನೇ ತೆರೆದುಕೊಳ್ಳುತ್ತದೆ. 'ಇಡ್ಲಿಗೇನಾಗಿತ್ತು', 'ನೆನಪಿದೆಯೆ?', 'ಬಾಯಿಲ್ ವೇಡಾ', 'ಸೋನಿಯಾ ಶೇಖರ' ಮುಂತಾದ ರಚನೆಗಳು ಈ ಮಾದರಿಯವು. 'ವೈದ್ಯರ ವಿಝಿಟ್', 'ಸೀತಾರತ್ನ', 'ಗ್ಲೂಕೋಸ್', 'ಕಾಣೆಯಾದ ಕೈಬಳೆಗಳು' ಮುಂತಾದ ಕತೆಗಳಲ್ಲಿ ಅಮಾಯಕನಾದ ನಿರೂಪಕ ಅನುದ್ದೇಶ ಪೂರ್ವಕವಾಗಿ ಕೈಗೊಳ್ಳುವ ಕೆಲವು ಕಾರ್ಯಗಳು ಆತನನ್ನು ಅತ್ಯಂತ ಸಂದಿಗ್ಧ ಸಂಕಷ್ಟಕರ ಮತ್ತು ಅಪಾಯಕಾರೀ ಸನ್ನಿವೇಶಗಳಲ್ಲಿ ಸಿಲುಕಿಸಿಬಿಡುತ್ತವೆ. ಜೀವನದಲ್ಲಿ ಒಮ್ಮೆಯಾದರೂ ವೈದ್ಯನಾಗಬೇಕೆಂಬ ನಿರೂಪಕ ಕಂಪೌಂಡರ್‌ನ ಹಂಬಲ,ಅಪರಾತ್ರಿಯಲ್ಲಿ ಬಂದ ಅಪರಿಚಿತ ವ್ಯಕ್ತಿಯ ಮಾತನ್ನು ನಂಬಿ, ವೈದ್ಯನಾಗಿ ಹೋಗುವಂತೆ ಪ್ರೇರೇಪಿಸುತ್ತದೆ. ನಡು ಇರುಳು, ಅಪರಿಚಿತ ರಸ್ತೆಯಲ್ಲಿ ಕರೆತಂದಾತ ನಿರೂಪಕನನ್ನೇ ದೋಚಲು ಯತ್ನಿಸುವುದು 'ವೈದ್ಯರ ವಿಝಿಟ್'ನಲ್ಲಿ ಕಂಡುಬರುತ್ತದೆ. ಪ್ರೇಮಪತ್ರ ಬರೆದುಕೊಟ್ಟು ಮಗಳನ್ನು ಉಳಿಸಿ ಎಂದು ಸಹಾಯ ಕೇಳಿಬಂದ ವೃದ್ಧೆಯ ಮಾತನ್ನು ನಂಬಿ, ನಿರೂಪಕನೇ 'ಬ್ಲಾಕ್‌ಮೇಲ್'ಗೆ ಒಳಗಾಗುವ ಪರಿಸ್ಥಿತಿ 'ಸೀತಾರತ್ನ'ದಲ್ಲಿದೆ. ಕಳ್ಳತನದ ಅಪವಾದ 'ಕಾಣೆಯಾದ ಕೈಬಳೆಗಳು' ಕತೆಯಲ್ಲಿ ನಿರೂಪಕನಿಗೆ ಎದುರಾಗುತ್ತದೆ. ಇಂತಹ ಸಂಕೀರ್ಣ ಸಂದರ್ಭಗಳಲ್ಲೆಲ್ಲಾ ಸೀತೆ ತನ್ನ ಚಾಣಾಕ್ಷತೆ, ಸಮಯಪ್ರಜ್ಞೆಯಿಂದ ನಿರೂಪಕನನ್ನು ಅಪಾಯದಿಂದ ಪಾರುಮಾಡುತ್ತಾಳೆ.

ಯುದ್ಧಕಾಲದಲ್ಲಿ ಸಾಮಾನುಗಳೆಲ್ಲ ಕಪ್ಪು ಮಾರುಕಟ್ಟೆ ಸೇರಿ, ಜನರ ಕೈಗೆಟುಕದ ವೇಳೆಯಲ್ಲಿ 'ಗ್ಲುಕೋಸ್'

ಡಾ|| ಸಬಿಹಾ

ಕೂಡಾ ಅಭಾವದ ವಸ್ತುಗಳ ಪಟ್ಟಿಯಲ್ಲಿ ಸೇರಿಬಿಡುತ್ತದೆ. ವೈದ್ಯರಿಗೋ ಗ್ಲುಕೋಸ್ ಇಲ್ಲದೆ ರೋಗಿಯನ್ನು ಗುಣ ಪಡಿಸಲು ಸಾಧ್ಯವಿಲ್ಲ ಎಂಬ ದೃಢ ನಿಲುವು. ರೋಗಿಗೂ ಗ್ಲುಕೋಸ್ ಜಪ. ಯಾರನ್ನು ಕಾಡಿಬೇಡಿದರೂ ಗ್ಲುಕೋಸ್ ಮಾತ್ರ ಮರೀಚಿಕೆ. ಇಂತಹ ಗಂಭೀರ ಸಂದರ್ಭದಲ್ಲಿ ಗಂಡನ ಪ್ರಾಣ ಉಳಿಸಲು ಕೊನೆಗೂ ಸೀತೆ ಗ್ಲುಕೋಸ್ ಗಳಿಸಿಕೊಳ್ಳುವ ಪರಿ 'ಗ್ಲುಕೋಸ್' ಕತೆಯಲ್ಲಿ ಸ್ವಾರಸ್ಯಕರವಾಗಿ ಮೂಡಿಬಂದಿದೆ. ಆಕೆ ಕಲ್ಲುಸಕ್ಕರೆ ಪುಡಿ ಮಾಡಿ, ಗ್ಲುಕೋಸ್ ಬಾಟ್ಲಿಗೆ ಹಾಕಿ, ವೈದ್ಯ, ಕಂಪೌಂಡರ್, ರೋಗಿ ಎಲ್ಲರನ್ನೂ ಏಕಕಾಲಕ್ಕೆ ಮೋಸಗೊಳಿಸಿ, ಕೊನೆಯಲ್ಲಿ ಅವರ ಭ್ರಮೆಯ ಗೋಳವನ್ನು ಒಡೆಯುವಲ್ಲಿ ಯಶಸ್ವಿಯಾಗುತ್ತಾಳೆ. ಹೀಗೆ ವಿನೋದದ ಜೊತೆಜೊತೆಗೆ ಸಾಮಾಜಿಕ ವಿಮರ್ಶೆ ಮತ್ತು ವಿಡಂಬನೆಯನ್ನೂ ಈ ಕತೆ ತನ್ನ ಒಡಲಲ್ಲಿ ಹುದುಗಿಸಿಕೊಂಡಿದೆ.

'ಜೀರೋ ಎರಡು' ಸಾಮಾಜಿಕ ಮತ್ತು ರಾಜಕೀಯ ವಿಡಂಬನೆಯ ದೃಷ್ಟಿಯಿಂದ ಮುಖ್ಯವೆನಿಸುವ ಇನ್ನೊಂದು ಕತೆಯಾಗಿದೆ. ೪೦, ೫೦ರ ದಶಕದ ದಕ್ಷಿಣ ಕನ್ನಡದ ಹೆಚ್ಚಿನ ಕತೆಗಾರರ ವಸ್ತುವಾಗಿದ್ದ ಜಿಡ್ ಆಟದ ಸುತ್ತ 'ಜೀರೋ ಎರಡು' ಕತೆ ಹೆಣೆದುಕೊಂಡಿದೆ. ಈ ಆಟ ದಿಂದಾಗಿ ಎಷ್ಟೋ ಕುಟುಂಬಗಳ ಆರ್ಥಿಕ ಸ್ಥಿತಿಗತಿಗಳು ಅಧಃಪತನಕ್ಕೆ ಇಳಿದುದನ್ನು ಗಂಭೀರ ಮತ್ತು ಲಘು ಧಾಟಿಯ ಸಮ್ಮಿಶ್ರ ದನಿಯಲ್ಲಿ ಘಾಟಿಯವರು ನಿರೂಪಿಸಿದ್ದಾರೆ. ಇಂದಿಗೂ ಜ್ವಲಂತವಾಗಿರುವ ಒಂದಂಕಿ ಲಾಟರಿ, ಆನ್ ಲೈನ್ ಲಾಟರಿ, ಪ್ಲೇವಿನ್‌ಗಳ ಹಾವಳಿ, ಅದರ ಕುರಿತಾಗಿ ಸರಕಾರದ ಧೋರಣೆ, ಜನಪರ ಸಂಘಟನೆಗಳ ಹೋರಾಟದ ಹಿನ್ನೆಲೆಯಲ್ಲಿ 'ಜೀರೋ ಎರಡು' ಕತೆಯ ಅರ್ಥ ವ್ಯಾಪಕವಾಗುತ್ತದೆ; ಸಮಕಾಲೀನವೂ ಆಗುತ್ತದೆ.

ತನಗೆ ಬೇಡದ ಅತಿಥಿಗಳನ್ನು ನಿವಾರಿಸಿಕೊಳ್ಳಲು ಹೊಟ್ಟೆನೋವಿನ ನಾಟಕವಾಡಿ ಗೆಲ್ಲುವ ಸೀತೆ, ಪಂಥಕ್ಕಾಗಿ ಗಂಡನ ಕತೆಯನ್ನು ಅಲ್ಪಸ್ವಲ್ಪ ಬದಲಾಯಿಸಿ ತನ್ನ ಹೆಸರಲ್ಲಿ ಪ್ರಕಟಿಸಿ ಬಹುಮಾನ ಗೆದ್ದುಕೊಂಡು, ಗಂಡನ ಸಿಟ್ಟನ್ನು ಗೆಲ್ಲುವಲ್ಲಿ ಯಶಸ್ವಿಯಾಗುವ ಸೀತೆಯ ವ್ಯಕ್ತಿತ್ವ ಇನ್ನೊಂದು ನೆಲೆ. ಆದಾಗ್ಯೂ ಆಕೆಯೂ ಅತಿಮಾನುಷಳಲ್ಲ, ಮನುಷ್ಯ ಸಹಜ ದೌರ್ಬಲ್ಯಗಳು ಆಕೆಯಲ್ಲೂ ಇವೆ. ಅವುಗಳಿಗೆ 'ಸೀತೆಯ ರಾಶಿ ಭವಿಷ್ಯ', 'ತವರು ಮನೆ ಬೇಕೆ', 'ಗೌರೀ ಪೂಜೆ' ಮುಂತಾದುವು ನಿದರ್ಶನವಾಗಿವೆ. ಇಲ್ಲಿ ಆಕೆಯೂ ಬೇಸ್ತು ಬೀಳಬಲ್ಲಳು, ಅವಳ ಲೆಕ್ಕಾಚಾರವೂ ತಲೆಕೆಳಗಾಗ ಬಹುದು ಎಂಬ ಚಿತ್ರಣಗಳು ದೊರೆಯುವುದರಿಂದಲೇ ಅವಳ ಅಸಾಮಾನ್ಯತ್ವ ಆವರಣ ಒಡೆದು ಆಕೆ ಓದುಗರಿಗೆ ಆಪ್ತಳಾಗುತ್ತಾಳೆ.

ಹೀಗೆ ರಮಾನಂದ ಘಾಟಿಯವರ ಕತೆಗಳ ವಿಶ್ಲೇಷಣೆ ಎಂಬುದು ಅವರು ಕಟ್ಟಿಕೊಡುವ ಸೀತೆಯ ವ್ಯಕ್ತಿತ್ವದ ಸಂರಚನೆಯಲ್ಲೇ ಆರಂಭ ಮತ್ತು ಪೂರ್ಣತೆ ಎರಡನ್ನೂ ಒಳಗೊಂಡಿದೆ ಎಂಬುದು ಅರಿವಿಗೆ ಬರುತ್ತದೆ. ೫೦ರ ದಶಕದಲ್ಲಿ ಬರೆಯತೊಡಗಿದ ರಮಾನಂದ ಘಾಟಿ ಯವರು ಕಟ್ಟಿಕೊಡುವ ಕುಟುಂಬದ ಸ್ವರೂಪ ವಿಶಿಷ್ಟ ವಾದುದು. ಇದರಲ್ಲಿ ಗಂಡ ಹೆಂಡತಿ ಹೆಚ್ಚೆಂದರೆ ಇನ್ನೊರ್ವ ವ್ಯಕ್ತಿ ಹೀಗೆ ಅತ್ಯಂತ ಚಿಕ್ಕ ಕುಟುಂಬವನ್ನೇ ಅವರು ಎತ್ತಿಕೊಂಡಿದ್ದಾರೆ. ಎಂದರೆ ಕೂಡು ಕುಟುಂಬಗಳೇ ಅಧಿಕವಾಗಿದ್ದ, ಸಹಜವಾಗಿದ್ದ ಸಮಯದಲ್ಲಿ ಅವಿಭಕ್ತ ಕುಟುಂಬದ ಬಗೆಗೆ ತಿರಸ್ಕಾರ, ವಿಷಾದ ಮತ್ತು ಆತಂಕಗಳೇ ಜನರಲ್ಲಿ ತುಂಬಿದ್ದ ಕಾಲದಲ್ಲಿ, ಘಾಟಿ ಯವರು ಅವಿಭಕ್ತ ಕುಟುಂಬದ ಧನಾತ್ಮಕ ಅಂಶಗಳತ್ತ ಒಲವು ತೋರಿದ್ದಾರೆ. ಸಣ್ಣ ಕುಟುಂಬ ಎಂಬುದು ಆಂಗ್ಲ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವದಿಂದ ಪ್ರೇರಿತ ವಾದದ್ದು ಎಂಬುದರಲ್ಲಿ ಎರಡು ಮಾತಿಲ್ಲ. ಇವರ ಕೃತಿ ಗಳಲ್ಲಿ ಆಂಗ್ಲ ಸಂಸ್ಕೃತಿಯ ಅಂಧಾನುಕರಣೆ ವಿಡಂಬನೆಗೆ ಒಳಗಾಗಿದೆ; ತಿರಸ್ಕೃತವಾಗಿದೆ (ಕಾನ್ವೆಂಟ್ ಗರ್ಲ್). ಆದರೆ ಮಹಿಳೆಗೆ ಪುರುಷರಂತೆಯೇ ಆಧುನಿಕ ಶಿಕ್ಷಣ ನೀಡಬೇಕು ಎಂಬ ಪ್ರಗತಿಪರ ನಿಲುವನ್ನು ಇವರ ಕತೆಗಳು ಎತ್ತಿ ಹಿಡಿಯುತ್ತವೆ. ಸಮಕಾಲೀನ ಸಾಹಿತ್ಯದಲ್ಲಿ ಆಂಗ್ಲ ಶಿಕ್ಷಣ ಪಡೆದ ಹೆಣ್ಣು ಬಜಾರಿಯಾಗಿಯೋ, ಮನೆಹಾಳಿ ಯಾಗಿಯೋ ಚಿತ್ರಣಗೊಳ್ಳುತ್ತಿದ್ದುದನ್ನು ಎದುರು ಬದುರಾಗಿ ಗಮನಿಸಿದಾಗ, ಘಾಟಿಯವರ ಚಿಂತನೆಯ ವೈಶಿಷ್ಟ್ಯ ಮನವರಿಕೆಯಾಗುತ್ತದೆ.

ಇವರ ಸಮಕಾಲೀನ ಬರಹಗಾರರು ವಿವಾಹದಲ್ಲಿ ವಧೂವರರಿಗೆ ಆಯ್ಕೆಯ ಅವಕಾಶಕ್ಕೆ ಮಾನ್ಯತೆ ನೀಡಬೇಕು ಎಂಬುದನ್ನು ಪ್ರತಿಪಾದಿಸುತ್ತಿದ್ದಾಗ, ಘಾಟಿಯವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಮಹಿಳೆಯ ಕುರಿತಂತೆ ಆ ವೇಳೆಗೆ ಇದ್ದ ಸಂಪ್ರದಾಯದ ಮಾದರಿಯನ್ನು ಒಡೆದು ಹೊಸ ಮಾದರಿಯನ್ನು ಪ್ರತಿಷ್ಠಾಪಿಸುವುದರಲ್ಲಿ ಉತ್ಸುಕತೆ ತೋರಿದ್ದಾರೆ. ಸೀತೆಯ ಒಟ್ಟು ವ್ಯಕ್ತಿತ್ವ ಈ ಮಾದರಿಯದು. ಇಲ್ಲಿ ನಿರೂಪಕ ಹೆಂಡತಿಗೆ ವಿಧೇಯ, ಸಾಮಾಜಿಕ ವ್ಯವಹಾರದಲ್ಲೂ ನಿಪುಣನಲ್ಲ; ಅಸಹಾಯಕ, ಆಗಾಗ ಪೇಚಿಗೆ ಸಿಲುಕಿ ಕೊಳ್ಳುವಾತ. ಆದರೆ ಇದು ಆತನ ವ್ಯಕ್ತಿತ್ವಕ್ಕೆ ಕಪ್ಪು ಕಲೆಯಾಗಿ ಪರಿಣಮಿಸದಂತೆ ಘಾಟಿಯವರು ಎಚ್ಚರ ವಹಿಸಿದ್ದಾರೆ. ಮತ್ತು ದಾಂಪತ್ಯದ ಚೌಕಟ್ಟನ್ನು ಸಾಂಪ್ರ ದಾಯಿಕ ಮಾದರಿಗೆ ಪರ್ಯಾಯವಾಗಿ ಸಮಾನ ಅವಕಾಶದ, ಸಮಾನ ಗೌರವದ ಮತ್ತು ಮಧುರ ನೆಲೆಯ ಭಾವಸೇತುಗಳಿಂದ ಪ್ರಜ್ಞಾಪೂರ್ವಕವಾಗಿ ಕಟ್ಟಿ ನಿಲ್ಲಿಸಿದ್ದಾರೆ.

ಘಾಟಿಯವರು ಕಟ್ಟಿಕೊಡುವ ಹಾಸ್ಯ ಕೂಡಾ ಕೋಮಲವಾದುದ್ದು ಹಾಗೂ ಮನಸ್ಸನ್ನು ಪ್ರಫುಲ್ಲಗೊಳಿಸು ವಂತಹದ್ದು. ನಿಜವಾದ ಹಾಸ್ಯ ಸಾಹಿತಿ ಮೊದಲು ತನ್ನ ಓರೆಕೋರೆಗಳನ್ನು ಕಂಡು ನಗುವ ಪ್ರವೃತ್ತಿಯವರಾಗಿ ರುತ್ತಾರೆ. ಆಗಲೇ ಎಲ್ಲರ ಮತ್ತು ಎಲ್ಲವುಗಳ ಓರೆಕೋರೆ ಗಳನ್ನೂ ಗ್ರಹಿಸಲು ಹಾಗೂ ಅವುಗಳಿಗೆ ಮಾನವೀಯ ಸ್ಪರ್ಶ ನೀಡಲು ಸಾಧ್ಯವಾಗುತ್ತದೆ. ಅಂಥ ಸಂದರ್ಭಗಳಲ್ಲಿ ಅವರ ಹಾಸ್ಯ ಇನ್ನೊಬ್ಬರ ಕಣ್ಣಿಗೆ ಕೈ ಹಾಕುವಂತಿರದೆ, ಕಣ್ಣಿಗೆ ಓರೆಕೋರೆಗಳನ್ನು ತೋರಿಸುವ ದರ್ಪಣ ವಾಗುತ್ತದೆ. ಘಾಟಿಯವರು ಅದನ್ನು ಸಾಧಿಸಿದ್ದಾರೆ.

ಇಷ್ಟೊಂದು ಚೆನ್ನಾಗಿ ಬರೆಯುತ್ತಿದ್ದ ಘಾಟಿಯವರು ಇದ್ದಕ್ಕಿದ್ದಂತೆ ಬರೆಯುವುದನ್ನು ಯಾಕೆ ಬಿಟ್ಟರು? ಈ ಪ್ರಶ್ನೆಗೆ ಉತ್ತರ ಹುಡುಕಿ ಎರಡು ಅಭಿಪ್ರಾಯಗಳನ್ನು ಮುಂದಿಡುತ್ತಿದ್ದೇನೆ.

ಘಾಟಿಯವರು ಬದುಕಿದ್ದು ಅವಿಭಕ್ತ ಕುಟುಂಬ ದೊಳಗೆ. ಅವಿಭಕ್ತ ಕುಟುಂಬವು ತನ್ನ ಎಲ್ಲ ಸಾಧ್ಯತೆಗಳ ಜೊತೆ ಜೊತೆಗೇ ತನ್ನ ಒಡಲಲ್ಲೇ ಕೆಲವರ ಮೇಲುಗೈ, ಜವಾಬ್ದಾರಿಗಳ ಹೊರೆ, ವ್ಯಕ್ತಿ ಸ್ವಾತಂತ್ರ್ಯಕ್ಕೆ ಕಡಿವಾಣ, ದಂಪತಿಗಳಿಗೆ ಒಪ್ಪಿತ ನೀತಿಸಂಹಿತೆ, ಕಷ್ಟ ಸಂಕಷ್ಟಗಳ ಸರ ಮಾಲೆಗಳನ್ನೂ ಹುದುಗಿಸಿಕೊಂಡಿರುತ್ತದೆ. ಸಹಜವಾಗಿ ಘಾಟಿಯವರೂ ಇದನ್ನು ಅನುಭವಿಸಿರಬಹುದು. ಆದರೆ ಅವರ ಕಥಾ ಜಗತ್ತು ಮುಂದಿಡುವುದು ಇದಕ್ಕಿಂತ ಭಿನ್ನವಾದ ವಿಭಕ್ತ ಕುಟುಂಬವನ್ನು! ಎಂದರೆ ಸ್ವಲ್ಪ ಅಸಾಹಿತ್ಯಕ ನೆಲೆಯ ತೀರ್ಮಾನ ಎನಿಸಬಹುದಾದರೂ ಲೇಖಕರು ತಮ್ಮ ಕಥಾಭಿತ್ತಿಯಲ್ಲಿ ತಮ್ಮ ಅರಕೆಗಳನ್ನು ಮೀರುವ ಪ್ರಯತ್ನ ಮಾಡಿದ್ದಾರೆಯೇ? ಹೌದು ಎಂಬುದೇ ನನಗನಿಸುವ ಉತ್ತರ.

ಮನೆಯ ಸಂಕಷ್ಟ, ವೃತ್ತಿಯ ಒತ್ತಡ, ಹೊಸ ಆಸಕ್ತಿಗಳು ಘಾಟಿಯವರ ಬರವಣಿಗೆಯ ನಿರಂತರತೆಗೆ ಅಡ್ಡಿಯಾದವು ಎಂಬ ಅಭಿಪ್ರಾಯ ಇದೆ. ಇದನ್ನು ಪಾರ್ಶ್ವಿಕವಾದ ಕಾರಣವೆಂದು ಭಾವಿಸುತ್ತ, ಇಂತಹ ಕಡೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವಿಶಿಷ್ಟ ಭೌಗೋಳಿಕ ಮತ್ತು ಸಾಂಸ್ಕೃತಿಕ ಪರಿಸರವೂ ತನ್ನ ಕೊಡುಗೆಯನ್ನು ಸಲ್ಲಿಸಿದೆ ಎಂಬುದು ನನ್ನ ಅಭಿಪ್ರಾಯ.

ಈ ಜಿಲ್ಲೆಯ ಲೇಖಕರ ಬರವಣಿಗೆಯ ಕುರಿತಂತೆ ಪ್ರೊ|| ಬಿ. ಎ. ವಿವೇಕ ರೈಯವರು ಹೀಗೆ ಹೇಳಿದ್ದಾರೆ. "ಈ ಜಿಲ್ಲೆಯ ಪರಂಪರೆಯ ಮುಖ್ಯ ಗುಣವೆಂದರೆ ಹೊರಗಡೆಯ ಪುರಸ್ಕಾರ, ಮಾನ, ಗೌರವಗಳಿಗೆ ಬೆಲೆ ಕೊಡದೆ ತನ್ನ ಪಾಡಿಗೆ ಕೆಲಸ ಮಾಡುವುದು. ಇಲ್ಲಿಯ ಕೃಷಿ ಮತ್ತು ಸಾಹಿತ್ಯ ಕೃಷಿಯಲ್ಲಿನ ಒಂದು ಮುಖ್ಯ ಗುಣವೆಂದರೆ, ಮುಂಡು ಮೇಲಕ್ಕೆ ಎತ್ತಿ ಕಟ್ಟುವುದು, ಹೊಳೆ ದಾಟುವುದು, ಬೆಟ್ಟ ಏರುವುದು, ಕಟ್ಟಪುಣಿಯಲ್ಲಿ ಹೋಗುವುದು, ಜಡಿಮಳೆ ಬಂದರೆ ಮಳೆಯಲ್ಲಿ ಒದ್ದೆಯಾಗುವುದು, ರಣಬಿಸಿಲಿದ್ದರೆ ಬೆವರುವುದು, ಕೆಲಸ ಮಾಡುವುದು. ಇದರಿಂದಾಗಿಯೇ ಹೊರಗಡೆ ಇವರು ಹೆಚ್ಚು ಪ್ರಚಾರಕ್ಕೆ ಬರಲಿಲ್ಲ." (ಕನ್ನಡ ನವೋದಯ ಕಾವ್ಯ : ಮಂಗಳೂರು ಕೇಂದ್ರ; ೬).

ಹೀಗೆ ಬದುಕಿದ ಹಲವರಲ್ಲಿ ಘಾಟಿಯವರೂ ಒಬ್ಬರು. ಇದರಿಂದಾಗಿ ಸಮಕಾಲೀನ ಓದುಗರ ಮನದಲ್ಲಿ ಸ್ಥಾನ ಪಡೆಯುವಲ್ಲಿ ಯಶಸ್ವಿಯಾದರೇ ಹೊರತು, ಸಾಹಿತ್ಯ ಚರಿತ್ರೆಯಲ್ಲಿ ಅಲ್ಲ. ಕಾಂತಾವರದ ಕನ್ನಡ ಸಂಘದವರು 'ಮರೆಯಬಾರದ ಮಹನೀಯರು' ಮಾಲಿಕೆಯಲ್ಲಿ ಘಾಟಿಯವರ ಸಾಹಿತ್ಯದ ಅವಲೋಕನಕ್ಕೆ ಅನುವು ಮಾಡುವ ಮೂಲಕ ಸಾಹಿತ್ಯ ಚರಿತ್ರೆಯಲ್ಲಿ ಅದರಲ್ಲೂ ಹಾಸ್ಯ ಸಾಹಿತ್ಯ ಚರಿತ್ರೆಯಲ್ಲಿ ರಮಾನಂದ ಘಾಟಿಯವರ ಪ್ರತಿನಿಧೀಕರಣದ ಔಚಿತ್ಯ ಮತ್ತು ಅಗತ್ಯವನ್ನು ಮನವರಿಕೆ ಮಾಡಿದ್ದಾರೆ.

*(ದಿನಾಂಕ ೧.೧೧.೦೩ರಂದು ಕಾಂತಾವರದ ಕನ್ನಡ ಸಂಘದವರು ಏರ್ಪಡಿಸಿದ್ದ 'ಮರೆಯಲಾರದ ಮಹನೀಯರು' ಎಂಬ ಸಂಸ್ಮರಣ ಕಾರ್ಯಕ್ರಮಕ್ಕೆ ಸಿದ್ಧಪಡಿಸಿದ ಲೇಖನದ ಸಂಕ್ಷಿಪ್ತ ರೂಪ.)*

**ಡಾ|| ಸಬಿಹಾ**
ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ
ಮಂಗಳ ಗಂಗೋತ್ರಿ - ೫೭೪ ೧೯೯

# ಪರಿವರ್ತನೆಯ ಹರಿಕಾರ

ವ್ಯಕ್ತಿಯ ಬೆಳವಣಿಗೆಯಲ್ಲಿ ಸಮಾಜದ ಪಾತ್ರ ಮತ್ತು ಸಾಮಾಜಿಕ ಪ್ರಗತಿಯಲ್ಲಿ ವ್ಯಕ್ತಿಯ ಮಹತ್ವವನ್ನು ಚೆನ್ನಾಗಿ ಅರಿತಿದ್ದ ಆರ್. ಎಂ. ಹಡಪದ್‌ರವರು ತಮ್ಮ ವಿಚಾರದಂತೆಯೇ ಬಾಳಿದರು. ವಿಶಿಷ್ಟರ ನಡುವೆ ವಿಶಿಷ್ಟರಾಗಿ ಮತ್ತು ಸಾಮಾನ್ಯರ ನಡುವೆ ತೀರ ಸಾಮಾನ್ಯರಾಗಿಯೇ ಬದುಕಿದರು. ಕಲಾವಿದರಾಗಿ ಅಪೂರ್ವ ಸಾಧನೆಗೈದ ಹಡಪದ್ ಅವರು ಕರ್ನಾಟಕದ ಕಲಾ ಇತಿಹಾಸದಲ್ಲಿಯೇ ಮಹತ್ವದ ಮೈಲುಗಲ್ಲು. ಕರ್ನಾಟಕದಲ್ಲಿ ಆಧುನಿಕ ಕಲೆಯ ಪ್ರವರ್ತಕರು. ನಾಡಿನ ಕಲಾ ವಲಯದ ಸಮಸ್ತರಿಗೂ ಪ್ರತ್ಯಕ್ಷ ಪರೋಕ್ಷವಾಗಿ ಗುರು ಸ್ಥಾನದಲ್ಲಿದ್ದವರು. ಆದರೆ – ಇದ್ಯಾವುದರ ಹಮ್ಮು-ಬಿಮ್ಮುಗಳು ಯಾವತ್ತಿಗೂ ಅವರ ಬಳಿ ಸುಳಿಯಲಿಲ್ಲ. ಲಕ್ಷ ಲಕ್ಷ ಸಾಮಾನ್ಯರ ನಡುವೆ ತಾನೂ ಒಬ್ಬ ಎಂಬಂತೆಯೇ ಬಾಳಿದರು. ತಮ್ಮ ವ್ಯಕ್ತಿತ್ವದ ರೂವಾರಿ ತಾವೇ ಆಗಿದ್ದ ಹಡಪದ್ ಹಲವಾರು ಖ್ಯಾತನಾಮರನ್ನು ರೂಪಿಸಿದ ಶಿಲ್ಪಿಯಾಗಿದ್ದರು. ನಾಡಿಗೆಲ್ಲ ನವ್ಯಕಲೆಯನ್ನು ಬೋಧಿಸಿದರು.

ಬಡತನದ ನೆಳಲಲ್ಲೇ ಹುಟ್ಟಿಬೆಳೆದ ಬಾದಾಮಿಯ ರುದ್ರಪ್ಪ ಮಲ್ಲಪ್ಪ ಹಡಪದರಿಗೆ ಕಷ್ಟದ ಬದುಕೇ ಮೊದಲ ಗುರು. ಅಲ್ಲಿಯೇ ಅವರು ದುಡಿಮೆಯ ಬದುಕನ್ನು, ಕ್ಷಮೆ, ಸೈರಣೆಗಳನ್ನು, ಇತರರಿಗಾಗಿ ಸಹಾನುಭೂತಿ, ಸಮಾನತೆಯ ಮನೋಭಾವವನ್ನು ರೂಢಿಸಿಕೊಂಡರು. ಜನರಿಗಾಗಿ ದುಡಿಯುವ, ತಮ್ಮಿಂದಾಗಬಲ್ಲುದನ್ನು ಮಾಡುವ ಗುಣ ಅವರಿಗೆ ಸ್ವಾಭಾವಿಕವಾಗಿಯೇ ಬಂದುವು. ಹೈಸ್ಕೂಲಿನಲ್ಲಿದ್ದಾಗಲೇ ಸ್ವಯಂ ಪ್ರೇರಣೆಯಿಂದ ವಯಸ್ಕರ ಶಿಕ್ಷಣದಲ್ಲಿ, ಹಾಡು-ನಾಟಕಗಳನ್ನು ಕಲಿಸುವುದರಲ್ಲಿ – ಮತ್ತು ರಸ್ತೆ ದುರಸ್ತಿಯಂತಹ ಕೆಲಸದಲ್ಲೂ ಕೂಡ – ಯಾವುದೇ ಫಲಾಪೇಕ್ಷೆಯಿಲ್ಲದೆ ಕೇವಲ ಸೇವಾ ಮನೋಭಾವದಿಂದಲೇ ತೊಡಗಿದರು. ಬೆಂಗಳೂರಿಗೆ ಬಂದನಂತರ ತಾವು ಆರಂಭಿಸಿದ ಕೆನ್ ಕಲಾಶಾಲೆಯಲ್ಲಿ ತಾವು ಉಪವಾಸವಿದ್ದು, ಅನ್ನ-ಆಶ್ರಯ ಕೊಟ್ಟು, ಶುಲ್ಕ ಪಡೆಯದೆ ಕಲೆಯನ್ನು ಕಲಿಸಿ ಬೆಳೆಸಿದ ವಿದ್ಯಾರ್ಥಿ-ಕಲಾವಿದರು ಅದೆಷ್ಟೊ.

ಹಡಪದರ ಜನಪರ ನಿಲುವು, ಕಾಳಜಿಗಳು ಅವರು ಸಾಂಸ್ಥಿಕ ಕಾರ್ಯ-ಚಟುವಟಿಕೆಗಳಲ್ಲಿ ತೊಡಗುವುದಕ್ಕೆ ಕಾರಣವಾದುವು. 'ಕರ್ನಾಟಕ ರಾಜ್ಯ ಶಾಂತಿ ಸೌಹಾರ್ದತಾ ಸಂಘಟನೆ'ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗಿಯಾಗುವುದರೊಂದಿಗೆ ತಮ್ಮಿಂದಾಗಬಹುದಾಗಿದ್ದ ಎಲ್ಲ ಬಗೆಯ ನೆರವನ್ನೂ ನೀಡಿದರು. 'ಭಾರತೀಯ ಜನಕಲಾ ಸಂಘ' (IPTA)ದ ಸಲಹಾ ಸಮಿತಿಯ ಸದಸ್ಯರಾಗಿ ಮತ್ತು 'ಸಮುದಾಯ'ದಂತಹ ಜನಪರ ಕಲಾ ಸಂಘಟನೆಯ ಪ್ರಾರಂಭದಿಂದಲೂ ಅದರ ಅವಿಭಾಜ್ಯ ಅಂಗವಾಗಿದ್ದ ಹಡಪದರು ತಮ್ಮ ಅಮೂಲ್ಯ ಸಲಹೆ-ಸೂಚನೆಗಳಿಂದ, ಮಾರ್ಗದರ್ಶನದಿಂದ ಜನಪರ ಕಲಾ ಚಳುವಳಿಗಳಿಗೆ ಉತ್ತೇಜನ ನೀಡಿದರು.

ಅಲ್ಲದೆ ಅನೇಕ ಜನಪರ ಸಂಘಟನೆಗಳಿಗೆ ತಮ್ಮ ಕಲಾ ಶಾಲೆಯ ಸ್ಥಳವನ್ನು ಮುಕ್ತವಾಗಿ-ಉಚಿತವಾಗಿ ನೀಡುವುದರ ಮೂಲಕ ಜನಪರ ಹೋರಾಟ, ಆಂದೋಲನಗಳನ್ನು ಬೆಂಬಲಿಸುತ್ತಿದ್ದರು. ಹಡಪದರ ಇಂಥ ಮನೋಭಾವ, ನಿಲುವುಗಳನ್ನು ಬಲ್ಲ ಕೆಲ ಮೂಲಭೂತವಾದಿಗಳು, ಕೋಮುವಾದಿಗಳು ಕೆನ್ ಕಲಾಶಾಲೆಯನ್ನು ಭೂಗತ ಚಟುವಟಿಕೆಯ ಕೇಂದ್ರವೆಂದು ಬಣ್ಣಿಸುವುದೂ ಇದೆ. ಆದರೆ ಯಾವ ಮೂಲಭೂತವಾದಿಗಳನ್ನೂ ಕೋಮುವಾದಿಗಳನ್ನೂ ತಮ್ಮ ಬಳಿ ಬಿಟ್ಟುಕೊಳ್ಳದಿದ್ದ ಹಡಪದರು ಜನಸಾಮಾನ್ಯರ ಚಳವಳಿಗಳನ್ನೂ, ಸಾಮಾಜಿಕ ಸಮಾನತೆಯನ್ನೂ ಮತ್ತು ಆ ಹಿನ್ನೆಲೆಯ ಹೋರಾಟಗಳನ್ನೂ ಬೆಂಬಲಿಸಿ ಪ್ರೋತ್ಸಾಹಿಸುವಲ್ಲಿನ ಅವರ ನಿರ್ಧಾರ ಅಚಲವಾಗಿತ್ತು.

ಯಾವುದನ್ನೂ ವಿಚಾರ, ತರ್ಕದ ಒರೆಗೆ ಹಚ್ಚಿಯೇ ಒಪ್ಪಿಕೊಳ್ಳುತ್ತಿದ್ದ ಹಡಪದರು ಯಾವ ದೈವ, ಧರ್ಮಗಳಲ್ಲೂ ನಂಬಿಕೆಯಿರಿಸಿರಲಿಲ್ಲ. ಮಾನವ ಧರ್ಮವೇ ಅವರು ಒಪ್ಪಿಕೊಂಡ, ಅಪ್ಪಿಕೊಂಡ ಧರ್ಮವಾಗಿತ್ತು. ಅವರೊಬ್ಬ ಉತ್ಕಟ ಮಾನವ ಪ್ರೇಮಿಯಾಗಿದ್ದರು. ಪ್ರಚಾರ, ತೋರಿಕೆಗಳಿಂದ ಬಹುದೂರ ಉಳಿದ ನೈಜ ಮಾನವತಾವಾದಿಯಾಗಿದ್ದರು; ಜಾತ್ಯತೀತರಾಗಿದ್ದರು. ಅವರನ್ನು ಕಾಣಲು ನಿತ್ಯವೂ ಬರುತ್ತಿದ್ದ ಪರಿಚಿತ-ಅಪರಿಚಿತ, ಗಣ್ಯ ಮತ್ತು ಸಾಮಾನ್ಯ ವ್ಯಕ್ತಿಗಳು ಅನೇಕರು. ಯಾರಿಗೂ ಯಾವತ್ತೂ ಅವರವರ ಕುಲ-ಜಾತಿಗಳ ಬಗ್ಗೆ ಕೇಳಿದವರಲ್ಲ; ಆದರಿಸುವಲ್ಲಿ ಹೆಚ್ಚು-ಕಮ್ಮಿ ಮಾಡಿದವರಲ್ಲ. ಹಡಪದ್ ಅವರು ತಮಗಿದ್ದ ಸ್ಥಾನ-ಮಾನ, ಪ್ರಭಾವಗಳನ್ನು ಬಳಸಿಕೊಂಡು ಹಣ-ಬಂಗಲೆ-ಏನೆಲ್ಲ ಮಾಡಬಹುದಾಗಿತ್ತು. ಆದರೆ ಪ್ರಾಮಾಣಿಕತೆ, ಸತ್ಯ, ಅಸ್ತೇಯಗಳು ಅವರ ಜೀವನದ ಉಸಿರಾಗಿದ್ದುವು. ಅವರು ಯಾವುದಕ್ಕೂ ಆಸೆ ಪಡಲಿಲ್ಲ. ಒಂದು ಮನೆಯನ್ನೂ ಮಾಡಿಕೊಳ್ಳಲಿಲ್ಲ. ಒಂದು ದಮ್ಮಡಿಯನ್ನೂ ಸಂಗ್ರಹಿಸಲಿಲ್ಲ. ಅವರು ಪ್ರಾಮಾಣಿಕತೆಯನ್ನು ಒಪ್ಪಿಕೊಂಡಂತೆಯೇ ಸರಳಜೀವಿಯೂ ಕೂಡ.

೧೯೮೭ರಿಂದ ೯೦ರವರೆಗೆ ಕರ್ನಾಟಕ ಲಲಿತಾಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಹಡಪದರು ಅನೇಕ ಕಲಾಗ್ರಂಥಗಳನ್ನು ಮತ್ತು ಅನೇಕ ಕಲಾವಿದರ ಜೀವನ ಚರಿತ್ರೆಗಳನ್ನು ಬರೆಸಿ ಪ್ರಕಟಿಸಿದರು. ಕಲೆಯ ವ್ಯಾಪಕ ಪ್ರಸಾರಕ್ಕಾಗಿ ಈ ಹಿಂದಿಗಿಂತಲೂ ಹೆಚ್ಚಿನ ಪುಸ್ತಕಗಳು ಹೊರಬಂದದ್ದು ಅವರ ಅವಧಿಯಲ್ಲಿಯೇ. ಅಲ್ಲದೆ ಅಕಾಡೆಮಿಯಿಂದ ಮತ್ತು ವಿಶ್ವವಿದ್ಯಾಲಯಗಳ ಸಹಯೋಗದಿಂದ ಅನೇಕ ವಿಶೇಷೋಪನ್ಯಾಸಗಳನ್ನು ಆಯೋಜಿಸಿದರು. ರಾಜ್ಯದ ಒಳ-ಹೊರಗಿನ ತಜ್ಞರಿಂದ, ವಿಮರ್ಶಕರಿಂದ ವಿಚಾರಗೋಷ್ಠಿಗಳನ್ನು ಏರ್ಪಡಿಸಿದರು. ಅನೇಕ ಶಿಬಿರ ಹಾಗೂ ಕಾರ್ಯಾಗಾರಗಳನ್ನು ಹಮ್ಮಿಕೊಂಡು ಕಲಾವಿದರ ಬೆಳವಣಿಗೆಗೆ ಕಾರಣರಾದಂತೆ ಕಲೆಯನ್ನು ಜನಸಾಮಾನ್ಯರಿಗೆ ತಲುಪಿಸಲು ಕೈಗೊಂಡ ಕಾರ್ಯಕ್ರಮಗಳು ಅನೇಕ. ಅಕಾಡೆಮಿಯ ಗ್ರಾಫಿಕ್ ಸ್ಟುಡಿಯೋ ಸ್ಥಾಪಿತವಾದದ್ದೂ ಹಡಪದರಿಂದಲೇ.

ಹಡಪದ ಅವರ ಕಲಾಕೃತಿಗಳ ವಸ್ತು-ವಿಷಯ, ತಂತ್ರ, ಮಾಧ್ಯಮ, ಶೈಲಿಗಳ ಹರವು ವಿಸ್ತಾರವಾದದ್ದು. ಚಿತ್ರ, ಭಿತ್ತಿಚಿತ್ರ, ಶಿಲ್ಪ ಮುಂತಾದ ಪ್ರಕಾರಗಳಲ್ಲಿ ಅವರು ಬಳಸುವ ಮಾಧ್ಯಮ, ಪರಿಕರ, ತಂತ್ರ ಮತ್ತು ಶೈಲಿಗಳ ಹರವು ವೈವಿಧ್ಯ ಬೆರಗನ್ನುಂಟು ಮಾಡುವಂತಹುದು. ಯಾವತ್ತಿಗೂ ಪ್ರಯೋಗಶೀಲ ಕಲಾವಿದರಾಗಿದ್ದ ಹಡಪದರು ಯಾವ ಒಂದು ಶೈಲಿ, ಮಾಧ್ಯಮಗಳಿಗೆ ಸೀಮಿತವಾಗಿರಲಿಲ್ಲ. ನಿರಂತರವಾಗಿ ಹೊಸತನ್ನು ಆವಿಷ್ಕರಿಸುವ ಅವರ ಗುಣವೇ ಅವರನ್ನು ಒಬ್ಬ ಅನನ್ಯ ಕಲಾವಿದರನ್ನಾಗಿ ಗುರುತಿಸುವುದಕ್ಕೆ ಕಾರಣವಾಗಿದೆ. ಅವರ ಬೋಧನಾ ವಿಧಾನದ ಜೀವಾಳವೂ ಇದೇ ಆಗಿತ್ತು.

ಹಡಪದರ ಕಲಾಕೃತಿಗಳಲ್ಲಿ ರೂಪನಿಷ್ಠ ಒಲವು ಪ್ರಧಾನವಾಗಿರುವುದಾದರೂ ಜೀವನಾನುಭವದ ಸ್ಪರ್ಶದಿಂದ ಯಾವೊಂದು ಕೃತಿಯೂ ಹೊರತಾಗಿ ಉಳಿಯುವುದಿಲ್ಲ. ಬದುಕಿನಲ್ಲಿಯ ಬಹುಮುಖೀ ಅನುಭವಗಳು ಹಾಸುಹೊಕ್ಕಾಗಿ ಇರುವ ಅವರ ಕೃತಿಗಳಲ್ಲಿ ಸಾಮಾಜಿಕ ಪ್ರಜ್ಞೆ, ಕಾಳಜಿ ಪ್ರತಿಯೊಂದು ಕೃತಿಗೂ ಸಹಜ ಮತ್ತು ತೀವ್ರತರ ಪ್ರೇರಣೆಯಾಗಿವೆ. ಶೋಷಣೆ, ದೀನದಲಿತರ ಅಸಹನೀಯ ಸ್ಥಿತಿ, ರೈತರ-ಗ್ರಾಮೀಣ ಜನರ ಶ್ರಮಜೀವನ ಮುಂತಾದುವು ಅವರ ಜನಾನುರಾಗದ ತೀವ್ರ ಸಂವೇದನೆಯಿಂದಾಗಿಯೇ ಅಭಿವ್ಯಕ್ತಿಗೊಂಡುವು. ಸಾಮಾಜಿಕ ಶೋಷಣೆಯ ವಿವಿಧ ಮುಖಗಳನ್ನು ಅನಾವರಣಗೊಳಿಸಿ ಮಾನವೀಯತೆಯನ್ನು ಶೋಧಿಸುವ, ಮಾನವೀಯ ಸಂವೇದನೆಗಳನ್ನು ಸೂಕ್ಷ್ಮಗೊಳಿಸುವ ತೀವ್ರ ತುಡಿತವೇ ಈ ಎಲ್ಲ ಕೃತಿಗಳ ಹಿನ್ನೆಲೆಯಾಗಿದೆ. ಅಲ್ಲದೆ ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಡಂಬನೆಯೂ ಅವರ ಕೃತಿಗಳ ವೈಶಿಷ್ಟ್ಯವಾಗಿದೆ. ಕಲೆಯನ್ನು ಜನಪರಗೊಳಿಸುವಲ್ಲಿ ಮತ್ತು ಜನಜಾಗೃತಿಗೆ ಬಳಸಿಕೊಳ್ಳುವಲ್ಲಿ ಹಡಪದರ ಪ್ರಯತ್ನ ವಿಶೇಷವಾದುದು. ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿನ 'ಸಮೂಹ ಶಿಲ್ಪ'ವು ಸಾಕಾರಗೊಂಡ ಹಡಪದರ ಕಲ್ಪನೆಯ ಅದ್ಭುತವೇ ಆಗಿದೆ.

ಹಡಪದರು ಯಾವ ಪ್ರಶಸ್ತಿ, ಸನ್ಮಾನಗಳಿಗಾಗಿ ಅರ್ಜಿ ಹಾಕಲಿಲ್ಲ, ಅರಸಿ ಹೋಗಲಿಲ್ಲ. ಎಲ್ಲ ಪ್ರಶಸ್ತಿಗಳೂ, ಸ್ಥಾನ-ಮಾನಗಳೂ ಅವರನ್ನೇ ಅರಸಿ ಬಂದವು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಆರ್. ಎಂ. ಹಡಪದರು ಕೇಂದ್ರ ಲಲಿತಕಲಾ ಅಕಾಡೆಮಿಯ, ತಂಜಾವೂರಿನ ದಕ್ಷಿಣವಲಯ ಸಾಂಸ್ಕೃತಿಕ ಕೇಂದ್ರ ಮತ್ತು ನಾಗಪುರದ ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರದ ಸದಸ್ಯರಾಗಿದ್ದರು. ಹಂಪಿ ಕನ್ನಡ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿದ್ದ (೧೯೯೨-೯೫) ಅವರನ್ನು ೧೯೯೫ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಫೆಲೋಶಿಪ್ ನೀಡಿ ಗೌರವಿಸಲಾಯಿತು.

ಹಡಪದರು ರಚಿಸಿದ ಸಹಸ್ರಾರು ಕೃತಿಗಳಲ್ಲಿ ಅನೇಕ ಕೃತಿಗಳು ರಾಜ್ಯದ ಒಳ-ಹೊರಗಿನ ಸಂಗ್ರಹಾಲಯಗಳಲ್ಲಿ ಪ್ರದರ್ಶಿತವಾಗಿದೆ; ದೆಹಲಿಯ 'ರಾಷ್ಟ್ರೀಯ ಆಧುನಿಕ ಕಲಾ ಸಂಗ್ರಹಾಲಯ' ಮತ್ತು ಕೇಂದ್ರ ಲಲಿತಕಲಾ ಅಕಾಡೆಮಿಯಲ್ಲಿ, ಕರ್ನಾಟಕ, ಗೋವಾ, ಚೆನ್ನೈಗಳ ಲಲಿತಕಲಾ ಅಕಾಡೆಮಿಯಲ್ಲಿ ಹಾಗೂ ಬ್ರಿಟನ್, ಜರ್ಮನಿ, ಅಮೆರಿಕದ ಹಲವಾರು ಸಂಗ್ರಹಾಲಯಗಳಲ್ಲಿ ಶಾಶ್ವತ ಪ್ರದರ್ಶನ ಕಂಡಿವೆ. ಬೆಂಗಳೂರಿನ ಧರ್ಮಾರಾಂ ಕಾಲೇಜಿನ ಚರ್ಚಿನಲ್ಲಿ, ಇಸ್ರೊ ಬಾಹ್ಯಾಕಾಶ ಕೇಂದ್ರದಲ್ಲಿ, ಜವಾಹರಲಾಲ್ ನೆಹರೂ ಸೆಂಟರ್ ಫಾರ್ ಅಡ್ವಾನ್ಸ್‌ಡ್ ಸೈಂಟಿಫಿಕ್ ರಿಸರ್ಚ್ ಹಾಗೂ ರಾಮನಗರದ ಜಾನಪದ ಲೋಕದಲ್ಲಿ ಅವರ ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ.

ರಾಜಶೇಖರ ರಾಮಣ್ಣ ಬಿಲ್ವಪತ್ರಿ, ಕೆನ್ ಕಲಾಶಾಲೆ, ಶೇಷಾದ್ರಿಪುರಂ, ಬೆಂಗಳೂರು - ೨೦

# ಕಲಾವಿದ ಆರ್. ಎಂ. ಹಡಪದ್





''ನಾವು ಬೆಳೆಯುವುದೆಲ್ಲ ಜನರ ಮಧ್ಯದಲ್ಲಿ. ಅವರಿಂದ ದೂರ ಹೋಗದಂತೆ, ಅವರಿಗೆ ನಿಲುಕುವಂತೆ ಬೆಳೆಯುವುದಿದೆಯಲ್ಲ ಅದು ಬೆಳವಣಿಗೆಯ ನಿಜವಾದ ಲಕ್ಷಣ.''

– ಆರ್. ಎಂ. ಹಡಪದ್











ಎನ್. ಹನುಮಯ್ಯ ಅವರ ಗ್ರಾಮ್ಯ ಪರಿಸರ



ಎಸ್. ಎಂ. ಪಂಡಿತ ರಚಿಸಿದ ಮುಖಚಿತ್ರ



# ಕಲಾರಸಿಕ ಕಂಡ ಕರ್ನಾಟಕದ ಕಲಾ ನವೋದಯ



ಜಾನಪದ ನೃತ್ಯಗಾರರು – ಎಂ. ಎ. ಚೆಟ್ಟಿ



ರಘೋತ್ತಮ ಪುಟ್ಟ ರಚಿಸಿದ ಚಿತ್ರ



ಕೃಷ್ಣಸ್ವಾಮಿ ರಚಿಸಿದ ಚಿತ್ರ

ಹತ್ತ : ಪುಟ 125ರಲ್ಲಿ →

ಕರ್ನಾಟಕದ ನವೋದಯ ಕಲಾವಿದರು ಎಂಬ ಶೀರ್ಷಿಕೆಯಡಿಯಲ್ಲಿ ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತು ಆಯೋಜಿಸಿದ್ದ ಕಲಾ ಪ್ರದರ್ಶನ (೧೦ರಿಂದ ೧೫ ನವೆಂಬರ್ ೨೦೦೩) ವೀಕ್ಷಿಸುತ್ತಾ ಹೋದಂತೆ ಒಂದು ಶತಮಾನದ ಹಾಗೂ ಹಿರಿಯ ಸಮಕಾಲೀನರ ನೆನಪು ನಿಚ್ಚಳವಾಗಿ ಆಗುವಂತಿತ್ತು. ಸಾಹಿತ್ಯದಲ್ಲಿ ಹಳೆಗನ್ನಡ, ನಡುಗನ್ನಡ, ನವೋದಯ, ನವ್ಯ, ದಲಿತ, ಬಂಡಾಯ ಎಂದು ಗುರ್ತಿಸಿದಂತೆ ಚಿತ್ರಕಲಾ ಬೆಳವಣಿಗೆಯಲ್ಲಿ ಸಹ ನವೋದಯ ಎಂದು ಗುರ್ತಿಸಿರುವುದೊಂದು ವಿಶೇಷ. ನವೋದಯ ಸಾಹಿತ್ಯದ ಗುಂಪಿಗೆ ಸೇರಿದ ಕುವೆಂಪು, ಬೇಂದ್ರೆ, ಮಾಸ್ತಿ ಮುಂತಾದವರ ಕಾವ್ಯಗಳಲ್ಲಿ ಅತಿ ಕ್ಲಿಷ್ಟವೆನಿಸಿದ ಸಂಸ್ಕೃತ ಭೂಯಿಷ್ಠವಾದ ಭಾಷೆ ಬಳಸದೆ ಸಾಮಾನ್ಯ ಓದುಗನನ್ನು ಗಮನದಲ್ಲಿರಿಸಿಕೊಂಡು ರಚಿಸಿದವುಗಳಾದರೂ, ಸಾಹಿತ್ಯರಚನೆಯಲ್ಲಿ ಬಿಗುವು, ಅಧ್ಯಯನದಲ್ಲಿ ಅಪಾರ ಶ್ರದ್ಧೆ ಕಾಣುತ್ತೇವೆ. ಅಂತೆಯೇ ರಮ್ಯಕಲೆ, ಅಕಾಡಮಿಕ್ ಶೈಲಿ ಚಿತ್ರಗಳು, ಇತ್ಯಾದಿ ಚಿತ್ರ ಭಾಷೆಯಿಂದ ಕರೆಯುತ್ತಿದ್ದ ಈ ತೆರನಾದ ಕಲೆ, ಪ್ರೇಕ್ಷಕ ಮತ್ತು ಕಲಾವಿದನನ್ನು ಹತ್ತಿರ ತರುತ್ತದೆ. ಇಲ್ಲಿಯೂ ಕಲಾವಿದನ ಸಾಧನೆ, ಅಭ್ಯಾಸದಲ್ಲಿನ ತೀವ್ರತೆ ಕಾಣುತ್ತೇವೆ. ಸಾಮಾನ್ಯ ನೋಡುಗ ತಾನು ಏನನ್ನು ನೋಡುವನೋ ಅದನ್ನೇ ಕಲಾವಿದ ನೋಡುವನಾದರೂ, ಅದನ್ನು ಚಿತ್ರಿಸಿ, ಇತರರು ನೋಡಿ ಆನಂದ ಪಡುವಂತೆ ಮಾಡುತ್ತಾನೆ. ಅದು ಭೂದೃಶ್ಯ, ನಿಸರ್ಗ ದೃಶ್ಯ, ರೂಪಚಿತ್ರ, ಅಥವಾ ಪುರಾಣದಲ್ಲಿ ಬರುವ ಹಲವು ವ್ಯಕ್ತಿಗಳ ಸಮೂಹ ಚಿತ್ರಗಳಾಗಿರಬಹುದು, ಇಲ್ಲವೇ ನಿತ್ಯನೋಟದ ಬದುಕಿನ ಬಿಂಬಿತವಾಗಿರಬಹುದು. ಆದರೆ ಅವುಗಳ ರಚನೆಯಲ್ಲಿ ಕಲಾವಿದನ ಸಾಧನೆ, ಅಧ್ಯಯನ, ತದ್ರೂಪವನ್ನು ತರುವ ಕೈಚಳಕ ಮಾತ್ರ ಭಾಷೆಗೆ ನಿಲುಕದ ದೃಶ್ಯಬಂಧ. ಇಂತಹ ಕಲಾಸೃಷ್ಟಿಯಲ್ಲಿ ತಮ್ಮ ಜೀವಿತವನ್ನು ಸವೆಸಿದ ಕಲಾವಿದರ ಹಿನ್ನೆನಪೆ ಈ ಪ್ರದರ್ಶನದ ಉದ್ದೇಶವಾಗಿತ್ತು.

ಗತಿಸಿದವರು, ಎಂಟು ದಶಕಗಳನ್ನು ಕಂಡುಂಡು ನಮ್ಮೊಡನೆ ಇರುವವರು ಮತ್ತು ಕರ್ನಾಟಕದ ಕಲಾಕ್ಷೇತ್ರದಲ್ಲಿ ಅತ್ಯುನ್ನತ ಪ್ರಶಸ್ತಿಯಾದ ವೆಂಕಟಪ್ಪ ಪ್ರಶಸ್ತಿ ಪಡೆದವರದು ಸೇರಿದಂತೆ ೬೩ ಕಲಾವಿದರ ಸುಮಾರು ೧೫೦ಕ್ಕಿಂತಲೂ ಹೆಚ್ಚಿನ ಕಲಾಕೃತಿಗಳಿದ್ದು ಗತಿಸಿದವರದೇ ಮೇಲುಗೈ ಪಡೆದು ನಮ್ಮೊಡನೆ ಇರುವ ಕೇವಲ ಹತ್ತು ಕಲಾವಿದರ ಚಿತ್ರಗಳನ್ನು ಕಾಣಬಹುದಾಗಿರುವುದೊಂದು ವಿಶೇಷವೆನಿಸುತ್ತಿತ್ತು. ಗತಿಸಿದವರಲ್ಲಿ ಉತ್ತರ ಕರ್ನಾಟಕ ಭಾಗದವರಾದ ದಂಡಾವತಿಮಠ, ಡಿ. ಜಿ. ಬಡಿಗೇರ್, ಎಂ. ವಿ. ಮಿಣಜಗಿ, ಡಿ. ವಿ. ಹಾಲಬಾವಿ, ಶಿವಾನಂದ ಅಕ್ಕಿ ಟಿ. ಪಿ. ಅಕ್ಕಿ ಎಂ. ಟಿ. ಭೂಪತಿ, ಎನ್. ಸಿ. ದೇಸಾಯಿ, ಆಳಂದಕರ್, ಬಿ. ಎಂ. ಹಳಿಜೋಳ, ಎಸ್. ಎಂ. ಪಂಡಿತ್, ಎನ್. ಜಿ. ಮುತ್ಕೇಕರ್, ಎಂ. ಎ. ಚೆಟ್ಟಿ , ಶಾಂತಲಿಂಗಪ್ಪ ಪಾಟೀಲ್, ಎನ್. ಜಿ. ಬಡಿಗೇರ್ ಮತ್ತು ನಮ್ಮೊಡನೆ ಇರುವ ಸೋಮಶೇಖರ ಎಂ. ಸಾಲಿ ಮುಖ್ಯರೆನಿಸುತ್ತಾರೆ. ಹಳೇ ಮೈಸೂರಿನ ವಿಭಾಗದಲ್ಲಿ ಖ್ಯಾತಗೊಂಡಿದ್ದವರಲ್ಲಿ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ದಲಿಂಗ ಸ್ವಾಮಿಗಳು, ಕೆ. ವೆಂಕಟಪ್ಪ, ವೈ. ನಾಗರಾಜು, ವೈ. ಸುಬ್ರಮಣ್ಯರಾಜು, ಕೇಶವಯ್ಯ, ಎಂ. ವೀರಪ್ಪ, ಎಂ. ಟಿ. ವಿ. ಆಚಾರ್ಯ, ಪಿ. ಆರ್. ತಿಪ್ಪೇಸ್ವಾಮಿ, ಎನ್. ಹನುಮಯ್ಯ, ಎಂ. ಜಿ. ಶುದ್ಧೋದನ, ರುಮಾಲೆ ಚೆನ್ನಬಸವಯ್ಯ, ಸುಭಾಷಿಣಿದೇವಿ, ಮತ್ತು ಹಾಲಿ ನಮ್ಮೊಡನೆ ಇರುವ ಆರ್. ಸೀತಾರಾಂ, ರಘೋತ್ತಮ ಪುಟ್ಟಿ , ವಿಷ್ಣುದಾಸ ರಾಮದಾಸ, ಆರ್. ಎಂ. ಹಡಪದ್ (ಪ್ರದರ್ಶನದ ನಂತರ ಗತಿಸಿದರು), ಇತ್ಯಾದಿಗಳು ಮುಖ್ಯರೆನಿಸುತ್ತಾರೆ. ದಿ॥ ಪಾವಂಜೆಯವರ ಕೃತಿಗಳು ಸ್ಮರಣೀಯ ಅನುಭವ ತರುವಂತಹದ್ದು.

ಕೆಲ ಕಲಾವಿದರು ಅನುಸರಿಸಿಕೊಡು ಬಂದ ಶೈಲಿಯಿಂದಲೇ ಇಂಥವರದೆಂದು ಗುರ್ತಿಸಬಹುದಾದವರಲ್ಲಿ ಎಸ್. ಎಂ. ಪಂಡಿತರ ಚಿತ್ರಗಳಲ್ಲಿ ರೂಪಚಿತ್ರದ ತಾಜಾತನ, ಪುರಾಣ ಪ್ರಸಂಗಗಳಿಗೆ ವರ್ಣದ ಹೊಳಹನ್ನು ನೀಡುವ ರೀತಿ, ಸಿದ್ಧಲಿಂಗ ಸ್ವಾಮಿಗಳ ಚಿತ್ರಗಳಲ್ಲಿ ದೈವತ್ವದ ಕಳೆ, ನಿಜವಾದ ವಜ್ರ ವೈಢೂರ್ಯಗಳ ಹರಳುಗಳನ್ನೇ ಅಳವಡಿಸಿದ್ದಾರೇನೋ ಎಂಬ ಭ್ರಮೆ ಬರಿಸುವಂತಹ ವರ್ಣಚಿತ್ರ ರಚನೆ, ಇವರ ಶಿಷ್ಯೆ ಸುಭಾಷಿಣಿದೇವಿಯವರ ಗಿರಿಜಾ ಕಲ್ಯಾಣ ಕುರಿತ ಪುರಾಣ ಕತೆಗೆ ರಚಿಸಿದ ದೃಶ್ಯ ವೈಭವ, ಮಧುಗಿರಿ ರಾಮು ಅವರ ದೇವತಾ ಪಟ ಚಿತ್ರಗಳು, ಇವು ಕಣ್ಣು ಕೋರೈಸುವ ವರ್ಣಗಳೊಂದಿಗೆ ಮುದ್ರಣ ತಂತ್ರಗಾರಿಕೆಗೆ ಪೂರಕವಾದ ವಿನ್ಯಾಸ ಹೊಂದಿವೆ. ಹಳಿಜೋಳ ಮತ್ತು ಸೋಮಶೇಖರ ಸಾಲಿಯವರು ರಚಿಸಿದ ಕದಳಿವನದಲ್ಲಿ ಅಕ್ಕಮಹಾದೇವಿ ಎಂಬ ಕೃತಿಗಳಲ್ಲಿ ಸಾಮ್ಯತೆ ಇದೆ.

ವಿಷ್ಣುದಾಸ ರಾಮದಾಸ, ಜಿ. ಎಸ್. ಪಾಠಕ್, ಆಳಂದಕರ್, ಕೆ. ಕೆ. ಹೆಬ್ಬಾರ್, ಅವರುಗಳ ರೂಪ ಚಿತ್ರಗಳು, ಎಸ್. ಎಸ್. ಕುಕ್ಕೆ ಅವರ ಬೆಡಗಿನ ಬಿನ್ನಾಣವನ್ನರುಹುವ ನಲ್ಲ-ನಲ್ಲೆಯರ ಚಿತ್ರಗಳು, ಗಮನಾರ್ಹವೆನಿಸುತ್ತವೆ. ಉಳಿದಂತೆ ನಿಸರ್ಗ ದೃಶ್ಯ ರಚನೆಯೇ ಎಲ್ಲರ ಪ್ರಮುಖ ಆಶಯವಾಗಿರುವುದು ಎದ್ದುಕಾಣುವ ಅಂಶ.

ಸಂಗ್ರಹಿತವಾದ ಈ ಪ್ರದರ್ಶನದಲ್ಲಿ ಕಲಾವಲಯದಲ್ಲಿ ಹೆಸರಿದ್ದೂ ನೋಡಲಾಗದ ಅಪರೂಪ ಕಲಾವಿದರ ಚಿತ್ರಗಳೆಂದರೆ ಟಂಕಸಾಲೆ ಮತ್ತು ಎಫ್. ಬಿ. ಯಲವಟ್ಟಿಯವರ ಜಲವರ್ಣದ ಭೂದೃಶ್ಯಗಳು ಮತ್ತು ಪ್ರಚಾರ ವಂಚಿತರಾದ ಹುಬ್ಬಳ್ಳಿಯ ಹಳಿಜೋಳ, ಪಿ. ಸುಬ್ಬರಾವ್, ಕೃಷ್ಣಸ್ವಾಮಿ, ಎಸ್. ರಾಮಸ್ವಾಮಿ, ಶ್ರೀನಿವಾಸರಾವ್ ಮಧ್ಯಸ್ಥ, ಚಾಮಪ್ಪ ರಾಜೇ ಅರಸ್ ಇವರುಗಳ ಚಿತ್ರಗಳು. ಕೇಶವಯ್ಯನವರು ಅರಮನೆಯ ಹಿರಿಯ ಕಲಾವಿದರಾಗಿದ್ದು ಅನೇಕ ಶಿಷ್ಯರನ್ನು ತಯಾರು ಮಾಡಿದವರಾಗಿದ್ದರೂ, ಅವರ ಕೃತಿಗಳು ಅರಮನೆಯ ಅಂಗಳಕ್ಕೆ ಮಾತ್ರ ಸೀಮಿತವಾಗಿರುವುದರಿಂದ ಲಭ್ಯವಿರುವ ಏಕೈಕ ಚಿತ್ರ ನೋಡಲು ದೊರಕಿರುವುದೊಂದು ವಿಶೇಷ.

ಎನ್. ಎಸ್. ಸುಬ್ಬುಕೃಷ್ಣ ಅವರು ರಚಿಸಿರುವ ಕಲಾವಿದ ಎಂ. ವೀರಪ್ಪನವರ ಪೂರ್ಣ ಪ್ರಮಾಣದ ಚಿತ್ರವನ್ನು ಪ್ರದರ್ಶಿಸಿದ್ದರೂ ಅವರ ಹೆಸರನ್ನು ಪ್ರಕಟಿತ ಪರಿಚಯದ ಕಿರುಹೊತ್ತಗೆಯಲ್ಲಿ ದಾಖಲಿಸದಿರುವುದೊಂದು ವಿಪರ್ಯಾಸ. ಈ ಪ್ರದರ್ಶನದೊಂದಿಗೆ ವೆಂಕಟಪ್ಪ ಪ್ರಶಸ್ತಿ ಪಡೆದ ಕಲಾವಿದರಾದ ಎಸ್. ಎಂ. ಚಂದ್ರಶೇಖರ್, ಆರ್. ಎಂ. ಹಡಪದ, ಖಂಡೇರಾವ್, ಮುನೋಲಿ ಅವರ ಚಿತ್ರಗಳಿವೆ. ಅದರಲ್ಲಿ ಹಡಪದ್ ಅವರು ರಚಿಸಿದ ಚಿತ್ರಕಲಾಪರಿಷತ್ತಿನ ಚೈತನ್ಯ ಶಕ್ತಿಯಾಗಿದ್ದ ದಿವಂಗತ ನಂಜುಂಡರಾವ್ ಅವರ ಮುಖಚಿತ್ರ ರಚನೆ ಗಮನ ಸೆಳೆಯುತ್ತದೆ. ಸದಾ ಕಾರ್ಯತಂತ್ರಕ್ಕಾಗಿ ಚಿಂತಿಸುವ ಮನದಲ್ಲಿನ ಮುಖದ ಇಂಗಿತವನ್ನು ಅವರು ಕುಂಚದಂಚಿನಿಂದ ಸೆರೆಹಿಡಿದಿದ್ದಾರೆ.

ನವೋದಯ ಕಲಾವಿದರ ಗುಂಪಿಗೆ ಸೇರಬಹುದಾದವರ ಸಾಲಿನಲ್ಲಿ ಪಾವಂಜೆ ಗೋಪಾಲಕೃಷ್ಣಯ್ಯ, ಎನ್. ಎಸ್. ಎಸ್. ಅಯ್ಯಂಗಾರ್, ಬಿ. ಪಿ. ಬಾಯರಿ, ಬಿ. ಜಿ. ಮಹಮದ್, ಅಬ್ದುಲ್ ಅಜೀಜ್, ಶಂಕರರಾಜು, ಹುಲಿಗೆರೆ ಬಿ. ಸಿದ್ದಪ್ಪ, ಎನ್. ಆರ್. ಲಕ್ಷ್ಮಣರಾವ್, ಅ. ನ. ಸುಬ್ಬರಾವ್ ಅವರ ಚಿತ್ರಗಳಿಲ್ಲದಿರುವುದು ಗಮನಕ್ಕೆ ಬರುವ ಅಂಶ. ಕಲಾಕೃತಿ ಸಂಗ್ರಹಿಸುವುದು ಸುಲಭದ ಮಾತಲ್ಲ. ಹಾಗೆಯೇ ಸಂರಕ್ಷಿಸುವುದು ಅಷ್ಟೇ ಕಷ್ಟದಾಯಕವಾದುದು. ಕಲಾವಿದರ ಖಾಸಗಿ ಸಂಗ್ರಹಗಳೇ ಬರಿದಾಗಿದ್ದಾಗ ಇರುವವರ ಬಳಿಯಿಂದ ತಂದು ಪ್ರದರ್ಶಿಸುವ ಸಾಹಸ ಸ್ತುತ್ಯರ್ಹ. ಮುಂದೆ ಈ ತೆರನಾದ ಸಂಗ್ರಹದೊಂದಿಗೆ ಖಾಯಂ ಪ್ರದರ್ಶನಾಲಯ ಮಾಡುವತ್ತ ಚಿತ್ರಕಲಾ ಪರಿಷತ್ತು ಯೋಚಿಸಿರುವುದು ಸಮಯೋಜಿತ, ಸುಸಂಗತ.

---

ಎಲ್. ಶಿವಲಿಂಗಪ್ಪ, ಪ್ರಿನ್ಸಿಪಾಲ್, ಆಚಾರ್ಯ ಚಿತ್ರಕಲಾ ಭವನ, ಬಸವನಗರ, ಬೆಂಗಳೂರು-೫೬೦ ೦೩೭

# ನಿಶಾವಾಗ್ನಿಗಳ ನಿತ್ಯ ಸತ್ಯಗಳು

ಅಮೆರಿಕಾ ದೇಶ ಆರ್ಥಿಕ ಮುಗ್ಗಟ್ಟಿನಿಂದ ಒದ್ದಾಡಲು ಶುರು ಮಾಡಿದ ತಕ್ಷಣ ಇಡೀ ಪ್ರಪಂಚದ ಎಲ್ಲಾ ದೇಶಗಳು ಆರ್ಥಿಕ ಮುಗ್ಗಟ್ಟಿನಿಂದ ಒದ್ದಾಡಿದವು. ನೆಲದ ಮೇಲೆ ಬಿದ್ದು ಒದ್ದಾಡುತ್ತಿರುವ ಆನೆಯ ಬುಡದಲ್ಲಿ ಸಿಕ್ಕಿಬಿದ್ದ ಸಣ್ಣ ಪುಟ್ಟ ಆರೋಗ್ಯ ಜೀವಿಗಳಂತೆ! ಅಂತಹ ಪರಿಸ್ಥಿತಿಯಲ್ಲೂ ಅಮೆರಿಕಾ ಛಲದಿಂದ ಎರಡು ಭರ್ಜರಿ ಯುದ್ಧಗಳನ್ನು ಮಾಡಿ ಗೆದ್ದಿದೆ. ಯುದ್ಧ ಭೂಮಿಯಲ್ಲಿ ಪ್ರಯೋಗಿಸಿದ ಶಸ್ತ್ರಾಸ್ತ್ರಗಳಿಗಿಂತಲೂ ಶಕ್ತಿಯುತ ಮಾರಕ ಅಸ್ತ್ರಗಳು ಪ್ರಪಂಚದ ಎಲ್ಲೆಡೆಯೂ ಪ್ರಹಾರವಾದಂತೆ ದೇಶಗಳು ಮತ್ತಷ್ಟು ಆರ್ಥಿಕ ಮುಗ್ಗಟ್ಟಿನಿಂದ ವಿಲವಿಲನೆ ಒದ್ದಾಡಿವೆ. ಈಗ ಅಮೆರಿಕಾ ಸಮಾಧಾನದಿಂದ ಉಸಿರಾಡಲು ಪ್ರಾರಂಭಿಸಿದೆ. ಬದುಕಿದೆಯಾ ಬಡಜೀವವೆ ಎಂದು ಬಾಕಿ ಎಲ್ಲಾ ದೇಶಗಳು ಸಣ್ಣಗೆ ಉಸಿರಾಡಲು ಮೊದಲಿಟ್ಟಿವೆ.

ಕಳೆದ ಹದಿನೈದು ವರ್ಷಗಳಲ್ಲಿ ಹುಣ್ಣಿಮೆಯ ಕಡೆ ಧಾವಿಸಿದ ಶುಕ್ಲಪಕ್ಷದ ಚಂದ್ರನಂತೆ ಒಂದೇ ಸಮನೆ ಅಭಿವೃದ್ಧಿಯನ್ನು ಕಂಡಿದ್ದ ಭಾರತದ ಸಾಫ್ಟ್‌ವೇರ್ ವ್ಯಾಪಾರ ಈಗ ಕೃಷ್ಣಪಕ್ಷದ ಕತ್ತಲೆಯನ್ನು ಅನುಭವಿಸುವಂತಾಗಿದೆ. ಆರ್ಥಿಕ ಮುಗ್ಗಟ್ಟಿನಿಂದ ತತ್ತರಿಸಿ ಕಣ್ಣು ಮುಚ್ಚಿದ ಕಂಪನಿಗಳದೆಷ್ಟೋ! ಕೆಲಸ ಕಳೆದುಕೊಂಡು ಮನೆಯಲ್ಲಿ ಕೂಡಬೇಕಾಗಿ ಬಂದ ಚಾಣಾಕ್ಷ ಇಂಜಿನಿಯರುಗಳೆಷ್ಟೋ!! ತಿಂಗಳಿಗೆ ಲಕ್ಷ ರೂಪಾಯಿ ಸಂಬಳವನ್ನು ಪಡೆಯುತ್ತಿದ್ದ ಸಾಫ್ಟ್‌ವೇರ್ ಉದ್ಯೋಗಿ ಹತ್ತು ಸಾವಿರಕ್ಕೂ ಕೆಲಸ ಮಾಡಲು ಶುರು ಮಾಡಿದ್ದು ನುಂಗಲಾರದ ಸತ್ಯ. ಸಾಫ್ಟ್‌ವೇರ್‌ನಲ್ಲಿ ಬರುತ್ತಿದ್ದ ಸಂಬಳದ ಮೋಡಿಗೆ ಸಿಕ್ಕು ಉನ್ನತ ವಿದ್ಯಾಭ್ಯಾಸವೆಂದರೆ ಕಂಪ್ಯೂಟರ್ ಸೈನ್ಸ್ ಮಾತ್ರ ಎಂಬಂತೆ ನಮ್ಮ ಯುವಜನಾಂಗ ದುಬುದುಬು ಕಂಪ್ಯೂಟರ್ ಪದವಿಗಳನ್ನು ಮುಗಿಸಿ ಹೊರಬಂದು ದಿಕ್ಕುಕಾಣದವರಂತೆ ಕಂಗಾಲಾಗಿ ಕುಳಿತಿದ್ದಾರೆ. ಮನೆಗೊಬ್ಬರಂತೆ ಅಮೆರಿಕಾಗೆ ಹೋದ ನಮ್ಮವರು ಈಗ ಮನೆಗೊಬ್ಬರಂತೆ ಹಿಂತಿರುಗಿ ಬರುತ್ತಿದ್ದಾರೆ.

ಈ ಎಲ್ಲಾ ಏರಿಳಿತಗಳಿಂದ ಆದ ಲಾಭವೆಂದರೆ – ಬರೀ ಒಂದೇ ಬಗೆಯ ವ್ಯಾಪಾರವನ್ನು ನಂಬಿಕೊಂಡು ಕೂತರೆ ಅಪಾಯವೆನ್ನುವುದನ್ನು ಭಾರತ ಅರ್ಥ ಮಾಡಿಕೊಂಡಿದೆ. ಸಾಫ್ಟ್‌ವೇರ್ ವ್ಯಾಪಾರದ ವೈಭವದ ದಿನಗಳಲ್ಲಿ ಪ್ರಪಂಚ ಸುತ್ತಿರುವ ಭಾರತೀಯ ಜಗತ್ತಿನ ಇತರ ಅವಶ್ಯಕತೆಗಳನ್ನು ಅರ್ಥ ಮಾಡಿಕೊಂಡಿದ್ದಾನೆ. ಬೇರೆ ಬಗೆಯ ವ್ಯಾಪಾರದ ಸಾಧ್ಯತೆಗಳನ್ನು ಕಂಡುಕೊಂಡು ಅದಕ್ಕೆ ಭಾರತ ಯಾವ ರೀತಿಯಲ್ಲಿ ಸ್ಪಂದಿಸಿ ವ್ಯಾಪಾರವಾಗಿ ಪರಿವರ್ತಿಸಿಕೊಳ್ಳಬಹುದೆಂಬುದನ್ನು ಅನ್ವೇಷಿಸಿದ್ದಾನೆ. ಅಂತಹ ಅನ್ವೇಷಣೆಯಿಂದಾಗಿ ಹೊಸದಾಗಿ ಶುರುವಾದ ವ್ಯಾಪಾರ ''ಕಾಲ್‌ಸೆಂಟರ್'' ಅಥವಾ ''ಬಿ.ಪಿ.ಒ'' (ಬಿಜಿನೆಸ್ ಪ್ರೋಸೆಸ್ ಔಟ್‌ಸೋರ್ಸಿಂಗ್ – ವ್ಯಾಪಾರದ ಕಾರ್ಯಾಚರಣೆಗಳ ಗುತ್ತಿಗೆ).

''ಜನಸಂಖ್ಯೆಯೇ ನಮ್ಮೆಲ್ಲಾ ಸಮಸ್ಯೆಗಳಿಗೆ ಕಾರಣ'' ಎನ್ನುವುದು ಹುರುಳಿಲ್ಲದ ಮಾತೆನ್ನುವುದನ್ನು ಭಾರತ ಈಗ ಒಪ್ಪಿಕೊಳ್ಳುತ್ತಿದೆ. ಭಾರತದ ಅಗಣಿತ ಜನಸಂಖ್ಯೆಯೇ ಅದರ ಶಕ್ತಿಯೆಂಬುದು ಎಲ್ಲರಿಗೂ ಮನದಟ್ಟಾಗುತ್ತಿದೆ. ಮುಂದುವರಿದ ದೇಶಗಳಾದ ಅಮೆರಿಕ, ಇಂಗ್ಲೆಂಡ್‌ಗಳ ತೀರ್ಥದಷ್ಟು ಜನಸಂಖ್ಯೆ ನಮ್ಮ ಜನಸಾಗರದ ಮುಂದೆ ಯಾವ ಲೆಕ್ಕ? ಭಾರತೀಯರೆಲ್ಲಾ ಸೇರಿ ಇಂಗ್ಲೆಂಡಿನ ಮೇಲೆ ಉಗಿದರೆ ಅದು ಸಮುದ್ರದಲ್ಲಿ ಕೊಚ್ಚಿಕೊಂಡು ಹೋಗುತ್ತದೆ ಎಂದು ಕತೆಗಾರ ಆರ್. ಕೆ. ನಾರಾಯಣ್ ಹೇಳಿದ್ದು ಸುಳ್ಳಲ್ಲ.

ಜನಶಕ್ತಿಯ ಕೊರತೆಯಿಂದಾಗಿ ಈ ಎಲ್ಲಾ ಮುಂದುವರಿದ ದೇಶಗಳಲ್ಲಿ ಯಾವುದೇ ಕೆಲಸಕ್ಕೆ ಮನುಷ್ಯನ ಸ್ಪರ್ಶವಿದ್ದರೂ ಸಾಕು, ಅವೆಲ್ಲಾ ಒಂದಕ್ಕೆ ಹತ್ತುಪಟ್ಟು ದುಬಾರಿಯಾಗಿವೆ. ಕೆಲವೊಮ್ಮೆ ಹತ್ತುಪಟ್ಟಿರಲಿ, ನೂರು ಪಟ್ಟು ಹೆಚ್ಚು ಹಣ ಕೊಡುತ್ತೇನೆಂದರೂ ಅಲ್ಲಿ ಜನರು ಸಿಕ್ಕುವುದಿಲ್ಲ. ದೊಡ್ಡ ದೊಡ್ಡ ಹುದ್ದೆಯಲ್ಲಿರುವ ಜನರೂ ತಮ್ಮ ಅಡಿಗೆಯನ್ನು ತಾವೇ ಬೇಯಿಸಿಕೊಳ್ಳುವುದು ತಪ್ಪುವುದಿಲ್ಲ. ಆದರೆ ಶ್ರೀಮಂತ ದೇಶವಾದ್ದರಿಂದ ಇದ್ದ ಬದ್ದ ಜನರೆಲ್ಲಾ ಪಲ್ಲಕ್ಕಿಯಲ್ಲಿ ಕೂಡುತ್ತೇವೆನ್ನುತ್ತಾರೆ! ಎಲ್ಲರೂ ಪಲ್ಲಕ್ಕಿಯಲ್ಲಿ ಕೂತರೆ ಅದನ್ನು ಹೊರುವವರಾರು?

ಭಾರತ ಈ ಸಮಸ್ಯೆಯನ್ನು ವ್ಯಾಪಾರವಾಗಿ ಪರಿವರ್ತಿಸಲು ಪ್ರಯತ್ನಿಸುತ್ತಿದೆ. ಮುಂದುವರಿದ ದೇಶಗಳಿಗೆ ಬೇಕಾದ ಸೇವಾ ಸೌಲಭ್ಯವನ್ನು ಅತ್ಯಂತ ಕಡಿಮೆ ಬೆಲೆಗೆ ಭಾರತದ ಜನಶಕ್ತಿಯನ್ನು ಉಪಯೋಗಿಸಿಕೊಂಡು ಒದಗಿಸುವುದು ಈ ವ್ಯಾಪಾರದ ಉದ್ದೇಶ. ಹಾಗೆಂತ ನಾವು ಗುಲಾಮರಾಗಲು ಹೊರಟಿದ್ದೇವೆ ಎಂದು ಅವಸರದ ನಿರ್ಧಾರ ಮಾಡುವುದು ಬೇಕಿಲ್ಲ. ಇಂದಿನ ವ್ಯಾಪಾರೀ ಯುಗದಲ್ಲಿ ಸೇವೆಯ ಪರಿಕಲ್ಪನೆಯೇ ಬೇರೆ. ಗ್ರಾಹಕನಿಗೆ ಬೇಕಾದ ಸೇವೆಯನ್ನು ಒದಗಿಸಿ ಅದಕ್ಕೆ ಪ್ರತಿಯಾಗಿ ಹಣವನ್ನು ಪಡೆಯುವುದು ಎಲ್ಲಾ ದೇಶಗಳು ಗೌರವದಿಂದ ಕಾಣುವಂತಹ ವ್ಯವಹಾರ. ಭಾರತದ ಹೇರಳ ಮಾರುಕಟ್ಟೆಗೆ ಆಸೆಪಟ್ಟು ಸಮುದ್ರಯಾನ ಮಾಡಿ ಯುರೋಪಿಯನ್ನರು ಇಲ್ಲಿಗೆ ಬಂದಿದ್ದು ಈ ಮನೋಭಾವದಿಂದಲೇ!

ಮುಂದಿನ ವಿಚಾರಗಳಿಗಿಂತ ಮುಂಚೆ ಒಮ್ಮೆ ಕಾಲ್‌ಸೆಂಟರ್‌ಗಳೆಂದರೆ ಏನೆಂಬುದನ್ನು ಚುಟುಕಾಗಿ ಹೇಳುತ್ತೇನೆ.

ಮುಂದುವರಿದ ದೇಶಗಳಲ್ಲಿ ಪ್ರತಿಯೊಂದು ವ್ಯವಹಾರವೂ ದೂರವಾಣಿ

■

''ಜನಸಂಖ್ಯೆಯೇ ನಮ್ಮೆಲ್ಲಾ ಸಮಸ್ಯೆಗಳಿಗೆ ಕಾರಣ'' ಎನ್ನುವುದು ಹುರುಳಿಲ್ಲದ ಮಾತೆನ್ನುವುದನ್ನು ಭಾರತ ಈಗ ಒಪ್ಪಿಕೊಳ್ಳುತ್ತಿದೆ. ಭಾರತದ ಅಗಣಿತ ಜನಸಂಖ್ಯೆಯೇ ಅದರ ಶಕ್ತಿಯೆಂಬುದು ಎಲ್ಲರಿಗೂ ಮನದಟ್ಟಾಗುತ್ತಿದೆ. ಮುಂದುವರಿದ ದೇಶಗಳಾದ ಅಮೆರಿಕ, ಇಂಗ್ಲೆಂಡ್‌ಗಳ ತೀರ್ಥದಷ್ಟು ಜನಸಂಖ್ಯೆ ನಮ್ಮ ಜನಸಾಗರದ ಮುಂದೆ ಯಾವ ಲೆಕ್ಕ? ಭಾರತೀಯರೆಲ್ಲಾ ಸೇರಿ ಇಂಗ್ಲೆಂಡಿನ ಮೇಲೆ ಉಗಿದರೆ ಅದು ಸಮುದ್ರದಲ್ಲಿ ಕೊಚ್ಚಿಕೊಂಡು ಹೋಗುತ್ತದೆ ಎಂದು ಕತೆಗಾರ ಆರ್. ಕೆ. ನಾರಾಯಣ್ ಹೇಳಿದ್ದು ಸುಳ್ಳಲ್ಲ.



ವಸುಧೇಂದ್ರ

ಯಲ್ಲಿಯೇ ನಡೆಯುತ್ತದೆ. ನಿಮ್ಮ ಸಿನಿಮಾ ಟಿಕೆಟ್ ಕಾಯ್ದಿರಿಸುವುದು, ಟಿ.ವಿ. ರಿಪೇರಿಗಾಗಿ ತಂತ್ರಜ್ಞನನ್ನು ಕರೆಸಿಕೊಳ್ಳುವುದು, ಒಂಟಿತನದ ಬೇಸರ ನೀಗುವುದಕ್ಕಾಗಿ ಅಪರಿಚಿತ ವ್ಯಕ್ತಿಯೊಂದಿಗೆ ಹರಟೆ ಹೊಡೆಯುವುದು, ತಿಂಗಳ ದಿನಸಿಯ ಪಟ್ಟಿಯನ್ನು ಸೂಪರ್ ಮಾರ್ಕೆಟ್‌ಗೆ ಹೇಳುವುದು, ನೌಕರಿಗಾಗಿ ಸಂದರ್ಶನ ಮಾಡುವುದು, ಗಂಡಿಗೆ ಹೆಣ್ಣನ್ನು ಜೋಡಿಸುವುದು. – ನೀವು ಯಾವುದೇ ವ್ಯವಹಾರವನ್ನು ಹೇಳಿ, ಅದನ್ನು ಸಾಧ್ಯವಾದಷ್ಟು ಫೋನಿನಲ್ಲಿಯೇ ಮುಗಿಸಿಬಿಡಲು ಪ್ರಯತ್ನಿಸುತ್ತಾರೆ. ಇಂತಹ ದೂರವಾಣಿ ಕರೆಗಳಿಗೆ ಉತ್ತರಿಸುವ ಜವಾಬ್ದಾರಿಯನ್ನು ಹೊತ್ತ ಸಂಸ್ಥೆಗಳಿಗೆ ಕಾಲ್ ಸೆಂಟರ್‌ಗಳೆಂದು ಕರೆಯುತ್ತಾರೆ. ಈ ಕರೆಗಳನ್ನು ಉತ್ತರಿಸುವವರು ಭೂಮಿಯ ಮೇಲೆ ಎಲ್ಲೇ ಇರಬಹುದಲ್ಲವೆ ? ಆದ್ದರಿಂದಲೇ ಭಾರತೀಯರು ಈ ಕಾಲ್‌ಸೆಂಟರ್‌ಗಳನ್ನು ನಮ್ಮ ನೆಲದಲ್ಲಿಯೇ ಅತ್ಯಂತ ಕಡಿಮೆ ಬೆಲೆಯಲ್ಲಿ ನಿರ್ವಹಿಸಲು ಮುಂದೆ ಬಂದಿದ್ದಾರೆ. ಆಧುನಿಕ ತಂತ್ರಜ್ಞಾನವು ಅಲ್ಲಿಯ ಸ್ಥಳೀಯ ಕರೆಗಳನ್ನು ಭಾರತಕ್ಕೆ ಹೆಚ್ಚಿನ ಖರ್ಚಿಲ್ಲದೆ ಇಂಟರ್‌ನೆಟ್ ಮೂಲಕ ಅಥವಾ ಸ್ವಂತ ನೆಟ್‌ವರ್ಕ್ ಮೂಲಕ ರವಾನಿಸುವ ಸೌಕರ್ಯವನ್ನು ಒದಗಿಸಿಕೊಟ್ಟಿದೆ. ಅದೇ ತಂತ್ರಜ್ಞಾನವನ್ನು ಉಪಯೋಗಿಸಿಕೊಂಡು ಇಲ್ಲಿಂದ ದೂರದ ದೇಶಗಳಿಗೆ ದೂರವಾಣಿ ಕಚೇರಿಯ ಹಂಗಿಲ್ಲದೆ ಕರೆ ಮಾಡಬಹುದಾಗಿದೆ.

ಬ್ರಿಟಿಷರು ನಮ್ಮನ್ನು ನೂರಾರು ವರ್ಷ ಆಳಿ ಕಹಿ ನೆನಪನ್ನು ಉಳಿಸಿ ಹೋಗಿದ್ದರೂ, ಅವರು ಯಾವ ಘನ ಉದ್ದೇಶವಿಲ್ಲದೆ ಬಿಟ್ಟುಹೋದ ಇಂಗ್ಲಿಷ್ ಭಾಷೆಯ ಪಾಂಡಿತ್ಯ ಇಂದು ಸಹಾಯಕ್ಕೆ ಬರುತ್ತಿದೆ. ಪ್ರಪಂಚದ ಎಲ್ಲಾ ಮುಂದುವರಿದ ದೇಶಗಳ ಭಾಷೆಯೂ ಹೆಚ್ಚು ಕಡಿಮೆ ಇಂಗ್ಲಿಷ್ ಆಗಿರುವುದರಿಂದ, ಇಂತಹ ಕಾಲ್‌ಸೆಂಟರ್‌ಗಳನ್ನು ನಿರ್ವಹಿಸಲು ನಮಗೆ ಅಷ್ಟೇನೂ ಕಷ್ಟವಲ್ಲ. ಆದರೆ ಕೇವಲ ವ್ಯಾಕರಣ ಬದ್ಧವಾದ ಇಂಗ್ಲಿಷ್ ಭಾಷೆ ಮಾತ್ರ ಗೊತ್ತಿದ್ದರೆ ಸಾಕಾಗುವುದಿಲ್ಲ. ನಾವು ಕನ್ನಡದಂತೆಯೋ, ತೆಲುಗು, ತಮಿಳಿನಂತೆಯೋ ಇಂಗ್ಲಿಷನ್ನು ಮಾತನಾಡಿದರೆ ಅಲ್ಲಿಯವರಿಗೆ ಹೇಗೆ ತಾನೆ ಅರ್ಥವಾದೀತು ? ''ಸಿಂಬ್ಲಿ ಗ್ರಾಸ್ ದಿ ರೋಡ್ಡು'' ಎಂದರೆ ಅವರಿಗೆ ತಿಳಿಯುವುದಿಲ್ಲ. ಆದ್ದರಿಂದ ಕಾಲ್‌ಸೆಂಟರ್‌ನಲ್ಲಿ ಕೆಲಸ ಮಾಡುವವರು ದೂರದೇಶದ ಭಾಷಾ ಉಚ್ಚಾರಣೆಗಳನ್ನು ಕಲಿತುಕೊಳ್ಳಬೇಕಾಗುತ್ತದೆ. ಅಮೆರಿಕಾದವರಿಗೆ ''ಥ್ಯಾಂಕ್ಸ್'' ಹೇಳಿದರೆ, ಬ್ರಿಟಿಷರಿಗೆ ''ಚಿಯರ್ಸ್'' ಎಂದು ಹೇಳುವುದು ತಿಳಿದಿರಬೇಕಾಗುತ್ತದೆ. ಇಂತಹ ತಿಳುವಳಿಕೆಗಳನ್ನು ನೀಡಲು ಸಾಕಷ್ಟು ಖಾಸಗಿ ತರಬೇತಿ ಸಂಸ್ಥೆಗಳು ತಲೆ ಎತ್ತಿವೆ. ಒಂದೆರಡು ತಿಂಗಳ ಕೋರ್ಸಿನಲ್ಲಿ ನೀವು ಹತ್ತಾರು ವರ್ಷ ವಿದೇಶದಲ್ಲಿ ಬದುಕಿ ಬಾಳಿದವರಂತೆ ನಿಮ್ಮ ಭಾಷೆಯನ್ನು ತಿದ್ದುತ್ತವೆ. ವಿಷಾದದ ಸಂಗತಿಯೆಂದರೆ ಈ ಹೊಸ ಉಚ್ಚಾರಣೆಯನ್ನು ಅಭ್ಯಾಸ ಮಾಡಿಕೊಂಡ ಮೇಲೆ ಹಳೆಯ ಉಚ್ಚಾರಣೆ ಮರೆತುಹೋಗುತ್ತದೆ ಅಥವಾ ಮರೆಯಲೇಬೇಕಾಗುತ್ತದೆ. ಆದ್ದರಿಂದ ನಮ್ಮ ಕಾಲ್‌ಸೆಂಟರ್ ಉದ್ಯೋಗಿಗಳು ಆಫೀಸಿನ ಹೊರಗೂ ಬೇರೆ ದೇಶದ ಇಂಗ್ಲಿಷ್ ಉಚ್ಚಾರಣೆಯನ್ನು ಬಳಸುತ್ತಾರೆ. ನಮ್ಮ ಇತರ ಜನರ ನಡುವೆ ವಿಭಿನ್ನವಾಗಿ ಕಾಣುತ್ತಾರೆ.

ಬರೀ ಭಾಷೆಯ ಉಚ್ಚಾರಣೆಯೊಂದರಿಂದಲೇ ಎಲ್ಲಾ ಸಮಸ್ಯೆಗಳು ಬಗೆಹರಿಯುವುದಿಲ್ಲ. ನಮ್ಮ ಗ್ರಾಹಕರ ಬಳಿ ಮಾತನಾಡುವಾಗ ಅವನನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಅವನ ಸಂಸ್ಕೃತಿ, ಆಚಾರ-ವಿಚಾರಗಳು ತಿಳಿದಿರಬೇಕಾಗುತ್ತದೆ. ಅಮೆರಿಕಾದವನನ್ನು ಖುಷಿಪಡಿಸಲು ಹಿಂದಿನ ರಾತ್ರಿ ನಡೆದ ಬೇಸ್‌ಬಾಲ್ ಆಟದ ಬಗ್ಗೆ ಹರಟೆ ಹೊಡೆದರೆ, ಬ್ರಿಟಿಷ್ ಪ್ರಜೆಯ ಜೊತೆ ಮ್ಯಾಂಚೆಸ್ಟರ್ ಯುನೈಟೆಡ್ ಈ ದಿನ ಹೇಗೆ ಫುಟ್‌ಬಾಲ್ ಪಂದ್ಯವನ್ನು ಆಡಬಹುದೆಂದು ಹರಟಬೇಕಾಗುತ್ತದೆ. ನಮ್ಮ ಖಾಸಗಿ ತರಬೇತಿ ಸಂಸ್ಥೆಗಳು ಈ ಸಂಸ್ಕೃತಿಯನ್ನೂ ಧಾರೆಯೆರೆಯುತ್ತಿವೆ. ಅವರು ಊಟ ಹೇಗೆ ಮಾಡುತ್ತಾರೆ, ಅವರ ಹಬ್ಬಹರಿದಿನಗಳೇನು, ಅವರ ಸಿಟ್ಟು ಸೆಡವುಗಳು ಹೇಗೆ, ಅವರ ಅಭ್ಯಾಸ ದುರಭ್ಯಾಸಗಳೇನು, ಅವರ ಶಕ್ತಿ ದುರ್ಬಲತೆಗಳೇನು... ಎಲ್ಲವನ್ನೂ ತಿಳಿಸಿಕೊಡುತ್ತಾರೆ. ಹಾಗಂತ ಇದು ಬರೀ ತರಬೇತಿಯಿಂದ ಒಮ್ಮೆ ಕಲಿತುಕೊಂಡರೆ ಮುಗಿಯಿತೆನ್ನುವುದಲ್ಲ. ನೌಕರರು ದಿನನಿತ್ಯ ಬೇರೆ ದೇಶದವರಂತೆ ಬದುಕಬೇಕಾಗುತ್ತದೆ. ಅಲ್ಲಿಯ ಪ್ರಸಿದ್ಧ ಟಿ.ವಿ. ಕಾರ್ಯಕ್ರಮಗಳನ್ನು ವೀಕ್ಷಿಸಬೇಕಾಗುತ್ತದೆ, ಅಲ್ಲಿಯ ದಿನಪತ್ರಿಕೆ, ವಾರಪತ್ರಿಕೆಗಳನ್ನು ಓದಬೇಕಾಗುತ್ತದೆ, ಅಲ್ಲಿ ಬಿಡುಗಡೆಯಾದ ಸಿನಿಮಾಗಳನ್ನು ಇಲ್ಲಿ ಡಿ.ವಿ.ಡಿ. ಹಾಕಿಕೊಂಡು ನೋಡ

ಬೇಕಾಗುತ್ತದೆ. ಒಂದೆರಡು ತಿಂಗಳು ಅದನ್ನೆಲ್ಲಾ ಬಿಟ್ಟು ನೀವು ಭಾರತೀಯರಂತೆ ಹಿಂದಿ-ಕನ್ನಡ ಸಿನಿಮಾ ನೋಡಿಕೊಂಡು, ಕನ್ನಡ ದಿನಪತ್ರಿಕೆಗಳನ್ನು ಓದಿಕೊಂಡು ದಿನ ಕಳೆದರೆ ನಿಮ್ಮ ಆಫೀಸಿನಲ್ಲಿ ಬೆಲೆ ಕಳೆದುಕೊಂಡು, ಕೆಲಸ ಕಳೆದುಕೊಳ್ಳುವ ಸ್ಥಿತಿಗೆ ಇಳಿದುಬಿಡುವ ಸಾಧ್ಯತೆಯಿದೆ.

ಗ್ರಾಹಕನಿಗೆ ತಾನು ಮಾತನಾಡುತ್ತಿರುವುದು ಯಾವುದೋ ದೂರ ದೇಶದ ವ್ಯಕ್ತಿಯೊಂದಿಗೆ ಎಂದು ಗೊತ್ತಾದರೆ ಅವನಿಗೆ ಆ ಕರೆಯಲ್ಲಿ ಆಸಕ್ತಿ ಉಳಿಯುವುದಿಲ್ಲ. ತನ್ನ ಕೆಟ್ಟುಹೋದ ಟಿ.ವಿ. ಬಗ್ಗೆ ದೂರನ್ನು ನೀಡುತ್ತಿರುವುದು ಸಾವಿರಾರು ಕಿಲೋ ಮೀಟರ್ ದೂರದಲ್ಲಿರುವ ಭಾರತದ ಮೂಲೆಯಲ್ಲೆಲ್ಲೋ ಕುಳಿತಿರುವ ವ್ಯಕ್ತಿಗೆ ಎಂದು ಗೊತ್ತಾದರೆ ಅವನ ಪಿತ್ತ ನೆತ್ತಿಗೇರುವುದಿಲ್ಲವೆ? ಆದ್ದರಿಂದ ಕಾಲ್‌ಸೆಂಟರ್‌ಗಳು ಪ್ರಪ್ರಥಮವಾಗಿ ಗ್ರಾಹಕನಿಗೆ ದೂರವಾಣಿ ಕರೆ ಇಲ್ಲೇ ಪಕ್ಕದ ಮನೆಯಿಂದೆಲ್ಲೋ ಬರುತ್ತಿದೆ ಎನ್ನುವ ಭಾವನೆಯನ್ನುಂಟುಮಾಡುವುದಕ್ಕೆ ಪ್ರಯತ್ನ ಪಡುತ್ತಾರೆ. ಅಂತಹ ಪ್ರಯತ್ನದಲ್ಲಿ ಮೊದಲನೆ ಬದಲಾವಣೆಯಾಗಿ ಎಲ್ಲಾ ಕಾಲ್‌ಸೆಂಟರ್ ನೌಕರರ ಹೆಸರನ್ನು ಬದಲಾಯಿಸುತ್ತಾರೆ. ಗ್ರಾಹಕ ಕರೆ ಮಾಡಿದಾಗ ನೀವು ನಿಮ್ಮ ಹೆಸರನ್ನು ''ಹರಿಸರ್ವೋತ್ತಮ'' ಎಂದರೆ ಅವನು ಗಲಿಬಿಲಿಯಾಗುವುದಿಲ್ಲವೆ? ಅದಕ್ಕೆ ಬದಲು ನೀವು ''ಐ ಆಂ ಹ್ಯಾರಿ, ಹೌ ಕಾನ್ ಐ ಹೆಲ್ಪ್ ಯು?'' ಎನ್ನಬೇಕಾಗುತ್ತದೆ. ಪ್ರತಿಯೊಬ್ಬ ನೌಕರನೂ ತನ್ನ ಹೆಸರನ್ನು ಮೈಕಲ್, ವೆಂಡಿ, ಕ್ಯಾಥಿ, ಜಾಕ್, ಜೇಸನ್ ಎಂದೆಲ್ಲಾ ಬದಲಿ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಎಂಟು ಗಂಟೆಗಳ ಕಾಲ ಈ ಹೆಸರಿನಿಂದ ಒಡನಾಡಿದ ನೌಕರನಿಗೆ ಮತ್ತೆ ಬೇರೆ ಹೆಸರಿಗೆ ಹೊಂದಿಕೊಳ್ಳುವುದು ಕಷ್ಟವಾಗುತ್ತದೆ. ಆದ್ದರಿಂದ ಕೆಲಸದ ಸಮಯ ಮುಗಿದ ನಂತರವೂ ಅವರು ಹ್ಯಾರಿ, ಮೈಕಲ್, ಕ್ಯಾಥಿ ಎಂದೇ ತಮ್ಮನ್ನು ಕರೆದುಕೊಳ್ಳುತ್ತಿರುತ್ತಾರೆ. ತಮ್ಮ ಹಳೆಯ ಹೆಸರುಗಳನ್ನು ಕ್ರಮೇಣ ಮರೆಯುತ್ತಿದ್ದಾರೆ. ಹಾಗಂತ ಈ ಸಮಸ್ಯೆಯನ್ನು ತೀರಾ ಭಾವೋದ್ರೇಕತನದಿಂದಲೂ ನೋಡುವುದು ತಪ್ಪೆನಿಸುತ್ತದೆ. ''ಹೆಸರು ಬದಲಾದರೆ ಆದ ನಷ್ಟವೇನು? ಎಷ್ಟು ಜನರನ್ನು ಅವರ ಮನೆಯಲ್ಲಿ ಬೇರೆ ಯಾವುದೋ ಅರ್ಥವಿಲ್ಲದ ಪ್ರೀತಿಯ ಹೆಸರುಗಳಿಂದ ಕರೆಯುವುದಿಲ್ಲ? ಉದ್ಯೋಗವಿಲ್ಲದೆ ಅಲೆದು ಕಂಗೆಡುವುದಕ್ಕಿಂತ ಹೆಸರು ಬದಲಿ ಮಾಡಿಕೊಳ್ಳುವುದು ಯಾವ ದೊಡ್ಡ ವಿಷಯ?'' ಎನ್ನುವ ವಾದ ಮಾಡುವವರ ಮಾತೂ ಸತ್ಯವೆನಿಸುತ್ತದೆ.

ಈ ಕಾಲ್‌ಸೆಂಟರ್‌ಗಳ ಮತ್ತೊಂದು ವಿಚಿತ್ರ ಸಮಸ್ಯೆಯೆಂದರೆ ಕೆಲಸ ಮಾಡುವ ಅವಧಿಯದು. ಬೆಳಿಗ್ಗೆ ಒಂಬತ್ತಕ್ಕೆ ಹೋಗಿ, ಸಂಜೆ ಆರಕ್ಕೆ ಬರುವ ಸುಂದರ ಕೆಲಸವಿದಲ್ಲ. ನಾವು ವಿದೇಶದವರ ಕೆಲಸದ ಸಮಯಕ್ಕೆ ಸರಿಯಾಗಿ ಕೆಲಸ ಮಾಡಬೇಕಾಗುತ್ತದೆ. ಅಂದರೆ ಅಮೆರಿಕಾದಲ್ಲಿ ಬೆಳಿಗ್ಗೆ ಒಂಬತ್ತಕ್ಕೆ ಕೆಲಸ ಪ್ರಾರಂಭಿಸಿ ಸಂಜೆ ಆರಕ್ಕೆ ಕೆಲಸ ಮುಗಿಸುತ್ತಾರೆಂದುಕೊಂಡರೆ ನಾವು ರಾತ್ರಿ ಸುಮಾರು ಹತ್ತರಿಂದ ಬೆಳಿಗ್ಗೆ ಆರರ ತನಕ ಕೆಲಸ ಮಾಡಬೇಕಾಗುತ್ತದೆ. ಸ್ವಲ್ಪ ಒರಟಾಗಿ ಹೇಳಬೇಕೆಂದರೆ ಕಾಮಾಟಿಪುರದ ವೇಶ್ಯಾವಾಟಿಕೆಯ ವ್ಯಾಪಾರದ ಸಮಯದಲ್ಲಿ ನಾವು ಕೆಲಸ ಮಾಡಬೇಕಾಗುತ್ತದೆ. ಹಾಗಂತ ರಾತ್ರಿ ಪಾಳಿ ಭಾರತೀಯ ಕಾರ್ಮಿಕನಿಗೆ ಹೊಸತೇನೂ ಅಲ್ಲ. ಎಲ್ಲಾ ದೊಡ್ಡ ದೊಡ್ಡ ಕಾರ್ಖಾನೆಗಳಲ್ಲೂ ನೌಕರರು ರಾತ್ರಿ ಪಾಳಿಯಲ್ಲಿ ಕಾರ್ಯ ನಿರ್ವಹಿಸುತ್ತಾರೆ. ಆದರೆ ಅಲ್ಲಿ ಒಂದು ವ್ಯತ್ಯಾಸವಿದೆ. ಎಲ್ಲಾ ಕಾರ್ಖಾನೆಗಳಲ್ಲೂ ಒಂದು ವಾರ ರಾತ್ರಿ ಪಾಳಿಯಲ್ಲಿ ದುಡಿದರೆ ಮುಂದಿನ ವಾರ ಹಗಲಿನ ಪಾಳಿಯಲ್ಲಿ ಕೆಲಸ ಮಾಡುವ ಸೌಕರ್ಯವಿರುತ್ತದೆ. ಆದರೆ ಕಾಲ್‌ಸೆಂಟರ್‌ಗಳಲ್ಲಿ ಅದು ಸಾಧ್ಯವಿಲ್ಲ. ಸೂರ್ಯ-ಚಂದ್ರರಿಗೆ ಅಮೆರಿಕಾ ಮತ್ತು ಭಾರತ ಎಂಬ ವ್ಯತ್ಯಾಸವಿಲ್ಲ. ಎರಡೂ ಕಡೆ ತಮ್ಮ ಕೆಲಸದ ಪಾಳಿಯನ್ನು ಬದಲಾಯಿಸಲು ಅವರಿಬ್ಬರೂ ಸಿದ್ಧರಿಲ್ಲ!

ಸದ್ಯಕ್ಕೆ ಈ ಕಾಲ್‌ಸೆಂಟರ್‌ನಲ್ಲಿ ಕೆಲಸ ಮಾಡುತ್ತಿರುವವರೆಲ್ಲಾ ಎಳೆಯ ತರುಣ ತರುಣಿಯರು. ಹೆಚ್ಚಾಗಿ ಕಾಲೇಜಿನಿಂದ ಈಗಷ್ಟೇ ಹೊರಬಂದವರು. ಆದ್ದರಿಂದ ಅವರಿಗೆ ಅಂತಹ ಸಮಸ್ಯೆಯಾಗಲಿಕ್ಕಿಲ್ಲ. ಆದರೆ ನಾಳೆ ಬೆಳಿಗ್ಗೆ ಅವರು ಮದುವೆಯಾಗ ಬೇಕೆಂದರೆ ಸುಲಭವಾಗಿ ಹುಡುಗಿ (ಅಥವಾ ಹುಡುಗ) ಸಿಕ್ಕುವುದಿಲ್ಲ. ಹೋಗಲಿ ಕಾಲ್ ಸೆಂಟರ್ ಹುಡುಗಿಯನ್ನೇ (ಹುಡುಗನನ್ನೇ) ಮದುವೆಯಾಗುತ್ತಾರೆಂದಿಟ್ಟುಕೊಳ್ಳಿ. ಮುಂದೆ ಮಕ್ಕಳಾದರೆ ಅವರ ಗತಿ? ಹಾಗಂತ ಕಂಗಾಲಾಗುವುದು ಬೇಡವೆಂದು ವ್ಯಾಪಾರ ದಿಗ್ಗಜರು ಹೇಳುತ್ತಾರೆ. ದಿನದಿಂದ ದಿನಕ್ಕೆ ಕಾಲ್‌ಸೆಂಟರ್‌ಗಳು ಬೆಳೆಯು ತ್ತಿರುವ ವೇಗವನ್ನು ನೋಡಿದರೆ, ಕೆಲವೇ ವರ್ಷಗಳಲ್ಲಿ ಈ ನಿಶಾವಾಗ್ಮಿಗಳ ಒಂದು ದೊಡ್ಡ ಸಮುದಾಯವೇ ಸೃಷ್ಟಿಯಾಗಿರುತ್ತದೆ. ಆಗ ಅಂತಹವರ ಮಕ್ಕಳಿಗೆಂದೇ ರಾತ್ರಿ ಶಾಲೆಗಳು ಸೃಷ್ಟಿಯಾಗುತ್ತವೆ. ಮಕ್ಕಳೂ ಅಪ್ಪ-ಅಮ್ಮಂದಿರಂತೆ ರಾತ್ರಿ ಪಾಳಿಯಲ್ಲಿ ಶಾಲೆಗೆ ಹೋದರೆ ಈ ಸಮಸ್ಯೆಯಿರುವುದಿಲ್ಲ– ಎಂದು ಹೇಳುತ್ತಾರೆ. ತರ್ಕ ಎಷ್ಟರ ಮಟ್ಟಿಗೆ ಸತ್ಯವೆಂದು ಕಾಲವೇ ನಿರ್ಧರಿಸಬೇಕು.

ಈ ರಾತ್ರಿ ಪಾಳಿಯಿಂದ ಮತ್ತೊಂದು ವಿಭಿನ್ನ ಸಮಸ್ಯೆ ಎಲ್ಲಾ ಕಾಲ್‌ಸೆಂಟರ್‌ಗಳಲ್ಲಿ ತಲೆದೋರುತ್ತಿದೆ. ಇಲ್ಲಿ ಕೆಲಸ ಮಾಡುವವರೆಲ್ಲಾ ಹೆಚ್ಚಾಗಿ ಹಸಿಬಿಸಿ ವಯಸ್ಸಿನ ತರುಣ-ತರುಣಿಯರು. ರಾತ್ರಿಯ ಹೊತ್ತಿನಲ್ಲಿ ದೇಹದ ಬಯಕೆಗಳನ್ನು ಹತ್ತಿಡುವುದು ಸಾಧ್ಯವಿಲ್ಲದ ವಯಸ್ಸಿನವರು. ಎರ್ರಾಬಿರ್ರಿ ನಡತೆಗಳ ಮೇಲೆ ಹತೋಟಿಯಿಡಲು ಆ ಹೊತ್ತಿನಲ್ಲಿ ಹಿರಿಯರೂ ಇಲ್ಲದ ಕಾರಣ ತೀರಾ ಅಕ್ರಮ ವ್ಯವಹಾರಗಳು ನಡೆದು ಕಂಪನಿಯ ಮ್ಯಾನೇಜುಮೆಂಟಿಗೆ ತಲೆನೋವಿನ ಪ್ರಸಂಗಗಳು ಮೂಡುತ್ತಿವೆ.

ಉಳಿದ ಚಿಕ್ಕಪುಟ್ಟ ಸಮಸ್ಯೆಗಳನ್ನು ಬದಿಗಿಡೋಣ. ಹೀಗೆ ಬರೀ ರಾತ್ರಿಯ ಪಾಳಿಯಲ್ಲಿ ಕೆಲಸ ಮಾಡುತ್ತಾ ಹೋದರೆ ಆರೋಗ್ಯದ ಗತಿಯೇನು? ಸೂರ್ಯನ ಜೊತೆ ದುಡಿಯಬೇಕು, ಚಂದ್ರನ ಜೊತೆ ವಿರಮಿಸಬೇಕೆನ್ನುವುದು ಪ್ರಕೃತಿ ನಿಯಮ. ನಾವು ಅದಕ್ಕೆ ವಿರುದ್ಧವಾಗಿ ಎಷ್ಟು ದಿನ ದುಡಿಯಲು ಸಾಧ್ಯ? ವಾರದ ಎಲ್ಲಾ ದಿನ ರಾತ್ರಿ ಪಾಳಿಯಲ್ಲಿ ಕೆಲಸ ಮಾಡಿ, ಶನಿವಾರ, ಭಾನುವಾರದಂತಹ ರಜೆಯ ದಿನಗಳಲ್ಲಿ ಕಾಲ್‌ಸೆಂಟರ್ ನೌಕರರು ಕಂಗಾಲಾಗುತ್ತಾರೆ. ಉಳಿದೆಲ್ಲಾ ಸ್ನೇಹಿತರು ಬೆಳಗಿನ ಹೊತ್ತು ಕುಣಿದು ಕುಪ್ಪಳಿಸಿ ಜೀವನವನ್ನು ಅನುಭವಿಸುತ್ತಿದ್ದರೆ ಇವರ ಕಣ್ಣುಗಳು ನಿದ್ದೆಯಿಂದ ಎಳೆಯಲಾರಂಭಿಸುತ್ತವೆ. ರಾತ್ರಿಯ ಹೊತ್ತು ಮನೆಯವರೆಲ್ಲರೂ ನೆಮ್ಮದಿಯಿಂದ ಮಲಗಿದ್ದರೆ ಇವರು ಟಿ.ವಿ. ಹಾಕಿಕೊಂಡು ನಿಚ್ಚಳ ಕಣ್ಣುಗಳಿಂದ ಕೆಟ್ಟ ಕೆಟ್ಟ ಕಾರ್ಯಕ್ರಮಗಳನ್ನು ಬೇಸರದಿಂದ ವೀಕ್ಷಿಸುತ್ತಾರೆ.

ಹೋಗಲಿ ವಾರದ ರಜೆಗಳನ್ನು ಹೇಗೋ ಕಳೆಯುತ್ತಾರೆಂದುಕೊಂಡರೂ ಭಾರತೀಯ ಹಬ್ಬದ ದಿನಗಳಲ್ಲಿ ಪರಿಸ್ಥಿತಿ ಹದಗೆಡುತ್ತದೆ. ನಮ್ಮ ಆಗಸ್ಟ್ ಹದಿನೈದಕ್ಕೆ ಕೆಲಸ ಮಾಡಿದರೆ, ಅಮೆರಿಕಾದ ಸ್ವಾತಂತ್ರ್ಯ ದಿನಾಚರಣೆಯ ದಿನ ರಜೆ ತೆಗೆದು ಕೊಳ್ಳಬೇಕಾಗುತ್ತದೆ. ಯುಗಾದಿಯ ದಿನ ಗ್ರಾಹಕನ ಕರೆಗಳಿಗೆ ಓಗೊಟ್ಟರೆ, ಈಸ್ಟರ್ ಹಬ್ಬದ ದಿನ ಮನೆಯಲ್ಲಿ ತೆಪ್ಪಗೆ ಕುಳಿತುಕೊಳ್ಳಬೇಕಾಗುತ್ತದೆ. ಗ್ರಾಹಕನ ಕರೆಗಳಿಗೆ ಅತ್ಯಂತ ಮಹತ್ವವನ್ನು ಕೊಡುವ ವ್ಯಾಪಾರೀ ಮನೋಭಾವದ ಅಮೆರಿಕನ್ನರಿಗೆ ನೀವು ರಾಮನವಮಿ, ಕೃಷ್ಣಾಷ್ಟಮಿ ನೆಪ ಹೇಳಿ ಮನೆಯಲ್ಲಿ ಬೇಲದ ಹಣ್ಣಿನ ಪಾನಕ, ಕೋಸಂಬರಿಗಳನ್ನು ಮೆಲ್ಲುತ್ತೀವೆಂದರೆ ಸಹಿಸುವುದು ಸಾಧ್ಯವಿಲ್ಲ. ಅದಕ್ಕೆ ಬದಲು ಕ್ರಿಸ್‌ಮಸ್ ದಿನ ಕೇಕು ತಿಂದು, ವೈನ್ ಕುಡಿದು, ರಾಕ್ ಸಂಗೀತಕ್ಕೆ ಕುಣಿದು ಕುಪ್ಪಳಿಸುತ್ತೀರೆಂದರೆ ಅವರದೇನೂ ಅಡ್ಡಿಯಿಲ್ಲ.

ಹಾಗಂತ ಭಾರತೀಯರು ಮಾತ್ರ ಈ ಕಾಲ್‌ಸೆಂಟರ್ ವ್ಯವಹಾರದಲ್ಲಿ ತಲೆ ತೂರಿಸಿದ್ದಾರೆಂದು ತಪ್ಪರ್ಥ ಮಾಡಿಕೊಳ್ಳಬೇಡಿ. ಚೀನಾ, ಮಲೇಶಿಯಾ, ಹಾಂಕಾಂಗ್, ಆಫ್ರಿಕಾ ದೇಶವೆಲ್ಲಾ ಈ ಕಾಲ್‌ಸೆಂಟರ್ ವ್ಯವಹಾರಕ್ಕೆ ಪಾದಾರ್ಪಣೆ ಮಾಡಿಯಾಗಿವೆ. ಚೀನಿಯರಿಗೆ ಇಂಗ್ಲಿಷ್ ಬರುವುದಿಲ್ಲವೆಂಬ ಒಂದೇ ಕಾರಣದಿಂದ ನಾವು ಬಚಾವು. ಆದರೆ ತುಂಬಾ ದಿನ ಅದೇ ನೆಪವನ್ನು ಮುಂದಕ್ಕಿಟ್ಟು ಚೀನೀಯರನ್ನು ನಗಣ್ಯರೆಂದುಕೊಳ್ಳುವಂತಿಲ್ಲ. ಈಗಾಗಲೇ ಚೀನಾದಲ್ಲಿ ಪ್ರಾಥಮಿಕ ಮಟ್ಟದಿಂದಲೇ ಇಂಗ್ಲಿಷ್ ವಿದ್ಯಾಭ್ಯಾಸ ಪ್ರಾರಂಭವಾಗಿದೆ. ಚೀನೀಯರಿಗೆ ಇಂಗ್ಲಿಷ್ ಕಲಿಯುವುದಕ್ಕೆ ಭಾರತೀಯರಿಗಿಲ್ಲದ ಒಂದು ವಿಶೇಷ ಅನುಕೂಲವಿದೆ. ಅದೇನೆಂದರೆ ಅವರಿಗೆ ಇಂಗ್ಲಿಷ್ ಬರುವುದಿಲ್ಲ! ಈಗಾಗಲೇ ತಿಳಿಸಿದಂತೆ ಅಮೆರಿಕನ್ನರ ಇಂಗ್ಲಿಷಿನ ಉಚ್ಚಾರಣೆಯನ್ನು ಕಲಿಯುವುದು ಅತ್ಯಂತ ಮುಖ್ಯ. ಭಾರತೀಯರಿಗೆ ಈಗಾಗಲೇ ಇಂಗ್ಲಿಷ್ ಭಾಷೆ ಗೊತ್ತಿರುವುದರಿಂದ, ಅವರ ಸ್ಥಳೀಯ ಉಚ್ಚಾರಣೆಯನ್ನು ಹೋಗಲಾಡಿಸಿ ನಂತರ ಅಮೆರಿಕಾದ ಉಚ್ಚಾರಣೆ ಕಲಿಸಿಕೊಡಬೇಕಾಗುತ್ತದೆ. ಆದರೆ ಚೀನಿಯರಿಗೆ ಇಂಗ್ಲಿಷ್ ಭಾಷೆಯ ಗಂಧಗಾಳಿ ಇಲ್ಲದ್ದರಿಂದ ನೇರವಾಗಿ ಅಮೆರಿಕನ್ ಉಚ್ಚಾರಣೆಯನ್ನು ಕಲಿಸಿಕೊಡಬಹುದಾಗಿದೆ. ಇನ್ನು ಐದಾರು ವರ್ಷಗಳಲ್ಲಿ ಚೀನಾ ಭಾರತೀಯರಿಗೆ ತೀವ್ರ ಪ್ರತಿಸ್ಪರ್ಧೆಯನ್ನು ಒಡ್ಡುವುದರಲ್ಲಿ ಯಾವ ಅನುಮಾನವೂ ಬೇಕಿಲ್ಲ.

ಕಾಲ್‌ಸೆಂಟರ್‌ಗಳ ಸಮಸ್ಯೆಗಳನ್ನೇ ವೈಭವೀಕರಿಸುತ್ತಾ ಹೋದರೆ ಸಿನಿಕತನ ವಾಗುತ್ತದೆ. ಹಾಗೆ ನೋಡಿದರೆ ಕಾಲ್‌ಸೆಂಟರ್‌ನಿಂದಾಗಿ ನಮ್ಮ ದೇಶದ ನಿರುದ್ಯೋಗ ಸಮಸ್ಯೆ ಕಡಿಮೆಯಾಗುವ ಸಾಧ್ಯತೆಯಿದೆ. ಮುಂದಿನ ವರ್ಷಕ್ಕೆ ಸುಮಾರು ಎರಡು ಲಕ್ಷ ಕಾಲ್‌ಸೆಂಟರ್‌ಗಳಿರಬಹುದೆಂದು ಒಂದು ಅಂದಾಜು. ಈ ಉದ್ಯೋಗಕ್ಕೆ ಭಾಷೆಯ ಹಿಡಿತ, ಒಳ್ಳೆಯ ಮಾತನಾಡುವ ಕಲೆ, ಚಾಲಾಕಿತನವಿದ್ದರೆ ಸಾಕು. ಹೆಚ್ಚಿನ ಪದವಿಗಳ ಅವಶ್ಯಕತೆಯಿಲ್ಲ. ಸಾಫ್ಟ್‌ವೇರ್ ವ್ಯಾಪಾರ ಕೇವಲ ಉನ್ನತ ವಿದ್ಯಾಭ್ಯಾಸವನ್ನು

ಮಾಡಿದವರಿಗೆ ಮಾತ್ರ ಉದ್ಯೋಗ ಅವಕಾಶವನ್ನು ಸೃಷ್ಟಿಸಿತು. ಆದರೆ ಕಾಲ್‌ಸೆಂಟರ್ ಹಾಗಲ್ಲ, ಪಿ.ಯು.ಸಿ. ಫೇಲಾದವನೂ ನೌಕರಿ ಗಿಟ್ಟಿಸಿಕೊಳ್ಳಬಹುದಾಗಿದೆ. ನಿರರ್ಗಳ ಇಂಗ್ಲಿಷ್ ಭಾಷೆ ಮತ್ತು ನಯವಾದ ಮಾತುಗಾರಿಕೆ ಇದ್ದರಾಯ್ತು.

ಕಾಲ್‌ಸೆಂಟರ್‌ಗಳು ಬೆಳೆದಂತೆ ಅದರ ಜೊತೆಯಲ್ಲಿ ಬೇರೆ ಉದ್ಯಮಗಳು ತನ್ನಿಂತಾನೇ ಬೆಳೆಯುತ್ತವೆ. ರಾತ್ರಿಯ ಹೊತ್ತಿನಲ್ಲಿ ಇವರು ಕೆಲಸ ಮಾಡುತ್ತಾರಾದ್ದರಿಂದ ಅವರನ್ನು ಕಛೇರಿಗೆ ಕರೆದೊಯ್ಯಲು ಮತ್ತು ಮನೆಗೆ ಬಂದು ಬಿಡಲು ವಾಹನ ಸೌಕರ್ಯ ಬೇಕೇಬೇಕು. ಈ ವಾಹನ ಬಾಡಿಗೆ ಕೊಡುವ ಉದ್ಯಮ ಅತ್ಯಂತ ವೇಗವಾಗಿ ಬೆಳೆಯುತ್ತದೆ. ಒಂದು ಅಂದಾಜಿನ ಪ್ರಕಾರ ಸುಮಾರು ನಾಲ್ಕು ಲಕ್ಷಕ್ಕೂ ಹೆಚ್ಚು ವಾಹನಗಳು ಮುಂದಿನ ಎರಡು ವರ್ಷಗಳಲ್ಲಿ ಬೇಕಾಗುತ್ತವಂತೆ! ಅದೇ ರೀತಿ ಆಹಾರ ಸರಬರಾಜು ಮಾಡುವ ಉದ್ದಿಮೆ, ಕಾಲ್‌ಸೆಂಟರ್ ತರಬೇತಿ ನೀಡುವ ಸಂಸ್ಥೆಗಳ ಉದ್ದಿಮೆ, ಕಟ್ಟಡಗಳನ್ನು ಕಟ್ಟಿ ಬಾಡಿಗೆ ನೀಡುವ ಉದ್ದಿಮೆ, ಮೇಜು ಕುರ್ಚಿಗಳನ್ನು ಮಾಡುವ ಉದ್ದಿಮೆ, ಒಳಾಂಗಣ ಅಲಂಕಾರವನ್ನು ಮಾಡುವ ಉದ್ದಿಮೆ – ಎಲ್ಲವೂ ಒಂದಕ್ಕೊಂದು ತಳಕು ಹಾಕಿಕೊಂಡಿವೆ. ಒಂದು ಉದ್ದಿಮೆ ಅಭಿವೃದ್ಧಿ ಹೊಂದಿದರೆ ಸಾಕು – ಉಳಿದವು ತನ್ನಿಂತಾನೆ ಅಭಿವೃದ್ಧಿ ಹೊಂದುತ್ತವೆ.

ಕಾಲ್‌ಸೆಂಟರ್ ಉದ್ಯೋಗಕ್ಕೆ ಅಂತಹ ಉತ್ತಮ ವಿದ್ಯಾಭ್ಯಾಸ ಬೇಕಿಲ್ಲವೆನ್ನುವುದು ನಮ್ಮ ಯುವ ಜನಾಂಗಕ್ಕೆ ಮಾರಕವಾಗಿಯೂ ಪರಿಣಮಿಸಬಹುದಾಗಿದೆ. ಪಿ.ಯು.ಸಿ. ಮುಗಿಸಿದ ಕೂಡಲೇ ಹತ್ತು ಸಾವಿರ ಪಗಾರದ ಉದ್ಯೋಗ ಸಿಗುವ ಅವಕಾಶ ಉಂಟಾದರೆ ಯುವಜನತೆ ಉನ್ನತ ವ್ಯಾಸಂಗಕ್ಕಾಗಿ ಹಾತೊರೆಯುವುದಿಲ್ಲ. ಈ ಸದ್ಯ ಕೈಗೆ ಸಿಗುವ ಕಾಸು, ಸವಲತ್ತು ಅವನಿಗೆ ಮುಂದಿನ ವಿದ್ಯಾಭ್ಯಾಸದಲ್ಲಿ ಆಸಕ್ತಿಯನ್ನು ಉಳಿಸುವುದಿಲ್ಲ. ಚಿಕ್ಕ ವಯಸ್ಸಿಗೇ ಕೈಗೆ ಸಿಗುವ ಕಾಸು ಅವನಲ್ಲಿ ದುರಭ್ಯಾಸಗಳನ್ನು ಸೃಷ್ಟಿಸುತ್ತವೆ. ಈಗಾಗಲೇ ಪಾಶ್ಚಿಮಾತ್ಯ ದೇಶಗಳಲ್ಲಿ ಹತ್ತನೇ ತರಗತಿಗೇ ವಿದ್ಯಾಭ್ಯಾಸಕ್ಕೆ ಮಂಗಳ ಹಾಡಿ ಉದ್ಯೋಗಕ್ಕೆ ಸೇರಿ, ಮದುವೆ ಮಕ್ಕಳನ್ನೂ ಮಾಡಿಕೊಂಡು ಸಂಸಾರ ನಿಭಾಯಿಸಲಾಗದೆ ಒದ್ದಾಡುವ ಯುವಜನಾಂಗ ದೊಡ್ಡ ಸಮಸ್ಯೆಯಾಗಿದ್ದಾರೆ. ಭಾರತಕ್ಕೂ ಆ ಸಮಸ್ಯೆ ಬಾರದಿರಲಿ.

ಕಾಲ್‌ಸೆಂಟರ್ ಉದ್ಯೋಗ ಅತ್ಯಂತ ಏಕತಾನೀಯವಾದುದ್ದಾಗಿದೆ. ದಿನದ ಎಂಟು ಗಂಟೆಗಳ ಕಾಲ ಎಡೆಬಿಡದೆ ಮಾತನಾಡುತ್ತಲೇ ಇರುವ ಕೆಲಸ ಯಾರಿಗೆ ತಾನೆ ಬೇಸರ ಮೂಡಿಸುವುದಿಲ್ಲ? ಬಹುಬೇಗನೆ ನೌಕರರು ನಿರುತ್ಸಾಹಕ್ಕೊಳಗಾಗುವ ಶಕ್ಯತೆಯಿದೆ. ಆದ್ದರಿಂದ ಮೇಲಿಂದ ಮೇಲೆ ಅಲ್ಲಿ ರಾಜೀನಾಮೆಗಳು ಕಂಡುಬರುತ್ತವೆ. ''ಆ ಕಾಲ್‌ಸೆಂಟರ್‌ನಲ್ಲಿ ಕೆಲಸ ಕಡಿಮೆ, ಮಧ್ಯದಲ್ಲಿ ಸುಸ್ತಾದರೆ ಮಲಗಿಕೊಳ್ಳಬಹುದಂತೆ'' ಎಂದೆಲ್ಲಾ ಮಾತನಾಡಿಕೊಂಡು ಕೆಲಸ ಬದಲಾಯಿಸುವುದು ಸರ್ವೇಸಾಮಾನ್ಯ. ಆದರೆ ಯಾವ ಕಂಪನಿಗೆ ಹೋದರೂ ನಿಮ್ಮನ್ನು ದುಡಿಸಿಕೊಳ್ಳುವ ಕಂಪನಿಗಳು ಸುಮ್ಮನೆ ಕೂತವರಿಗೆ ಕಾಸು ಕೊಡಲು ತಯಾರಿರುವುದಿಲ್ಲವೆನ್ನುವುದು ಮೂಲಭೂತ ಸತ್ಯ.

> **ತತ್ವಗಳ ಮರಣ**
>
> ಸ್ಥಾವರ
> ಕಟ್ಟುತ್ತಲೇ
> ಜಂಗಮತ್ವ
> ಮರೆತ
> ಶರಣ!
>
> ಅಧಿಕೃತವಾಗಿ
> ಘೋಷಿಸಿದ
> ಬಸವತತ್ವಗಳ
> ಮರಣ!!
>
> **ಎಸ್. ಶಶಿಕಾಂತ್**
> ಬೆಂಗಳೂರು-೭೧

ದೂರದ ಬೆಟ್ಟ ನುಣ್ಣಗೆ ಕಾಣುತ್ತದಷ್ಟೇ!

ಈ ಎಡೆಬಿಡದ ಸುಸ್ತನ್ನು ನಿವಾರಿಸಿಕೊಳ್ಳಲು ಯೋಗಾಭ್ಯಾಸ, ಧ್ಯಾನ, ವ್ಯಾಯಾಮಗಳು ಅತ್ಯಂತ ಅವಶ್ಯಕವಾಗಿವೆ. ಅಮೆರಿಕಾದ ಮಧ್ಯಾಹ್ನದ ಊಟದ ಸಮಯದಲ್ಲಿ ನಮ್ಮವರೂ ಒಂದು ಗಂಟೆ ಬಿಡುವನ್ನು ತೆಗೆದುಕೊಳ್ಳಬಹುದು. ಆಗ ನಮಗಿಲ್ಲಿ ರಾತ್ರಿ ಒಂದೋ-ಎರಡೋ ಗಂಟೆಯಾಗಿರುತ್ತದೆ. ಆ ತಂಪು ಹೊತ್ತಿನಲ್ಲಿ ಯಾವುದಾದರೊಂದು ಹೊರಾಂಗಣ ಆಟವನ್ನು ಆಡುವುದು ಒಳ್ಳೆಯದು. ಹಾಗೆ ನೋಡಿದರೆ ದಿನದ ಹನ್ನೆರಡು ತಾಸು ಗೇಟಿನ ಬಳಿ ಬಿಸಿಲಲ್ಲಿ ಕಾಯುತ್ತಲೇ ಕುಳಿತಿರುವ ನಮ್ಮ ಸೆಕ್ಯೂರಿಟಿ ಗಾರ್ಡಿನ ಉದ್ಯೋಗಕ್ಕೆ ಹೋಲಿಸಿದರೆ ಈ ಕೆಲಸ ಎಷ್ಟೋ ವಾಸಿ. ಎಷ್ಟೋ ಪದವೀಧರರು ಸೆಕ್ಯೂರಿಟಿ ಉದ್ಯೋಗವನ್ನು ಮಾಡುತ್ತಿದ್ದಾರೆಂಬುದನ್ನು ಇಲ್ಲಿ ಮರೆಯುವಂತಿಲ್ಲ.

ಕಾಲ್‌ಸೆಂಟರ್ ಉದ್ಯೋಗಕ್ಕೆ ಇಂಗ್ಲಿಷ್ ಭಾಷೆಯ ಮೇಲಿನ ಹಿಡಿತವೇ ಬಂಡವಾಳವೆಂದಮೇಲೆ, ಇಲ್ಲಿಯೂ ನಮ್ಮ ಹಳ್ಳಿಗಾಡಿನ ಪದವೀಧರರು ಸೋಲುತ್ತಾರೇನೋ ಎಂಬ ಅನುಮಾನವಾಗುತ್ತದೆ. ಬರೀ ಕನ್ನಡದಲ್ಲಿಯೇ ಮಾತನಾಡಿ ಗೊತ್ತಿರುವ ನಮ್ಮ ಹಳ್ಳಿಯ ಹುಡುಗರು ಪರೀಕ್ಷೆಯಲ್ಲಿ ಉತ್ತರ ಬರೆಯುವಷ್ಟು, ಮತ್ತೊಬ್ಬರು ಮಾತನಾಡಿದರೆ ಅರ್ಥ ಮಾಡಿಕೊಳ್ಳುವಷ್ಟು ಮಾತ್ರ ಇಂಗ್ಲಿಷ್ ತಿಳಿದುಕೊಂಡಿರುತ್ತಾರೆ. ತಾವೇ ಮಾತನಾಡಲು ತಡವರಿಸುತ್ತಾರೆ. ಮುಂಬರುವ ದಿನಗಳಲ್ಲಿ ಕಾಲ್‌ಸೆಂಟರ್ ಉದ್ಯೋಗಾವಕಾಶಗಳು ಹೆಚ್ಚಾಗುತ್ತಾ ಹೋದರೆ ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲಿಷ್ ಭಾಷೆಗೇ ಹೆಚ್ಚಿನ ಪ್ರಾಮುಖ್ಯತೆ ಸಿಗಬಹುದು. ನಮ್ಮ ಹಳ್ಳಿ ಹಳ್ಳಿಗಳಲ್ಲಿ ಕಾನ್ವೆಂಟ್‌ಗಳು ನಾಯಿಕೊಡೆಯಂತೆ ತಲೆಯೆತ್ತಬಹುದು. ಆದರೆ ಈಗಾಗಲೇ ಮೂಲೆಗುಂಪಾಗುತ್ತಿರುವ ಕನ್ನಡ ಈ ಜಾಗತೀಕರಣದ ಭರಾಟೆಯಲ್ಲಿ ನಿರ್ನಾಮವಾಗುತ್ತದೇನೋ ಎಂಬ ಹೆದರಿಕೆಯಾಗುತ್ತದೆ.

ಪಶ್ಚಿಮದ ದೇಶಗಳು ಭಾರತೀಯ ಕಾಲ್‌ಸೆಂಟರ್‌ನಿಂದ ಆಗುವ ಉಳಿತಾಯಕ್ಕೆ ಬೆರಗಾಗಿವೆ. ಅವರ ದೇಶದಲ್ಲಿ ಒಬ್ಬ ಕಾರ್ಮಿಕನಿಗೆ ಕೊಡುವ ಸಂಬಳವನ್ನು ಇಲ್ಲಿ ಹತ್ತು ಜನಕ್ಕೆ ಹಂಚಬಹುದಾಗಿದೆ. ಸಾಧ್ಯವಾದಷ್ಟು ಕಾಲ್‌ಸೆಂಟರ್ ಕೆಲಸವನ್ನು ಭಾರತಕ್ಕೆ ದಬ್ಬುತ್ತಿದ್ದಾರೆ. ಆದರೆ ಈಗಾಗಲೇ ಅಲ್ಲಿ ಕಾಲ್‌ಸೆಂಟರ್‌ಗಳಲ್ಲಿ ಕೆಲಸ ಮಾಡುತ್ತಿದ್ದ ನೌಕರರು ತಮ್ಮ ಕೆಲಸಗಳನ್ನು ಕಳೆದುಕೊಳ್ಳುತ್ತಿದ್ದಾರೆ. ತಮ್ಮ ಉದ್ಯೋಗ ಚ್ಯುತಿಗೆ ಕಾರಣವಾದ ಭಾರತವನ್ನು ದ್ವೇಷಿಸುತ್ತಿದ್ದಾರೆ. ಮೊನ್ನೆ ಬ್ರಿಟಿಷ್ ಟೆಲಿಕಾಂ ತನ್ನ ಒಂದು ಬೃಹತ್ ಕಾಲ್‌ಸೆಂಟರ್ ಒಂದನ್ನು ಭಾರತಕ್ಕೆ ವರ್ಗಾಯಿಸಲು ಪ್ರಯತ್ನಿಸಿದಾಗ ಇಡೀ ಇಂಗ್ಲೆಂಡ್ ವಿರೋಧವನ್ನು ವ್ಯಕ್ತಪಡಿಸಿ, ಅಂತಹ ದೊಡ್ಡ ಕಂಪನಿಯನ್ನು ಮಣಿಸಿತು. ಸರಕಾರಕ್ಕೂ ಇಂತಹ ವ್ಯಾಪಾರದ ಗುತ್ತಿಗೆಯನ್ನು ಭಾರತಕ್ಕೆ ನೀಡುವುದನ್ನು ನಿಯಂತ್ರಿಸಬೇಕೆಂದು ಬೆದರಿಕೆ ಒಡ್ಡಿತು. ಆದರೆ ನಾವೀಗ ಬದುಕುತ್ತಿರುವುದು ಸ್ಪರ್ಧಾತ್ಮಕ ಯುಗದಲ್ಲಿ. ಜಗತ್ತಿನ ಮೂಲೆ ಮೂಲೆಯನ್ನು ಒಂದು ದೂರವಾಣಿಯ ಕರೆಯ ಮೂಲಕ ಸಂಪರ್ಕಿಸಬಹುದಾದ ಇಂದಿನ ದಿನಗಳಲ್ಲಿ ಉದ್ಯೋಗಪತಿ ಜನರ ಭಾವನೆಗಳಿಗೆಲ್ಲಾ ಬೆಲೆ ಕೊಡುತ್ತಾ ಕುಳಿತುಕೊಳ್ಳುವುದು ಸಾಧ್ಯವಿಲ್ಲ. ಎಲ್ಲಿ ಕಡಿಮೆ ಖರ್ಚಿನಲ್ಲಿ ಕೆಲಸ ಮಾಡಬಹುದೋ ಅಲ್ಲಿಗೆ ಧಾವಿಸುತ್ತಾನೆ. ಅವನನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ವ್ಯಾಪಾರವೆಂಬುದು ಬರೀ ಮೂಲೆಯಲ್ಲಿ ಕುಳಿತು ಮಾಡುವ ಸಂಧ್ಯಾವಂದನೆಯಂತಲ್ಲ. ಯಾವುದೋ ದೇಶದ, ಯಾವುದೋ ಕುಗ್ರಾಮದ ವ್ಯಕ್ತಿಯೂ ನಿಮ್ಮ ಗ್ರಾಹಕನೆಂದು ಭಾವಿಸಿದಾಗಲೇ ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಬದುಕುಳಿಯಲು ಸಾಧ್ಯ.

ಪ್ರಪಂಚದ ಪರಿಚಯ ಮಾಡಿಕೊಂಡಿರುವ ಭಾರತೀಯ ಬರೀ ಕಾಲ್‌ಸೆಂಟರ್‌ಗೆ ವ್ಯಾಪಾರವನ್ನು ನಿಲ್ಲಿಸುವುದಿಲ್ಲ. ಹೊಸ ಹೊಸ ವ್ಯಾಪಾರಗಳ ಸಾಧ್ಯತೆಯನ್ನು ಹುಡುಕುತ್ತಲೇ ಇದ್ದಾನೆ. ಅಲ್ಲಿಯ ಎಲ್ಲಾ ಅಕೌಂಟ್ಸ್ ಕೆಲಸಗಳನ್ನು ಇಲ್ಲಿಯ ನಮ್ಮ ಅಕೌಂಟೆಂಟ್‌ಗಳಿಂದ ಮಾಡಿಸಿದರೆ ಹೇಗೆ, ಅವರ ವಿದ್ಯುತ್ ಮತ್ತು ನೀರಿನ ಬಿಲ್ಲುಗಳನ್ನು ಇಲ್ಲಿಂದಲೇ ಇಂಟರ್‌ನೆಟ್ ಮೂಲಕ ಕಟ್ಟಬಹುದಲ್ಲಾ, ಅವರ ಬಟ್ಟೆಗಳನ್ನು ಇಲ್ಲಿಯೇ ಇಸ್ತ್ರಿ ಮಾಡಿ ಅಲ್ಲಿಗೆ ಕಳುಹಿಸಿದರೆ ಹೇಗೆ, ಫ್ರೆಂಚ್, ಜರ್ಮನ್‌ನಂತಹ ಇತರ ಮುಂದುವರಿದ ದೇಶಗಳ ಭಾಷೆಗಳನ್ನು ಕಲಿತುಕೊಂಡು ಅಲ್ಲಿಗೂ ಕಾಲ್‌ಸೆಂಟರ್ ಸೌಲಭ್ಯ ಒದಗಿಸಬಹುದಲ್ಲವೆ... ಅವನ ವಿಚಾರಧಾಟಿಗಳು ಮುಂದುವರಿಯುತ್ತಲೇ ಇವೆ. ಜಗತ್ತಿನ ಎಲ್ಲಾ ದೇಶಗಳ ಸೇವಾ ಸೌಲಭ್ಯಗಳ ಜವಾಬ್ದಾರಿಯನ್ನು ಭಾರತೀಯರು ವಹಿಸಿಕೊಂಡು ಹಣ ಮಾಡಬೇಕೆನ್ನುವುದು ಅವನ ಯೋಚನೆ.

ಜಗತ್ತಿನ ಸ್ಪರ್ಧೆಯಲ್ಲಿ ಸಶಕ್ತವಾಗಿ ಮುನ್ನುಗ್ಗುತ್ತಿರುವ ನಮ್ಮ ಭಾರತಕ್ಕೆ ನಮ್ಮೆಲ್ಲರ ಶುಭ ಹಾರೈಕೆಗಳನ್ನು ತಿಳಿಸೋಣ.

**ವಸುಧೇಂದ್ರ**
ಐ-೦೦೪, ಮಂತ್ರಿ ಪ್ಯಾರಡೈಸ್, ಬನ್ನೇರುಘಟ್ಟ ರಸ್ತೆ
ಬೆಂಗಳೂರು - ೫೬೦ ೦೭೬

**ಕ್ರಿ.** ಶ. ೨೦೫೦, ಜನವರಿ ೩೦
ಮಹಾತ್ಮ ಗಾಂಧಿಯವರ ೧೦೨ನೇ ಪುಣ್ಯ ತಿಥಿ.

ಈ ಪುಣ್ಯ ತಿಥಿಯ ದಿನ ನಾಡಿನ ಪ್ರಧಾನಿ, ಉಪ ಪ್ರಧಾನಿ, ವಿರೋಧ ಪಕ್ಷದ ನಾಯಕರು ಮತ್ತಿತರೇ ಗಣ್ಯರು ರಾಷ್ಟ್ರಪಿತನಿಗೆ ರಾಜಘಾಟಿಗೆ ಹೋಗಿ ನಮನ ಸಲ್ಲಿಸಬೇಕು; ಸಲ್ಲಿಸುತ್ತಾರೆ. ಹಾಗೆಯೇ ಸರ್ವಧರ್ಮ ಪ್ರಾರ್ಥನೆಯನ್ನೂ ಏರ್ಪಡಿಸಬೇಕು. ಈ ಸರ್ವಧರ್ಮ ಪ್ರಾರ್ಥನೆಯಲ್ಲಿ ಹಿಂದೂ, ಸಿಖ್, ಮುಸಲ್ಮಾನ, ಕ್ರೈಸ್ತ ಧರ್ಮೀಯರು ಎಂದರೆ ಈ ನಾಡಿನ ಪ್ರಮುಖ ಮತಧರ್ಮಗಳವರ ಒಂದೊಂದು ಚುಟುಕ ಹಾಡು ಅಥವಾ ಪ್ರಾರ್ಥನೆ ಇರುತ್ತದೆ. ಅದರಲ್ಲಿ ಪರಿಣತರಾದವರು ಎಂದರೆ ಕರ್ನಾಟಕ ಹಿಂದೂಸ್ಥಾನಿ ಕೋಕಿಲ ಕಂಠದವರು ಆಯಾಯ ಮತಧರ್ಮದ ಒಂದೊಂದು ಚರಣವನ್ನು ಹಾಡುತ್ತಾರೆ. 'ವೈಷ್ಣವ ಜನತೋ'; 'ರಘುಪತಿ ರಾಘವ ರಾಜಾರಾಂ....' ಮುಂತಾದವು ಖಾಯಂ; ಇದ್ದೇ ಇರುತ್ತವೆ.

ಈ ಕಾರ್ಯಕ್ರಮವನ್ನು ಉದ್ದಕ್ಕೂ ಎಂದರೆ ೧೯೪೯ರಿಂದಲೂ ಆಚರಿಸಿಕೊಂಡು ಬಂದಿದ್ದಾರೆ. ೧೯೪೮ರಲ್ಲಿ ಗಾಂಧೀಜಿಯ ಹತ್ಯೆಯಾಯಿತಷ್ಟೆ. ಅಂದಿನಿಂದಲೂ ಈ ಪದ್ಧತಿಯನ್ನು ಮಹಾ ಶಿವರಾತ್ರಿ / ಮಹಾನವಮಿ/ ಶ್ರೀ ರಾಮ ನವಮಿ – ಇಂಥ ಹಬ್ಬಗಳ ಹಾಗೆ ಒಂದು ಆಚರಣೆಯಾಗಿ ನಡೆಸಿಕೊಂಡು ಬರಲಾಗಿದೆ. ಮುಂದೆಯೂ ಹೀಗೆಯೇ ನಡೆಯುತ್ತದೆ. ಹಾಗೆಯೇ ವಿದೇಶಗಳಿಂದ ಗಣ್ಯರು ಬಂದರೂ ತಪ್ಪದೆ ಅಂಥವರು ರಾಜಘಾಟಿಗೆ ಹೋಗಿ ಗಾಂಧೀಜಿಗೆ ನಮನ ಸಲ್ಲಿಸುತ್ತಾರೆ.

ಆದರೆ ಈ ವರ್ಷ ಒಂದು ವಿಶೇಷ.

ಕ್ರಿ. ಶ. ೨೦೫೦ರಲ್ಲಿ ರಾಷ್ಟ್ರಪತಿಗಳ ಆಯ್ಕೆ ಮಾಮೂಲಿನಂತೆ ನಡೆದಿದೆ. ಈ ಆಯ್ಕೆ ನಾಡಿನಾದ್ಯಂತ ಭಾರೀ ಕೋಲಾಹಲವನ್ನೂ ಎಬ್ಬಿಸಿದೆ. ಈ ಆಯ್ಕೆ ಆಗಿರುವುದೂ ಅದರ ಹಿಂದಿನ ದಿನವೇ. ಎಂದರೆ ಕ್ರಿ. ಶ. ೨೦೫೦ರ ಜನವರಿ ೨೯. ೩೦ನೆಯ ತಾರೀಖು ಗಾಂಧೀಜಿಯವರ ಪುಣ್ಯತಿಥಿ.

ಅಧಿಕಾರ ವಹಿಸಿಕೊಂಡ, ಎಂದರೆ ಶ್ರೀರಾಮ ಗೋಡ್ಸೆಯವರು ರಾಷ್ಟ್ರಪತಿಯಾಗಿ ಆಯ್ಕೆಯಾದ, ಮರುದಿನವೇ ರಾಜಘಾಟಿಗೆ ಹೋಗಿ ಗಾಂಧೀಜಿಗೆ ನಮನ ಸಲ್ಲಿಸಬೇಕಾಗಿದೆ. ಈ ಥರ ಆಯ್ಕೆ, ಈ ಥರ ನಮನ – ಈ ಹಿಂದೆ ಯಾವ ರಾಷ್ಟ್ರಪತಿಗೂ ಸಂಭವಿಸಿಲ್ಲ ಎಂದು ಎಲ್ಲರೂ ಹೇಳುತ್ತ ಇದ್ದಾರೆ. ಪತ್ರಿಕೆಗಳೂ ದಪ್ಪ ದಪ್ಪ ಅಕ್ಷರಗಳಲ್ಲಿ ಹಾಕಿ ಶೀರ್ಷಿಕೆಗಳನ್ನು ಬರೆದಿವೆ.

* * *

ಶ್ರೀರಾಮ ಗೋಡ್ಸೆಯವರು ನಾಥೂರಾಂ ವಿನಾಯಕ ಗೋಡ್ಸೆಯವರ ಮೊಮ್ಮಗ. ಮೊಮ್ಮಗ ಎಂದರೆ ಸ್ವಂತ ಮಗ ಅಥವಾ ಮಗಳ ಮಗ ಅಲ್ಲ. ದೊಡ್ಡಪ್ಪ, ಚಿಕ್ಕಪ್ಪ ಈ ರೀತಿ ತಾತನ ವಂಶದ ಕುಡಿ. ಒಂದೇ ರಕ್ತ. ಒಂದೇ ಬಣ್ಣ. ಆ ರೀತಿ ಶಿವಾಜಿ ಗೋಡ್ಸೆ ನಾಥೂರಾಮರಿಗೆ ಚಿಕ್ಕಪ್ಪ ಆಗಬೇಕು. ಚಿಕ್ಕಪ್ಪನ ಮೊಮ್ಮಗನೂ ಹಾಗೆಯೇ ನಾಥೂರಾಮರಿಗೂ ಮೊಮ್ಮಗನೇ ಆಗಬೇಕು ಅಲ್ಲವೆ ?

ಗಾಂಧೀಜಿಯನ್ನು ಕೊಲೆ ಮಾಡಿದ ವಂಶಜರಾದ ಈ ಗೋಡ್ಸೆ ರಾಷ್ಟ್ರಪತಿ ಆಗುವುದು ಎಂದರೆ ಏನು, ಹೀಗೂ ಉಂಟೇ, ನಾಡಿಗೆ ಇದು ಶುದ್ಧ ಅಪಮಾನ – ಎಂದು ವಿರೋಧ ಪಕ್ಷಗಳು ಭಾರೀ ಗದ್ದಲ ಎಬ್ಬಿಸಿದವು. ಯಾರನ್ನೋ ನಿಲ್ಲಿಸಿದವು. ಆದರೆ ವಿಜಯ ಮಾಲೆ ಶ್ರೀರಾಮ ಗೋಡ್ಸೆಯವರಿಗೇ.

ಕ್ರಿ. ಶ. ೨೦೫೦ರಲ್ಲಿಯೂ ಭಾರತದಲ್ಲಿ ಸ್ಥಿರ ಪಕ್ಷದ ಎಂದರೆ ಒಂದೇ ಪಕ್ಷದ ಸರಕಾರ ಏರ್ಪಡಲಿಲ್ಲ. ಎಲ್ಲ ರಾಜ್ಯ ರಾಜ್ಯಗಳಲ್ಲಿಯೂ ಕೇಂದ್ರದಲ್ಲಿಯೂ ಹೀಗೆಯೆ. ಅದು ಸರಿ, ಭಾರತದಲ್ಲಿ ಒಟ್ಟು ಎಷ್ಟು ರಾಜಕೀಯ ಪಕ್ಷಗಳು ಇವೆ ? ಒಂದೊಂದು ರಾಜ್ಯದಲ್ಲಿಯೂ

# ರಾಷ್ಟ್ರಪತಿ ಶ್ರೀರಾಮ ಗೋಡ್ಸೆಯವರಿಂದ
# ರಾಜಘಾಟಿನಲ್ಲಿ ಗಾಂಧೀಜಿಗೆ ನಮನ



**ಶೇಷನಾರಾಯಣ**

ಹತ್ತು-ಹನ್ನೆರಡು ಪ್ರಾಂತ್ಯ ಪಕ್ಷಗಳು. ಭಾರತದಲ್ಲಿ ಎಷ್ಟು ಜಾತಿಗಳು ಇವೆಯೋ ಅಷ್ಟೂ ಪಕ್ಷಗಳು; ಮುಖಂಡರು. ಇವರು ಎಲ್ಲರೂ ನಾಡಿಗಾಗಿ ಸೇವೆ ಮಾಡುವವರೇ. ಒಂದು ರಾಷ್ಟ್ರಪಕ್ಷ, ಒಂದು ಸಿದ್ಧಾಂತ, ಪ್ರಣಾಲಿಕೆ – ಹೀಗೆ ಯಾವ ಪಕ್ಷಕ್ಕೂ ಇಲ್ಲ. ನೀರು, ಭಾಷೆ, ಸಿನಿಮಾ – ಇಂಥವುಗಳ ಹೆಸರು ಹೇಳಿಕೊಂಡು ಮುಖಂಡರು ಎನಿಸಿಕೊಳ್ಳುವವರು ಆಯ್ಕೆ ಆಗುತ್ತಾ ಇದ್ದಾರೆ.

ಭಾರತದಲ್ಲಿ ಕರ್ನಾಟಕ ಎನ್ನುವುದೂ ಒಂದು ರಾಜ್ಯವಷ್ಟೆ ಕ್ರಿ. ಶ. ೨೦೦೨ನೇ ಇಸವಿಯಲ್ಲಿ, ಆ ರಾಜ್ಯದಲ್ಲಿ, ಜನತಾದಳ ಎಸ್, ಜನತಾದಳ ಯು – ಎನ್ನುವ ಎರಡು ಪಕ್ಷಗಳು ಮಾತ್ರ ಇದ್ದವು. ಈಗ ಎಂದರೆ ಕ್ರಿ. ಶ. ೨೦೫೦ರಲ್ಲಿ ಜನತಾದಳ (ವೈ), ಜನತಾದಳ (ಝಡ್) – ಹೀಗೆ ಆ ಪಕ್ಷ ಮುಂದಕ್ಕೆ ಎಂದರೆ ಎಸ್‌ನಿಂದ ಝಡ್‌ವರೆಗೆ ಸೊಂಪಾಗಿ ಕವಲೊಡೆದಿದೆ. ಇನ್ನು ಮುಂದೆ ಎ ಪ್ರಾರಂಭ ಆಗಬೇಕು – ಹೀಗೆ ಎಲ್ಲ ಪಕ್ಷಗಳೂ ಸಮೃದ್ಧಿಯಾಗಿವೆ.

ಇಂಥ ರಾಜಕೀಯ ಮತ್ತು ರಾಜಕೀಯ ಜನರ ಹೊಯ್ದಾಟದಲ್ಲಿ, ಉಹೂಂ ದೊಂಬರಾಟದಲ್ಲಿ ರಾಷ್ಟ್ರದಲ್ಲಿ ಒಂದು ದೊಡ್ಡ ಪಕ್ಷ ಎನಿಸಿಕೊಂಡಿರುವುದು ಎಂದರೆ ಅದೇ ಹಿಂದೂಸ್ಥಾನ್ ಜನತಾ ಪಕ್ಷ ಮಾತ್ರ. ಕ್ರಿ. ಶ. ೨೦೫೦ರಲ್ಲಿ ಕೇಂದ್ರದಲ್ಲಿ ಅಧಿಕಾರ ಹಿಡಿದಿರುವುದೂ ಈ ಪಕ್ಷವೇ.

ಹಿಂದೂಸ್ಥಾನ್ ಜನತಾ ಪಕ್ಷ ಭಾರತ ಹಿಂದೂ ರಾಷ್ಟ್ರ ಆಗಬೇಕು, ಹಿಂದೂಸ್ಥಾನ್ ಎಂದು ಇದಕ್ಕೆ ಹೆಸರಿರಬೇಕು ಎನ್ನುವ ಧೋರಣೆಯುಳ್ಳ ಮೂಲಭೂತವಾದವೇ ಬಂಡವಾಳ ಆಗಿರುವ ಹಸೀ ಹಸೀ ಕೋಮುವಾದಿ ಪಕ್ಷ. ಮೇಲ್ವರ್ಗದ ಪಕ್ಷ. ನಂಬಿಕೆಯೇ ಮುಖ್ಯ, ಯಾವುದನ್ನು ಹೇಗೆ ಏನು ಎತ್ತ ಎಂದು ಪ್ರಶ್ನೆ ಕೇಳಕೂಡದು, ನಮ್ಮ ಸಂಸ್ಕೃತಿಯೇ ಹಾಗೆ ಎನ್ನುವಂಥ ಪಕ್ಷ. ಭಾರೀ ಭಾರೀ ಶ್ರೀಮಂತರು ಭಾರೀ ಭಾರೀ ಮಠಾಧೀಶರು ಭಾರೀ ಭಾರೀ ಹೊಟ್ಟೆಯವರು ಹುಟ್ಟುಹಾಕಿದಂಥ ಪಕ್ಷ.

ಕ್ರಿ. ಶ. ೨೦೫೦ರಲ್ಲಿ ಮಾತ್ರ ಅಲ್ಲ, ಕ್ರಿ. ಶ. ೨೦೪೦ ಮತ್ತು ಕ್ರಿ. ಶ. ೨೦೪೫ರಲ್ಲಿಯೂ ಹಿಂದೂಸ್ಥಾನ್ ಜನತಾ ಪಕ್ಷವೇ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿದೆ. ೨೦೪೦ರಲ್ಲಿ ಮೋಹನ ವರ್ಣೇಕರ್ ನಾಡಿನ ಪ್ರಧಾನಿ ಆಗಿದ್ದರು. ೨೦೪೫ರಲ್ಲಿ ವಿಷ್ಣುಕಾಂತ ಶಾಸ್ತ್ರೀ. ೫೦ರಲ್ಲಿಯೂ ಅವರೇ ಮುಂದುವರಿದಿದ್ದಾರೆ.

ಒಂದು ವ್ಯತ್ಯಾಸ : ಕ್ರಿ. ಶ. ೨೦೪೦ರಲ್ಲಿ ಹಿಂದೂಸ್ಥಾನ್ ಜನತಾ ಪಕ್ಷದ ಬಲ ಸಂಸತ್ತಿನಲ್ಲಿ ೨೦೦, ೪೫ರಲ್ಲಿ ೧೮೦. ೫೦ರಲ್ಲಿ ೧೫೦. ಭಾರತದ ಪಾರ್ಲಿಮೆಂಟಿನ ಎಂದರೆ ಸಂಸತ್ತಿನ ಸದಸ್ಯರ ಸಂಖ್ಯೆ ಕ್ರಿ. ಶ. ೨೦೫೦ರಲ್ಲಿ ೫೫೦. ಇದರಲ್ಲಿ ಅರ್ಧ ಭಾಗ ಎಂದರೆ ೨೭೫. ಆದರೆ ಸದಸ್ಯರ ಸಂಖ್ಯೆಗೆ ಏಣಿ ಹಾಕಿದರೆ ಮಾತ್ರ ಅಂಥವರು ಅಂಥ ಪಕ್ಷ ಅಧಿಕಾರ ಹಿಡಿಯಲು ಸಾಧ್ಯವಾಗುತ್ತದಷ್ಟೆ.

ಆದರೆ ಯಾವ ಪಕ್ಷಕ್ಕೂ ೨೭೫ರ ಬಲ ಇಲ್ಲ. ವಿರೋಧ ಪಕ್ಷಗಳಲ್ಲಿ ಭಾರತ ಕಾಂಗ್ರೆಸ್ ಎನ್ನುವುದು ಒಂದು ಪಕ್ಷ, ಇದಕ್ಕೆ ನೂರು ಸದಸ್ಯರ ಬಲ ಮಾತ್ರ ಇದೆ. ಇದೇ ನಾಡಿನಲ್ಲಿ ಎರಡನೆಯ ದೊಡ್ಡ ಪಕ್ಷ. ಈ ಪಕ್ಷ, ಮತ್ತಿತರೇ ಚೇಕು ಚಿಲ್ಲರೆ ಪಕ್ಷಗಳು ಎಲ್ಲ ಸೇರಿದರೂ ೨೦೦ರ ಸಂಖ್ಯೆಗೆ ಎಟುಕುವುದಿಲ್ಲ. ಅಧಿಕಾರ ಹಿಡಿಯಲು ಸಾಧ್ಯವಿಲ್ಲ. ಹೀಗಾಗಿ ಆಡಳಿತ ಪಕ್ಷವನ್ನು ಟೀಕಿಸುವ ಪಾರ್ಲಿಮೆಂಟಿನಲ್ಲಿ ಗದ್ದಲ ಮಾಡುವುದಕ್ಕಷ್ಟೇ ಈ ಪಕ್ಷ ಸೀಮಿತವಾಗಿದೆ.

ಹಿಂದೂಸ್ಥಾನ್ ಜನತಾ ಪಕ್ಷ ನಾಡಿನಲ್ಲಿರುವ ಇತರೇ ಕೆಲವು ಚಿಲ್ಲರೆ ಪಲ್ಲರೆ ತರಳೆ ತಾಪತ್ರಯದ ಪಕ್ಷಗಳನ್ನು ಸೇರಿಸಿಕೊಂಡು 'ಮಿಶ್ರ ಸರಕಾರ' ಎಂದು ರಚನೆ ಮಾಡಿಕೊಂಡಿದೆ. ಇದರ ಬಲ ೩೦೫ ಆಗಿದೆ. ಎಂದರೆ ಮೆಜಾರಿಟಿ. ಒಂದು ಪ್ರಾಂತ್ಯದಲ್ಲಿ ಹದಿನೈದು ಸಂಸದರು ಎಂದರೆ ಅದೇ ಜಾಸ್ತಿ. ಮತ್ತೊಂದು ಪ್ರಾಂತದಲ್ಲಿ ಹತ್ತು, ಇನ್ನೊಂದರಲ್ಲಿ ಏಳು – ಈ ರೀತಿ. ಹೀಗೆ ಆಡಳಿತ ಪಕ್ಷ ಎಲ್ಲರನ್ನೂ ಸೇರಿಸಿಕೊಂಡು ಮೆಜಾರಿಟಿ ಆಗಿಬಿಟ್ಟಿದೆ. ಎರಡು ಚುನಾವಣೆಗಳಲ್ಲಿಯೂ ಹೀಗೆಯೇ ನಡೆದು ಮೂರನೆಯದರಲ್ಲಿಯೂ ಇದೇ ವಾಂಗಿಬಾತ್, ಇದೇ ಪುಳಿಯೊಗರೆ, ಇದೇ ಮಸಾಲಾ ಪೂರಿ, ಇದೇ ಗೋಬಿ ಮಂಚೂರಿ ತಯಾರಾಗಿದೆ.

ಈ ಹದಿನೈದು ಹತ್ತರ ಪಕ್ಷಗಳು ಯಾವುದೇ ಸಿದ್ಧಾಂತ ಗಿದ್ಧಾಂತ ಇಲ್ಲದಂಥವು. ತಾವು ತಮ್ಮ ಹೆಂಡತಿ ಮಕ್ಕಳು ಅಳಿಯಂದಿರು ಜಾತಿಯವರು – ಇಷ್ಟು ಜನ ಕ್ಷೇಮವಾಗಿದ್ದರೆ ಸಾಕು ಎನ್ನುವ ಪಕ್ಷಗಳೇ ಆಗಿವೆ.

ಈ ಮುಖಂಡರು ಎನಿಸಿಕೊಂಡಿರುವವರಲ್ಲಿ ಕೆಲವರು ಹಿಂದೆ ಒಂದಾನೊಂದು ಕಾಲದಲ್ಲಿ ಲೋಹಿಯಾ, ಜಯಪ್ರಕಾಶ್, ಬುದ್ಧ, ಬಸವಣ್ಣ ಹೀಗೆ ಹೇಳಿಕೊಂಡಿದ್ದವರು. ಪ್ರಗತಿಪರರು ಎನಿಸಿಕೊಂಡಿದ್ದವರು. ಆಗಾಗ್ಗೆ ಜೈಲಿಗೆ ಹೋಗುತ್ತ ಇದ್ದವರು. ಇಂಥವರು ಎಲ್ಲರೂ ಈಗ ಮುದುಕರಾಗಿಬಿಟ್ಟಿದ್ದಾರೆ. ಮುದುಕರಾದರೂ ಕುರ್ಚಿಯ ಆಸೆಗಳನ್ನು

ಮಾತ್ರ ಬಿಟ್ಟಿಲ್ಲ. ಏನೋ ತಮ್ಮ ಕೊನೆಗಾಲದಲ್ಲಾದರೂ ಅದ್ದೂರಿ ಕಾರುಗಳಲ್ಲಿ ಓಡಾಡುತ್ತ ಅದ್ದೂರಿ ಬಂಗಲೆಗಳಲ್ಲಿ ವಾಸಿಸೋಣ ಎಂದು ತಮ್ಮ ತಮ್ಮ ಹಿಂದಿನ ಸಿದ್ಧಾಂತ ಅಂಥವು ಇಂಥವು ಎಲ್ಲವನ್ನೂ ಚಾಪೆಯಲ್ಲಿ ಸುತ್ತಿ ಅಟ್ಟಕ್ಕೇರಿಸಿ ಹಣ್ಣು ಹಣ್ಣು ಮುದುಕ ಪ್ರಧಾನಿ ವಿಷ್ಣು ಕಾಂತ ಶಾಸ್ತ್ರೀ ಎಸೆದ ಎಸೆಯುವ ಕುರ್ಚಿ ಎನ್ನುವ ಪಾಯಸದ ತಟ್ಟೆಗೆ ಮೂತಿ ಚಾಚಿ ನಾಚಿಕೆ, ಹೇನಾಯ ಮಾನ ಮರ್ಯಾದೆ ಎಲ್ಲವನ್ನೂ ಬಿಟ್ಟು ಲೊಚ ಲೊಚ ನೆಕ್ಕುತ್ತ ಇದ್ದಾರೆ.

ಹೀಗೆ ಭವ್ಯ ಭಾರತದ ರಾಜ್ಯಭಾರ ಅದ್ದೂರಿಯಾಗಿ ನಡೆದುಕೊಂಡಿದೆ. ಕೋಮುವಾದಿಗಳು ಗರಿಗೆದರಿ ಹಾರಾಡಿಕೊಂಡಿದ್ದಾರೆ. ಕೋಮುವಾದಿಗಳು ಸೂಚಿಸಿದ ಶ್ರೀರಾಮ ಗೋಡ್ಸೆಯವರೇ ಈಗ ರಾಷ್ಟ್ರಪತಿಗಳೂ ಆಗಿಬಿಟ್ಟಿದ್ದಾರೆ.

* * *

ಶಿಲಾರಂಗದಳ ಎನ್ನುವುದು ಹಿಂದೂಸ್ಥಾನ್ ಜನತಾ ಪಕ್ಷದ ಒಂದು ಅಂಗ ಸಂಸ್ಥೆ. ಇದು ಹಿಂದೆ ಅಫ್‌ಘಾನಿಸ್ತಾನದಲ್ಲಿ ತಾಲಿಬಾನ್‌ಗಳು ಎನ್ನುವವರು ಇದ್ದರಲ್ಲ.... ಆ ಥರ ಜನ. ಮತ-ಧರ್ಮ ಎನ್ನುವ ಹೆಸರಿನಲ್ಲಿ ಮಾಡಬಾರದ ಕೆಲಸಗಳನ್ನೆಲ್ಲ ಈ ತಾಲಿಬಾನ್‌ಗಳು ಮಾಡುತ್ತ ಇದ್ದರಲ್ಲವೇ ? ಇವರೂ ಹಾಗೆಯೇ.

ಜನ ಸಂಕ್ಷಿಪ್ತವಾಗಿ ಶಿಲಾರಂಗ ದಳವನ್ನು ಶಿರಂದಳ ಎಂದೂ ಹಿಂದೂಸ್ಥಾನ್ ಜನತಾ ಪಕ್ಷವನ್ನು ಹಿಂಜಪ ಎಂದೂ ಮುದ್ದಾಗಿ ಕರೆಯುತ್ತಾರೆ.

ಈ ಶಿರಂದಳ ನಮಗೆ ಕೋರ್ಟು, ಕಚೇರಿ, ಶಾಸನಸಭೆ, ಕಾನೂನು, ಪಾರ್ಲಿಮೆಂಟ್ – ಹೀಗೆ ಯಾವುದೂ ಇಲ್ಲ. ನಾವು ಇವೆಲ್ಲವಕ್ಕೂ ಅತೀತರು. 'ದೇವರು' ಎಂದರೆ ಅಲ್ಲಿಗೆ ಮುಗಿಯಿತು ಕಥೆ. ಯಾರೂ ಏನೂ ಪ್ರಶ್ನೆ ಮಾಡುವ ಹಾಗಿಲ್ಲ. ಹಾಗೆ ಪ್ರಶ್ನೆ ಮಾಡಿದರೆ ಅಂಥವರನ್ನು ನಾವು ಚಚ್ಚಿ ಹಾಕುತ್ತೇವೆ – ಎಂದು ಬಹಿರಂಗವಾಗಿಯೇ ಹೇಳಿಕೊಂಡು ಅಟ್ಟಹಾಸ ಮಾಡುತ್ತ ಇದೆ. ಇದರ ಸ್ವಯಂ ಸೇವಕರು ಎನ್ನುವವರು ಮಿಡಿಚೆಗಳಾಗಿ ಎಲ್ಲೆಲ್ಲೂ ಹಾರಾಡಿಕೊಂಡು ಇದ್ದಾರೆ. ನಮಗೂ ರಾಜಕೀಯಕ್ಕೂ ಏನೇನೂ ಸಂಬಂಧ ಇಲ್ಲ. ನಾವು ಸಂಸ್ಕೃತಿ ಉದ್ಧಾರಕರು ಎಂದು ಹೇಳಿಕೊಂಡು ರಾಜಕೀಯ ಮಾಡುತ್ತ ಇದ್ದಾರೆ.

ಪ್ರಧಾನಿ ವಿಷ್ಣುಕಾಂತ ಶಾಸ್ತ್ರಿಯವರ ಧೋರಣೆಯೋ ವಿಚಿತ್ರ. ಒಂದು ಸಲ 'ನಮಗೂ ಎಂದರೆ ಮಿಶ್ರ ಸರಕಾರದ ಧೋರಣೆಗಳಿಗೂ, ಶಿರಂದಳದ ಧೋರಣೆಗಳಿಗೂ ಸಂಬಂಧವೇ ಇಲ್ಲ' ಎನ್ನುತ್ತಾರೆ. ಮರುಕ್ಷಣದಲ್ಲೇ 'ನಾನು ಶಿರಂದಳದ ಸ್ವಯಂಸೇವಕ' ಎನ್ನುತ್ತಾರೆ. 'ಮತಧರ್ಮಗಳ ವಿಚಾರದಲ್ಲಿ ಮಿಶ್ರ ಸರಕಾರದ್ದೇ ಬೇರೆ ಬಗೆ. ಅದು ಹಿಂಜಪದ ರೀತಿಯದು ಅಲ್ಲ' ಎನ್ನುತ್ತಾರೆ. ಇನ್ನೊಂದು ಸಲ 'ಅಲ್ಪಸಂಖ್ಯಾತರು ಬಹುಸಂಖ್ಯಾತರು ಹೇಳಿದ ಹಾಗೆ ಕೇಳಿಕೊಂಡು ಬಿದ್ದಿರಬೇಕು' ಎನ್ನುತ್ತಾರೆ.

ಒಟ್ಟಿನ ಮೇಲೆ ನಾಡಿನ ಪ್ರಧಾನಿ ಏನು ಹೇಳುತ್ತ ಇದ್ದಾರೆ ಎನ್ನುವುದೇ ಜನಕ್ಕೆ ಅರ್ಥವಾಗದೆ ಗೊಂದಲದಲ್ಲಿ ಮುಳುಗಿದ್ದಾರೆ. ಪ್ರಧಾನಿ ಹೀಗೆ ಚದುರಂಗದ ಆಟ ಮಾಡಿಕೊಂಡು ಗೊಂಬೆಗಳನ್ನು ಕುಣಿಸಿಕೊಂಡಿದ್ದಾರೆ.

* * *

ಪ್ರೊಫೆಸರ್ ಬಗಾಡಿಯಾ ಶಿಲಾರಂಗದಳದ ಮಹಾಕಾರ್ಯದರ್ಶಿ. ಈತ ಅದು ಯಾವ ಕಾಲೇಜಿನಲ್ಲಿ ಹುಡುಗರಿಗೆ ಪಾಠ ಮಾಡಿದನೋ ? ಹುಡುಗರ ತಲೆಗೆ ಬೆಂಕಿ ತುಂಬಿದನೋ ? ಮಹಾ ಕೋಮುವಾದಿ. ಭಂಗಿ ಸೇದುತ್ತಾ ತಲೆ ಕೆಟ್ಟಿರುವ ಸಾಧು ಸಂತರು ಎನಿಸಿಕೊಳ್ಳುವ ಹುಚ್ಚರು ಶ್ರೀ ಶ್ರೀ ಶ್ರೀ ಆ ಮಠ ಈ ಮಠಗಳ ಮಹಾಸ್ವಾಮಿಗಳು ಇಂಥವರಿಗೆಲ್ಲರಿಗೂ ಇವನು ಹೀರೋ.

ಬಗಾಡಿಯಾ ಭಾಷಣ ಎಂದರೇ ಬೆಂಕಿ. ಹಸಿರು ಇದ್ದ ಕಡೆ ಬಗಾಡಿಯಾ ಕಾಲು ಹಾಕಿದರೆ ಆ ಪ್ರದೇಶ ಎಲ್ಲವೂ ಸುಟ್ಟು ಕರಕಲಾಗಿಬಿಡುತ್ತದೆ. ಬೆಂಕಿ ಹೊತ್ತಿಕೊಳ್ಳುತ್ತದೆ. ಈತ ಭಾಷಣಕ್ಕೆ ನಿಂತರೆ ಇವನ ಆವೇಶವೇ ಆವೇಶ. ನಿಂತ ಜಾಗದಿಂದ ಆವೇಶದಿಂದ ಮೇಲಕ್ಕೆ ಈತ ಮೂರು ಅಡಿ ಛಂಗನೆ ಚಿಮ್ಮುತ್ತಾನೆ. ಬಳಿಕ ಧುಬ್ ಎಂದು ಕೆಳಗೆ ಬೀಳುತ್ತಾನೆ. ಅನೇಕ ಸಲ ಇವನು ರೋಷಾವೇಶದಿಂದ ಕೈಬೀಸಿದಾಗ ಧ್ವನಿವರ್ಧಕವೇ ಕೆಳಗೆ ಬಿದ್ದು ಮುರಿದುಹೋಗಿದೆ. ಹಾಗಾಗಿ ಸಭೆಯ ವ್ಯವಸ್ಥಾಪಕರು ಪ್ರೊಫೆಸರ್ ಬಗಾಡಿಯಾ ಭಾಷಣಕ್ಕೆ ಎರಡು ಮೂರು ಮೈಕ್ ಸೆಟ್ಟುಗಳನ್ನು ಸಿದ್ಧಮಾಡಿಕೊಂಡಿರುತ್ತಾರೆ.

ಪ್ರೊಫೆಸರ್ ಬಗಾಡಿಯಾ ಹುಚ್ಚಾಬಟ್ಟೆ ಮಾತನಾಡುತ್ತಾನೆ. ಕೆಲವು ಸಲ 'ನಮ್ಮ ಪಕ್ಷವೇ ಕೇಂದ್ರದಲ್ಲಿ ಪೂರ್ಣ ಮೆಜಾರಿಟಿ ಬರಲಿ, ಆಗ ಏನು ಮಾಡುತ್ತೇವೆ ನೋಡಿ' ಎನ್ನುತ್ತಾನೆ. ಕಣ್ಣಿಗೆ ಬೀಳುವ ಮಸೀದಿ-ಚರ್ಚುಗಳು ಎಲ್ಲವೂ ಇವನ ಕಣ್ಣಿಗೆ ಶಿವಾಲಯಗಳಾಗಿ ಕಾಣುತ್ತವೆ. 'ನಾಡಿನ ಪ್ರಧಾನಿ, ಸುಪ್ರೀಂ ಕೋರ್ಟ್' – ಅಂಥವು ಇಂಥವನ್ನೆಲ್ಲ ನಾವು ನಂಬುವುದಿಲ್ಲ. ನಮ್ಮದೇ ಬೇರೆ ಸಿದ್ಧಾಂತ ಎನ್ನುತ್ತಾನೆ.

ಇದೀಗ ರಾಷ್ಟ್ರಪತಿಗಳ ಚುನಾವಣೆ ನಡೆದಾಗ ವಿರೋಧ ಪಕ್ಷಗಳು ಭಾರೀ ಗದ್ದಲ ಎಬ್ಬಿಸಿದ್ದುವಷ್ಟೆ. ಏನು ? ಗಾಂಧೀಜಿಯನ್ನು ಹತ್ಯೆ ಮಾಡಿದ ನಾಥೂರಾಮನ ಮೊಮ್ಮಗ ಶ್ರೀರಾಮ ಗೋಡ್ಸೆ ರಾಷ್ಟ್ರಪತಿ ಆಗುವುದೇ ? ಹೀಗೂ ಉಂಟೆ ? ಇದು ಏನು ಅನ್ಯಾಯ ? ಎಂದು.

ಆಗ ಬಗಾಡಿಯಾ ರಾಷ್ಟ್ರಕ್ಕೆ ವಿವರಣೆ ನೀಡಿದ್ದು ಹೀಗೆ :

*ಗಾಂಧಿಯನ್ನು ನಾಥೂರಾಮ ವಿನಾಯಕ ಗೋಡ್ಸೆಯವರು ಕೊಲೆ ಮಾಡಲಿಲ್ಲ. ಗಾಂಧಿ ನಾಥುರಾಮರಿಂದ ಕೊಲೆ ಮಾಡಿಸಿಕೊಂಡರು.*

ಈ ಪ್ರೊಫೆಸರ್ ಈ ಮಹಾ ಸಂಶೋಧಕ ಏನು ಹೇಳುತ್ತ ಇದ್ದಾನೆ ? ಗಾಂಧೀಜಿಯೇ ನಾಥುರಾಮರ ಮುಂದೆ ನಿಂತು ಗುಂಡು ಹಾರಿಸಪ್ಪಾ ಹಾರಿಸು ಹಾರಿಸು ಎಂದರೆ ? ಬಗಾಡಿಯಾ ವಿವರಣೆ ಹೇಳುವುದನ್ನು ಸ್ವಲ್ಪ ಕೇಳೋಣವೇ ?

''ಈ ದೇಶದ ದೇವಾಲಯಗಳು ಇಲ್ಲಿನ ಸಂಪತ್ತು – ಹೀಗೆ ಲೂಟಿ ಮಾಡಿದ ಅಥವಾ ಧ್ವಂಸಗೊಳಿಸಿದ ಅಲ್ಪಸಂಖ್ಯಾತರನ್ನು ಬಹುವಾಗಿ ಓಲೈಸಿ ಬಹುಸಂಖ್ಯಾತರನ್ನು ತುಚ್ಛೀಕರಿಸಿದ ಪರಿಣಾಮವೇ ಗಾಂಧಿ ಎನ್ನುವವರ ಕೊಲೆ ನಡೆದುಹೋಯಿತು. ಆ ಸಂದರ್ಭದಲ್ಲಿ ಹುತಾತ್ಮ ನಾಥುರಾಮರು ರೋಸಿಹೋದರು; ಭಾವಾವೇಶಕ್ಕೆ ಒಳಗಾದರು.....''

* * *

ಈಗ ಅನೇಕ ಶಾಸನ ಸಭೆಗಳಲ್ಲಿ ಪಾರ್ಲಿಮೆಂಟಿನಲ್ಲಿಯೂ ಸಹ ಅನೇಕ ಸದಸ್ಯರು ಪರಿಸ್ಥಿತಿಯ ಒತ್ತಡದಿಂದ ಜನಸಾಮಾನ್ಯರು ಅನುಭವಿಸುವ ಕಷ್ಟಕೋಟಲೆಗಳನ್ನು ನೋಡಿ ಸಹಿಸಲಾರದೆ ಭಾವಾವೇಶಕ್ಕೆ ಒಳಗಾಗುತ್ತಾರೆ. ತಮ್ಮನ್ನು ತಾವೇ ಮೈಮರೆಯುತ್ತಾರೆ. ಕೆಲವು ಸದಸ್ಯರು ಬಿಕ್ಕಿ ಬಿಕ್ಕಿ ಅಳುತ್ತಾರೆ. ಹೀಗಾಗಿ ಒಳಗಿನ ಒತ್ತಡವನ್ನು ತಡೆಯಲಾರದೆ ಅನೇಕ ರಾಜ್ಯಗಳಲ್ಲಿ ಮಾನ್ಯ ಸದಸ್ಯರು ಕುರ್ಚಿಗಳನ್ನು ಎತ್ತಿ ಒಗೆದಿದ್ದಾರೆ. ಪೇಪರ್ ವೈಟ್ ಎತ್ತಿ ಎಸೆದಿದ್ದಾರೆ. ಚಪ್ಪಲಿಗಳನ್ನು ತೂರಿದ್ದಾರೆ. ಹೋ ಎಂದು ಕೂಗಿಕೊಂಡು ಸಭಾಧ್ಯಕ್ಷರ ಪೀಠದ ಮುಂದೆಯೇ ಜಂಡಾಮುಂಡಿ ಹೊಡೆದಿದ್ದಾರೆ. ಸಂತೆಮಾಳ ಮಾಡಿದ್ದಾರೆ. ಒಂದು ರಾಜ್ಯದಲ್ಲಂತೂ ಕೆಲವು ಸದಸ್ಯರು ಒಬ್ಬ ಮಹಿಳಾ ಸದಸ್ಯೆಯ ಸೀರೆಯನ್ನೇ ಬಿಚ್ಚಿಹಾಕಲು ಹೊರಟುಬಿಟ್ಟಿದ್ದರು. ಸದ್ಯ ಆಗಲೂ ಶ್ರೀ ಕೃಷ್ಣ ಪರಮಾತ್ಮನೇ ಆಕೆಯ ಮಾನವನ್ನು ಕಾಪಾಡಿದ.

ಒಬ್ಬ ಸಾಮಾನ್ಯ ವ್ಯಕ್ತಿ ಮತ್ತೊಬ್ಬನ ಮೇಲೆ ಪೇಪರ್ ವೈಟನ್ನೋ, ಕುರ್ಚಿಯನ್ನೋ, ಚಪ್ಪಲಿಯನ್ನೋ ಎಸೆದರೆ ಖಂಡಿತವಾಗಿಯೂ ಅವನು ಅಪರಾಧಿ ಆಗಿಬಿಡುತ್ತಾನೆ. ಪೊಲೀಸಿನವರು ಆತನನ್ನು ಹಿಡಿದುಕೊಂಡು ಹೋಗುತ್ತಾರೆ. ಮೂರು ತಿಂಗಳೋ ಆರು ತಿಂಗಳೋ ಜೈಲು ಶಿಕ್ಷೆ ಅವನಿಗೆ ಖಚಿತ.

ಆದರೆ ಜನರಿಂದ ಚುನಾಯಿತರಾದ ಪ್ರತಿನಿಧಿಗಳು ಮಣ್ಣಿನ ಮಕ್ಕಳು, ಆದ್ದರಿಂದ ಜನತೆಯ ಕಲ್ಯಾಣಕ್ಕಾಗಿಯೇ ಹೀಗೆಲ್ಲ ಅವರು ಮಾಡುವುದರಿಂದ ಇಂಥ ಮಹತ್ಕಾರ್ಯಗಳು ಅಪರಾಧ ಆಗುವುದಿಲ್ಲ. ಇದು ಒಂದು ಬಗೆಯ ದೇಶಸೇವೆಯೇ ಆಗುತ್ತದೆ.

ನಾಥುರಾಮರೂ ಭಾವಾವೇಶದಿಂದ ಹೀಗೆ ಮಾಡಿಬಿಟ್ಟರು. ಆದುದರಿಂದ ಅವರು ಅಪರಾಧಿ ಅಲ್ಲ. ಕೊಲೆಗಡುಕರು ಅಲ್ಲ. ಅವರು ದೇಶಕ್ಕಾಗಿ ಗಲ್ಲಿಗೇರಿದ ಮಹಾ ಹುತಾತ್ಮರು. ಭಾರತದ ಮತ್ತೊಬ್ಬ ನೇತಾಜಿ.

ನಮ್ಮ ಪಕ್ಷವೇ ಪೂರ್ಣ ಮೆಜಾರಿಟಿಗೆ ಬಂದು, ನಮ್ಮದೇ ಸಿಂಗಲ್ ಸ್ಥಿರ ಸರಕಾರ ಕೇಂದ್ರದಲ್ಲಿ ಆದಾಗ, ನಾವು ಈ ನಾಡಿನಲ್ಲಿ ಇರುವ ಎಲ್ಲ ಗಾಂಧಿ ಪ್ರತಿಮೆಗಳನ್ನು ತೆಗೆದುಹಾಕಿ ಹುತಾತ್ಮ ನೇತಾಜಿ ನಾಥುರಾಮರ ಶಿಲೆಗಳನ್ನು ಸ್ಥಾಪಿಸಿಬಿಡುತ್ತೇವೆ.

ಪ್ರೊಫೆಸರ್ ಬಗಾಡಿಯಾ ಮಾತೇ ನಿಜ ಎನ್ನುವ ಹಾಗೆ ಕ್ರಿ. ಶ. ೨೦೫೦ರ ರಾಷ್ಟ್ರಪತಿ ಚುನಾವಣೆಯಲ್ಲಿ ವಿರೋಧ ಪಕ್ಷಗಳ ಅಭ್ಯರ್ಥಿ ಕೆಳಗೆ ಬಿದ್ದು ಹಿಂಜಪ ಬೆಂಬಲದ ಶ್ರೀ ರಾಮ ಗೋಡ್ಸೆಯವರೇ ರಾಷ್ಟ್ರಪತಿಗಳಾಗಿ ಆಯ್ಕೆ ಆಗಿಬಿಟ್ಟರು.

* * *

ರಾಷ್ಟ್ರಪತಿ ಶ್ರೀರಾಮ ಗೋಡ್ಸೆಯವರ ಗುಂಡು ನಿರೋಧಕ ಕಾರು ರಾಜಘಾಟಿಗೆ ಹೊರಟುಬಿಟ್ಟಿತು. ಮಾಮೂಲಿನಂತೆ ಅಂಗರಕ್ಷಕರು, ಪೊಲೀಸಿನವರು, ವಿರೋಧ ಪಕ್ಷದವರು, ರಕ್ಷಣಾ ಮಂತ್ರಿ ಅಂಥ ಇಂಥ ಗಣ್ಯರು ಇವರೆಲ್ಲರ ಕಾರುಗಳು ರಾಷ್ಟ್ರಪತಿಗಳ ಕಾರಿನ ಹಿಂದೆ ಮುಂದೆ ಭವ್ಯವಾಗಿ ನಿಧಾನವಾಗಿ ನೀರಿನಲ್ಲಿ ಮೀನುಗಳು ಚಲಿಸುವಂತೆ ಸಾಲು ಸಾಲಾಗಿ ಹೊರಟುಬಿಟ್ಟವು.

ಈಗಾಗಲೇ ಅಲ್ಲಿ ಸರ್ವಧರ್ಮ ಪ್ರಾರ್ಥನೆಯೂ ನಡೆದುಕೊಂಡಿತ್ತು:

ರಘುಪತಿ ರಾಘವ ರಾಜಾರಾಂ
ಪತಿತ ಪಾವನ ಸೀತಾರಾಂ
ಈಶ್ವರ ಅಲ್ಲಾ ತೇರೇ ನಾಮ್

ಸಬಕೋ ಸನ್ಮತಿ ದೇ ಭಗವಾನ್

ಮುಂಭಾಗದ ಗಣ್ಯರ ಅತಿಥಿಗಳ ರಕ್ಷಣಾ ಪಡೆಯವರ ಕಾರು ಕಾರುಗಳು ರಾಜಘಾಟಿನ ಪ್ರಧಾನ ಗೇಟಿನಿಂದ ಒಳಗೆ ಪ್ರವೇಶಿಸಿ, ಆಮೇಲೆ ರಾಷ್ಟ್ರಪತಿಗಳ ಮೊಟ್ಟೆಯಾಕಾರದ ಫಳಫಳನೆ ಮಿನುಮಿನುಗುವ ಚಿನ್ನದ ಬಣ್ಣದ ಕಾರೂ ಪ್ರವೇಶಿಸಿದಾಗ ರಾಜಘಾಟಿನ ಮೂಲೆ ಮೂಲೆಗಳಿಂದ ಒಂದೇ ಧ್ವನಿ; ಚೀರು :

''ಹೇ ರಾಮ್...... ಹೇ ರಾಮ್..... ಹೇ ರಾಮ್.....''

ಒಂದು ಕ್ಷಣ ರಾಜಘಾಟಿನಲ್ಲಿ ಕೋಲಾಹಲ. ಇದು ಯಾರದು ಈ ಧ್ವನಿ ? ಇದು ಗಾಂಧೀಜಿಯದೇ ಧ್ವನಿ ಇದ್ದ ಹಾಗಿದೆಯಲ್ಲ!

ಹಾಗಾದರೆ ಆತ್ಮ ಎನ್ನುವುದು ಇರುವುದು ನಿಜವೋ ? ದೇಹಕ್ಕೆ ಸಾವು, ಆತ್ಮಕ್ಕೆ ಸಾವಿಲ್ಲ. ಅವನ ಆತ್ಮ ಶಾಂತಿ ಹೊಂದಲಿ – ಹೀಗೆಲ್ಲ ಹೇಳುತ್ತಾರಲ್ಲ. ಆ ರೀತಿ ಗಾಂಧೀಜಿಯ ಆತ್ಮ ಎನ್ನುವುದು ಈ ರಾಜಘಾಟಿನಲ್ಲಿಯೇ ಇದ್ದು ಅದು ಇಲ್ಲಿಯೇ ಸುತ್ತು ಹಾಕಿ ಕೊಂಡಿದೆಯೋ ಹೇಗೆ ? ಈ ಆತ್ಮ, ಗಾಂಧೀಜಿಯ ಆತ್ಮ, ರಾಷ್ಟ್ರಪತಿ ಶ್ರೀರಾಮ ಗೋಡ್ಸೆಯವರನ್ನು ನೋಡಿ ಬೆಚ್ಚಿತೋ ಹೇಗೆ ? ಇವರನ್ನೇ ಹುತಾತ್ಮ ನಾಥುರಾಮರು ಎಂದು ಭಾವಿಸಿಕೊಂಡು ಬಿಟ್ಟಿತೋ ? ಮತ್ತೊಮ್ಮೆ ತನಗೆ ಗುಂಡು ಹಾರಿಸಬಹುದು ಎಂದು ಈ ಆತ್ಮ ಹೆದರಿಕೊಂಡಿತೋ ? ಹಾಗಾಗಿ ಅದು ಚೀರಿಕೊಂಡಿತೋ ?

ಹೌದು. ರಾಷ್ಟ್ರಪತಿಗಳ ಚುನಾವಣೆ ನಡೆದಾಗ, ಮತ್ತೊಂದು ಸ್ವಾರಸ್ಯವೂ ನಡೆದು ಹೋಯಿತು. ವಿರೋಧ ಪಕ್ಷಗಳು ಬೊಗಸೆ ಬೊಗಸೆ ಬೊಬ್ಬೆಯನ್ನು ತೂರಿದ್ದವು.

'ಶ್ರೀರಾಮ ಗೋಡ್ಸೆಯವರೂ ನಾಥುರಾಮ ವಿನಾಯಕ ಗೋಡ್ಸೆಯ ಥರವೇ ಇದ್ದಾರೆ.'

ನಿಜ. ತಂದೆ ತಾಯಿ ತಾತ ಅಜ್ಜಿ – ಇವರೆಲ್ಲರ ಹೋಲಿಕೆಯಂತೆ ಮಕ್ಕಳು ಮೊಮ್ಮಕ್ಕಳ ಮುಖದ ಹೋಲಿಕೆ ಇರುವುದು ಸಹಜವಷ್ಟೇ. ತಾಯಿಯದೇ ಕಣ್ಣು ತಂದೆಯದೇ ಮೂಗು, ತಾತನದೇ ತುಟಿಯಂತೆ, ಅಜ್ಜಿಯದೇ ಹಣೆ – ಹೀಗೆ ಇದು ಸೃಷ್ಟಿ ವೈಚಿತ್ರ್ಯ.

ಅದೇ ರೀತಿ ಶ್ರೀರಾಮ ಗೋಡ್ಸೆಯವರೂ ಇದ್ದಾರೆ. ತಾತನ ಥೇಟ್ ಮುಖ. ಹುತಾತ್ಮ ನಾಥುರಾಮರದೇ ಕ್ರೂರ ಕಣ್ಣುಗಳು. ವಿಷ ಕೊಂಡಿ ಚೇಳಿನ ಬಾಲದ ಆಕಾರದ ಮೀಸೆ. ತುಟಿಗಳಲ್ಲಿ ನಂಜಿನ ಚಿಮ್ಮು. ಒಟ್ಟು ಮುಖವೇ ಮಹಾ ರೌದ್ರತೆ.

ಹಾಗಾಗಿಯೇ ಗಾಂಧೀಜಿಯ ಆತ್ಮ ಈಗ ಶ್ರೀರಾಮ ಗೋಡ್ಸೆಯವರನ್ನು ನೋಡಿ, ನಾಥುರಾಮ ವಿನಾಯಕ ಗೋಡ್ಸೆ ಎಂದೇ ತಪ್ಪಾಗಿ ಭಾವಿಸಿಕೊಂಡುಬಿಟ್ಟಿತೋ ? ಬೆಚ್ಚಿ ಹೀಗೆ ಚೀರಿಕೊಂಡಿತೋ ?

ಕೆಲವೇ ಕ್ಷಣಗಳು ಅಷ್ಟೇ. ಪೊಲೀಸ್ ರಕ್ಷಣಾ ಪಡೆಯವರು ಅವರು ಇವರು ಬಂದೂಕುಗಳನ್ನು ಮೇಲಕ್ಕೆ ಹಿಡಿದೆತ್ತಿ ಸಿದ್ಧವಾಗುವುದರೊಳಗೆ ಆ ದನಿ ಕ್ಷೀಣವಾಯಿತು; ನಿಂತೇ ಹೋಯಿತು.

ಕಾರುಗಳಿಂದ ಈಗ ಎಲ್ಲರೂ ಕೆಳಗೆ ಇಳಿದರು. ರಾಷ್ಟ್ರಪತಿಗಳ ಸುತ್ತಮುತ್ತ ಅಂಗ ರಕ್ಷಕರ ದಂಡು. ಒಬ್ಬ ಅಂಗರಕ್ಷಕ ದೊಡ್ಡ ಹಾರವೊಂದನ್ನು ಕಾರಿನಿಂದ ಹೊರತೆಗೆದ. ಬೆಟ್ಟದಾಕಾರದ ಭವ್ಯ ಹಾರ. ರಾಷ್ಟ್ರಪತಿಗಳು ಅದನ್ನು ತಮ್ಮ ಎರಡೂ ಕೈಗಳಿಂದ ಎತ್ತಲಾರದೆ ಎತ್ತಿ ಹಿಡಿದರು. ರಾಷ್ಟ್ರಪತಿಗಳು ಮಾಲಾರ್ಪಣೆ ಮಾಡಿದ ಮೇಲೆ ಮತ್ತಿತರ ಗಣ್ಯರೂ ಸಮಾಧಿಗೆ ಹಾರಗಳನ್ನು ಹಾಕಬೇಕು; ಅರ್ಪಿಸಬೇಕು.

ಆಗ ಮತ್ತೊಂದು ಸಂಭವ

''ಢುಮೀರ್...... ಢುಮೀರ್...... ಢುಮೀರ್......''

ಲೋಕವೆ ನಡುಗಬೇಕು ಅಂಥ ಭಾರೀ ಶಬ್ದ. ಒಂದು ಕ್ಷಣ ಆ ಶಬ್ದಕ್ಕೆ ಬೆಚ್ಚಿ ರಾಜ ಘಾಟ್ ಹೊಯ್ದಾಡಿತು. ರಾಜಘಾಟಿನ ಮರಮರಗಳೂ ಥರಥರನೆ ನಡುಗತೊಡಗಿದವು.

ರಾಷ್ಟ್ರಪತಿಗಳು ಥಟ್ಟನೆ ಹಾರವನ್ನು ಕೆಳಗೆ ಹಾಕಿಬಿಟ್ಟರು. ಮರುಕ್ಷಣದಲ್ಲಿಯೇ ಬಾಂಬ್ ಪರಿಣತರು ಪ್ರತ್ಯಕ್ಷ.

ರಾಷ್ಟ್ರಪತಿಗಳು ಹಿಡಿದಿದ್ದ ಹಾರವನ್ನು ಪರೀಕ್ಷಿಸಿದ್ದು ಆಯಿತು. ಈಗ ವಿಜ್ಞಾನ ಬಹುವಾಗಿ ಬೆಳೆದಿದೆ. ಹಿಂದೆ ಎಲ್‌ಟಿಟಿಯವರು ಹೀಗೆಯೇ ಹೂವಿನ ಹಾರದೊಳಗೆ ಬೆಂಕಿಯ ಎಳೆಯನ್ನು ಪೋಣಿಸಿ ಆಗಿನ ತರುಣ ಪ್ರಧಾನಿ ರಾಜೀವ್ ಗಾಂಧಿಯವರನ್ನು ಸಿಡಿಸಿ ಬಿಟ್ಟಿದ್ದಾರೆ. ಈಗಲೂ ಹಾಗೆಯೇ ಏನಾದರೂ ಪಿತೂರಿ ನಡೆದಿದೆಯೋ ? ಸಂಚು ರೂಪಿಸಿದ್ದಾರೋ ? ಶ್ರೀರಾಮ ಗೋಡ್ಸೆಯವರನ್ನು ಮುಗಿಸಿಬಿಡಲು ತಾಳಮೇಳ ಸಿದ್ಧತೆ ನಡೆದಿದೆಯೇ ?

ಯಾರೋ ಈಗ ರಾಜಘಾಟೇ ಸೆಲೆಹಾಯುವ ಹಾಗೆ ಕೂಗಿಕೊಂಡರು.

''ಏನೋ ಪಿತೂರಿ ಈಗ ಇಲ್ಲಿ ನಡೆದಿದೆ; ನಡೆಯುತ್ತ ಇದೆ. ಇದು ಪಾಕಿಸ್ತಾನದವರ ಕೈವಾಡವೇ ಇರಬೇಕು. ಇವೊತ್ತಿನ ಕಾರ್ಯಕ್ರಮ ನಡೆಯುವುದು ಬೇಡ. ಎಲ್ಲರೂ ಹಿಂದಿರುಗಿಬಿಡೋಣ.''

''ಅದೇ ಸರಿ, ಅದೇ ಸರಿ'' ಎನ್ನುವ ಒಕ್ಕೊರಲಿನ ಕೂಗು.

ಕಾರುಗಳು ನಿಧಾನವಾಗಿ ಹಿಂದಕ್ಕೆ ಚಲಿಸತೊಡಗಿದವು. ಪೊಲೀಸು ರಕ್ಷಣಾ ಪಡೆ ಈಗ ಅಲ್ಲಿ ಗುಂಪು ಗುಂಪು. ಎತ್ತ ತಿರುಗಿದರೂ ಬಂದೂಕ ಹಿಡಿದು ನಿಂತಿರುವವರೇ.

ಅಂತೂ ಕ್ರಿ. ಶ. ೨೦೫೦ರ ಜನವರಿ ೩೦ರಂದು ಗಾಂಧೀಜಿಯವರ ೧೦೨ನೆಯ ಪುಣ್ಯತಿಥಿಯ ಆಚರಣೆ ನಡೆಯಲಿಲ್ಲ. ರಾಷ್ಟ್ರಪತಿ ಶ್ರೀರಾಮ ಗೋಡ್ಸೆಯವರು ಗಾಂಧೀಜಿಯ ಸಮಾಧಿಗೆ ಹಾರ ಹಾಕಲಿಲ್ಲ. ಒಂದು ಶತಮಾನ ಯಾವ ವರ್ಷವೂ ತಪ್ಪದೇ ನಡೆದ ಈ ಆಚರಣೆ ಈ ವರ್ಷ ಥಟ್ಟನೆ ನಿಂತುಹೋಯಿತು.

ಈ ವರ್ಷ ರಾಜಘಾಟಿನ ತುಂಬಾ ಬಿಗುವಿನ ಭಯ ತುಂಬಿದ ಎಂಥದೋ ವಾತಾವರಣ. ಎಂಥದೋ ಭೀತಿ ಅಲೆಅಲೆಯಾಗಿ ರಾಚು.

**ಶೇಷನಾರಾಯಣ**
೭೫೯, ೧೫ನೆ 'ಬಿ' ಮೇನ್, ಗೋಕುಲ ಮೊದಲ ಘಟ್ಟ ಮೊದಲನೇ ಹಂತ
ಮತ್ತೀಕೆರೆ, ಬೆಂಗಳೂರು - ೫೬೦ ೦೫೪



## ಮುಳ್ಳು

ಹಚ್ಚ ಹಸಿರಿನ ನಡುವೊಂದು
ಸಣ್ಣ ಸೀಳು ದಾರಿ
ಅಲ್ಲೆರಡು ಜೊತೆ ಹೆಜ್ಜೆ ಗುರುತುಗಳು

ಒಂದರಲ್ಲಿ ರೇಶಿಮೆಯ ರಂಗು
ಇನ್ನೊಂದರಲ್ಲಿ ಜಡ್ಡುಗಟ್ಟಿದ ಬಿರುಕು

ಅಂದು ದಾರಿಯುದ್ದಕ್ಕೂ ಮಳೆ
ಕೆಂಪು ನೀರಿನ ಹೊಳೆ

ಜಾರುತ್ತ ನಡೆದಿದ್ದೆ
ಅಮ್ಮನ ಕಾಲ್ದಾರಿಯಲ್ಲಿ

ತಕ್ಷಣ ಪುಟ್ಟಿ ಹಸಿರ ಮೆತ್ತೆ
ಏರಿದಳು

ದಾರಿಗಡ್ಡಲಾಗಿ ಪಕ್ಕದಲ್ಲೊಂದು
ಚಾಚಿಕೊಂಡ ಜಾಲಿ
ಎಲೆಗೊಂದು ಮುಳ್ಳು

ಪುಟ್ಟಿಯ ಜೀನ್ಸ್ ಸವರಿ
ನನ್ನ ಸೆರಗ ಕಚ್ಚಿ ನಿಂತುಬಿಟ್ಟಿತು

ನಾನು ಬಿಡಿಸಿಕೊಳ್ಳುತ್ತ ಆ
ಸುಳ್ಳುಗಳಿಂದ
ಇದ್ದೇನೆ ಇಲ್ಲೇ

ಪುಟ್ಟಿ ಸಾಗುತ್ತಿದ್ದಾಳೆ.

**ಸುನಂದಾ ಪ್ರಕಾಶ ಕಡಮೆ**
೯೦, ಕಾಳಿದಾಸ ನಗರ, ವಿದ್ಯಾನಗರ ವಿಸ್ತೀರ್ಣ, ಹುಬ್ಬಳ್ಳಿ - ೩೧

# ನಿದ್ದೆಯಿಲ್ಲದ ರಾತ್ರಿ

ತೆಲುಗು ಮೂಲ
ಡಾ॥ ವುಪ್ಪಲ ಲಕ್ಷ್ಮಣರಾವ್





<u>ಮೊದಲ ಮಾತು</u>

ದೇಶಕ್ಕೆ ಕಷ್ಟಕಾಲದ ದಿನಗಳು.

ಕಾಟೂರು ಕೆಂಪು ವೀರರ ಭದ್ರಕೋಟೆ. ಭದ್ರಕೋಟೆಯನ್ನು ಭಗ್ನಗೊಳಿಸಲು ಸರ್ಕಾರದ ಇನ್ನಿಲ್ಲದ ಪ್ರಯತ್ನ.

ಸರ್ಕಾರಿ ಪಡೆಗಳು ಕಾಟೂರನ್ನು ಸುತ್ತುವರೆದವು. ಕೈಗೆ ಸಿಕ್ಕಿದ ಗಂಡಸರನ್ನು ಹಿಡಿದು ಹೆಡೆಮುರಿ ಕಟ್ಟಿದರು. ಹುಣಿಸೆ ಬರಲುಗಳಿಂದ ಬೆನ್ನು ಹರಿಯುವಂತೆ ಬಡಿದರು. ವೃತ್ತಾಕಾರದಲ್ಲಿ ನಿಲ್ಲಿಸಿ ಬಟ್ಟೆ ಬಿಚ್ಚಿಸಿ, ಕಾಲಗಲಿಸಿ ನಿಲ್ಲಿಸಿದರು.

ಹೆಂಡತಿಯರನ್ನು ಎಳೆದು ತಂದರು.

ದಿಗಂಬರರಾದ ಅವರ ಗಂಡಂದಿರ ಕಾಲಡಿ ನುಗ್ಗಿ ಬರುವಂತೆ ಮಾಡಿದರು, ನೆಹರು ಸರ್ಕಾರದ ಪೊಲೀಸು ಶೂರರು.

ಈ ಸ್ವತಂತ್ರ ಭಾರತದಲ್ಲಿ ಈ ಪಾಶವೀ ಕೃತ್ಯ ನಡೆದು ಇನ್ನೂ ನೂರು ದಿನಗಳು ಕಳೆಯುವ ಮೊದಲೆ ಈ ಕತೆ ನಡೆಯಿತು.

ಅದೆಷ್ಟೋ ಜನರ ಭರಿಸಲಾಗದ ಬದುಕು.

ಯಾರು ಯಾರಿಗೊ ನಿದ್ದೆಯಿಲ್ಲದ ರಾತ್ರಿಗಳು-ಜಾಗರಣೆ-ವರಸೆಯ ನಿದ್ದೆ ರಹಿತ ರಾತ್ರಿಗಳು, ಜಾಗರಣೆಗಳು.

* * *

ರಾತ್ರಿಯ ಎರಡನೇ ಜಾವ. ಜೋರು ಮಳೆ. ಮಳೆಗೆ ಪರವಶಗೊಂಡ ನನ್ನ ಮನಸ್ಸು. ಆ ಜೋರು ನನಗೆ ಹರ್ಷದಾಯಕ. ಜೋರು ಮಳೆಯೆಂದರೆ ನನ್ನ ಗಂಡನಿಗೆ ಎಲ್ಲಿಲ್ಲದ ಅಂಜಿಕೆ. ಮಳೆಯ ತಣುಪಿಗೆ ಅವನ ಮೈ ನಡುಗುತ್ತದೆ. ಗುಡುಗೆಂದರೆ ಎಲ್ಲಿಲ್ಲದ ಹುಚ್ಚು ಭಯ. ಅವನ ಕಣ್ಣಿಗೆ ಮಿಂಚು ಉರಿಗುಟ್ಟಿಸುವ ಬೆಳಕು. ಸಿಡಿಲಿನ ಶಬ್ದ ಎದೆಗೆ ಗುದ್ದು. ಮಹಡಿ ಮೇಲಿನ ಕಿಟಕಿಗಳನ್ನು ಮುಚ್ಚಿ ಮುಸುಕೆಳೆದು ಮಂಚದಲ್ಲಿ ಮಲಗಿದ್ದ. ನಾನು ಕೆಳಗಿನ ಕೋಣೆಯಲ್ಲಿ ಚಾಪೆ ಹಾಸಿಕೊಂಡು ತಲೆಯಡಿಗೆ ಮೊಣಕೈಯನ್ನು ದಿಂಬಾಗಿಸಿ ಮಲಗಿದೆ. ಜೈಲು ಜೀವನದಲ್ಲಿ ಸರಳುಗಳ ಹಿಂದೆ ಇದು ನನಗಾದ ಒಂದೊಳ್ಳೆಯ ಅಭ್ಯಾಸ. ಅಂದು ನಾವಿಬ್ಬರು ಅನ್ಯೋನ್ಯತೆಯಿಂದ ಮಾಡಿಕೊಂಡ ಕರಾರಿನಂತೆ ಯಾರದೊ ಹಾಸಿಗೆಯ ಮೇಲೆ ಮಲಗಿಕೊಂಡೆವು. ನಾವು ಬದುಕಿನ ನಾಲ್ಕನೇ ಪಾದದಲ್ಲಿ ಅಡಿ ಇಟ್ಟಿದ್ದೆವು. ಸಿಡಿಲಿನ ಶಬ್ದ ನನ್ನ ಕಿವಿಗಳಲ್ಲಿ ರಣಭೇರಿಯ ಕರೆಯಂತೆ ಕೇಳಿಸುತ್ತಿತ್ತು. ಮಿಂಚು ಬೆಳಕಿಗೆ ನನ್ನ ಕಣ್ಣು ಕತ್ತಲುಗಟ್ಟಿದರೂ ಹೃದಯದ ಹಣತೆ ಬೆಳಕಿಗೆ ಆನಂದಿಸಿದೆ. ಮಳೆ ಹನಿಗಳು ಕತ್ತಲ ಚಿಕ್ಕೆಗಳು. ಕತ್ತಲಿನ ರಾಶಿಯಾಗಿ ಮರೆಯುತ್ತಿರಲು ಅದರ ವಯ್ಯಾರವನ್ನು ಕಿಟಕಿಯಿಂದ ನೋಡುತ್ತಿದ್ದೆ. ನನ್ನ ಕಾಲ ಬಳಿ ನಮ್ಮ ಆಲ್ಸೆಶಿಯನ್ 'ಶೇಷು' ಮಲಗಿತ್ತು. ನನಗೆ ಮಂಕು ನಿದ್ದೆ ಹತ್ತಿತ್ತು.

ಉಳ್ ! ಉಳ್ ! ಉಳ್ ! ಕಿಟಕಿ ಬಳಿ ಮೂರು ಸಲ ಸಿಳ್ಳು. ಶೇಷು ಗುರಗುಟ್ಟಿ ಸಣ್ಣದಾಗಿ ಬೊಗುಳಿ ಎದ್ದು, ಮೈ ಕೊಡವಿ ಕಿವಿ ನಿಗುರಿಸಿತು. 'ಉಷ್ ಶೇಷು' ಅಂದೆ. ಆ ಸಿಳ್ಳು ನನಗೆ ಪರಿಚಿತ ಕರೆ. ಬಾಗಿಲು ತೆರೆದೆ. ಕಾರ್ಗತ್ತಲೆ ಕವಿದ ಮಳೆಯಲ್ಲಿ ನೆನೆದು ತೊಪ್ಪೆಯಾದ ವ್ಯಕ್ತಿ. 'ಬ್ರಹ್ಮನಾಯುಡು' ಅಂದೆ. 'ಬಾಲನಾಗಮ್ಮ' ಎಂಬ ಮರು ಮಾತು. ಸಂಕೇತ ಸರಿಯಿತ್ತು. 'ಏನು ಸುದ್ದಿ?' 'ಅಮ್ಮನವರು ಇದ್ದಂತೆಯೆ ಬಾ ಎಂದಿದ್ದಾರೆ. ಬರ್ತಿರಾ ನನ್ನ ಜೊತೆ? ನನಗೆ ಓಗಿರಾಲಿನಲ್ಲಿ ತುರ್ತಿನ ಕೆಲಸವಿದೆ. ನಾನು ಹೊರಟೆ' ಎಂಬ ಉತ್ತರ. ಮಿಂಚು-ಕತ್ತಲೆಯಲ್ಲಿ ಆಕೃತಿ ಮರೆಯಾಯಿತು.

ನಮ್ಮ ರಥ ಸಾರಥಿ ಪಾರ್ಥ ಕಂ ಆಪ್ತ ಕಂ ತಂತ್ರಿಪಾಲ (ವಾರ್ತಾಹರ) ಹಬ್ಬಕ್ಕೆಂದು ಮೂರು ದಿನ ರಜೆ ಹಾಕಿ ಪಟ್ಟಣಕ್ಕೆ ಹೋಗಿದ್ದ. ನಾನು ವರಂಡಾದ ಕೋಣೆಗೆ ಹೋಗಿ ಬಟ್ಟೆ ಬದಲಿಸಿ, ಶೇಷುವಿಗೆ ಎಚ್ಚರಿಕೆ ಕೊಟ್ಟು, ಮನೆ ಬಾಗಿಲನ್ನು ನಿಧಾನವಾಗಿ ಮುಚ್ಚಿ ಕಾರಿನ ಷೆಡ್ಡಿನಲ್ಲಿ ಅಡಿಯಿಟ್ಟೆ ಕಾರು ಸ್ಟಾರ್ಟ್ ಮಾಡಿ, ಷೆಡ್ಡಿನ ಹೊರಕ್ಕೆ ತಂದು, ಕೆಲ ದಿನಗಳ ಹಿಂದೆ ಕಲ್ಕತ್ತೆಯಲ್ಲಿ ಕೊಂಡ ಕಳ್ಳನಂಬರಿನ ಪ್ಲೇಟನ್ನು ತಗುಲಿಸಿ, 'ಸಿ' ಸರ್ಟಿಫಿಕೆಟ್ಟು, ಕಾರಿನ ಲೈಸೆನ್ಸನ್ನು ಬದಲಿಸಿ, ಫೋರ್ಜರಿ ಮಾಡಿದ ಇನ್ನು ಇತರೆ ದಾಖಲೆಗಳ ಸೆಟ್ಟನ್ನು ಸಿದ್ಧ ಮಾಡಿಕೊಂಡು, ನಂತರ ಷೆಡ್ಡಿನ ಬಾಗಿಲು ಮುಚ್ಚಿದೆ. ಮಳೆಯ ಜೋರು ಕೊಂಚ ತಗ್ಗುವುದಿರಲಿ ಮತ್ತಷ್ಟು ಹೆಚ್ಚಿತು. ಇಂತಹ ಪ್ರಳಯ ವೃಷ್ಟಿಗೆ ಅಂಜುಬುರುಕ ಹೃದಯ ಇನ್ನಷ್ಟು ಭಯಪಡುವುದೆಂದು ಬಲ್ಲೆ. ಸಿಡಿಲ ಆರ್ಭಟಕ್ಕೆ ಕಿವಿಯಲ್ಲಿ ಹತ್ತಿ ತುಂಬಿಕೊಂಡು ಮುಸುಕೆಳೆದ ವ್ಯಕ್ತಿಗೆ ಕಾರಿನ ಶಬ್ದ ಕೇಳಿಸದು. ಪರವಾಗಿಲ್ಲವೆಂದು ಮನಸ್ಸು

ಗಟ್ಟಿಮಾಡಿಕೊಂಡೆ. ಮಳೆ ಸುರಿಯುತ್ತಿದ್ದರೂ ನಾಲೆಯ ಕಟ್ಟೆ ಮೇಲಿನ ಹಳ್ಳ ಕೊಳ್ಳಗಳ ರೋಡು ಸಾವಿರ ಸಲ ತಿಳಿದದ್ದೆ ಆಗಿದ್ದುದರಿಂದ ಕಾರು ಹಳ್ಳದಲ್ಲಿ ಇಳಿಯದಂತೆ ನಡೆಸುತ್ತ ವೇಗವಾಗಿ ಹೊರಟೆ.

ಡಾಕ್ಟರಮ್ಮನ ಮನೆ ಬಾಗಿಲಿನಲ್ಲಿ ಕಾರನ್ನು ನಿಲ್ಲಿಸಿದೆ. ಕಾರಿನ ಬಾಗಿಲು ತೆರೆದೆ. ಬಾಗಿಲಲ್ಲಿ ನಿಂತಿದ್ದ ಡಾಕ್ಟರು 'ಸ್ವಾತಿ ಮಳೆ ಹನಿಗಾಗಿ ತೆರೆದುಕೊಂಡ ಮುತ್ತಿನ ಚಿಪ್ಪಿನಂತೆ ನಿನಗಾಗಿ ಕಾದಿದ್ದೆ' ಅಂದರು.

'ಹನಿ ಬಂದೇ ಬಂದಿತು. ಮುತ್ತಿನ ಚಿಪ್ಪು ಮುಚ್ಚಿಕೊಳ್ಳಬೇಕು' ಅಂದೆ. ತನ್ನೆರಡು ತೊಗಲಿನ ಚೀಲಗಳನ್ನು ಕಾರಿನಲ್ಲಿಟ್ಟು, ಆಕೆ ಕಾರು ಹತ್ತಿ ನನ್ನ ಪಕ್ಕ ಕುಳಿತರು.

'ಇಂಥಾ ಮಳೆಯಲ್ಲಿ ಯಾರಿಗಮ್ಮ ಹೆರಿಗೆ ?' ಕೇಳಿದೆ.

'ಚಳಿಗೆ ಸಾವು, ಮಳೆಗೆ ಹೆರಿಗೆ ನಿಲ್ಲುವುದೇನು ?' ಅಂದರು ಡಾಕ್ಟರಮ್ಮ.

'ಅಂದರೆ ಎರಡೂನಾ ?' ಕೇಳಿದೆ.

'ಯಾರು ಹೇಳಿಯಾರು' ಅಂದರು.

'ನರ್ಸು ಎಲ್ಲಿ ?' ಅಂದೆ.

'ಈ ಕೇಸಿಗೆ ನೀನೆ ಸೂಲಗಿತ್ತಿ ಸೂರಮ್ಮ. ವಿಷಯ ಹೇಳ್ತೀನಿ. ಬಂದರಿನ ರೋಡಿಗೆ ನಡಿ' ಅಂದರು ಆಕೆ.

ಕಣ್ಣುಜ್ಜಿಕೊಂಡರೂ ಕಾಣದಂತಹ ಕತ್ತಲೆ. ಕಾರಿನ ದೀಪಗಳು ಅಗ್ನಿಜ್ವಾಲೆಯಂತೆ ಕತ್ತಲನ್ನು ಚದುರಿಸುತ್ತಿದ್ದವು. ಪಶ್ಚಿಮಕ್ಕಿಳಿದ ನರಕಚತುರ್ದಶೀ ಅಂಧಕಾರ. ಅಂಧಕಾರಕ್ಕೆ ಸಮ ಜೋಡಿ-ಚಂಬರ ಕಾಗೆಗಳ ಗುಂಪಿನಂತೆ, ಕತ್ತಲ ತರುಗಳ ಕಾಡು ಕವಿದ ಕರಿಬೆಟ್ಟದಂತೆ ಕರಿಮೋಡಗಳ ಆಕಾಶ.

'ಪುನಾದಿಪಾಡು ನಿನಗೆ ಗೊತ್ತಲ್ಲ ?' ಅಂದಳು.

'ನಾನಲ್ಲೆ ಅಲ್ಲವೆ ಕವಾಯತು ಕಲಿತದ್ದು' ಅಂದೆ.

'ಅಲ್ಲಿದ್ದಾನೆ ಕಮ್ಯುನಿಸ್ಟ್ ಅಗಸ್ತ್ಯ. ಮುನಿಜನ ಸಂಹಾರಾರ್ಥ ಪೊಲೀಸರ ಮೃಗಯಾ ವಿಹಾರ. ನಾವು ಆ ಮುನಿ ಪ್ರಾಣವನ್ನು ರಕ್ಷಿಸಬೇಕು. ಪೊಲೀಸರ ಅಕ್ಷೋಹಿಣಿ ಇನ್ನು ನಾಲ್ಕೈದು ದಿನಗಳಲ್ಲಿ ಆ ಊರಿನ ಮೇಲೆ ಮಿಂಚಿನ ದಾಳಿ ಮಾಡಲು ತಯಾರಿ ನಡೆಸುತ್ತಿದೆಯೆಂದು ಡೆಪ್ಯುಟಿ ಪೊಲೀಸ್ ಕಮೀಷನರನ ಆಪ್ತ ಸೇವಕನ ಮೂಲದ ಸುದ್ದಿ. ಹೆರಿಗೆಗಾಗಿ ಎಂದು ಸುದ್ದಿ ತಲುಪಿಸಿದೆ. ಮುನಿ ಅಡಗಿಕೊಂಡಿರುವ ಹಳ್ಳಿಯ ಮನೆಯ ಪಕ್ಕದ ಮನೆಯಲ್ಲಿ ತುಂಬು ಬಸುರಿಗೆ ನೋವು ಕಾಣಿಸಿಕೊಂಡಿದೆಯೆಂದು ಆ ಊರಿನಿಂದ ಬಂದ ವಾರ್ತೆಯ ಕರೆ. ಸಾಯಂಕಾಲದ ಹೊತ್ತಿಗೆಲ್ಲ ಬರುವುದಾಗಿ ಹೇಳಿ ಆ ವಾರ್ತಾ ಹರನನ್ನು ಕಳುಹಿಸಿದೆ. ಇಷ್ಟರಲ್ಲಿ ಕುಂಭವೃಷ್ಟಿ. ಈ ವಿಪರೀತದ ಮಳೆಯಿಂದಾಗಿ ಬಾಡಿಗೆಗೆ ಕಾರು ಸಿಗಲಿಲ್ಲ. ಸಾವು ಬದುಕು. ಆಗ ನಿನ್ನ ಮಾತು ನೆನಪಾಗಿ ಕೊರಿಯರ್‌ನನ್ನು ನಿನ್ನ ಬಳಿಗೆ ಅಟ್ಟಿದೆ. ನಾವು ಹೋಗಿ ಬಸುರಿಯನ್ನು ನೋಡೋಣ. ಆ ಹುಡುಗಿಯ ದೇಹ ಪ್ರಕೃತಿ ನನಗೆ ಗೊತ್ತು. ಅದು ದೊಡ್ಡನೋವು ಇರದು. ಆದರೂ ನಾವು ಬಸುರಿಯನ್ನು ಪರೀಕ್ಷೆ ಮಾಡಿ, ಕೊಂಚ ಆತಂಕ ಸೃಷ್ಟಿಸಬೇಕು. ಯೋಗನಿದ್ರೆಯಲ್ಲಿರುವ ಮುನಿ ಪುಂಗವನಿಗೆ ಕಾಲಾವಕಾಶ ಕೊಡಬೇಕು. ಇಷ್ಟರಲ್ಲಿ ಆಗಬೇಕಾದ ಕೆಲಸಗಳನ್ನು ಗಂಧರ್ವರೇ ಮಾಡಿರುತ್ತಾರೆ. ಧನ್ವಂತರಿಗಳು, ಗಂಧರ್ವರು ನಾವೇ' ಅಂದರು ಆಕೆ ನಗುತ್ತ.

ಜಡಿಮಳೆ ಕಾರಿನ ವಿಂಡೋಸ್ಕ್ರೀನಿನ ಮೇಲೆ ಪಾದರಸದ ಹನಿಗಳನ್ನು ಸಿಂಚನ ಮಾಡುತ್ತಿತ್ತು. ಕಣ್ಣು ಚದರುತ್ತಿತ್ತು. ಸಿಂಚಿತ ತುಂತುರು ಹನಿಗಳು ಮಿಂಚುಹುಳುಗಳಂತೆ ಹೊಳೆದವು. ಪಾಮರ್ರ ಪೊಲೀಸ್ ಸ್ಟೇಷನ್ ದಾಟಿದ ನೂರು ಗಜಗಳಿಗೆ ಟ್ರಂಕ್ ರೋಡನ್ನು ಬಿಟ್ಟು ಎಡಕ್ಕೆ ಹೊರಳಿ ಮೂರು ಮೈಲಿ ಸಾಗಿದರೆ ಪುನಾದಿಪಾಡು. ಪಟಾಕಿ ಸಿಡಿದಂತೆ ಸಿಡಿಲ ಶಬ್ದದಲ್ಲಿ ಲೀನವಾಗುವ ಮಿಂಚಿನ ಬಳ್ಳಿಯ ಬೆಳಕು... ಗುಡುಗು ಸಿಡಲ ಅಟ್ಟಹಾಸ...

ಹೆರಿಗೆ ಮನೆಯ ಮುಂದಿನ ಚಪ್ಪರದಡಿ ಕಾರು ನಿಲ್ಲಿಸಿದೆ. ಅದೃಷ್ಟ ಕೂಡಿಬಂದಿತ್ತು. ಆ ಮನೆಯ ತುಂಬ ಜನ. ಊರು ಕಾಲುವೆ ಏಕವಾಗಿ ನೀರು ಹರಿಯುತ್ತಿದ್ದರೂ ದೊಡ್ಡ ಮನೆಯ ಹೆಣ್ಣುಮಗಳು ಮೊದಲ ಹೆರಿಗೆಯ ನೋವು ಅನುಭವಿಸುತ್ತಿದ್ದರೆ, ಆ ನೋವಿಗೆ ಆ ಬೀದಿಯ ಹೆಂಗಸರಲ್ಲಿ ಸಹಾನುಭೂತಿ. ದೊಡ್ಡ ಸಂಸಾರಿಯ ಮನೆ ಮಗಳಾದುದರಿಂದ ಮಳೆಯಲ್ಲಿ ತೊಯ್ದ ಗಂಡಸರು ಕೆಲವರು ಮುಂದಿನ ಚಾವಡಿಯಲ್ಲಿ ಕುರ್ಚಿಗಳಲ್ಲಿ ಕುಳಿತು ಗುಂಟೂರು ಹೊಗೆಸೊಪ್ಪಿನ ಚುಟ್ಟಗಳ ಹೊಗೆಯನ್ನು ಗುಪುಗುಪ್ಪೆಂದು ಬಿಡುತ್ತ ಮನೆ ಯಜಮಾನನ ಮೇಲೆ ಉಚಿತ ಸಲಹೆಗಳ ಮಳೆಗರೆಯುತ್ತಿದ್ದರು.

ಬಸುರಿಗೆ ಬಂದದ್ದು ದೊಡ್ಡ ನೋವಲ್ಲವಾದರೂ ಕಳ್ಳನೋವೂ ಅಲ್ಲವದು. ಅದು ಚಳಿನೋವು, ಹಿಂದು ನೋವೆಂದು ಡಾಕ್ಟರು ಕಂಡುಕೊಂಡರು. ಆದರೂ ಪರೀಕ್ಷೆಯ ಸರಂಜಾಮುಗಳನ್ನು, ಪರಿಚರ್ಯೆಗೆ ಅಣಿಗೊಳಿಸಿಕೊಳ್ಳಬೇಕೆಂದು ನನ್ನೊಂದಿಗೆ ಹೇಳುತ್ತಲೆ, ಗುಟ್ಟನ್ನು ಕೂಡ ಪಿಸುಗಿಟ್ಟರು. ರಚಿಸಿದ ವ್ಯೂಹದಂತೆ ರಬ್ಬರ್ ಗೌನು ತೊಟ್ಟು ಕಿಬ್ಬೊಟ್ಟೆಯ ಪರೀಕ್ಷೆಗಳೇನು, ರಕ್ತದೊತ್ತಡದ ಅಳತೆಯೇನು, ಸ್ಟೆತಾಸ್ಕೋಪಿನಿಂದ ಮಗುವಿನ ಹೃದಯ ಬಡಿತ ಆಲಿಸುವುದೇನು – ಕೊಂಚ ಗಡಿಬಿಡಿಯ ವಾತಾವರಣ ಸೃಷ್ಟಿಸಿದೆವು. ಜೋಲು ಮೋರೆ ಹಾಕಿದೆವು. ನವರಸಗಳನ್ನೂ ಪ್ರದರ್ಶಿಸಿದೆವು. ಇನ್ನೇನೂ ಆಪತ್ತು ಇಲ್ಲವೆಂದು ಧೈರ್ಯ ಹೇಳಿದೆವು. ಆಕಾಶವೇ ಕಳಚಿಬಿದ್ದರೂ ಮೂರನೇ ದಿನಕ್ಕೆ ತಪ್ಪದೆ ಬಂದು ನೋಡುವುದಾಗಿ ಡಾಕ್ಟರಮ್ಮ ಮಾತುಕೊಟ್ಟರು. ಅಗತ್ಯವಾದ ಬೆಲೆಬಾಳುವ ನಾಲ್ಕು ಟಾನಿಕ್ಕುಗಳನ್ನು ಬರೆದುಕೊಟ್ಟಳು. ಬಸುರಿಗೆ ಪ್ರಿಯವಾಗುವ ಪಥ್ಯವನ್ನು ಹೇಳಿದರು.

ನಾವು ಹಿಂದಿರುಗಲು ಸಿದ್ಧರಾದೆವು. ಐರಾವತ ಪುಂಡರೀಕಾದಿಗಳ ಸೊಂಡಿಲುಗಳಿಂದ ಜಲಪಾತದಂತೆ ವರ್ಷಧಾರೆಯಾಗುತ್ತಿತ್ತು. ಗಂಡಸರೆಲ್ಲ ಅನುಭವಿ ರೈತರಾದುದರಿಂದ ಒಬ್ಬರಿಗೊಬ್ಬರು ಸ್ಪರ್ಧೆಗಿಳಿದು ಅಂಧಕಾರದಾಕಾಶವನ್ನು ನೋಡಿ ಮೀನಾ ಮೇಷಾ ಲೆಕ್ಕಮಾಡಿ ಚೌತಿ ಕಳೆಯುವವರೆಗೆ ಮಳೆ ಹಿಂದಾಗದೆಂದು ಜ್ಯೋತಿಷ್ಯ ನುಡಿದರು. ದೊಡ್ಡ ಸಾಹುಕಾರನೂ, ಸಾವಿರ ಎಕರೆಗಳ ಭೂಮಾಲೀಕನೂ, ಮನೆಯ ಯಜಮಾನನೂ ಸಂಸಾರಿಗಳ ಕುಲದ ಹಿರಿಯನೂ ಆದ ಆ ದೊಡ್ಡ ಮನುಷ್ಯ ಕರಿ ಮೋಡದಂತಹ ಕೊಡೆ ಹಿಡಿದಾಗ, ಆ ಕೊಡೆಯ ಕೆಳಗೆ ಡಾಕ್ಟರಮ್ಮನೂ, ಮನೆಯ ಆಳೂ ಆದ ಹಿರಿಯ ಜೀತಗಾರ ಬೆಲ್ಗೊಡೆಯಂತಹ ತಾಳೆಗರಿಯ ಕೊಡೆ ಹಿಡಿಯಲು ಅದರಡಿ ನಾನು ಎದುರಿನ ಚಪ್ಪರದಡಿಯಿದ್ದ ನನ್ನ ಆಸ್ಟಿನ್ ಸೆಡಾನ್ ಕಾರನ್ನು ಸಮೀಪಿಸಿದೆವು. ಜಂಬಿನ (ಜೊಂಡಿನ) ಗೊರಸು ಹಾಕಿಕೊಂಡ ಜೀತದಾಳು ಡಾಕ್ಟರಮ್ಮನ ಎರಡು ತೊಗಲಿನ ಚೀಲಗಳನ್ನು ತಂದು

'ನಿದ್ದೆಯಿಲ್ಲದ ರಾತ್ರಿ' ೧೯೪೮ರ ಸುಮಾರಿಗೆ ಬರೆದ ಕಥೆ. ಈ ಕಥೆ ಸ್ವತಂತ್ರ ಭಾರತ ಸರಕಾರ ಆಂಧ್ರದಲ್ಲಿ ಅನುಸರಿಸಿದ ಕಮ್ಯುನಿಸ್ಟ್‌ರ ವಿರುದ್ಧದ ಕಾರ್ಯಾಚರಣೆಯನ್ನು, ಅವರು ಇದರ ವಿರುದ್ಧ ರೂಪಿಸಿದ ಗುಪ್ತ ಹೋರಾಟವನ್ನು ಚಿತ್ರಿಸುತ್ತದೆ. ಕಥೆಯ ಆರಂಭದಲ್ಲಿನ 'ಮೊದಲ ಮಾತು' ಕಥಾ ಸಂದರ್ಭಕ್ಕೆ ಕನ್ನಡಿಯಾಗಿದೆ. ಕಥೆಯನ್ನು ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ ಹೆಣ್ಣೊಬ್ಬಳು ನಿರೂಪಿಸುತ್ತಾಳೆ. ವೈದ್ಯೆಯೊಬ್ಬಳು ಸೂತ್ರಧಾರಿಯಾಗಿದ್ದಾಳೆ. ಒಂದೇ ರಾತ್ರಿಯಲ್ಲಿ, ಅದೂ ಬಿರುಮಳೆಯ ರಾತ್ರಿಯಲ್ಲಿ ಈ ಇಬ್ಬರ ಸಾಹಸ-ಯುಕ್ತಿ ಬಿಚ್ಚಿಕೊಳ್ಳುತ್ತದೆ.

ಹೋರಾಟ ಗುಪ್ತವಾಗಿ ಸಂಘಟನೆಗೊಳ್ಳುವಂತೆ ಸಂಪರ್ಕ, ಸಂದೇಹಗಳು ಸಂಕೇತಗಳ ಮೂಲಕ ಸಂವಹನಗೊಳ್ಳುತ್ತಿದ್ದುದು ಹೇಗೆಂಬುದನ್ನು ಇಂದಿನವರಿಗೆ ಈ ಕಥೆ ಮನವರಿಕೆ ಮಾಡಿಕೊಡುತ್ತದೆ. ಚಳುವಳಿ ಕಾಲದ ಬದುಕು, ಸನ್ನಿವೇಶಗಳು, ಚಳವಳಿಕಾರರ ಮನೋಭಾವ, ಸನ್ನಿವೇಶ-ಅವಕಾಶಗಳನ್ನು ಬಳಸಿ ದುಡಿಸಿಕೊಳ್ಳುವ ಸಾಂದರ್ಭಿಕ ಚತುರತೆ ನಮ್ಮಲ್ಲಿ ಕುತೂಹಲ ಹುಟ್ಟಿಸುತ್ತ ನಿಷ್ಠೆ ಬದ್ಧತೆಯತ್ತ ಚಿಂತನೆಗೆ ಒಯ್ಯುತ್ತದೆ.

ಇದು ಡಾಕ್ಟರ್ ವುಪ್ಪಲ ಲಕ್ಷ್ಮಣರಾಯರ (೧೮೯೮-೧೯೫೮) ಮುಖ್ಯ ಕಥೆಗಳಲ್ಲಿ ಒಂದು. ರಷ್ಯನ್ ತೆಲುಗು ಸಾಹಿತ್ಯದ ಅನುವಾದಕರಾಗಿದ್ದ ಲಕ್ಷ್ಮಣರಾವ್ ತೆಲುಗು-ರಷ್ಯನ್ ನಿಘಂಟುವಿನ ಕರ್ತೃ. ಸಾಹಿತ್ಯದಲ್ಲಿ ಪ್ರಾಮಾಣಿಕತೆ, ರಾಜಕೀಯದಲ್ಲಿ ಬದ್ಧತೆಯನ್ನು ಪ್ರದರ್ಶಿಸಿದ ಲೇಖಕ. 'ಅತ-ಆಕೆ' ಇವರ ಪ್ರಸಿದ್ಧ ಕಾದಂಬರಿ. ಜನ್ಮಸ್ಥಳ-ಒರಿಸ್ಸಾದ ಬರಂಪುರ.

– ಅನುವಾದಕ

ಕಾರಿನ ಬಳಿ ಇಟ್ಟ. ಹರಿದ, ನಿಕ್ಕರಿನ ಅಂಚಿನಲ್ಲಿ ಹೊಲಿಗೆ ಬಿಟ್ಟ ಕಾಕಿ ನಿಕ್ಕರಿನ, ಗಿಡ್ಡ ತೋಳಿನ ಮಾಸಲು ಷರ್ಟಿನ, ಭುಜದ ಮೇಲೆ ಕರೆಗಟ್ಟಿದ ಟವಲು ಹಾಕಿಕೊಂಡ, ನಾಲ್ಕು ದಿನಗಳಲ್ಲಿ ಬೆಳೆದ ಗಡ್ಡದ – ಮೋಟಾರು ವರ್ಗದಲ್ಲಿ ನಾಲ್ಕನೇ ಜಾತಿಯ ಆಳೊಬ್ಬ ಮಾಸಲು ಬಟ್ಟೆಯಿಂದ ವಿಂಡೋ ಸ್ಕ್ರೀನನ್ನು ಒರೆಸುತ್ತಿದ್ದ.

'ಯಾರಿವನು ?' ಎಂದು ನಾನು ಡಾಕ್ಟರಮ್ಮನನ್ನು ಕೇಳುವಷ್ಟರಲ್ಲಿ ಮನೆಯ ಯಜಮಾನ ಹೇಳಿದ – 'ಅಯ್ಯೋ ನಿಮ್ಮ ಕ್ಲೀನರ್‌ಗೆ ಟೀ ಆದರೂ ಕೊಡಲಿಲ್ಲ ಪಾಪ! ಬಾಗಿಲಿಗಾದರೂ ಬಂದವನಲ್ಲ' ಎಂದು ಕನಿಕರ ಪ್ರಕಟಿಸಿ, ಆ ವ್ಯಕ್ತಿಯ ಕೈಗೆ ಒಂದು ರೂಪಾಯಿ ಇಟ್ಟ. 'ಪರವಾಗಿಲ್ಲ ಬಿಡಿ. ಈ ಮಳೆಯಲ್ಲಿ ಕಾರನ್ನು ನೋಡಿಕೊಳ್ಳಲೆಂದೆ ಅಲ್ಲವೆ ಕ್ಲೀನರ್' ಎಂದು ಆ ದೊಡ್ಡ ಮನುಷ್ಯನ ದೊಡ್ಡ ಹೃದಯವನ್ನು ಸಮಾಧಾನ ಪಡಿಸಿದರು ಡಾಕ್ಟರಮ್ಮ. ನನಗೆ ಅರ್ಥವಾಯಿತು. ಕಿಸೆಯಿಂದ ಕೀ ತೆಗೆದು ಕ್ಲೀನರನ ಕೈಗೆ ಕೊಟ್ಟೆ. ಕಾರಿನ ಬಾಗಿಲು ತೆರೆದ. ಆಳು ಎರಡು ತೊಗಲಿನ ಚೀಲಗಳನ್ನೂ ಹಿಂದಿನ ಸೀಟಿನಲ್ಲಿಟ್ಟ. ಕ್ಲೀನರ್ 'ಲಗ್ಗೇಜಿನ ಬೂಟು' ಬಾಗಿಲು ತೆರೆದು ತನ್ನ ಕೈಯಲ್ಲಿ ಸೋರುತ್ತಿದ್ದ ಮೊಬೈಲಾಯಿಲ್ ಟಿನ್ನನ್ನು ಅದರಲ್ಲಿಟ್ಟು ಬಾಗಿಲು ಮುಚ್ಚಿ, ಬೀಗದ ಕೈಯನ್ನು ನನ್ನ ಕೈಗೆ ಕೊಟ್ಟ, ನಾನು ಕಾರು ಸ್ಟಾರ್ಟ್ ಮಾಡಿದೆ. ಕ್ಲೀನರ್ ಕಾರಿನ ಹತ್ತಿರ ನಿಂತು 'ರೈಟ್, ರೈಟ್, ಬಲಗಡೆ ಕಂಬವಿದೆ! ಬ್ಯಾಕ್, ಬ್ಯಾಕ್! ಸ್ಟಾಪ್। ರೈಟ್ರೈಟ್' ಎಂದು ಹೇಳಿ ಹಿಂದಿನ ಸೀಟಿಗೆ ಜಿಗಿದು ಕುಳಿತು ಬಾಗಿಲು ಮುಚ್ಚಿಕೊಂಡ.

ಪೋರಂಕಿಯನ್ನು ದಾಟಿದೆವು. ಬೆಜವಾಡ ಸರಹದ್ದಿನಲ್ಲೆ ಏಲೂರು ರೋಡಿನತ್ತ ಟ್ರಂಕ್‌ರೋಡಿಗೆ ಕಾರನ್ನು ತಂದೆ. ನೂಜಿವೀಡು ಬಸ್‌ಸ್ಟ್ಯಾಂಡಿನ ಹತ್ತಿರದ ಬಂಕಿನಲ್ಲಿ ಪೆಟ್ರೋಲು ತುಂಬಿಸಿಕೊಂಡೆ. ಕಾರಿನಲ್ಲೇ ಬಂಕಿನಿಂದ ಗೇಣು ಅಗಲದ ತೆಳ್ಳನೆ ಗೋಣಿ ಪಟ್ಟೆ ಸುತ್ತಿದ ಕಾರು ಟೈರನ್ನು ತೆಗೆದುಕೊಂಡ ಕ್ಲೀನರ್, ತಾನು ತಂದ ಮೊಬೈಲಾಯಿಲ್ ಟಿನ್ನನ್ನು ಬಂಕಿನ ಹುಡುಗನಿಗೆ ಕೊಟ್ಟು, ಬೆಳಿಗ್ಗೆ ಬಸ್ಸಿನಲ್ಲಿ ಕೊವ್ವೂರಿನಿಂದ ಬಂದ ಆಯಿಲ್ ಟಿನ್ನನ್ನು ತನಗೆ ಕೊಡೆಂದ. ಆ ಹೊಸ ಟಿನ್ನಿಗೆ ದೊರಗಿದೆಯೆಂದು, ಅದರ ತುಂಬ ಕರಪತ್ರಗಳಿವೆಯೆಂದು ಗ್ರಹಿಸಿದೆ. ನೂಜಿವೀಡಿನಿಂದ ಹೊರಟು, ಪವರ್‌ಪೇಟೆ ಸ್ಟೇಷನ್ನಿನ ಬಳಿ ಕಾರನ್ನು ನಿಲ್ಲಿಸಿದೆ. ಸ್ಟೇಷನ್ನಿನಲ್ಲಿ ರಾಜಮಹೇಂದ್ರವರದ ಕೋಚ್ ಸಿದ್ಧವಾಗಿತ್ತು.

'ಕಾಮ್ರೇಡ್, ದಂಡಯ್ಯನವರೇ, ಗಾಡಿ ಹಿಡಿಯಿರಿ. ಟಿನ್ನು ಭದ್ರ' ಅಂದರು ಡಾಕ್ಟರಮ್ಮ.

ಕಾರನ್ನು ಬೆಜವಾಡ ರೋಡಿಗೆ ತಂದೆ. ಎಡೆಬಿಡದ ಕುಂಭವೃಷ್ಟಿ... ಕಾರಿನ ದೀಪಗಳ ಧವಳ ಕಾಂತಿಯಲ್ಲಿ ಕೊಲ್ಲೇರು, ಬುಡಮೇರ್ಲು ಕೂಡಿ ಮುನ್ನೀರಾಗಿ ಕೃಷ್ಣವೇಣಮ್ಮನನ್ನು ಕೂಡಲೆಂದೆ ನೊರೆಗಟ್ಟಿ ಹರಿದೋಡುತ್ತಿದೆಯಾ ಅನ್ನಿಸಿತು. ಸಿಮೆಂಟು ರೋಡಿನ ಮೇಲಿನ ಹರಿವು ರಜತ ಪ್ರವಾಹದಂತೆ ಹೊಳೆಯುತ್ತ ಕೃಷ್ಣೆಯಂತೆ ಕಂಡುಬರುತ್ತಿತ್ತು. ವರ್ಷಧಾರೆ ಆಕಾಶದಿಂದಿಳಿದು ತೊನೆದಾಡುತ್ತಿರುವ ಮುತ್ತಿನ ಮಾಲೆಯಂತೆ ಥಳಗುಟ್ಟುತ್ತಿತ್ತು. ಅಲ್ಲಿಂದಲ್ಲಿಯೆ ಕಾರನ್ನು ನಿಲ್ಲಿಸಿ, ಕಾರಿನಿಂದಿಳಿದು, ಅನಂತದಿಂದ ಜೋತಾಡುವ ಆ ಬೆಳ್ಳಿ ಬಳ್ಳಿಯನ್ನು ಹಿಡಿದು ಹತ್ತಿ ಮುಗಿಲು ಮುಟ್ಟೋಣವೆಂಬ ಆಸೆ ಎದೆಯಲ್ಲಿ ಮೂಡಿತು... ಬಿರುಮಳೆ ತಗ್ಗಲಿಲ್ಲ.

ಡಾಕ್ಟರಮ್ಮನನ್ನು ಮನೆಯ ಬಳಿ ಇಳಿಸಿದೆ. ನಾನು ಮನೆ ತಲುಪಿ, ಕಾರನ್ನು ಷೆಡ್ಡಿಗೆ ಸೇರಿಸಿ ನನ್ನ ಕೋಣೆಯಲ್ಲಿ ಅಡಿಯಿಟ್ಟೆ. ಶೇಷು ತೋಕೆ ಆಡಿಸಿತು. ಅದರ ಮೈದಡವಿ, ತಲೆ ನೇವರಿಸಿದೆ. ಕೈಕಾಲು ತೊಳೆದು ಬಟ್ಟೆ ಬದಲಿಸಿ ಮಹಡಿ ಏರಿದೆ. ಪತಿರಾಯನ ನಿದ್ದೆಗೆ ಭಂಗವುಂಟಾಗಲಿಲ್ಲ. ಕೋಳಂದರೆಡ್ಡಿಯವರ ಮನೆ ಹಿಂದಿನ ಕೊರಚರ ಹಟ್ಟಿಯಲ್ಲಿ ಮೊದಲ ಕೋಳಿಗಿಂತಲೂ ಮುಂಚಿತವಾಗಿ ಫ್ಯಾಕ್ಟರಿಯ ಸೈರನ್ನು ಮೊಳಗಿತು. ಬೆಳಗಿನ ನಾಲ್ಕು ಗಂಟೆಯಾಯಿತೆಂದು ಲೋಕಕ್ಕೆ ಸಾರಿತು.

ಕಾರಿನ ಚಕ್ರಗಳು ನೂರಿಪ್ಪತ್ತೈದು ಮೈಲಿ ಸುತ್ತಿ ಬಂದಿತ್ತು.

ಹೊಸ ದಿನ ಪ್ರಾರಂಭವಾಯಿತು.

ನಿದ್ದೆ ಕೆಟ್ಟ ರಾತ್ರಿ

* * *

**ನಂತರದ ಮಾತು**

ಮತ್ತೊಂದು ವಾರದ ನಂತರ ಪತ್ರಿಕೆಗಳಲ್ಲಿ ಸುದ್ದಿ. 'ದೇಶದ್ರೋಹಿಗಳನ್ನು ನಿರ್ಮೂಲನೆ ಮಾಡುವ ಕಾರ್ಯಕ್ರಮದಡಿ ಮಲಬಾರಿನ ಪೊಲೀಸರು ಗುಡಿವಾಡ ತಾಲೂಕಿನಾದ್ಯಂತ ಕಾರ್ಯಾಚರಣೆ ಕೈಗೊಂಡರು. ಕೆಲವರು ಪ್ರಜಾದ್ರೋಹಿಗಳನ್ನು ಬಂಧಿಸಿರುವುದಾಗಿ, ಅಸಂಖ್ಯ ಕರಪತ್ರಗಳನ್ನು ವಶಪಡಿಸಿಕೊಂಡಿರುವುದಾಗಿ ಪೊಲೀಸ್ ಮೂಲಗಳು ತಿಳಿಸಿವೆ. ತಾಲೂಕಿನ ವಿದ್ರೋಹಿ ನಾಯಕ ಬಂಡಮೂಡಿ ದಂಡಯ್ಯ ಪೊಲೀಸರಿಂದ ತಪ್ಪಿಸಿ ಕೊಂಡು ಪರಾರಿಯಲ್ಲಿರುವಂತೆ ಪುಕಾರು ಎದ್ದಿದೆ....'

ಪತ್ರಿಕೆಗಳಲ್ಲಿ ಈ ವಾರ್ತೆ ಪ್ರಕಟಗೊಂಡ ದಿನದಂದೆ ಒಂದು ಅಂಚೆಕಾಗದ ಬೆಜವಾಡ ತಲುಪಿತು. ಅದರ ವಿಳಾಸ ಹೀಗಿದೆ : ಚಿರಂಜೀವಿಗಳು ನಮ್ಮ ಕುಮಾರರು

ವೇಮಗಂಟಿ ವೆಂಕಟ ನಾಗಭೂಷಣರಾವ್
(ಬಿ.ಎಸ್‌ಸಿ.), ಮೆಡಿಕಲ್ ರೆಪ್ರಜೆಂಟಿಟೀವ್,
ಸೇನ್ ಅಂಡ್ ಸೇನ್ ಕಂಪನಿ, ಪೂಲ ಬಜಾರು, ಬೆಜವಾಡ.

**ಕಾರ್ಡಿನಲ್ಲಿನ ವಿಶೇಷಗಳು**

ನಂಬರ್-೮
ಡೈಕಾನ್ ಲೈನ್, ಕಿರ್ದರ್ ಪೂರ್, ಕಲಕತ್ತ
೧೯ ಅಕ್ಟೋಬರ್, ೧೯೪೮.

## ನೆಲದ ನಂಟು ಕಳಚುತ್ತಾ...

ಮಾಡಿದ ಮಣ್ಣಿನ ಪ್ರತಿಜ್ಞೆಗಳ
ಒಂದೊಂದೇ ಮುರಿದು
ಇದ್ದಕ್ಕಿದ್ದಂತೆ ನಡೆದೆದ್ದು ಬಿಟ್ಟವನಿಗೆ
ಬರೀ ಆಕಾಶ ನಕ್ಷತ್ರಗಳದೇ ಕನಸು !
ನೆಲದ ನಂಟುಗಳೆಲ್ಲ
ಕಳಚುತ್ತಾ, ಕಳಚುತ್ತಾ
ಆಕಾಶಕ್ಕೆ ಮುಖ ಮಾಡಿ ನಿಂತವನಿಗೆ
ನೆಲದಾಳದ ಎದೆಯೊಳಗಿನ ದನಿ
ಕೇಳಲೇ ಇಲ್ಲ.

ಭ್ರಮೆಯ ಒಂದೊಂದೇ ಮೆಟ್ಟಿಲೆಣಿಸುತ್ತ
ಮೇಲೇರುತ್ತಲೇ ಹೋದವನಿಗೆ
ಅಕಸ್ಮಾತ್ತಾಗಿ ಹೊಳೆದ ಮಿಂಚಿಗೆ
ಹೃದಯದೊಳಡಗಿದ್ದ ದನಿ
ಇದ್ದಕ್ಕಿದ್ದಂತೆ ನೆನಪಾಗಿ

ಗಕ್ಕನೆ ನಿಂತು, ಇದ್ದೇ ಇರುತ್ತದೆಂದು
ಹಿಂದಿರುಗಿ ನೋಡುವಾಗ್ಗೆ
ಹತ್ತಿಬಂದ ಮೆಟ್ಟಿಲುಗಳೇ ಮಾಯ !
ಥೇಟ್ ಕಕ್ಷೆಯ ಬಿಟ್ಟ ಉಲ್ಕಾಪಾತ !
ಕುಸಿದು ಕುಳಿತವನಿಗೀಗ
ಬರೀ ಹಳಹಳಿಕೆಯ ನಂಟು !

ಈಗ ಎದೆಯೊಳಗಿನ ದನಿಯರಸಿ
ಬರೀ ನಿಟ್ಟುಸಿರಿನ ಮಳೆಗರೆಯುತ್ತಾ
ಹೊರಟಿದ್ದಾನೆ –
ಹಗಲೂ- ಇರುಳೂ ಕಣ್ಣು ಪಿಳುಕಿಸುತ್ತಾ.

T T T

ಸಾಧ್ಯವಾದರೆ ಕೊಂಚ
ಸಹಕರಿಸಿ

[illegible] ಡಿ.ಸಿ.
ನ್ಯಾಷನಲ್ ಪ್ರಥಮ ದರ್ಜೆ ಕಾಲೇಜು, ಭೂಪಸಂದ್ರ,
ಬೆಂಗಳೂರು - ೫೬೦ ೦೯೪

ಚಿರಂಜೀವಿ ಭೂಷಣನಿಗೆ,

ಚಿರಾಯುವಾಗಿ ನಿಮ್ಮ ತಾಯಿ ಆಶೀರ್ವದಿಸಿ ಬರೆಯುವುದೇನೆಂದರೆ, ಶ್ರೀ ನಿಮ್ಮ ದೊಡ್ಡಮ್ಮನವರು ಪವರ್‌ಪೇಟೆಯಿಂದ ಕ್ಷೇಮವಾಗಿ ಇಲ್ಲಿಗೆ ಬಂದು ಸೇರಿದರು. ಶ್ರೀ ನಿಮ್ಮ ದೊಡ್ಡಮ್ಮನವರಿಂದ ನಿಮ್ಮ ಯೋಗಕ್ಷೇಮ ತಿಳಿದು ಸಂತೋಷಪಟ್ಟೆ. ನೀನು ಕಳುಹಿಸಿದ ನಾಟಿ ಸೌತೆಕಾಯಿಯ ಉಪ್ಪಿನಕಾಯಿ ತಲುಪಿತು. ಹೋಳುಗಳು ಮೆತ್ತಗಿವೆ. ನಿಡದೋವುಲಿನ ಕಾಯಿ ಇರಬೇಕು. ಜಗ್ಗಯ್ಯಪೇಟೆಯ ಕಾಯಿಯೆ ಯೋಗ್ಯ. ಹೋಳು ಗಟ್ಟಿ ಇರುತ್ತದೆ. ಕಾರ ಕಡಿಮೆ ಇದೆ. ಇನ್ನೂ ಚುರುಕಾಗಿರಬೇಕು. ಗೊಲ್ಲಪ್ರೋಲು ಮೆಣಸಿನಕಾಯಿ ಬಳಸಬೇಕು. ಚಿ॥ಸೌ॥ ಸೊಸೆಗೆ ಸರಿ ಪ್ರಮಾಣ ತಿಳಿದಂತಿಲ್ಲ. ಚಿ॥ ಚಿನ್ನ ಗೋದಾವರಿ ಸ್ಟೇಷನ್ನಿಗೆ ಬಂದು ಶ್ರೀ ನಿಮ್ಮ ದೊಡ್ಡಮ್ಮನವರಿಗೆ ಉಪ್ಪಿನಕಾಯಿಯ ಟಿನ್ನನ್ನು ಕೊಟ್ಟನಂತೆ. ಅದರಲ್ಲಿ ಕೊಂಚ ತಾನು ತೆಗೆದುಕೊಂಡು ಉಳಿದದ್ದನ್ನು ಶ್ರೀ ದೊಡ್ಡಮ್ಮನವರಿಗೆ ಕೊಟ್ಟಿರುವನು. ನಿನಗೆ ತಿಳಿಯಲೆಂದು ಬರೆಸುತ್ತಿರುವೆ. ಶ್ರೀ ದೊಡ್ಡಮ್ಮನವರನ್ನು ಅಲ್ಲಿಯೆ ಎರಡು ಮೂರು ತಿಂಗಳು ಇರೆಂದೂ ರೈಲ್ವೆ ಪಾಸು ದೊರೆತ ಕೂಡಲೆ ಕಾಶಿಯಾತ್ರೆ ಮಾಡಿಸುವುದಾಗಿ ಚಿ॥ ದೊಡ್ಡವನೂ ಚಿ॥ ಸೌ॥ ದೊಡ್ಡ ಸೊಸೆಯೂ ಹೇಳುತ್ತಿರುವರು. ನಮ್ಮವರೆಲ್ಲರೂ ಸಹ ಶ್ರೀ ನಿಮ್ಮ ದೊಡ್ಡಮ್ಮನವರನ್ನು ಎರಡು ಮೂರು ತಿಂಗಳು ಕಾಶೀವಾಸ ಮಾಡಿರೆಂದು ಒತ್ತಾಯ ಮಾಡುತ್ತಿರುವರು. ಚಿ॥ ಸೌ॥ ಸೊಸೆಗೆ ಎಂಟು ತಿಂಗಳು ಆದಂತೆ ನಿನ್ನಿಂದ ಕಾಗದ ಬಂದ ಕೂಡಲೆ ನಾನಾಗಲಿ ಶ್ರೀ ನಿಮ್ಮ ದೊಡ್ಡಮ್ಮನವರಾಗಲಿ ನಿನ್ನಲ್ಲಿಗೆ ಬರುತ್ತೇವೆ. ನಿನ್ನ ಕ್ಷೇಮವನ್ನು ಕಾಗದದಲ್ಲಿ ಬರೆದು ತಿಳಿಸುತ್ತಿರುವುದು. ಅಶ್ರದ್ಧೆ ಮಾಡದೆ ತಿಳಿದುಕೊಳ್ಳತಕ್ಕದ್ದು.

ಇಂತೀ

ವೇಮುಂಗಂಟಿ ವೆಂಕಾಯಮ್ಮ

ವೇ. ವೆಂ. ಅನುಮತಿಯ ಮೇರೆಗೆ

ವೇ. ವೆಂಕಟ್ರಾವು.

* * *

ಬೆಜವಾಡದ ಪೂಲಬಜಾರಿನ ಮಾರ್ಕೆಟ್ಟಿನಲ್ಲಿದ್ದಾತನಿಗೆ ಬಂದ ಕಾಗದವನ್ನು ಓದಿದ ನಾಗಭೂಷಣಂ ಈ ಕೆಳಗಿನಂತೆ ಅರ್ಥ ಮಾಡಿಕೊಂಡ.

ಪವರುಪೇಟೆಯಿಂದ ನೀವು ಕಳುಹಿಸಿದ ಕೊರಿಯರ್ (ಕ್ರಾಂತಿ ಕಾಲದಲ್ಲಿ ಕ್ರಾಂತಿಕಾರರು ಸಹ-ಕ್ರಾಂತಿಕಾರರಿಗೆ, ಸಹಾನುಭೂತಿಪರರಿಗೆ ಕಳುಹಿಸಿದ ಗುಪ್ತ ಸುದ್ದಿವಾಹಕ) ದಂಡಯ್ಯನ ಮೂಲಕ ರವಾನಿಸಿದ ಕರಪತ್ರಗಳು ತಲುಪಿದವು. ಅವುಗಳನ್ನು ರಾತ್ರಿ ವೇಳೆಯಲ್ಲಿ ಇಲ್ಲಿನ ನಮ್ಮ ಆಂಧ್ರದವರಿಗೆಲ್ಲ ಹಂಚಿದೆವು. ವಸೂಲಿ ಚೆನ್ನಾಗಿ ನಡೆದಿದೆ. ಆದರೆ ಕರಪತ್ರಗಳ ಭಾಷೆ ಉತ್ಸಾಹದಾಯಕವಾಗಿಲ್ಲವೆಂದು, ಶೈಲಿ ಗ್ರಾಂಥಿಕವಾಗಿದೆಯೆಂದು ಅಭಿಪ್ರಾಯಪಟ್ಟರು. ಕರಪತ್ರಗಳ ಭಾಷೆ ಇದಕ್ಕಿಂತಲೂ ಪ್ರೇರಕವಾಗಿರಬೇಕು. ಮನುಷ್ಯನಲ್ಲಿ ಕೋಪ ಹುಟ್ಟಿಸಿ, ದ್ವೇಷ ಕೆರಳಿಸಿ, ರಕ್ತ ಕುದಿಯುವಂತೆ ಮಾಡಿ ಬಂದೂಕು ಹಿಡಿದು ನೈಜಾಮನನ್ನು ಉರುಳಿಸಲು ತಕ್ಕ ಪ್ರೇರಣೆ ಉಂಟುಮಾಡುವಂತಿರಬೇಕು. ನೀವು ಕಳುಹಿಸಿದ ಕರಪತ್ರಗಳಲ್ಲಿ ಭಾಷೆ, ಶೈಲಿ ತುಂಬಾ ಮೃದುವಾಗಿದೆ. ಕ್ಲೀಷೆಯಾದ ನಾಣ್ಣುಡಿಗಳು, ಎಂದಿನಿಂದಲೋ ಆಡಿ ಆಡಿ ಕಾವು ಕಳೆದ ಘೋಷಣೆಗಳು ಹೆಚ್ಚಿಗಿವೆ. ಪರಿಸ್ಥಿತಿಗೆ ಅನುಗುಣವಾದ ಉದ್ರೇಕಪೂರಿತ ಭಾಷೆ ಬೇಕು. ಕರಪತ್ರಗಳನ್ನು ಬರೆದವರು ಹಳೇಕಾಲದ ಲೇಖಕರಂತೆ ತೋರುತ್ತಾರೆ. ಯುವಕರು ನೆತ್ತರು ಹರಿಸಲು ಹೊಸ ಭಾಷೆ ಬೇಕಿದೆ. ಅಗತ್ಯ ಕಂಡರೆ (ಪೊಲೀಸರ ಕಾವಲಿನಿಂದಾಗಿ) ದಂಡಯ್ಯನನ್ನು ಕಾಶಿಯಾತ್ರೆಗೆ ಕಳುಹಿಸುತ್ತೇವೆ. ಇಲ್ಲಿ ಕಿದರ್‌ಪೂರ್‌ನಲ್ಲಿ ವಸೂಲಿ, ರಿಕ್ರೂಟ್‌ಮೆಂಟ್ ಮುಗಿಯುತ್ತಲೆ ತಿಳಿಸುತ್ತೇವೆ. ನೀನು ಕಾಗದ ಬರೆದು ಟಪಾಲಿನಲ್ಲಿ ಕಳುಹಿಸು. ಅದನ್ನು ನೋಡಿಕೊಂಡು ನೀನು ಯಾವಾಗ ಬರಬೇಕೆಂದು ತಿಳಿಸುತ್ತೇವೆ.

ಇಂತೀ

ನಿಮ್ಮ ತಾಯಿಯ ಅನುಮತಿಯಲ್ಲಿ

ವೇಮುಗಂಟಿ ವೆಂಕಾಯಮ್ಮ

ವೇಮುಗಂಟಿ ವೆಂಕಟರಾವು

* * *

ಕಥೆ ಕಂಚಿ ಸೇರಿತು. ನಾವು ಮನೆಗೆ ಹೋದೆವು. ಕಾಮ್ರೇಡ್ ದಂಡಯ್ಯನವರನ್ನು ಪೊಲೀಸರ ಕಬಂಧ ಬಾಹುಗಳಿಂದ ಹೇಗಾದರೂ ರಕ್ಷಿಸಬೇಕೆಂದು ಪಾರ್ಟಿ ನಮಗಿತ್ತ ಆಜ್ಞೆಯನ್ನು ನಾವು ಜಯಪ್ರದವಾಗಿ ಪಾಲಿಸಿದೆವು. ಕಿದರ್‌ಪೂರ್‌ನಿಂದ ಬಂದ ಕಾಗದದ ಸುದ್ದಿಯಂತೆ ಪ್ರವಾಸಿ ಆಂಧ್ರಲೋಕಕ್ಕೆ ಆಂಧ್ರದಲ್ಲಿ ಏನು ಜರುಗುತ್ತಿದೆಯೆಂದು ಕೊಂಚವೂ ತಿಳಿದಿಲ್ಲವೆಂದು ಅರ್ಥವಾಯಿತು.

ಪಾರ್ಟಿ ಮುಂದಾಳುಗಳಿಗೆ ತಿಳಿಸಿ, ಕರಪತ್ರಗಳ ಮೂಲಕ ಪ್ರವಾಸಿ ಆಂಧ್ರರಿಗೆ ನಿಜವಾಗಿಯೂ ಆಂಧ್ರದಲ್ಲಿ ಏನು ನಡೆಯುತ್ತಿದೆಯೊ ಎಂದು ತಿಳಿಸುವುದು ನಮ್ಮ ಕನಿಷ್ಠ ಧರ್ಮ. ಕಾಮ್ರೇಡ್ ದಂಡಯ್ಯ ಕೆಲ ದಿನಗಳ ಕಾಲ ಕಿದರ್‌ಪೂರದ ಬಂದರಿನಲ್ಲಿ ಕೆಲಸ ಮಾಡಿ, ನಂತರ ಭೂಗತನಾಗಿ ಆರು ತಿಂಗಳ ಕಾಲ ಕಾಶಿಯಲ್ಲಿರುವುದು ಒಳ್ಳೆಯ ಸಲಹೆ. ಕಾಶಿಯಲ್ಲಿರುವ ಸಾವಿರಾರು ಬೈರಾಗಿಗಳ ನಡುವೆ ಇವನು ಸೇರಿಬಿಡುತ್ತಾನೆ. ಮಾರುದ್ದ ಗಡ್ಡ ಬೆಳೆಸಿ, ಕಾಷಾಯ ವಸ್ತ್ರ ಧರಿಸಿ, ಹೆಗಲಿಗೆ ಜೋಳಿಗೆ, ಕೈಯಲ್ಲಿ ಕಮಂಡಲ, ಇನ್ನೊಂದು ಕೈಯಲ್ಲಿ ತಾಮ್ರದ ಭಿಕ್ಷಾಪಾತ್ರೆ ಹಿಡಿದು ಮೈ ತುಂಬ ವಿಭೂತಿ ಪೂಸಿಕೊಂಡು, ಕೊರಳಿಗೆ, ಕೈಗಳಿಗೆ ರುದ್ರಾಕ್ಷಿ ಮಾಲೆ ಧರಿಸಿದರೆ ಯಾವ ಸಿ.ಐ.ಡಿ.ಯೂ ಕಾಮ್ರೇಡ್ ದಂಡಯ್ಯನನ್ನು ಗುರುತಿಸಲಾರ. ಆಂಧ್ರದಲ್ಲಿ ಸದ್ದಡಗಿದ ಮೇಲೆ ಅವನು ಮತ್ತೆ ವಿಜಯವಾಡಕ್ಕೆ ಬರಬಹುದು.

ಅನು : ಸ. ರಘುನಾಥ
ಶ್ರೀಲಕ್ಷ್ಮೀ ಪ್ರಾವಿಷನ್ ಸ್ಟೋರ್ಸ್ ರಸ್ತೆ, ರಾಮಕೃಷ್ಣ ಬಡಾವಣೆ
ಶ್ರೀನಿವಾಸಪುರ - ೫೬೩ ೧೩೫, ಕೋಲಾರ ಜಿಲ್ಲೆ

# ಸಾಹಿತ್ಯ ಸಂಸ್ಕೃತಿ ಮತ್ತು ಜಾಗತೀಕರಣ

ಉತ್ತರ ಅಮೆರಿಕೆಯಲ್ಲಿ ಕೆನಡಾ ಮತ್ತು ಯುನೈಟೆಡ್ ಸ್ಟೇಟ್ಸ್‌ದಲ್ಲಿ ನೂರು ವರ್ಷಗಳ ಹಿಂದೆ ೧೮೭ ಭಾಷೆಗಳಿದ್ದವು – ರೆಡ್ ಇಂಡಿಯನ್ ಎಸ್ಕಿಮೋಗಳನ್ನು ಹಿಡಿದು. ಇಂದು ಬರೇ ೩೮ ಉಳಿದಿವೆ; ಉಳಿದವು ಅಳಿದುಹೋದವು. ಅಲಾಸ್ಕಾದಲ್ಲಿ ಇಪ್ಪತ್ತು ಭಾಷೆಗಳಲ್ಲಿ ಎರಡೇ ಉಳಿದವು. ಇದು ಜಾಗತೀಕರಣ ಮಾಡಬೇಕೆಂದಿರುವ ಬಿಳಿ ಜನರ ಕಾರ್ಯ ವೈಖರಿ.

**ಜಾ**ಗತೀಕರಣದಂತಹ ವ್ಯಾಪಕ ವಿಷಯದ ಬಗೆಗೆ ಇಂದೂ ಸಹ ನಿರ್ಣಾಯಕವಾಗಿ ಮಾತನಾಡುವದು ಯಾರಿಗೂ ಸಾಧ್ಯವಿಲ್ಲ. ಶಾಸ್ತ್ರೀಯ, ಮುಖ್ಯವಾಗಿ ವೈಜ್ಞಾನಿಕ ಕ್ಷೇತ್ರದ ಬಾಬತ್ತಿನಲ್ಲಿ ಹೀಗೆಂದೂ ಆಗುವುದಿಲ್ಲ. ಅಲ್ಲಿ ಖಚಿತತೆ ಇರುತ್ತದೆ. ಆದರೆ ಯಾವ ಅಲೆಯಲ್ಲಿ ಸಾವಿರಾರು ಸಮುದಾಯ, ಹಲವು ರಾಷ್ಟ್ರ ಮತ್ತು ಹಲವು ಸಂಸ್ಕೃತಿ ವಲಯ 'ಸಮಾವೇಶ ಹರಿಯುತ್ತಿರುತ್ತದೋ, ಅಂಥ ವಿಷಯದ ಬಗೆಗೆ ಸ್ಪಷ್ಟವಾಗಿ 'ಇದು ಒಳಿತು, ಇದು ಕೆಡುಕು' – ಎನ್ನುವುದು ಅಪಾಯಕಾರಿಯಾದುದು. ಈ ರೀತಿ ಹೇಳುವದು ರಾಜಕಾರಣಿಗಳಿಗಷ್ಟೇ ಸಾಧ್ಯ.

ಪ್ರಪಂಚದ ಎಲ್ಲ ಸಣ್ಣ-ದೊಡ್ಡ ಸಮಾಜವನ್ನು ಸ್ಪರ್ಶಿಸುವ ಜಾಗತೀಕರಣದಂತಹ ರಾಕ್ಷಸೀ ಪ್ರಕ್ರಿಯೆಯಿಂದ ಕೆಲ ಉಪಯುಕ್ತ ಸಂಗತಿಗಳೂ ತನ್ನಿಂದ ತಾನೇ ನಡೆದುಹೋಗುತ್ತವೆ. ವಿಶೇಷವಾಗಿ ಪರಂಪರಾಗತವಾಗಿ ನಡೆದುಬಂದ ನಿರುಪಯುಕ್ತ ಸಂಗತಿಗಳನ್ನು ಈ ನಿಮಿತ್ತದಿಂದ ನಾವು ದೂರ ಸರಿಸಿಬಿಡುತ್ತೇವೆ. ಅದಕ್ಕೆ ನಿಮಿತ್ತವಾದ ಬಾಹ್ಯ-ಪರಕೀಯ ಶಕ್ತಿಗೆ ಚರಿತ್ರೆಕಾರರು ಶ್ರೇಯಸ್ಸು ನೀಡುತ್ತಾರೆ. ದುಷ್ಟ ಶಕ್ತಿಯನ್ನು ಹೊಸಕಿ ಹಾಕುವ ಆಂತರಿಕ ಶಕ್ತಿಯು ಎಲ್ಲ ಪರಂಪರೆಯ ಗರ್ಭದಲ್ಲಿರುತ್ತದೆ. ಅದು ಯಾವುದೋ ನಿಮಿತ್ತದ ಹಾದಿ ಕಾಯುತ್ತಿರುತ್ತದೆ. ಇಂಗ್ಲಿಷ್ ಸಂಸ್ಕೃತಿಯಿಂದ ನಮ್ಮ ಸುಧಾರಣೆಯಾಗಲಿ, ಆದರೆ ಇಂಗ್ಲಿಷ್ ವಸಾಹತುವಾದದಿಂದಾಗಿ ನಮ್ಮ ಹೊಟ್ಟೆಯೊಳಗಿಂದ ಸುಧಾರಣೆ ನಿರ್ಮಾಣಗೊಂಡಿತು, ಎಂಬುದನ್ನು ನಾವು ಮಹಾರಾಷ್ಟ್ರದಲ್ಲಿ ಬಹು ಮುಖ್ಯವಾಗಿ ಗಮನಿಸುತ್ತ ಬಂದಿದ್ದೇವೆ. ಸ್ವಲ್ಪ ಹೆಚ್ಚು ಪ್ರಮಾಣದಲ್ಲಿ ಜಾಗತೀಕರಣವು ಈಗ ಈ ಬಗೆಯ ಕಾರ್ಯ ಮಾಡುತ್ತದೆ. ನಾವು ದೇಸೀಯತೆಯ ಸಹಾಯದಿಂದ ಆಂಗ್ಲ ಪ್ರಭಾವವನ್ನು ಅರಗಿಸಿಕೊಂಡೆವು. ಅದೇ ದೇಸೀಯ ಧೋರಣೆಯನ್ನು ಜಾಗತೀಕರಣಕ್ಕೂ ಲಗತ್ತಿಸಿಕೊಳ್ಳಬೇಕು. ಯಾಕೆಂದರೆ ಇಂಥ ಪರಕೀಯ ಪ್ರಭಾವದ ರಣಕೋಲಾಹಲದಲ್ಲಿ ನಮ್ಮ ಸಂಸ್ಕೃತಿ, ಭಾಷೆಯನ್ನು ಉಳಿಸಿಕೊಳ್ಳಲು ದೇಸೀಯತೆಯ ಹೊರತು ಅನ್ಯ ಯಾವುದೇ ಶಸ್ತ್ರ ಚರಿತ್ರೆಯಲ್ಲಿ ಸಿಗಲಾರದು.

ಮೊದಲು ನಾನು ಜಾಗತೀಕರಣದ ಎರಡು ಜ್ವಲಂತ ಉದಾಹರಣೆಗಳನ್ನು ನಿಮ್ಮೆದುರಿಗಿಡುತ್ತೇನೆ. ಜಾಗತೀಕರಣದಿಂದಾಗಿ ಲೇಖಕನ ಗತಿ ಏನಾಗುತ್ತದೆ ಎನ್ನುವದಕ್ಕೆ ಪ್ರಾತ್ಯಕ್ಷಿಕೆ ಎಂದು ಸಲ್ಮಾನ್ ರಶ್ದಿ ಎಂಬ ಶ್ರೇಷ್ಠ ಆಂಗ್ಲ ಕಾದಂಬರಿ ಬರೆಯುವ ಭಾರತೀಯ ವಂಶಜ ಮುಸ್ಲಿಂ ಲೇಖಕನನ್ನು ನೋಡಿ. ಕೊಲೆಯ ಬೆದರಿಕೆಯಿಂದ ಅವನು ಇಂದು ಅಡಗಿ ಕೂತಿದ್ದಾನೆ. ಕೆಲ ತಿಂಗಳುಗಳ ಹಿಂದೆ ಭಾರತ ಸರಕಾರದ ಸಾಂಸ್ಕೃತಿಕ ಖಾತೆಯು ಭಾರತದ ಹೊರಗಿರುವ ಇಂಗ್ಲಿಷಿನಲ್ಲಿ ಬರೆಯುವ ಎಲ್ಲ ಭಾರತೀಯ ಲೇಖಕರನ್ನು ಕೆಲ ಭಾರತೀಯ ಲೇಖಕರ ಜೊತೆ ದಿಲ್ಲಿಯ ಒಂದು ಸಾಹಿತ್ಯೋತ್ಸವಕ್ಕೆ ಆಮಂತ್ರಿಸಿತ್ತು. ರಶ್ದಿಯನ್ನು ಕರೆಸಲಾಗಿತ್ತು. ಆದರೆ ರಶ್ದಿಯ ರುಂಡ ಹಾರಿಸುವವನಿಗೆ ಲಕ್ಷಾವಧಿ ಡಾಲರನ್ನು ನೀಡುವ ಇರಾನಿ ಧರ್ಮಾಂಧರ ಬಹುಮಾನ ತಮಗೇ ಸಿಗಬೇಕೆಂದು ಭಾವಿಸುವ ಜನ ನಮ್ಮ ದೇಶದಲ್ಲೂ ಸಾಕಷ್ಟಿರಬೇಕು. ಹೀಗಾಗಿ ಬೆದರಿ ರಶ್ದಿ ಸಾಹೇಬರು ಬರಲೇ ಇಲ್ಲ. ಪಾಪ ಅವನು ಪತ್ರಿಕೆ ಬಿಟ್ಟು ಬೇರೆ ಕಡೆ ಮುಖ ತೋರಿಸುವ ಹಾಗಿಲ್ಲ. ಅಂದರೆ ಲೇಖಕನ ಅಸ್ತಿತ್ವದ ಮೇಲೆಯೇ ಜಾಗತೀಕರಣ ಎಂಥ ಭಯಂಕರ ಪರಿಣಾಮ ಬೀರಬಲ್ಲದು ಎಂಬುದನ್ನು ಕಾಣಬಹುದು.

ಮುಂಬೈನ ಈ ಮುಸ್ಲಿಂ ಗೃಹಸ್ಥನು ಇಲ್ಲೇ ಒಬ್ಬ ಉರ್ದು-ಭಾರತೀಯ ಲೇಖಕನಾಗಬಹುದಿತ್ತು. ಆದರೆ ಇಂಗ್ಲಿಷ್ ಬರೆಯತೊಡಗಿದ, ಬಳಿಕ ಇಂಗ್ಲೆಂಡಿನ ನಾಗರಿಕತ್ವವನ್ನೂ ಪಡೆದ. ಅವರ 'ಮಿಡ್‌ನೈಟ್ಸ್ ಚಿಲ್ಡ್ರನ್' ಎಂಬ ಭಾರತೀಯ ಹಿನ್ನೆಲೆಯ ಕಾದಂಬರಿಯು ಇಂಗ್ಲಿಷಿನಲ್ಲಿ ಅಗ್ರಗಣ್ಯವೆನಿಸಿತು; ಅದರಿಂದಾಗಿಯೇ ಜಗತ್ಪ್ರಸಿದ್ಧರಾದರು. ಇಂಗ್ಲಿಷ್ ಕಾದಂಬರಿಗೆ ಮೌಲಿಕ ತಿರುವು ನೀಡುವ ಕಿಪ್ಲಿಂಗ್, ದೇಸಾಯಿಯಂತಹ ಭಾರತೀಯ ಕಾದಂಬರಿಕಾರರ ಸಾಲಿನಲ್ಲಿ ಸೇರುವ ಅತೀ ದೊಡ್ಡ ಕೀರ್ತಿ ಅವರಿಗೆ ಸಿಕ್ಕಿತು. ಆದರೆ ಇಂಗ್ಲೆಂಡಿನಲ್ಲಿ

ಮರಾಠಿ ಮೂಲ
ಡಾ|| ಭಾಲಚಂದ್ರ ನೇಮಾಡೆ

ಮತ್ತು ಪರ್ಯಾಯವಾಗಿ ಜಗತ್ತಿನ ಇಂಗ್ಲಿಷ್ ಓದುವ ಕೋಟ್ಯಾವಧಿ ವಾಚಕ ವರ್ಗಕ್ಕಾಗಿ ಅಲ್ಪಾವಧಿ ರೂಪಾಯಿಗಳ ರಾಯಲ್ಟಿ ಪಡೆಯುವ ಈ ಲೇಖಕನಿಗೆ ಈ 'ಅಂತಾರಾಷ್ಟ್ರೀಯ' ವಾಚಕ ವರ್ಗಕ್ಕಾಗಿ ತಾನು ಬರೆಯಬೇಕಾಗುತ್ತದೆ ಎಂಬ ತಪ್ಪು ಸಿಗ್ನಲ್ ಸಿಗಲಾರಂಭಿಸಿತು. ತದನಂತರ ಅವರು 'ಶೇಮ್' ಎಂಬ ಕಾದಂಬರಿ ಬರೆದು ಪಾಕಿಸ್ತಾನದ ಸಮಾಜದ ಮೋಜಿನ ಪ್ರಸಂಗಗಳನ್ನು ಚಿತ್ರಿಸಿದರು. ಅದು ಸಾಹಿತ್ಯಿಕ ದೃಷ್ಟಿಯಿಂದ ಎರಡನೇ ದರ್ಜೆಯ ಕೃತಿ ಸಹ ಅಲ್ಲ, ಆದರೆ ಅದರ ನಂತರ 'ಸೆಟೆನಿಕ್ ವರ್ಸಸ್' ಬರೆದು ಇಸ್ಲಾಂ ಧರ್ಮಾಂಧರ ರೋಷವನ್ನು ಎದುರಿಸಬೇಕಾಯಿತು. ಎಷ್ಟೆಂದರೆ, ಅವರನ್ನು ಕೊಲ್ಲುವವರಿಗೆ ಲಕ್ಷಾವಧಿ ಡಾಲರಿನ ಬಹುಮಾನವನ್ನು ಇರಾನಿನ ಧರ್ಮಗುರು ಘೋಷಿಸಿದ.

ಈಗ ಇಸ್ಲಾಂ ಧರ್ಮಾಂಧರ ಬಗೆಗೆ ಮಾತಾಡುವದೆಂದರೆ ವ್ಯರ್ಥ ಕಾಲಹರಣ ಮಾಡಿದಂತೆ. ಆದರೆ ಒಬ್ಬ ಶ್ರೇಷ್ಠ ಲೇಖಕ ತನ್ನದೇ ಸ್ವಾತಂತ್ರ್ಯದ ಮೇಲೆ ಕೊಡಲಿ ಪ್ರಹಾರ ಏಕೆ ಮಾಡಿಕೊಂಡ ಎಂಬುದರ ಕುರಿತು ಯೋಚಿಸಬೇಕಾಗಿದೆ. ವಿದೂಷಕನು ಹೆಚ್ಚೆಚ್ಚು 'ಕುಣಿದು ಕುಪ್ಪಳಿಸಿ ಜನರನ್ನು ರಂಜಿಸುವಂತೆ, ಇಂಗ್ಲಿಷಿನಲ್ಲಿ ಬರೆಯುವ ಭಾರತೀಯ ವಂಶದ ಈ ಲೇಖಕನಿಗೆ 'ಥರ್ಡ್ ವರ್ಲ್ಡ್' ಮಸಾಲೆಯ ಚಟ ಅಂಟಿಕೊಂಡಿದೆ. ನೀರದ್ ಚೌಧರಿ, ವ್ಹಿ. ಎಸ್. ನಯಪಾಲ ಅಂಥವರು ಆರ್. ಕೆ. ನಾರಾಯಣ ಮತ್ತು ಮುಲ್ಕರಾಜ್ ಆನಂದ ಇವರಿಗಿಂತ ಮೊದಲೇ ತೆರೆದ ಈ ದಂಧೆಯು ಜೋರಾಗಿ ನಡೆದಿದೆ. ಇಂಗ್ಲಿಷ್ ಭಾಷಿಕರನ್ನು ಸಂತೋಷಪಡಿಸುವ ಖಾಸಾ ತಂತ್ರ ಈ ಎಲ್ಲ ಲೇಖಕರ ಹತ್ತಿರವಿದೆ. ತಾತ್ಪರ್ಯವೇನೆಂದರೆ, ರಶ್ದಿಯವರಿಗೆ ಈ ಜಾಗತಿಕ ಇಂಗ್ಲಿಷ್ ಅಭಿರುಚಿಯ ವ್ಯಸನ ಎಷ್ಟು ಅಂಟಿಕೊಂಡಿದೆಯೆಂದರೆ, ತಾನು ಯಾವುದೇ ನೆಲಕ್ಕೆ, ಪರಂಪರೆಗೆ ಅಂಟಿಕೊಂಡವನಲ್ಲ, ತನ್ನದೇ ಆದೊಂದು ಸ್ವತಂತ್ರ ಅಂತರರಾಷ್ಟ್ರೀಯ ಜಗತ್ತಿದೆ. ಅದೇ ತನಗೆ ಯಶ, ಕೀರ್ತಿ, ಹಣ ದೊರಕಿಸಿ ಕೊಡುತ್ತದೆ. ಇಂಥ ಅಸೀಮ ಸ್ವಾತಂತ್ರ್ಯದ ವಿಶ್ವದಲ್ಲಿ ಮುಳುಗಿಯೇ ಅವನು ಸನಾತನೀ ಮುಸಲ್ಮಾನ ಧರ್ಮಗುರುಗಳ ಕೋಪಕ್ಕೆ ಬಲಿಯಾದನು. ಈ ಧರ್ಮಾಂಧ ವಿಕೃತ ರಾಜಕಾರಣವು ಮಹಾತ್ಮಾ ಗಾಂಧಿಯಿಂದ ಹಿಡಿದು ಹಲವರನ್ನು ಬಲಿ ತೆಗೆದುಕೊಂಡಿದೆ. ಆದರೆ ಸಾಹಿತ್ಯದಲ್ಲಿ ಧರ್ಮಾಂಧರ ಭಯಂಕರ ಭಿಕ್ಷ್ಯವನ್ನು ಈ ಉದಾಹರಣೆಯಲ್ಲಿ ಕಾಣಬಹುದು.

ಒಬ್ಬ ಲೇಖಕ ಸ್ವಂತ ದೇಶ, ಧರ್ಮ, ಪರಂಪರೆ, ಭಾಷೆಯಂತಹ ಇತರರಿಗೆ ಪವಿತ್ರವೆನಿಸುವ ಸಂಗತಿಯನ್ನು ಒಪ್ಪುತ್ತಿರಲಿಕ್ಕಿಲ್ಲ. ಆದರೆ ಜಗತ್ತಿನ ಕೋಟ್ಯಾವಧಿ ಜನರ ಈ ಶ್ರದ್ಧೆಯನ್ನು ಟಿಂಗಲ್ ಮಾಡುವ ಸ್ವಾತಂತ್ರ್ಯ ಅವನಿಗೆ ನೀಡಿದವರು ಯಾರು ? ಎಷ್ಟೋ ಬಡಜನ ಇಡೀ ದಿನ ಉಣ್ಣಲು ಏನೂ ದೊರಕದಿದ್ದರೂ ಅಲ್ಲಾನ ದೇವರ ಹೆಸರು ತೆಗೆದುಕೊಂಡು ನಾಳೆ ಒಳಿತಾಗಬಹುದೆಂಬ ಶ್ರದ್ಧೆಯಲ್ಲಿ ಮಲಗುತ್ತಾರೆ. ಜಗತ್ತಿನಲ್ಲಿ ಎಲ್ಲರಿಗೆ ಹೊಸ ಅಡ್ವಾನ್ಸ್ ರಾಯಲ್ಟಿ, ಹೊಸ ನೌಕರಿ, ಹೊಸ ಹೆಂಡತಿ ಅಥವಾ ಇಂಗ್ಲೆಂಡ್-ಅಮೆರಿಕಾದಂತಹ ಹೊಸ-ಹೊಸ ದೇಶಗಳ ನಾಗರಿಕತ್ವ ಸಿಗುವುದಿಲ್ಲ. ಚಪ್ಪಲಿ ಸವೆದರೂ ನಿತ್ಯದ ಬದುಕೇ ದುಸ್ತರಗೊಂಡಿರುತ್ತದೆ. ಇಂಥ ಕೋಟಿ-ಕೋಟಿ ಜನಗಳಿಗೆ ಈ ಹಳೇ ಪರಂಪರೆಯ ಅಗತ್ಯವಿದೆ. ಅದು ಪಂಚಪ್ರಾಣಕ್ಕಿಂತಲೂ ಪ್ರಿಯವಾಗಿರುತ್ತದೆ. ಈ ಅಂಧಃಶ್ರದ್ಧೆಯನ್ನು ನಾಶಪಡಿಸಬೇಕಿದ್ದರೆ ಅವರಿಗೆ ಬೇರೊಂದು ಸಂಧಿಯ ಅಗತ್ಯವಿರುತ್ತದೆ. ಅವರ ಜೊತೆಗಿದ್ದೇ ಅವರ ದುಃಖ ಹಂಚಿಕೊಂಡು, ಮುಖ್ಯವೆಂದರೆ ಅವರದ್ದೇ ಭಾಷೆಯಲ್ಲಿ ಬರೆದು, ಸಾದತ್ ಹುಸೇನ ಮಾಂಟೋನಂತೆ ಅವರ ಪರಿಕಲ್ಪನೆಯನ್ನು ಕೆಲಮಟ್ಟಿಗೆ ಬದಲಾಯಿಸುವುದು ಸಾಧ್ಯವಿದೆ. ಅದರ ಬೆಲೆಯನ್ನು ಆಯಾ ಭಾಷೆಯಲ್ಲಿ ಜ್ಞಾನೇಶ್ವರ, ತುಕಾರಾಮ, ದಾಂತೆ, ಪುಷ್ಕಿನ್ – ಮುಂತಾದ ಲೇಖಕರು ತೀರಿಸುತ್ತ ಬಂದಿದ್ದಾರೆ. ಅವರು ಹಂತ-ಹಂತವಾಗಿ ಸಮಾಜ ಬದಲಾಯಿಸುತ್ತ ಬಂದರು. ಆದರೆ ರಶ್ದಿಯಂಥವರು ಒಂದು ಸಮಾಜದ ಶ್ರೇಷ್ಠತ್ವ ದೊರಕಿಸಿಕೊಳ್ಳಲು ಮತ್ತೊಂದು ಸಮಾಜದ ಶ್ರದ್ಧೆಯನ್ನು ಟೀಕಿಸುವುದು ಲೇಖಕರ ಪರಂಪರೆಗೆ ಒಪ್ಪುವಂತಹದಲ್ಲ. ಅದರಲ್ಲಿ 'ಮನರಂಜನೆ'ಯ ಆಚೆ ಏನಾದರೂ ವಾಙ್ಮಯ ಮೌಲ್ಯವಿದೆಯೆಂದೂ ಅನಿಸುವುದಿಲ್ಲ. ಇಂಥ ಭಾರತೀಯ ಆಂಗ್ಲ ಲೇಖಕರಿಂದಾಗಿ ಒಟ್ಟು ಸಾಹಿತ್ಯದಲ್ಲಂತೂ ಬಿಡಿ, ಆದರೆ ಬೇರೊಂದು ಸಮಾಜದೊಳಗಿನ ಮೌಲ್ಯ ನಿರ್ಮಿತಿಯ ಪ್ರಕ್ರಿಯೆಯಲ್ಲಿ ಇಂಚಿನಷ್ಟು ಸಹ ವೃದ್ಧಿಯಾಗುವುದಿಲ್ಲ. ಬದಲಿಗೆ ಇದು ಲೇಖಕನ ಸ್ವಾತಂತ್ರ್ಯದ ತಪ್ಪು ಬಳಕೆ ಎಂದೆನಿಸುತ್ತದೆ. ಮುಖ್ಯವೆಂದರೆ ತನ್ನದೇ ಹೆಸರು ಬದಲಿಸಿ, ಗುಪ್ತರೀತಿಯಲ್ಲಿ ಬದುಕಿ, ಪೋಲೀಸ್ ಪಹರೆಯಲ್ಲಿ ಜೀವನ ಕಳೆಯಬೇಕಾಗಿ ಬಂದಿರೋದು, ಯಾವುದೇ ಅಸಲೀ ಲೇಖಕನಿಗೆ ಶೋಭಿಸುವಂತಹದಲ್ಲ. ಇಂದು

ಜಾಗತೀಕರಣ ಕಲಿಸಿದ ಒಂದು ಪಾಠ ನಮ್ಮೆದುರಿಗಿದೆ.

ಈಗ ಜಾಗತೀಕರಣದಿಂದಾಗಿ ಸಾಮಾಜಿಕ ಸ್ಥೈರ್ಯ ಅದ್ದೇಗೆ ಕುಸಿಯುತ್ತದೆ ಎಂಬ ಉದಾಹರಣೆಯೆಂದು ಗುಜರಾತಿನ ದಂಗೆಯ ಬಗೆಗೆ ಯೋಚಿಸಬಹುದು. ಹಿಂದೂಸ್ತಾನದಲ್ಲಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ತೀರ ಅಂತಾರಾಷ್ಟ್ರೀಯಗೊಂಡ ಈ ಸಮಾಜವು ಫಿಜಿ ದ್ವೀಪದಿಂದ ಹಿಡಿದು ಏಶಿಯಾ, ಆಫ್ರಿಕಾ, ಯುರೋಪ್, ಅಮೆರಿಕಾ, ಈ ಎಲ್ಲ ಖಂಡದಲ್ಲಿ ಎಲ್ಲೆಡೆ ನೆಲೆಯೂರಿದ್ದು ಕಂಡುಬರುತ್ತದೆ. ಝುವರಚಂದ ಮೇಘಾಣಿ, ಪನ್ನಲಾಲ ಪಟೇಲ, ಮಹಾತ್ಮಾ ಗಾಂಧಿಯಂತಹ ಲೇಖಕರೊಳಗಿನ ದೇಸಿ ಅರಿವು ಹಂತ-ಹಂತವಾಗಿ ಫಾಲತೂ ಯುರೋಪಿ-ಇಂಗ್ಲಿಷ್ ಸಮೀಕ್ಷೆಯೊಳಗೆ ಸಿಲುಕಿಕೊಂಡದ್ದು ಗುಜರಾತಿ ಸಾಹಿತ್ಯದಲ್ಲೂ ಕಾಣುತ್ತೇವೆ. ಜಗತ್ತಿನ ತುಂಬ ವ್ಯಾಪಾರಿ ಜಾಲ ಹೊಂದಿದ ಈ ಜನ ಯಾವ ಅರ್ಥದಲ್ಲೂ ಹಿಂದೂ ಅಥವಾ ಮುಸಲ್ಮಾನರಲ್ಲ. ಆದರೆ ಕಳೆದ ಕೆಲ ವರ್ಷಗಳಲ್ಲಿ ಹಳೆಯ ಧಾರ್ಮಿಕ ಸಂಘಟನೆಗಳನ್ನು ಜಾಗತಿಕ ಪಾತಳಿಯೊಂದಿಗೆ ಬಿಗಿದು ಈ ಜನ ಅವುಗಳನ್ನು ಸ್ಥಳೀಯ ಪಾತಳಿಯಲ್ಲಿ ಬಿಡಿ-ಬಿಡಿಗೊಳಿಸಿದರು. ಪರದೇಶದಿಂದ ಕೋಟ್ಯಾವಧಿ ರೂಪಾಯಿ ಗುಜರಾತಿಗೆ ಬರುವದನ್ನು, ಕಚ್ಛ್ ಭೂಕಂಪದಲ್ಲಿ ಬಹಿರಂಗವಾಗಿ ಕಂಡುಬಂದಂತೆ, ದಂಗೆ ಹುಟ್ಟಿಸುವ ಧಾರ್ಮಿಕ ಸಂಘಟನೆಗಳಿಗೆ ಆರ್ಥಿಕ ಬೆಂಬಲ ಖಂಡಿತವಾಗಿ ದೊರಕಿರಬೇಕು. ಸತತ ನಮ್ರವಾಗಿರುವ ಈ ಸಮಾಜವು ಒಮ್ಮೆಲೆ ಇಷ್ಟು ಹಿಂಸಾತ್ಮಕಗೊಳ್ಳುವುದರ ಮೂಲ ಈ ಸ್ಥಳೀಯ ಏಕತೆಯ ಕೇಂದ್ರ ಇಲ್ಲವಾಗಿಸುವ ಜಾಗತೀಕರಣದ ಪ್ರಕ್ರಿಯೆಯಲ್ಲಿದೆ. ಜಾಗತೀಕರಣದಿಂದಾಗಿ ದೂರದೂರದ ಸಮಾಜ ಒಂದೆಡೆ ಬರುವದೇನೋ ನಿಜ. ಇದರಿಂದ ಸನಿಹದಲ್ಲಿ ಜೀವಿಸುವ ಸಮಾಜ ಮಾತ್ರ ಪರಸ್ಪರರಿಂದ ದೂರ ಸರಿಯುತ್ತದೆ. ಟಿ.ವಿ., ಇಂಟರ್‌ನೆಟ್, ಕಂಪ್ಯೂಟರನಲ್ಲಿ ಅಮೆರಿಕಾ ಮತ್ತು ಆಫ್ರಿಕಾ ತೀರಾ ಸನಿಹಕ್ಕೆ ಬಂತು. ಆದರೆ ನೆರೆಯ ವಸತಿಯೊಂದಿಗಿನ ನನ್ನ ಸಂಬಂಧ ಈ ಮೊದಲಿನಷ್ಟೂ ಉಳಿಯದಂತಹ ಅವಸ್ಥೆ ಬಂದಿದೆ. ಆದರಿಂದ ಪ್ರಚಂಡ ನರ ಸಂಹಾರದ ಸಾಧ್ಯತೆ ತಲೆದೋರುತ್ತದೆ. ಗುಜರಾತದ ದಂಗೆಯು ಈ ಮೊದಲಿನಂತೆ ಖಂಡಿತಕ್ಕೂ ತಾತ್ಕಾಲಿಕವಾಗಿರಲಿಕ್ಕಿಲ್ಲ. ಅದು ಬೇಗ ಮುಗಿಯಬಹುದು ಎಂದು ಭಾವಿಸಲು ಯಾವ ತಾರ್ಕಿಕ ಬೆಂಬಲವೂ ಇಲ್ಲ. ಹೆಚ್ಚೇಕೆ, ಈ ನರಸಂಹಾರ ನಾಳೆ ಮುಂಬೈ, ಕೊಲ್ಹಾಪುರದಲ್ಲೂ ಸಹ ಬೇಕಾದಾಗ ಆರಂಭಿಸಬಹುದು. ಇಂಥ ಸ್ಥಿತಿ ಬೆಳೆಯುತ್ತ ಹೋಗಬಹುದು. ಬಹುಸಾಂಸ್ಕೃತಿಕ ಸಮೂಹವು ಒಂದೆಡೆ ಜೀವನ ಸಾಗಿಸುವ ಕಾಲವು ಹೊಸ ಜಾಗತಿಕ ಅಲೆಯಿಂದಾಗಿ ಕೊನೆಗೊಂಡಿದೆ.

ಇಲ್ಲಿ ನಾವು ಜಾಗತೀಕರಣದ ಸೂಕ್ಷ್ಮ ಹಾಗೂ ಸ್ಥೂಲವಾದ ಸಮೀಕರಣವೊಂದನ್ನು ಮಂಡಿಸುವ ಪ್ರಯತ್ನ ಮಾಡಿದೆವು. ನಿಜವಾಗಿ ನೋಡಿದರೆ ಸಾಹಿತ್ಯ ಹಾಗೂ ಜಾಗತೀಕರಣವು ಎರಡು ಪರಸ್ಪರ ವಿರೋಧಿ ಸಂಗತಿಗಳು ಎಂದೆನ್ನಬಹುದು. ಇತ್ತೀಚೆಗೆ ವಸಾಹತುವಾದ ಆರಂಭಗೊಂಡು ಬಳಿಕ ಸಾಹಿತ್ಯಕ್ಕೆ ಅಂತಾರಾಷ್ಟ್ರೀಯ ದರ್ಜೆ ದೊರಕಿಸಿ ಕೊಡುವ ಪ್ರಯತ್ನ ನಡೆಯಿತು. ಹಿಂದೆಯೂ ಪಂಚತಂತ್ರ, ರಾಮಾಯಣ, ಮಹಾಭಾರತ – ಇವು ನಿರ್ಮಿತ ಸ್ಥಳದ ಹೊರಗೆ ದೇಶ - ವಿದೇಶದಲ್ಲೂ ಹರಡಿತ್ತು. ಆದರೆ ಆದರ ಹಿಂದೆ ಅಂತರರಾಷ್ಟ್ರೀಯತೆಯ ತತ್ತ್ವ ಇರುತ್ತಿರಲಿಲ್ಲ. ಚಾಸರ್ ಅಥವಾ ಶೇಕ್ಸ್‌ಪಿಯರ್ ಈ ಹಿಂದೂಸ್ತಾನಿ ಕಥೆ ಎಲ್ಲಿಂದಲೋ ಹಿಂದೂಸ್ತಾನದಿಂದ ಭಾಷಾಂತರಗೊಂಡು ಯೂರೋಪಿಗೆ ಹೋದವು. ಅದನ್ನು ತಮ್ಮದಾಗಿಸಿಕೊಂಡು ತಮ್ಮ ಸ್ವಂತ ಪುಸ್ತಕದಲ್ಲಿ ಯಾವ ಮುಲಾಜಿಲ್ಲದೆ ಬಳಸುತ್ತಿದ್ದರು. 'ಒಂದು' ಸಂಸ್ಕೃತಿಯು 'ಬೇರೊಂದು' ಸಂಸ್ಕೃತಿಯ ಮೇಲೆ ಏನಾದರೂ ಹೇರಿದ ಅಂತಾರಾಷ್ಟ್ರೀಯತೆ ಆದರ ಹಿಂದಿರಲಿಲ್ಲ.

ಮೌಖಿಕ ಸಾಹಿತ್ಯವಂತೂ ಸಂಸ್ಕೃತಿಯ ಹುಟ್ಟಿನಿಂದಲೇ ಅತ್ಯಂತ ದೇಸಿಯಾಗಿ ಉಳಿದುಕೊಂಡಿದೆ.

ಸುಮೇರಿಯನ್ ಕಾಲದಲ್ಲಿಯ ಲಿಖಿತ ಪುರಾವೆಯಿಂದ ಹಿಡಿದು ವಸಾಹತು ಕಾಲದವರೆಗೆ ಅಂದರೆ ಹದಿನೆಂಟನೇ ಶತಕದವರೆಗೆ ಸಾಹಿತ್ಯವು ಜಾಗತಿಕ ತತ್ತ್ವದ ಮೇಲೆ ಎಲ್ಲಿಯೂ ನಿರ್ಮಾಣಗೊಳ್ಳುತ್ತಿರಲಿಲ್ಲ ಅಥವಾ ಬಳಸುತ್ತಿರಲಿಲ್ಲ. ಬೌದ್ಧ ಸಾಹಿತ್ಯವು ಭೂಮಧ್ಯ ಸಮುದ್ರದಿಂದ ಹಿಡಿದು ಜಪಾನದವರೆಗೆ ಹಬ್ಬಿದ್ದು ಹಿಂದೂಸ್ತಾನಿ ಸಂಸ್ಕೃತಿಯು ಹಬ್ಬಿಸಲೆಂದಲ್ಲ, ಸ್ವತಂತ್ರವಾಗಿ 'ಬೌದ್ಧ' ಸಂಸ್ಕೃತಿಯು ಪಸರಿಸಲೆಂದು. ಆದರೆ ಸಾಮ್ರಾಜ್ಯವಾದಿ ಯುರೋಪಿಯನ್ನರು ಮುಖ್ಯವಾಗಿ ಇಂಗ್ಲಿಷ್ ಸಾಮ್ರಾಜ್ಯವಾದಿಗಳು ಎಂಥ ತಂತ್ರ ಬಳಸಿದರೆಂದರೆ, ಈ ಶೇಕ್ಸ್‌ಪಿಯರ್ ನಮ್ಮವನಾಗಿದ್ದರಿಂದ ಅವನು ಜಾಗತಿಕ ಮಹತ್ವ ಪಡೆದವನಾಗಿದ್ದಾನೆ. ಅನಂತರ ಜಾನ್ ಮಿಲ್ಟನ್‌ನ ನಂಬರೂ ಹತ್ತಿತು. ಮಿಲ್ಟನ್ ಇಂಗ್ಲೆಂಡದಲ್ಲಿ ದೊಡ್ಡವನಾಗಿರಬಹುದು. ಆದರವನು ಮಹಾ ಕವಿಯೇ? ಅವನು 'ಮಹಾಕಾವ್ಯ' ಬರೆದನಂತೆ. ಈ 'ಪ್ಯಾರಡೈಸ್ ಲಾಸ್ಟ್' ಮಹಾಕಾವ್ಯವು ನಮ್ಮ ಏಕನಾಥನ 'ಭಾವಾರ್ಥ ರಾಮಾಯಣ'ಕ್ಕಿಂತ ಅಷ್ಟೇನೂ ಶ್ರೇಷ್ಠವಲ್ಲ. ಅದು ಓದಿಸಿಕೊಂಡು ಹೋಗುವುದೂ ಇಲ್ಲ. ಬಲವಂತದಿಂದ ಓದಬೇಕಾಗುತ್ತದೆ. ಸಹೃದಯನು ತಾನಾಗಿಯೇ ಓದಿ 'ಎಂಜಾಯ್' ಪಡುವಂತಹ ಮೌಲಿಕ - ಒರಿಜಿನಲ್-ಮಹಾಕಾವ್ಯವಲ್ಲ – ಎಂದು ಸ್ವತಃ ಇಂಗ್ಲೆಂಡಿನ ಸ್ಯಾಮ್ಯುಯಲ್ ಜಾನ್ಸನ್ ಎಂಬ ಸಮೀಕ್ಷಕನು ಹೇಳಿದ್ದಾನೆ. ಆದರೆ ಈ 'ಮಹಾಕಾವ್ಯ' ಬರೇ ಇಂಗ್ಲಿಷ್ ಆಗಿದ್ದರಿಂದಲೇ ನಮ್ಮ ಮೇಲೆ ಹೇರಲಾಯಿತು, ಅಲ್ಲದೆ ಇದು ಇಂಗ್ಲಿಷ್ ಆಗಿದ್ದರಿಂದ 'ಜಗತ್ಪಸಿದ್ಧ'ವಾಗಿರುತ್ತದೆ – ಎಂಬ ಮತ್ತೂ ಒಂದು ಮೌಲ್ಯವನ್ನು ಹೇರಲಾಯಿತು. ತದನಂತರ ಮಹಾಭಾರತದ ಈ ನಮ್ಮ ದೇಶದಲ್ಲಿ ಇಂಗ್ಲಿಷ್ ಕ್ಲಾಸಿನಲ್ಲಿ ಆಂಗ್ಲ ಭಾರತೀಯ ಪ್ರಾಧ್ಯಾಪಕರು ಟೈ ಇತ್ಯಾದಿ ಧರಿಸಿ 'ಎಪಿಕ್' ಬಗೆಗೆ ಚರ್ಚೆ ಮಾಡುತ್ತ- ಮಾಡುತ್ತ ಪ್ಯಾರಡೈಸ್ ಲಾಸ್ಟ್‌ನ ಆಧಾರದಿಂದ ತಪ್ಪಾಗಿ ಉಚ್ಚರಿಸುತ್ತ, ಓದುತ್ತ ಈ ಮಹಾಕಾವ್ಯ ಜಗತ್ಪಸಿದ್ಧವಾಗಿದೆ ಎಂದು ಗುಂಗಿನಲ್ಲೇ ಕಲಿಸುತ್ತ ಬಂದರು. ನಾವೂ ಮಿಲ್ಟನ್ ಒಬ್ಬ ಶ್ರೇಷ್ಠ ಕವಿ ಎಂದು ಹೇಳುತ್ತ ಬಂದೆವು.

ಈ ಗೊಂದಲ ಕಳೆದ ೧೫೦-೨೦೦ ವರ್ಷಗಳಲ್ಲೇ ನಡೆಯಿತು. ಅಂದರೆ ವಸಾಹತೀಕರಣ ಶಿಕ್ಷಣ ವ್ಯವಸ್ಥೆಯಿಂದಾಗಿಯೇ ನಡೆಯಿತು. ಇಂಥದೇ ಅಜಾಗರೂಕತೆಯು ಮಾನವ ಶಾಸ್ತ್ರದಲ್ಲೂ ಅರ್ಥಶಾಸ್ತ್ರ, ರಾಜಕಾರಣ, ಮುಖ್ಯವಾಗಿ ಇತಿಹಾಸ, ಸಮಾಜ ಶಾಸ್ತ್ರದಲ್ಲೂ ನಡೆದಿದೆ. ಇಂಥ ತಪ್ಪು ಪರಿಕಲ್ಪನೆಯು ನಮ್ಮ ಮಿದುಳನ್ನು ಖಾಯಂ ಆಗಿ ಸೇರಿದ್ದನ್ನು ನಾವು ಕಾಣುತ್ತೇವೆ.

ಸಾಹಿತ್ಯದ ಬಾಬತ್ತಿನಲ್ಲಿ ಜಾಗತೀಕರಣದಿಂದಾಗಿ ಭಯಂಕರ ಪ್ರಕಾರವನ್ನು ಹಾಗೂ ಸಾಮಾಜಿಕ ಸ್ಥೈರ್ಯಕ್ಕೆ ತನ್ನಿಂದ ತಾನೇ ನಿರ್ಮಾಣಗೊಳ್ಳುವ ಆಘಾತವನ್ನು ಗಮನಿಸಿದೆವು. ಇದರ ಜೊತೆಗೆ ಹಸ್ತಕ್ಷೇಪ ಮಾಡುವ ಮತ್ತೂ ಒಂದು ಘಟಕವಿದೆ. ಅದೆಂದರೆ, ರಾಷ್ಟ್ರೀಯತೆ. ನಮ್ಮದೇ ಭೌಗೋಳಿಕ ಪ್ರದೇಶದ ಸಮೂಹ ಮನ. ಈ ಸಮೂಹ ಮನದ ಅಂತಸ್ತರದ ಘಟನೆಗಳು ಸದಾ ನಮಗೆ ಅರ್ಥವಾಗುತ್ತಿರುತ್ತವೆ. ಅಂದರೆ ನಾನು ಸಾಹಿತಿಯಾಗಿದ್ದೇನೆ. ನಿಮ್ಮೆಲ್ಲರ ಸುಖ-ದುಃಖ ನನ್ನದೂ ಹೌದು. ಆದರೂ ನಾನು ಸಾಹಿತಿಯೆಂದು ಹರಿಯುತ್ತ ಹೋಗುವುದಿಲ್ಲ; ಆದರೂ ಈ 'ದೇಶ' ಹಾಗೂ 'ಸಮೂಹ' ಈ ಪರಿಕಲ್ಪನೆಯ ವ್ಯಾಪ್ತಿಯನ್ನು ವಿನಾಕಾರಣ ಎಷ್ಟಂತ ಹಿಗ್ಗಿಸುವುದು ಎನ್ನುವುದಕ್ಕೂ ಒಂದು ಸೀಮೆ ಬೇಕು. ಈ ಸೀಮೆಯನ್ನು ಪಾಲಿಸಲು ಬರದೆ ಇರೋದರಿಂದ 'ರಾಷ್ಟ್ರ'ವೆಂದರೆ ಬರೇ ಕಾಲ್ಪನಿಕ, ನಕಾಸೆಯ ಮೇಲಿನ ಮನವನ್ನು ಮುದಗೊಳಿಸುವಂತಹ ರೊಮ್ಯಾಂಟಿಕ್ ಭಾವನೆಯಾಗಿ ಉಳಿದಿದೆ. ಇಂಥ ರಾಷ್ಟ್ರೀಯತೆಯಿಂದಾಗಿ ಕೊನೆಗೆ ನಾವೂ ಕಾಲ್ಪನಿಕವಾಗಲು ತೊಡಗುತ್ತೇವೆ. ನಾಗಪುರದ ಹಿಂದೂ ಮನುಷ್ಯನಿಗೆ ತನ್ನ ನೆರೆಯ ಹಿಂದೂ ಮನುಷ್ಯ ಹಸಿವೆಯಿಂದ ಸತ್ತರೂ ನಡೆಯುತ್ತದೆ, ಆದರೆ ಕಾಶ್ಮೀರದಲ್ಲಿ ಹಿಂದೂವಿನ ಮೇಲೆ ಹಲ್ಲೆ ನಡೆಯಿತೆಂದರೆ, ಅವನು ಕೆರಳಿ ಬೀದಿಗಿಳಿದು ಗದ್ದಲ ಹಾಕಲು ಆರಂಭಿಸುತ್ತಾನೆ : ಸರಕಾರ ಏನು ಮಾಡುತ್ತದೆ, ಈಗ ಹಿಂದೂ ನಾಶವಾಗುತ್ತಿದ್ದಾನೆ ಇತ್ಯಾದಿ. ಆದರೆ ಹಸಿವೆಯಿಂದ ಸಾಯುವ ತನ್ನೂರಿನ ಹಿಂದೂವಿನ ಬಗೆಗೆ ಏನಾದರೂ ಮಾಡಬೇಕೆಂದು ಅನಿಸುವುದೇ ಇಲ್ಲ. ಇದೇ ಮಾತು ಮುಸಲ್ಮಾನರಿಗೂ ಅನ್ವಯಿಸುತ್ತದೆ. ಮಾಲೆಗಾಂವಿನ ಮುಸಲ್ಮಾನರಿಗೆ ತನ್ನೂರಿನ ಮುಸ್ಲಿಂರ ಸುಖ-ದುಃಖದ ಚಿಂತೆಯಿಲ್ಲ, ಆದರೆ ಅಲ್ಲಿ ಬಿಹಾರದಲ್ಲಿ ಮುಸ್ಲಿಂರ ಚಿತ್ರಹಿಂಸೆಯಾಗುತ್ತಿದೆ ಎಂಬ ದುಃಖ ಅವನನ್ನು ಹೆಚ್ಚು ಕಾಡುತ್ತಿರುತ್ತದೆ. ಕ್ಯಾರಮಿನಲ್ಲಿ ಸ್ಟ್ರೈಕರ್ ರಿಬೌಂಡಾಗಿ ಮರಳಿ ಬರುವಂತೆ, ನಮ್ಮ ರಾಷ್ಟ್ರೀಯತೆಯ ಬಗೆಗೆ ನಡೆದಿದೆ. ತನ್ನ ನೆರೆಯಲ್ಲಿ, ಊರಿನಲ್ಲಿ, ತನ್ನ ಪ್ರದೇಶದಲ್ಲಿ ಏನು ನಡೆದಿದೆ ಎಂಬ ತಿಳುವಳಿಕೆ ನಮಗೆ ಬೇಡವಾಗುತ್ತದೆ. ತನ್ನ ಸನಿಹದ ಸಂಗತಿಗಳ ಬಗೆಗೆ ತನ್ನ ಸಂವೇದನೆ ಕ್ಷೀಣಗೊಳ್ಳುವುದು, ದೂರದ ಘಟನೆಗಳ ಬಗೆಗಿನ ಸಂವೇದನೆ ತೀವ್ರಗೊಳ್ಳುವುದು – ಇದೆಲ್ಲ ಸಮೂಹ ಮಾಧ್ಯಮದ ಮೂಲಕ ಜಾಗತೀಕರಣದ ಉದ್ದೇಶರಹಿತ ಪ್ರಹಾರದಲ್ಲಿ ನಡೆಯುತ್ತ ಹೊರಟಿದೆ. ಅಂದರೆ ಇಲೆಕ್ಟ್ರಾನಿಕ್ ಮಾಧ್ಯಮದ ಗೊಂದಲವು ವಿನಾಕಾರಣ ಜಗತ್ತನ್ನೆಲ್ಲ ನಮ್ಮೆದುರಿಗೆ ತಂದಿಟ್ಟಿದೆ. ನೆರೆಯವನೂ ಸಹ ಅಷ್ಟು ಸನಿಹ ಬಂದಿಲ್ಲ. ಹೀಗಾಗಿ ನಿಮ್ಮೂರಿನಲ್ಲಿ ನಡೆದದ್ದು ಗಮನಿಸಬೇಕೆಂದು ನಿಮಗನಿಸುವುದಿಲ್ಲ. ಆದರೆ ಯಾವ ದೇಶದಲ್ಲಿ ಎಷ್ಟು ಜನ ಸತ್ತರು, ಗೋಳಿಬಾರ ಎಲ್ಲಾಯಿತು, ಪೂರ್ವ ಬಂಗಾಲದಲ್ಲಿ ಹಿಂದೂಗಳ ಮೇಲೆ ನಡೆದ ಅತ್ಯಾಚಾರವೆಷ್ಟು – ಇತ್ಯಾದಿ. ಆದರೆ ನಮ್ಮದೆ ಊರಿನಲ್ಲಿ ನಮ್ಮ ಹಿಂದೂಗಳೇ ಹಿಂದೂಗಳನ್ನು ಅದೆಷ್ಟು ಭ್ರಷ್ಟಾಚಾರ ಮಾಡುತ್ತಾರೆ, ಎಂಬುದನ್ನು ನಾವು ಗಮನಿಸುವುದಿಲ್ಲ.

ಇಂಥ ತೀರಾ ರಾಕ್ಷಸೀ ಪ್ರಚಾರವು ಜಾಗತೀಕರಣದಿಂದ ಆರಂಭಗೊಂಡಿದ್ದರಿಂದ ನಮ್ಮ ದೇಸೀಯತೆಯ ಅರಿವೇ ಹೊರಟುಹೋದಂತಾಗಿದೆ. ಅದರ ಬದಲು ರಾಷ್ಟ್ರೀಯತೆಯ ರಾಜಕೀಯ ಅರಿವು ಮೂಡತೊಡಗಿದೆ. ಅನಾರೋಗ್ಯದಿಂದ ಬಳಲುವ ಗಿರಿಜನ

ವಿದ್ಯಾರ್ಥಿನಿ ಸಹ 'ಭಾರತ ದೇಶ ನನ್ನದು' ಎಂದು ಪ್ರಾರ್ಥನೆ ಮಾಡುವದೆಂದರೆ, ನಾವು ಹೆಚ್ಚೆಚ್ಚು ರಾಷ್ಟ್ರೀಯತೆ ಬೆಳೆಸಿಕೊಳ್ಳುತ್ತಿದ್ದೇವೆ, ಎಂದು ಒಪ್ಪಿಕೊಂಡಂತಾಗುತ್ತದೆ. ದೂರದಲ್ಲಿ ನಡೆದದ್ದೇನು ಎಂದು ತಿಳಿದುಕೊಳ್ಳುವದು ಜ್ಞಾನ ಕ್ಷೇತ್ರದ ವಿಕೃತಿ ಎನ್ನದೇ ವಿಧಿಯಿಲ್ಲ. ಇದೊಂದು ಬಗೆಯ ರೊಮ್ಯಾಂಟಿಕ್ ಜ್ವರ. ಐ.ಎ.ಎಸ್.ಗಾಗಿ ನಿಮಗೆ ಅಮೆರಿಕೆಯ ವಿದೇಶಿ ಸಚಿವ ಯಾರು ಎನ್ನುವದು ಗೊತ್ತಿರಬೇಕು. ಬೇರೆ ದೇಶದ ವಿದೇಶಿ ಸಚಿವನನ್ನು ತೆಗೆದುಕೊಂಡು ಮಾಡುವದೇನು ? ನಮ್ಮ ಐ.ಎ.ಎಸ್. ಅಧಿಕಾರಿಗೆ ನಿಜವಾಗಿ ಗೊತ್ತಿರಬೇಕಾದದ್ದೇನು ? ತನ್ನ ಪರಿಸರದ್ದು, ತನ್ನ ಪ್ರದೇಶದ ಸಣ್ಣಸಣ್ಣ ಸಂಗತಿಗಳದ್ದು, ಗಿಡಮರಗಳದ್ದು, ಜನಗಳದ್ದು, ಅವರ ರೀತಿ-ರಿವಾಜಿನದ್ದು, ಆರೋಗ್ಯದ್ದು.

ಜಾಗತೀಕರಣದ ಅಗತ್ಯದಿಂದಾಗಿ ಬರುವ ಈ ಮಾಹಿತಿಯ ಕಸದಿಂದಾಗಿ ತನ್ನ ಸನಿಹದ ಸಂಗತಿಗಳ ಜ್ಞಾನವಿರುವದು ಅಗತ್ಯ ಎಂದೆನಿಸಲಿಲ್ಲ. ಅಲ್ಲಿಯ, ಮುಖ್ಯವಾಗಿ ಅಮೆರಿಕೆಯ ಫ್ಯಾಶನ್, ಫ್ಯಾಡ್, ಹವ್ಯಾಸ, ಸಂಗಾತಿ, ರೀತಿ-ರಿವಾಜು ಇದೆಲ್ಲದರ ಮಾಹಿತಿ ಏಕೆ ಬೇಕು ? ಉದಾಹರಣೆಗಾಗಿ – ಯುರೋ ಡಾಲರಿನ ಮಾಹಿತಿ ಏಕೆ ಬೇಕೆಂದರೆ ಆ ನಾಣ್ಯದೊಂದಿಗೆ ನಮ್ಮ ರೂಪಾಯಿಯ ಬೆಲೆ ಏನು ಎಂದು ತಿಳಿದುಕೊಳ್ಳಲು. ನಮ್ಮ ಸಂಗತಿಗಳ ಸಂದರ್ಭದಲ್ಲೇ ಅಲ್ಲಿಯ ವಿಷಯ ಗೊತ್ತಿರುವುದು ತೀರಾ ಅಗತ್ಯವಾದುದು. ಸಾರಾಂಶ, ಈ ಎಲ್ಲ ಮಾಹಿತಿಗಳ ಕೊಳಚೆಯಲ್ಲಿ ನಾವು ನಮ್ಮದೇ ನೆಲದಲ್ಲಿ ಪರಕೀಯರಾಗುತ್ತೇವೆ. ಇದರಿಂದಾಗಿ ಏನಾದರೂ ನಡೆಯುತ್ತಲೇ ಇರುತ್ತದೆ. ಇದರಿಂದಾಗಿಯೇ ಹುಸಿ ರಾಷ್ಟ್ರೀಯತೆ ಹೆಚ್ಚೆಚ್ಚು ಮೆರೆಯಿಸುವ ಪ್ರಕಾರ ಆರಂಭಗೊಳ್ಳುತ್ತದೆ. ನಮ್ಮನ್ನು ಬಿಟ್ಟು ಉಳಿದ ಸಮಾಜ ರಾಷ್ಟ್ರಪ್ರೇಮ ವ್ಯಕ್ತಪಡಿಸುವದರಲ್ಲಿ ಹಿಂದೆ ಬೀಳುತ್ತಾರೆ, ಎಂಬ ಭ್ರಮೆ ಆಗಾಗ ನಿರ್ಮಿಸಬೇಕಾಗುತ್ತದೆ. ನಾನು ನನ್ನ ಮಗನನ್ನು ಕಂಪ್ಯೂಟರ್ ಕ್ಲಾಸಿಗೆ ಕಳಿಸೋದು ಮತ್ತು ಬಡ ಬರಪ್ರದೇಶದ ಜನ ತಮ್ಮ ಅಶಿಕ್ಷಿತ ಮಕ್ಕಳನ್ನು ಸೈನಿಕ ಭರ್ತಿಗೆ ಕಳಿಸೋದು. ನಾನು ಜೋರಾಗಿ ರಾಷ್ಟ್ರಗೀತೆ ಹಾಡಿದರೆ ಸಾಕು ನನ್ನ ರಾಷ್ಟ್ರೀಯತೆ ಸಿದ್ಧವಾಗುತ್ತದೆ. ಬಡ ಸೈನಿಕ ಅಲ್ಲಿ ಯುದ್ಧದಲ್ಲಿ ಕೊಲ್ಲಲ್ಪಟ್ಟರೆ 'ಜರಾ ಆಂಖೋಮೆ ಭರಲೋ ಪಾನಿ' ಎಂದು ಗದ್ಗದಿತ ಸ್ವರದಲ್ಲಿ ಹಾಡಿ ಪಾರಾಗೋದು. ರಾಷ್ಟ್ರೀಯತೆಯ ಇಂಥ ಕೆಥಾರ್ಸಿಸ್‌ನ ಅರಿವು ಮಾಡಿಕೊಡುವ ದೊಡ್ಡ ದೊಡ್ಡ ಸಭೆ-ಸಮಾರಂಭಗಳ ಆಯೋಜನೆ, ಢೋಂಗಿ ಪದ್ಧತಿಯ ರಿವಾಜು ನಮ್ಮಲ್ಲಿ ಬೆಳೆಯುತ್ತಿದೆ. ನಮ್ಮ ಸ್ವಾರ್ಥಿ ವೃತ್ತಿಗೆ ರಾಷ್ಟ್ರೀಯತೆಯ ಕಲಾಯಿಯನ್ನು ಆಗಾಗ ನೀಡುವದು ಅಗತ್ಯವಾಗಿಬಿಟ್ಟಿದೆ. ತಮ್ಮ ಸನಿಹದ ಕೇಂದ್ರದೊಂದಿಗೆ ಬಿಗಿದು ಕೊಳ್ಳುವ ಅಗತ್ಯತೆಯು ಇಂಥ ದೂರದ ರಾಷ್ಟ್ರೀಯತೆಯ ಕಲ್ಪಿತ ಕೇಂದ್ರದೊಂದಿಗೆ ಬಿಗಿದುಕೊಂಡಿದ್ದರಿಂದ ಇಲ್ಲವಾಗಿಬಿಡುತ್ತದೆ. ಒಟ್ಟೂ ರಾಷ್ಟ್ರೀಯತೆಯು ಈ ಜಾಗತಿಕತೆಯದ್ದೇ ಬೆಂಬಲವಾಗಿದೆ. ಅದನ್ನು ಸಂಭಾಳಿಸಿಕೊಳ್ಳುವಂತಹದು ದೇಶೀಯತೆ. ಹೇಗೆ ದೇಶೀಯತೆಯು ಜಾಗತಿಕತೆಯನ್ನು ನಿಷ್ಠುರವಾಗಿ ವಿರೋಧಿಸುತ್ತದೋ, ಹಾಗೆ ರಾಷ್ಟ್ರೀಯತೆ ವಿರೋಧಿಸುವುದಿಲ್ಲ. ರಾಷ್ಟ್ರೀಯತೆ, ಜಾಗತಿಕತೆ – ಎಂಬ ಪರಿಕಲ್ಪನೆಯು ಜನರನ್ನು ವಿಭಾಗಿಸುವ exclusive ವಿರೋಧ ನಿರ್ಮಿಸುವಂತಹದು. ನಾವು ಒಪ್ಪಿಕೊಳ್ಳುವ ರಾಷ್ಟ್ರೀಯತೆಯಲ್ಲಿ 'ಉಳಿದ' ಜನರನ್ನು ಹೊರತುಪಡಿಸಲಾಗಿರುತ್ತದೆ. ದೇಶದ ಕೆಲ ಸಮೂಹಗಳ ರಾಷ್ಟ್ರೀಯತೆ ಬಗೆಗೆ ಸಂಶಯ ವ್ಯಕ್ತಪಡಿಸಬಹುದಾಗಿದೆ. 'ಉಳಿದ'ವರೊಂದಿಗೆ ವೈರತ್ವ ಎಂಬ ಭಾವನೆಯ ಮೇಲೆ ರಾಷ್ಟ್ರ ನಿರ್ಮಾಣಗೊಂಡಿರುತ್ತದೆ. ಕೊನೆಪಕ್ಷ ಇತರರ ದ್ವೇಷದ, ಮತ್ಸರದ ಭಾವನೆಯು ಪ್ರತ್ಯಕ್ಷದಲ್ಲಿ ರಾಷ್ಟ್ರೀಯತೆಯ ಕಾರ್ಯ ಮಾಡುತ್ತಿರುತ್ತದೆ. ಯುರೋಪ್ ದೇಶದಲ್ಲಿಯ ರಾಷ್ಟ್ರೀಯತೆ ಕ್ರಮೇಣ ಕಡಿಮೆಯಾಗತೊಡಗಿದೆ ಎಂದೆನ್ನಲಾಗುತ್ತಿದೆ.

ಬಹಳ ವರ್ಷ ಇಂದು ನಮ್ಮ ದೇಶದಲ್ಲಿ ಯಾವುದನ್ನು 'ಹಿಂದುತ್ವ' ಎಂದು ಭಾವಿಸಲಾಗುತ್ತಿದೆಯೋ ಅದರ ಸುಳಿವೂ ಇರಲಿಲ್ಲ. ಆದರೆ 'ಹಿಂದೂ' ಎಂಬ ಅಸ್ಮಿತೆಯು ೧೮೭೧ರ ನಂತರ ಯಾವಾಗ ಆಂಗ್ಲರು ಖಾನೇಶುಮಾರಿ (ಮನೆ-ಜನಗಣತಿ) ಆರಂಭಿಸಿದರೋ ಅಂದಿನಿಂದ ಬಳಕೆಗೆ ಬಂತು. ಅನಂತರ ನಾವು ಹಲವು ಜಾತಿಗಳಾಗಿ ಒಡೆದೆವು. ೧೮೭೧ರಲ್ಲಿ ನಮ್ಮ ಹೆಗಲೇರಿ ಕೂತ ಭೂತವು ದೇಶದ ಸಾಮಾಜಿಕವನ್ನು ಹ್ರಾಸಗೊಳಿಸಲಾರಂಭಿಸಿತು. ಈ ಮೊದಲು ಅಸ್ತಿತ್ವದಲ್ಲಿ ಇಲ್ಲದ ವಿವಿಧ ಜಾತಿ-ಜಮಾತಿಗಳನ್ನು ನಮ್ಮ ಮೇಲೆ ಹೇರಲಾಯಿತು. ಸುಮಾರು ೧೯೧೧ರವರೆಗೆ 'ಮರಾಠಾ' ಎಂಬ 'ಜಾತಿ' ಇರಲಿಲ್ಲ. ಈ ಹಿಂದೆ ಮರಾಠಾ ಎಂದರೆ ಎಲ್ಲ ಮರಾಠಿ ಮಾತನಾಡುವವರು. ಮರಾಠರೆಂದರೆ ಬ್ರಾಹ್ಮಣ; ಶಿಂಧೆ, ಹೋಳ್ಕರ, ಪ್ರಭು, ಶೆಣವಿ, ಕೋಳಿ (ಅಂಬಿಗ), ಪೇಶವೆ – ಇವರೆಲ್ಲರನ್ನು ಉದ್ದೇಶಿಸಿ ಹೇಳಲಾಗುತ್ತಿತ್ತು. ಮಹಾರಾಷ್ಟ್ರದಲ್ಲಿರುವರೆಲ್ಲರೂ ಮರಾಠರೇ. ಹೀಗೆ ೧೮೮೧ರಲ್ಲಿ ಜ್ಯೋತಿರಾವ್ ಫುಲೆಯವರೂ ಸಹ ಸ್ವಂತಕ್ಕೆ 'ಖಾಸಾ ಮರಾಠಾ' ಎಂದುಕೊಳ್ಳುವವರಿಗೂ ಹೇಳಿದರು. ೧೯೧೧ರ ಸುಮಾರಿಗೆ ಪ್ರಾಯಶಃ ಕೊಲ್ಹಾಪುರದಿಂದ



## ಅಕ್ಕನ ಕೈಹಿಡಿದು

ತಂಗಿ ಅಕ್ಕನೊಂದಿಗೆ
ಸವುಡಿಲ್ಲದ ರಸ್ತೆ ದಾಟುವಳು
ಹಿಡಿದ ಕಿರು ಬೆರಳ
ಕೊಂಡಿ ಸಡಲಿಸದೆ

ಹೊಗೆ ಬಿಡುವ ವಾಹನಗಳು
ಅವಳ ಬೆದರಿಸಿವೆ
ಎದ್ದ ಧೂಳು ಮುಖವನು ಕವಿದಿದೆ
ಖುತುವೊಂದು ಸದ್ದಿಲ್ಲದೆ
ಕಣ್ಣ ಮರೆಗೆ ಸರಿದಿದೆ

ತೋರಿಸಿದಾಳೆ ತಾಯಿ
ಮುರಿಯಬಾರದ ನಿಯಮಗಳ
ಮನೆಯಲ್ಲೇ ನಡೆಯಬೇಕು ಎಡಕ್ಕೆ
ರಸ್ತೆಯನು ತಡೆದು ದಾಟಬೇಕು.

ದೇಹವನು ತಾಕಿದಂತೆ ಹಾದ ವಾಹನಕ್ಕೆ
ಹೆದರಿ ಅಕ್ಕನ ಕಾಲುಗಳ ಅಪ್ಪುವ
ಅವಳ ಮನೆಯ ಸೊಲ್ಲು
ಇಲ್ಲಿ ಅಡಗಿದೆ

ನೋಡುತ್ತ ನಡೆಯುವಳು
ದಾರಿಯಲ್ಲಿನ ಹೊಸಬರ ಕತ್ತೆತ್ತಿ
ಕಂಡದ್ದಕ್ಕೆಲ್ಲ ಬೆರಳು ತೋರಿ
ಅದೇನು ಅದೇನು ಎಂದೆಲ್ಲ
ಕಾಡುವ ಅವಳನು ಹೆದರಿಸಿದಾಳೆ ಅಕ್ಕ
ಕಣ್ಣಗಲಿಸಿ-ಮತ್ತೆ ತನ್ನೊಂದಿಗೆ
ಬಂದರೆ ನೋಡೆಂದು

ಇಲ್ಲ ಇಲ್ಲ ಎಂದು ಬೇಡಿದ
ತಂಗಿಯ ದಣಿದ ಸಣ್ಣ ದನಿ
ಸಂದಣಿಯಲ್ಲಿ ಕಳೆದಿದೆ

ಮಾರನೆ ದಿನ ತಂಗಿಯೇ ಮುಂದಾಗಿ
ಅನುಮಾನಿಸುತ್ತ ನಿಂತ
ಅಕ್ಕನ ಕೈ ಹಿಡಿದು
ರಸ್ತೆ ದಾಟಿಸಿದಂತೆ ತೋರುವಳು

**ಸಂದೀಪ ನಾಯಕ**
ಜಿ. ಸಿ. ಕಾಲೇಜು ಹತ್ತಿರ, ವಂದಿಗೆ ಅಂಚೆ,
ಅಂಕೋಲ - ೫೮೧ ೩೧೪

ಮರಾಠಾಕರಣದ ಅಥವಾ ಮರಾಠಾ ಏಕೀಕರಣದ ಚಳುವಳಿ ಆರಂಭಗೊಂಡಿತು. ಉಚ್ಚ ವರ್ಗದ ಕೃಷಿಕರು (ಕುಣಬಿ) 'ಮರಾಠಾ' ಎಂಬ ಒಂದು ಸ್ವತಂತ್ರ ಜಾತಿಯನ್ನೇ ನಿರ್ಮಿಸಿದರು. ಇಲ್ಲಿ ಬಡ ದುಡಿವ ಕುಣಬಿಗಳದ್ದಂತೂ ಶಾಶ್ವತ ಹಾನಿಯಂತೂ ಆಯಿತು. ಅಲ್ಲದೆ ಇತರ ಹಲವು ಕುಣಬಿ ಸದೃಶ್ಯ ಜಾತಿಯವರು ಕೆಳವರ್ಗದ ಅ-ಮರಾಠರಾಗಿ ಉಳಿದರು. ಈ ಹಿಂದೆ ಕುಂಬಾರ, ಬಡಿಗ, ಕ್ಷೌರಿಕ – ಮುಂತಾದವರೆಲ್ಲ ಒಂದೆಡೆ ಇದ್ದರು. ಅಂಥವರಲ್ಲಿ ಕೆಲವರು ಮರಾಠರಾದರೆ, ಉಳಿದವರು ಅ-ಮರಾಠರಾದರು. ಬ್ರಾಹ್ಮಣರ ವ್ಯಾಪಕ ರಾಷ್ಟ್ರೀಯ ವರ್ಗ ಸಂಘಟನೆಗೆ 'ಚೆಕ್' ಕೊಡಲು ಅಭಿಮಾನದಿಂದ ನಿರ್ಮಾಣ ಗೊಂಡು ಜನ್ಮಸಿದ್ಧ ಮರಾಠಾ ಎಂದುಕೊಳ್ಳುವ ಈ ದೊಡ್ಡ ಜಾತಿಯು ರಾಜಕೀಯ ಕ್ಷೇತ್ರದಲ್ಲಿ ನಿರ್ಮಾಣಗೊಂಡಿದ್ದು ಈ ಪ್ರಕ್ರಿಯೆಯ ದೊಡ್ಡ ಪರಿಣಾಮ ಎಂದೆನ್ನಬಹುದು.

೧೮೬೧ರ ಹಿಂದಿನ ಹಿಂದೂಸ್ತಾನವನ್ನು ನೀವು ಗಮನಿಸಿದರೆ, ಹೆಚ್ಚಿನ ಬೆಳಕನ್ನು ಕಾಣುತ್ತೇವೆ. ಉದಾಹರಣೆಗಾಗಿ – ಮಹಾದಜಿ ಶಿಂಧೆ. ಎಲ್ಲ ಬ್ರಾಹ್ಮಣ ಪೇಶ್ವೆಯರು ಮುಸಲ್ಮಾನಿ ಸತ್ತೆಯನ್ನು ಒಪ್ಪಿಕೊಳ್ಳುತ್ತಿದ್ದರು. ಅಷ್ಟೇ ಅಲ್ಲ ಮಹಾದಜಿ ಶಿಂಧೆಗೆ ಬಾದಶಹಾ ಬರೇ ಡಿಗ್ರಿಗಳನ್ನು (ವಕೀಲ-ಇ-ಮುತಲಕ) ನೀಡಿ ಖುಷಿ ಪಡಿಸುತ್ತಿದ್ದರು. (ಯುನಿವರ್ಸಿಟಿ ಕೊಡುವ ನಿರುಪಯೋಗಿ ಡಿಗ್ರಿಗಳಂತೆ). ಲೂಟಿ ಮಾಡುವ ಮರಾಠರಿಗೆ ಕೊಡಲು, ಖುಷಿಪಡಿಸಲು ಈ ಬಾದಶಹಾ ಸದಾ ಸಿದ್ಧರಾಗಿರುತ್ತಿದ್ದರು. (ರಂಗನಾಥ ತಿವಾರಿ ಬೇಗಂ ಸಮರೂನಲ್ಲಿ ಹೇಳಿದಂತೆ ಮೊಗಲ ಬಾದಶಹಾರ ಬಳಿ ಕೊಡಲು ಬೇರೆ ಏನೂ ಇರುತ್ತಿರಲಿಲ್ಲ). ಹತ್ತಿಪ್ಪತ್ತು ಸಾವಿರ ರೂಪಾಯಿ ಕೊಡುವದು ಸಹ ತೀರಾ ದುಸ್ತರವಾಗಿತ್ತು. ಹೀಗಾಗಿ ವಕೀಲ-ಇ-ಮುತಲಕ ನೀಡಿದರೆ ಅವರಿಗೂ ಅಭಿಮಾನ, ಇವರಿಗೂ ಕಿರಿಕಿರಿ ತಪ್ಪಿಸಿಕೊಂಡ ಸಮಾಧಾನ. ಆಂಗ್ಲರಿಗಿಂತ ಮೊದಲು ಭಾರತ ಹೇಗಿತ್ತು ಎಂಬುದನ್ನು ಹೇಳುವ ಪ್ರಯತ್ನ ನಾನು ಮಾಡುತ್ತಿದ್ದೇನೆ. ೧೮೫೭ರವರೆಗೆ ತಾತ್ಯಾಟೋಪಿ, ಲಕ್ಷ್ಮೀಬಾಯಿ – ಇವರೆಲ್ಲರಿಗೆ ಬಹಾದ್ದೂರ ಬಾದಶಹಾನೇ ಇದ್ದ. ಹಿಂದೂ ಮುಸ್ಲಿಂ ತೊಡಕು ಇದ್ದಿರಲಿಲ್ಲ. ನಾವು ಅಸ್ಮಿತೆಯನ್ನೇ ಹುಡುಕಲು ಹೊರಟರೆ, ನಮ್ಮ ಅಸ್ಮಿತೆಯು ಆಂಗ್ಲರಿಗಿಂತ ಮೊದಲು exclusive, ಬೇರೆ ಹಿಂದೂ ಎಂದಿರಲಿಲ್ಲ. ಅಂದರೆ ಅದಕ್ಕಿಂತ ಮೊದಲು ನಾವು ಹಿಂದೂಗಳನ್ನು ಮೇನಸ್ಟ್ರೀಮ್ ಎಂದು ಭಾವಿಸುತ್ತಿರುವುದು ಸರಿಯಲ್ಲ. ನಮ್ಮ ಎಲ್ಲರಿಗಿಂತ ದೊಡ್ಡ ಚಕ್ರವರ್ತಿ ಅಶೋಕ ಮತ್ತು ಅಕಬರ. ಇವರಿಬ್ಬರೂ ಹಿಂದೂಗಳಲ್ಲ. ನಿಜವಾದ ಇತಿಹಾಸ ಗಮನಿಸಿದರೆ, ಶಹಾಜಿಯೇ ಮರಾಠಾ ಸಾಮ್ರಾಜ್ಯ ಸ್ಥಾಪನೆ ಮಾಡಿದ್ದು ಎಂದೆನಿಸುತ್ತದೆ. ಶಹಾಜಿಯ ಹಿಂದೆ ಹೋಗುವುದು ಸಾಧ್ಯವಾಗಲಾರದು. ಯಾಕೆಂದರೆ ಶಹಾಜಿಗಿಂತ ಮೊದಲು ಮರಾಠಿ ಸಾಮ್ರಾಜ್ಯದ ಕರ್ತಾ ಮಲಿಕ ಅಂಬರನಾಗಿದ್ದ. ಮಲಿಕನೇ ಮೊಟ್ಟ ಮೊದಲು ಮರಾಠರಿಗೆ ರಾಷ್ಟ್ರೀಯತ್ವದ ಅರಿವು ತಂದುಕೊಟ್ಟ. ಸಾರಾಂಶ, ಹಿಂದೂ ಅಸ್ಮಿತೆಯು ಅದೆಷ್ಟೇ ಮಹತ್ವದ್ದಾಗಿರಲಿ, ಅದು ಈ ದೇಶದ ಏಕೈಕ ಅಸ್ಮಿತೆಯಲ್ಲ, ಮಧ್ಯವರ್ತಿಯೂ ಆಗಿರಲಿಲ್ಲ ಎಂಬುದನ್ನು ನಾವಿಂದು ಆಗ್ರಹಪೂರ್ವಕ ಮಂಡಿಸಬೇಕಿದೆ. ಮಹಾರಾಷ್ಟ್ರದಲ್ಲಂತೂ ಅದು ಹಾಗಿರುವದಂತೂ ಸಾಧ್ಯವೇ ಇಲ್ಲ. ರಾಷ್ಟ್ರೀಯತೆ ಎಂಬ ಪರಿಕಲ್ಪನೆಯೇ ತಪ್ಪು. ಯುರೋಪದ ಪದ್ಧತಿಯಿಂದ ಒಂದೇ ಧರ್ಮ, ಒಂದೇ ಸಂಸ್ಕೃತಿ, ಒಂದೇ ಭಾಷೆ ಎಂದೊಪ್ಪಿಕೊಂಡಿರುವುದರಿಂದ ನಾವಿಂದು ಈ ರಾಷ್ಟ್ರೀಯತೆಯ ತಿರುಗಣೆಯಲ್ಲಿ ಸಿಲುಕಿದ್ದೇವೆ.

ನಮ್ಮ ಪ್ರಗತಿಯ ಪರಿಣಾಮ ಸಹ ಸಂಪೂರ್ಣವಾಗಿ ಪಾಶ್ಚಾತ್ಯ, ವಸಾಹತುವಾದಿಯಾಗಿದ್ದರಿಂದ ನಾವು ಆಧುನಿಕತೆಗೆ ದೇಶೀಯ ಪರಿಣಾಮ ನೀಡುವದಾಗಲಿಲ್ಲ. ಜಾಗತೀಕರಣದ್ದೂ ಸಹ ಖಾಸಾ ಭಾರತೀಯ ಇಲ್ಲವೇ ಖಾಸಾ ದೇಶೀಯ ವರ್ಲ್ಡ್ ವ್ಯೂ ಇರಬೇಕಾಗುತ್ತದೆ. ಈ ಕ್ಷೇತ್ರದ ಬಗೆಗೆ ಉದಾರಮತ ಹೊಂದಿದವರು ಭಾವಿಸುವದೇನೆಂದರೆ, ಇದೊಂದು ಬಗೆಯ ಆರ್ಥಿಕ ಲಿಬರೇಶನ್ ಆಗಿದೆ, ಎಲ್ಲರಿಗೂ ಇಲ್ಲಿ ಅವಕಾಶವಿದೆ ಎಂದು. ಆದರೆ ಇದು ಸತ್ಯವಲ್ಲ, ತೀರಾ ಕೆಲವರಿಗೆ ಮಾತ್ರ ಅವಕಾಶ ಸಿಗುತ್ತದೆ – ಯಾರ ಬಳಿ ಇನ್ಫ್ರಾಸ್ಟ್ರಕ್ಚರ್ ಇದೆಯೋ, ಅವರಿಗೇ ಇದರಲ್ಲಿ ಅವಕಾಶ ಸಿಗುತ್ತದೆ. ಬಡವರಿಗಲ್ಲ, Semi-skilled ಜನರಿಗಂತು ಪ್ರವೇಶವೂ ಸಿಗುವದಿಲ್ಲ. ಅದು ಎಷ್ಟೇ ಉದಾರ ದೃಷ್ಟಿಕೋನ ಹೊಂದಿದ್ದರೂ, ಕೊನೆಗೆ ಅದರ ಹಿಂದೆ ಎರಡೋ-ಮೂರೋ ಈ ಹಿಂದಿನ ವಸಾಹತುಕೋರ ರಾಷ್ಟ್ರೀಯ ಶಕ್ತಿಯಿರುತ್ತದೆ. ಅದು ಶೋಷಣೆಗಾಗಿಯೇ ಯುನಿಯನ್ ಕಾರ್ಬೈಡ್ ಅಥವಾ ಎನ್ರಾನ್ ತನ್ನ ಲಾಭಕ್ಕಾಗಿ ಮಾಡಿದ ಭಾನಗಡಿಯಂತೆ ರಾಜಕಾರಣಿಗಳಿಗೆ ಹಣ ಸರಿಸಿ ತನ್ನ ಭವಿತವ್ಯ ರಕ್ಷಿಸಿಕೊಳ್ಳುವದು. ಇದರಿಂದಾಗಿ ನಮ್ಮಲ್ಲಿಯ ರಾಜಕೀಯ ವ್ಯವಸ್ಥೆಯು ಹದಗೆಡುತ್ತಲೇ ಹೋಗುತ್ತದೆ. ಆದರೆ ಜಾಗತಿಕ ಸಿಸ್ಟಮ್ ಮಾತ್ರ ಸುಧಾರಿಸುತ್ತ ಹೋಗುತ್ತದೆ. ಅದರ ಹಿಂದೆ ಒಂದು ವಿಶಾಲ ಇತಿಹಾಸ ಸಿದ್ಧಗೊಳ್ಳುತ್ತದೆ. ಆದರೆ ನೀವದನ್ನು ಸೂಕ್ಷ್ಮ ಹಾಗೂ ಕಠೋರವಾಗಿ ಅವಲೋಕನ ಮಾಡಿದರೆ ಅವರಲ್ಲಿ ವ್ಯವಸ್ಥಿತವಾಗಿ ಅಸ್ತಿತ್ವದಲ್ಲಿದ್ದ ಈಗಿನ ಮೂಲದ ದೇಸಿ ಸಾಂಸ್ಕೃತಿಕ, ರಾಜಕೀಯ ಮತ್ತು ಉದರ ನಿರ್ವಹಣೆಯ ಸಾಧನ ಸಂಬಂಧದ – ಕೃಷಿ ಸಂಬಂಧಪ ಉಪ ವ್ಯವಸ್ಥೆಯನ್ನೇ ಬೇರು ಸಹಿತ ಕಿತ್ತೊಗೆಯುವದೇ ಈ ಪ್ರಕ್ರಿಯೆಯ ಫಲಶ್ರುತಿಯಾಗಿರುತ್ತದೆ. ಅಂದರೆ ಜಾಗತೀಕರಣವು ಅದೆಷ್ಟೇ ಮಧುರವಾದ ಕನಸಾಗಿದ್ದರೂ, ಸ್ಥಾನಿಕ ದೇಸಿ ವ್ಯವಸ್ಥೆ-ಸಂಸ್ಥೆಯನ್ನು ಕೊಲ್ಲುವುದರಲ್ಲೆ ಈ ಬಹುರಾಷ್ಟ್ರೀಯ ಕಂಪನಿಯ ಭವಿತವ್ಯ ಅಡಗಿದೆ. ಇದೆಲ್ಲ ಅಲಿಖಿತ ಸ್ವರೂಪದಲ್ಲಿರುತ್ತದೆ.

ತಮ್ಮನ್ನು ಜಾಗತೀಕರಣದ ಅಧ್ವರ್ಯು ಎಂದುಕೊಳ್ಳುವ, ಆ ದೇಶದಲ್ಲಿಯ ಭಾಷೆಯ ಸ್ಥಿತಿಯನ್ನು ಗಮನಿಸೋಣ. 'Atlas of the world languages, Dead languages, Red Book' – ಈ ಗ್ರಂಥದಲ್ಲಿಯ ಅಂಕಿ-ಅಂಶಗಳನ್ನು ಗಮನಿಸಿದರೆ ಉತ್ತರ ಅಮೆರಿಕೆಯಲ್ಲಿ ಕೆನಡಾ ಮತ್ತು ಯುನೈಟೆಡ್ ಸ್ಟೇಟ್ಸ್‌ದಲ್ಲಿ ನೂರು ವರ್ಷಗಳ ಹಿಂದೆ ೧೮೭ ಭಾಷೆಗಳಿದ್ದವು – ರೆಡ್ ಇಂಡಿಯನ್ ಎಸ್ಕಿಮೋಗಳನ್ನು ಹಿಡಿದು. ಇಂದು ಬರೇ ೫೮ ಉಳಿದಿವೆ; ಉಳಿದವು ಅಳಿದುಹೋದವು. ಅಲಾಸ್ಕಾದಲ್ಲಿ ಇಪ್ಪತ್ತು ಭಾಷೆಗಳಲ್ಲಿ ಎರಡೇ ಉಳಿದವು. ಇದು ಜಾಗತೀಕರಣ ಮಾಡಬೇಕೆಂದಿರುವ ಬಿಳಿ ಜನರ ಕಾರ್ಯ ವೈಖರಿ. ಲ್ಯಾಟಿನ್ ಅಮೆರಿಕಾದಲ್ಲಿ ಯುರೋಪದ ಸಾಂಸ್ಕೃತಿಕ ಒತ್ತಡ ಇಂದಿಗೂ ಇದೆ. ಅಲ್ಲಿ ೪೦೦ ಭಾಷೆಗಳಿದ್ದವು. ಈಗ ಕೇವಲ ೧೦೮ ಉಳಿದಿವೆ. ಮುಂದಿನ ಇಪ್ಪತ್ತು ವರ್ಷಗಳಲ್ಲಿ ಅವು ಇಲ್ಲವಾಗುತ್ತವೆ, ಎಂಬ ಭೀತಿಯಿದೆ. ಆಸ್ಟ್ರೇಲಿಯಾ, ಇಂಗ್ಲೆಂಡದಂತಹ ಕೆಲ ರಾಷ್ಟ್ರಗಳು ಅಮೆರಿಕೆಯ ತಾಳಕ್ಕೆ ತಕ್ಕಂತೆ ಕುಣಿಯುತ್ತವೆ. ಒಂದೇ ಬಗೆಯ ಸಾಂಸ್ಕೃತಿಕ ಧೋರಣೆಯನ್ನು ಈ ದೇಶಗಳೆಲ್ಲ ಪಾಲಿಸುತ್ತವೆ. ಆಸ್ಟ್ರೇಲಿಯದಲ್ಲಿ ಗಿರಿಜನರ ೫೦೦ ಭಾಷೆಗಳಿದ್ದವು, ಅವುಗಳಲ್ಲಿ ೫೫ ಉಳಿದಿವೆ. ಇಂಗ್ಲೆಂಡಿನಲ್ಲಂತೂ ಇಂಗ್ಲಿಷ್ ಹೊರತು ಪಡಿಸಿ ಉಳಿದ ಯಾವ ಭಾಷೆಯೂ ಉಳಿದಿಲ್ಲ. ವೇಲ್ಸ್ ಉಸಿರು ಹಿಡಿದುಕೊಂಡು ನಿಂತಿದೆ. ಕೆಲಮಟ್ಟಿಗೆ ಸ್ಕಾಟಿಶ್ ಜೀವ ಹಿಡಿದುಕೊಂಡಿದೆ. ಗೆಲಿಕ್, ಐರೀಶ್ ಗೆಲಿ, ಬ್ರಿಟನ್ ಗೆಲಿ, ಕಾರ್ನಿಶ್ ಎಂದೋ ಸತ್ತವು. ಮ್ಯಾಕ್ಸ್ ಇಪ್ಪತ್ತು ವರ್ಷಗಳ ಹಿಂದೆ ಇಲ್ಲವಾಯಿತು. ಗೆಲಿಕ್ ಸ್ಕಾಟಿಶ್‌ನಂತಹ ಚಿಕ್ಕ ಭಾಷೆ ಮೊದಲೇ ಸತ್ತವು. ಕಳೆದ ಖಾನೇಶುಮಾರಿಯ ಪ್ರಕಾರ ೧೬೫೨ ಭಾಷೆ ಜೀವಂತವಾಗಿ ಉಳಿದಿತ್ತು. ಹ್ಯೂಮನ್ ರೈಟ್ಸ್ ರೆಕಾರ್ಡಿನಲ್ಲಿ ನೀವು ನಿಮ್ಮ ದೇಶದ ಎಷ್ಟು ಭಾಷೆಗಳನ್ನು ಕೊಂದಿರಿ – ಎಂಬುದನ್ನು ಗಮನಿಸಬೇಕಾಗುತ್ತದೆ.

ಕೊನೆಗೆ ನಾವು ಗಮನಿಸಬೇಕಾದ ಮತ್ತೂ ಒಂದು ಅಂಶವೆಂದರೆ, ನೀವೆಷ್ಟೇ ವಿರೋಧಿಸಿದರೂ ಜಾಗತೀಕರಣ ಬರುವದಿದ್ದರೆ ಬಂದೇ ಬರುತ್ತದೆ. ಆದರೆ ನಮ್ಮ ನೈತಿಕ ಹಕ್ಕೆಂದರೆ, ಅದನ್ನು ವಿರೋಧಿಸುವುದು. ಒಬ್ಬನೇ ಮನುಷ್ಯ ವಿರೋಧಿಸಿದರೂ ಆ ಸರಪಳಿ ಮುಗಿಯುತ್ತದೆ, ಅದು ಮುಂದುವರಿಯುವದಿಲ್ಲ. ಕೆಲವರು ನನ್ನೆದುರು ಜಾಗತೀಕರಣವನ್ನು ಹಾಡಿ ಹೊಗಳಬಹುದು. ಆದರೆ ನನ್ನ ನಂತರ ಆ ಹಾಡು ಮುಂದುವರಿಯುವದಿಲ್ಲ. ನಾನು ಗಟ್ಟಿಯಾಗಿ ನಿಂತರೆ ಅದರಾಚೆಗೆ ಅದರ ತರ್ಕ ಹೋಗಗೊಡುವದಿಲ್ಲ ಎಂದು ಎಲ್ಲರೂ ನಿರ್ಧರಿಸಿದರೆ ಪ್ರಾಯಶಃ ನಮ್ಮ ದೇಶಿ ಭಾಷೆಯನ್ನು ಉಳಿಸಿಕೊಳ್ಳಬಹುದು. ಜತೆಗೆ ಚಿಕ್ಕ-ಚಿಕ್ಕ ದೇಸಿ ಸಂಸ್ಕೃತಿಯನ್ನೂ ಉಳಿಸಿಕೊಳ್ಳಬಹುದು – ಯಾವುದನ್ನು ನಾವು ಬಹುಸಂಸ್ಕೃತಿ ಎನ್ನುತ್ತೇವೋ ಅದನ್ನು. ಇದು ನಮ್ಮ ವೈಭವ, ವಾರಸಾ, ಪರಂಪರೆಯಾಗಿದೆ. ಯುನೆಸ್ಕೋದ ಹ್ಯೂಮನ್ ರೈಟ್ಸ್‌ನವರು ಇಂಥದೊಂದು ಸ್ಪರ್ಧೆಯಿಡಬೇಕು. ಈ ಕಲಮಿನಲ್ಲಿ ಸಹ ನಮ್ಮ ದೇಶ ಇಂಗ್ಲೆಂಡ್ ಅಮೇರಿಕಾಗಿಂತ ಮೇಲೇರುತ್ತದೆ. ಆದರೆ ಭಾಷೆಯನ್ನು ಇಲ್ಲವಾಗಿಸುವ ಈ ಜನರೇ ಯುನೆಸ್ಕೋದಲ್ಲಿ ಸ್ಪರ್ಧೆ ಇಡುವವರು. ಹೀಗಾಗಿ ಲಾಭದಾಯಕವಲ್ಲದ ಇಂಥ ಸ್ಪರ್ಧೆಯನ್ನು ಅವರು ಸೇರಿಸಿಕೊಳ್ಳಲಿಕ್ಕಿಲ್ಲ. ಬಹುಭಾಷಿಕತೆಗೂ, ಬಹುಸಾಂಸ್ಕೃತಿಕತೆಗೂ ಮತ್ತು ಮಾನವ ಹಕ್ಕಿಗೂ ಏನು ಸಂಬಂಧವಿದೆ ಎಂದು ಅವರು ಪ್ರಶ್ನಿಸಬಹುದು. ಯಾರು ಸಾಯುತ್ತಾರೋ ಸಾಯಲಿ. ನಾವು ನಮ್ಮ ಇಂಗ್ಲಿಷ್ ಭಾಷೆ ಉಳಿಸಿಕೊಂಡರಾಯಿತು. ಇಂದು ಎಂಥ ಪ್ರತಿಭಾವಂತ ಡಾಕ್ಟರ್, ಇಂಜನಿಯರ್ ಅಮೇರಿಕೆಗೆ ಹೋಗಬೇಕೆಂದರೆ ಅವನು ಇಂಗ್ಲಿಷ್ ಪರೀಕ್ಷೆ ಕೊಡಬೇಕಾಗುತ್ತದೆ. ಅವರಿಗಿಂತಲೂ ನಾವು ಚೆನ್ನಾಗಿ ಮಾತಾಡುತ್ತೇವೆ ಎಂದಂದುಕೊಂಡರೂ ಪರೀಕ್ಷೆ ಕೊಡದೆ ಒಳಗೆ ಸೇರುವಂತಿಲ್ಲ. ಇಷ್ಟು ಕಠೋರವಾದ ಭಾಷಿಕ ಧೋರಣೆಯನ್ನು ಈ ತಥಾಕಥಿತ ಜಾಗತೀಕರಣ ನೀಡುವ ಅಲ್ಲಿಯ ಎಲ್ಲ ದೇಶಗಳಲ್ಲಿ ಅನ್ವಯಿಸಲಾಗುತ್ತದೆ. ನಾವು ಮಾತ್ರ ಉದಾರಮತದವರಾಗಿ ಎಲ್ಲ ಭಾಷೆಗಳನ್ನು ಸಂಭಾಳಿಸುತ್ತೇವೆ. ಹೀಗಾಗಿ ಕೆಟ್ಟ ದಿನಗಳು ಬಂದಿವೆ. ಸ್ವತಃ ಮಹಾರಾಷ್ಟ್ರದಲ್ಲಿ ಮುಂಬೈ ಕಾರ್ಪೋರೇಶನ್ ಶಾಲೆಯಲ್ಲಿ ಹದಿನೈದು ಭಾಷೆಗಳ ಪಠ್ಯಪುಸ್ತಕಗಳನ್ನು ಪ್ರಕಟಿಸಲಾಗುತದೆ. ಹದಿನೈದು ಭಾಷಾ ಮಾಧ್ಯಮಗಳ ಸ್ವತಂತ್ರ ಶಾಲೆಗಳಿವೆ. ಈ ಬಡ ದೇಶದಲ್ಲಿ ಇಷ್ಟೆಲ್ಲ ಭಾಷೆಗಳನ್ನು ಸಂಭಾಳಿಸುವದೆಂದರೆ ಎಂಥ

ಸಾಂಸ್ಕೃತಿಕ ಉದಾರತನವಲ್ಲವೇ? ನ್ಯೂಯಾರ್ಕದಲ್ಲಿ ಎಷ್ಟು ಭಾಷೆಗಳನ್ನು ರಕ್ಷಿಸುತ್ತಾರೆ? ಲಂಡನ್‌ದಲ್ಲೆಷ್ಟು? ಇಷ್ಟೆಲ್ಲ ಭಾಷೆ ಇರದಿದ್ದರೆ ಮುಂಬೈ ತುಂಬ ಫುಟ್‌ಪಾತ್ ಕಟ್ಟಿ ಮುಗಿಸಬಹುದಾಗಿತ್ತು ಎಂದೆನ್ನಬಹುದು. ಆದರೆ ಫುಟ್‌ಪಾತ್‌ಗಿಂತ ಈ ಹದಿನೈದು ಭಾಷೆ ಉಳಿಸುವದು ಮಹತ್ವದ್ದೆಂದು ನಾವು ಭಾವಿಸುತ್ತೇವೆ. ಆದ್ದರಿಂದ ಈ ಕಲಮನ್ನು ಮಾನವ ಹಕ್ಕಿನ ಯುನೆಸ್ಕೋದ ಸನದಿನಲ್ಲಿ ಸೇರಿಸೋದು ಅಗತ್ಯವಾಗಿದೆ. ವಿಟೋ ಪವರ್ ನಮಗಿಲ್ಲದಿರುವುದರಿಂದ ನಾವು ಬರೇ ಮಾತಾಡೋದಷ್ಟೇ ಸಾಧ್ಯ. ಆದರೆ ನಮ್ಮ ದನಿಯನ್ನು ಏರಿಸಿ ಮಾತಾಡಬೇಕಿದೆ. ಆದರೆ ಮುಖ್ಯ ಮುದ್ದೆ ಏನೆಂದರೆ, ಯಾವ ಸ್ಥಿತಿಯಲ್ಲಿ ಈ ಜಾಗತೀಕರಣವನ್ನು ವಿರೋಧಿಸಬೇಕಾಗಿದೆಯೋ, ಅದನ್ನು ತಂತಮ್ಮ ಭಾಷೆ, ಸಂಸ್ಕೃತಿಯ ವಿವಿಧತೆಯ ದೇಸಿ ಪರಂಪರೆಯನ್ನು, ಹಳಸಿದ ಹಳೇ ಪರಂಪರೆಯನ್ನು ಸಹ, ನಾವು ಉಳಿಸಿಕೊಳ್ಳುವದೇ? ಎಂಬ ಪ್ರಶ್ನೆಯನ್ನು ಸದಾ ಕೇಳಲಾಗುತ್ತದೆ. ಪ್ರತಿಯೊಂದು ಜೀವಂತ ಸಂಸ್ಕೃತಿಯಲ್ಲಿ ಹಳಸಿದ ರೂಢಿಯನ್ನು ಚೆಲ್ಲಿ ಹೊಸದನ್ನು ಸ್ವೀಕರಿಸುವ ಪ್ರಕ್ರಿಯೆ ಸತತವಾಗಿ ಮುಂದುವರಿಯುತ್ತಲೇ ಇರುತ್ತದೆ. ನೀವು ದೇಸಿಯಾಗಿದ್ದರಿಂದ ನಿಂತಿರಿ, ಹಳಸಿದಿರಿ ಎಂದು ಯಾರಿಗೂ ಹೇಳುವಂತಿಲ್ಲ. ಸುತರಾಂ ಹೀಗಿರುವುದಿಲ್ಲ. ನೀವು ಅಂತರರಾಷ್ಟ್ರೀಯವಾಗಿಯೂ ಕೂಡ ಹಳಸಬಹುದು, ದೇಸೀಯವಾಗಿದ್ದೂ ಹಳಸಬಹುದು. ಹಳಸುವ ಸಾಧ್ಯತೆ ಎರಡೂ ಕಡೆ ಇರುತ್ತದೆ. ಉಳಿಸಿಕೊಳ್ಳುವದು ಯಾವುದು, ಕೈಬಿಡುವದು ಯಾವುದು ಎಂಬ ಯೋಚನೆ ಮಹತ್ವದ್ದು. ಇಂಥ ಯುದ್ಧದ ಪ್ರಸಂಗದಲ್ಲಿ ಪರಂಪರೆಯಾಗಿ ಕೆಲವು ಸಂಗತಿಗಳನ್ನು ಉಳಿಸಿಕೊಳ್ಳುವ ಅಗತ್ಯವಿದೆ. ಯುಗಾದಿಗೆ ಬೇವು ಬೇಕು. ಈ ಪರಂಪರೆ ಉಳಿಸುವದು ಅವಶ್ಯ. ಇದನ್ನು ಬೇಕಾದರೆ ಅಂಧ ಶ್ರದ್ಧೆಯೆನ್ನಿ. ಈ ಮೂಲಕ ಮನೆ-ಮನೆಯಲ್ಲೂ ಬೇವು ಇರುವದು ಅಗತ್ಯ. ಮನುಷ್ಯ ಬದುಕಿರಲು ನಮ್ಮ ದೇಶದಲ್ಲಿ ಏನೆಲ್ಲ ಮಾಡುತ್ತಿರುತ್ತಾರೆ! ಸಾವಿರಾರು ವರ್ಷದ ಈ ಪರಂಪರೆಯನ್ನು ವಾರಸಾ ಎಂದು ಉಳಿಸಿಕೊಳ್ಳುವದು ಅಗತ್ಯವಾಗಿದೆ. ಕೋಟೆ, ಅಜಂತಾ, ವೇರೂಳ, ಅಶೋಕಸ್ತಂಭ ಮುಂತಾದವು.

ಜಾಗತೀಕರಣವನ್ನು ಎದುರಿಸಲು ದೇಸಿ ಪರಂಪರೆಯಂತಹ ಬೇರೊಂದು ಅಸ್ತ್ರವಿಲ್ಲ. ನಿಮ್ಮ ಪರಂಪರೆಯನ್ನು ಮುಗ್ಧವಾಗಿ ಮುಂದುವರಿಸಿಕೊಂಡು ಹೋದರೆ ಸಾಕು, ನೀವು ಇಲ್ಲವಾಗುವ ಅಪಾಯ ಬರುವದಿಲ್ಲ. ನೀವು ಹಳೇ ಮುಂಡಾಸು ಸುತ್ತಿಕೊಳ್ಳುತ್ತಿದ್ದರೆ, ನಿಮಗೆ ಹೊಸ ಹ್ಯಾಟಿನ ಅಪಾಯವಿಲ್ಲ. ಆದರೆ ನೀವು ಬೋಳಾಗಿದ್ದರೆ ಹ್ಯಾಟಿನ ಅಪಾಯವಿದೆ. ಯಾಕೆಂದರೆ ಹ್ಯಾಟು ಖಾಲಿ ಜಾಗವನ್ನು ಆಕ್ರಮಿಸುತ್ತದೆ. ಹ್ಯಾಟಿನ ಬದಲು ಯಾವುದೇ ಪರದೇಸಿ ಸಂಸ್ಕೃತಿಯ ಪೋಷಾಕು ಆಗಬಹುದು. ನಾನು ಈ ಸಂಬಂಧವನ್ನು ರೂಪಕವಾಗಿ ಬಳಸಿದ್ದೇನೆ. ಪ್ರತಿಯೊಂದು ಪರಂಪರೆಯದ್ದು ಹೀಗೆ. ಸ್ವಲ್ಪ ಪೊಳ್ಳು ನಿರ್ಮಾಣವಾದರೂ ಸಾಕು, ಅಲ್ಲಿ ತನ್ನಿಂದ ತಾನೇ ಆಗಂತುಕ ಪರದೇಸಿ ಕ್ರಿಯಾವಸ್ತು ಬಂದು ತುಂಬಿಕೊಳ್ಳುತ್ತದೆ. ಅಲ್ಲಿ ನಿಮ್ಮಿಚ್ಛೆಯ ಪ್ರಶ್ನೆಯಿಲ್ಲ. ವಿವಾಹಬಾಹ್ಯ ಲಿಂಗ ಸ್ವಾತಂತ್ರ್ಯ ಇಂದು ಮುಂಬೈ-ಪುಣೆಯವರೆಗೆ ನಾಳೆ ಕೊಲ್ಹಾಪುರವರೆಗೆ ಬರುತ್ತದೆ. ಪೇಶ್ವೆಯಂತಹ ಸ್ವಾರ್ಥಿ ರಾಜಕರ್ತರು ನಿರ್ಮಾಣ ಮಾಡಿದ ರಾಜ್ಯ ಶಾಸನದ ಪೊಳ್ಳುತನವನ್ನು ಈಸ್ಟ್ ಇಂಡಿಯಾ ಕಂಪನಿಯ ಉಂಡಾಡಿ ನೌಕರರು ತುಂಬಿ ತೆಗೆದರು. ಹೀಗೆ ವಸಾಹತುವಾದ ಪಸರಿಸುತ್ತ ಹೋಯಿತು. ದೇಶದೊಳಗಿನ ಪ್ರತಿಭಾವಂತರನ್ನು ಸೋಲಿಸುವ ಈ ಸಂಗತಿಯು ಹಾಹಾಂ ಎನ್ನುವಷ್ಟರಲ್ಲಿ ನಡೆಯಲಿಲ್ಲವೇ? ನಾವು ಪರರಿಗಾಗಿ ನಿರ್ಮಾಣ ಮಾಡಿದ ಪೊಳ್ಳುತನವೇ ಇದಕ್ಕೆ ಕಾರಣ. ಆಂಗ್ಲರು ಬಂದಿದ್ದರಿಂದಲೇ ನೀವು ಆಧುನಿಕರಾದಿರಿ ಎಂದೆನ್ನಲು ಚರಿತ್ರೆಕಾರರು ಸಿದ್ಧರಾಗುತ್ತಾರೆ. ಅದಕ್ಕಿಂತ ಮುಂದಿನ ಹೆಜ್ಜೆಯೆಂದರೆ, ಆಧುನಿಕರಾಗುವ ಏಕೈಕ ಮಾರ್ಗವೆಂದರೆ ಪಾಶ್ಚಾತ್ಯೀಕರಣ. ಇದು ವಸಾಹತುಕರಣದ ವಿಕಸಿತ ಹಂತ. ಇಂದಿನ ಪೊಳ್ಳುತನ ತುಂಬಿಕೊಡುವ ರಾಜಮಾರ್ಗವೇ ಈ ಜಾಗತೀಕರಣದ್ದು. ಇದಕ್ಕೆ ಕವಚವೆಂದರೆ ತಂತಮ್ಮ ಚಿಕ್ಕ-ಪುಟ್ಟ ದೇಸಿ ಪರಂಪರೆಯನ್ನು ವಾರಸಾ ಎಂದು ಬಳಸುವುದೇ. ಅದೇ ನಮ್ಮ ನೈತಿಕ ಹಕ್ಕಾಗಿದೆ. ಅದನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸುವ ಅಧಿಕಾರ ನಮಗಿದೆ.

ಈಗೊಂದು ಉದಾಹರಣೆ: ನಗರದಿಂದ ಭಂಡಾರದರಾ ಡ್ಯಾಮಿನ ಕಡೆ ನಾವು ಸುಮತಿ ಲಾಂಡೆ, ರಂಗನಾಥ ಪಠಾರೆ ಮುಂತಾದವರು ಒಂದು ಕಾರ್ಯಕ್ರಮದ ನಿಮಿತ್ತ ಹೊರಟಿದ್ದೆವು. ಆ ಡ್ಯಾಮಿನ ಆಚೆಗೇನಿದೆ ನೋಡಬೇಕೆಂದು ನಮಗನಿಸಿತು. ಅಲ್ಲಿ ಬೆಟ್ಟದ ಕೆಳಗೆ ರತನಗಡ ಕೋಟೆಯ ತಳದಲ್ಲಿ ಒಂದು ವಸತಿಯಿತ್ತು. ಶಂಕರನ ಸುಂದರವಾದ ಗುಡಿಯಿದೆ. ನಮ್ಮ ವಾಹನ ಹೋಗಿ ತಲುಪಿದಾಗ ಊರಿನ ಐವತ್ತು ಜನ ಜಮಾಯಿಸಿದರು. ಒಬ್ಬಾತ ಜ್ವರ ಪೀಡಿತವಾದ ಮಗುವನ್ನು ಹೊತ್ತುಕೊಂಡಿದ್ದ. ಆ ಮಗುವಿನ ತಂದೆ ತುಂಬಾ ಕಕ್ಕುಲತೆಯಿಂದ ಕೇಳಿದ: ''ಗುಳಿಗೆ ಇದೆಯೇ?'' ನಾವು ಕೇಳಿದೆವು ''ಎಂತ ಗುಳಿಗೆ? ಯಾಕೆ?'' ಅದಕ್ಕವನು ''ಮಗುವಿಗೆ ಜ್ವರ ಬಂದಿದೆ. ಇಲ್ಲಿ ಡಾಕ್ಟರ್ ಇಲ್ಲ, ಸರಕಾರಿ ಡಾಕ್ಟರ್ ಅಪರೂಪಕ್ಕೆ ಬರುತ್ತಾನೆ.'' ಮನೆಯಲ್ಲಿ ಮತ್ತೊಬ್ಬ ಮಗ ಜ್ವರದಿಂದ ಮಲಗಿದ್ದನಂತೆ, ಔಷಧಿಯಿಲ್ಲದಿದ್ದರೂ ಸಮಾಧಾನಕ್ಕಾಗಿ ಎಂಥ ಗುಳಿಗೆಯಾದರೂ ನಡೆಯುತ್ತದೆ. ನಮಗೆ ನಾಚಿಕೆಯೆನಿಸಿತು. ಸುಮತಿಯ ಬಳಿಯಲ್ಲಿ ಚಾಕಲೇಟಿತ್ತು, ಆಕೆಯಿಂದ ಅದನ್ನೇ ಪಡೆದರು. ಅನಾರೋಗ್ಯದಿಂದ ಬಳಲುವ ಆ ಊರಿಗೆ ಇವತ್ತಿಗೂ ಡಾಕ್ಟರ್ ಹೋಗುವುದಿಲ್ಲ. ಇದಕ್ಕೆಲ್ಲ ಕಾರಣವೇನೆಂದರೆ, ನಗರ ಜಿಲ್ಲೆಯ ಸೊಕ್ಕಿದ ಸಕ್ಕರೆ ಕಾರ್ಖಾನೆಯ ರೈತರಿಗೆ ಕಬ್ಬು ಬೆಳೆಯಲು ಭರಪೂರ ನೀರು ಬೇಕಾಗಿತ್ತು. ಅದಕ್ಕಾಗಿ ಅವರು ಅಲ್ಲಿಯ ಸಮೃದ್ಧ ಹಳ್ಳಿಗಳನ್ನು ಬೆಟ್ಟಕ್ಕೆ ಸ್ಥಳಾಂತರಿಸಿ ಡ್ಯಾಮಿಗೆ ಸ್ಥಳ ಮಾಡಿಕೊಂಡರು. ಬಳಿಕ ಅಲ್ಲಿಯ ಹೊಲ, ಭೂಮಿ, ಹುಲ್ಲುಗಾವಲು – ಇದೆಲ್ಲ ನೀರೊಳಗೆ ಮುಳುಗಿತು. ಬಾವಿಗಳು ಹೋದವು. ಈಗ ಹೊಲವಿಲ್ಲ, ಕುಡಿಯುವ ನೀರಿಲ್ಲ, ನಲ್ಲಿಯಿಲ್ಲ, ರಸ್ತೆಯಿಲ್ಲ, ಡಾಕ್ಟರಿಲ್ಲ. ಇಂಥ ಬಡ ಜನತೆಯ ಬಲಿ ನೀಡಿ ನಮ್ಮ ಆಧುನೀಕರಣ, ನಗರೀಕರಣ ನಿರ್ಮಾಣವಾಯಿತು. ಈಗ ಇದೇ ಸಕ್ಕರೆ ಕಾರ್ಖಾನೆ ಜನ ಪುನಃ ಈ ಜಾಗತೀಕರಣ ಮಾಡಲು ಹೊರಟಿದ್ದಾರೆ. ನಮ್ಮ ತೋರಿಕೆಯ ಪ್ರಗತಿಯ ಹಿಂದೆ ಇಂಥ ಅನಾರೋಗ್ಯ ಮಕ್ಕಳು, ಔಷಧಿಯಿಲ್ಲದ ಹಳ್ಳಿಗಳು ಇರುತ್ತವೆ.

ನಗರದಲ್ಲಿಯ ಜನ ಸರಿಯಾಗಿ ಬದುಕಲೆಂದು ಪಾಪ ಆ ಜನ ಮೂಲಭೂತ ಸೌಕರ್ಯವೂ ಇಲ್ಲದೇ ದಿನ ಕಳೆಯುತ್ತಾರೆ. ರತನಗಡದ ಭಂಡಾರ ಕಣಿವೆಯ ಸಂತ್ರಸ್ತ ಜನ ಡಾಕ್ಟರ್ ಬರುವದಿಲ್ಲೆಂದು ಎಂಥದಾದರು ಗುಳಿಗೆ ಕೊಡಿ ಅಂತಾರೆ. ಬಹುಶಃ ಆ ಮಗು ಈಗ ಕೊನೆಯುಸಿರೆಳೆದಿರಲೂಬಹುದು. ಬಹುಶಃ ರಸ್ತೆಯಿಲ್ಲದ್ದರಿಂದ ಯಾರೂ ಅತ್ತ ಹಾಯುವುದಿಲ್ಲ. ಈಗ ಈ ನಿರ್ಲಕ್ಷಿತ, ಶೋಷಿತ ಜನ ನಾಳೆ ನಮ್ಮಂತೆಯೇ ಜಾಗತೀಕರಣ ಮಾಡಲು ತೊಡಗಿದರೆ ನಮ್ಮ ಗತಿಯೇನಾಗಬಹುದು? ನಮ್ಮ ದೇಶದಲ್ಲಿ ಕಾಯ್ದೆ, ವ್ಯವಸ್ಥೆ ಕಿಂಚಿತ್ತೂ ತಾಳುವದಿಲ್ಲ. ಕೆಲ ಜನ ಸಹಿಸುತ್ತಾರೆಂದು ನಮ್ಮ ಈ ಜಾಗತೀಕರಣದ ಪಾಖಂಡಿತನ ಸರಿಯಾಗಿ ನಡೆದಿದೆ.

ಆದರೆ ಈ ಗೋಪುರ ತಾಳುವಂಥದ್ದಲ್ಲ. ಈ ವಿಕಾಸ ಯಾವುದಾದರೂ ಹುಸಿ ಜಾಗತಿಕ ಬಂಡವಾಳಶಾಹಿಯ ಹೇತು ಈಡೇರಿಸಲು ನಡೆದಿದ್ದು, ಇದು ಒಪ್ಪಿಗೆಯಾಗುವಂತಹದ್ದಲ್ಲ. ಜಾಗತೀಕರಣದಲ್ಲಿ ನಮಗೆ ಸಾಮಾಜಿಕ ಸಮತೆ ಬೇಕೆನ್ನುವದನ್ನು ಯಾರೂ ಒಪ್ಪುವುದಿಲ್ಲ. ಸಾಮಾಜಿಕ ಪ್ರಗತಿಗಾಗಿಯೇ ನಾವಿಂದು ಜಾಗತೀಕರಣ ಮಾಡಲಿಚ್ಛಿಸುತ್ತೇವೆ ಎಂಬುದನ್ನೂ ಯಾರೂ ಒಪ್ಪುವದಿಲ್ಲ. ಇದನ್ನು ಯಾರೂ ಹೇಳುವದಿಲ್ಲ. ಹೊಸ ಆರ್ಥಿಕ ವ್ಯವಸ್ಥೆಯನ್ನು ನಾವು Establish ಮಾಡುತ್ತೇವೆ ಎಂದೆನ್ನುತ್ತಾರೆ. ಒಂದು ಹೊಸ ಇಕನಾಮಿಕ್ ಸಿಸ್ಟಮ್ ಆರಂಭಿಸುತ್ತೇವೆ ಎನ್ನುವದರಲ್ಲೇನೂ ವಿಶೇಷವಿಲ್ಲ. ಅದರಿಂದ ಸಾಮಾಜಿಕ ನ್ಯಾಯ ಸಿಗುವದಂತೂ ಸಾಧ್ಯವೇ ಇಲ್ಲ. ಸಾರಾಂಶ, ನಾವು ನಮ್ಮ ನೈತಿಕ ಹಕ್ಕನ್ನು ಹೇಗಾದರೂ ಮಾಡಿ ಮುಂದುವರಿಸಿದರೆ, ತನ್ನಿಂದ ತಾನೇ ಯಾವುದಾದರೂ ಸ್ವರೂಪದಲ್ಲಿ ಜಾಗತೀಕರಣಕ್ಕೆ ನಾವು ವಿರೋಧವನ್ನು ಒಡ್ಡಿದಂತಾಗುತ್ತದೆ.

ಈ ಎಲ್ಲ ಚರ್ಚೆಯಿಂದ ನಾನು ನಿಮ್ಮ ಗಮನಕ್ಕೆ ತರಬಯಸಿದ್ದೇನೆಂದರೆ, ನಮ್ಮ ಬಹುಸಾಂಸ್ಕೃತಿಕ ಹಾಗೂ ಬಹುಭಾಷಿಕ ಪರಂಪರೆಯನ್ನು ಈ ಕ್ಷಣದಲ್ಲೂ ಉಳಿಸುವುದು ಸಹ ಎಲ್ಲಕ್ಕಿಂತ ಮಹತ್ವದ ಕಾರ್ಯವಾಗಿದೆ. ಅದನ್ನು ನಾವು ಉಳಿಸಿದರೆ ಈ ಜಾಗತೀಕರಣದ ಅಲೆಯಿಂದ ಪಾರಾಗಬಹುದು. Monocultural View ಎಂಬ ಸಾಂಸ್ಕೃತಿಕ ದೃಷ್ಟಿಯನ್ನು ಇಟ್ಟುಕೊಂಡರೆ ನಮ್ಮ ಸರ್ವನಾಶ ಖಚಿತ. ಯಾಕೆಂದರೆ ಇಂಥ ದೃಷ್ಟಿಯಿಂದ ಸತ್ಯ ಹುದುಗಿಬಿಡುತ್ತದೆ. ಈ ಬಹುಸಂಸ್ಕೃತಿಯಲ್ಲಿ ಖಚಿತವಾಗಿಯೂ ಎಂತಹ ಶಕ್ತಿಯಿದೆ ಎಂದರೆ, ಅದು ಜಾಗತೀಕರಣವನ್ನು ಹೊಸಕಿ ಹಾಕಬಲ್ಲದು. ಈ ರಾಕ್ಷಸ ಪ್ರಕ್ರಿಯೆಯ ವಿರುದ್ಧ ನಿಲ್ಲುವದು ಹಾಗೆ ಕಷ್ಟಕರವೆ. ಸುದೈವಕ್ಕೆ ನಮ್ಮ ಬಳಿಯಲ್ಲಿರುವ ವಿವಿಧ ಸಾಂಸ್ಕೃತಿಕ ಪ್ರವಾಹ, ವಿವಿಧ ಸಾಂಸ್ಕೃತಿಕ ಉತ್ಸವ, ಪ್ರತಿಯೊಂದು ಸಂಗತಿಗಳಿಗೆ ವಿವಿಧ ಪ್ರಕಾರಗಳಿವೆ – ಇದನ್ನೆಲ್ಲ ಉಳಿಸುವದಂತೂ ನಮ್ಮ ಕೈಯಲ್ಲೇ ಇದೆ. ಇದರ ಮೂಲಕ ನಾವು ನಾಳೆಯ ಜನಾಂಗಕ್ಕೆ ಕೊನೆಪಕ್ಷ ವಿರೋಧಿಸುವ ಶೈಲಿಯನ್ನಾದರೂ ರಕ್ಷಿಸಿದಂತಾಗುತ್ತದೆ.

ಕನ್ನಡಕ್ಕೆ : ಚಂದ್ರಕಾಂತ ಪೋಕಳೆ
ಜಿ.ಎಸ್.ಪಿ.ಯು ಕಾಲೇಜು, ಬೇಡಕಿಹಾಳ ಅಂಚೆ
ಬೆಳಗಾವಿ - ೫೯೧ ೨೧೪

# SAY SUCCESS SAY NEW LIGHT

| Particulars | Price (Rs) |
|---|---|
| **FOREIGN REPRINTS** | |
| Chess Player's Handbook | 90 |
| How to Develop a Superpower Memory | 60 |
| How to Read Palms | 35 |
| **ENGLISH IMPROVEMENT** | |
| N-128 Grammar & Composition | 45 |
| N-241 General English | 50 |
| N-249 20 Days to English Vocabulary | 35 |
| N-273 Better English | 40 |
| N-280 How to Write Effective English | 35 |
| N-330 Words Often Confused | 45 |
| N-336 Spoken English | 50 |
| N-338 A to Z Quotations | 45 |
| N-339 A to Z Idioms and Phrases | 45 |
| N-340 A to Z Proverbs | 45 |
| N-341 A to Z Synonyms & Antonyms | 45 |
| N-351 Basic English Grammar for Schools | 50 |
| N-354 Dictionary of Idioms & Phrases | 85 |
| N-355 Correct English Usage | 50 |
| N-362 Dictionary of Quotations | 95 |
| N-363 Instant Vocabulary Builder | 75 |
| N-376 Dictionary of Synonyms & Antonyms | 115 |
| **ESSAY WRITING** | |
| N-343 School Essays, Letters & Paragraphs | 35 |
| N-361 School Essays, Letters (for Juniors) | 30 |
| N-344 136 Essays for College & Competitive Exams | 85 |
| N-365 Advanced Essays for College and Competitive Exams | 125 |
| **LETTER WRITING** | |
| N-2 Applications for Better Jobs | 35 |
| N-3 Business Letters | 35 |
| N-6 Selected Letters | 55 |
| N-45 Top Every Day Letters | 50 |
| N-79 1111 Letters for All Occasions | 50 |

| Particulars | Price (Rs) |
|---|---|
| N-274 How to Write Better Letters | 45 |
| N-317 Perfect Letter Writer | 55 |
| N-327 Model Business Letters | 65 |
| N-331 Dynamic Letters | 60 |
| N-332 Superb Business Letters | 60 |
| **FOR ENGG. IIT/MEDICAL EXAMS** | |
| N-217 I.I.T. Solved Papers (1992-2002) | 175 |
| N-306 I.I.T. Screening Test Guide | 175 |
| N-220 Medical Entrance Guide | 545 |
| N-314 All India Pre-Medical/ Pre-Dental Preliminary (CBSC) | 395 |
| N-372 Maharashtra Medical Entrance | 315 |
| N-311 CEEE Guide (Delhi College of Engg.) | 355 |
| N-383 AIEEE Guide | 355 |
| **GUIDES FOR BANK EXAMS** | |
| N-110 State Bank Probationary Officers | 215 |
| N-229 Bank Probationary Officers | 215 |
| N-301 Bank Clerical Exams | 110 |
| **FOR OTHER COMPETITIVE EXAMS** | |
| N-149 NDA Examination Guide | 299 |
| N-203 CAT Guide | 235 |
| N-225 Hotel Management Entr. Guide | 225 |
| N-251 NTSE (National Talent Search) | 175 |
| N-255 Mental & Reasoning Ability | 60 |
| N-298 MBA Entr. Exam Guide | 275 |
| N-299 CDS Exam Guide | 245 |
| N-328 Test of Reasoning | 99 |
| N-336 BBS Entr. Exam Guide | 160 |
| N-350 MAT Guide | 299 |
| N-352 NIFT/NID Exam Guide | 215 |
| N-358 MCA Entr. Exam Guide | 340 |
| N-364 Success in Interviews | 55 |
| N-366 BCA Entr. Exam Guide | 195 |

| Particulars | Price (Rs) |
|---|---|
| N-367 BBA/BBM Entr. Guide | 185 |
| N-368 SSC Combined (Prel.) Graduate Level | 175 |
| N-369 SSC Combined (Prel.) Matric Level Guide | 85 |
| N-373 BIT Entrance Exam Guide | 195 |
| N-387 (CPO) Central Police Organisation | 175 |
| **G.K. CURRENT AFFAIRS** | |
| N-26 G.K. & Current Affairs | 65 |
| N-77 Encyclopaedia of General Knowledge | 195 |
| N-304 General Intelligence for Students | 60 |
| N-334 gmnf kz | 65 |
| **QUIZ BOOKS** | |
| N-345 G.K. Quiz | 45 |
| N-346 India Quiz | 45 |
| N-347 Sports Quiz | 45 |
| N-348 Geography Quiz | 45 |
| N-349 Science Quiz | 40 |
| N-357 Computer Quiz | 40 |
| N-370 The World Firsts | 50 |

| Particulars | Price (Rs) |
|---|---|
| **COMPUTER BOOKS** | |
| N-359 Computer for Beginners | 125 |
| N-371 Internet Essentials | 160 |
| N-374 E-Commerce | 85 |
| N-380 The How & Why of Internet | 85 |
| **MISCELLANEOUS** | |
| N-176 Numerology for Everybody | 27 |
| N-250 You and Your Hand | 25 |
| N-264 How to Play Chess | 40 |
| N-278 Secrets of Success | 65 |
| N-281 Astrology for Everybody | 25 |
| N-291 How to Solve Your Personal Problems | 65 |
| N-296 How to Achieve Total Success | 65 |
| N-319 How to be a Super Salesman | 65 |
| N-322 Hypnotism and Yourself | 35 |
| N-323 How to Develop a Powerful Personality | 65 |
| N-324 Palmistry for All | 25 |
| N-349 The Art of Public Speaking | 50 |
| N-356 Book of Baby Names | 35 |
| N-360 Jokes for All | 35 |
| N-375 Treasure of Jokes | 35 |
| N-382 How to Live | 55 |
| N-386 Great Scientists | 60 |

**Get these books from your nearest bookseller.**
**In case of direct orders, please remit price of books plus packing and postage Rs. 14 by Bank Draft/M.O.**
**Prices are subject to change without notice.**

## NEW LIGHT PUBLISHERS

B-8, RATTAN JYOTI, 18, RAJENDRA PLACE, NEW DELHI - 110 008
Phone: 25737448, 25712649 Fax : 91-11-25812385
e-mail : newlight@vsnl.net

*With Best Compliments from*



# Vinayaka Book Distributors

**Wholesalers of Best Selling Fiction, Nonfiction, Furniture, Cookery, Comics, Fashion, Children's & General Books**

No. 49, St. John's Road, 1st Floor
Bangalore - 560 042
Phone : 5574184, 5574420

## ಸರಕಾರಿ ಆಸ್ಪತ್ರೆಗಳೆಂದು ಕಡೆಗಣಿಸಬೇಡಿ

*ಸರಕಾರಿ ಆಸ್ಪತ್ರೆಗಳಲ್ಲಿ, ಅಲ್ಲಿರುವ ಉಪಕರಣಗಳು, ಪರಿಣತ ವೈದ್ಯರು ತಮ್ಮ ಸೇವೆಯನ್ನು ಜನಸಾಮಾನ್ಯರಿಗೆ ಪರಿಣಾಮಕಾರಿಯಾಗಿ ಒದಗಿಸಿದಲ್ಲಿ ಜನ ಆರ್ಥಿಕವಾಗಿ ತಮಗೆ ಅಸಾಧ್ಯವಾದರೂ ಅಂಥಾ ದೊಡ್ಡ ಹೆಸರಿನ ಆಸ್ಪತ್ರೆಗಳಿಗೆ ಮುಗಿಬೀಳುವ, ತನ್ಮೂಲಕ ಹೆಚ್ಚು ಹಣ ಖರ್ಚು ಮಾಡಿ ಅಂಥಾ ಆಸ್ಪತ್ರೆಗಳಲ್ಲೇ ಚಿಕಿತ್ಸೆ ಪಡೆಯಬೇಕೆಂಬ ಹಂಬಲದಿಂದ ದೂರವಿದ್ದು, ಸರಕಾರಿ ಆಸ್ಪತ್ರೆಗಳಲ್ಲೇ ಉತ್ತಮ ಚಿಕಿತ್ಸೆ ಪಡೆಯಬಹುದು. ಇಂದಿನ ಕಾರ್ಪೊರೇಟ್ ಆಸ್ಪತ್ರೆಗಳು ಪರಿಣತ ಸೇವೆಯನ್ನು ಒದಗಿಸುವ ಜೊತೆಗೆ ತಮ್ಮ ಅಬ್ಬರದ ಪ್ರಚಾರ, ತೋರ್ಪಡಿಕೆಗಳಿಂದ ಸರಕಾರಿ ಆಸ್ಪತ್ರೆಗಳಲ್ಲಿ ದೊರೆಯುವ ಸೇವೆಯ ಬಗ್ಗೆ ಜನಮನದಲ್ಲಿ ಉತ್ತಮ ಅಭಿಪ್ರಾಯ ಕಡಿಮೆಯಾಗಿಬಿಟ್ಟಿದೆ.*

*ಬೆಂಗಳೂರಿನ ಎಸ್. ಡಿ. ಎಸ್. ಸ್ಯಾನಿಟೋರಿಯಂ ಆಸ್ಪತ್ರೆ ತನ್ನಲ್ಲಿರುವ ಸಂಪನ್ಮೂಲಗಳನ್ನು ಅತ್ಯುತ್ತಮವಾಗಿ ಬಳಸಿಕೊಂಡು, ಯಾವುದೇ ಹೈಟೆಕ್ ಆಸ್ಪತ್ರೆಗೆ ಕಡಿಮೆ ಇಲ್ಲದಂತೆ ಸೇವೆ ಮಾಡುತ್ತಿರುವುದು ಆಸ್ಪತ್ರೆಯ ಒಳಹೊಕ್ಕು ಪ್ರತಿ ವಾರ್ಡುಗಳನ್ನು ನೋಡಿದಾಗ ಮಾತ್ರ ತಿಳಿಯುತ್ತದೆ. ಸರಕಾರದ ಇತರ ಆಸ್ಪತ್ರೆಗಳೂ ಇದೇ ರೀತಿಯ ಸೇವಾಸೌಲಭ್ಯವನ್ನು ಒದಗಿಸಲು ಸಂಬಂಧಿಸಿದವರು ಮನಸ್ಸು ಮಾಡಿ ಕಾರ್ಯಗತರಾಗಬೇಕು. ಇದರಿಂದ ಜನರು ವೃಥಾ ಹಣ ಖರ್ಚು ಮಾಡುವುದು ಉಳಿಯುತ್ತದೆ. ಡಾ|| ಶಶಿಧರ ಬುಗ್ಗಿಯಂಥವರ ಸೇವೆ ಸರ್ವರಿಗೂ ತಿಳಿಯುತ್ತದೆ.*

**ಉಚಿತ, ಕೈಗೆಟಕುವ ದರದಲ್ಲಿ ಚಿಕಿತ್ಸೆ**

ಹೊರರೋಗಿ ವಿಭಾಗದಲ್ಲಿ ನೋಂದಣಿ ಮಾಡಿಸಲು ರೂ. ೫, ಒಳರೋಗಿಯಾಗಿ ಸೇರ್ಪಡೆಯಾಗಲು ರೂ. ೧೦, ಸಾಮಾನ್ಯ ವಾರ್ಡುಗಳಿಗೆ ದಿನಕ್ಕೆ ಚಾರ್ಜು ರೂ. ೫, ವಿಶೇಷ ವಾರ್ಡುಗಳಲ್ಲಿ ದಿನವೊಂದಕ್ಕೆ ರೂ. ೫೦ – ತಜ್ಞವೈದ್ಯರ ಚಿಕಿತ್ಸೆ, ಶಸ್ತ್ರಚಿಕಿತ್ಸೆಗಳೆಲ್ಲ ದಿನದ ೨೪ ಗಂಟೆಗಳೂ ದೊರೆಯುವ, ರೋಗಿಗಳ, ಪೋಷಕರ ಕೈ, ಬಾಯಿ ನೋಡದ, ಬಡವ - ಬಲ್ಲಿದರೆಂಬ ತಾರತಮ್ಯಕ್ಕೆ ಎಡೆಯಿಲ್ಲದ ಆಸ್ಪತ್ರೆಯೊಂದರಲ್ಲಿ ನಿಗದಿಪಡಿಸಲಾಗಿರುವ ಚಾರ್ಜುಗಳೆಂದರೆ ನಂಬಲು ಸಾಧ್ಯವೇ ? ಶ್ರೀಮತಿ ಶಾಂತಾಬಾಯಿ ದೇವರಾವ್ ಶಿವರಾಂ ಟ್ಯೂಬರ್‌ಕ್ಯುಲೋಸಿಸ್ ಸ್ಯಾನಿಟೋರಿಯಂ ಹೆಸರಿನ ಆಸ್ಪತ್ರೆ ಎಲ್ಲಿದೆ ಎಂದು ಕಂಡಿರುವಿರಾ ? ಹೊಸೂರು ರಸ್ತೆಯ ನಿಮ್ಹಾನ್ಸ್ ಆಸ್ಪತ್ರೆ, ಇಂದಿರಾಗಾಂಧಿ ಮಕ್ಕಳ ಆಸ್ಪತ್ರೆ, ಸಂಜಯಗಾಂಧಿ ಅಪಘಾತ ಆಸ್ಪತ್ರೆ ಇವುಗಳಿಗೆ ಹೊಂದಿಕೊಂಡಂತೆ ೬೦ ಎಕರೆ ವಿಶಾಲ ಪ್ರದೇಶದಲ್ಲಿ, ತಣ್ಣನೆಯ ಪ್ರಶಾಂತ, ಕಲುಷಿತ-ರಹಿತ ವಾತಾವರಣದಲ್ಲಿ ಯಾವುದೇ ಪ್ರಚಾರದ ಅಬ್ಬರವಿಲ್ಲದೆ ಎದೆಯೊಳಗಿನ ಹಲವು ಬಗೆಯ ಕಾಹಿಲೆಗಳನ್ನು, ಅಂದರೆ ಕ್ಷಯರೋಗ, ಕ್ಷಯ ರೋಗವಲ್ಲದ ಹಲವಾರು ನಾನ್ ಟ್ಯೂಬರ್‌ಕ್ಯುಲರ್ ಡಿಸೀಸೆಸ್, ಬ್ರಾಂಕ್ ಡಿಸೀಸ್, ಶ್ವಾಸಕೋಶದ ಕ್ಯಾನ್ಸರ್‌ಗೆ ಸಂಬಂಧಿಸಿದ ರೋಗಗಳು, ಎದೆಯೊಳಗಿನ ಕವಾಟ ಚಿಕಿತ್ಸೆ, ಪಕ್ಕೆಲುಬುಗಳ ಚಿಕಿತ್ಸೆ, ಇರಿತ ಮೊದಲಾದ ಗಾಯಗಳಿಂದುಂಟಾದ ತೊಂದರೆಗಳಿಗೆ ಚಿಕಿತ್ಸೆ, ಎದೆಯೊಳಗೆ ಸೇರಲ್ಪಟ್ಟ ನೀರನ್ನೂ ಹೊರತೆಗೆದು ಚಿಕಿತ್ಸೆ ಮಾಡುವ, ಎದೆಗೂಡಿಗೆ ಉಂಟಾಗುವ ಹಲವು ಬಗೆಯ ತೊಂದರೆಗಳಿಗೂ ಇಲ್ಲಿ ಚಿಕಿತ್ಸೆ ಲಭ್ಯ. ಬೆಂಗಳೂರಿನ ಟಿ. ಬಿ. ಆಸ್ಪತ್ರೆ ಎಂದೇ ಪ್ರಸಿದ್ಧವಾದ ಎಸ್‌ಡಿಎಸ್ ಸ್ಯಾನಿಟೋರಿಯಂ ಇದೇ.

ಉತ್ತಮ ಸೇವೆ ಸಲ್ಲಿಸಲು ಮನಸ್ಸಿದ್ದಲ್ಲಿ ಎಂಥ ಅದ್ಭುತ ಸಾಧನೆಯನ್ನು ಮಾಡಲು ಸಾಧ್ಯ ಎಂಬುದಕ್ಕೆ ಉದಾಹರಣೆ ಈ ಎಸ್‌ಡಿಎಸ್ ಸ್ಯಾನಿಟೋರಿಯಂನ ಸೂಪರಿಂಟೆಂಡೆಂಟ್ ಅವರಾದ ಡಾ|| ಶಶಿಧರ ಬುಗ್ಗಿಯವರು. ಸಾಮಾನ್ಯ ವಾರ್ಡ್‌ಗಳು ಸಹ ವಿಶೇಷ ವಾರ್ಡುಗಳಂತೆಯೇ ಸುಸಜ್ಜಿತ, ಶುಚಿತ್ವದಿಂದ ಕೂಡಿರುವುದು ಇಲ್ಲಿನ ವಿಶೇಷ. ವಿಶೇಷ ವಾರ್ಡ್‌ಗಳ ಸೌಲಭ್ಯವೆಂದರೆ ಪ್ರತಿವಾರ್ಡ್‌ನಲ್ಲಿ ಟಿ.ವಿ. ವೀಕ್ಷಿಸಬಹುದಾದ ಸೌಲಭ್ಯ, ಅಗತ್ಯ ಔಷಧಿಗಳನ್ನು ವಾರ್ಡ್‌ನಲ್ಲೇ ಸಂಗ್ರಹಿಸಿಡಲಾಗಿರುವುದು. ಶುಚಿತ್ವಕ್ಕೆ ಆದ್ಯ ಗಮನ.

**ಸಾರ್ಸ್ ಚಿಕಿತ್ಸೆಗೆ ಸಿದ್ಧ**

ಡಾ|| ಶಶಿಧರ ಬುಗ್ಗಿಯವರ ಸಂದರ್ಶನಕ್ಕೆ ಹೋದಾಗ ಅವರು ಆಗತಾನೇ ಶಸ್ತ್ರಚಿಕಿತ್ಸಾ ಕೊಠಡಿಯಿಂದ ಹೊರಬರುತ್ತಿದ್ದರು. ಹಸನ್ಮುಖದಿಂದ ಸ್ವಾಗತಿಸಿ ಅವರು ''ಬನ್ನಿ, ನಮ್ಮ ಯಾವುದಾದರೂ ಒಂದೆರಡು ವಾರ್ಡುಗಳನ್ನು ನೋಡಿ'', ಎಂದು

# ಟಿ. ಬಿ., ಎದೆರೋಗಗಳೆಂದು ಹೆದರಬೇಕಾಗಿಲ್ಲ

ಸಂದರ್ಶನ ಲೇಖನ

**ಎನ್. ಗೋಪಾಲಕೃಷ್ಣ**





*ಡಾ|| ಶಶೀಧರ ಬುಗ್ಗಿಯವರನ್ನು ಸಂದರ್ಶಿಸುತ್ತಿರುವ ಶ್ರೀ ಎನ್. ಗೋಪಾಲಕೃಷ್ಣ*

ಕರೆದೊಯ್ದು ತೋರಿಸಿದಾಗ ನಾವು ಕಂಡದ್ದು ಮೇಲೆ ಹೇಳಿದ ವಾರ್ಡುಗಳ ದೃಶ್ಯಾವಳಿ. ಇತ್ತೀಚೆಗೆ ಸುದ್ದಿ ಮಾಡಿ, ಇದೀಗ ಸದ್ದಿಲ್ಲದಿರುವ ಸಾರ್ಸ್ ರೋಗದ ನೆನಪು ಮಾಡಿ ಅದಕ್ಕಾಗಿಯೇ ವಿಶೇಷವಾಗಿ, ಯಾವುದೇ ಸಮಯದಲ್ಲೂ ಈ ರೋಗಿಗಳು ಬಂದಲ್ಲಿ ತಮ್ಮ ಆಸ್ಪತ್ರೆ ಚಿಕಿತ್ಸೆ ಕೊಡಲು ಸಿದ್ಧವಾಗಿರುವ ವಾರ್ಡ್‌ನ್ನೂ ಡಾ|| ಬುಗ್ಗಿ ತೋರಿಸಿದರು. ಈ ಸಾರ್ಸ್ ರೋಗಕ್ಕೆ ಈ ರೀತಿಯ ಚಿಕಿತ್ಸಾ ವ್ಯವಸ್ಥೆ ಮಾಡಿರುವ ಏಕೈಕ ಆಸ್ಪತ್ರೆ ಇದೆಂಬ ವಿಷಯ ತಿಳಿಯಿತು.

ಸದಾ ಚಟುವಟಿಕೆಯಿಂದ ಇರುವ, ಅತಿ ಚುರುಕಿನ ವ್ಯಕ್ತಿ ಇವರೆಂಬುದು ಇವರನ್ನು ಕಾಣುತ್ತಿದ್ದಂತೆಯೇ ತಿಳಿಯುತ್ತದೆ. 'ಸಿಸ್ಟರ್, ಇದೇನಿಲ್ಲಿ, ರಸ್ತೆಯ ಮೇಲೆ ಕಾಗದದ ಚೂರುಗಳು ? ಇದನ್ನೇಕೆ ಶುಚಿಗೊಳಿಸಿಲ್ಲ?' ಎಂಬುದಾಗಿ ಹಿಂದೆ ಬರುತ್ತಿದ್ದ ಮುಖ್ಯ ದಾದಿಯನ್ನು ಕೇಳುತ್ತಾರೆ: ಆಸ್ಪತ್ರೆಯ ಹೊರಗೆ ವಾಹನ, ಜನ-ಮಂದಿ ಓಡಾಡುವ ರಸ್ತೆಯ ಮೇಲೆ ಬಿದ್ದಿರುವ ಕಾಗದದ ಚೂರನ್ನು ಕಂಡು. ಇನ್ನು ಆಸ್ಪತ್ರೆಯ ಒಳಗೆ ಹೇಗಿರಬೇಡ, ಊಹಿಸಿಕೊಳ್ಳಿ. "ಹೊಸತು" ಪತ್ರಿಕೆಗಾಗಿ ಡಾ|| ಬುಗ್ಗಿಯವರನ್ನು ಮಾತನಾಡಿಸಿದಾಗ :

**ಹೊಸತು :** ಡಾಕ್ಟರೇ, ನಿಮ್ಮ ಆಸ್ಪತ್ರೆಯಲ್ಲಿ ಇತರ ಆಸ್ಪತ್ರೆಗಳಿಗಿಂತ ವಿನೂತನ ವಿಭಿನ್ನತೆ ಏನು ?

[redacted] **ಬುಗ್ಗಿ:** ನಾನು ಹೇಳುವುದಕ್ಕಿಂತ ಏನು ಮಾಡಿರುವೆವೆಂದು ಕಣ್ಣಾರೆ ನೋಡಿ ಬನ್ನಿ ಎಂದು ಕಂಪ್ಯೂಟರ್ ಕೊಠಡಿಯೊಂದರೊಳಗೆ ಕರೆದೊಯ್ದರು. ಪೊಲೀಸ್ ಇಲಾಖೆಯಲ್ಲಿ ಬೆರಳಚ್ಚು (ಫಿಂಗರ್ ಪ್ರಿಂಟ್) ಪರೀಕ್ಷಾ ವಿಧಾನ ಕೇಳಿದ್ದೆವು. ಇಲ್ಲಿ ಆಸ್ಪತ್ರೆಯ ವೈದ್ಯರು, ಡಾ|| ಬುಗ್ಗಿಯವರೂ ಸೇರಿ, ಶುಶ್ರೂಷಕಿಯರು, ಎಲ್ಲ ದರ್ಜೆಯ ಸಿಬ್ಬಂದಿ ವರ್ಗದವರು, ಆಸ್ಪತ್ರೆಯೊಳಗೆ ಬರುವ, ಸಂಜೆ ಮನೆಗೆ ಹೋಗುವ ಎಲ್ಲ ವಿವರಗಳ ಕಂಪ್ಯೂಟರೀಕೃತ ಹಾಜರಾತಿ ವ್ಯವಸ್ಥೆಯನ್ನು ಮಾಡಲಾಗಿದೆ.

ಸಿಬ್ಬಂದಿಯ ಬೆರಳಚ್ಚು ಈಗಾಗಲೇ ಗಣಕ ಯಂತ್ರದೊಳಗೆ ಅಳವಡಿಸಿದ್ದು, ಪ್ರತಿದಿನ ಬೆಳಿಗ್ಗೆ, ಸಂಜೆ ಸಿಬ್ಬಂದಿಯು ಮೌಸ್ ಅನ್ನು ಒತ್ತಬೇಕಷ್ಟೆ ಅವರು ಬಂದು ಹೋಗುವ ಸಮಯ, ಅವರ ಎಲ್ಲ ವಿವರಗಳೂ ಗಣಕಯಂತ್ರದಲ್ಲಿ ದಾಖಲು. ತಡವಾಗಿ ಬಂದರೆ ದಾಖಲಾಗುತ್ತದೆ. ಇದರಿಂದಾಗಿ ಯಾರೂ ತಡವಾಗಿ ಬರುವ ಪ್ರಶ್ನೆಯೇ ಇಲ್ಲ.

**ವಿವಿಧ ರೀತಿಯ ಎದೆರೋಗಗಳಿಗೆ ಚಿಕಿತ್ಸೆ**

**ಹೊಸತು :** ನಿಮ್ಮಲ್ಲಿ ಯಾವ ಯಾವ ರೀತಿಯ ಶಸ್ತ್ರ ಚಿಕಿತ್ಸೆ, ಚಿಕಿತ್ಸೆಗಳನ್ನು ಮಾಡುತ್ತೀರಿ ? ನಿಮ್ಮಲ್ಲಿಗೆ ಬರುವ ರೋಗಿಗಳ ಸಂಖ್ಯೆ ಎಷ್ಟು?

**ಡಾ|| ಬುಗ್ಗಿ:** ಪ್ರತಿದಿನ ನಮ್ಮ ಆಸ್ಪತ್ರೆಗೆ ೬೦೦ಕ್ಕೂ ಹೆಚ್ಚು ಜನರು ವಿವಿಧ ರೀತಿಯ ಎದೆರೋಗಗಳಿಗೆ ಸಂಬಂಧಿಸಿದ ಚಿಕಿತ್ಸೆಗೆ ಬರುತ್ತಾರೆ. ಬಹುಪಾಲು ಜನರಿಗೆ ಹೊರ ರೋಗಿಗಳಾಗಿ ಚಿಕಿತ್ಸೆ ಕೊಡುತ್ತೇವೆ. ಅಗತ್ಯವಿದ್ದಲ್ಲಿ ಮಾತ್ರ ಒಳರೋಗಿಗಳಾಗಿ ಇರಿಸಿ ಕೊಂಡು ಚಿಕಿತ್ಸೆ ಒದಗಿಸುತ್ತೇವೆ. ಎದೆರೋಗಗಳಾದ – ಎದೆಗೆ ಏಟು ಬಿದ್ದ ಅದನ್ನು ನಿರ್ವಹಿಸುವಂಥದು, ಎದೆಗೂಡಿನ ಗಡ್ಡೆಯ ರೋಗಗಳು, ಎಲ್ಲ ಬಗೆಯ ಶ್ವಾಸಕೋಶದ ರೋಗಗಳು, ಅನ್ನನಾಳಕ್ಕೆ ಸಂಬಂಧಿಸಿದ ರೋಗಗಳು, ಹೃದಯದ ಹಲವು ಬಗೆಯ (ಮುಚ್ಚಿದ ಸ್ಥಿತಿ) ಶಸ್ತ್ರಕ್ರಿಯೆಗಳು, ಶ್ವಾಸಕೋಶ/ಅನ್ನನಾಳ ಕ್ಯಾನ್ಸರ್ ಶಸ್ತ್ರಚಿಕಿತ್ಸೆ ಮುಂತಾದ ಗಂಭೀರ ರೋಗಗಳನ್ನೆಲ್ಲ ನಾವು ಚಿಕಿತ್ಸೆ ಮಾಡುತ್ತೇವೆ. ತೆರೆದ ಹೃದಯ ಶಸ್ತ್ರ ಚಿಕಿತ್ಸೆ ಹೊರತು, ಬೇರೆಲ್ಲ ಬಗೆಯ ಚಿಕಿತ್ಸೆಗಳೂ ನಮ್ಮಲ್ಲಿ ಲಭ್ಯವಿವೆ. ವರ್ಷಕ್ಕೆ ಹತ್ತು ಸಾವಿರಕ್ಕೂ ಮೀರಿದ ಸಂಖ್ಯೆಯ ಶಸ್ತ್ರ ಚಿಕಿತ್ಸೆಗಳನ್ನು ಇಲ್ಲಿ ಮಾಡುತ್ತೇವೆ.

**ಹೊಸತು :** ಡಾಕ್ಟರೇ, ನಿಮ್ಮಲ್ಲಿ ಸಾಮಾನ್ಯವಾಗಿ ಕೊಡುವ ಇತರ ಚಿಕಿತ್ಸೆಗಳು ?

**ಡಾ|| ಬುಗ್ಗಿ :** ಎದೆ ರೋಗಕ್ಕೆ ಸಂಬಂಧಿಸಿದ ಕಾಯಿಲೆಗಳಿಗೆ – ಅಂದರೆ : ಕ್ಷಯ ರೋಗ, ಕ್ಷಯರೋಗ ಉಲ್ಬಣಾವಸ್ಥೆಗೊಂಡಿದ್ದಾಗ, ಬಹುವಿಧ ಔಷಧ ಪ್ರತಿರೋಧದ ಕ್ಷಯರೋಗ, ಪರಿಷ್ಕೃತ ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ಕಾರ್ಯಕ್ರಮ ದಡಿಯಲ್ಲಿ (RNTCP) ಚಿಕಿತ್ಸೆ ಒದಗಿಸುತ್ತಿದ್ದೇವೆ.

ಅಲ್ಲದೆ ಅಸ್ತಮಾ, ಬ್ರಾಂಕೈಟಿಸ್, ಮತ್ತಿತರ ವೃತ್ತಿಸಂಬಂಧ ಶ್ವಾಸಕೋಶ ಕಾಹಿಲೆ ಗಳಿಗೆಲ್ಲ ನಮ್ಮಲ್ಲಿ ಪರಿಣಾಮಕಾರಿಯಾದ ಚಿಕಿತ್ಸೆಯನ್ನು ಕೊಡುತ್ತಿದ್ದೇವೆ.

**ಮಾನವ ಶರೀರದೊಳಗೆ ಸೇರಿದ ಹಲವಾರು ವಸ್ತುಗಳು**

ಮಾತನಾಡುತ್ತಿದ್ದಂತೆಯೇ ಡಾ|| ಬುಗ್ಗಿಯವರು ಸಣ್ಣ ಶೀಷೆಯೊಂದರಲ್ಲಿ ಸಂಗ್ರಹಿಸಿಡಲಾಗಿದ್ದ ಸುಮಾರು ೩/೪ ಅಂಗುಲ ಉದ್ದ ದಪ್ಪವಾದ ಚಿನ್ನದ ತುಂಡೊಂದನ್ನು ತೆಗೆದು ತೋರಿಸಿ, ಅದು ವ್ಯಕ್ತಿಯೊಬ್ಬರ ಎದೆಭಾಗದಲ್ಲಿ ಹೋಗಿ ಮನೆಮಾಡಿಕೊಂಡಿತ್ತು ಎಂಬ ಅಂಶದಿಂದ ನಮ್ಮನ್ನು ಅಚ್ಚರಿಗೊಳಿಸಿದರು. ಇದೇ ರೀತಿಯಾಗಿ ರೋಗಿಗಳ ಶರೀರವನ್ನು ಅಕಸ್ಮಾತ್ತಾಗಿ ಹೊಕ್ಕು ಕುಳಿತು, ಅವರ ಬಾಧೆಗೆ ಕಾರಣವಾಗಿರುವ ಇಂಥಾ ಹಲವಾರು ಪದಾರ್ಥಗಳನ್ನು ಹೊರತೆಗೆದಿರುವುದಾಗಿ ಅವರು ಹೇಳುತ್ತಾರೆ. ಮೊಳೆಗಳು, ಗುಂಡು ಸೂಜಿ, ಕಲ್ಲು, ಹೇರ್‌ಪಿನ್ನು – ಹೀಗೆ ನೂರಾರು ಬಗೆಯ ಪದಾರ್ಥಗಳಿಗೆ ನಮ್ಮ ದೇಹ ಕೆಲಕಾಲ ಮನೆ ಮಾಡಿಕೊಟ್ಟಿರುತ್ತದೆ. ವೈದ್ಯರ ಪ್ರಯತ್ನದಿಂದಾಗಿ ಅವುಗಳನ್ನು ದೇಹದಿಂದ ಹೊರದೂಡಲಾಗುತ್ತದೆ.

**ಗುಣವಾಗುವ ಕಾಯಿಲೆ ಟಿ. ಬಿ.**

**ಹೊಸತು :** ಡಾಕ್ಟರೇ, ಪ್ರಸ್ತುತ ಈ ಟಿ.ಬಿ. ಕಾಹಿಲೆಯ ಮಟ್ಟ ರಾಷ್ಟ್ರ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಏನಿದೆ ?

**ಡಾ|| ಬುಗ್ಗಿ:** ಟಿ. ಬಿ. ಕಾಹಿಲೆಯು ಸಂಪೂರ್ಣ ಗುಣಪಡಿಸಬಹುದಾದುದೆಂದು ಶತಸಿದ್ಧವಾಗಿದೆ. ರೋಗಿಯು ನಿಯಮಿತವಾಗಿ ವೈದ್ಯರ ಸಲಹೆಯಂತೆ ಔಷಧಿ ಸೇವನೆ ಮಾಡಬೇಕು. ಜನರೂ ಅಷ್ಟೇ ನಂಬಿಕೆಯನ್ನು ಕಳೆದುಕೊಳ್ಳಬಾರದು. ಟಿ. ಬಿ. ಇಂದಿಗೂ ಅಮೇರಿಕಾ ದೇಶದಲ್ಲಿ ಸಹ ಇದೆ. ಇತ್ತೀಚೆಗಿನ ಏಡ್ಸ್‌ರೋಗದಿಂದಾಗಿ ಟಿ. ಬಿ. ಕಾಹಿಲೆ ಹೆಚ್ಚಾಗಿದೆಯೆಂದೇ ಹೇಳಬೇಕು.

**ಎಸ್‌ಡಿಎಸ್ ಸ್ಯಾನಿಟೋರಿಯಂ – ಒಂದು ಮಾದರಿ ಆಸ್ಪತ್ರೆ**

ಜನವರಿ ೩೦, ೧೯೪೮ರಲ್ಲಿ ಆಗಿನ ಮೈಸೂರು ಮಹಾರಾಜರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ೫೦ ಹಾಸಿಗೆಗಳ ಶ್ರೀಮತಿ

**ಎಸ್‌ಡಿಎಸ್ ಕ್ಷಯ ಮತ್ತು ರಾಜೀವಗಾಂಧಿ ಎದೆರೋಗಗಳ ಸಂಸ್ಥೆಯಲ್ಲಿ ದೊರೆಯುವ ಇತರ ಸೌಲಭ್ಯಗಳು**

**ಈ ಕೆಳಗಿನವರಿಗೆಲ್ಲ ಉಚಿತ ಚಿಕಿತ್ಸೆ ದೊರೆಯುತ್ತದೆ.**

೧. ಬಡತನದ ರೇಖೆಗಿಂತ ಕೆಳಗೆ ಇರುವ (ಬಿಪಿಎಲ್) ಕಾರ್ಡ್ ಹೊಂದಿರುವವರು.
೨. ರಾಜ್ಯ ಸರಕಾರಿ ನೌಕರರು.
೩. ಬಂದೀಖಾನೆಯಿಂದ ಮತ್ತು ರಿಮ್ಯಾಂಡ್‌ಹೋಮ್‌ಗಳಿಂದ ಕಳುಹಿಸಲ್ಪಟ್ಟ ರೋಗಿಗಳು.
೪. ಟಿ. ಬಿ. ಎಂದು ಖಚಿತವಾದ ರೋಗಿಗಳಿಗೆ ಸಾಮಾನ್ಯ ವಾರ್ಡಿನಲ್ಲಿ ಉಚಿತ ಚಿಕಿತ್ಸೆ.
೫. ಮುಖ್ಯಮಂತ್ರಿಗಳ ವೈದ್ಯಕೀಯ ಪರಿಹಾರ ನಿಧಿಯ ಮೂಲಕ ತಪಾಸಣೆ ಮತ್ತು ಚಿಕಿತ್ಸೆಗೆ ಸಹಾಯ ದೊರೆಯುತ್ತದೆ.

ಸರಕಾರಿ ಆಜ್ಞೆಯ ಪ್ರಕಾರ ರೋಗಿಗಳಿಗೆ ಶುಚಿಯಾದ, ಪೋಷಕಾಂಶಯುಕ್ತ ಆಹಾರ ಪೂರೈಕೆ ಮಾಡಲಾಗುತ್ತದೆ.

ಆಸ್ಪತ್ರೆಯ ಆವರಣದಲ್ಲೇ ತರಕಾರಿ, ಕಾಯಿಪಲ್ಲೆಗಳನ್ನು ಮಾರುವ ಹಾಪ್‌ಕಾಮ್ಸ್ ಸಂಸ್ಥೆಯ ಶಾಖೆಯೂ ಇದೆ.

## ವಿಶ್ವಕ್ಷಯರೋಗ ದಿನ

ಪ್ರತಿ ವರ್ಷ ಮಾರ್ಚ್ ೨೪ 'ವಿಶ್ವ ಕ್ಷಯರೋಗ ದಿನ'. ಅಮೇರಿಕನ್ ಲಂಗ್ ಅಸೋಸಿಯೇಷನ್‌ನ ಅಧ್ಯಕ್ಷ ಅರ್ನೆಸ್ಟ್ ಪಿ. ಫ್ರಾಂಕ್ ೨೦೦೦ದ ಇಸವಿಯಲ್ಲಿ ಹೇಳಿದಂತೆ "ವಿಶ್ವ ಕ್ಷಯರೋಗ ದಿನ ಒಂದು ಆಚರಣೆಯಲ್ಲ ಏಕೆಂದರೆ ನಾವಿನ್ನೂ ಕ್ಷಯರೋಗದ ಮೇಲೆ ಜಯ ಸಾಧಿಸಿಲ್ಲ'. ಅಮೇರಿಕಾದಂಥ ಅಭಿವೃದ್ಧಿ ಹೊಂದಿದ ರಾಷ್ಟ್ರದಲ್ಲೇ ಕ್ಷಯರೋಗ ಇನ್ನೂ ನಿರ್ಮೂಲನೆಯಾಗಿಲ್ಲ. ಕ್ಷಯರೋಗ ವಿಶ್ವದ ಅತ್ಯಂತ ಭಯಾನಕ ಸೋಂಕು ರೋಗ. ೧೯೯೯ರಲ್ಲಿ ಈ ರೋಗ ವಿಶ್ವದಲ್ಲಿ ೨-೩ ದಶಲಕ್ಷ ಜನರನ್ನು ಬಲಿ ತೆಗೆದುಕೊಂಡಿತು. ಅಮೇರಿಕಾದಲ್ಲಿ ಸುಮಾರು ಹತ್ತರಿಂದ ಹದಿನೈದು ದಶಲಕ್ಷ ಜನರಿಗೆ ಕ್ಷಯ ರೋಗದ ಸೋಂಕು ಹಬ್ಬಿರುವ ವರದಿಯಿದೆ. ಇತ್ತೀಚಿನ ಏಡ್ಸ್ ರೋಗದ ಹಾವಳಿಯಿಂದಾಗಿ ಈ ಸಂಖ್ಯೆ ಹೆಚ್ಚಾಗಬಹುದಾಗಿದೆ. ಇವರಲ್ಲಿ ಕನಿಷ್ಠ ಒಂದು ದಶಲಕ್ಷ ಜನರಾದರೂ ಅಂತಿಮವಾಗಿ ಈ ರೋಗಕ್ಕೆ ಬಲಿಯಾಗುವ ಸಾಧ್ಯತೆ ಇದೆ. ಅಲ್ಲದೆ, ಅಂಥವರು ಇತರ ಆರೋಗ್ಯವಂತರಿಗೆ ಕ್ಷಯದ ಸೋಂಕನ್ನು ಬಿಟ್ಟುಹೋಗುತ್ತಾರೆ.

**ಪರಿಸರ ಮಾಲಿನ್ಯವೂ ಕಾರಣ**

ವಾಹನಗಳು ಅತಿಯಾಗಿ ರಸ್ತೆಗೆ ಬಂದ ಫಲವಾಗಿ, ಅವುಗಳು ಹೊರಸೂಸುವ ರಾಸಾಯನಿಕಗಳಿಂದ ವಾತಾವರಣದ ಗಾಳಿ ಕೆಡುವ, ತನ್ಮೂಲಕ ವಾತಾವರಣದ ಓಝೋನ್ ಪ್ರಮಾಣದ ವ್ಯತ್ಯಯದಿಂದ, ಜನರ ಉಸಿರಾಟದ ತೊಂದರೆಯಿಂದ, ಬಿಸಿಲಿಗೆ ಹೆಚ್ಚು ಮೈಯೊಡ್ಡುವ ಅವಕಾಶ ಇರುವುದರಿಂದ, ಆಸ್ತಮಾ, ಬ್ರಾಂಕೈಟಿಸ್‌ಗಳಿಗೆ ಒಳಗಾಗಿರುವವರಿಗೆ ಓಝೋನ್ ಅಪಾಯವಿದೆ. ಹೆಚ್ಚಿನ ಮಾಲಿನ್ಯದಿಂದ ಜನರ ಉಸಿರಾಟಕ್ಕೆ ತೊಂದರೆಯಿದೆ.



*ಕಾರ್ಯನಿರತ ಡಾ|| ಶಶಿಧರ ಬುಗ್ಗಿ, ಸೂಪರಿಂಟೆಂಡೆಂಟ್, ಎಸ್.ಡಿ.ಎಸ್. ಸ್ಯಾನಿಟೋರಿಯಂ, ಬೆಂಗಳೂರು*

ಶಾಂತಾಬಾಯಿ ದೇವರಾವ್ ಶಿವರಾಂ ಟ್ಯೂಬರ್‌ಕ್ಯುಲೋಸಿಸ್ ಸ್ಯಾನಿಟೋರಿಯಂಅನ್ನು ಸಾರ್ವಜನಿಕರಿಗಾಗಿ ಉದ್ಘಾಟನೆ ಮಾಡಿದರು. ಮುಂದೆ ೧೯೫೭ರಲ್ಲಿ ಇದನ್ನು ಬೋಧನಾ ಆಸ್ಪತ್ರೆಯನ್ನಾಗಿ ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಸೇರಿಸಲಾಯಿತು. ಇದೀಗ ಈ ಆಸ್ಪತ್ರೆ ರಾಜೀವ ಗಾಂಧಿ ಆರೋಗ್ಯ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬರುವ, ಕ್ಷಯ ಮತ್ತು ಎದೆ ರೋಗಗಳ ವಿಭಾಗ ಮತ್ತು ಕಾರ್ಡಿಯೋ-ಥೋರಾಸಿಕ್ ಶಸ್ತ್ರಚಿಕಿತ್ಸಾ ವಿಭಾಗಗಳನ್ನುಳ್ಳ ಬೋಧನಾ ಆಸ್ಪತ್ರೆಯನ್ನಾಗಿ ಪರಿಗಣಿಸಲಾಗಿದೆ. ೪೭೦ ಹಾಸಿಗೆ ಸೌಲಭ್ಯಗಳನ್ನುಳ್ಳ ವಿಶೇಷ ಚಿಕಿತ್ಸೆ ದೊರಕಿಸುವ ಆಸ್ಪತ್ರೆ ಇದಾಗಿದೆ.

೨೪ ಗಂಟೆಗಳೂ ಅಪಘಾತ ಮತ್ತು ತುರ್ತು ಸೇವೆಗಳು ದೊರೆಯುತ್ತವೆ. ಅಪಘಾತ ವೈದ್ಯಾಧಿಕಾರಿಗಳು ೨೪ ಗಂಟೆಗಳೂ ಸೇವೆಗೆ ಲಭ್ಯವಿರುತ್ತಾರೆ. ಎದೆರೋಗ ವೈದ್ಯರು, ಸರ್ಜನರು, ಅರಿವಳಿಕೆ ತಜ್ಞರು – ಇವರು ಕಛೇರಿ ಮುಗಿದ ಮೇಲಿನ ಅವಧಿಯಲ್ಲೂ ಸೇವೆಗೆ ದೊರೆಯುತ್ತಾರೆ.

**ಪ್ರಯೋಗಾಲಯ ಸೇವೆಗಳು**

ರಕ್ತ, ಮೂತ್ರ ಪರೀಕ್ಷೆಯನ್ನು ಬೆಳಿಗ್ಗೆ ೯ ರಿಂದ ಸಂಜೆ ೪ ಗಂಟೆಯವರೆಗೂ ಪ್ರತಿದಿನ ಮಾಡಲಾಗುತ್ತದೆ. ರೋಗಿಗಳ ಕಫದ ಪರೀಕ್ಷೆಯನ್ನೂ ಮಾಡಲಾಗುತ್ತದೆ. ಕ್ಷ-ಕಿರಣ, ಸ್ಕ್ರೀನಿಂಗ್, ಈಸಿಜಿ, ಅಲ್ಟ್ರಾಸೌಂಡ್ ಸ್ಕ್ಯಾನಿಂಗ್, ಬ್ರಾಂಕೋಸ್ಕೋಪಿ, ಈಸೋಫೆಗೋಸ್ಕೋಪಿ, ಪಲ್ಮನರಿ ಫಂಕ್ಷನ್ ಪರೀಕ್ಷೆಗಳು, ತುರ್ತು ನಿಗಾ ಘಟಕ – ಈ ಎಲ್ಲ ಸೌಲಭ್ಯಗಳಿವೆ.



*ಎಸ್‌ಡಿಎಸ್ ಸ್ಯಾನಿಟೋರಿಯಂ ಆಸ್ಪತ್ರೆಯ ಹೊರನೋಟ*

ಕರ್ನಾಟಕ ಸರಕಾರದಿಂದ ಸಿಟಿಜನ್ಸ್ ಚಾರ್ಟ್‌ಅನ್ನು ಪ್ರಪ್ರಥಮ ಬಾರಿಗೆ ಹೊರತಂದ ಹೆಗ್ಗಳಿಕೆ ಎಸ್‌ಡಿಎಸ್ ಸ್ಯಾನಿಟೋರಿಯಂನದು.

**ಗಣಪತಿ ದೇವಾಲಯ**

ಈ ಆಸ್ಪತ್ರೆಯ ಸುತ್ತಮುತ್ತಲಿನ ಭೈರಸಂದ್ರ, ಲಕ್ಕಸಂದ್ರ ಪ್ರದೇಶಗಳಲ್ಲಿ ಇಲ್ಲಿನ ಗಣಪತಿ ದೇವಾಲಯ ಪ್ರಸಿದ್ಧವಾದುದು. ಶ್ರೀ ಮೋಹನ್‌ಲಾಲ್ ಜೈನ್ ಎಂಬ ದಾನಿಗಳು ಹಲವಾರು ಭಕ್ತಾದಿಗಳ ಸಹಕಾರದಿಂದ ಈ ಆಸ್ಪತ್ರೆಯ ಆವರಣದಲ್ಲಿ ವೈದ್ಯೋನಾಥ ಗಣಪತಿ ದೇವಾಲಯವನ್ನು ನಿರ್ಮಾಣ ಮಾಡಿದ್ದಾರೆ. ಪ್ರತಿ ವರ್ಷ ಇಲ್ಲಿ ಗಣೇಶೋತ್ಸವ ಕಾರ್ಯಕ್ರಮಗಳು ವಿಜೃಂಭಣೆಯಿಂದ ನಡೆಯುತ್ತವೆ.

ರೋಗಿಗಳ ಮನೋರಂಜನ ಕಾರ್ಯಕ್ರಮಗಳು, ರಾಷ್ಟ್ರೀಯ ದಿನಾಚರಣೆಗಳು ಮುಂತಾದುವು ನಿಯಮಿತವಾಗಿ ಇಲ್ಲಿ ನಡೆಯುತ್ತವೆ.

**ಈ ಆಸ್ಪತ್ರೆಯ ಹಲವಾರು ಘೋಷಣೆಗಳು**

- ಧೂಮಪಾನ ವರ್ಜಿಸುವುದರಿಂದ ಕ್ಷಯರೋಗದ ಅಪಾಯ ಕಡಿಮೆ.
- ಕ್ಷಯರೋಗವನ್ನು ಬೇಗ ಪತ್ತೆ ಹಚ್ಚಿದಲ್ಲಿ ಬೇಗ ಗುಣಪಡಿಸುವುದು ಸಾಧ್ಯ.
- ಧೂಮಪಾನ ಅಥವಾ ಆರೋಗ್ಯ – ಆಯ್ಕೆ ನಿಮ್ಮದು.
- ಕ್ಷಯರೋಗವನ್ನು ತಡೆಯಿರಿ - ಬಡತನವನ್ನು ಹೊಡೆದೋಡಿಸಿ.

**ಆಸ್ಪತ್ರೆಯ ಉತ್ತಮ ವಾತಾವರಣ**

ಈ ಆಸ್ಪತ್ರೆಯ ಆವರಣದಲ್ಲಿರುವ ಗಿಡ-ಮರ-ಹೂಗಳನ್ನು ನೋಡುವುದೇ ಒಂದು ಆನಂದ. ಅವುಗಳನ್ನು ತೋಟಗಾರಿಕೆ ಇಲಾಖೆಯ ನುರಿತ ತಜ್ಞರ ಸಹಾಯ ವಿಲ್ಲದೆಯೇ ಇಷ್ಟೊಂದು ಸುಂದರವಾಗಿ ಅಭಿವೃದ್ಧಿಪಡಿಸಿರುವವರು ಡಾ|| ಶಶಿಧರ್ ಬುಗ್ಗಿಯವರು. ತನ್ಮಯತೆ, ಸೇವಾ ಮನೋಭಾವವಿದ್ದಲ್ಲಿ ಖಾಸಗಿ ನರ್ಸಿಂಗ್ ಹೋಮ್‌ಗಳನ್ನೂ ಮೀರಿ ಕೆಲಸ ಮಾಡಲು ಸಾಧ್ಯವಿದೆ ಎಂಬುದನ್ನು ಡಾ|| ಬುಗ್ಗಿಯವರು ತೋರಿಸಿಕೊಟ್ಟಿದ್ದಾರೆ. ಎಲ್ಲ ಸರಕಾರಿ ಆಸ್ಪತ್ರೆಗಳಲ್ಲೂ ಇಂಥ ದೃಢಸಂಕಲ್ಪದ, ಸೇವಾ ನಿರತ ವೈದ್ಯ, ವೈದ್ಯೇತರ ಸಿಬ್ಬಂದಿಗಳು ಇರುವುದಾದರೆ, ಇಂಥ ಆಸ್ಪತ್ರೆಗಳಲ್ಲಿ ಇರುವ ಉಪಕರಣಗಳ ಉಪಯೋಗವನ್ನೂ ಪಡೆಯುವಂತಾದರೆ ಖಾಸಗಿ ಆಸ್ಪತ್ರೆ, ನರ್ಸಿಂಗ್ ಹೋಂಗಳಿಗೆ ಹೋಗಲಾರದೆ ಪರಿತಪಿಸುವಂಥ ಪರಿಸ್ಥಿತಿಯನ್ನು ತಪ್ಪಿಸಬಹುದು.

ಎನ್. ಗೋಪಾಲಕೃಷ್ಣ
ಜಂಟಿ ಸಂಪಾದಕ, ನ್ಯಾಶನಲ್ ಇನ್ಸ್ಟ್ಯೂಟ್ ಆಫ್ ಮೆಂಟಲ್ ಹೆಲ್ತ್ ಅಂಡ್ ನ್ಯೂರೋ ಸೈನ್ಸ್, ಬೆಂಗಳೂರು - ೫೬೦ ೦೨೯

# GLIMPSES OF AL-AMEEN MOVEMENT

## Al-Ameen Group of Educational Institutions

In 1966, he had a dream... the man Dr. Mumtaz Ahmed Khan, visionary, scholar and educationist. The mission -- providing self-actualization and self-esteem to an ignorant Indian Muslim Community through higher education.

The founder's zeal, backed by a small, but faithful following, grew into a nationwide movement - Al-Ameen, headquartered in Bangalore, India's Garden City. The Al-Ameen movement is widely hailed as the Muslim Renaissance in Education, not to mention areas as diverse as Banking, Finance, Health & Mass Communication. Right from the very first institution - the Al-Ameen Arts, Science & Commerce College in Bangalore, to the 166 institutions existing today, the thrust has been on imparting quality education. The pride of Al-Ameen's institutions is the six professioal colleges, housed in the Bangalore Campus situated next to the beautiful Lalbagh Garden.

- **Al-Ameen Arts, Science & Commerce College**
- **Al-Ameen College of Pharmacy**
- **Al-Ameen College of Education**
- **Al-Ameen College of Law**
- **Al-Ameen Institute of Management Studies**
- **Al-Ameen Institute of Information Technology**

Al-Ameen is founded on the belief that education knows no barriers. In keeping with this, Al-Ameen education is freely accessible to both Indians and Foreign nationals.

### STATISTICAL DATA 2002-2003

| Sl. No. | Institutions | Total No. | Number of Students |
|---|---|---|---|
| 1. | **SCHOOLS :** | | |
| | a) Madrassas | 06 | 189 |
| | b) Nursery & Primary Schools | 64 | 20,204 |
| | c) Model Primary School | 01 | 119 |
| | d) Higher Primary Schools | 27 | 13,509 |
| | e) High Schools | 26 | 5,711 |
| | f) Destitute Home | 01 | 50 |
| | g) Al-Ameen Residential School, Hoskote | 01 | 301 |
| 2. | **INSTITUTES :** | | |
| | a) Teachers' Training Institute | 01 | 105 |
| | b) Tailoring Institutes | 15 | 276 |
| 3. | **COLLEGES :** | | |
| | a) Junior Colleges | 08 | 3,510 |
| | b) Junior Colleges (Vocational courses) | 06 | 361 |
| | c) First Grade Colleges | 05 | 2,753 |
| | d) College of Pharmacy | 01 | 347 |
| | e) College of Education | 01 | 99 |
| | f) College of Law | 01 | 273 |
| | g) Post Graduate Diploma (Evening) | 01 | 137 |
| | h) Institute of Management | 01 | 329 |
| | i) Institute of Information Technology | 01 | 3,000 |
| 4. | **OTHERS :** | | |
| | National Open School, New Delhi (Study Centre) | 01 | 143 |
| | Indira Gandhi National Open University (Study Centre) | 01 | 1,619 |
| | TOTAL | 169 | 53,035 |

| PROFESSIONAL COLLEGES | COURSES OFFERED |
|---|---|
| **Al-Ameen College of Pharmacy** | Diploma in Pharmacy<br>Bachelor of Pharmacy<br>Master of Pharmacy<br>Research in Pharmacy (Ph.D) |
| **Al-Almeen College of Education** | Bachelor of Education |
| **Al-Almeen College of Law** | Bachelor of Law |
| **Al-Ameen Institute of Management Studies** | Bachelor of Business Management<br>Master of Business Administration |
| **Al-Almeen Arts, Science & Commerce College** | Bachelor of Computer Application<br>Bachelor of Biotechnology<br>Bachelor of Microbiology<br>B.Com. with Computer Science<br>Master of Science in Microbiology<br>Master of Computer Application<br>Master of Biotechnology |



# Al-Ameen Group of Institutions

Ground Floor, Administrative Block, Al-Ameen Campus
Hosur Road (Near Lalbagh Main Gate), Bangalore - 560 027
Tel : 080-2235626, 2222402, 2278468, 2234861 Fax : 91-80-2278464
E-mail : AIITCE@yahoo.com Website : www.bangaloreonline.com

**ಸಾ**ಮ್ರಾಜ್ಯಶಾಹಿಯ ಕರಾಳ ಮುಖಗಳು ಒಂದು ಕಾಲದಲ್ಲಿ ವಸಾಹತು ದೇಶಗಳಲ್ಲಿ ವ್ಯಕ್ತವಾಗುತ್ತಿತ್ತು. ಒಂದೊಂದೇ ದೇಶಗಳು ನಿರ್ವಸಾಹತೀಕರಣಕ್ಕೆ ಒಳಗಾಗುತ್ತಿರುವಂತೆಯೇ, ಬಂಡವಾಳ ಶಾಹಿಯು ವಿಶ್ವಾತ್ಮಕವಾಗುತ್ತಾ ಜಾಗತೀಕರಣದ ಹೊಸ ವೇಷದಲ್ಲಿ ತನ್ನ ಬಲಿಷ್ಠ ಬಾಹುಗಳನ್ನು ಜಗತ್ತಿನಾದ್ಯಂತ ಚಾಚುತ್ತಿದೆ. ಸಾಮ್ರಾಜ್ಯ ಶಾಹಿಯು ಸದಾ ತನ್ನ ಚಿಂತನೆಗಳನ್ನೇ ಪ್ರಧಾನ ಧಾರೆಯನ್ನಾಗಿ ರೂಪಿಸುತ್ತಾ ತನ್ನೊಳಗೆ ಇತರರನ್ನು ಸೆಳೆದುಕೊಳ್ಳುತ್ತಾ ಹೋಗುತ್ತದೆ. ಇದು ಅರಿವಿಗೆ ಬರದಂತೆ ನಡೆಯುತ್ತಾ ಹೋಗುತ್ತದೆ. ವಿಶ್ವದಾದ್ಯಂತ ಬಲಿಷ್ಠ ನೆಟ್‌ವರ್ಕ್ ಹೊಂದಿರುವ ತನ್ನ ಮಾಧ್ಯಮಗಳ ಮೂಲಕ ಇದನ್ನು ಅದು ಹೆಣೆಯುತ್ತದೆ. ಅಮೇರಿಕಾ ಕಳೆದ ೧೦೦ ವರ್ಷ ಗಳಿಂದಲೂ ಈ ಎಲ್ಲವನ್ನೂ ಸಲೀಸಾಗಿ ನಡೆಸಿಕೊಂಡುಬಂದು ಈಗ ಸರ್ವಾಧಿಕಾರತ್ವವನ್ನು ನಡೆಸುತ್ತಿದೆ. ಹೀಗಾಗಿಯೇ ಅದು ತನ್ನ ಎ. ಪಿ., ರಾಯಿಟರ್, ಸಿ. ಎನ್. ಎನ್‌ಗಳಲ್ಲಿ ತಾನು ಬಯಸಿದಂತೆ ಯುದ್ಧ ವರದಿಗಳನ್ನೂ ತೃತೀಯ ಜಗತ್ತುಗಳ ಬಗೆಗಿನ ಚಿತ್ರಣವನ್ನೂ ನೀಡುತ್ತಾ ಅದೇ ಸತ್ಯವೆಂಬಂತೆ ಜಗತ್ತಿಗೆ ಉಣಬಡಿಸುತ್ತಿದೆ. ಅಂತಹ ವರದಿಗಳಲ್ಲಿ ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೋ ಬಗೆಗೆ ಕಲ್ಪಿತ ಕಥೆಗಳು ಹುಟ್ಟುತ್ತಲೇ ಇರುತ್ತವೆ. ತನ್ನ ಜನರನ್ನು ಬಡತನದಲ್ಲಿ ದೂಡಿರುವ ಕ್ಯಾಸ್ಟ್ರೋ ತಾನು ಮಾತ್ರ 'ಜಗತ್ತಿನ ಅತಿ ಶ್ರೀಮಂತ ವ್ಯಕ್ತಿ' ಎಂಬ ಸುಳ್ಳು ಮಾಹಿತಿಯನ್ನು ಬಿಡುಗಡೆ ಮಾಡುತ್ತಿರುತ್ತದೆ.



'ಪ್ಯಾರಿಸ್ ಒಪ್ಪಂದ'ವೆಂಬ ಕುಣಿಕೆಗೆ ತಲೆಯೊಡ್ಡಿ ಅಮೇರಿಕಾದ ಕೈಗೊಂಬೆ ಸರ್ಕಾರಗಳ ದಬ್ಬಾಳಿಕೆಗೆ ಒಳಗಾಗಿದ್ದ ಕ್ಯೂಬಾ ಮುಂದೆ ಕ್ಯಾಸ್ಟ್ರೋ, ಚೆ ಗೆವಾರ ಮೊದಲಾದವರ ನೇತೃತ್ವದಲ್ಲಿ ಗೆರಿಲ್ಲಾ ಮಾದರಿಯ ಯುದ್ಧದ ನಂತರ ಸ್ವತಂತ್ರವಾಗಿ ಅಂದಿನಿಂದ ಇಂದಿನ ತನಕ ಕ್ಯಾಸ್ಟ್ರೋರನ್ನೇ ಅಧ್ಯಕ್ಷರನ್ನಾಗಿ ಹೊಂದಿದೆ.

ಒಂದು ದೇಶದ ಆರ್ಥಿಕ ಸಂಪನ್ಮೂಲವೇ ಆ ದೇಶದ ಬಡತನಕ್ಕೆ ಕಾರಣವಾಗುವ ವಿಪರ್ಯಾಸವನ್ನು ಚರಿತ್ರೆಯಲ್ಲಿ ನೋಡಿದ್ದೇವೆ. ಈಗಲೂ ನೋಡುತ್ತಿದ್ದೇವೆ. ತನ್ನ ಸಕ್ಕರೆ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಕ್ಯೂಬಾವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಅಮೇರಿಕಾ ಶ್ರಮಿಸಿತು. ಆದರೆ ಕ್ಯಾಸ್ಟ್ರೋ ಇದರ ವಿರುದ್ಧ ಸೆಡ್ಡು ಹೊಡೆದರು. ಅಮೇರಿಕಾದ ಬಹುರಾಷ್ಟ್ರೀಯ ಕಂಪನಿಗಳು ಕ್ಯೂಬಾದಲ್ಲಿ ಬೀಡುಬಿಟ್ಟಿದ್ದವು. ಅವುಗಳಿಗೆ ಸೇರಿದ ಜಮೀನನ್ನು ಕ್ಯಾಸ್ಟ್ರೋ ರಾಷ್ಟ್ರೀಕರಿಸಿದರು. ತನ್ನ ಜನರ ಅನುಕೂಲಕ್ಕಾಗಿ ಭೂ ಮಸೂದೆ ಜಾರಿಗೆ ತಂದರು. ಶ್ರೀಮಂತರ ಕ್ಯಾಸಿನೋಗಳನ್ನು, ಹವಾನಾ ವಿಶ್ವವಿದ್ಯಾನಿಲಯವನ್ನು ರಾಷ್ಟ್ರೀಕರಿಸಿದರು. ಈ ಎಲ್ಲ ಬೆಳವಣಿಗೆಗಳಿಂದ ವಿಚಲಿತವಾದ ಅಮೇರಿಕಾ ಕ್ಯೂಬಾದಿಂದ ಆಮದು ಮಾಡಿ ಕೊಳ್ಳುತ್ತಿದ್ದ ಶೇ. ೭೦ರಷ್ಟು ಸಕ್ಕರೆಯನ್ನು ನಿಲ್ಲಿಸಿತು.

# ಕ್ಯೂಬಾದ ಹಾಡು-ಪಾಡು

ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಕ್ಯೂಬಾವು ಕಳೆದ ಶತಮಾನದಲ್ಲಿ ಎದುರಿಸಿದ ಪರಿಸ್ಥಿತಿಗಳು, ಕಂಡುಕೊಂಡ ಮಾರ್ಗಗಳು, ಕ್ಯಾಸ್ಟ್ರೋ ಮತ್ತು ಅಲ್ಲಿನ ಜನರ ಅಚಲ ನಿಲುವುಗಳು ಅಚ್ಚರಿಯನ್ನು ಮೂಡಿಸುವಂಥವು. ಹಾಗೆಯೇ ಪ್ರಶ್ನೆಯನ್ನು ಹುಟ್ಟಿಸುವಂಥ ದ್ದಾಗಿದೆ. ಕ್ಯೂಬಾ ಕಮ್ಯುನಿಸಂ ಅನ್ನು ಒಪ್ಪಿಕೊಂಡಿರುವ ದೇಶ. ಒಂದೊಮ್ಮೆ ಸೋವಿಯತ್ ಯೂನಿಯನ್‌ನ ಅಭಯ ಹಸ್ತದ ನೆರವು ಪಡೆದು ಕಮ್ಯೂನಿಸಂನ ಸಾಧ್ಯತೆಗಳನ್ನು ನಿಜ ಮಾಡಿ ತೋರಿಸಿದ ದೇಶವೂ ಹೌದು. ಹಾಗೆಯೇ ಕ್ಯಾಸ್ಟ್ರೋನಂತಹ ಪ್ರಜ್ಞಾವಂತ, ಹಾಗೂ ಖಚಿತ ನಿಲುವುಗಳುಳ್ಳ ರಾಜಕೀಯ ನಾಯಕನೊಬ್ಬ ದೇಶವೊಂದನ್ನು ಹೇಗೆ ಮುನ್ನಡೆಸಬಲ್ಲ ಎಂಬುದಕ್ಕೂ ಮಾದರಿಯಾದ ದೇಶ.

**ಪಚಿಕಾ**

ಈ ಪುಟ್ಟ ಕ್ಯೂಬಾದ ಸಾಂಸ್ಕೃತಿಕ ಚರಿತ್ರೆಯನ್ನು ತಮ್ಮ ಪ್ರವಾಸ ಕಥನದುದ್ದಕ್ಕೂ ಜಿ. ಎನ್. ಮೋಹನ್ ದಾಖಲಿಸುತ್ತಾ ಹೋಗುತ್ತಾರೆ.

೧೯೫೯ರಲ್ಲಿ ಸ್ವಾತಂತ್ರ್ಯ ಪಡೆದ ಕ್ಯೂಬಾ ಸಾಕ್ಷರತೆಯಲ್ಲಿ, ಗಂಡು-ಹೆಣ್ಣಿನ ಸಮಾನತೆಯಲ್ಲಿ, ಸಾಂಸ್ಕೃತಿಕ-ಕ್ರೀಡಾ ಕ್ಷೇತ್ರದಲ್ಲಿ, ವಿಜ್ಞಾನ ಮತ್ತು ಆರೋಗ್ಯ ಕ್ಷೇತ್ರದಲ್ಲಿ, ಇನ್ನೂ ಅನೇಕ ರಂಗಗಳಲ್ಲಿ ಅತಿ ಕಡಿಮೆ ಅವಧಿಯಲ್ಲಿ ಅಪಾರವಾದುದನ್ನು ಸಾಧಿಸಿದ ದೇಶ. ಅದಕ್ಕೂ ಹಿಂದೆ ಸ್ಪೇನ್‌ನ ನಾನೂರು ವರ್ಷಗಳ ಆಳ್ವಿಕೆಯ ವಿರುದ್ಧ ಹೋರಾಡಿ ಇನ್ನೇನು ಸ್ವಾತಂತ್ರ್ಯ ಪಡೆಯಿತು ಎಂಬಷ್ಟು ಹೊತ್ತಿಗೆ ಅಮೇರಿಕಾದ ಮಧ್ಯಪ್ರವೇಶದಿಂದಾಗಿ ಅಮೇರಿಕಾದ ಈ ಕ್ರಮದಿಂದ ಕ್ಯೂಬಾ ಆರ್ಥಿಕವಾಗಿ ತತ್ತರಿಸಿತು. ಆದರೆ ಆಗಿನ ಸೋವಿಯತ್ ಯೂನಿಯನ್ ಸಹಾಯ ಹಸ್ತ ಚಾಚಿ ಆರ್ಥಿಕ ಸ್ಥಿರತೆ ಸಿಗುವಂತೆ ಮಾಡಿತು. ಇದರಿಂದ ಸಿಟ್ಟಿಗೆದ್ದ ಅಮೇರಿಕಾ, ಕಮ್ಯೂನಿಸಂನ ಪ್ರಚಾರ ಮತ್ತು ಪ್ರಜಾಪ್ರಭುತ್ವ ವಿರೋಧಿ ಎಂಬ ಆರೋಪಗಳನ್ನು ಹೊರಿಸಿ ಕ್ಯೂಬಾದ ಮೇಲೆ ಆರ್ಥಿಕ ದಿಗ್ಬಂಧನವನ್ನು ಹೇರಿತು.




'ಪ್ರಜಾಪ್ರಭುತ್ವ', 'ಮಾನವ ಹಕ್ಕುಗಳು' ಎಂಬೆಲ್ಲಾ ಪದಗಳನ್ನು ತನ್ನ ಮೂಗಿನ ನೇರಕ್ಕೆ ಅರ್ಥೈಸುವ ಸಾಮ್ರಾಜ್ಯಶಾಹಿಗಳಿಗೆ – ಕ್ಯೂಬಾ ನಿಜವಾದ ಅರ್ಥದಲ್ಲಿ ಮಾನವ ಹಕ್ಕುಗಳನ್ನು ತನ್ನ ದೇಶದಲ್ಲಿ ಸ್ಥಾಪಿಸಿದ್ದು ಮುಖ್ಯವಾಗುವುದಿಲ್ಲ. ಪ್ರತೀ ನೂರಿಪ್ಪತ್ತು ಮನೆಗೆ ಒಬ್ಬ ಡಾಕ್ಟರನ್ನು ನೇಮಿಸಿ ಮನೆ ಮನೆಗೆ ಹೋಗಿ ಉಚಿತ ಸೇವೆ ಸಲ್ಲಿಸುವುದಾಗಲೀ, ಗರ್ಭಿಣಿಯ ಬಗೆಗೆ ವಿಶೇಷ ಕಾಳಜಿ ವಹಿಸಿ ಆರೋಗ್ಯ ನೋಡಿಕೊಳ್ಳುವ ಸರ್ಕಾರದ ನಿಲುವಾಗಲೀ, ಹೆಣ್ಣು ಮಕ್ಕಳಿಗೆ ಎಲ್ಲಾ ರೀತಿಯ ನಿರ್ಭೀತ ಪರಿಸ್ಥಿತಿ ಮತ್ತು ಅವಕಾಶಗಳನ್ನು ಹಾಗೂ ಅಭಿಪ್ರಾಯ ರೂಪಿಸುವ ಅಧಿಕಾರವನ್ನು ನೀಡಿರುವ ಅಲ್ಲಿನ ಪ್ರಜಾಸತ್ತಾತ್ಮಕ ನಿಲುವಾಗಲೀ, ನಗರ-ಹಳ್ಳಿಗಳ ಅಂತರ ಕಡಿಮೆ ಮಾಡಿ ೯೮.೨% ಸಾಧಿಸಿದ ಸಾಕ್ಷರತೆಯಾಗಲೀ, ಚುನಾವಣೆಯಲ್ಲಿ ಆಯ್ಕೆಯಾದ ಪ್ರತಿನಿಧಿ ಸರಿಯಾಗಿ ಕರ್ತವ್ಯ ನಿರ್ವಹಿಸದಿದ್ದಾಗ ಅವನನ್ನು ಬದಲಿಸುವ ಜನರ ಸ್ವಾತಂತ್ರ್ಯ ವಾಗಲೀ ಅಮೇರಿಕಾದ ಜಾಣ ಕುರುಡು ಕಣ್ಣಿಗೆ ಕಾಣಿಸುವುದಿಲ್ಲ. ಇವೆಲ್ಲವೂ ಯಾವುದೇ ಒಂದು ದೇಶದ ಜನತೆ ಕಾಣಬಹುದಾದ ಕನಸಿನ ಸಾಕ್ಷಾತ್ಕಾರವಾಗಿರುತ್ತದೆ.

ಇವುಗಳನ್ನೆಲ್ಲಾ ಬದಿಗೊತ್ತಿ ಅಮೇರಿಕಾ ವಿಧಿಸಿದ ಆರ್ಥಿಕ ದಿಗ್ಬಂಧನ ಮತ್ತು ಸೋವಿಯತ್ ಯೂನಿಯನ್‌ನ ಪತನ ಕ್ಯೂಬಾವನ್ನು ಬಡತನದ ಕೂಪಕ್ಕೆ ತಳ್ಳಿತು. ಆದರೆ ವಿಶ್ವದಾದ್ಯಂತ ಅನೇಕ ದೇಶಗಳು ಕ್ಯೂಬಾಗೆ ನೀಡಿದ ಬೆಂಬಲ ಅಭೂತಪೂರ್ವ ವಾದುದು. ಅಮೇರಿಕಾದ ಸಂಘ ಸಂಸ್ಥೆಗಳು, ಜನಸಾಮಾನ್ಯರು ಅಂದೂ-ಇಂದೂ ಕ್ಯೂಬಾಕ್ಕೆ ಸರ್ಕಾರದ ವಿರೋಧದ ನಡುವೆಯೂ ಸಹಾಯ ಮಾಡುತ್ತಿದ್ದಾರೆ. ಭಾರತ ಕಳಿಸಿದ ಗೋಧಿ, ಬ್ರೆಜಿಲ್‌ನ ಕಾಫಿ, ಚೀನಾದ ಸೈಕಲ್ ಹೀಗೆ ಅನೇಕರ ಸಹಾಯ ಕ್ಯೂಬಾಕ್ಕೆ ಹುಲ್ಲುಕಡ್ಡಿಯಂತೆ ನೆರವಾದವು.

ಆದರೆ ಇಂದು ಕ್ಯೂಬಾ ಬಡತನದಿಂದ ತತ್ತರಿಸುತ್ತಿದೆ. ಸಹಾಯ ಮಾಡಿದ ದೇಶಗಳ ವಿರುದ್ಧ ಆರ್ಥಿಕ ದಿಗ್ಬಂಧನ ಹೇರುವ ಬೆದರಿಕೆಯೊಡ್ಡಿ ನೀಚತನಕ್ಕಿಳಿದ ಅಮೇರಿಕಾದ ಕ್ರಮ ದಿಂದಾಗಿ ಕ್ಯೂಬಾ ಮತ್ತಷ್ಟು ಬಸವಳಿದಿದೆ. ಕ್ಯೂಬಾದ ಗ್ವಂತನಮೋದಲ್ಲಿನ ನೌಕಾನೆಲೆ ಸದಾ ಕ್ಯೂಬಾದ ಮೇಲೆ ಒಂದಲ್ಲಾ ಒಂದು ತೊಂದರೆಗಳನ್ನು ಸೃಷ್ಟಿಸುತ್ತಲೇ ಇರುತ್ತದೆ.

ಪ್ರವಾಸೋದ್ಯಮದ ಮೂಲಕವಾದರೂ ಆರ್ಥಿಕತೆಯ ಸುಧಾರಣೆಗೆ ಅದು ಮಾಡಿದ ಪ್ರಯತ್ನಗಳಿಗೆ ತೊಡಕಾಗಿ ಅಮೇರಿಕಾ ಪ್ರವಾಸಿ ವಿಮಾನಗಳ ಮೇಲೆ ದಾಳಿ ಮಾಡುತ್ತಿದೆ. ಕ್ಯೂಬಾ ಮಕ್ಕಳಿಗೆ ಕುಡಿಯಲು ಹಾಲಿಲ್ಲ, ತಿನ್ನಲು ಬ್ರೆಡ್ಡಿಲ್ಲ, ಕ್ಯೂಬಾದ ಅನೇಕರ ಬಳಿ ಕಾರಿದ್ದರೂ ಇಂಧನವಿಲ್ಲದೇ ಹತ್ತಾರು ಮೈಲಿ ದೂರ ಜನ ಸೈಕಲ್ಲಿನಲ್ಲಿ ಮತ್ತು ಕಾಲ್ನಡಿಗೆಯಲ್ಲಿ ಪಯಣಿಸುತ್ತಾರೆ. ಅಲ್ಲಿನ ಅತ್ಯುತ್ಕೃಷ್ಟ ಡಾಕ್ಟರುಗಳು ತೇಪೆ ಹಚ್ಚಿದ ಬಟ್ಟೆ ಧರಿಸುತ್ತಾರೆ. ಕೇವಲ ೯೦ ಮೈಲಿಯಾಚೆ ಅಮೇರಿಕಾಕ್ಕೆ ಹಾರಿದರೆ ಸಕಲ ಭೋಗಗಳನ್ನೂ ಇವರು ಅನುಭವಿಸಲು ಸಾಧ್ಯವಿದ್ದರೂ, ಅಚಲ ನಿಷ್ಠೆಯಿಂದ ಇವರಿನ್ನೂ ಕ್ಯೂಬಾದಲ್ಲೇ ಇದ್ದಾರೆ. ಇಲ್ಲಿನ ಕ್ರೀಡಾಪಟುಗಳಿಂದ ಹಿಡಿದು ಜೈವಿಕ ವಿಜ್ಞಾನಿಗಳವರೆಗೆ ಅನೇಕರಿಗೆ ಅಮೇರಿಕಾ ಸತತ ಆಮಿಷ ಒಡ್ಡುತ್ತಿದ್ದರೂ ಕೆಲವೇ ಕೆಲವರನ್ನು ಬಿಟ್ಟು ಬಹುಸಂಖ್ಯಾತರು ಆಮಿಷಕ್ಕೆ ಬಲಿ ಬಿದ್ದಿಲ್ಲ.

ಇಡೀ ಪ್ರವಾಸಕಥನದುದ್ದಕ್ಕೂ ಲೇಖಕರು ಮೇಲಿನ ವಿಚಾರಗಳನ್ನೆಲ್ಲಾ ಕಾವ್ಯಾತ್ಮಕ ಭಾಷೆಯಲ್ಲಿ ಎದೆತುಂಬಿ ವಿವರಿಸುತ್ತಾ ಹೋಗುತ್ತಾರೆ. ಸಾಮಾನ್ಯವಾಗಿ ಪ್ರವಾಸ ಕಥನವೆಂದರೆ ಅದು ಪ್ರವಾಸಿ ತಾಣಗಳ ವಿವರ ವರ್ಣನೆಗಳನ್ನು ಜೊತೆಯಲ್ಲೇ ಒಳಗೊಂಡಿರುತ್ತದೆ. ಸ್ವತಃ ಸುಂದರ ದ್ವೀಪವಾದ ಕ್ಯೂಬಾದ ಬಗ್ಗೆ ಇಂತಹ ಯಾವ ವಿವರಗಳನ್ನೂ ಲೇಖಕರು ನೀಡುವುದಿಲ್ಲ. ಮತ್ತು ಅದು ಅವರ ಉದ್ದೇಶವೂ ಅಲ್ಲ. ಯುವಜನರ ಸಮ್ಮೇಳನದಲ್ಲಿ ಭಾಗವಹಿಸಲು ಹೋದ ಲೇಖಕರು ೭೦-೮೦ರ ದಶಕದಲ್ಲಿ ಭಾರತದಲ್ಲಿ ಸಾಕಷ್ಟು ಪ್ರಭಾವಶಾಲಿಯಾಗಿದ್ದ ಎಡಪಂಥೀಯ ಸಂಘಟನೆಗಳಲ್ಲಿ, ಚಳುವಳಿಗಳಲ್ಲಿ ಗುರುತಿಸಿಕೊಂಡವರು. ಆ ಕಾಲಕ್ಕೆ ನಮ್ಮ ಸಮಸ್ಯೆಗಳಿಗೆ ಉತ್ತರಗಳನ್ನು, ಭರವಸೆಗಳನ್ನು ಬಹಳಷ್ಟು ಆತ್ಮವಿಶ್ವಾಸದಿಂದಲೇ ಎಡಪಂಥೀಯ ಚಿಂತನೆಯಲ್ಲಿ ಕಂಡುಕೊಂಡ ಯುವ ಮನಸ್ಸುಗಳಿಗೆ ೯೦ರ ದಶಕದ ನಂತರದಲ್ಲಾದ ಸೋವಿಯತ್ ಯೂನಿಯನ್‌ನ ಪತನ ಹಾಗೂ ಜಾಗತೀಕರಣದ ಬೆಳವಣಿಗೆಗಳು ಮಂಕು ಕವಿದ ವಾತಾವರಣವನ್ನು ಸೃಷ್ಟಿಸಿದೆ. ನಮ್ಮ ಸುತ್ತಲಿನ ಸಾಂಸ್ಕೃತಿಕ ವಾತಾವರಣ ಚಿತ್ರವಿಚಿತ್ರ ಗೊಂದಲಗಳನ್ನು ಹುಟ್ಟುಹಾಕುತ್ತಿದೆ. ಪುರೋಹಿತಶಾಹಿ ಮೌಲ್ಯಗಳು ಹೊಸ ಹೊಸ ವೇಷಗಳೊಂದಿಗೆ ಶಿಕ್ಷಿತ ಮಧ್ಯಮ ವರ್ಗಗಳೊಳಗೆ ಪ್ರವೇಶಿಸುತ್ತಿದೆ. ಅದು ವಾಸ್ತುವಿನ ರೂಪದಲ್ಲೋ ದೇವಸ್ಥಾನಗಳಂತಹ ಸಂಸ್ಥೆಗಳ, ಮಠಗಳ ಬಲಿಷ್ಠತೆಯಲ್ಲೋ ಮರುರೂಪ ಪಡೆಯುತ್ತಿದೆ. ಬಡ ಶೂದ್ರರು, ದಲಿತರು ಕೋಮುಗಲಭೆಗಳಲ್ಲಿ ಬಳಕೆಯಾಗುತ್ತಿರುವ ದುರಂತ ಒಂದೆಡೆಯಾದರೆ, ಆರ್ಥಿಕವಾಗಿ ಸುಭದ್ರ ಸ್ಥಿತಿಯಲ್ಲಿರುವ ಶೂದ್ರವರ್ಗ - ತಾನು ಶೂದ್ರ ಎಂಬ ಅಂಶವನ್ನೇ ರಾಜಕೀಯ ಅಸ್ತ್ರವನ್ನಾಗಿ ಬಳಸಿಕೊಂಡು ಇನ್ನಷ್ಟು ಸಾಂಸ್ಥೀಕರಣಗೊಂಡು ಪುರೋಹಿತಶಾಹಿಯನ್ನು ಆವಾಹಿಸಿಕೊಳ್ಳುವುದರಲ್ಲಿ ಮಗ್ನವಾಗಿದೆ.

ಈ ಎಲ್ಲಾ ಸನ್ನಿವೇಶಗಳ ನಡುವೆ 'ನನ್ನೊಳಗಿನ ಹಾಡು ಕ್ಯೂಬಾ' ನಮ್ಮನ್ನು ಕಾಡುತ್ತದೆ. ಹಾಗೆಯೇ ಕೆಲವು ಪ್ರಶ್ನೆಗಳನ್ನೂ ಕೇಳುವಂತೆ ಮಾಡುತ್ತದೆ. ಇಡೀ ಕೃತಿ ಕಾವ್ಯಾತ್ಮಕ ಭಾಷೆಯಲ್ಲಿ, ಭಾವುಕತೆಯ ಆರ್ದ್ರತೆಯಲ್ಲಿ ಓದುಗನನ್ನು ತಟ್ಟುತ್ತದೆ. ಇದರ ಶೀರ್ಷಿಕೆಯೇ ಇದನ್ನೂ ಧ್ವನಿಸುತ್ತದೆ. ಫಿಡೆಲ್, ಚೆ ಗೆವಾರ, ಮಂಡೇಲರಿಂದ ಪ್ರಭಾವಿತನಾದ ಲೇಖಕ 'ಇವರೆಲ್ಲರೂ ಎದೆಯಲ್ಲಿ ಕಾವ್ಯ ಕೈಯಲ್ಲಿ ಖಡ್ಗ ಹಿಡಿದ ಪಂಪನ ಬಂಧುಗಳು' ಎನ್ನುತ್ತಾರೆ. ಕಾವ್ಯ ಮನುಷ್ಯತ್ವವನ್ನು ಹೇಳಿದರೆ, ಖಡ್ಗ ಮನುಷ್ಯತ್ವಕ್ಕೆ ಧಕ್ಕೆ ಬಂದಾಗ ನಡೆಸಬೇಕಾದ ಹೋರಾಟವನ್ನು ಹೇಳುತ್ತದೆ. ಇವೆರಡೂ ಕ್ಯೂಬಾದಲ್ಲಿದೆ ಎನ್ನುವುದು ಲೇಖಕನ ಆಪ್ತತೆಗೆ ಕಾರಣವಾಗಿದೆ ಎನ್ನುವುದು ನಿಜವಾದರೂ ತೃತೀಯ ಜಗತ್ತಿನ ಇಂದಿನ ಅಸಹಾಯಕತೆಯೇ ಲೇಖಕನ ಈ ಶೈಲಿಗೆ ಕಾರಣವಾಗಿರಬಹುದೇನೋ ಎಂಬ ಸಂಶಯವೂ ಕಾಡುತ್ತದೆ.

''ಹೊಸ ಶತಮಾನ ಇಲ್ಲಿಂದ ಆರಂಭವಾಗುತ್ತದೆ – ಕ್ಯೂಬಾದಿಂದ'' ಎಂಬ ಭರವಸೆಯ ಮಾತಿನಲ್ಲಿ ಕೃತಿಯನ್ನು ಅಂತ್ಯಗೊಳಿಸುವ ಲೇಖಕರು ಸಾಮ್ರಾಜ್ಯಶಾಹಿಯ ಕರಾಳತೆಗೆ ಪರ್ಯಾಯವನ್ನು ಕ್ಯೂಬಾದಲ್ಲಿ ಅರಸಿದಂತೆ ಕಾಣುತ್ತದೆ. ಆದರೆ ಈ ಭಾವುಕವಾದ ನಿಲುವು ಖಚಿತವಾದ ಉತ್ತರವಾಗಲು ಸಾಧ್ಯವಿಲ್ಲ. ಹೊಟ್ಟೆ ತುಂಬಿದ ಜನರಿಂದ ತುಂಬಿರುವ ಕ್ಯೂಬಾ ಭವಿಷ್ಯದಲ್ಲಿ ಕಾಣಿಸುವುದಾದರೆ ಆಗ ಮಾತ್ರ ಅದು ಪರ್ಯಾಯವಾಗಬಲ್ಲದು. ಒಂಟಿ ಕ್ಯೂಬಾದೊಂದಿಗೆ ಅಸಂಖ್ಯ ಕೈಗಳು ಸೇರಿಕೊಳ್ಳಬೇಕಾಗಿದೆ. ಹಾಗೆಯೇ ಕ್ಯಾಸ್ಟ್ರೋ ಒಬ್ಬರೆಡೆಗೆ ನೋಡದೆ ಹೊಸ ಯುವ ರಾಜಕೀಯ ನಾಯಕರ ಕೈಗೆ ಅಧಿಕಾರ ಹೋಗಬೇಕಾಗಿದೆ – ಎನ್ನುವ ಕಟು ಸತ್ಯಗಳನ್ನು ಮರೆಯುವಂತಿಲ್ಲ.

ಸಬಿತಾ
ಕನ್ನಡ ಉಪನ್ಯಾಸಕಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೊಪ್ಪ



ಮಜವೆಂದರೆ ಮಜ
ತಿನ್ನುತ್ತ ತಿರುಗುತ್ತ
ಆಡುತ್ತ ನಲಿಯುತ್ತ
ಬೇಕೆಂದಾಗಲೆಲ್ಲ ಮುದ್ದಿಸುತ್ತ
ಪ್ರೀತಿಸಿದಷ್ಟೇ ಹಗೆ ಸಾಧಿಸುತ್ತ
ಏರುಹಗಲಿನ ಬೆನ್ನೇರಿ ಕುಳಿತು
ದಿನದ ಪಾಳಿಯ ಮುಗಿಸ ಹೊರಟ ಸೂರ್ಯ
ದಣಿವಾರಿಸಿಕೊಂಡಂತೆ ಅನುಭವ
ಹುಟ್ಟಿಸಿದರೆ ಭಯ
ಪಿಸುಗುಟ್ಟಿ ಮನೆ ಮನೆ ಬೀದಿ
ದೀಪಗಳೆಲ್ಲ ಬೀಳ್ಕೊಂಡವು
ಅದೆಷ್ಟು ದೂರ ಹೋಗಿ
ಕರೆತಂದ ಚಂದ್ರನ ಜೊತೆಗೆ
ಅಲ್ಲಲ್ಲಿ ಬಿದ್ದದ್ದು ಇಲ್ಲೇ ಬಿದ್ದರೆ
ಖಾತ್ರಿ ಬಾಂಬಿನದೇ ಸುದ್ದಿ
ಮುಗಿಲ ತುಂಬ ಧಗೆ ಬಿರಿದು
ಭೂಮಿ ಉಸಿರ ಹೀರಿ ನೆತ್ತರ ಆವಿ
ಬಿದ್ದ ಮಳೆ ಹರಿವ ಹೊಳೆ
ಜೀಕಿ ಜೋಕಾಲಿ ಹೆಣರಾಶಿ
ಬಾಯಿ ವಾಲಗವನೂದಿ ಡಬ್ಬಿ ಬಡಿದು
ಧ್ವನಿ ಏರಿಸಿ ಅತ್ತರೆ ತಾರೆಗಳು
ದೀಪಗಳೆಲ್ಲ ಹಾಡಿದವು
ಸೂರೆ..... ಸೂರೆ....
ಸೂರೆಂಬುದು ಮಾಯೆ

ಕವಿತಾ ರೈ, ಬಿ. ಆರ್., ಸಂಶೋಧನಾ ವಿದ್ಯಾರ್ಥಿನಿ, ಸ್ನಾತಕೋತ್ತರ ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಕೊಣಾಜೆ-೫೭೪ ೧೯೯

# ಇಂದಿನ ನೀರಾವರಿ ವ್ಯವಸ್ಥೆಗೊಂದು ಪರ್ಯಾಯ ಇದೆಯೇ ?

ಇವತ್ತು ತೈಲ ಸಂಪನ್ಮೂಲದ ಬಗ್ಗೆ ವಿವಾದ, ಜಗಳ, ಕಾಳಗ ಆಗುತ್ತಾ ಇದೆ. ಇನ್ನು ಮುಂದೆ ನೀರಿನ ಬಗ್ಗೆ ಇದೆಲ್ಲಾ ಆಗುವುದರಲ್ಲಿ ಸಂದೇಹವಿಲ್ಲ. ಬಡವರು-ಬಲ್ಲಿದರ ನಡುವೆ, ರಾಜ್ಯಗಳ ನಡುವೆ, ದೇಶಗಳ ನಡುವೆ, ಗ್ರಾಮೀಣ ವಾಸಿಗಳು-ನಗರ ವಾಸಿಗಳ ನಡುವೆ, ಮತ್ತು ನಮ್ಮ ನಮ್ಮಲ್ಲೇ ಮುಷ್ಟಾ ಮುಷ್ಟಿ ಇತ್ಯಾದಿಗಳಿಂದ ಸಾಮಾಜಿಕ ಅಶಾಂತಿ ಅನಿವಾರ್ಯವೇ ? ಈ ಪ್ರಶ್ನೆಯನ್ನು ಕುರಿತು ಗಂಭೀರ ಚಿಂತನೆ ಅವಶ್ಯಕ.

**ಅತ್ತಿಗನಾಳ್ ವೆಂ. ಶಂಕರರಾವ್**

"World has enough for everyone's need but not everyone's greed."

ಇದು ಗಾಂಧೀಜಿ ಹೇಳಿದ ಬುದ್ಧಿ ಮಾತು. ಯಾವುದೇ ಆರ್ಥಿಕ ವ್ಯವಸ್ಥೆಯನ್ನು ಯೋಜಿಸುವಾಗ ನೆನಪಿನಲ್ಲಿಟ್ಟುಕೊಳ್ಳಬೇಕಾದ ಗುರಿ.

ಮೊಟ್ಟಮೊದಲು ನಾವು ಗ್ರಹಿಸಬೇಕಾದ ಅಂಶವೆಂದರೆ, ನೀರು ಅಥವಾ ಜಲ ಸಂಪನ್ಮೂಲದ ಪ್ರಮಾಣ ಪ್ರಕೃತಿಯಲ್ಲಿ ದೊರೆಯುವುದು ತುಂಬಾ ಸೀಮಿತ. ನಮಗೆ ನೀರು ಬೇಕಾದಾಗ, ಬೇಕಾದಲ್ಲಿ ಸಿಗದಿದ್ದಾಗ ಮಾತ್ರ, ಈ ವಿಷಯ ನಮಗೆ ಅರಿವಾಗುತ್ತದೆ – ಹೇಗೆ ನಮ್ಮ ಆರೋಗ್ಯ ಕೆಡುತ್ತಿರುವಾಗ ಆರೋಗ್ಯಪಾಲನೆಯ ಮಹತ್ವದ ಅರಿವು ಮತ್ತು ಸಂಕಟ ಆಗುತ್ತದೋ, ಆರೋಗ್ಯವಾಗಿದ್ದಾಗ ಅದರ ಕಡೆ ಗಮನಹರಿಯುವುದಿಲ್ಲವೋ ಹಾಗೆ. ಇವತ್ತು ತೈಲ ಸಂಪನ್ಮೂಲದ ಬಗ್ಗೆ ವಿವಾದ, ಜಗಳ, ಕಾಳಗ ಆಗುತ್ತಾ ಇದೆ. ಇನ್ನು ಮುಂದೆ ನೀರಿನ ಬಗ್ಗೆ ಇದೆಲ್ಲಾ ಆಗುವುದರಲ್ಲಿ ಸಂದೇಹವಿಲ್ಲ. ಬಡವರು-ಬಲ್ಲಿದರ ನಡುವೆ, ರಾಜ್ಯಗಳ ನಡುವೆ, ದೇಶಗಳ ನಡುವೆ, ಗ್ರಾಮೀಣ ವಾಸಿಗಳು - ನಗರ ವಾಸಿಗಳ ನಡುವೆ, ಮತ್ತು ನಮ್ಮ ನಮ್ಮಲ್ಲೇ ಮುಷ್ಟಾ ಮುಷ್ಟಿ ಇತ್ಯಾದಿಗಳಿಂದ ಸಾಮಾಜಿಕ ಅಶಾಂತಿ ಅನಿವಾರ್ಯವೇ ? ಈ ಪ್ರಶ್ನೆಯನ್ನು ಕುರಿತು ಗಂಭೀರ ಚಿಂತನೆ ಅವಶ್ಯಕ.

ನಮ್ಮ ನೀರಾವರಿ ಯೋಜನೆಯನ್ನು ತಯಾರು ಮಾಡುವ ಮತ್ತು ಅದರಿಂದ ನೀರು ಬಳಸಿಕೊಳ್ಳುವ ರೀತಿ ಎಲ್ಲರಿಗೂ ತಿಳಿದ ಹಾಗೆ, ಹರಿವ ನದಿಯ ಮೇಲೆ ದೊಡ್ಡ ಡ್ಯಾಮ್ ಕಟ್ಟಿ ಜಲಾಶಯವನ್ನು ನಿರ್ಮಿಸುವುದು. ಪಕ್ಕದಲ್ಲಿ ಗಾವುದ ಗಾವುದ ಕಾಲುವೆ ತೋಡಿ ಬೇಕಾದ ಕಡೆಗೆ, ಸಾಧ್ಯವಿರುವ ಸ್ಥಳಗಳಿಗೆ ವ್ಯವಸಾಯಕ್ಕೆ ನೀರನ್ನು ಸರಬರಾಜು ಮಾಡುವುದು. ಇಂತಹ ಯೋಜನೆಗಳು ಎಷ್ಟು 'ಬೃಹತ್' ಇದೆಯೋ ಅಷ್ಟು ಪ್ರತಿಷ್ಠಿತವಾದದ್ದು ಎನ್ನುವ ನಂಬಿಕೆಯಿಂದ ಯೋಜಿಸಿದ್ದು, ಇದಕ್ಕೆ "gigantism" ಎಂದು ಹೆಸರು. ಆದರೆ ಇಂತಹ ಯೋಜನೆಗಳಲ್ಲಿ ನೀರು ಹರಿಸಿದಾಗ ಬಳಕೆಯಾಗುವ ರೀತಿ ಹೀಗಿದೆ :

ಹತ್ತಿರದ ಬಳಕೆದಾರರಿಗೆ ಯಥೇಚ್ಛವಾಗಿ ನೀರು ಸಿಕ್ಕು ''ಜಲಭಕ್ಷಕ'' ಭತ್ತ, ಕಬ್ಬು ಮುಂತಾದ ಬೆಳೆಯನ್ನು ಬೆಳೆಯಲು ಅನುಕೂಲ ಮಾಡಿಕೊಟ್ಟು ನಂತರದ ಬಳಕೆದಾರರಿಗೆ ಕಾಲುವೆ ದೂರ ದೂರ ಹೋದಷ್ಟು ನೀರು ಕಡಿಮೆಯಾಗುತ್ತಾ ಹೋಗುವುದನ್ನು ಎಲ್ಲರೂ ಕಣ್ಣಾರೆ ಕಂಡಿದ್ದಾರೆ. ಕಟ್ಟ ಕಡೆಯ ಸಾವಿರಾರು ಬಳಕೆದಾರರಿಗೆ ನೀರೆ ಇಲ್ಲ. ಯೋಜಿಸಿರುವುದು ಒಂದು ರೀತಿ, ಬಳಕೆ ಆಗುತ್ತಿರುವುದು ತದ್ವಿರುದ್ಧ. ಇಂತಹ ವ್ಯವಸ್ಥೆಯಲ್ಲಿನ ಭದ್ರಹಿತಾಸಕ್ತಿಗಳ ಹಿತಾಸಕ್ತಿಗಳ ಮೇಲುಗೈ, ನೀರು ಸಿಗದ ರೈತರ ಗೋಳು, ಅತಿ ನೀರಾವರಿಯಿಂದ ಮತ್ತು ಕೆಮಿಕಲ್ ಗೊಬ್ಬರ high yielding crop variety ಗಳಿಂದ ಭೂಮಿಯಲ್ಲಿನ ಸತ್ವ ಹಾನಿ. ಹೆಕ್ಟೇರ್ ಲೆಕ್ಕದ ಮೇಲೆ ಹಾಕಿರುವ ನೀರಾವರಿ ತೆರಿಗೆ ಅತ್ಯಲ್ಪ. ಸಿಕ್ಕಿದಷ್ಟು ನೀರನ್ನು ಹರಿಸಬಹುದಾದ್ದರಿಂದ ನೀರಿಗೆ ಬೆಲೆ ಇಲ್ಲ. ದೊಡ್ಡ ಯೋಜನೆಗಳು ಬರಪೀಡಿತ ಕ್ಷೇತ್ರದ ಸ್ವಲ್ಪ ಭಾಗಕ್ಕೆ ಮಾತ್ರ ನೀರು ಒದಗಿಸಬಲ್ಲವು. ಬೃಹತ್ ಯೋಜನೆಗಳ ಬಳಕೆಯಿಂದ ಆಗುತ್ತಿರುವ ಈ ಅನಾಹುತಗಳಿಂದ ಭೂಮಿಗೆ ಮಾರಕ ಮತ್ತು ನೀರಿನ ಅಪವ್ಯಯ, ಹಣದ ಅಪವ್ಯಯ, ಆರ್ಥಿಕ ಅವ್ಯವಸ್ಥೆ. ನೀರಾವರಿ ಕಾನೂನು ಪ್ರಕಾರ ಹುಕುಂ ಜಾರಿ ಮಾಡಬಲ್ಲ ದೃಢ ಆಡಳಿತದ ಅವತಾರ ಇನ್ನೂ ಆಗಿಲ್ಲ. ಯೋಜನೆ ಮತ್ತು ವ್ಯವಸ್ಥೆಗಳ ಮರು ಚಿಂತನೆಯಲ್ಲಿ ಈಗ ದೇಶದಲ್ಲಿ (ಅಷ್ಟೇ ಅಲ್ಲ ಜಗತ್ತಿನ ಎಲ್ಲೆಡೆ) ಜಲ ಸಂಪನ್ಮೂಲ ಅಭಿವೃದ್ಧಿ ಪಟುಗಳಲ್ಲಿ ಎರಡು ಪಂಗಡಗಳಾಗಿವೆ : ಒಂದು, ಲಾಗಾಯ್ತು ಮಾಡಿಕೊಂಡು ಬಂದ ಹಾಗೇ ಹೊಸ ಹೊಸ ಜಲಾಶಯಗಳನ್ನು ಕಟ್ಟುವುದನ್ನು ಒಪ್ಪಿದವರು. ಎರಡು, ಪರ್ಯಾಯ ವ್ಯವಸ್ಥೆಯನ್ನು ಶೋಧನೆ ಮಾಡಿ ಯೋಜನೆಗಳನ್ನು ಹೊಸ ದೃಷ್ಟಿಯಿಂದ ಯೋಜಿಸುವವರು. ಒಂದನೆಯದು ಕೇಂದ್ರೀಕೃತ ನೀರಿನ ಸಂಗ್ರಹ ಮತ್ತು ಅದರ ವಿತರಣೆ. ಎರಡನೆಯದು ಮಳೆಯನ್ನು ನೇರವಾಗಿ ಉಪಯೋಗಿಸುವ, ಸ್ಥಳದಲ್ಲೇ ಹಿಡಿದಿಟ್ಟುಕೊಂಡು ವ್ಯವಸಾಯ ಮಾಡುವುದು ಹಾಗೂ ಈ ಎರಡೂ ವ್ಯವಸ್ಥೆಗಳ ಸಮನ್ವಯೀಕರಣ ಮಾಡಿ (harmonise) ಯೋಜನೆಗಳನ್ನು ರೂಪಿಸಿಕೊಂಡು ದಕ್ಷ ನಿರ್ವಹಣೆಗೆ ಆದ್ಯತೆ ಕೊಡುವುದು.



ರಾಜಸ್ಥಾನದ ಮರುಭೂಮಿ ಪ್ರದೇಶಕ್ಕೆ ದೂರದ ಭಾಕ್ರಾ ಜಲಾಶಯದಿಂದ ನೀರನ್ನು ತಂದು ಇಂದಿರಾ ಗಾಂಧಿ ನಹರ್ ಯೋಜನೆಯನ್ನು ಸದುದ್ದೇಶದಿಂದಲೇ ನಿರ್ಮಾಣ ಮಾಡಿದರು. To make the desert bloom. ಆದರೆ ಪರಿಣಾಮ ಏನಾಗಿದೆ ? ಭೂಮಿ ಜೌಗು ಮತ್ತು ಸವಳಿನಿಂದ ನಿರುಪಯೋಗವಾಗಿದೆ. ಪಂಜಾಬಿನ ರೈತರು ಬಂದು ಆ ಪ್ರಾಂತ್ಯದ ವ್ಯವಸಾಯ ಪದ್ಧತಿಯನ್ನು ಮರಳುಗಾಡಿನ ಜಮೀನುಗಳಲ್ಲಿ ಮಾಡಿದ್ದು ಮತ್ತು ಸ್ಥಳೀಯ ರೈತರು, ಹೊರಗಿನಿಂದ ಬಂದ ರೈತರು ಇವರಿಬ್ಬರ ನಡುವೆ ತಿಕ್ಕಾಟಕ್ಕೆ ಅವಕಾಶ ಕೊಟ್ಟು ಸಾಮಾಜಿಕ ಅಶಾಂತಿಗೆ ಕಾರಣವಾಗಿದೆ. ಕರ್ನಾಟಕದ ತುಂಗಭದ್ರ, ಭದ್ರಾ ನೀರಾವರಿ ಯೋಜನಾ ಪ್ರದೇಶಗಳಲ್ಲಿ ಭತ್ತದ ವ್ಯವಸಾಯದಲ್ಲಿ ನಿಪುಣರಾದ ಆಂಧ್ರದ ರೈತರ ವಲಸೆಯ ಪರಿಣಾಮವೂ ಪಂಜಾಬಿ-ರಾಜಸ್ಥಾನಿ ಮಾದರಿಯಲ್ಲೇ ನಡೆದಿದೆ.

ತುಂಗಭದ್ರಾ ನಾಲೆಗಳ, ಕೃಷ್ಣಾ ಮೇಲ್ದಂಡೆ ಯೋಜನೆಯ ನಾರಾಯಣಪುರ ಕಾಲುವೆಯ, ಮಲಪ್ರಭಾ ಕಾಲುವೆಯ ಅತಿ ನೀರಾವರಿ ಪರಿಣಾಮ ಜೌಗು ಮತ್ತು ಸವಳಿನಿಂದ ಭೂಮಿ ಹಾಳು, ಕೆಳಗಿನ ರೈತರಿಗೆ ನೀರಿಲ್ಲ, ಫಲವತ್ತಾದ ಕರಿಮಣ್ಣಿನ ವಿನಾಶ, ನೀರಿನ ಅಪವ್ಯಯ, ಹಣದ ಅಪವ್ಯಯ.

ಕರ್ನಾಟಕದ ದೊಡ್ಡ ನೀರಾವರಿ ಯೋಜನೆಗಳ ನಿರ್ಮಾಣಕ್ಕೆ ಆಗಲೇ ಸುಮಾರು ೧೬,೦೦೦ ಕೋಟಿ ರೂಪಾಯಿ ಖರ್ಚಾಗಿದೆ. ಪೂರ್ಣಗೊಳಿಸಲು ಇನ್ನೂ ೭೦೦೦ ಕೋಟಿ ರೂಪಾಯಿ ಬೇಕು.

**ಕರ್ನಾಟಕ ರಾಜ್ಯದ ಭಾರಿ ನೀರಾವರಿ ಯೋಜನೆಗಳ ಪರಿಸ್ಥಿತಿ ಈ ರೀತಿ ಇದೆ**

೧೯೬೪ರಲ್ಲಿ ಪ್ರಾರಂಭಿಸಿದ ಕೃಷ್ಣಾ ಮೇಲ್ದಂಡೆ ಬೃಹತ್ ಯೋಜನೆಯಿಂದ ೬,೨೨,೦೦೦ ಹೆಕ್ಟೇರುಗಳಿಗೆ ನೀರಾವರಿ ಒದಗಿಸಬೇಕಾಗಿದ್ದು, ೩೫,೦೦೦ ಹೆಕ್ಟೇರ್‌ಗಿಂತ ಮುಂದೆ ಹೋಗಿಲ್ಲ. ಇದುವರೆಗಿನ ವೆಚ್ಚ ೬,೭೭೦ ಕೋಟಿ ರೂಪಾಯಿ, ಪೂರ್ಣಗೊಳಿಸಲು ಇನ್ನೂ ೩೦೦೦ ಕೋಟಿ ರೂಪಾಯಿ ಬೇಕು.

ಘಟಪ್ರಭಾ ಯೋಜನೆಯಿಂದ ೩,೩೧,೦೦೦ ಹೆಕ್ಟೇರು ನೀರಾವರಿ ಗುರಿಯನ್ನಿಟ್ಟುಕೊಂಡು ಸಾಧಿಸಿರುವುದು ೨,೦೦,೦೦೦ ಹೆಕ್ಟೇರು. ಯೋಜನೆ ನಿರ್ಮಾಣ ಪ್ರಾರಂಭವಾದದ್ದು ೧೯೪೮ರಲ್ಲಿ.

೭೦೦ ಕೋಟಿ ರೂಪಾಯಿ ಅಂದಾಜಿನ ಮಲಪ್ರಭಾ ಯೋಜನೆ ನಿರ್ಮಾಣ ಕಾರ್ಯ ಪ್ರಾರಂಭವಾದದ್ದು ೧೯೬೦ರ ದಶಕದಲ್ಲಿ. ಉದ್ದೇಶಿತ ನೀರಾವರಿ ೨,೧೮,೨೦೦ ಹೆಕ್ಟೇರ್. ಸಾಧಿಸಿರುವುದು ೧,೮೦,೦೦೦ ಹೆಕ್ಟೇರ್. ಆದರೆ ಇದರ ಪೂರ್ಣ ಉಪಯೋಗವಾಗುತ್ತಿಲ್ಲ. ಜಲಾಶಯಕ್ಕೆ ನಿರೀಕ್ಷಿಸಿದಷ್ಟು ಹರಿವು ಬರುತ್ತಿಲ್ಲ. ವೆಚ್ಚ ೬೦೦ ಕೋಟಿ ರೂಪಾಯಿ.

ಇತ್ತೀಚಿಗೆ ಪ್ರಾರಂಭಿಸಿದ ತುಂಗಾ ಮೇಲ್ದಂಡೆ ಯೋಜನೆಗೆ ೮೩೦ ಕೋಟಿ ರೂಪಾಯಿಯ ಅಂದಾಜು ಇದೆ. ವೆಚ್ಚವಾಗಿರುವುದು ೮೮ ಕೋಟಿ ರೂಪಾಯಿ.

ತುಂಗಭದ್ರಾ ಯೋಜನೆಯ ನಿರ್ಮಾಣದ ಪ್ರಾರಂಭ ೧೯೪೫. ೧೯೫೩ರಲ್ಲೇ ಮುಗಿದ ಜಲಾಶಯ ಕರ್ನಾಟಕದಲ್ಲಿದ್ದು ಬಲದಂಡೆ ಕಾಲುವೆಗಳಿಂದ ಆಂಧ್ರಪ್ರದೇಶಕ್ಕೂ ನೀರಾವರಿ ಒದಗಿಸಲಾಗುತ್ತಿದೆ. ಎಡ ಮತ್ತು ಬಲದಂಡೆ ಕಾಲುವೆಗಳು ಮುಗಿದದ್ದು ೧೯೮೩ರಲ್ಲಿ. ವೆಚ್ಚ ೩೩೧ ಕೋಟಿ ರೂಪಾಯಿ. ೩,೫೫,೦೦೦ ಹೆಕ್ಟೇರಿಗೆ ನೀರಾವರಿ ವ್ಯವಸ್ಥೆ ಆಗಿದೆ. ಆದರೆ ನೀರಾವರಿ ಪದ್ಧತಿ ಸಮಸ್ಯಾತ್ಮಕವಾಗಿದೆ. ಜಲಾಶಯ ಜಲಪ್ರದೇಶ ಹೂಳಿನಿಂದ ತುಂಬುತ್ತಿದ್ದು ಜಲ ಸಂಗ್ರಹ ಕಡಿಮೆಯಾಗುತ್ತಿದೆ. ಡ್ಯಾಮ್ ಎತ್ತರಿಸುವ ಯೋಜನೆ ಪರಿಶೀಲನೆಯಲ್ಲಿದೆ.

ಈ ಯೋಜನೆಯಲ್ಲಿ ಯೋಜಿತ ಬೆಳೆ ಬದಲು ಭತ್ತ ಕಬ್ಬಿನ ಬೆಳೆಯೇ ಜಾಸ್ತಿಯಾದ್ದರಿಂದ ಕೆಳಭಾಗದ ರೈತರಿಗೆ ಜೋಳ, ರಾಗಿ, ಮೆಕ್ಕೆಯಂತಹ ಬೆಳೆಗೆ ನೀರಿಲ್ಲದಂತಾಗಿದೆ.

ಕೃಷ್ಣಾ ಕೊಳ್ಳದ ಭಾರಿ ಯೋಜನೆಗಳ ಪ್ರಕಾರ ಉದ್ದೇಶಿತ ನೀರಾವರಿ ಕ್ಷೇತ್ರ ೨೭,೦೦,೦೦೦ ಹೆಕ್ಟೇರ್. ಇದುವರೆಗೆ ನೀರಾವರಿಗೆ ತಯಾರು ಮಾಡಿರುವ ಕ್ಷೇತ್ರ ೮,೮೦,೦೦೦ ಹೆಕ್ಟೇರ್, ಮಾಡಬೇಕಾದ ಬಾಕಿ ೧೮,೨೦,೦೦೦ ಹೆಕ್ಟೇರ್.

ನಮ್ಮ ದೇಶದ ದೊಡ್ಡ ನೀರಾವರಿ ಯೋಜನೆಗಳ ನಿರ್ಮಾಣಕ್ಕೆ ತಲಾ ಒಂದು ಹೆಕ್ಟೇರ್ ಜಮೀನಿಗೆ ಮೊದಲು ೧,೨೦೦ ರೂಪಾಯಿ ತಗುಲುತ್ತಿತ್ತು (ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೧-೫೬). ೧೯೯೦-೯೨ರಲ್ಲಿ ಹೆಕ್ಟೇರ್‌ಗೆ ೬೬,೫೭೦/- ರೂಪಾಯಿ ತಗುಲುತ್ತಿತ್ತು. ೨೦೦೩ರಲ್ಲಿ ಎಷ್ಟಿರಬಹುದೋ ಊಹಿಸಿಕೊಳ್ಳಬೇಕಾಗಿದೆ. ನಮ್ಮ ದೇಶದಲ್ಲಿ ಕೈಗೊಂಡಿರುವ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸಲು ೧,೮೦,೦೦೦ ಕೋಟಿ ರೂಪಾಯಿ ಬೇಕೆಂದು ಅಂದಾಜುಮಾಡಲಾಗಿದೆ.

ಮೇಲಾಗಿ ನಮ್ಮ ನೀರಾವರಿ ಯೋಜನೆಗಳಲ್ಲಿ ದಕ್ಷ ನೀರಾವರಿ ನಿರ್ವಹಣೆ ಅನ್ನುವುದು ಇಲ್ಲವೇ ಇಲ್ಲ. ಅದಕ್ಕೆ ಪ್ರಾಮುಖ್ಯತೆಯೇ ಇಲ್ಲ. ತೀರ ಅದಕ್ಷ ನಿರ್ವಹಣೆ ಎಂತಲೇ ಹೇಳಬಹುದು.

೧೯೯೫ರಲ್ಲಿ World Bank ಭಾರತದ ನೀರಾವರಿ ಯೋಜನೆಗಳಿಂದ ಆಗುತ್ತಿರುವ ಪ್ರಾಯೋಜನೆಗಳ ಅಧ್ಯಯನ ಮಾಡಿತು. ಸಮರ್ಪಕವಾದ Demand Management and Resources Management ಪ್ರಯೋಗ ಮಾಡದೆ ನೀರಿನ ಅಪವ್ಯಯದಿಂದ ವರ್ಷದಲ್ಲಿ ೭೫,೦೦೦ ಕೋಟಿ ರೂಪಾಯಿನಷ್ಟು ನಷ್ಟವಾಗುತ್ತಿದೆ ಎನ್ನುವ ತೀರ್ಮಾನಕ್ಕೆ ಬಂತು.




Demand Management ಅಂದರೆ ಲಭ್ಯವಿರುವ ಅಲ್ಪ ನೀರಿನ ಪ್ರಮಾಣಕ್ಕೆ ತಕ್ಕಂತೆ ನೀರಿನ ಬಳಕೆಯ ನಿರ್ವಹಣೆ ಮಾಡತಕ್ಕದ್ದು. ನೀರು ಯಥೇಚ್ಛವಾಗಿ ಲಭ್ಯವಿರುವ ಪದಾರ್ಥವಲ್ಲ – ಅದು ಸೀಮಿತ. ನಮ್ಮ ಬೇಡಿಕೆಯನ್ನು ಈ ಪ್ರಜ್ಞೆಯ ಆಧಾರದ ಮೇಲೆ ಮಾಡಬೇಕು. ಯಾವ ಬೆಳೆ ಬೆಳೆಯತಕ್ಕದ್ದು, ಬೆಳೆಗೆ ಎಷ್ಟು ನೀರು ಬೇಕು ? ತಲೆ ತಲಾಂತರದಿಂದ ಬಂದಿರುವ ಪದ್ಧತಿಯ ಪ್ರಕಾರವಲ್ಲ. ಅದರಲ್ಲಿ ಬೇಕಾದಷ್ಟು ಬದಲಾವಣೆಗೆ ಅಂದರೆ ನೀರಿನ ಬಳಕೆಯನ್ನು ಕಡಿಮೆ ಮಾಡುವ ಅವಕಾಶವಿದೆ. ಇಂತಹ ಪರಿವರ್ತನೆಯನ್ನು ಸಮರ್ಥಿಸಿಕೊಂಡು ನೀರಾವರಿ ಮಾಡುವವರು ಬೇಕು. ಕೃಷಿ ತಜ್ಞರು, ರೈತರು ಮತ್ತು ಮುಖಂಡರ ಜವಾಬ್ದಾರಿ ಇಲ್ಲಿ ಮುಖ್ಯ ಮತ್ತು ಅತ್ಯವಶ್ಯಕ.

ಕೃಷ್ಣರಾಜ ಸಾಗರದ ಡ್ಯಾಮ್ (ಕನ್ನಂಬಾಡಿ ಕಟ್ಟೆ) ನಿರ್ಮಾಣ ೧೯೧೧ರಲ್ಲೇ ಪ್ರಾರಂಭವಾಗಿ ಮುಗಿದದ್ದು ೧೯೩೧ರಲ್ಲಿ. ಎಡದಂಡೆಯ ವಿಶ್ವೇಶ್ವರಯ್ಯ ಕಾಲುವೆಯಿಂದ (ಮೊದಲಿನ ಇರ್ವಿನ್ ಹೆಸರಿನ ಕಾಲುವೆ) ೧,೨೦,೦೦೦ ಎಕರೆ (೪೮,೬೦೦ ಹೆಕ್ಟೇರು) ನೀರಾವರಿಗೆಂದು ೧೯೧೦ರಲ್ಲಿ ಯೋಜನೆ ತಯಾರಾಗಿದ್ದು ೪೦,೦೦೦ ಎಕರೆ ಭತ್ತ, ಅಷ್ಟೆ ಎಕರೆ ಕಬ್ಬು, ಅಷ್ಟೆ ಎಕರೆ ರಾಗಿ ಜೋಳದಂತಹ ಬೆಳೆ ಬೆಳೆಯಬೇಕೆಂದು ಉದ್ದೇಶಿಸಲಾಗಿತ್ತು. ಈ ಯೋಜನೆಯನ್ನು ಬದಲಾಯಿಸಿ, ಅಚ್ಚುಕಟ್ಟಿನಲ್ಲಿ ಹಳ್ಳಗಳಿಗೆ ಬಂಧಾರಾ ಕಟ್ಟೆಗಳನ್ನು ಕಟ್ಟಿ, ಕೆರೆಗಳಿಗೂ ನೀರು ತುಂಬಿ ಕವಲು ಕಾಲುವೆಗಳನ್ನು ವಿಸ್ತರಿಸಿ ಈಗ ೧,೯೨,೦೦೦ ಎಕರೆಗೆ ನೀರುಣಿಸಲಾಗುತ್ತಿದೆ. ಬಹುತೇಕ ಭತ್ತ, ಕಬ್ಬು ಬೆಳೆಯೇ ರೈತರಿಗೆ ಜನಪ್ರಿಯವಾಗಿರುವುದರಿಂದ ಕೆಲವೇ ಜನರ ಹಿತಾಸಕ್ತಿಯನ್ನು ಪೂರೈಸುತ್ತಿದೆ. ''ಬಹುಜನ ಹಿತಾಯ, ಬಹುಜನ ಸುಖಾಯ'' ಎಂಬ ಆದರ್ಶ ಮಾಯವಾಗಿಹೋಗಿದೆ.

ಬಲದಂಡೆಯಲ್ಲಿ ವರುಣಾ ಕಾಲುವೆ, ದೇವರಾಜ ಅರಸು ಕಾಲುವೆ ಎಂದು ನಾಮಕರಣವಾಗಿ ನಿರ್ಮಾಣ ಪ್ರಾರಂಭವಾದದ್ದು ೧೯೮೦ರಲ್ಲಿ. ಈಚಿನ ಒಂದೆರಡು ವರ್ಷಗಳಿಂದ ಸ್ವಲ್ಪ ಪ್ರಮಾಣ ನೀರಾವರಿಯನ್ನು ಕಲ್ಪಿಸಲಾಗುತ್ತಿದೆ.

ಕೃಷ್ಣರಾಜ ಸಾಗರ ಭಾಗ್ಯವಶಾತ್ ಹೂಳಿನಿಂದ ಬಾಧಿತವಾಗದೆ ಜಲ ಸಂಗ್ರಹ ಶಕ್ತಿಯನ್ನು ಕಾಪಾಡಿಕೊಂಡು ಬಂದಿದೆ.

ವಿಶ್ವೇಶ್ವರಯ್ಯ ಕಾಲುವೆ ನೀರಿನ ದಕ್ಷ ನಿರ್ವಹಣೆಗೆ ಯೋಗ್ಯ ಸ್ಥಿತಿಯಲ್ಲಿಲ್ಲ. ನೀರಾವರಿ ವ್ಯವಸ್ಥೆ ಅತೃಪ್ತಿಕರ. ನೀರಿನ ಸದುಪಯೋಗ ಮತ್ತು ಹಿತಮಿತ ಉಪಯೋಗ ದೃಷ್ಟಿಯಿಂದ ಸಾಮಾಜಿಕ, ಆರ್ಥಿಕ ಮತ್ತು ಆಡಳಿತದಿಂದುಂಟಾಗಿರುವ ಅಸಮರ್ಪಕತೆ ನೀರಾವರಿ ವ್ಯವಸ್ಥೆಯ ಮೇಲೆ ದುಷ್ಪರಿಣಾಮ ಬೀರಿದೆ.

೧೯೬೭ರಲ್ಲಿ ಆರಂಭವಾದ ಹೇಮಾವತಿ, ೧೯೫೯ರಲ್ಲಿ ಶುರುವಾದ ಕಬಿನಿ ಯೋಜನೆಗಳೂ ಈ ದಾರಿಯಲ್ಲೇ ಸಾಗುತ್ತಿವೆ. ತಾಂತ್ರಿಕ ದೋಷವೆಂದರೆ ಕಾಲುವೆ ಕೆಲಸಗಳು ಸರಿಯಾಗಿ ಆಗದೆ ಯೋಜಿಸಿದಷ್ಟು ನೀರು ಹರಿಸಲು ಅಸಮರ್ಥವಾಗಿವೆ.

ಕಾವೇರಿ ಕೊಳ್ಳದ ಹಾರಂಗಿ, ಹೇಮಾವತಿ, ಕಬಿನಿ, ದೇವರಾಜ ಅರಸು ಕಾಲುವೆ ಮತ್ತು ಯಗಚಿ – ಈ ಹೊಸ ಯೋಜನೆಗಳಿಂದ ಯೋಜಿಸಿದ ೫,೫೦,೦೦೦ ಹೆಕ್ಟೇರುಗಳ ಪೈಕಿ ನೀರಾವರಿ ಪ್ರಯೋಜನ ಪಡೆದಿರುವುದು ೧,೭೦,೦೦೦ ಹೆಕ್ಟೇರು.

ಇನ್ನು Resource Management ಅಂದರೆ ನೀರು ಪೋಲಾಗದಂತೆ ನಿರ್ವಹಣೆ ಮಾಡುವುದು. ಇದುವರೆಗೂ ನಾವು ಮಾಡುತ್ತಿರುವುದು Resource Development, Management ಅಲ್ಲ.

ಈ ಎರಡೂ ಪರಿಕಲ್ಪನೆಗಳ ವಾಸ್ತವೀಕರಣದಿಂದ ತಕ್ಕ ಫಲ ಸಿಕ್ಕೇಸಿಗುತ್ತದೆ. ಈ ಗುರಿಯನ್ನು ಸಾಧಿಸಲು ಮುಖ್ಯವಾಗಿ, ಆಡಳಿತ ವ್ಯವಸ್ಥೆಯಲ್ಲಿ ನಿರ್ಭಯ ದೃಢ ನಿರ್ಧಾರ ಬೇಕು. ಈಗಿರುವ ಆಡಳಿತ ಪದ್ಧತಿಯಲ್ಲಿ ತೀವ್ರ ಬದಲಾವಣೆ ಆಗಬೇಕು. Result oriented action ಬೇಕು. Water harvesting watershed management ಸಾಧಿಸಬೇಕಾದರೆ ರೈತರ ಮತ್ತು NGO ಸಂಸ್ಥೆಗಳ ನೇರ ಸಹಕಾರ, ಮೆಹನತ್ತು ಬೇಕು. ಇಂತಹ ಯೋಜನೆಗಳ ಯಶಸ್ಸಿಗೆ ಶ್ರಮಕಾಯಕ ಜಾಸ್ತಿ, ಹಣ ಕಡಿಮೆ. ನಮ್ಮ ಕೆರೆಕಟ್ಟೆಗಳ ಪುನರ್ ವ್ಯವಸ್ಥೆ ಪಾಲನೆ ಕಾರ್ಯವೂ ಇದೇ ರೀತಿಯದು. ದೊಡ್ಡ ಯೋಜನೆಗಳದ್ದು ವಿಶಾಲ ಕ್ಷೇತ್ರ. ನೀರಿನ ಬಳಕೆದಾರರು ಒಂದೇ ಪ್ರದೇಶ ಅಥವಾ ತಾಲ್ಲೂಕಿನವರಲ್ಲ. ನಾನಾ ಪ್ರದೇಶದವರು. ಸಣ್ಣ ಯೋಜನೆಗಳಾದರೆ ತೀರ Local area, Local ಜನ. ಇದರಿಂದ ಫಲಕಾರಿ ಸಹಕಾರ, ಸಹ ಜೀವನ ಸಾಧ್ಯ ಮತ್ತು ಸ್ವಾಭಾವಿಕ. ದೊಡ್ಡ ಯೋಜನೆಗಳಲ್ಲಿ ''ಬಾಯಂಗಳದಲಿ ಹುಟ್ಟಿದ ಮಾತು ಮುಗಿಲಿನ ಕಿವಿಯನು ಮುಟ್ಟಲೇ ಇಲ್ಲ'' ಅನ್ನುವಂತೆ ಆಗುವಂತಹದು. ದೇಶದಾದ್ಯಂತ ದೊಡ್ಡ ಆಂದೋಳನವೇ ಆಗಬೇಕು.

ಭಾರತದ ಜನಸಂಖ್ಯೆ ವಿಶ್ವದ ಜನಸಂಖ್ಯೆಯಲ್ಲಿ ಶೇ. ೧೬. ವಿಶ್ವದ ಭೂಸಂಪತ್ತಿನಲ್ಲಿ ಭಾರತದ ಭಾಗ ಶೇ. ೨.೪೫. ಜಲಸಂಪತ್ತು ಶೇ. ೪. ಭಾರತದ ನದಿಗಳಲ್ಲಿನ ಹರಿವಿನ ಪ್ರಮಾಣ ೬೯,೦೦೦ tmc. ಅಂತರ್ಜಲ ಸಂಪತ್ತು ೧೫,೦೦೦ tmc. ಇದರಲ್ಲಿ ಉಪಯೋಗಕ್ಕೆ ಸಿಗುವ ನೀರು ೨೪,೦೦೦ tmc; ನದಿ ಹರಿವಿನಿಂದ, ೧೪,೦೦೦ tmc ಅಂತರ್ಜಲದಿಂದ – ಮೊತ್ತ ೩೮,೦೦೦ tmc. ಸದ್ಯ ಉಪಯೋಗಕ್ಕೆ ಲಭ್ಯವಿರುವ ನೀರು ೨೧,೦೦೦ tmc. ೨೦೫೦ರ ಹೊತ್ತಿಗೆ ನಮ್ಮ ಬೇಡಿಕೆ ೩೮,೦೦೦ tmc ಆಚೆ ಹೋಗುವ ಆತಂಕವಿದೆ.

ಕರ್ನಾಟಕದ ಕೃಷ್ಣಾ, ಕಾವೇರಿ, ಮಾಂಜರಾ (ಗೋದಾವರಿ ಉಪನದಿ) ಪಶ್ಚಿಮಕ್ಕೆ ಹರಿಯುವ ನದಿಗಳು (ಶರಾವತಿ, ಕಾಳಿ, ನೇತ್ರಾವತಿ ಇತ್ಯಾದಿ) ಉತ್ತರ ಪಿನಾಕಿನಿ, ದಕ್ಷಿಣ ಪಿನಾಕಿನಿ, ಪಾಲಾರ್‌ಗಳಲ್ಲಿನ ಹರಿವು ೩,೫೦೦ tmc ಇದ್ದರೂ ನೀರಾವರಿಯಿಂದ ಲಭ್ಯವಾಗಬಲ್ಲ ನೀರು ೧,೭೦೦ tmc ಮಾತ್ರ. ರಾಜ್ಯದ ನದೀ ಕೊಳ್ಳಗಳ ನಕ್ಷೆಯನ್ನು ನೋಡಬಹುದು. ನಮ್ಮ ರಾಜ್ಯದಲ್ಲಿ ಬಿತ್ತನೆಯಾಗುತ್ತಿರುವುದು ೧೦೭ ಲಕ್ಷ ಹೆಕ್ಟೇರ್‌ಗಳಲ್ಲಿ. ನೀರಾವರಿ ಪಡೆಯುತ್ತಿರುವ ಜಮೀನು ೩೭ ಲಕ್ಷ ಹೆಕ್ಟೇರ್. ಗುರಿ ೫೫ ಲಕ್ಷ ಹೆಕ್ಟೇರು.

ನಮ್ಮ ದೇಶದಲ್ಲಿನ ೧೬೫೩ ಲಕ್ಷ ಹೆಕ್ಟೇರ್ ಬಿತ್ತನೆ ಜಮೀನಿನಲ್ಲಿ ೯೦೦ ಲಕ್ಷ ಹೆಕ್ಟೇರುಗಳಿಗೆ ನೀರಾವರಿ ವ್ಯವಸ್ಥೆ ಒದಗಿಸಿರಬಹುದು. ವಾಸ್ತವವಾಗಿ ನೀರಾವರಿ ಆಗುತ್ತಿರುವುದು ೭೨೦ ಲಕ್ಷ ಹೆಕ್ಟೇರುಗಳಲ್ಲಿ ಮಾತ್ರ. ಗುರಿ ೧,೪೦೦ ಲಕ್ಷ ಹೆಕ್ಟೇರು.

ಭಾರತದಲ್ಲಿ ನಾಲ್ಕು ಸಾವಿರ ದೊಡ್ಡ ಡ್ಯಾಮ್‌ಗಳಿವೆ. (೫೦ ಅಡಿಗಿಂತ ಹೆಚ್ಚು ಎತ್ತರದ್ದು). ಈ ಡ್ಯಾಮ್‌ಗಳಿಂದ ನಿರ್ಮಾಣವಾಗಿರುವ ಜಲ ಸಂಗ್ರಹದಿಂದ ಕಾಲುವೆಗಳನ್ನು ತೆಗೆದು ದೂರ ದೂರಕ್ಕೆ ನೀರೊಯ್ಯುವ ವ್ಯವಸ್ಥೆ ಇದೆ. ಡ್ಯಾಮ್‌ಗಳ ಸಂರಕ್ಷಣೆ (Dam safety) ಕಾರ್ಯ ಮುಖ್ಯ. ಕಾಲುವೆ, ಅದರ ಮೇಲಿನ ಕಟ್ಟಡಗಳ ರಕ್ಷಣೆಯೂ ಸದಾ ಲಕ್ಷ್ಯದಲ್ಲಿರಬೇಕು. ನೀರಿನ ವಿತರಣೆ ಅತೃಪ್ತಿಕರವಾಗಿ ನಡೆದಿದೆ. ಇದರ ಸಮರ್ಪಕ ನಿರ್ವಹಣೆಗೆ ಮೊಟ್ಟ ಮೊದಲ ಆದ್ಯತೆ ಕೊಡತಕ್ಕದ್ದು. ಈ ವಿಷಯದಲ್ಲಿ ವಿಳಂಬ ಸಲ್ಲದು. ಬೆಳೆ ಮಾದರಿಯಲ್ಲಿ ತೀವ್ರ ಬದಲಾವಣೆಗಳಾಗಬೇಕು. ಬೆಳೆಯ ಮಾರ್ಕೆಟಿಂಗ್ ವ್ಯವಸ್ಥೆಯಲ್ಲಂತೂ ಹೊಸ ವ್ಯವಸ್ಥೆ ಏರ್ಪಡಬೇಕು. ರೈತ ಯಾವ ಧಾನ್ಯವನ್ನು ಬೆಳೆಯುತ್ತಾನೆಂದರೆ, ಯಾವ ಫಸಲಿನಿಂದ ಹೆಚ್ಚು ಲಾಭ ಸಿಗುತ್ತದೋ ಅದನ್ನ. ಈಗ ಭತ್ತ ಬೆಳೆಯಬೇಕೆಂಬುವರೇ ಏಕೆ ಜಾಸ್ತಿ ಎಂದರೆ ಸರ್ಕಾರದ Procurement policy ರೈತರನ್ನು ಮಾರುಕಟ್ಟೆ ಪ್ರಾಬಲ್ಯದಿಂದ ಕಾಪಾಡುತ್ತದೆ. ಕಬ್ಬು ಬೆಳೆಗೆ ಸಕ್ಕರೆ ಕಾರ್ಖಾನೆಗಳು ಆಧಾರ. ಜೋಳ, ಹಣ್ಣು, ತರಕಾರಿ ಇತ್ಯಾದಿ ಬೆಳೆಗೆ ಮಾರ್ಕೆಟಿಂಗ್ ಸವಲತ್ತು ಸಿಕ್ಕಾಗ ರೈತ ವಿಕಲ್ಪದಿಂದ ಬೇರೆ ಬೇರೆ ಬೆಳೆ ಬೆಳೆದು ಹಣ ಸಂಪಾದಿಸಬಲ್ಲ. ಇಂಥ ಬೆಳೆಯನ್ನು ನಿರ್ಯಾತ ಮಾಡುವ ಅವಕಾಶವಿದೆ. ಭಾರಿ ಯೋಜನೆಗಳಲ್ಲಿ ಈ ಸುಧಾರಣೆ ಜೊತೆಗೆ ನೀರಿನ ಮಾಪನ ಯಂತ್ರದ ಮೂಲಕ ನೀರೊದಗಿಸಿದಾಗ ನೀರಿನ ಬೆಲೆ ಅರ್ಥವಾಗುತ್ತದೆ. ಆಗ ದೊಡ್ಡ ಯೋಜನೆಗಳಿಂದ ಹೆಚ್ಚು ಲಾಭ ಸಾಧ್ಯವಾಗುತ್ತದೆ. ನೀರಾವರಿ ತೆರಿಗೆಯನ್ನು ಸೂಕ್ತ ನಿಗದಿಮಾಡಿ ಹೆಚ್ಚು




ವಸೂಲಿ ಮಾಡಲು ಸರಿಯಾದ ವಾತಾವರಣ ಏರ್ಪಡಾಗುತ್ತದೆ.

ಕೈಗೊಂಡಿರುವ ಭಾರಿ ಯೋಜನೆಗಳನ್ನು ಪೂರ್ಣಗೊಳಿಸದ ಹೊರತು ಹೊಸ ಯೋಜನೆಗಳಿಗೆ ಕೈ ಹಾಕಬಾರದು. ಈ ದೃಢ ನಿರ್ಧಾರ ಅತಿ ಮುಖ್ಯ. ದೂರದಲ್ಲಿ ಹರಿಯುವ ಮಹಾನದಿ, ಗೋದಾವರಿ ನದಿಗಳ ಹೆಚ್ಚುವರಿ ನೀರನ್ನು ಕೃಷ್ಣಾ, ಪಿನಾಕಿನಿ, ಕಾವೇರಿ, ವೈಗೈ ನದಿಗಳಿಗೆ ವರ್ಗಾಯಿಸುವಂಥ ಯೋಜನೆಗಳಿಗೆ ಸ್ಥಾನವೇ ಇರಕೂಡದು. ಇಂಥ ಸಾಹಸಮಯ ಯೋಜನೆಗಳಿಗೆ ಹಣ ಒದಗಿಸುವುದು ಹೇಗೆ ? ಋಣಭಾರವನ್ನು ಸಹಿಸುವುದು ಹೇಗೆ ? ಪರಿಸರದ ಮೇಲಾಗುವ ಆಘಾತ ಅಷ್ಟಿಷ್ಟಲ್ಲ. ಮಾನವೀಯ ಸಮಸ್ಯೆ ನರ್ಮದಾ ಆಂದೋಳನದಿಂದ ಲೋಕ ಪ್ರತ್ಯಕ್ಷವಾಗಿದೆ. (ಆರು ಲಕ್ಷ ಕೋಟಿ ವೆಚ್ಚ ಬೇಕಾಗುವ interlinking of rivers ಒಂದು ಮರೀಚಿಕೆ)

ಬೃಹತ್ ಯೋಜನೆಗಳಿಗೆ ಅಗ್ರಸ್ಥಾನ ಸಿಕ್ಕಿದೆ. ಪ್ರಕೃತಿಯಲ್ಲಿ ನದಿಗಳ ಹರಿವಷ್ಟೇ ಜಲ ಸಂಪನ್ಮೂಲ ಅನ್ನುವ ಸಂಕುಚಿತ ದೃಷ್ಟಿಯಿಂದ ಅವುಗಳ ವೈಫಲ್ಯದ ಮುಖ ಈಗ ಎಲ್ಲರ ದೃಷ್ಟಿಗೂ ಗೋಚರವಾಗಿದೆ. ನಿಸರ್ಗದಲ್ಲಿ ಮಳೆಯ ನೀರನ್ನು ನೇರವಾಗಿ ಹಿಡಿದು ಸಂಗ್ರಹಿಸಿ in situ ಉಪಯೋಗಿಸುವುದು ನೀರ್ ಕೊಯ್ಲು ಪದ್ಧತಿ. ಈಗ ಪ್ರತ್ಯಕ್ಷ ಉದಾಹರಣೆಗಳಿವೆ. ಮಹಾರಾಷ್ಟ್ರದಲ್ಲಿನ ರಾಲೆಗಾವ್ ಸಿದ್ಧಹಳ್ಳಿಯಲ್ಲಿ ಅಣ್ಣಾ ಹಜಾರೆ ಯವರು, ಹರಿಯಾಣದಲ್ಲಿನ ಪಿ. ಆರ್. ಮಿಶ್ರಾರವರ ಪ್ರಯೋಗ ಮತ್ತು ಎನ್‌ಜಿಒ ತರುಣ ಭಾರತ್ ಸಂಘದ ರಾಜಸ್ಥಾನದ ನೂರಾರು ಹಳ್ಳಿಗಳಲ್ಲಿನ ಪ್ರಯೋಗಗಳು ಯಶಸ್ವಿಯಾಗಿರುವುದರಿಂದ ಸಂದೇಹ ಸಂಶಯ ನಮ್ಮನ್ನು ಕಾಡಬೇಕಾಗಿಲ್ಲ. ಮಧ್ಯಪ್ರದೇಶದ ಸರ್ಕಾರವೇ ಯಶಸ್ವಿ ಬರಪೀಡಿತ ಝುಮ್ರಾ ಎಂಬ Tribal ಕ್ಷೇತ್ರದಲ್ಲಿನ ಯಶಸ್ವಿ ಪ್ರಯೋಗಗಳನ್ನು ತೋರಿಸಿಕೊಟ್ಟಿದೆ, ಮುಖ್ಯಮಂತ್ರಿ ದಿಗ್ವಿಜಯ ಸಿಂಗ್‌ರವರು ಆಸ್ಥೆ ವಹಿಸಿದ್ದರಿಂದ. ನಮ್ಮ ರಾಜ್ಯದ ಅರಸಿಕೆರೆ ತಾಲೂಕಿನ ಹಳ್ಳಿಗಳಲ್ಲಿಯೂ Water Harvesting ಸಫಲವಾಗಿದೆಯೆಂದು ತಿಳಿದುಬಂದಿದೆ. Water Shed Management ಅನ್ನುವುದು Harvesting ಜೊತೆಗೆ ಜಮೀನನ್ನು ಸಮ ಮಟ್ಟ ಮಾಡಿ ಉತ್ತುವುದು Contour Bunding ಮತ್ತು ಒಳ್ಳೆಯ ಇಳುವರಿ ಪಡೆಯಲು ನಾಟಿಗೊಬ್ಬರ ಮಾಡಿ ಉಪಯೋಗಿಸುವುದು ಇತ್ಯಾದಿ ಹಾಗೂ ರಸ್ತೆ ಸಾರಿಗೆ ಅನುಕೂಲ ಪಡೆಯುವುದು.

ಪರ್ಯಾಯ ವ್ಯವಸ್ಥೆ ಇದೆಯೇ ಎಂಬ ಪ್ರಶ್ನೆಗೆ ನೇರ ಉತ್ತರ – ಇದೆ. ಸಾಕಾರವಾಗಿ ನಮ್ಮ ಕಣ್ಣ ಮುಂದೆ ಇದೆ. ಭಾರೀ ಯೋಜನೆಗಳ ಪರಿವರ್ತನೆ ಜೊತೆಗೆ Water harvesting ಮಾಡಿದರೆ ಪರ್ಯಾಯ ವ್ಯವಸ್ಥೆ ಪೂರ್ಣವಾಗುವುದರಲ್ಲಿ ಸಂದೇಹವಿಲ್ಲ. ಈ ವ್ಯವಸ್ಥೆಯ ಸೂಕ್ಷ್ಮಗಳು ಈ ಬರಹದಲ್ಲಿ ಮೂಡಿಬಂದಿವೆ.

ಸುದೀರ್ಘ ಯೋಜನೆಗಳ ವಿವರಗಳ ಬಗ್ಗೆ ನೀರಾವರಿ ತಜ್ಞರು, ರೈತರು, ಆರ್ಥಿಕ ತಜ್ಞರು, ಮುಖಂಡರು ಪ್ರಾಮಾಣಿಕ ಉದ್ದೇಶದಿಂದ ಕಲೆತು ಮಾಡಬೇಕಾದ್ದು.

ನೀರಿನ ವಿತರಣೆ ಪದ್ಧತಿಯಲ್ಲಿ ತೀವ್ರ ಬದಲಾವಣೆ ಆಗಬೇಕಾಗಿದೆ. ಉತ್ತರ ಪ್ರದೇಶ, ಪಂಜಾಬ್, ಹರಿಯಾಣ ಮತ್ತು ರಾಜಸ್ಥಾನ ರಾಜ್ಯಗಳಲ್ಲಿ ಪ್ರಚಲಿತವಿರುವ ವಾರಾಬಂದಿ ಪದ್ಧತಿ ಅನುಕರಣೀಯ. ವಾರಾಬಂದಿಯಲ್ಲಿ ಪೂರ್ವನಿಯೋಜಿತ ಶೆಡ್ಯೂಲ್ ಪ್ರಕಾರ, ನಿರ್ದಿಷ್ಟ ಅವಧಿಯಲ್ಲಿ, ನಿರ್ದಿಷ್ಟ ಪ್ರಮಾಣದಲ್ಲಿ, ನಿರ್ದಿಷ್ಟ ಬೆಳೆಗೆ ನೀರನ್ನು by turns ಸರಬರಾಜು ಮಾಡುವುದು. ಸರಬರಾಜು ಕಾಲುವೆಯ ಕೊನೆಯ ಭಾಗಗಳಿಗೆ ಮೊದಲು, ನಂತರ ಮಧ್ಯಭಾಗ, ಆನಂತರ ಮೇಲ್ಭಾಗ. ಫಲಿತಾಂಶ ನ್ಯಾಯಬದ್ಧ ಮತ್ತು ವಿಶ್ವಾಸ ಜನಕ ವಿತರಣೆ, ದಕ್ಷ ನಿರ್ವಹಣೆ.

ನಮ್ಮ ಜೀವನ ವಿಧಾನ ಹೇಗಿರಬೇಕು ? ಈ ಪ್ರಶ್ನೆ ನಮ್ಮ ನೀರಿನ ಬೇಡಿಕೆ ಎಷ್ಟು ಅನ್ನುವುದನ್ನು ಅವಲಂಬಿಸಿರುತ್ತದೆ. ಪಾಶ್ಚಾತ್ಯದ ಅದರಲ್ಲೂ ಕ್ಯಾಲಿಫೋರ್ನಿಯ ಜನರ ಬೇಡಿಕೆಯನ್ನು ಅನುಕರಿಸುವುದರಿಂದ Sustainable Development ಪರಿಸರ ರಕ್ಷಣೆಗೆ ಬೇಕಾದ ಸಹನಶೀಲ ಅಭಿವೃದ್ಧಿ ಕಾರ್ಯ ಅಸಾಧ್ಯವಾಗುತ್ತದೆ. ನಮ್ಮ ಬೇಡಿಕೆ ಹಿತಮಿತವಾಗಿರಬೇಕಾದ್ದು ಬಹಳ ಮುಖ್ಯ. ನಮ್ಮ ಜೀವನ ವಿಧಾನ ಈ ತತ್ವಕ್ಕನು ಗುಣವಾಗಿರಬೇಕಾದ್ದು ಮುಖ್ಯ.

**ಪರ್ಯಾಯ ನೀರಾವರಿಯ ಮುಖ್ಯ ರೂಪ ರೇಖೆ ಹೀಗಿದೆ :**

ಕೈಗೊಂಡಿರುವ ಭಾರಿ ಯೋಜನೆಗಳನ್ನು ಶೀಘ್ರಗತಿಯಲ್ಲಿ ಪೂರ್ಣಗೊಳಿಸುವುದು.

ಭಾರಿ ಯೋಜನೆಗಳ ಆಧುನೀಕರಣ ಮತ್ತು ಅಲ್ಲಿನ ನೀರು ವಿತರಣೆಯಲ್ಲಿ ಪರಿವರ್ತನೆ ಮಾಡುವುದು.

ಹೊಸ ಭಾರಿ ಯೋಜನೆ ಕೈಗೆತ್ತಿಕೊಳ್ಳಲೇಬೇಕಾದ ಸಂದರ್ಭ ಬಂದಾಗ Water harvesting, Water shed management ಪದ್ಧತಿಯನ್ನು ದೇಶದಲ್ಲೆಲ್ಲಾಕಡೆಗೆ ವಿಸ್ತರಿಸಿದ ಮೇಲೆ, ಹಾಲಿ ಯೋಜನೆಗಳಲ್ಲಿ ನೀರು ಪೋಲಾಗದಂತೆ ವ್ಯವಸ್ಥೆ ಮಾಡಿದ ಮೇಲೆ, ಪೂರ್ವಾಪರ ವಿಚಾರ ಮಾಡಿ ಹೊಸ ಭಾರಿ ಯೋಜನೆಗೆ ಕೈ ಹಾಕುವುದು.

ಜನಸಂಖ್ಯೆ ನಿಯಂತ್ರಣ ಮತ್ತು ನಮ್ಮ ಜೀವನ ವಿಧಾನದಲ್ಲಿ ನೀರಿನ ಮಿತ ಉಪಯೋಗಕ್ಕೆ ತಕ್ಕ ಬದಲಾವಣೆ ಅಗತ್ಯಕ್ಕೆ ಒತ್ತುಕೊಡಬೇಕಾಗಿದೆ.

(ಈ ಲೇಖನದಲ್ಲಿ ನಮೂದಿಸಿರುವ ಅಂಕಿ ಅಂಶಗಳನ್ನು ಮತ್ತು ಚಿಂತನೆಗಳನ್ನು *Report of National Commission for Integrated Water Resources Development Plan (೧೯೯೯)* ಮತ್ತು *B. G. Verghese, Ramaswamy R. Iyer, Q. K. Ahamed, Chopra, Kanchan and Biswsnath Goldar* ಮುಂತಾದ ಮಹನೀಯರ ಬರಹಗಳಿಂದ ಆಯ್ದುಕೊಂಡಿದೆ.)

ಅತ್ತಿಗನಾಳ್ ವೆಂ. ಶಂಕರರಾವ್
ಫಾರ್ಮರ್ ಚೀಫ್ ಎಂಜಿನಿಯರ್, ವಾಟರ್ ರಿಸೋರ್ಸಸ್ ಡೆವಲಪ್‌ಮೆಂಟ್
ಆರ್ಗನೈಸೇಷನ್, ಕರ್ನಾಟಕ ಸರ್ಕಾರ, ಚೇರ್‌ಮನ್, ಕಾವೇರಿ ತಾಂತ್ರಿಕ ಸಮಿತಿ, ಕರ್ನಾಟಕ


Shri S. M. Krishna
*Hon'ble Chief Minister*




Prof. B. K. Chandrashekar
*Hon'ble Minister for Primary and Secondary Education*

# Akshara Dasoha
## in Karnataka
# Yearning for learning

***The real motivation behind the regular attendance of Boys and Girls. It nourishes the young minds for more learning.***

Poor attendance of children in schools was a cause of concern. The compelling factor for this - **malnutrition** in children.

Not to give a chance to this, Akshara Dasoha came as a **big boon to them in Karnataka.** It solved the dual problem of **malnutrition** in children and **lack of attendance in schools.**

Akshara Dasoha provides children hot food with all nutrients in school.



The Government of visionary leader Shri S. M. Krishna introduced Akshara Dasoha programme in seven North-eastern Districts (viz. Raichur, Koppal, Gulbarga, Bidar, Bellary, Bagalkot and Bijapur) on an experimental basis on 1st June, 2002.

The programme gave a big boost and improved the attendance of children in schools in these districts, dramatically !

Encouraged by this instant success of the programme, the Government is now extending this programme all over the state from 1st July, 2003.

As a result of this, 50 lakh school children in 1st to 5th standards all over the state are going to be benefited.

Besides addressing the burning social problems of **illiteracy and child labour,** Akshara Dasoha helps build self-esteem and self-confidence among the under-privileged children.

Akshara Dasoha, a programme of social responsibility with an annual expenditure of about Rs. 202 crores, surely welcomes Stree Shakti Groups, NGOs and other concerns to play their vital role in making this Mid-day Meal Programme a huge success all over Karnataka.


**karnataka information**

*Akshara Dasoha - The Architect of Strong and Sound Citizens of Tomorrow*

# ಪ್ಲಾಸ್ಟಿಕ್



# ಪರಿಸರ ವಿನಾಶಕ

ಭಾರತವು ಪ್ಲಾಸ್ಟಿಕ್ ಉತ್ಪನ್ನಗಳನ್ನು ಬಳಸುವುದರಲ್ಲಿ ವಿಶ್ವದ ಪ್ರಮುಖ ರಾಷ್ಟ್ರಗಳಲ್ಲಿ ಒಂದಾಗಿದೆ. ಪ್ಲಾಸ್ಟಿಕ್-ಮಾನವನು ಸೃಷ್ಟಿಸಿಕೊಂಡಿರುವ ಒಂದು ಕೃತಕ ವಸ್ತು. ಇದು ಮಣ್ಣಲ್ಲಿ ಕೊಳೆಯದೆ, ನೀರಿನಲ್ಲಿ ಕರಗದೆ ಪರಿಸರಕ್ಕೆ ಹಾನಿಯುಂಟುಮಾಡುತ್ತದೆ. ನಮ್ಮನ್ನು ಮತ್ತು ನಮ್ಮ ಪರಿಸರವನ್ನು ರಕ್ಷಿಸಿಕೊಳ್ಳಲು ಪ್ಲಾಸ್ಟಿಕ್ ಬಳಕೆಯನ್ನು ಆದಷ್ಟೂ ಕಡಿಮೆ ಮಾಡುವುದು ಅತ್ಯವಶ್ಯಕವಾಗಿದೆ. ಪುನರ್ ಬಳಕೆಯ ಪ್ಲಾಸ್ಟಿಕ್ ಹಾಳೆ / ಕೈಚೀಲ / ಡಬ್ಬಿಯಲ್ಲಿ ಆಹಾರ ಪದಾರ್ಥಗಳನ್ನು ಪ್ಯಾಕ್ ಮಾಡುವುದು ಮತು 20 ಮೈಕ್ರಾನ್‌ಗಳಿಗಿಂತ ತೆಳುವಾದ ಪರಿಶುದ್ಧ /ಪುನರ್ ಬಳಕೆ ಪ್ಲಾಸ್ಟಿಕ್ ಕೈಚೀಲ ಉತ್ಪಾದನೆಯನ್ನು ಕಾನೂನಿನನುಸಾರ ಈಗಾಗಲೇ ನಿಷೇಧಿಸಲ್ಪಟ್ಟಿದೆ.

### ಪ್ಲಾಸ್ಟಿಕ್‌ನಿಂದೊದಗುವ ಅಪಾಯಗಳೆಂದರೆ :

- ಇದನ್ನು ಸುಟ್ಟಾಗ ಹೊರಬರುವ ವಿಷಾನಿಲಗಳು ವಾತಾವರಣ ಸೇರಿ ವಾಯುಮಾಲಿನ್ಯ ಉಂಟುಮಾಡುತ್ತದೆ.
- ಇದು ಮಣ್ಣಲ್ಲಿ ಸೇರಿಕೊಂಡು ನೀರು ಇಂಗಲು ಅಡ್ಡಿ ಮಾಡಿ ಕೆರೆಬಾವಿಗಳಿಗೆ ಬರುವ ನೀರನ್ನು ತಡೆಯುತ್ತದೆ.
- ಇದು ಇರುವ ಮಣ್ಣಿನಲ್ಲಿ ಎರೆಹುಳುಗಳು ಬೆಳೆಯದೆ, ಮಣ್ಣಿನ ಫಲವತ್ತತೆ ಕಡಿಮೆಯಾಗುತ್ತದೆ.
- ಇದು ಸಸ್ಯಗಳ ಬೇರುಗಳು ಮಣ್ಣಿನಲ್ಲಿ ಪಸರಿಸಲು ಅಡ್ಡಿ ಮಾಡುತ್ತದೆ.
- ಇದು ಹುಲ್ಲು ಮೇವಿನ ಜೊತೆ ಬೆರೆತಲ್ಲಿ ದನಕರು ಮತ್ತು ಇನ್ನಿತರ ಪ್ರಾಣಿಗಳ ಸಾವಿಗೆ ಕಾರಣವಾಗುತ್ತದೆ.
- ಇದರ ವಸ್ತುಗಳು ಚರಂಡಿಗಳಲ್ಲಿ ಸೇರಿ ನೀರಿನ ಸರಾಗ ಹರಿಯುವಿಕೆ ಅಡ್ಡಿಯುಂಟುಮಾಡುವುದಲ್ಲದೆ ಹಲವಾರು ಕಾಯಿಲೆಗಳು ಹರಡಲು ಕಾರಣವಾಗುತ್ತದೆ.

ಈ ಕೆಳಕಂಡ ಕೆಲವು ಸರಳ ವಿಧಾನಗಳನ್ನು ಅನುಸರಿಸುವುದರ ಮೂಲಕ ಪ್ಲಾಸ್ಟಿಕ್ ಬಳಕೆಯನ್ನು ಆದಷ್ಟೂ ಕಡಿಮೆ ಮಾಡಬಹುದು :

1. ಪ್ಲಾಸ್ಟಿಕ್ ಉತ್ಪನ್ನಗಳ ಬದಲಿಗೆ ಬಟ್ಟೆ /ಕಾಗದದಿಂದ ತಯಾರಿಸಿದ ಉತ್ಪನ್ನಗಳನ್ನು ಪರ್ಯಾಯವಾಗಿ ಬಳಸಿದರೆ ಪ್ಲಾಸ್ಟಿಕ್ ಬಳಕೆಯನ್ನು ಹಂತಹಂತವಾಗಿ ಸಂಪೂರ್ಣವಾಗಿ ಬಿಡಬಹುದು.
2. ಪ್ಲಾಸ್ಟಿಕ್ ವ್ಯರ್ಥ ಪದಾರ್ಥಗಳನ್ನು ಸುಲಭವಾಗಿ ಕರಗುವ ಪದಾರ್ಥಗಳಿಂದ ಬೇರ್ಪಡಿಸಿ ಅವುಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಬಿಸಾಡುವುದರ ಬದಲಿಗೆ ನಿಗದಿತ ಸ್ಥಳಗಳಲ್ಲಿ ವಿಲೇವಾರಿ ಮಾಡಿ.
3. ಹೋಟೆಲ್ ಉದ್ಯಮ ಹಾಗೂ ಆಹಾರ ಪದಾರ್ಥಗಳಲ್ಲಿ ಉತ್ಪಾದಕರು/ಮಾರಾಟಗಾರರು ಪ್ಲಾಸ್ಟಿಕ್ ಬಳಸುವುದನ್ನು ಸಂಪೂರ್ಣವಾಗಿ ತಡೆಯಲು ಒತ್ತಾಯಿಸಬೇಕಾಗಿದೆ.
4. ಪುನರ್ ಬಳಕೆಯ ಪ್ಲಾಸ್ಟಿಕ್‌ನಿಂದ ತಯಾರಿಸಿದ ಚೀಲ ಅಥವಾ ಡಬ್ಬಗಳನ್ನು ಆಹಾರ ವಸ್ತುಗಳ ಸಂಗ್ರಹಣೆ, ಸಾಗಣೆ ಅಥವಾ ಪ್ಯಾಕ್ ಮಾಡಲು ಬಳಸಬಾರದು.

*ಸಾರ್ವಜನಿಕರ ಹಿತದೃಷ್ಟಿಯ ಪ್ರಕಟಣೆ :*



## ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ

6, 7, 8 ಮತ್ತು 9ನೇ ಮಹಡಿಗಳು, ನೇತಾಜಿ ಸುಭಾಷ್‌ಚಂದ್ರ ಬೋಸ್ ಕಟ್ಟಡ (ಜನೋಪಯೋಗಿ ಕಟ್ಟಡ)
ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು - 560 001 ಫೋನ್ : 5586520 ಫ್ಯಾಕ್ಸ್ : 080-5586321 ಗ್ರಾಮ್ಸ್ : ಜಲರಕ್ಷಾ

**ಪ್ಲಾಸ್ಟಿಕ್ ಬಳಕೆ ನಿಲ್ಲಿಸಿ - ಪರಿಸರ ಹಾನಿ ತಪ್ಪಿಸಿ**

**ದು**ಡಿಯುವ ಜನರ ಮುಷ್ಕರದ ಹಕ್ಕನ್ನು ನಿರಾಕರಿಸಿರುವ ಸರ್ವೋಚ್ಚ ನ್ಯಾಯಾಲಯದ ಅಭಿಪ್ರಾಯಗಳು ತೀವ್ರವಾದ ವಿವಾದಕ್ಕೆಡೆಕೊಟ್ಟಿದೆ, ಕಾರ್ಮಿಕ ವರ್ಗದಲ್ಲಿ ಅತೀವವಾದ ಅಸಮಾಧಾನವನ್ನುಂಟುಮಾಡಿದೆ. ಅಟಾರ್ನಿ ಜನರಲ್‌ನಿಂದ ಹಿಡಿದು ಎಲ್ಲ ವಿಭಾಗಗಳ ಜನರೂ ನ್ಯಾಯಾಲಯದ ತೀರ್ಮಾನವನ್ನು ಕಟುವಾಗಿ ಟೀಕಿಸಿದ್ದಾರೆ, ದುರದೃಷ್ಟಕರ ಎಂದು ಬಣ್ಣಿಸಿದ್ದಾರೆ, ಸರ್ವೋಚ್ಚ ನ್ಯಾಯಾಲಯವು ವಿಷಯವನ್ನು ಪುನರ್‌ಪರಿಶೀಲಿಸಿ ತೀರ್ಪನ್ನು ಮಾರ್ಪಡಿಸಬೇಕೆಂದು ಒತ್ತಾಯಪಡಿಸಿದ್ದಾರೆ. ಪ್ರಧಾನಮಂತ್ರಿಯವರೂ ಕೂಡ ತಮ್ಮದೇ ಆದ ರೀತಿಯಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಬಗ್ಗೆ ಅತೃಪ್ತಿಯನ್ನು ವ್ಯಕ್ತಗೊಳಿಸಿದ್ದಾರೆ, ಮುಷ್ಕರದ ಹಕ್ಕಿನ ಬಗ್ಗೆ ಸರ್ವಸಮ್ಮತವಾದ ಅಭಿಪ್ರಾಯಕ್ಕೆ ಬರಲು ಪ್ರಯತ್ನಿಸಬೇಕೆಂದು ಸೂಚಿಸಿದ್ದಾರೆ. ಟ್ರೇಡ್ ಯೂನಿಯನ್ ನಾಯಕರುಗಳು ಸರಕಾರ ಸೂಕ್ತವಾದ ಕಾನೂನನ್ನು ತಂದು ಕಾರ್ಮಿಕರ ಹಕ್ಕನ್ನು ಪುನರುತ್ಥಾಪಿಸಬೇಕೆಂದು ಒತ್ತಾಯಿಸಿದ್ದಾರೆ. ಕಾರ್ಮಿಕರ ಹಿತರಕ್ಷಣೆಗಾಗಿರುವ ಟ್ರೇಡ್ ಯೂನಿಯನ್ ಚಟುವಟಿಕೆಗಳಿಗೆ, ಸಮಷ್ಟಿ ಕಾರ್ಯಾಚರಣೆಗಳಿಗೆ, ಸಮಷ್ಟಿ ಸಂಧಾನ ಪ್ರಕ್ರಿಯೆಗೆ ನ್ಯಾಯಾಲಯದ ಈ ತೀರ್ಪು ಮಾರಕವಾಗಲಿದೆ. ಈಗಾಗಲೇ ಕಾರ್ಮಿಕ ಸಂಘಟನೆಗಳು ದೇಶಾದ್ಯಂತ ಎಲ್ಲ ಕಡೆಯೂ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಪ್ರತಿಭಟಿಸಿವೆ.

**ಜನ್ಮಸಿದ್ಧಹಕ್ಕು**

ತನ್ನ ದುಡಿಮೆಯ ಶಕ್ತಿಯನ್ನು ವಿಕ್ರಯಿಸುವ ದುಡಿಮೆಗಾರನಿಗೆ ಅದಕ್ಕೆ ಸೂಕ್ತವಾದ

# ಮುಷ್ಕರದ ಹಕ್ಕು



## ಸಂವಿಧಾನಾತ್ಮಕ ಮೂಲಭೂತ ಹಕ್ಕಾಗಲಿ

"ತನ್ನ ದುಡಿಮೆಯ ಶಕ್ತಿಯನ್ನು ವಿಕ್ರಯಿಸುವ ದುಡಿಮೆಗಾರನಿಗೆ ಅದಕ್ಕೆ ಸೂಕ್ತವಾದ ವೇತನ ಪಡೆಯುವ, ತನ್ನ ಜೀವನ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವ ಹಕ್ಕು ಇದೆ. ತನ್ನ ಬೇಡಿಕೆಗಳನ್ನು ಈಡೇರಿಸಿ ಕೊಳ್ಳಲು ಸಂಘಟನೆಗೊಂಡು ಹೋರಾಟ ನಡೆಸಲು, ಮುಷ್ಕರ ನಡೆಸುವುದನ್ನೂ ಒಳಗೊಂಡಂತೆ ಎಲ್ಲ ವಿಧಾನಗಳನ್ನೂ ಬಳಸಿಕೊಳ್ಳಲು ದುಡಿಮೆಗಾರನಿಗೆ ಹಕ್ಕು ಇರುತ್ತದೆ. ಇದು ಅವನ ಜನ್ಮಸಿದ್ಧ ಹಕ್ಕು. ಇದನ್ನು ಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲ."



ವೇತನ ಪಡೆಯುವ, ತನ್ನ ಜೀವನಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವ ಹಕ್ಕು ಇದೆ. ತನ್ನ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಸಂಘಟನೆಗೊಂಡು ಹೋರಾಟ ನಡೆಸಲು, ಮುಷ್ಕರ ನಡೆಸುವುದನ್ನೂ ಒಳಗೊಂಡಂತೆ ಎಲ್ಲ ವಿಧಾನಗಳನ್ನೂ ಬಳಸಿಕೊಳ್ಳಲು ದುಡಿಮೆಗಾರನಿಗೆ ಹಕ್ಕು ಇರುತ್ತದೆ. ಇದು ಅವನ ಜನ್ಮಸಿದ್ಧ ಹಕ್ಕು. ಇದನ್ನು ಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲ. ಮುಷ್ಕರದ ಹಕ್ಕು ಸಂವಿಧಾನದತ್ತವೇ ಅಲ್ಲವೇ ಎನ್ನುವುದಕ್ಕಿಂತ ಅದು ಪರಂಪರಾಗತವಾಗಿ ಹೋರಾಟಗಳ ಮೂಲಕವಾಗಿ ಬಂದಿರುವ ಹಕ್ಕು ಎಂದು ಹೇಳುವುದು ಸೂಕ್ತ. ಬಂಡವಾಳಶಾಹಿ ವ್ಯವಸ್ಥೆಯ ಹುಟ್ಟಿನೊಂದಿಗೇ ಅಸ್ತಿತ್ವಕ್ಕೆ ಬಂದ ಕಾರ್ಮಿಕ ವರ್ಗದ ಸತತ ಹೋರಾಟ, ತ್ಯಾಗ ಬಲಿದಾನಗಳಿಂದ ಪಡೆದುಕೊಂಡಿರುವ ಮುಷ್ಕರದ ಹಕ್ಕು ಅದಕ್ಕಿರುವ ಏಕೈಕ ಅಸ್ತ್ರ. ನ್ಯಾಯವಾದ ಬೇಡಿಕೆಗಳ ಈಡೇರಿಕೆಗಾಗಿ ಸಂಘಟಿತಗೊಂಡು ಕಾರ್ಮಿಕರು ಮಾಲಿಕರೊಂದಿಗೆ ಸಂಧಾನ ನಡೆಸುವ ಎಲ್ಲ ಪ್ರಯತ್ನಗಳೂ ವಿಫಲಗೊಂಡಾಗ ಮುಷ್ಕರ ಹೂಡುವುದೊಂದೇ ಮಾರ್ಗವಾಗಿರುತ್ತದೆ. ಕಾರ್ಮಿಕರ ಈ ಹಕ್ಕನ್ನೂ ಕಸಿದುಕೊಂಡರೆ, ಹತ್ತಿಕ್ಕಿದರೆ ಅದು ದುಡಿಯುವ ಜನರನ್ನು ಬಂಡವಾಳಶಾಹಿ ಮಾಲಿಕರ ದಾಸ್ಯಕ್ಕೆ ದೂಡಿದಂತೆ ಆಗುತ್ತದೆ, ಕಾರ್ಮಿಕ ವರ್ಗದ ಸಂಘಟನಾ ಸ್ವಾತಂತ್ರ್ಯದ ಹರಣವಾಗುತ್ತದೆ. ವಾಸ್ತವ ಪರಿಸ್ಥಿತಿಯನ್ನು ಪರಿಗಣನೆಗೆ ತೆಗೆದುಕೊಳ್ಳದೆ ಕಾನೂನಿನ ವ್ಯಾಪ್ತಿಯಲ್ಲೇ ವ್ಯಾಖ್ಯಾನಿಸುವುದು ಒಣ ವೇದಾಂತವಾಗುತ್ತದೆ. ಇದರಿಂದ ನ್ಯಾಯಾಲಯಗಳ ತೀರ್ಪುಗಳಲ್ಲಿ ವಿಶ್ವಾಸವೇ ಇಲ್ಲವಾಗುತ್ತದೆ. ನ್ಯಾಯಾಲಯಗಳು ಸಂಕುಚಿತ ದೃಷ್ಟಿಯಿಂದ ಕಾನೂನನ್ನು ಅರ್ಥೈಸಿ ಪರಂಪರಾಗತವಾಗಿ ಬಂದಿರುವ ಜನ ಸಾಮಾನ್ಯರ ಹಕ್ಕುಗಳನ್ನು ನಿರಾಕರಿಸಿದಾಗ ಅರಾಜಕತೆಗೆ ಅವಕಾಶವಾಗುತ್ತದೆ, ಸರ್ವಾಧಿಕಾರಕ್ಕೆ ಎಡೆಕೊಡುತ್ತದೆ.

**ಸರ್ವೋಚ್ಚ ನ್ಯಾಯಾಲಯದ ತೀರ್ಪು**

ಈ ಹಿನ್ನೆಲೆಯಲ್ಲಿ, ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯದ ಇಬ್ಬರು ನ್ಯಾಯ ಮೂರ್ತಿಗಳ ಪೀಠ ಮುಷ್ಕರದ ಹಕ್ಕು ಕುರಿತು ವ್ಯಕ್ತಗೊಳಿಸಿರುವ ಅಭಿಪ್ರಾಯಗಳನ್ನು ಪರಿಶೀಲಿಸೋಣ. ತಮಿಳುನಾಡು ಸರಕಾರಿ ನೌಕರರ ಮುಷ್ಕರಕ್ಕೆ ಸಂಬಂಧಿಸಿದಂತೆ ಕೆಲಸದಿಂದ ವಜಾ ಆಗಿದ್ದ ಸುಮಾರು ೧.೭ ಲಕ್ಷ ನೌಕರರ ಪುನರ್ ನೇಮಕ ಕುರಿತ ಖಟ್ಲೆಯಲ್ಲಿ ತೀರ್ಪು ನೀಡಿದ ನ್ಯಾಯಮೂರ್ತಿಗಳಾದ ಎಂ. ಬಿ. ಷಾ ಮತ್ತು ಎ. ಆರ್. ಲಕ್ಷ್ಮಣನ್ ಸಾರಾಸಗಟಾಗಿ ಮುಷ್ಕರಗಳನ್ನು ಅಕ್ರಮ, ಅನೈತಿಕ, ಸಾರ್ವಜನಿಕ ಜೀವನವನ್ನು ಅಸ್ತವ್ಯಸ್ತಗೊಳಿಸುವಂಥವು, ಸಂವಿಧಾನ ರೀತ್ಯ ಅಸಿಂಧು, ಇಡೀ ಸಮಾಜವನ್ನು ಒತ್ತೆಯಾಗಿಸುತ್ತದೆ ಇತ್ಯಾದಿಯಾಗಿ ಅಭಿಪ್ರಾಯಪಟ್ಟಿದ್ದಾರೆ. ಅದೇ ಧಾಟಿಯಲ್ಲಿ ಮುಂದು ವರಿದು, ಮುಷ್ಕರಗಳು ಇತರ ಜನ ವಿಭಾಗಗಳ ಹಕ್ಕುಚ್ಯುತಿ ಮಾಡುತ್ತವೆ, ''ಬಹು ತೇಕವಾಗಿ ಮುಷ್ಕರ ಅಸ್ತ್ರ ದುರುಪಯೋಗವಾಗುತ್ತಿದ್ದು ಅರಾಜಕತೆ ಮತ್ತು ಸಂಪೂರ್ಣ ಆಡಳಿತ ಕುಸಿತದಲ್ಲಿ ಪರಿಣಮಿಸುತ್ತದೆ, ಮುಷ್ಕರ ಇಡೀ ಸಮಾಜವನ್ನು ಬಾಧಿಸುತ್ತದೆ. ಅದರಲ್ಲೂ ಎರಡು ಲಕ್ಷ ಸರಕಾರಿ ನೌಕರರು ಮುಷ್ಕರದಲ್ಲಿ ತೊಡಗಿದಾಗ ಇಡೀ ಆಡಳಿತವೇ ಸ್ಥಗಿತಗೊಳ್ಳುತ್ತದೆ'' ಎಂದು ಹೇಳಿದ್ದಾರೆ. ಅನಂತರ ಅವರು ಅಧ್ಯಾಪಕರು ಮುಷ್ಕರ ನಡೆಸಿದರೆ ಹೇಗೆ ಶಿಕ್ಷಣ ವ್ಯವಸ್ಥೆಗೆ ಹಾನಿಯಾಗುತ್ತದೆ, ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತದೆ; ಸಾರಿಗೆ ನೌಕರರು ಮುಷ್ಕರ ನಡೆಸಿದರೆ ಇಡೀ ಸಮಾಜದ ಜನರ ಚಲನೆಯೇ ಅಸ್ತವ್ಯಸ್ತಗೊಳ್ಳುತ್ತದೆ, ವೈದ್ಯರು ಮುಷ್ಕರ ನಡೆಸಿದರೆ ರೋಗಿಗಳಿಗೆ ಮಾರಕವಾಗುತ್ತದೆ ಇತ್ಯಾದಿಯಾಗಿ ಪಟ್ಟಿ ಮಾಡಿದ್ದಾರೆ. ಒಟ್ಟಿನಲ್ಲಿ ಯಾವುದೇ ಮುಷ್ಕರ ಸಮಾಜಕ್ಕೆ ಆಘಾತ ಉಂಟುಮಾಡುತ್ತದೆ ಎಂಬುದೇ ಅವರ ಅಭಿಮತ.

**ಅಪಾಯಕಾರಿ ಸಿದ್ಧಾಂತ**

ಇದು ತುಂಬಾ ಅಪಾಯಕಾರಿಯಾದ ಸಿದ್ಧಾಂತ. ಪ್ರಜಾಪ್ರಭುತ್ವವಾದಿ ಪರಿಕಲ್ಪನೆಗಳನ್ನು ವೃದ್ಧಿಗೊಳಿಸಿ, ನಾಗರಿಕ ಹಕ್ಕುಗಳನ್ನು ವಿಸ್ತರಿಸುವುದಕ್ಕೆ ಪ್ರತಿಯಾಗಿ ಮುಷ್ಕರದ ಹಕ್ಕನ್ನು ಕಸಿದುಕೊಂಡರೆ ಬಹುದೊಡ್ಡ ಜನ ವಿಭಾಗವನ್ನು ಮಾಲಿಕ ವರ್ಗದ ಅಧೀನಕ್ಕೊಳಪಡಿಸುವುದಲ್ಲದೆ, ಸರ್ವಾಧಿಕಾರ ಬರುವುದಕ್ಕೆ ಅನುಕೂಲಮಾಡಿ ಕೊಟ್ಟಂತಾಗುತ್ತದೆ. ಮುಷ್ಕರದಿಂದಾಗುವ ಅನಾನುಕೂಲಗಳನ್ನು ಕುರಿತು ಸಾಕಷ್ಟು ಹೇಳುವ ನ್ಯಾಯಾಲಯಗಳು ಲಾಕ್‌ಔಟ್ ಮಾಡುವ, ಕೆಲಸಗಾರರನ್ನು ಸಾಮೂಹಿಕವಾಗಿ ಕೆಲಸದಿಂದ ತೆಗೆದುಹಾಕುವ, ಕಾರ್ಖಾನೆಗಳನ್ನು ಮುಚ್ಚುವ ಮಾಲಿಕರ ಚರ್ಯೆ ಕುರಿತು ಅಷ್ಟೇ ಆಸ್ಥೆ ವಹಿಸದಿರುವುದು, ಖಂಡಿಸದಿರುವುದು ಗಮನಿಸಬೇಕಾದ ಸಂಗತಿ. ಮುಷ್ಕರ ಅನೈತಿಕ ಮಾರ್ಗವಾದ್ದರಿಂದ, ಸಮಾಜ ಘಾತುಕವಾದ್ದರಿಂದ, ಕೆಲಸಗಾರರು ಅವನ್ನು ತ್ಯಜಿಸಿ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಕಾನೂನಿನ ವ್ಯಾಪ್ತಿಯಲ್ಲಿರುವ ಅವಕಾಶಗಳನ್ನೇ ಉಪಯೋಗಿಸಿ ಕೊಳ್ಳಬೇಕು ಎನ್ನುವುದು ನ್ಯಾಯಾಲಯಗಳ ಅಭಿಪ್ರಾಯ ಎಂದು ತೋರುತ್ತದೆ. ಈ ಸೂಚನೆಯನ್ನು ಅಂಗೀಕರಿಸಿದರೆ ಕೆಲಸಗಾರರು ನ್ಯಾಯಾಲಯಗಳ ಮೊರೆ ಹೋಗಬೇಕು ಅಷ್ಟೇ ಇಲ್ಲದೇ ಹೋದಲ್ಲಿ ಬಂಡವಾಳಶಾಹಿಗಳ ಕೃಪಾಕಟಾಕ್ಷವನ್ನು ನಂಬಿಕೊಂಡಿರಬೇಕು. ನಮ್ಮ ನ್ಯಾಯಾಂಗ ವ್ಯವಸ್ಥೆಯಲ್ಲಿ ವರ್ಷಗಟ್ಟಳೆ ವಿವಾದಗಳು ಇತ್ಯರ್ಥಗೊಳ್ಳದೆ ಕೊಳೆಯುವುದು, ಕೊಳೆಯುತ್ತಿರುವುದು ಎಲ್ಲರಿಗೂ ತಿಳಿದಿದೆ.

ಅದಲ್ಲದೆ ತಗಲುವ ವೆಚ್ಚವೂ ದುಬಾರಿ. ಹಾಲಿ ಇರುವ ವ್ಯವಸ್ಥೆಯಲ್ಲಿ ನಾಗರಿಕ ಹಕ್ಕುಗಳು ಯಶಸ್ವಿಯಾಗಿ ಪ್ರತಿಪಾದನೆಯಾಗುವುದಕ್ಕೆ ಪ್ರತಿಯಾಗಿ ಅಸಾಧಾರಣವಾದ ಮಂದಗತಿಯಿಂದಾಗಿ ಅವು ನಿರರ್ಥಕಗೊಳ್ಳುತ್ತಿವೆ. ಎಷ್ಟೋ ವೇಳೆ ನಾಗರಿಕರು ನ್ಯಾಯ ದೊರಕಿಸಿಕೊಳ್ಳುವುದು ವಿಪರೀತ ತಡವಾಗಿ, ದುಸ್ತರವಾದಾಗ ಸಮಜಾಯಿಷಿಗೆ ಶರಣಾಗಬೇಕಾದ ಪರಿಸ್ಥಿತಿ ಉಂಟಾಗಿದೆ. ಟ್ರೇಡ್ ಯೂನಿಯನ್ ವಿವಾದಗಳೂ ಕೂಡ ಇವಕ್ಕೆ ಹೊರತೇನಲ್ಲ. ಈ ಪರಿಸ್ಥಿತಿಯನ್ನು ನಿವಾರಿಸಿ ನ್ಯಾಯ ವಿತರಣೆ ವ್ಯವಸ್ಥೆಯಲ್ಲಿ ಸುಧಾರಣೆ ತಂದು ಚುರುಕುಗೊಳಿಸಲು ನೇಮಕಗೊಂಡಿದ್ದ ಆಯೋಗಗಳ ವರದಿ ಧೂಳು ಹಿಡಿದು ಕಪಾಟಿನಲ್ಲಿವೆ. ನ್ಯಾಯಾಂಗ ವ್ಯವಸ್ಥೆಯ ಸುಧಾರಣೆ ಇನ್ನೂ ಕನಸಾಗಿಯೇ ಉಳಿದಿದೆ. ಹಾಗಿರುವಾಗ ತಮ್ಮ ಬೇಡಿಕೆಗಳ ಇತ್ಯರ್ಥಕ್ಕೆ ನ್ಯಾಯಾಲಯದ ಮೆಟ್ಟಿಲೇರಿದರೆ ಕತೆ ಮುಗಿದಂತೆಯೇ.

ಈಗಿರುವ ಕಾನೂನು ವ್ಯಾಪ್ತಿಯಲ್ಲೂ ಕೂಡ ವಿಶೇಷ ಕಾನೂನುಗಳಿದ್ದಾಗ್ಯೂ – ಉದಾಹರಣೆಗೆ, ಕೈಗಾರಿಕಾ ವಿವಾದ ಕಾಯಿದೆ, ವೇತನ ನೀಡಿಕೆ ಕಾಯಿದೆ, ಪಂಚಾಯ್ತಿ ಪ್ರಕ್ರಿಯೆ ಮೊದಲಾದವು – ಕೂಡ ಕಾರ್ಮಿಕರ ಬೇಡಿಕೆಗಳಿಗೆ ಸಂಬಂಧಿಸಿದ ವಿವಾದಗಳು ಸಾಕಷ್ಟು ತಡವಾಗಿ ಇತ್ಯರ್ಥಗೊಳ್ಳುತ್ತಿವೆ. ಇದರ ಮೇಲೆ ಅವು ಉಚ್ಚ ನ್ಯಾಯಾಲಯಗಳ ಕಟ್ಟೆ ಏರುವುದು ವಿರಳವೇನಲ್ಲ. ಹಾಗೆಯೇ, ಮಾಲೀಕರು ಈ ತಂತ್ರವನ್ನು ಬಳಸಿಕೊಂಡು, ಕಾರ್ಮಿಕರನ್ನು ತಮ್ಮ ಷರತ್ತಿಗೆ ಮಣಿಯುವಂತೆ ಮಾಡಲು ಟ್ರೇಡ್ ಯೂನಿಯನ್ ಚಳುವಳಿಯನ್ನು ದುರ್ಬಲಗೊಳಿಸಲು ಪ್ರಯತ್ನಿಸಿರುವುದು ಅಪರೂಪವೇನಲ್ಲ. ಪರಿಸ್ಥಿತಿ ಹೀಗಿರುವಾಗ ಕಾರ್ಮಿಕರ ಮುಷ್ಕರ ಹಕ್ಕನ್ನೂ ನಿರಾಕರಿಸಿದರೆ ಪರಿಣಾಮ ಏನಾದೀತು ? ಇದು ಕಾರ್ಮಿಕ ವರ್ಗವನ್ನೂ, ಜನಸಮುದಾಯದ ಒಂದು ದೊಡ್ಡ ವಿಭಾಗವನ್ನೂ ಬಾಧಿಸುವ ಪ್ರಶ್ನೆ. ಸರ್ವೋಚ್ಚ ನ್ಯಾಯಾಲಯವನ್ನೂ ಒಳಗೊಂಡಂತೆ, ನ್ಯಾಯಾಲಯಗಳು, ನ್ಯಾಯಾಧೀಶರುಗಳು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಇದನ್ನು ಪರಿಗಣಿಸದೆ ಹೋಗಿರುವುದು ನಿಜಕ್ಕೂ ಶೋಚನೀಯ.

ಮುಷ್ಕರ ಹೋರಾಟ ಕಾರ್ಮಿಕ ವರ್ಗದ ಬತ್ತಳಿಕೆಯಲ್ಲಿರುವ ಅಂತಿಮ ಅಸ್ತ್ರ ಮಾತುಕತೆ, ಸಂಧಾನಗಳ ಪ್ರಯತ್ನವೆಲ್ಲ ಫಲಕಾರಿಯಾಗದೆ ಮುರಿದುಬಿದ್ದ ನಂತರವಷ್ಟೇ ಮುಷ್ಕರದ ಹಾದಿ ಹಿಡಿಯಬೇಕಾಗುವುದು. ಅದು ಸುಲಭವಾದದ್ದೂ ಅಲ್ಲ, ಸುಗಮವಾದದ್ದೂ ಅಲ್ಲ. ಅದು ಕಾರ್ಮಿಕರ ದೃಢ ನಿಶ್ಚಯದ, ಸಾಮರ್ಥ್ಯದ, ಐಕ್ಯತೆಯ ಸತ್ವಪರೀಕ್ಷೆ ಆಗಿರುತ್ತದೆ. ಮುಷ್ಕರದ ಅವಧಿಯಲ್ಲಿ ಕಾರ್ಮಿಕರು ಸಾಮಾನ್ಯವಾಗಿ ವೇತನ ಕಳೆದುಕೊಳ್ಳುತ್ತಾರೆ. ಅದಲ್ಲದೆ ಅವರು ನಾನಾ ರೀತಿಯ ಒತ್ತಡಗಳನ್ನೂ ಬಲಾತ್ಕಾರಗಳನ್ನೂ ದಬ್ಬಾಳಿಕೆಗಳನ್ನೂ ಎದುರಿಸಬೇಕಾಗಿರುತ್ತದೆ. ಆದ್ದರಿಂದ ಮುಷ್ಕರ ಹೂಡುವುದು ಸುಲಭವೇನಲ್ಲ. ಇದರ ಮೇಲೆ ಅಗತ್ಯ ಸೇವಾ ನಿರ್ವಹಣಾ ಕಾಯಿದೆ ಪ್ರಕಾರ ಯಾವುದೇ ಮುಷ್ಕರ ಅಕ್ರಮ, ನ್ಯಾಯಬಾಹಿರ ಎಂದು ಸಾರುವ ಅಧಿಕಾರವನ್ನು ಸರಕಾರ ಹೊಂದಿದೆ. ಈ ಕಾಯಿದೆಯ ಸಂವಿಧಾನಬದ್ಧತೆಯನ್ನು ಪರಿಶೀಲಿಸುವ ಗೊಡವೆಗೆ ನ್ಯಾಯಾಲಯಗಳೂ ಗಮನ ಹರಿಸಿಲ್ಲ. ಕಾರ್ಮಿಕರ ಬೇಡಿಕೆಗಳ ಕುರಿತು ಲೇಬರ್ ಕಮಿಷನರ್ ಅವರ ಸಮ್ಮುಖದಲ್ಲಿ ಸಂಧಾನ ನಡೆಯುತ್ತಿರುವ ಅವಧಿಯಲ್ಲಿ ಕೈಗಾರಿಕಾ ನ್ಯಾಯಾಲಯದಲ್ಲಿ ಸಂಬಂಧಪಟ್ಟ ವಿವಾದ ಇತ್ಯರ್ಥವಾಗುವವರೆಗೆ ಕಾರ್ಮಿಕರು ಮುಷ್ಕರ ಹೂಡುವಂತಿಲ್ಲ. ಕೈಗಾರಿಕಾ ವಿವಾದ ಕಾನೂನಿನ ಅಡಿಯಲ್ಲಿ ವಿವಾದಗಳನ್ನು ಕಾರ್ಮಿಕ ನ್ಯಾಯಾಲಯಗಳಿಗೆ ಒಪ್ಪಿಸುವ ಅಧಿಕಾರ ಇರುವುದು ಸರಕಾರಕ್ಕೆ ಮಾತ್ರ. ಅದರಿಂದಾಗಿ, ಸಮಷ್ಟಿ ಸಂಧಾನ ಪ್ರಕ್ರಿಯೆಯಲ್ಲಿ ತೊಡಗುವ ಅವಕಾಶವಿಲ್ಲದಿರುವಾಗ ಸರಕಾರದ ಮೇಲೆ ಒತ್ತಡ ತಂದು ವಿವಾದವನ್ನು ಕಾರ್ಮಿಕ ನ್ಯಾಯಾಲಯಕ್ಕೆ ಒಪ್ಪಿಸುವಂತೆ ಪ್ರಯತ್ನಿಸುವುದಕ್ಕೆ ಹೆಚ್ಚು ಆದ್ಯತೆ ಬರುತ್ತದೆ.

**ತೀರ್ಪಿನ ವೈರುಧ್ಯಗಳು**

ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ಪೀಠ ಸರಕಾರೀ ನೌಕರರ ಮುಷ್ಕರದ ಹಕ್ಕಿನ ವಿಚಾರದಲ್ಲಿ ಸರ್ವಸಾಮಾನ್ಯವಾಗಿ ಎಲ್ಲ ಮುಷ್ಕರಗಳಿಗೂ ಸಂಬಂಧಪಟ್ಟಂತೆ ವ್ಯಕ್ತಗೊಳಿಸುವ ಅಭಿಪ್ರಾಯಗಳು ಈ ಹಿಂದೆ ಅದೇ ನ್ಯಾಯಾಲಯದ ಪೀಠಗಳು ಪ್ರಕಟಿಸಿರುವ ಅಭಿಪ್ರಾಯಗಳಿಗೆ ವ್ಯತಿರಿಕ್ತವಾಗಿವೆ. ಅಲ್ಲದೆ ಸರ್ವೋಚ್ಚ ನ್ಯಾಯಾಲಯವು ಬೇರೆ ಬೇರೆ ಪೀಠಗಳು ತೀರ್ಪನ್ನು ನೀಡುವಾಗ ಅನುಸರಿಸಬೇಕಾದ ಸೂತ್ರಗಳನ್ನೂ ಅದು ಉಲ್ಲಂಘಿಸುತ್ತದೆ. ತಮಿಳುನಾಡು ಸರಕಾರ ಮುಷ್ಕರ ಹೂಡಿದ್ದ ಎಲ್ಲ ಸರಕಾರಿ

ನೌಕರರನ್ನೂ, ಸುಮಾರು ೧.೭ ಲಕ್ಷ ನೌಕರರನ್ನು ಕೆಲಸದಿಂದ ತೆಗೆದುಹಾಕಿದ್ದುದರಿಂದ, ಅವರ ಪುನರ್ನೇಮಕದ ಪ್ರಶ್ನೆ ನ್ಯಾಯಾಲಯದ ಮುಂದೆ ಇತ್ತು. ಅವರ ಪುನರ್ನೇಮಕಕ್ಕೆ ನ್ಯಾಯಾಲಯದ ಸೂಚನೆಯನ್ನು ತಮಿಳುನಾಡು ಸರಕಾರ ಅಂಗೀಕರಿಸಿತು. ಬೇರಾವ ಪ್ರಶ್ನೆಯೂ ನ್ಯಾಯಾಲಯದ ಮುಂದೆ ಇರಲಿಲ್ಲ. ವಿವಾದದಲ್ಲಿ ಸಂಬಂಧಪಟ್ಟಿದ್ದ ಪಕ್ಷಗಳವರೂ ಬೇರೆ ವಿಷಯಗಳನ್ನು ಪ್ರಸ್ತಾಪಿಸಿರಲಿಲ್ಲ. ಆದರೂ ನ್ಯಾಯಾಲಯದ ಪೀಠವು ಮುಷ್ಕರದ ಬಗ್ಗೆ ಆಕ್ರೋಶವನ್ನು ವ್ಯಕ್ತಗೊಳಿಸಿತು. ಮುಷ್ಕರಗಳನ್ನು ಅನೈತಿಕ, ಅಕ್ರಮ ಎಂದು ಸಾರಿತು. ಸಂವಿಧಾನಬಾಹಿರ ಎಂದು ಹೇಳಿತು. ಹಾಗಿದ್ದರೆ ಮುಷ್ಕರ ಹೂಡಿದ್ದ ಸರಕಾರಿ ನೌಕರರ ಪುನರ್ನೇಮಕಕ್ಕೆ ಸೂಚನೆ ಅಸಂಗತವಲ್ಲವೆ? ಮುಷ್ಕರದ ಬಗ್ಗೆ ಪ್ರತಿಕ್ರಿಯೆ ವ್ಯಕ್ತಗೊಳಿಸಿದ ನ್ಯಾಯಮೂರ್ತಿಗಳು ಸಾಮೂಹಿಕವಾಗಿ ನೌಕರರನ್ನು ಕೆಲಸದಿಂದ ಕಿತ್ತುಹಾಕಿದ ತಮಿಳುನಾಡು ಸರಕಾರದ ಕ್ರಮವನ್ನಾಗಲೀ ತಮಿಳುನಾಡು ಅಗತ್ಯ ಸೇವಾ ನಿರ್ವಹಣಾ ಕಾಯಿದೆ (೨೦೦೨)ಯ ಸಿಂಧುತ್ವವನ್ನು ಪರಿಶೀಲಿಸುವ ಗೊಡವೆಗೆ ಹೋಗಲಿಲ್ಲವೇಕೆ ? ಈ ವೈರುಧ್ಯಗಳು ನ್ಯಾಯಾಲಯದ ತೀರ್ಪಿನಲ್ಲಿ ಎದ್ದುಕಾಣುತ್ತವೆ.

ನಮ್ಮ ಸಂವಿಧಾನದಲ್ಲಿ ವಿಶಿಷ್ಟವಾಗಿ ಮುಷ್ಕರದ ಹಕ್ಕು ನಮೂದಾಗಿಲ್ಲ. ಆದರೆ, ಅದು ಸಂವಿಧಾನದ ೧೯(೧)ಎ ಪ್ರಕಾರ ನೀಡಲಾಗಿರುವ ಮೂಲಭೂತ ಹಕ್ಕುಗಳ ವ್ಯಾಪ್ತಿಯಲ್ಲೇ ಅಡಕಗೊಂಡಿದೆ ಎನ್ನುವ ಅಭಿಪ್ರಾಯ ಬಲವಾಗಿದೆ. ನ್ಯಾಯಾಲಯಗಳೂ ಕೂಡ ಈ ಸಂಬಂಧದಲ್ಲಿ ಬೇರೆ ಬೇರೆ ಬಗೆಯ ವ್ಯಾಖ್ಯಾನಗಳನ್ನು ನೀಡಿವೆ. ೧೯೬೦ರಿಂದ ಹಲವು ಮೊಕದ್ದಮೆಗಳಲ್ಲಿ ಸರ್ವೋಚ್ಚ ನ್ಯಾಯಾಲಯವು ಈ ವಿಚಾರವನ್ನು ಪ್ರಸ್ತಾಪ ಮಾಡಿದೆ. ಮುಷ್ಕರದ ಹಕ್ಕನ್ನು ಸಂವಿಧಾನದಲ್ಲಿ ನೀಡಲಾಗಿರುವ ಅಭಿವ್ಯಕ್ತಿ ಸ್ವಾತಂತ್ರ್ಯದ ಭಾಗವಾಗಿ ಪರಿಗಣಿಸಬಹುದೇ ಎಂಬ ವಿಚಾರದಲ್ಲಿ ಇದುವರೆಗೆ ಖಚಿತವಾದ ನಿರ್ಧಾರವಿಲ್ಲ. ಸರ್ವೋಚ್ಚ ನ್ಯಾಯಾಲಯವೂ ಸೇರಿದಂತೆ ಯಾವ ನ್ಯಾಯಾಲಯವೂ ಕೂಡ ಸಾರಾಸಗಟಾಗಿ ಕಾರ್ಮಿಕರ ಮುಷ್ಕರದ ಹಕ್ಕನ್ನು ನಿರಾಕರಿಸಿರಲಿಲ್ಲ. ಮುಷ್ಕರದ ಹಕ್ಕು ಕುರಿತು ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳ ಪೈಕಿ ಒಂದನ್ನು ಮಾತ್ರ ಇಲ್ಲಿ ಗಮನಕ್ಕೆ ತರುವುದು ಅಗತ್ಯ. ಅದು ೧೯೭೯ರಲ್ಲಿ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿ ಎ. ಎಂ. ಅಹಮದೀಯರವರ ನೇತೃತ್ವದಲ್ಲಿ ರಚನೆಯಾಗಿದ್ದ ಮೂವರು ನ್ಯಾಯಮೂರ್ತಿಗಳ ಪೀಠ ಬಿ. ಆರ್. ಸಿಂಗ್ ಮೊಕದ್ದಮೆಗೆ ಸಂಬಂಧಿಸಿದಂತೆ ನೀಡಿದ ತೀರ್ಪು. ತಮಿಳುನಾಡು ಸರಕಾರಿ ನೌಕರರ ವಿವಾದದಂತೆಯೇ ಈ ಪ್ರಕರಣದಲ್ಲಿಯೂ ಹೆಚ್ಚು ಕಡಿಮೆ ವಿವಾದ ಒಂದೇ ರೀತಿಯದು. ಅದು ಟ್ರೇಡ್ ಅಥಾರಿಟಿ ಆಫ್ ಇಂಡಿಯಾ ಮುಷ್ಕರ ಹೂಡಿದ್ದ ನೌಕರರನ್ನು ವಜಾ ಮಾಡಿದ್ದುದಕ್ಕೆ ಸಂಬಂಧಿಸಿದ್ದು. ಪೀಠದ ತೀರ್ಪು ನೀಡಿದ ಮುಖ್ಯ ನ್ಯಾಯಮೂರ್ತಿ ಅಹಮದಿಯವರು ನೌಕರರ ಮುಷ್ಕರ ಹಕ್ಕು ಕುರಿತು ಹೇಳಿರುವ ಭಾಗ ಹೀಗಿದೆ : ''ಸಂವಿಧಾನದ ೧೯(೧)ಸಿ ಪ್ರಕಾರ ಸಂಘ ಸಂಸ್ಥೆಗಳು ಅಥವಾ ಯೂನಿಯನ್‌ಗಳನ್ನು ಸ್ಥಾಪಿಸಿಕೊಳ್ಳುವುದು ಮೂಲಭೂತ ಹಕ್ಕು. ಟ್ರೇಡ್ ಯೂನಿಯನ್ ಕಾಯಿದೆಯ ಪರಿಚ್ಛೇದ ೮ರ ಅನುಸಾರವಾಗಿ ಎಲ್ಲ ಅಗತ್ಯತೆಗಳೂ ಪೂರೈಕೆಯಾಗಿದ್ದರೆ ಟ್ರೇಡ್ ಯೂನಿಯನ್ ನೋಂದಣಿಗೆ ಅರ್ಹವಾಗಿರುತ್ತದೆ. ಸಂಘಗಳು ಮತ್ತು ಯೂನಿಯನ್‌ಗಳನ್ನು ಸ್ಥಾಪಿಸಿಕೊಳ್ಳುವ ಹಕ್ಕು ಮತ್ತು ಅವುಗಳ ನೋಂದಣಿಗೆ ಅವಕಾಶ ನೀಡಿರುವ ಕಾಯಿದೆಯು ಸಹಜವಾಗಿಯೇ ಟ್ರೇಡ್ ಯೂನಿಯನ್‌ಗಳಿಗೂ ಕೆಲವು ಹಕ್ಕುಗಳನ್ನು ಕೊಟ್ಟಿದೆ. ಯೂನಿಯನ್ನುಗಳನ್ನು ಸ್ಥಾಪಿಸಿಕೊಳ್ಳುವ ಅವಶ್ಯಕತೆಯಿರುವುದು ನಿರ್ದಿಷ್ಟವಾಗಿ ಕಾರ್ಮಿಕರ ಬೇಡಿಕೆಗಳು ಮತ್ತು ಅಹವಾಲುಗಳನ್ನು ಪ್ರತಿನಿಧಿಸುವುದಕ್ಕಾಗಿಯೇ. ಟ್ರೇಡ್ ಯೂನಿಯನ್ ನಾಯಕರು ದುಡಿಮೆಗಾರರ ವಕ್ತಾರರಾಗಿರುತ್ತಾರೆ. ಟ್ರೇಡ್ ಯೂನಿಯನ್ನಿನ ಶಕ್ತಿ ಅದರ ಸದಸ್ಯತ್ವವನ್ನು ಅವಲಂಬಿಸಿರುತ್ತದೆ. ಆದ್ದರಿಂದಾಗಿ ಸಾಕಷ್ಟು ಸದಸ್ಯರ ಬಲ ಹೊಂದಿರುವ ಟ್ರೇಡ್ ಯೂನಿಯನ್‌ಗಳು ಕೆಲಸಗಾರರ ಬೇಡಿಕೆಗಳಿಗಾಗಿ ಚೌಕಾಶಿ ನಡೆಸಲು ಹೆಚ್ಚು ಸಮರ್ಥವಾಗಿರುತ್ತವೆ. ಈ ಶಕ್ತಿಯನ್ನು ಪ್ರದರ್ಶಿಸಲು ಅವಕಾಶವಿಲ್ಲದೆ ಹೋದಲ್ಲಿ ಅದರ ಪರಿಣಾಮಕತೆ ಕಡಿಮೆಯಾಗುತ್ತದೆ.

''ವಿಶಿಷ್ಟವಾದ ಸಂದರ್ಭದಲ್ಲಿ ಮುಷ್ಕರವು ಪ್ರತಿಭಟನೆಯ ಒಂದು ರೂಪ ಅಷ್ಟೆ ವಿಭಿನ್ನ ರೀತಿಯ ಪ್ರತಿಭಟನೆಗಳಿರುತ್ತವೆ. ಉದಾಹರಣೆಗೆ, ಕೆಲಸವನ್ನು ನಿಧಾನಗೊಳಿಸುವುದು, ಕೆಲಸ ಮಾಡದೆ ಸ್ಥಳದಲ್ಲೇ ಸುಮ್ಮನೆ ಕೂಡುವುದು, ನಿಯಮಕ್ಕನುಸಾರವಾಗಿ ಕೆಲಸ ಮಾಡುವುದು, ಗೈರು ಹಾಜರಾಗುವುದು ಇತ್ಯಾದಿ. ಇದರಲ್ಲಿ ತಮ್ಮ ಹಕ್ಕುಗಳಿಗಾಗಿ ಕಾರ್ಮಿಕರು ಮುಷ್ಕರ ನಡೆಸುವುದು ಅಂಥ ಒಂದು ಪ್ರತಿಭಟನೆಯಾಗಿರುತ್ತದೆ. ಆದ್ದರಿಂದಾಗಿ, ಪ್ರತಿಭಟನೆಯ ಹಕ್ಕು ಮುಷ್ಕರ ನಡೆಸುವ ಹಕ್ಕು ಕಾರ್ಮಿಕರ ಬತ್ತಳಿಕೆಯಲ್ಲಿ ಬಹುಮುಖ್ಯವಾದ ಅಸ್ತ್ರವಾಗಿರುತ್ತದೆ. ಹೆಚ್ಚು ಕಡಿಮೆ ಎಲ್ಲ ಪ್ರಜಾಪ್ರಭುತ್ವ ರಾಷ್ಟ್ರಗಳೂ ಇದನ್ನು ಮಾನ್ಯ ಮಾಡಿವೆ. ಮೂಲಭೂತ ಹಕ್ಕುಗಳ ಮಟ್ಟಕ್ಕೆ ಅದನ್ನು ಏರಿಸಿರದಿದ್ದರೂ, ಕಾರ್ಮಿಕರು ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಒಂದು ವಿಧಾನವಾಗಿ ಅದು ಮಾನ್ಯತೆ ಪಡೆದಿದೆ. ನಮ್ಮ ಕೈಗಾರಿಕಾ ನ್ಯಾಯಶಾಸ್ತ್ರದಲ್ಲಿ ಮುಷ್ಕರದ ಹಕ್ಕು ಅನಿರ್ಬಂಧವಾದದ್ದೇನಲ್ಲ ಅದರ ಮೇಲೆ ನಿರ್ಬಂಧಗಳನ್ನೂ ವಿಧಿಸಲಾಗಿದೆ.''

ಮೂವರು ನ್ಯಾಯಮೂರ್ತಿಗಳ ಪೀಠದ ಈ ಅಭಿಪ್ರಾಯ ಇಂದಿಗೂ ಪ್ರಸ್ತುತ ಹಾಗೂ ಎಲ್ಲ ನ್ಯಾಯಪೀಠಗಳಿಗೂ, ನ್ಯಾಯಾಲಯಗಳಿಗೂ ಅನ್ವಯ. ಈ ಅಭಿಪ್ರಾಯವನ್ನು ಪುನರ್ ಪರಿಶೀಲಿಸುವ ಹಕ್ಕು ಇರುವುದು ಅದಕ್ಕಿಂತ ಇನ್ನೂ ವಿಸ್ತಾರವಾದ ನ್ಯಾಯಪೀಠಕ್ಕೆ ಮಾತ್ರ. ಆದ್ದರಿಂದಾಗಿ ಇಬ್ಬರು ನ್ಯಾಯಾಧೀಶರ ಪೀಠ ವ್ಯಕ್ತಗೊಳಿಸಿರುವ ವಿಚಾರಗಳು ಅಪ್ರಸ್ತುತ. ಮುಷ್ಕರ ನಡೆಸುವ ಹಕ್ಕು ಸಂವಿಧಾನದಲ್ಲಾಗಲೀ ಕಾಯಿದೆಯಲ್ಲಾಗಲೀ ಇಲ್ಲ ಎಂದು ಹೇಳಿರುವ ನ್ಯಾಯಮೂರ್ತಿಗಳು ೧೯೪೭ರ ಕೈಗಾರಿಕಾ ವಿವಾದ ಕಾಯಿದೆಯನ್ನು ಕಡೆಗಣಿಸಿರುವುದು ಆಶ್ಚರ್ಯ. ಈ ಕಾಯಿದೆಯು ಮುಷ್ಕರದ ಹಕ್ಕನ್ನು ಮಾನ್ಯ ಮಾಡಿದೆ. ಸಂಧಾನ ಅಥವಾ ಪಂಚಾಯ್ತಿಕೆ ನಡೆಯುತ್ತಿರುವಾಗ ಕಾರ್ಮಿಕರು ಮುಷ್ಕರ ಹೂಡಿದರೆ ಈ ಕಾಯಿದೆಯ ಪ್ರಕಾರ ಅಕ್ರಮವಾಗುತ್ತದೆ. ಕೈಗಾರಿಕ ವಿವಾದ ಕಾಯಿದೆಯ ೨೨ನೇ ಪರಿಚ್ಛೇದವು ಸಾರ್ವಜನಿಕ ಸೇವಾ ಸೌಲಭ್ಯಗಳಲ್ಲೂ ಮುಷ್ಕರಕ್ಕೆ ಅವಕಾಶ ನೀಡಿದೆ. ಸಂಬಂಧಪಟ್ಟ ಕಾರ್ಮಿಕರು ಮುಷ್ಕರ ಹೂಡುವುದಕ್ಕೆ ಮುನ್ನ ನೋಟೀಸು ಕೊಡಬೇಕೆಂದು ಹೇಳಿದೆ. ಇವೆಲ್ಲವನ್ನೂ ಗಮನಿಸಿದಾಗ ಮುಷ್ಕರದ ಹಕ್ಕನ್ನು ಕುರಿತ ಈಚಿನ ಸರ್ವೋಚ್ಚ ನ್ಯಾಯಾಲಯದ ತೀರ್ಪು ಅಪ್ರಸ್ತುತ, ಅಸಮರ್ಥನೀಯ. ಅದರಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಇತರ ಜನ ವಿಭಾಗಗಳನ್ನು ಕಾರ್ಮಿಕ ವರ್ಗದ ವಿರುದ್ಧ ಎತ್ತಿಕಟ್ಟಿ ಸಮಾಜದಲ್ಲಿ ಒಡಕನ್ನುಂಟುಮಾಡುವ ಪ್ರವೃತ್ತಿಗೆ ಎಡೆಕೊಡುತ್ತದೆ.

**ವಕೀಲರ ಮುಷ್ಕರ**

ಸಮಾಜದ ಯಾವುದೇ ದುಡಿಯುವ ಜನ ವಿಭಾಗಕ್ಕೆ ಮುಷ್ಕರದ ಹಕ್ಕನ್ನು ನಿಷೇಧಿಸುವುದು ಗಂಭೀರವಾದ ಪರಿಣಾಮಗಳನ್ನುಂಟುಮಾಡುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ಈ ಸಂದರ್ಭದಲ್ಲಿ ವಕೀಲರ ಮುಷ್ಕರ ಕುರಿತು ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪನ್ನು ಗಮನಿಸೋಣ. ನ್ಯಾಯಮೂರ್ತಿ ಷಾರವರೂ ಈ ಪೀಠದಲ್ಲಿ ಉಪಸ್ಥಿತರಿದ್ದರು. ಆಗಲೂ ಅವರು ಮುಷ್ಕರದ ವಿಷಯದಲ್ಲಿ ನಕಾರಾತ್ಮಕ ಧೋರಣೆಯನ್ನು ತಳೆದಿದ್ದರು. ಅವರು ''ಇಂದಿನ ಪರಿಸ್ಥಿತಿಯಲ್ಲಿ ನ್ಯಾಯವಾದ್ದೋ, ಅನ್ಯಾಯವಾದ್ದೋ, ಯಾವುದೇ ಉದ್ದೇಶಕ್ಕಾಗಿ ಮುಷ್ಕರ ನಡೆಸುವುದು ಸಮರ್ಥನೀಯವಲ್ಲ. ಯಾವುದೇ ಕ್ಷೇತ್ರದಲ್ಲಾಗಲೀ ಮುಷ್ಕರ ಜರುಗಿದರೆ, ಅದು ಒಳ್ಳೆಯದಕ್ಕಿಂತ ಹೆಚ್ಚಾಗಿ ಹಾನಿಯನ್ನೇ ಉಂಟುಮಾಡುತ್ತದೆ. ಸಮಾಜಕ್ಕೆ ಸಾರ್ವಜನಿಕರಿಗೆ ತೊಂದರೆಯನ್ನು ಉಂಟುಮಾಡುತ್ತದೆ'' ಎಂದು ಹೇಳಿದ್ದಾರೆ. ಆದರಿಂದ ಅವರ ನಿಲುವಿನಲ್ಲಿ ಹೊಸದೇನಿಲ್ಲ. ವಕೀಲರು ಮುಷ್ಕರ ಹೂಡಲು ಅಥವಾ ಕೋರ್ಟಿಗೆ ಹಾಜರಾಗಬೇಡಿ ಎಂದು ಕರೆ ನೀಡಲು, ಸಾಂಕೇತಿಕ ಮುಷ್ಕರ ನಡೆಸಲು ಹಕ್ಕು ಇಲ್ಲ ಎಂದು ತೀರ್ಪು ನೀಡಿರುವ ಸರ್ವೋಚ್ಚ ನ್ಯಾಯಾಲಯವು, ಅವಶ್ಯಕತೆ ಇದ್ದಾಗ ಪ್ರತಿಭಟನೆ ತೋರಬೇಕಾಗಿದ್ದರೆ, ಅದನ್ನು ಯಾವ ರೀತಿ ಮಾಡಬಹುದೆಂದು ಪಟ್ಟಿ ಮಾಡಿದೆ. ಒಂದು ಹೆಜ್ಜೆ ಮುಂದೆ ಹೋಗಿ ಮುಷ್ಕರ ಹೂಡಲೂ ಅವಕಾಶ ನೀಡಿದೆ : ವಿಶಿಷ್ಟವಾದ ಸಂದರ್ಭಗಳಲ್ಲಿ, ನ್ಯಾಯಾಲಯ ಅಥವಾ ವಕೀಲರ ಹಕ್ಕುಗಳಿಗೆ, ಗೌರವ ಘನತೆಗಳಿಗೆ, ಇಲ್ಲವೆ ಸ್ವಾತಂತ್ರ್ಯಕ್ಕೆ ಧಕ್ಕೆಯಾದಾಗ, ಆತಂಕ ಬಂದಾಗ ವಕೀಲರ ಸಂಘದ ಪದಾಧಿಕಾರಿಗಳೂ ನ್ಯಾಯಮೂರ್ತಿಗಳ ಗಮನಕ್ಕೆ ತಂದು, ಸಮಾಲೋಚಿಸಿ ನಂತರ ಮುಷ್ಕರ ನಡೆಸಬಹುದು ಎಂದು ಅಭಿಪ್ರಾಯಪಟ್ಟಿದೆ. ಇದು ಒಂದು ರೀತಿಯಲ್ಲಿ ತಾರತಮ್ಯವಲ್ಲವೆ! ನ್ಯಾಯಾಲಯ ಏನೇ ಹೇಳಲಿ ಮುಷ್ಕರಗಳು ನಿಲ್ಲದು. ಉತ್ತರ ಕರ್ನಾಟಕದ ಭಾಗದಲ್ಲಿ ಹೈಕೋರ್ಟ್ ಪೀಠದ ಸ್ಥಾಪನೆಗಾಗಿ ಇತ್ತೀಚೆಗೆ ವಕೀಲರು ನಡೆಸಿದ ಮುಷ್ಕರ ಅದಕ್ಕೆ ನಿದರ್ಶನ. ರಾಜ್ಯದ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ಮುಷ್ಕರ ಹೂಡಿದ್ದ ವಕೀಲರ ಪ್ರತಿನಿಧಿಗಳ ಜೊತೆ ಮಾತುಕತೆ ನಡೆಸಬೇಕಾಯಿತು.

**ವರ್ಗ ತಾರತಮ್ಯ**

ಮುಷ್ಕರದ ಹಕ್ಕು ಕುರಿತು ನ್ಯಾಯಾಲಯಗಳು ನೀಡುವ ತೀರ್ಪು ಏನೇ ಇರಲಿ, ಸಂವಿಧಾನದಲ್ಲಿ ಸ್ಪಷ್ಟವಾಗಿ ದುಡಿಯುವ ಜನರ ಮುಷ್ಕರ ಹಕ್ಕು ಹಾಗೂ ಸಮಷ್ಟಿ ಸಂಧಾನ ನಡೆಸುವ ಹಕ್ಕು ಮಾನ್ಯವಾಗುವವರೆಗೆ ವಿವಾದ ನಡೆಯುತ್ತಲೇ ಇರುತ್ತದೆ, ಮುಷ್ಕರಗಳೂ ನಡೆಯುತ್ತಿರುತ್ತವೆ. ಸರಕಾರವಾಗಲಿ, ನ್ಯಾಯಾಲಯಗಳಾಗಲಿ, ಮಾಲಿಕರಾಗಲಿ ಕಾರ್ಮಿಕ ವರ್ಗದ ಸ್ಥಿತಿಗತಿಗಳನ್ನು ಸುಧಾರಿಸುವ ಕಡೆಗೆ, ಅವರ ಬೇಡಿಕೆಗಳ ಕಡೆಗೆ ಗಮನಹರಿಸಿ ಸಮರ್ಪಕವಾದ ರೀತಿಯಲ್ಲಿ ಪ್ರತಿಕ್ರಿಯಿಸಿ, ನ್ಯಾಯ ಸಮ್ಮತವಾಗಿ ಸಾಮಾಜಿಕ ನ್ಯಾಯ

ದೊರಕಿಸಿಕೊಡುವುದಕ್ಕೆ ಆಸ್ಥೆ ವಹಿಸಿಲ್ಲ. ಕಾರ್ಮಿಕರು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಹೋರಾಟ ಮಾರ್ಗ ಹಿಡಿಯಬೇಕಾಗಿರುವುದು ಅನಿವಾರ್ಯವಾಗಿದೆ. ಕಾರ್ಮಿಕ ವಿವಾದಗಳಲ್ಲಿ ಸರಕಾರದಿಂದಾಗಲೀ, ನ್ಯಾಯಾಲಯಗಳಿಂದಾಗಲೀ ಕಾರ್ಮಿಕರಿಗೆ ಅನುಕೂಲವಾಗುವಂಥ ತೀರ್ಪು ದೊರಕಿರುವುದು ಕಡಿಮೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿರುವ ವರ್ಗ ಸಂಬಂಧಗಳೂ ಇದಕ್ಕೆ ಕಾರಣವಾಗಿರುತ್ತವೆ. ನ್ಯಾಯ ನಿರ್ಣಯ ಮಾಡುವ ನ್ಯಾಯಾಲಯಗಳು ಕಾನೂನಿನ ವ್ಯಾಪ್ತಿಯೊಳಗೇ ವ್ಯವಹರಿಸಿರುವುದನ್ನು ನಾವು ಕಾಣುತ್ತೇವೆಯೇ ಹೊರತು ಬಹುಜನರ ಹಿತದೃಷ್ಟಿಯಿಂದ, ಸಾಮಾಜಿಕ ನ್ಯಾಯದ ದೃಷ್ಟಿಯಿಂದ, ತೀರ್ಪುಗಳಾಗುವುದು ಅಪರೂಪವೇ. ಕಾರ್ಮಿಕ ವಿವಾದಗಳ ಮಟ್ಟಿಗೆ ಅನೇಕ ಸಂದರ್ಭಗಳಲ್ಲಿ ನ್ಯಾಯಾಲಯಗಳ ಒಲವು ಮಾಲಿಕರ ಕಡೆಗೇ ಹರಿಯುವುದನ್ನು ನಾವು ಕಾಣಬಹುದು. ಈ ವಿಷಯದಲ್ಲಿ ಉಚ್ಚ ನ್ಯಾಯಾಲಯಗಳ ಮೊರೆ ಹೋಗಿರುವ ಪ್ರಕರಣಗಳು ಕಮ್ಮಿ ಏನಿಲ್ಲ. ಸುಪ್ತವಾಗಿರುವ ವರ್ಗ ಪ್ರಜ್ಞೆಯಿಂದ ತಾರತಮ್ಯ ಧೋರಣೆ ಪ್ರಕಟವಾಗುವುದು ಅಸಹಜವೇನಲ್ಲ. ಪ್ರೊ॥ ಜೆ. ಎ. ಜಿ. ಗ್ರಿಫಿತ್ ಎಂಬಾತ ತನ್ನ ''ದಿ ಪಾಲಿಟಿಕ್ಸ್ ಆಫ್ ಜ್ಯುಡಿಷಿಯರಿ'' ಎಂಬ ಪುಸ್ತಕದಲ್ಲಿ ನ್ಯಾಯಾಧೀಶರುಗಳೂ ಕೂಡ ಮನುಷ್ಯರೇ ಆಗಿರುವುದರಿಂದ ವರ್ಗಪ್ರಜ್ಞೆಯಿಂದ ದೂರವಾಗಿರಲಾರರು ಎಂದಿದ್ದಾನೆ. ಬ್ರಿಟನ್ನಿನ ಮಾಜಿ ಪ್ರಧಾನಿ ಬಲಪಂಥೀಯ ಸಂಪ್ರದಾಯವಾದಿ ವಿನ್‌ಸ್ಟನ್ ಚರ್ಚಿಲ್ ನ್ಯಾಯಾಲಯಗಳ ಬಗ್ಗೆ ಹೀಗೆ ಹೇಳಿದ್ದಾನೆ : ''ನ್ಯಾಯಾಲಯಗಳು ಸಮುದಾಯದ ಎಲ್ಲ ವರ್ಗಗಳ ಗೌರವ, ಮನ್ನಣೆಗಳಿಗೆ ಪಾತ್ರವಾಗಿವೆ ಎನ್ನುವುದು ನಿಜ. ಸಿವಿಲ್ ಮತ್ತು ಕ್ರಿಮಿನಲ್ ಖಟ್ಲೆಗಳ ಮಟ್ಟಿಗೆ ಅವು ನಿಷ್ಪಕ್ಷಪಾತಿ. ಆದರೆ ವರ್ಗ ಸಂಬಂಧವಾದ ವಿವಾದಗಳಿರುವಾಗ ನ್ಯಾಯಾಲಯಗಳ ಮೇಲೆ ಅದೇ ವಿಶ್ವಾಸವಿರುತ್ತದೆ ಎಂದು ಹೇಳುವಂತಿಲ್ಲ.''

**ಸಾಮಾಜಿಕ ನ್ಯಾಯ**

ಇಂದಿನ ಪರಿಸ್ಥಿತಿಯಲ್ಲಿ, ಅದರಲ್ಲೂ ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳದ ಹರಿವಿಗೆ ಮುಕ್ತ ಅವಕಾಶಗಳ ಹಿನ್ನೆಲೆಯಲ್ಲಿ ಮುಷ್ಕರಗಳ ವಿಚಾರದಲ್ಲಿ ಕಾರ್ಮಿಕ ವರ್ಗದ ಹೋರಾಟದ ವಿಷಯದಲ್ಲಿ ಸಹಾನುಭೂತಿಯ ನಿಲುವನ್ನು ನಿರೀಕ್ಷಿಸುವುದು ತಪ್ಪಾಗುತ್ತದೆ. ನಮ್ಮ ಸಂವಿಧಾನದ ನಿರ್ದೇಶಕ ಸೂತ್ರಗಳಿಗೆ ಬದ್ಧವಾಗಿದ್ದುಕೊಂಡು ಸಾಮಾಜಿಕ ನ್ಯಾಯ ಎಲ್ಲಾ ಜನ ವಿಭಾಗಗಳಿಗೂ ಲಭ್ಯವಾಗುವಂತೆ ಮಾಡಬೇಕಾದ್ದು ಜರೂರು ಅಗತ್ಯ. ನ್ಯಾಯಾಲಯಗಳು, ಪ್ರಜಾಪ್ರಭುತ್ವ ಸಂಸ್ಥೆಗಳು ಈ ಕಾರ್ಯವನ್ನು ನಿರ್ವಹಿಸಬೇಕಾಗಿದೆ. ಸರ್ವಾಧಿಕಾರಿ ಆಡಳಿತಗಳನ್ನು ಹೊರತುಪಡಿಸಿ ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಮುಷ್ಕರದ ಹಕ್ಕು ಮಾನ್ಯತೆ ಪಡೆದಿದೆ. ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ದುಡಿಯುವ ಜನರ ಮುಷ್ಕರ ಹಕ್ಕನ್ನು ಅಂಗೀಕರಿಸಿದೆ. ಈ ಸಂಸ್ಥೆ ಅನುಮೋದಿಸಿರುವ ಎರಡು ನಿರ್ಣಯಗಳಲ್ಲಿ (೮೭ ಮತ್ತು ೯೮) ದುಡಿಯುವ ಜನರ ಸಮಷ್ಟಿ ಸಂಧಾನದ ಹಕ್ಕು ಮತ್ತು ಸಂಘಟನಾ ಸ್ವಾತಂತ್ರ್ಯದ ಹಕ್ಕನ್ನೂ ಎತ್ತಿ ಹಿಡಿದಿದೆ. ಈ ನಿರ್ಣಯಗಳನ್ನು ಎಲ್ಲ ದೇಶಗಳೂ ಅನುಮೋದಿಸಿವೆ. ಭಾರತ ಸರಕಾರ ಇವಕ್ಕೆ ಇನ್ನೂ ಅಂಗೀಕಾರ ನೀಡಿಲ್ಲ. ಮುಂದುವರಿದ ಬಂಡವಾಳಶಾಹಿ ದೇಶಗಳಾದ ಬ್ರಿಟನ್ ಹಾಗೂ ಇತರ ಯೂರೋಪಿನ ರಾಷ್ಟ್ರಗಳು ಈ ನಿರ್ಣಯಗಳನ್ನು ಅಂಗೀಕರಿಸಿರುವುದಲ್ಲದೆ ಸರಕಾರೀ ನೌಕರರಿಗೂ ಮುಷ್ಕರ ನಡೆಸುವ ಹಕ್ಕನ್ನು ನೀಡಿವೆ. ಭಾರತ ಸರಕಾರ ಆದಷ್ಟೂ ಶೀಘ್ರವಾಗಿ ಅಂತರರಾಷ್ಟ್ರೀಯ ಸಂಸ್ಥೆಯ ಈ ನಿರ್ಣಯಗಳನ್ನು ಅಂಗೀಕರಿಸಿ, ಸಂವಿಧಾನಕ್ಕೆ ಸೂಕ್ತವಾದ ತಿದ್ದುಪಡಿ ತಂದು ಅವನ್ನು ಅಳವಡಿಸಬೇಕು. ಈ ಬಗ್ಗೆ ಸರಕಾರದ ಮೇಲೆ ಒತ್ತಾಯ ತರಲು ಟ್ರೇಡ್ ಯೂನಿಯನ್‌ಗಳು ಒಂದುಗೂಡಿ ಕ್ರಮ ಕೈಗೊಳ್ಳುವುದು ಆಗಬೇಕಾಗಿರುವ ಜರೂರು ಕೆಲಸ.

**ಬ್ರಿಟಿಷರ ಕಾಲದಲ್ಲಿ**

ಭಾರತದಲ್ಲಿ ಬ್ರಿಟಿಷರ ಆಡಳಿತ ಕಾಲದಲ್ಲಿ ಇಪ್ಪತ್ತನೇ ಶತಮಾನದ ಮೊದಲೆರಡು ದಶಕಗಳವರೆಗೆ ಮುಷ್ಕರಗಳ ಮೇಲೆ ಯಾವ ನಿರ್ಬಂಧವೂ ಇರಲಿಲ್ಲ. ೧೯೨೦-೨೧ರಲ್ಲಿ ಬ್ರಿಟಿಷ್ ಸರಕಾರ ಮುಷ್ಕರಗಳನ್ನು ನಿಷೇಧಿಸಿತು. ಘುಷ್ಕರ ಹೋರಾಟಗಳು ಸರಕಾರವನ್ನು ಬುಡಮೇಲು ಮಾಡುವ ಒಳಸಂಚು ಎಂದು ಸಾರಿತು. ತಮ್ಮ ಜೀವನಸ್ಥಿತಿ ಉತ್ತಮಗೊಳಿಸಿಕೊಳ್ಳಲು ಕಾರ್ಮಿಕ ವರ್ಗ ನಡೆಸುತ್ತಿದ್ದ ಹೋರಾಟ ಮತ್ತು ಸ್ವಾತಂತ್ರ್ಯದ ಚಳುವಳಿಯಲ್ಲಿ ಅದರ ಸಕ್ರಿಯ ಭಾಗವಹಿಸುವಿಕೆ ಬ್ರಿಟಿಷ್ ಆಡಳಿತಕ್ಕೆ ಇರುಸು ಮುರುಸಾಗಿತ್ತು. ಕಾರ್ಖಾನೆಗಳ ಮಾಲಿಕರುಗಳಿಗೆ ಆತಂಕವಾಗಿತ್ತು. ಬ್ರಿಟಿಷ್ ಸರಕಾರದ ಈ ಮುಷ್ಕರ ನಿಷೇಧ ಕ್ರಮಕ್ಕೆ ಲಂಕಾಷೈರ್‌ನ ಜವುಳಿ ಉದ್ಯಮಿಗಳ ವಿರೋಧವಿತ್ತು. ಆದರೆ ಅದು ಬೇರೆ ಕಾರಣಕ್ಕಾಗಿ. ಅವು ಭಾರತದ ಜವುಳಿ ಉದ್ಯಮದ ಪೈಪೋಟಿ ಎದುರಿಸಬೇಕಾಗಿತ್ತು. ಅದೇನೇ ಇರಲಿ, ಬ್ರಿಟಿಷ್ ಸರಕಾರ ೧೯೨೬ರಲ್ಲಿ ಇಂಡಿಯನ್ ಟ್ರೇಡ್ ಯೂನಿಯನ್ ಕಾಯಿದೆ ಎಂಬುದನ್ನು ಮತ್ತು ೧೯೩೬ರಲ್ಲಿ ವೇತನ ನೀಡಿಕೆ ಕಾಯಿದೆಯನ್ನು ಜಾರಿಗೆ ತಂದು ಮುಷ್ಕರದ ಹಕ್ಕನ್ನು ಪುನರುತ್ಥಾಪಿಸಿ, ಕೆಲವು ನಿರ್ಬಂಧಗಳನ್ನು ವಿಧಿಸಿತು. ಆ ನಿರ್ಬಂಧಗಳು ಈಗಿನ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಷ್ಟು ಕಠೋರವಾಗಿರಲಿಲ್ಲ. ಕಾರ್ಮಿಕ ಚಳುವಳಿಯು ಆಗಲೂ ಆ ನಿರ್ಬಂಧಗಳನ್ನು ವಿರೋಧಿಸಿದ್ದುದು ಗಮನಾರ್ಹ. ೧೯೩೮ರಲ್ಲಿ ಕಾರ್ಮಿಕರ ಮುಷ್ಕರ ಹಕ್ಕನ್ನು ಮೊಟಕುಗೊಳಿಸಿ ಮುಂಬಯಿ ಪ್ರಾಂತದ ಶಾಸನ ಸಭೆಯಲ್ಲಿ ಮುಂಬಯಿ ಕೈಗಾರಿಕಾ ವಿವಾದ ಮಸೂದೆಯನ್ನು ಮಂಡಿಸಿದಾಗ ಟ್ರೇಡ್ ಯೂನಿಯನ್ ನಾಯಕ ಎಸ್. ಎ. ಡಾಂಗೆಯವರು ಸುದೀರ್ಘ ಭಾಷಣ ಮಾಡಿ ಮಸೂದೆಯನ್ನು ವಿರೋಧಿಸಿ ಅದನ್ನು 'ಕರಾಳ ಶಾಸನ' ಎಂದು ಬಣ್ಣಿಸಿದ್ದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಮುಂಬಯಿಯ ಗಿರಣಿ ಕಾರ್ಮಿಕರು ಬೃಹತ್ ಮುಷ್ಕರ ನಡೆಸಿ ಈ ಕಾಯಿದೆಯನ್ನು ವಿರೋಧಿಸಿದ್ದು ಈಗ ಇತಿಹಾಸ. ೧೯೪೭ರಲ್ಲಿ ಕೈಗಾರಿಕಾ ವಿವಾದ ಕಾಯಿದೆಯು ಜಾರಿಗೆ ಬಂದು ಮುಷ್ಕರದ ಹಕ್ಕನ್ನು ಮಾನ್ಯ ಮಾಡಿತಾದರೂ, ಕಾರ್ಮಿಕರ ಸಮಷ್ಟಿ ಸಂಧಾನಶಕ್ತಿಯನ್ನು ಬಲಗೊಳಿಸುವುದಕ್ಕೆ ಸಹಾಯಕವಾಗಲಿಲ್ಲ.

**ಸ್ವಾತಂತ್ರ್ಯಾನಂತರ**

ಸ್ವಾತಂತ್ರ್ಯಾನಂತರದ ಕಾಲದಲ್ಲಿನ ರಾಜಕೀಯ ಬೆಳವಣಿಗೆಗಳಿಂದಾಗಿ ಟ್ರೇಡ್ ಯೂನಿಯನ್ ಚಳುವಳಿಯಲ್ಲಿ ಒಡಕುಂಟಾಗಿ ಬೇರೆ ಬೇರೆ ಟ್ರೇಡ್ ಯೂನಿಯನ್ ಕೇಂದ್ರಗಳು ಹುಟ್ಟಿಕೊಂಡವು. ಟ್ರೇಡ್ ಯೂನಿಯನ್ ಚಳುವಳಿಯನ್ನು ಶಿಥಿಲಗೊಳಿಸುವುದರಲ್ಲಿ, ಛಿದ್ರಗೊಳಿಸುವುದರಲ್ಲಿ ಕೈಗಾರಿಕಾ ವಿವಾದ ಕಾಯಿದೆಯ ಕಾಣಿಕೆ ಕಡಿಮೆ ಏನಲ್ಲ. ಸರಕಾರ ಹಾಗೂ ಕಾರ್ಮಿಕ ಇಲಾಖೆಯ ತಾರತಮ್ಯ ಧೋರಣೆಯಿಂದ ಟ್ರೇಡ್ ಯೂನಿಯನ್ ಐಕ್ಯತೆಗೆ ಮತ್ತಷ್ಟು ಭಂಗ ಬಂದಿತು. ಕೈಗಾರಿಕಾ ವಿವಾದ ಕಾನೂನಿನ ಅಡಿಯಲ್ಲಿ ರೂಪುಗೊಂಡ ಕನ್ಸಿಲಿಯೇಷನ್, ಅಡ್ಜುಡಿಕೇಷನ್ ವ್ಯವಸ್ಥೆ, ಇಂಡಸ್ಟ್ರಿಯಲ್ ಟ್ರಿಬ್ಯುನಲ್ ಹಾಗೂ ಲೇಬರ್ ಕೋರ್ಟ್‌ಗಳ ಸ್ಥಾಪನೆ, ಇವೆಲ್ಲ ಕಾರ್ಮಿಕರು ಮುಷ್ಕರ ಹೂಡುವುದನ್ನು ತಡೆಯುವುದಕ್ಕೆ ಸಾಧನಗಳಾದವು, ಟ್ರೇಡ್ ಯೂನಿಯನ್ನಿನ ಸಮಷ್ಟಿ ಸಂಧಾನ ಶಕ್ತಿಯನ್ನು ದುರ್ಬಲಗೊಳಿಸಿದುವು. ನ್ಯಾಯವಾದ ಬೇಡಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಕಾರ್ಮಿಕರನ್ನು ಜಾಗೃತಗೊಳಿಸಿ, ಹೋರಾಟಕ್ಕೆ ಅಣಿಗೊಳಿಸುವ ಕಡೆಗೆ ಗಮನಹರಿಸುವುದಕ್ಕೆ ಪ್ರತಿಯಾಗಿ ಟ್ರೇಡ್ ಯೂನಿಯನ್‌ಗಳು ಸರಕಾರಿ ಯಂತ್ರ ರೂಪಿಸಿದ್ದ ಬಲೆಯಲ್ಲಿ ಸಿಕ್ಕಿಕೊಂಡುವು. ಕೈಗಾರಿಕಾ ವಿವಾದಗಳನ್ನು ಪಂಚಾಯ್ತಿಕೆಗೆ, ಲೇಬರ್ ಕೋರ್ಟಿಗೆ ಅಥವಾ ಟ್ರಿಬ್ಯುನಲ್‌ನ ತೀರ್ಮಾನಕ್ಕೆ ಒಪ್ಪಿಸುವ ಅಧಿಕಾರ ಸರಕಾರದ ಕಾರ್ಮಿಕ ಇಲಾಖೆಗೆ ಮಾತ್ರ ಇರುವುದರಿಂದ ಟ್ರೇಡ್ ಯೂನಿಯನ್‌ಗಳು ಕಾರ್ಮಿಕರ ಬೇಡಿಕೆಗಳ ಈಡೇರಿಕೆಗಾಗಿ ಸರಕಾರದ ಮರ್ಜಿ ಅನುಸರಿಸಬೇಕಾಗಿ ಬಂದಿತು. ಟ್ರೇಡ್ ಯೂನಿಯನ್ ನಾಯಕರು ಕಛೇರಿಯಿಂದ ಕಛೇರಿಗೆ, ಒಂದು ನ್ಯಾಯಾಲಯದಿಂದ ಇನ್ನೊಂದು ನ್ಯಾಯಾಲಯಕ್ಕೆ ಪರದಾಡಬೇಕಾದ ಸ್ಥಿತಿ ಬಂದಿತು. ಇದರಿಂದಾಗಿ, ಭಾರತದಲ್ಲಿ ಟ್ರೇಡ್ ಯೂನಿಯನ್ ಚಳವಳಿಗೆ ಕಾರ್ಮಿಕ ಸಂಘಟನೆಯ ಪೂರ್ಣಶಕ್ತಿಯನ್ನು ಬಳಸಿಕೊಳ್ಳ ಲಾಗದೇ ಹೋಯಿತು. ಸಮಷ್ಟಿ ಸಂಧಾನ ಪ್ರಕ್ರಿಯೆ ಬಲಗೊಂಡಿದ್ದಲ್ಲಿ ಪರಿಸ್ಥಿತಿ ಬೇರೆಯೇ ಆಗಿರುತ್ತಿತ್ತು. ಕಾರ್ಮಿಕರು ಆಗ ತಮ್ಮ ಐಕ್ಯತೆಯ ಶಕ್ತಿಯನ್ನು ಅವಲಂಬಿಸಬೇಕಾಗುತ್ತಿತ್ತು. ಮುಂದುವರಿದ ದೇಶಗಳಲ್ಲಿ ಸಮಷ್ಟಿ ಸಂಧಾನಕ್ಕೇ ಈಗಲೂ ಹೆಚ್ಚು ಪ್ರಾಶಸ್ತ್ಯ.

ಇಂದಿನ ಸಂದರ್ಭದಲ್ಲಿ, ಸಂವಿಧಾನಕ್ಕೆ ಸೂಕ್ತ ತಿದ್ದುಪಡಿ ತಂದು ಕಾರ್ಮಿಕರ ಮುಷ್ಕರದ ಹಕ್ಕನ್ನು ಮೂಲಭೂತ ಹಕ್ಕುಗಳಲ್ಲಿ ಒಂದಾಗಿ ಸೇರಿಸಬೇಕೆಂದು ಸರಕಾರದ ಮೇಲೆ, ಪಾರ್ಲಿಮೆಂಟಿನ ಮೇಲೆ ಒತ್ತಾಯ ತರಲು ಎಲ್ಲ ಟ್ರೇಡ್ ಯೂನಿಯನ್ ಸಂಘಟನೆಗಳೂ ಒಂದುಗೂಡಿ ಹೋರಾಟ ನಡೆಸಬೇಕಾದ್ದು ಅಗತ್ಯವಾಗಿದೆ. ಮುಷ್ಕರ ಹೂಡಿಕೆ ಮತ್ತು ಸಮಷ್ಟಿ ಸಂಧಾನದ ಹಕ್ಕನ್ನು ಮಾನ್ಯ ಮಾಡಿದ ಮಾತ್ರಕ್ಕೆ ವರ್ಷಪೂರ್ತಿ ಮುಷ್ಕರಗಳೇ ಆಗುತ್ತಿರುತ್ತವೆ ಎಂದೇನಲ್ಲ. ಸಮಷ್ಟಿ ಸಂಧಾನ ಪ್ರಕ್ರಿಯೆ ಬಲಗೊಂಡರೆ ಮುಷ್ಕರ ಹೋರಾಟದ ಅವಶ್ಯಕತೆ ಕಮ್ಮಿಯಾಗುವುದರಲ್ಲಿ ಸಂಶಯವಿಲ್ಲ. ಪ್ರಜಾಪ್ರಭುತ್ವ ಹಕ್ಕುಗಳ ವಿಸ್ತರಣೆಗಾಗಿ, ಸಂವಿಧಾನದಲ್ಲಿ ಮುಷ್ಕರದ ಹಕ್ಕಿನ ಪ್ರತಿಷ್ಠಾಪನೆಗಾಗಿ ಕಾರ್ಮಿಕರು ನಡೆಸುವ ಹೋರಾಟಕ್ಕೆ ದೇಶದ ಎಲ್ಲ ಪ್ರಗತಿಪರ ಶಕ್ತಿಗಳ ಬೆಂಬಲ ಖಚಿತ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಅಡ್ಡರಸ್ತೆ, ಬನಶಂಕರಿ ೩ನೇ ಹಂತ, ೧ನೇ 'ಎ' ಮುಖ್ಯರಸ್ತೆ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

ಎಂ.ಸಿ.ಎಸ್.
ನಂ. ೨೭, ೬ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು-೩

# ಮರೆಯಾಗುತ್ತಿರುವ ಮೌಲ್ಯಗಳು

ಪ್ರೊ || ಜೆ. ಆರ್. ಲಕ್ಷ್ಮಣರಾವ್

ಕಳೆದ ಶತಮಾನದ ಪೂರ್ವಾರ್ಧದಲ್ಲಿ ಜಗಲೂರು ಮಹಮದ್ ಇಮಾಮ್ ಎಂಬ ಹೆಸರು ಮೈಸೂರು ರಾಜ್ಯದಲ್ಲೆಲ್ಲ ಸುಪರಿಚಿತವಾಗಿತ್ತು. ನಮ್ಮ ಜಗಲೂರು ತಾಲ್ಲೂಕಿನಲ್ಲಿ ವಿಶ್ವವಿದ್ಯಾನಿಲಯದ ಪದವೀಧರರಾದವರಲ್ಲಿ ಅವರೇ ಮೊದಲನೆಯವರು ಎಂದು ನಾನು ನನ್ನ ಬಾಲ್ಯದಲ್ಲಿ ಕೇಳಿದ್ದೆ. ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಓದಿ ಬಿ.ಎ. ಡಿಗ್ರಿಯನ್ನೂ ಮದ್ರಾಸು ಲಾ ಕಾಲೇಜಿನಲ್ಲಿ ಓದಿ ಬಿ.ಎಲ್. ಡಿಗ್ರಿಯನ್ನೂ ಪಡೆದರು. ಲಾ ಡಿಗ್ರಿ ಪಡೆದರೂ ಅವರು ಬಹುಶಃ ವಕೀಲಿ ವೃತ್ತಿಯನ್ನು ಹಿಡಿಯಲೇ ಇಲ್ಲ. ಶ್ರೀಮಂತ ಮನೆತನದವರಾದ್ದರಿಂದ ಜೀವನೋಪಾಯದ ಯೋಚನೆ ಇರಲಿಲ್ಲ; ಸಾರ್ವಜನಿಕ ಜೀವನದಲ್ಲಿ ಆಸಕ್ತರಾದರು. ನಮ್ಮೂರಿನ ಪುರಸಭಾಧ್ಯಕ್ಷರಾಗಿದ್ದರು, ಚಿತ್ರದುರ್ಗ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದರು, ಮೈಸೂರು ರಾಜ್ಯದ ಪ್ರಜಾಪ್ರತಿನಿಧಿ ಸಭೆ ಮತ್ತು ಲೆಜಿಸ್ಲೆಟಿವ್ ಕೌನ್ಸಿಲ್‌ಗಳ ಸದಸ್ಯರಾಗಿದ್ದರು, ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಮತ್ತು ಯೂನಿವರ್ಸಿಟಿ ಕೌನ್ಸಿಲ್‌ಗಳ ಸದಸ್ಯರಾಗಿದ್ದರು. ಇದೆಲ್ಲದರಿಂದ ಮತ್ತು ಅವರಿಗೆ ಸಹಜವಾಗಿದ್ದ ತತ್ವನಿಷ್ಠೆ ಮತ್ತು ಋಜು ಜೀವನಗಳಿಂದ ಹೆಸರುವಾಸಿಯಾದರು, ಜನಪ್ರಿಯತೆ ಗಳಿಸಿದರು. ೧೯೩೭-೩೮ರ ಸುಮಾರಿನಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನಿಂದ ಸ್ಫೂರ್ತಿ ಪಡೆದು ಮೈಸೂರು ಸ್ಟೇಟ್ ಕಾಂಗ್ರೆಸ್ ಜನ್ಮತಾಳಿ, ''ಮಹಾರಾಜರ ಆಶ್ರಯದಲ್ಲಿ ಜವಾಬ್ದಾರಿ ಸರ್ಕಾರ'' ಎಂಬ ಬೇಡಿಕೆಯನ್ನು ಮುಂದಿಟ್ಟು ಭಾರೀ ಚಳವಳಿ ನಡೆಸಿದುದರ ಫಲವಾಗಿ ಆ ಬೇಡಿಕೆಯನ್ನು ಭಾಗಶಃ ಮನ್ನಿಸಿದ ಮಹಾರಾಜರು ತಮ್ಮ ದಿವಾನ್‌ರವರ ಎಕ್ಸಿಕ್ಯೂಟಿವ್ ಕೌನ್ಸಿಲ್‌ನಲ್ಲಿ (ದಿವಾನ್‌ರವರ ಮಂತ್ರಿಮಂಡಲದಲ್ಲಿ) ಜನಪ್ರತಿನಿಧಿಗಳಾದ ಒಬ್ಬಿಬ್ಬರು ಅಧಿಕಾರೇತರರಿಗೆ ಸ್ಥಾನ ನೀಡಲು ಸಮ್ಮತಿಸಿದರು. ಹಾಗೆ ಸಚಿವರಾದ ಮೊದಲಿಗರಲ್ಲಿ ಇಮಾಮ್ ಅವರೂ ಒಬ್ಬರು.

ಮೈಸೂರು ರಾಜ್ಯದ ಎಲ್ಲೆಡೆಯಲ್ಲಿಯೂ ಅವರು ಜಗಲೂರು ಮಹಮದ್ ಇಮಾಮ್, ಜಗಲೂರಿನ ಜನರಿಗೆ ಅವರು ಇಮ್ಮಣ್ಣ. ನಮ್ಮ ತಂದೆಯವರಿಗಿಂತ ನಾಲ್ಕಾರು ವರ್ಷ ಕಿರಿಯರಾಗಿದ್ದ ಇಮ್ಮಣ್ಣನಿಗೆ ನಮ್ಮ ತಂದೆಯವರ ಬಗ್ಗೆ ತುಂಬ ಗೌರವ ಮತ್ತು ಪ್ರೀತಿ ವಿಶ್ವಾಸ. ಅನೇಕ ವೇಳೆ ಅವರು ರಾತ್ರಿ ಊಟ ಮಾಡಿದ ಮೇಲೆ ಹತ್ತಿರದಲ್ಲೇ ಇದ್ದ ನಮ್ಮ ಮನೆಗೆ ಬಂದು ನಮ್ಮ ತಂದೆಯವರೊಡನೆ ಸರಸ ಸಂಭಾಷಣೆಯಲ್ಲಿ ತೊಡಗುತ್ತಿದ್ದುದರಿಂದ ನಮಗೆಲ್ಲ ಅವರಲ್ಲಿ ಸಲುಗೆ ಇತ್ತು. ಅವರು ಗತಿಸಿ ಹದಿನೈದು ಇಪ್ಪತ್ತು ವರ್ಷಗಳಾಗಿ ಹೋಗಿದೆಯಾದರೂ ಅವರು ಆಗಾಗ ನನ್ನ ನೆನಪಿಗೆ ಬರುತ್ತಾರೆ. ಹಾಗೆ ನೆನಪಿಗೆ ಬಂದಾಗಲೆಲ್ಲ ನನ್ನ ವಿದ್ಯಾರ್ಥಿ ದೆಸೆಯಲ್ಲಿ ನಡೆದ ಒಂದು ಘಟನೆಯನ್ನು ನಾನು ಮೆಲುಕು ಹಾಕುವುದುಂಟು. ಏಕೆಂದರೆ ಇಂದಿನ ಜನನಾಯಕರು ಮತ್ತು ಅಧಿಕಾರ ವರ್ಗದವರು ಅಂದಿನವರಿಗಿಂತ ಎಷ್ಟು ಭಿನ್ನರೆಂಬುದನ್ನು ಆ ಘಟನೆ ಎತ್ತಿ ತೋರಿಸುತ್ತದೆ.

ಆರು ದಶಕಗಳಿಗೂ ಹಿಂದಿನ ಮಾತು. ೧೯೪೧ರ ಬೇಸಗೆ ಮುಗಿದು ಕಾಲೇಜುಗಳು ಕೆಲಸ ಪ್ರಾರಂಭಿಸಿದ್ದುವು. ಆಗ ಮೈಸೂರು ರಾಜ್ಯದಲ್ಲಿದ್ದ ಏಕೈಕ ವಿಜ್ಞಾನ ಕಾಲೇಜ್, ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ರಸಾಯನ ಶಾಸ್ತ್ರ ವಿಭಾಗದಲ್ಲಿ ನಾನು ಬಿ.ಎಸ್‌ಸಿ. ಆನರ್ಸ್ ಎರಡನೆಯ ವರ್ಷವನ್ನು ಮುಗಿಸಿ ಮೂರನೆಯ ವರ್ಷಕ್ಕೆ ಕಾಲಿಟ್ಟಿದ್ದೆ. ನನ್ನ ಸ್ನೇಹಿತ ದೇವರಯ್ಯ ಎಂಬುವರು ಅದೇ ಕಾಲೇಜಿನ ಗಣಿತ ವಿಭಾಗದಲ್ಲಿ ಮೊದಲನೆಯ ವರ್ಷದ ಬಿ.ಎಸ್‌ಸಿ. ಆನರ್ಸ್ ಮುಗಿಸಿ ಎರಡನೆಯ ವರ್ಷಕ್ಕೆ ಬಂದಿದ್ದರು. ವಾರ್ಷಿಕ ಪರೀಕ್ಷೆಯಲ್ಲಿ ಅವರು ತಮ್ಮ ಪ್ರಧಾನ ವಿಷಯವಾದ ಗಣಿತದಲ್ಲಿ ಅತ್ಯಧಿಕ ಅಂಕಗಳನ್ನು ಗಳಿಸಿ ತರಗತಿಯಲ್ಲಿ ಮೊದಲ ಸ್ಥಾನವನ್ನು ಪಡೆದಿದ್ದುದರಿಂದ ಅವರಿಗೆ ಸಬ್ಜೆಕ್ಟ್ ಸ್ಕಾಲರ್ಷಿಪ್ ನೀಡಲಾಗಿದೆ ಎಂಬ ಪ್ರಕಟಣೆ ಕಾಲೇಜಿನ ನೋಟಿಸ್ ಬೋರ್ಡ್‌ನಲ್ಲಿ ಕಾಣಿಸಿಕೊಂಡಿತು. ಅದರ ಮೌಲ್ಯ ೫೦ರೂ. ಅದನ್ನು ಎಂಟು ತಿಂಗಳಿಗೆ ಹಂಚಿ, ಪ್ರತಿ ತಿಂಗಳೂ ಆರೂಕಾಲು ರೂಪಾಯಿ ಕೊಡುವ ಏರ್ಪಾಟಿತ್ತು. ಆ ಕಾಲಕ್ಕೆ ಅದು ಕಡೆಗಣಿಸುವಂಥ ಮೊತ್ತವೇನಲ್ಲ. ಅದಕ್ಕಿಂತ ಮಿಗಿಲಾಗಿ, ಮಾಸಿಕ ವಿದ್ಯಾರ್ಥಿ ಶುಲ್ಕ ಹದಿನೆಂಟು ರೂಪಾಯಿಯನ್ನು ಅವರು ತೆರಬೇಕಾಗಿರಲಿಲ್ಲ. ಆದುದರಿಂದ ಆ ಪ್ರಕಟಣೆ ಹೊರಬಿದ್ದುದು ದೇವರಯ್ಯನವರಿಗೆ ಪರಮಾನಂದ ಉಂಟುಮಾಡಿತು. ನನಗೆ ನೆನಪಿರುವಂತೆ, ಅವರ ತಂದೆಯವರು ಅವರ ಸ್ವಂತ ಊರಾದ ಕಿಕ್ಕೇರಿ ಎಂಬಲ್ಲಿ ಪುರೋಹಿತರೋ ಪ್ರಾಥಮಿಕ ಶಾಲಾ ಉಪಾಧ್ಯಾಯರೋ ಆಗಿದ್ದರು. ಬಡತನ, ಮಗನ ವಿದ್ಯಾಭ್ಯಾಸದ ವೆಚ್ಚವನ್ನು ಭರಿಸುವುದು ಅವರಿಗೆ ಸಾಧ್ಯವಿರಲಿಲ್ಲ. ದೇವರಯ್ಯನವರ ಸಹಪಾಠಿಯೊಬ್ಬರು, ಸ್ವಲ್ಪಮಟ್ಟಿಗೆ ಅನುಕೂಲಸ್ಥ ಕುಟುಂಬಕ್ಕೆ ಸೇರಿದವರು, ಬೆಂಗಳೂರಿನಲ್ಲಿ ತಿಂಗಳಿಗೆ ಐದು ರೂಪಾಯಿ ಬಾಡಿಗೆಗೆ ಒಂದು ಕೊಠಡಿಯನ್ನು ತೆಗೆದುಕೊಂಡಿದ್ದರು. ಅದರಲ್ಲಿ ತಮ್ಮೊಡನೆ ವಾಸಿಸಲು ದೇವರಯ್ಯನವರಿಗೆ ಅನುಮತಿ ನೀಡಿದ್ದರು. ಊಟಕ್ಕೆ ದೇವರಯ್ಯ ವಾರಾನ್ನದ ಏರ್ಪಾಟು ಮಾಡಿಕೊಂಡಿದ್ದರು. ಸಹಜವಾಗಿಯೇ ಸ್ಕಾಲರ್ಷಿಪ್ ವಿಷಯ ತಿಳಿದಾಗ ಅವರ ಸಂತೋಷಕ್ಕೆ ಪಾರವೇ ಇಲ್ಲವಾಯಿತು.

ಆದರೆ, ಅವರ ದುರದೃಷ್ಟ, ಅವರ ಆನಂದ ಅಲ್ಪ ಕಾಲಿಕವಾಗಿ ಪರಿಣಮಿಸಿತು. ಪ್ರಕಟಣೆ ಹೊರಬಿದ್ದ ಒಂದು ವಾರದೊಳಗೇ ಅವರಿಗೆ ಕಾಲೇಜು ಪ್ರಿನ್ಸಿಪಾಲರಿಂದ ಕರೆ ಬಂದಿತು. ಪ್ರಿನ್ಸಿಪಾಲ್ ಎ.ಬಿ. ಮ್ಯಾಕಿಂಟಾಷ್, ದೇವರಯ್ಯನವರನ್ನು ತಮ್ಮ ಕೊಠಡಿಗೆ ಕರೆಸಿಕೊಂಡು, ''ನಿನ್ನ ಕ್ಷಮೆ ಕೇಳಲು ನಿನ್ನನ್ನು ಕರೆಸಿದೆ'' ಎಂದರು. ದೇವರಯ್ಯ ತಮ್ಮ ಕಿವಿಯನ್ನು ನಂಬಲಿಲ್ಲ. ಅದು ಸ್ವಾತಂತ್ರ್ಯಪೂರ್ವ ಕಾಲ. ಮ್ಯಾಕಿಂಟಾಷ್ ಆಂಗ್ಲರು, ಪ್ರಿನ್ಸಿಪಾಲ್ ಸ್ಥಾನದಲ್ಲಿರುವವರು. ದೇವರಯ್ಯನಾದರೋ ದಾಸ್ಯದಲ್ಲಿದ್ದ ಭಾರತದ ಬಡ ಹುಡುಗ. ಪ್ರಿನ್ಸಿಪಾಲ್ ಆ ಹುಡುಗನ ಕ್ಷಮೆ ಕೇಳುವುದು ಎಂದರೇನು ? ದಿಗ್ಭ್ರಮೆಗೊಂಡ ದೇವರಯ್ಯನನ್ನು ಕುರಿತು ಪ್ರಿನ್ಸಿಪಾಲರು, ''ನಿನಗೆ ಹಾಜರಾತಿಯ ಕೊರತೆ ಇದೆ. ಅದು ನನಗೆ ಗೊತ್ತಿತ್ತು. ಆದರೂ ನೀನು ತರಗತಿಗೆ ಮೊದಲನೆಯವನಾಗಿ ತೇರ್ಗಡೆಯಾಗಿರುವುದರಿಂದ ನಿನಗಿರುವ ಹಾಜರಾತಿ ಕೊರತೆಯನ್ನು ವಿಶ್ವವಿದ್ಯಾನಿಲಯದವರು ಅವಗಣಿಸುವುದು ಖಂಡಿತ ಎಂಬ ಭರವಸೆಯಿಂದ ನಾನು ಸ್ಕಾಲರ್ಷಿಪ್ ಬಗ್ಗೆ ಪ್ರಕಟಣೆಗೆ ಸಹಿ ಹಾಕಿಬಿಟ್ಟೆ. ನಿನ್ನ ಹಾಜರಾತಿ ಕೊರತೆಯನ್ನು ಅವಗಣಿಸಬೇಕೆಂದು ನಾನು ಮಾಡಿದ್ದ ಶಿಫಾರಸನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲವೆಂಬ ಪತ್ರ ವಿಶ್ವವಿದ್ಯಾನಿಲಯದಿಂದ ಈ ದಿನ ಬಂದಿದೆ. ವೃಥಾ ನಿನ್ನ ಮನಸ್ಸಿಗೆ ನೋವುಂಟುಮಾಡಿದುದಕ್ಕೆ ಕ್ಷಮೆ ಕೇಳುತ್ತಿದ್ದೇನೆ. ನೀನು ಪುನಃ ಇನ್ನೊಂದು ಬಾರಿ ಮೊದಲ ವರ್ಷದ ತರಗತಿಯಲ್ಲಿಯೇ ಉಳಿಯಬೇಕಾಗಿಬಂದಿದೆ. ಅದನ್ನು ತುಂಬ ವಿಷಾದದಿಂದ ತಿಳಿಸುತ್ತಿದ್ದೇನೆ'' ಎಂದರು. ದೇವರಯ್ಯನವರಿಗೆ ಸೂರು ಕಳಚಿ ತಲೆಯ ಮೇಲೆ ಬಿದ್ದಂತಾಯಿತು. ಕಣ್ಣೀರು ಹಾಕುತ್ತ ಹೊರಕ್ಕೆ ಬಂದರು.

ಪ್ರಿನ್ಸಿಪಾಲರು ದೇವರಯ್ಯನವರನ್ನು ಕರೆಸಿಕೊಂಡುದು ಏಕೆ ಎಂಬ ಕುತೂಹಲದಿಂದ ಹೊರಗಡೆ ಕಾಯುತ್ತಿದ್ದ ಸ್ನೇಹಿತರ ಬಳಿಗೆ ಬಂದು ದೇವರಯ್ಯ ತಮ್ಮ ಅಳಲನ್ನು ತೋಡಿಕೊಂಡರು. ಮುಂದೇನು ಎಂಬ ಪ್ರಶ್ನೆಗೆ ಒಬ್ಬೊಬ್ಬರು ಒಂದೊಂದು ಸಲಹೆ ನೀಡತೊಡಗಿದರು. ದೇವರಯ್ಯನವರಾದರೋ ತಮ್ಮ ಹಳ್ಳಿಗೆ ಹಿಂತಿರುಗಿ ಯಾವುದಾದರೂ ಉದ್ಯೋಗಕ್ಕಾಗಿ ಪ್ರಯತ್ನಿಸುವುದೊಂದೇ ತಮಗಿರುವ ದಾರಿ ಎಂಬ ತೀರ್ಮಾನಕ್ಕೆ ಬಂದಿದ್ದರು. ವಿದ್ಯಾಭ್ಯಾಸದ ಆಸೆ ಕೈಬಿಡಬೇಕಾಗಿ ಬಂದುದಕ್ಕಾಗಿ ದುಃಖ ಆವರಿಸಿ ಮಂಕಾಗಿದ್ದರು.

ಸ್ನೇಹಿತರ ಪೈಕಿ ಒಬ್ಬ ನನ್ನ ಕಡೆ ತಿರುಗಿ, ''ಮಹಮ್ಮದ್ ಇಮಾಮ್ ನಿಮ್ಮ ಊರಿನವರು. ನೀನು ಅವರನ್ನು ಚೆನ್ನಾಗಿ ಬಲ್ಲೆ. ಈಗ ಅವರು ಶಿಕ್ಷಣ ಮಂತ್ರಿಗಳು. ಅವರು ವೈಸ್ ಚಾನ್ಸಲರ್‌ಗೆ ಒಂದು ಮಾತು ಹೇಳಿದರೆ ಹಾಜರಾತಿ ಕೊರತೆಯನ್ನು ಅವರು ಅವಗಣಿಸುವುದು ಖಂಡಿತ. ನೀನು ಪ್ರಯತ್ನ ಮಾಡುವುದು ಒಳ್ಳೆಯದು'' ಎಂದ. ಅವನ ಸಲಹೆ ಸರಿ ಕಾಣಿಸಿತು. ಮರುದಿನ ಬೆಳಿಗ್ಗೆ ನಾನು ದೇವರಯ್ಯನವರನ್ನು ಕರೆದುಕೊಂಡು ಇಮಾಮ್ ಅವರ ಮನೆಗೆ ಹೋದೆ.

ಗೇಟ್ ಬಳಿ ಇದ್ದ ಜವಾನಿಯವನು ನನ್ನನ್ನು ತಡೆದು,

> 'ಹೀಗೂ ಉಂಟೇ' ಎನ್ನುವ ಸಂದರ್ಭಗಳು ಕಡಿಮೆಯಾಗುತ್ತಿರುವಾಗ 'ಹೀಗೂ ಇದ್ದಿತೆ' ಎಂಬುದನ್ನು ಮೆಲುಕು ಹಾಕಿದರೆ ಹಿತವೆನಿಸೀತು.

ನಾವು ಬಂದುದೇಕೆ ಎಂದು ವಿಚಾರಿಸಿದ. ಇಮಾಮ್ ಅವರನ್ನು ಕಾಣಬೇಕಾಗಿದೆ ಎಂದು ಹೇಳಿ ನನ್ನ ಪರಿಚಯವನ್ನು ಒಂದು ಚೀಟಿಯಲ್ಲಿ ಗುರುತು ಹಾಕಿ ಅವನಿಗೆ ಕೊಟ್ಟೆ. ಅದನ್ನು ನೋಡಿದ ಇಮಾಮ್, ತಾನೇ ಮನೆ ಮುಂದಿನ ವರಾಂಡಕ್ಕೆ ಬಂದು ಸನ್ನೆ ಮಾಡಿ ನಮ್ಮನ್ನು ಒಳಕ್ಕೆ ಬಿಡುವಂತೆ ಆತನಿಗೆ ಹೇಳಿದರು. ಅವರ ಕೊಠಡಿಯೊಳಕ್ಕೆ ಹೋದ ಮೇಲೆ ನಮ್ಮ ಮನೆಯವರೆಲ್ಲರ ಕ್ಷೇಮ ಸಮಾಚಾರ ವಿಚಾರಿಸಿ, ನನ್ನೊಂದಿಗಿದ್ದ ಹುಡುಗ ಯಾರು, ನಾವು ಏಕೆ ಅವರಲ್ಲಿಗೆ ಹೋದೆವು ಎಂದು ಕೇಳಿದರು. ನಾನು ವಿಷಯವನ್ನೆಲ್ಲ ವಿವರಿಸಿ ಹೇಳಿ, ''ವಾಸ್ತವವಾಗಿ ದೇವರಯ್ಯ ತಪ್ಪದೆ ತರಗತಿಗಳಿಗೆಲ್ಲ ಹಾಜರಾಗಿದ್ದಾರೆ, ವಿದ್ಯಾರ್ಥಿ ಶುಲ್ಕ ಕ್ಲುಪ್ತ ಕಾಲದಲ್ಲಿ ತೆರದೆ ಹೋದುದರಿಂದ ಅವರ ಹೆಸರನ್ನು ಹಾಜರಾತಿ ರಿಜಿಸ್ಟರ್‌ನಿಂದ ತೆಗೆದು ಹಾಕಿದ್ದರು. ಮೂರು ನಾಲ್ಕು ತಿಂಗಳ ಕಾಲದಷ್ಟು ಹಾಜರಾತಿ ಅವರು ಕಳೆದುಕೊಂಡುದರಿಂದ ಹೀಗಾಗಿದೆ'' ಎಂದು ಮಾತು ಸೇರಿಸಿದೆ. ವಿದ್ಯಾರ್ಥಿ ಶುಲ್ಕದ ರಿಯಾಯಿತಿಗೆ ದೇವರಯ್ಯ ಅರ್ಜಿ ಹಾಕಿಕೊಂಡಿದ್ದರು. ಆದರೆ ಅವರಿಗೆ ಅರ್ಧ ರಿಯಾಯಿತಿ ಮಾತ್ರ ಸಿಕ್ಕಿತು. ಆ ಒಂಬತ್ತು ರೂಪಾಯಿ ತೆರುವುದೂ ಅವರಿಗೆ ಸಾಧ್ಯವಾಗದೆ ಹೋದುದರಿಂದ ಅವರ ಹೆಸರನ್ನು ರಿಜಿಸ್ಟರ್‌ನಿಂದ ತೆಗೆದುಹಾಕಿದ್ದರು. ಡಿಸೆಂಬರ್ ಕೊನೆಯಲ್ಲಿ ದೊರೆತ ಕ್ರಿಸ್‌ಮಸ್ ರಜೆಯಲ್ಲಿ ಅವರು ತಮ್ಮ ಊರಿಗೆ ಹೋಗಿದ್ದಾಗ ಅವರ ತಂದೆಯವರು ಎಲ್ಲಿಯೋ ಸಾಲ ಎತ್ತಿ ಹಣ ಒದಗಿಸಿದ್ದರು. ಅದನ್ನು ತೆತ್ತ ಮೇಲೆ ಜನವರಿಯಲ್ಲಿ ಪುನಃ ಅವರ ಹೆಸರನ್ನು ಸೇರಿಸಲಾಯಿತು. ಅದುವರೆಗಿನ ಅವಧಿಯ ಹಾಜರಾತಿ ಅವರಿಗೆ ನಷ್ಟವಾಯಿತು. ಅದನ್ನೆಲ್ಲ ದೇವರಯ್ಯ ವಿವರಿಸಿದರು. ಎಲ್ಲವನ್ನೂ ಸಾವಧಾನದಿಂದ ಕೇಳಿದ ಇಮಾಮ್, ನೊಂದ ಧ್ವನಿಯಲ್ಲಿ, ''ವಿಶ್ವವಿದ್ಯಾನಿಲಯದ ಅಧಿಕಾರಿಗಳು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸದೆ ತರಾತುರಿಯಲ್ಲಿ ವಿವೇಚನಾರಹಿತವಾಗಿ ವರ್ತಿಸಿದ್ದಾರೆ'' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಅವರ ಸಹಾನುಭೂತಿ ಇದೆ ಎಂಬ ಧೈರ್ಯ ಉಂಟಾಗಿ ನಾನು, ''ನೀವೇಕೆ ವೈಸ್‌ಚಾನ್ಸಲರ್‌ಗೆ ಒಂದು ಮಾತು ಹೇಳಬಾರದು ?'' ಎಂದು ಕೇಳಿದೆ. ಹಾಗೆ ಹೇಳುವುದಕ್ಕಾಗುವುದಿಲ್ಲ ಎಂದುಬಿಟ್ಟರು. ''ವಿಶ್ವವಿದ್ಯಾನಿಲಯದ ಅಧಿಕಾರಿಗಳು ವಿವೇಚನೆ ಇಲ್ಲದೆ ವರ್ತಿಸಿರುವರೆಂದು ನೀವೇ ಹೇಳಿದಿರಿ. ಅದರಿಂದ ದೇವರಯ್ಯನವರಿಗೆ ಅನ್ಯಾಯವಾಗಿದೆ ಎಂಬುದು ಕಂಡಂತೆಯೇ ಇದೆ. ಆದರೂ ವೈಸ್ ಚಾನ್ಸಲರ್ ಅವರಿಗೆ ಹೇಳಲು ನೀವೇಕೆ ನಿರಾಕರಿಸುತ್ತಿರುವಿರಿ ?'' ಎಂದು ಕೇಳಿದೆ. ಅದಕ್ಕೆ ಇಮಾಮ್ ಅವರು ''ನೀವಿನ್ನೂ ಹುಡುಗರಪ್ಪಾ, ಆಡಳಿತದ ಸೂಕ್ಷ್ಮ ನಿಮಗೆ ಗೊತ್ತಾಗುವುದಿಲ್ಲ. ಒಂದು ವರ್ಷಕ್ಕೂ ಹಿಂದೆ ನಾನಿನ್ನೂ ಮಂತ್ರಿಯಾಗಿರದಿದ್ದಾಗ, ಸಾರ್ವಜನಿಕ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾಗ, ಇಂಥ ಸಂದರ್ಭಗಳು ಎದುರಾದರೆ ನನಗೆ ಪರಿಚಯವಿರುವ ಅಧಿಕಾರಿಗಳ ಬಳಿ ಹೋಗಿ ನನಗೆ ನ್ಯಾಯವಾಗಿ ಕಂಡ ವಿಷಯಗಳ ಬಗ್ಗೆ ಶಿಫಾರಸು ಮಾಡುತ್ತಿದ್ದೆ. ಆಗ ಅದು 'ಅಹವಾಲು' ಎನ್ನಿಸಿಕೊಳ್ಳುತ್ತಿತ್ತು. ಈಗ ನಾನು ಮಂತ್ರಿ. ಈಗ ಆ ರೀತಿ ಶಿಫಾರಸು ಮಾಡಿದರೆ ಅದು 'ಆಜ್ಞೆ'ಯಾಗುತ್ತದೆ. ಅಧಿಕಾರಿಯ ಸ್ವಂತ ಅಭಿಪ್ರಾಯ ಏನೇ ಇರಲಿ, ನನ್ನ ಕೋರಿಕೆಯನ್ನು ಆತ ಮನ್ನಿಸಬೇಕಾಗುತ್ತದೆ.




ಅದನ್ನು ಕಡೆಗಣಿಸುವುದು ಆತನಿಗೆ ಕಷ್ಟವಾಗುತ್ತದೆ. ಮಂತ್ರಿಯಾದವರು ತನ್ನ ಇಲಾಖೆಯ ರೀತಿ ನೀತಿಗಳ ಬಗ್ಗೆ ನಿರ್ಧಾರ ಕೈಗೊಳ್ಳಬೇಕೇ ವಿನಾ ದೈನಂದಿನ ಆಡಳಿತದಲ್ಲಿ ಕೈಹಾಕಬಾರದು. ಹಾಗೆ ಮಾಡಿದರೆ ಅಧಿಕಾರಿಗಳಿಗೆ ಬೆಲೆಯೇ ಇಲ್ಲವಾಗುತ್ತದೆ'' ಎಂದರು. ಹಾಗಾದರೆ ದೇವರಯ್ಯನವರ ಸಮಸ್ಯೆಗೆ ಪರಿಹಾರ ಏನು ಎಂದು ಕೇಳಿದೆ. ''ಇನ್ನೊಮ್ಮೆ ಪ್ರಿನ್ಸಿಪಾಲರನ್ನು ಕಂಡು ಮಾತನಾಡಲಿ. ವಿದ್ಯಾರ್ಥಿ ಶುಲ್ಕ ತೆರಲು ಸಾಧ್ಯವಾಗದೆ ಹೋದುದಕ್ಕಾಗಿ ಹೆಸರನ್ನು ತೆಗೆದುಹಾಕಿದುದರಿಂದ ಹಾಜರಾತಿ ಕೊರತೆ ಉಂಟಾಗಿದೆಯೇ ಹೊರತು ಅದು ನಿಜವಾದ ಕೊರತೆ ಅಲ್ಲ ಎಂಬುದನ್ನು ಒತ್ತಿ ಹೇಳಿ ಅವರು ಪುನಃ ವಿಶ್ವವಿದ್ಯಾನಿಲಯಕ್ಕೆ ಬರೆಯಲಿ. ತರಗತಿಗೆ ಮೊದಲ ಸ್ಥಾನ ಪಡೆದಿರುವುದನ್ನು ಪರಿಗಣಿಸಿ ಹಾಜರಾತಿ ಕೊರತೆಯನ್ನು ಅವಗಣಿಸುವಂತೆ ಅವರು ಶಿಫಾರಸು ಮಾಡಲಿ. ಮ್ಯಾಕಿಂಟಾಷ್ ತುಂಬ ಒಳ್ಳೆಯವರು, ದಯಾಪರರು, ಅವರು ಖಂಡಿತ ಪುನಃ ಬರೆಯಲು ಒಪ್ಪುತ್ತಾರೆ'' ಎಂದರು.

ದೇವರಯ್ಯ ಮರುದಿನ ಪ್ರಿನ್ಸಿಪಾಲರನ್ನು ಕಂಡು ಹಾಗೆ ಕೇಳಿಕೊಂಡರು. ಇಮಾಮ್ ಅವರು ನಿರೀಕ್ಷಿಸಿದ್ದಂತೆ ಮ್ಯಾಕಿಂಟಾಷ್ ಮರುಮಾತಿಲ್ಲದೆ ಒಪ್ಪಿ ಇನ್ನೊಮ್ಮೆ ವಿಶ್ವವಿದ್ಯಾನಿಲಯಕ್ಕೆ ಬರೆದರು. ಆದರೆ ಆಗ ರಿಜಿಸ್ಟ್ರಾರ್ ಆಗಿದ್ದವರು ನಿಯಮ ನಿಷ್ಠರು. ಹಾಜರಾತಿ ಕೊರತೆ ಶೇ. ೨೫ಕ್ಕಿಂತ ಹೆಚ್ಚಿಗೆ ಇರುವುದರಿಂದ ಏನೂ ಮಾಡುವುದಕ್ಕಾಗುವುದಿಲ್ಲ ಎಂದು ಉತ್ತರ ಬರೆದುಬಿಟ್ಟರು. ದೇವರಯ್ಯ ನಿರ್ವಿಣ್ಣರಾಗಿ ತಮ್ಮ ಹಳ್ಳಿಗೆ ಹಿಂದಿರುಗಲು ಏರ್ಪಾಟು ಮಾಡಿಕೊಳ್ಳತೊಡಗಿದರು. ಅವರ ನಿಕಟವರ್ತಿಗಳಾಗಿದ್ದ ನಾವು ಕೆಲವರು ಕಸಿವಿಸಿಗೊಂಡು ನಮ್ಮ ಅಸಹಾಯಕತೆಯ ಬಗ್ಗೆ ಮರುಗುತ್ತಾ ಕುಳಿತಿದ್ದಾಗ, ಪ್ರಿನ್ಸಿಪಾಲರ ಎರಡನೆಯ ಶಿಫಾರಸು ಪತ್ರಕ್ಕೆ ಬಂದ ಉತ್ತರವನ್ನು ನಾನು ಇಮಾಮ್ ಅವರಿಗೆ ವರದಿ ಮಾಡುವೆನೆಂಬ ನಿರೀಕ್ಷೆಯಲ್ಲಿ ಅವರಿದ್ದ ವಿಷಯ ನನಗೆ ತಿಳಿದುಬಂದಿತು. ಅವರನ್ನು ಭೆಟ್ಟಿಯಾದ ನಮ್ಮೂರಿನವರೊಬ್ಬರಿಂದ ಆ ವಿಷಯ ಗೊತ್ತಾಯಿತು. ನಾನು ಆ ಬಗ್ಗೆ ಅವರಿಗೆ ವರದಿ ಮಾಡುವ ಯೋಚನೆಯನ್ನೇ ಮಾಡಿರಲಿಲ್ಲ. ಏಕೆಂದರೆ ಮಂತ್ರಿಯಾದವರು ಆ ರೀತಿ ಮಧ್ಯೆ ಪ್ರವೇಶ ಮಾಡುವುದು ಸರಿಯಲ್ಲ ಎಂದು ಅವರು ಖಡಾಖಂಡಿತವಾಗಿ ಹೇಳಿದ್ದರು. ಅವರು ನಿರೀಕ್ಷಿಸುತ್ತಿದ್ದರೆಂದ ಮೇಲೆ ನಾನು ಅವರಲ್ಲಿಗೆ ಹೋಗಲೇಬೇಕಾಯಿತು.

ವಿಷಯ ತಿಳಿದಾಗ ಇಮಾಮ್ ತುಂಬ ವ್ಯಥೆ ವ್ಯಕ್ತಪಡಿಸಿ, ''ಆ ಹುಡುಗ ಈಗ ಏನು ಮಾಡಬೇಕೆಂದಿದ್ದಾನೆ ?'' ಎಂದು ಕೇಳಿದರು. ವಿದ್ಯಾಭ್ಯಾಸದ ಆಸೆ ಕೈಬಿಟ್ಟು ತಮ್ಮೂರಿಗೆ ಹಿಂದಿರುಗುವ ಏರ್ಪಾಟಿನಲ್ಲಿದ್ದ ವಿಷಯ ತಿಳಿಸಿದೆ. ಅವರು, ''ಛೇ ಛೇ ಹಾಗೆ ಮಾಡುವುದು ಬೇಡ. ಮೊದಲನೆಯ ವರ್ಷದ ತರಗತಿಗೇ ಸೇರಿ ಇನ್ನೊಮ್ಮೆ ಓದಲಿ. ಅದಕ್ಕೆ ತಗಲುವ ವೆಚ್ಚವನ್ನು ನಾನು ನೋಡಿಕೊಳ್ಳುತ್ತೇನೆ'' ಎಂದರು. ನಾನು ಸ್ವಲ್ಪ ಹಿಂದು ಮುಂದು ನೋಡಿ, ''ಎರಡನೆಯ ವರ್ಷ ಅದೇ ತರಗತಿಯಲ್ಲಿ ಓದಿದರೆ ಅರ್ಧ ಶುಲ್ಕ ರಿಯಾಯಿತಿ ಸಹ ಅವರಿಗೆ ಸಿಕ್ಕದೆ ಹೋಗಬಹುದು'' ಎಂದೆ. ಅವರು, ''ಅದು ನನಗೆ ಗೊತ್ತಿದೆಯಪ್ಪಾ! ತಿಂಗಳಿಗೆ ಹದಿನೆಂಟು ರೂಪಾಯಿಯಂತೆ ಎಂಟು ತಿಂಗಳಿಗೆ ನೂರಾ ನಲವತ್ತನಾಲ್ಕು ರೂಪಾಯಿ ಶುಲ್ಕ ಆಗುತ್ತದೆ. ಈ ವರ್ಷದ ವೆಚ್ಚ ಪೂರ್ತಿ ನಾನು ವಹಿಸಿಕೊಳ್ಳುತ್ತೇನೆ ಎಂದು ಹೇಳಿರುವುದರಿಂದ ಊಟದ ಖರ್ಚನ್ನೂ ನಾನು ಕೊಡುತ್ತೇನೆ. ಅವನು ವಾರಾನ್ನ ನಂಬಿಕೊಂಡಿರುವುದು ಬೇಡ. ಮುಂದಿನ ವರ್ಷ ಅವನು ಏನಾದರೂ ಏರ್ಪಾಟು ಮಾಡಿಕೊಳ್ಳಲಿ. ಈ ವರ್ಷ ಹೋಟಲಿನಲ್ಲಿ ಊಟ ಮಾಡಲಿ. ಬೊಂಬಾಯಿ ಆನಂದ ಭವನದಲ್ಲಿ ಹತ್ತೋ ಹನ್ನೊಂದೋ ರೂಪಾಯಿ ಕೊಟ್ಟರೆ ೬೦ ಊಟದ ಚೀಟಿ ಕೊಡುತ್ತಾರೆ. ಮೂವತ್ತು ದಿನ ಎರಡು ಹೊತ್ತೂ ಊಟ ಆಗುತ್ತದೆ. ಎಂಟೊಂಬತ್ತು ತಿಂಗಳು ತಾನೆ? ಅದಕ್ಕೆ ಒಂದು ನೂರು ರೂಪಾಯಿ ಆಗುತ್ತದೆ. ನಿನಗೆ ಇನ್ನೂರೈವತ್ತು ರೂಪಾಯಿಗೆ ಒಂದು ಚೆಕ್ ಕೊಡುತ್ತೇನೆ. ಬ್ಯಾಂಕ್‌ನಲ್ಲಿ ಹಣ ತೆಗೆದುಕೊಂಡು ಹೋಗಿ ಆ ಹುಡುಗನಿಗೆ ಕೊಟ್ಟುಬಿಡು. ಪಾಪ, ಸ್ಕಾಲರ್ಷಿಪ್ ಆಸೆ ತೋರಿಸಿ, ಆಮೇಲೆ ವಿದ್ಯಾಭ್ಯಾಸವೇ ಬೇಡ ಅಂತ ಅನ್ನುವುದು ಯಾವ ನ್ಯಾಯ ? ಬುದ್ಧಿವಂತ ಹುಡುಗ, ಇದೊಂದು ವರ್ಷ ಮುಗಿಸಿದರೆ ಆಮೇಲೆ ಹೇಗೋ ಆಗುತ್ತೆ. ಆದರೆ ನಾನು ಈ ಹಣ ಕೊಟ್ಟೆ ಎಂದು ಹೇಳಬೇಡ'' ಎಂದು ಚೆಕ್ ಬರೆದುಕೊಟ್ಟರು. ನಾನು ''ಅದೆಲ್ಲಾ ಸರಿ. ನೀವು ಕೊಟ್ಟಿರಿ ಎಂದು ಹೇಳದೆ ಹೋದರೆ, ಇಷ್ಟೊಂದು ಹಣ ಎಲ್ಲಿಂದ ಬಂತು ಎಂದು ಹೇಳಲಿ ?'' ಎಂದು ಕೇಳಿದೆ. ಅದಕ್ಕೆ ಅವರು, ''ಏನಾದರೂ ಮಾಡು. ಆದರೆ ಆ ಹುಡುಗ ಮತ್ತೆ ನನ್ನಲ್ಲಿಗೆ ಬರುವ ಅಗತ್ಯವಿಲ್ಲ. ನಾನು ಅವನಿಗೆ ಶುಭ ಕೋರಿದೆ ಎಂದು ಹೇಳಿಬಿಡು'' ಅಂದರು.

ಅವರು ಹೇಳಿದಂತೆಯೇ ಮಾಡಿದೆ. ಆದರೆ ದೇವರಯ್ಯ ಮತ್ತೆ ಇಮಾಮ್ ಅವರನ್ನು ಕಂಡು ಕೃತಜ್ಞತೆ ಹೇಳಬೇಕೆಂದೂ ನಾನು ಅವರನ್ನು ಕರೆದುಕೊಂಡು ಹೋಗಿ ಭೇಟಿ ಮಾಡಿಸಬೇಕೆಂದೂ ಹಠ ಹಿಡಿದರು. ನಾನು ಅದಕ್ಕೆ ಮಣಿಯಬೇಕಾಯಿತು. ದೇವರಯ್ಯ ಅನಂತರ ಮುಂದಿನ ವರ್ಷ ಸ್ಕಾಲರ್ಷಿಪ್ ಪಡೆದು ಬಿ.ಎಸ್‌ಸಿ. ಆನರ್ಸ್ ಮುಗಿಸಿದರು. ಅನಂತರದ ದಿನಗಳಲ್ಲಿ ಅವರು ಕಾಲೇಜಿನಲ್ಲಿ ಅಧ್ಯಾಪಕರಾದರು, ಪ್ರಾಧ್ಯಾಪಕರಾದರು, ಪ್ರಿನ್ಸಿಪಾಲರೂ ಆದರು.

**ಪ್ರೊ ॥ ಜೆ. ಆರ್. ಲಕ್ಷ್ಮಣರಾವ್**
''ಮೈತ್ರಿ'', ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು - ೯

# ಕರ್ನಾಟಕದಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಅನುದಾನ ವ್ಯವಸ್ಥೆ

ಪ್ರೊ॥ ಎ. ಎಂ. ನರಹರಿ

ಕರ್ನಾಟಕವು ಪ್ರಗತಿಗಾಮಿ ರಾಜ್ಯವೆಂದು ಹೇಳಲಾಗುತ್ತದೆ. ಈ ರಾಜ್ಯವು ಅನೇಕ ಆರ್ಥಿಕ ಮತ್ತು ಸಾಮಾಜಿಕ ಮಾದರಿಗಳನ್ನು ನೀಡಿದೆ. ಭೂ ಸುಧಾರಣೆ ಮತ್ತು ಪಂಚಾಯತಿ ವ್ಯವಸ್ಥೆ ಅಂತಹ ಎರಡು ಉದಾಹರಣೆಗಳು. ಆದರೆ ಉನ್ನತ ಶಿಕ್ಷಣದ ಕ್ಷೇತ್ರವನ್ನು ನೋಡಿದರೆ ಅದು ಅನುಕರಣೀಯ ಮಾದರಿಯಂತೆ ತೋರುವುದಿಲ್ಲ. ಹಾಗೆ ನೋಡಿದರೆ, ಕ್ಯಾಪಿಟೇಶನ್ ಶುಲ್ಕ ವಿಧಿಸಿ ಪ್ರವೇಶ ನೀಡುವ ಕ್ಷುದ್ರ ಪರಿಪಾಠವನ್ನು ಆರಂಭಿಸಿದ್ದೇ ಕರ್ನಾಟಕ. ಉನ್ನತ ಶಿಕ್ಷಣವನ್ನು ಜನತೆಯೇ ನಿಭಾಯಿಸಬೇಕೆಂಬ ರಾಜಕೀಯ ತತ್ತ್ವ ನಿರೂಪಣೆಗೊಂಡದ್ದು ಇತ್ತೀಚೆಗಷ್ಟೆ. ಅದಕ್ಕೆ ನೀಡಲಾಗುವ ತರ್ಕವು ಸರಳ ಸುಂದರವೆಂಬಂತೆ ಕಾಣುತ್ತದೆ. ಪ್ರಾಥಮಿಕ ಶಿಕ್ಷಣವನ್ನು ನೀಡಲು ಸಹ ಸಂಪನ್ಮೂಲದ ಕೊರತೆ ಇರುವಾಗ ಇನ್ನು ಉನ್ನತ ಶಿಕ್ಷಣವನ್ನು ಹೇಗೆ ನಿರ್ವಹಿಸಲು ಸಾಧ್ಯ ಎಂಬುದೇ ಆ ತರ್ಕ. ಅಲ್ಲದೆ ೧೫-೨೦ ವಯೋಮಾನದವರ ಪೈಕಿ ಕೇವಲ ೬ರಷ್ಟು ಮಂದಿ ಮಾತ್ರವೇ ಉನ್ನತ ಶಿಕ್ಷಣ ಪಡೆಯುವವರು. ಸಮಾಜದ ಅಷ್ಟು ಚಿಕ್ಕ ಪ್ರಮಾಣದವರಿಗಾಗಿ ನಾವು ಅಷ್ಟೊಂದು ಹಣ ವಿನಿಯೋಗಿಸಲು ಶಕ್ಯವೇ, ಎಂಬುದು ತರ್ಕದ ಸಾರ. ಆದರೆ ಈ ತರ್ಕವು ಜೀವನದ ಮೂಲಭೂತ ತತ್ತ್ವವನ್ನೇ ನಿರಾಕರಿಸುವಂತಿದೆ. ಶಿಕ್ಷಣದ ಉದ್ದೇಶ ಜೀವನವನ್ನು ಅರ್ಥೈಸಿಕೊಳ್ಳುವುದು. ಜ್ಞಾನ ಮತ್ತು ವಿವೇಕ ಎಂಬುವು ಜೀವನದ ಎಲ್ಲ ವಿಭಾಗಗಳನ್ನೂ ಇಡಿಯಾಗಿ ವ್ಯಾಪಿಸುವಂಥವು. ಭೌತಿಕ, ದಾರ್ಶನಿಕ ಹಾಗೂ ಸೌಂದರ್ಯ ಪ್ರಜ್ಞೆ ಇದರಲ್ಲಿ ಅಡಕವಾಗಿದೆ. ವಿಮರ್ಶಾತ್ಮಕ ಚಿಂತನೆಯ ಮೂಲ ಸೆಲೆ ಶಿಕ್ಷಣ. ಈ ಪ್ರಕ್ರಿಯೆಯ ಮುಖಾಂತರವಷ್ಟೇ ಸೃಷ್ಟ್ಯಾತ್ಮಕ ಪ್ರಪಂಚವೊಂದು ತೆರೆದುಕೊಳ್ಳಲು ಶಕ್ಯವಿದೆ.

ದೂಡುತ್ತಿದೆ. ನಮ್ಮ ರಾಜಕೀಯ ವ್ಯವಸ್ಥೆಗೆ ಒಂದು ಕನಿಷ್ಠ ಮಟ್ಟದ ಅರಿವು ಇರಬೇಕಾಗಿತ್ತು; ಇದರಲ್ಲೇನೋ ಯಜಮಾನಿಕೆಯ ಕುತಂತ್ರ ಅಡಗಿದೆ, ಎಂದು. ಶಿಕ್ಷಣ ವ್ಯವಸ್ಥೆಯಲ್ಲಿ ನುರಿತವರೆಂದು ಬೀಗಿಕೊಳ್ಳುವ ನಾವು, ಶಿಕ್ಷಣದ ನೀತಿ ನಿರೂಪಣೆ ಮಾಡುವವರಿಗೆ ಶಿಕ್ಷಣ ನೀಡುವಲ್ಲಿ ಎಲ್ಲೋ ಸೋತಿದ್ದೇವೆಂಬ ಕಳಂಕ ಹೊತ್ತಿದ್ದೇವೆ. ಇತ್ತೀಚೆಗಿನ ಕ್ಯಾನ್‌ಕುನ್ ಸಮಾವೇಶದ ಅನುಭವವು ಜನತೆಯ ದೃಷ್ಟಿಯನ್ನು ತೆರೆಯಿಸಿದೆ ಎಂದು ಭಾವಿಸಲಡ್ಡಿಯಿಲ್ಲ.

ಕರ್ನಾಟಕದ ಅನುದಾನ ವ್ಯವಸ್ಥೆಗೆ ದೀರ್ಘವಾದ ಪರಂಪರೆಯಿದೆ. ಅದರ ಹಿಂದಿನ ತತ್ತ್ವಕ್ಕೆ ಅನೂಚಾನವಾಗಿ ಸಮರ್ಥನೆ ದೊರೆತಿದೆ. ಅದರ ಮೂಲಸೂತ್ರವಿಷ್ಟೆ: ಎಲ್ಲರೂ ಪಡೆಯಲು ಶಕ್ಯವಾಗುವ ಬೆಲೆಗೆ ಮೌಲಿಕವಾದ ಶಿಕ್ಷಣ ನೀಡುವುದು. ಇದಕ್ಕೆ ಚಾರಿತ್ರಿಕ, ಆರ್ಥಿಕ ಮತ್ತು ಸಾಮಾಜಿಕ ಪರಿಪ್ರೇಕ್ಷ್ಯ ಅಥವಾ ಆಕಾಂಕ್ಷೆಗಳಿವೆ. ಸಮಾಜದ ಎಲ್ಲ ವಿಭಾಗಗಳ ಆವಶ್ಯಕತೆಗಳನ್ನು ೨೯೨ ಸಂಸ್ಥೆಗಳು ಪೂರೈಸುತ್ತಾ ಬಂದಿವೆ ಮತ್ತು ಕೆಲವು ಕಾಲೇಜುಗಳು ಶ್ರೇಷ್ಠತೆಯ ಕೇಂದ್ರಗಳಾಗಿ ಖ್ಯಾತಿ ಗಳಿಸಿವೆ. ಲಭ್ಯವಿರುವ ಅಧ್ಯಯನಗಳ ವರದಿಗಳನ್ನಾಧರಿಸಿ ಹೇಳುವುದಾದರೆ ನಮ್ಮ ರಾಜ್ಯದ ವಿದ್ಯಾರ್ಥಿಗಳ ಪೈಕಿ ಶೇ. ೬೦ರಷ್ಟು ಮಂದಿ ಅನುದಾನಿತ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಈ ಶೇಕಡಾವಾರು ಪ್ರಮಾಣವು ಹಲವು ವರ್ಷಗಳಿಂದ ಅದೇ ರೀತಿ ಮುಂದುವರಿದಿದೆ. ರಾಜ್ಯದ ೧೬೮ ಸರ್ಕಾರಿ ಕಾಲೇಜುಗಳಲ್ಲಿ ದಾಖಲಾಗಿರುವವರು ಶೇ. ೧೫-೧೮ ವಿದ್ಯಾರ್ಥಿಗಳು ಮಾತ್ರ. ಈ ಪೈಕಿ ಎಷ್ಟೋ ಕಾಲೇಜುಗಳಲ್ಲಿ ಶೈಕ್ಷಣಿಕ ಸೌಲಭ್ಯದ ಅತ್ಯಗತ್ಯ ಬುನಾದಿಯನ್ನು ಸಹ ಕಲ್ಪಿಸಲಾಗಿಲ್ಲ. ಪುಸ್ತಕ ಭಂಡಾರ, ಪ್ರಯೋಗಾಲಯ, ಅಧ್ಯಾಪಕರು, ಪೀಠೋಪಕರಣಗಳು ಇವುಗಳಲ್ಲೆಲ್ಲಾ ಕೊರತೆ ಇದೆ. ಸಹಜವಾಗಿಯೇ ವಿದ್ಯಾರ್ಥಿಗಳ ಆಯ್ಕೆಯು ತಕ್ಕಮಟ್ಟಿಗೆ ಉತ್ತಮವಾದ ಅವಕಾಶಗಳಿರುವಂತಹ ಕಾಲೇಜುಗಳೇ ಆಗಿರುತ್ತವೆ. ರಾಜ್ಯದಲ್ಲಿ ಸುಮಾರು ೪೫೦ ಅನನುದಾನಿತ ಕಾಲೇಜುಗಳಿವೆ. ಬಹುಮಟ್ಟಿಗೆ ಇವು ರಾಜಕೀಯ, ಮತಧಾರ್ಮಿಕ ಮತ್ತು ಸಾಮಾಜಿಕ ಆಶಯಗಳ ಪೂರೈಕೆಗಾಗಿ ಸ್ಥಾಪಿಸಲ್ಪಟ್ಟಿರುವಂಥವು. ರಾಜ್ಯದ ಶೇ. ೧೫ರಷ್ಟು ವಿದ್ಯಾರ್ಥಿಗಳು ಮಾತ್ರವೇ ಈ ಕಾಲೇಜುಗಳಲ್ಲಿ ಕಲಿಯುತ್ತಿದ್ದಾರೆ. ಅನುದಾನಿತ ಕಾಲೇಜೆಂದರೆ ಸಮಾನ ಉದ್ದೇಶಗಳ ಪೂರೈಕೆಗಾಗಿ ಖಾಸಗಿ ಉಪಕ್ರಮವನ್ನು ಪ್ರೋತ್ಸಾಹಿಸುವುದು ಎಂದರ್ಥ. ಅನುದಾನವು ಸಮಾನತೆ ಮತ್ತು ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುವಲ್ಲಿ ಯಶಸ್ವಿಯಾಗಿದೆ. ಆದರೆ ನಮ್ಮ ರಾಜ್ಯ ಸರ್ಕಾರದ ಅಭಿಪ್ರಾಯ ಇದಕ್ಕೆ ಭಿನ್ನವಾಗಿರುವಂತೆ ಕಾಣುತ್ತದೆ. ಸಂಪನ್ಮೂಲದ ಕೊರತೆಯು ಅನುದಾನ ವ್ಯವಸ್ಥೆಯನ್ನು ಮುನ್ನಡೆಸಿಕೊಂಡು ಹೋಗಲು ಅಡ್ಡಿ ಬರುತ್ತಿದೆಯಾದ್ದರಿಂದ ಕ್ರಮೇಣ ಅದನ್ನು ಕೈಬಿಡಬೇಕೆಂಬುದು ಸರ್ಕಾರದ ಇಂಗಿತವಾಗಿದೆ. ಕಾಲೇಜು ಶಿಕ್ಷಣಕ್ಕಾಗಿ ಬಿಡುಗಡೆ ಮಾಡುತ್ತಿದ್ದ ಅನುದಾನವನ್ನು ಕಡಿತಗೊಳಿಸಲು ಕೈಗೊಳ್ಳಲಾಗಿರುವ ಹಲವು ಕ್ರಮಗಳು ಈ ನೀತಿಯನ್ನು ಅಭಿವ್ಯಕ್ತಿಗೊಳಿಸುತ್ತವೆ. ಅಂತಹ ಕೆಲವು ನೀತಿಗಳನ್ನು ಪಟ್ಟಿ ಮಾಡಬಹುದು :

೧. ೧೯೮೭ರ ನಂತರ ಪ್ರಾರಂಭವಾದ ಕಾಲೇಜುಗಳಿಗೆ ಅನುದಾನವಿಲ್ಲ.

೨. ೧೯೯೦-೯೧ರ ನಂತರ ಹೊಸದಾಗಿ ಆರಂಭಿಸಲಾದ ಪಠ್ಯ ವಿಷಯಗಳ ಬೋಧನೆಗೆ ಅನುದಾನ ನೀಡಲಾಗುತ್ತಿಲ್ಲ.

೩. ೧೯೮೭ರ ನಂತರ ಬೋಧಕೇತರ ನೌಕರಿಗಳನ್ನು ಭರ್ತಿ ಮಾಡಲಾಗುತ್ತಿಲ್ಲ.

೪. ಕೆಲಸದ ಪರಿಮಾಣವನ್ನು ಹೆಚ್ಚಿಸಿ ಎಲ್ಲ ವರ್ಗಗಳ ಬೋಧಕರಿಗೂ ಏಕರೂಪ

ಈಚಿನ ದಿನಗಳಲ್ಲಿ ಶಿಕ್ಷಣ ಮತ್ತು ಆರ್ಥಿಕತೆಗೆ ಸಂಬಂಧ ಕಲ್ಪಿಸುವ ಯತ್ನ ನಡೆದಿದೆ. ಇದು ಸಾಮಾನ್ಯತಃ ವಿಶ್ವದಲ್ಲೆಲ್ಲಾ ಪ್ರಚಲಿತವಿರುವ ಪ್ರವೃತ್ತಿಯಾಗಿಬಿಟ್ಟಿದೆ. ಇದೊಂದು ಕ್ಲಿಷ್ಟಕರವಾದ ಸಮಸ್ಯೆ. ಅದಕ್ಕೆ ಸುಲಭವಾದ ಉತ್ತರ ಸಿಕ್ಕುವುದಿಲ್ಲ. ಇಷ್ಟನ್ನು ಮಾತ್ರ ನಿಖರವಾಗಿ ಹೇಳಬಹುದು. ಶಿಕ್ಷಣವು ಆರ್ಥಿಕತೆಯನ್ನು ಮೀರಿ ನಿಲ್ಲುವ ಸಂಪತ್ತು. ಇಂದಿನ ನಿಜ ಜೀವನದ ಸಂಕೀರ್ಣತೆಯಿಂದಾಗಿ ಶಿಕ್ಷಣ ಮತ್ತು ಆರ್ಥಿಕತೆಯನ್ನು ಪ್ರತ್ಯೇಕಿಸಿ ನೋಡುವುದು ಬಹುಮಟ್ಟಿಗೆ ಅಸಾಧ್ಯವಾಗಿಬಿಟ್ಟಿದೆ. ಆದಾಗ್ಯೂ, ಶಿಕ್ಷಣವು ವ್ಯಾಪಾರಕ್ಕಾಗಿ ಇರಿಸಬಹುದಾದಂತಹ ಸರಕಲ್ಲ ಮತ್ತು ಅದನ್ನು ಅತಿ ಹೆಚ್ಚಿನ ಬೆಲೆ ನೀಡುವವರಿಗೆ ಹರಾಜು ಮಾಡಲಾಗದು ಎಂಬುದು ಸ್ಪಷ್ಟವಿದೆ. ವಿದ್ಯಾರ್ಥಿಯನ್ನು ಗ್ರಾಹಕನೆಂದು ಪರಿಗಣಿಸಲಾಗದು. ಮನಸ್ಸನ್ನು ಅಜ್ಞಾನದಿಂದ ಮುಕ್ತಗೊಳಿಸಿ ವಿವೇಕದತ್ತ ಕೊಂಡೊಯ್ಯುವ ಕ್ರಮವನ್ನು ಮಾರಾಟದ ವಸ್ತುವನ್ನಾಗಿಸಲು ಹೇಗೆ ತಾನೆ ಸಾಧ್ಯ ! ಆರ್ಥಿಕ ಚಿಂತನೆಯ ವಕ್ತಾರರು ಶಿಕ್ಷಣವನ್ನೂ ತಮ್ಮ ತೆಕ್ಕೆಗೆ ಸೇರಿಸಿಕೊಂಡುಬಿಡುವಲ್ಲಿ ಯಶಸ್ವಿಯಾಗಿದ್ದಾರೆ. ಸೇವೆಗಳ ಮಾರಾಟಕ್ಕೆ ಸಂಬಂಧಿಸಿದ ಸಾಮಾನ್ಯ ಒಡಂಬಡಿಕೆ ಮೂಡಿಬಂದಿರುವುದು ಹೀಗೆ. ಅದನ್ನು GATS ಎಂದು ಕರೆಯುತ್ತಾರೆ. ಇದರಲ್ಲಿ ಗಮನಾರ್ಹವಾದೊಂದು ಅಂಶವಿದೆ. ಅದೇನೆಂದರೆ, ಎಲ್ಲ ಅಭಿವೃದ್ಧಿ ಹೊಂದಿದ ದೇಶಗಳೂ ಉನ್ನತ ಶಿಕ್ಷಣಕ್ಕಾಗಿ ಅಪಾರ ಮೊತ್ತವನ್ನು ವ್ಯಯಿಸುತ್ತಿವೆ. ಅದಕ್ಕಾಗಿ ತಮ್ಮ ಆಯವ್ಯಯದಲ್ಲಿ ನಿರ್ದಿಷ್ಟ ಬಾಬ್ತುಗಳನ್ನು ಮೀಸಲಿಟ್ಟಿರುತ್ತವೆ. ಆದರೆ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಬಾಯಿಕಟ್ಟುವ ಕೆಲಸವನ್ನು ಮಾತ್ರ ಜಾಗತಿಕ ವ್ಯವಸ್ಥೆಯ ಹೆಸರಿನಲ್ಲಿ ಮಾಡಲಾಗುತ್ತಿದೆ. ಅದಕ್ಕೆ ಕೆಲವು ನಿರ್ಬಂಧಗಳನ್ನು ಹೇರಲಾಗುತ್ತಿದೆ. ಇದರಲ್ಲಿ ಸಾಮ್ರಾಜ್ಯಶಾಹಿ ಲಕ್ಷಣಗಳು ಸ್ಫುಟವಾಗಿಯೇ ಕಾಣುತ್ತವೆ. ಆದರೆ ಅಸಹಾಯಕತೆಯು ಪ್ರತಿಹತ ಮಾನಸಿಕ ಸ್ಥಿತಿಯತ್ತ ನಮ್ಮನ್ನು

ಉನ್ನತ ಶಿಕ್ಷಣಕ್ಕೆ ಸರ್ಕಾರವು ಹಣವನ್ನು ತೊಡಗಿಸುವ ಕ್ರಮವನ್ನು ಮುಂದುವರಿಸಬೇಕು. ಇದು ಅತ್ಯಗತ್ಯವಾದ ಹಾಗೂ ಕೈಬಿಡಲಾಗದಂತಹ ವಿಚಾರ. ವಿಶ್ವವಿದ್ಯಾಲಯಗಳ ಧಾರಣ ಮತ್ತು ಅಭಿವೃದ್ಧಿಯ ಅವಶ್ಯಕತೆಗಳನ್ನು ಪೂರೈಸಲು ಸರ್ಕಾರವು ತನ್ನ ಮಹತ್ವದ ಜವಾಬ್ದಾರಿಯನ್ನು ಅಂಗೀಕರಿಸುತ್ತಲೇ ಮುಂದುವರಿಯಬೇಕೆಂಬುದು ಸಮಿತಿಯ ದೃಷ್ಟಿಯಾಗಿದೆ.

ಬೋಧನಾ ಅವಧಿಯನ್ನು ವಿಧಿಸಿರುವುದು.

೫. ಪದವಿಪೂರ್ವ ತರಗತಿಗಳನ್ನು ಬೇರ್ಪಡಿಸಿರುವುದು.

೬. ನೇಮಕಾತಿಗಳ ಮೇಲೆ ಸಂಪೂರ್ಣ ತಡೆಯೊಡ್ಡುವುದು.

೭. ಕನಿಷ್ಠ ಸಂಖ್ಯೆಯ ವಿದ್ಯಾರ್ಥಿಗಳು ಪ್ರವೇಶ ಪಡೆದಿಲ್ಲವೆಂಬ ಕಾರಣ ನೀಡಿ ಸಾಂಪ್ರದಾಯಿಕ ಬೋಧನಾ ವಿಷಯಗಳನ್ನು ರದ್ದುಗೊಳಿಸಿರುವುದು.

ಅನುದಾನ ವ್ಯವಸ್ಥೆಯನ್ನು ಕಿತ್ತೊಗೆಯಬೇಕೆಂಬ ಸರ್ಕಾರದ ನಿಲುವು ತೀರಾ ಪ್ರತಿಗಾಮಿತ್ವದ ಸೂಚಕವಾಗಿದೆ. ಅದೊಂದು ಅನಾಹುತವೆಂದರೂ ತಪ್ಪಲ್ಲ. ಸಾಮಾಜಿಕ ರಚನೆ, ಸಾಮಾಜಿಕ ನ್ಯಾಯ ಮತ್ತು ಸಮಾನತೆಗಳಿಗೆ ಇದರಿಂದ ಬಲವಾದ ಪೆಟ್ಟು ಬೀಳುತ್ತದೆ. ಅಲ್ಲದೆ, ಇಪ್ಪತ್ತು ಸಾವಿರಕ್ಕೂ ಹೆಚ್ಚು ಉದ್ಯೋಗಿಗಳ ಸೇವಾ ನಿಯಮಗಳಿಗೆ ಅದು ಧಕ್ಕೆಯನ್ನುಂಟುಮಾಡುತ್ತದೆ. ಶಿಕ್ಷಣ ವ್ಯವಸ್ಥೆಯಲ್ಲಿ ಶಿಕ್ಷಣ ಮತ್ತು ಅಧ್ಯಾಪಕರಿಗೆ ಅನ್ವಯವಾಗುವ ಸೇವಾ ನಿಯಮಗಳು ಅವಿಭಾಜ್ಯವೆಂದು ಪರಿಗಣಿತವಾಗಿವೆ. ಸೇವಾ ಅಭದ್ರತೆಯು ಇಡೀ ಅಧ್ಯಾಪಕ ಸಮೂಹವನ್ನು ನೈತಿಕ ಅಪಕರ್ಷಕ್ಕೆ ದೂಡುತ್ತದೆ. ಅಧ್ಯಾಪಕ ವೃತ್ತಿಗೆ ಪ್ರತಿಭಾವಂತ ಯುವಕರನ್ನು ಆಕರ್ಷಿಸುವ ಸಲುವಾಗಿ ವಿಶ್ವವಿದ್ಯಾಲಯ ಧನ ಸಹಾಯ ಆಯೋಗವು ನಿಗದಿಗೊಳಿಸಿದ ವೇತನ ಶ್ರೇಣಿಯನ್ನು ಜಾರಿಗೆ ತರಲಾಯಿತು. ಆ ಯುವ ಪೀಳಿಗೆಯು ಅಧ್ಯಾಪನ ವೃತ್ತಿಯತ್ತ ಆಸಕ್ತಿ ಮತ್ತು ಭರವಸೆಯ ಕಣ್ಣುಗಳನ್ನು ಹೊರಳಿಸುತ್ತಿದ್ದಾಗಲೆ ಅವಸಾನದ ಗಂಟೆಯನ್ನು ಬಾರಿಸಲಾಗುತ್ತಿರುವುದೊಂದು ದುರಂತ.

ಅಧ್ಯಾಪಕ ಸಮುದಾಯವು ಜವಾಬ್ದಾರಿಯನ್ನು ಹೊರುವುದಿಲ್ಲ ಮತ್ತು ಯಾವ ಬಾಧ್ಯತೆಯನ್ನೂ ಪ್ರಕಟಿಸುವುದಿಲ್ಲವೆಂಬ ಆಪಾದನೆಯೊಂದಿದೆ. ಈ ಸವಾಲುಗಳಿಂದ ತಪ್ಪಿಸಿಕೊಳ್ಳಲು ನಮಗೆ ಸಾಧ್ಯವಿಲ್ಲ. ಅಧ್ಯಾಪಕ ವೃತ್ತಿಯಲ್ಲಿ ಶ್ರೇಷ್ಠತೆ ಮತ್ತು ಯೋಗ್ಯತೆಗಳನ್ನು ಸರ್ವಥಾ ಬಿಟ್ಟುಕೊಡುವಂತಿಲ್ಲ. ಉತ್ತಮ ಮಟ್ಟದ ಶಿಕ್ಷಣಕ್ಕೆ ಕುಮ್ಮಕ್ಕು ಕೊಡಲು ಪರ್ಯಾಯ ಮಾದರಿಗಳನ್ನು ತೋರಿಸಿಕೊಡುವ ಜವಾಬ್ದಾರಿ ಅಧ್ಯಾಪಕ ಸಮುದಾಯಕ್ಕಿದೆ. ಶಿಕ್ಷಕ ಚಳುವಳಿಯ ಸಾಮೂಹಿಕ ನಾಯಕತ್ವವು ಕರ್ನಾಟಕದಲ್ಲಿ ಉನ್ನತ ಶಿಕ್ಷಣದ ಎಲ್ಲ ಆಯಾಮಗಳ ಬಗೆಗೂ ಸಾಕಷ್ಟು ತಿಳಿವಳಿಕೆಯನ್ನು ಮೂಡಿಸಿದೆ. ಉನ್ನತ ಶಿಕ್ಷಣದ ಪರ್ಯಾಯ ಮಾದರಿಯೊಂದನ್ನು ಅದು ಜನತೆಯ ಮುಂದಿರಿಸಿದೆ. ವಿಶ್ವವಿದ್ಯಾಲಯದ ಒಬ್ಬ ಪದವೀಧರನ ಹೆಗ್ಗಳಿಕೆಯ ಬಗೆಗಿನ ಕಲ್ಪನೆಯೊಂದನ್ನು ಅದು ವಿಶದೀಕರಿಸಿದೆ : ''ವಿಶ್ವವಿದ್ಯಾಲಯವೊಂದರಲ್ಲಿ ಕಲಿತ ವಿದ್ಯಾರ್ಥಿಯು ಮೌಲ್ಯಾಧಾರಿತ ಜೀವನ ನಡೆಸಲು ಸಮರ್ಥನಾಗಿರಬೇಕು ; ಇತರರ ಹಿತದ ಬಗ್ಗೆ ಕಾಳಜಿಯನ್ನು ಸ್ಫುಟವಾಗಿ ಮೈಗೂಡಿಸಿಕೊಂಡಿದ್ದು ಆತ ಪರಿಸರವನ್ನು ಕುರಿತಂತೆ ಸೂಕ್ಷ್ಮವೇದಿಯಾಗಿರಬೇಕು ಮತ್ತು ಸಾಮಾಜಿಕ ಜವಾಬ್ದಾರಿಗಳ ತಿಳಿವಳಿಕೆ ಹೊಂದಿರಬೇಕು. ಸ್ವತಂತ್ರವಾಗಿ ಮತ್ತು ತರ್ಕಬದ್ಧವಾಗಿ ಯೋಚಿಸಿ ಕ್ರಿಯಾಶೀಲನಾಗುವ ಸಾಮರ್ಥ್ಯ ಆತನಲ್ಲಿರಬೇಕು. ಅದಕ್ಕೆ ಮಾನವ ಸಂಪನ್ಮೂಲದ ಅಭಿವೃದ್ಧಿಯು ಅವನಿಗೆ ಸಹಾಯಹಸ್ತ ನೀಡುತ್ತದೆ. ಅದರ ಆಸರೆಯಲ್ಲಿ ಆತ ಜನತೆಯ, ವಿಶೇಷತಃ ಸೌಲಭ್ಯಹೀನರ, ಜೀವನದ ಗುಣಮಟ್ಟವನ್ನು ವೃದ್ಧಿಪಡಿಸಲು ಮನಸ್ಸುಳ್ಳವನಾಗಿರಬೇಕು ಮತ್ತು ಅದಕ್ಕಾಗಿ ತನ್ನ ಕಾಣಿಕೆಯನ್ನು ನೀಡುವವನಾಗಬೇಕು.'' ಅಧ್ಯಾಪಕ ಸಂಘಗಳ ಒಕ್ಕೂಟವು ಇಡೀ ಪದವಿ ಶಿಕ್ಷಣ ವ್ಯವಸ್ಥೆಯನ್ನು ಪುನರ್ರಚಿಸಲು ಯೋಜನೆಯೊಂದನ್ನು ತಯಾರಿಸಿಕೊಟ್ಟಿದೆ ಮತ್ತು ಅದು ಶಿಕ್ಷಣ ತಜ್ಞರ ವ್ಯಾಪಕ ಮೆಚ್ಚುಗೆಗೆ ಪಾತ್ರವಾಗಿದೆ.

ನೀತಿ ನಿರೂಪಣೆಯ ಪ್ರಕ್ರಿಯೆಯಿಂದ ಅಧ್ಯಾಪಕರನ್ನು ಹೊರಗಿಡುವುದೊಂದು ದುರಂತ. ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾಗಿರುವ ಯಾವುದೇ ಕಾಲೇಜಿನ ಅಧ್ಯಾಪಕರು ವಿಶ್ವವಿದ್ಯಾಲಯದ ಅಂಗಸಂಸ್ಥೆಗಳ ಸದಸ್ಯರಾಗಲು ಅವಕಾಶವಿಲ್ಲವೆಂಬುದು ದೊಡ್ಡ ವಿಪರ್ಯಾಸವಲ್ಲವೆ ? ಸ್ವತಃ ವಿಶ್ವವಿದ್ಯಾಲಯಗಳು ತಮ್ಮ ಸ್ವಾಯತ್ತತೆಯನ್ನು ಕಳೆದುಕೊಳ್ಳುತ್ತಿರುವುದನ್ನು ಕಾಣುತ್ತಿದ್ದೇವೆ. ಅಂತಹ ಹಿನ್ನೆಲೆಯಲ್ಲಿ ಸ್ವಾಯತ್ತವಾಗಬೇಕೆಂದು ಸರ್ಕಾರವು ಕಾಲೇಜುಗಳ ಮೇಲೆ ಒತ್ತಡ ಹೇರುತ್ತಿರುವುದು ಸೋಜಿಗವೆನಿಸುತ್ತದೆ.

ಮುಖ್ಯವಾಗಿ ಒತ್ತಿ ಹೇಳಬೇಕಾದ್ದು ಸರ್ಕಾರವು ಉನ್ನತ ಶಿಕ್ಷಣದ ಜವಾಬ್ದಾರಿಗಳನ್ನು ಸುಮ್ಮನೆ ಕೊಡವಿಕೊಳ್ಳಲು ಸಾಧ್ಯವಿಲ್ಲವೆಂಬುದನ್ನು. ಉನ್ನತ ಶಿಕ್ಷಣಕ್ಕೆ ತಗಲುವ ಖರ್ಚನ್ನು ಸರ್ಕಾರವು ಪುನರಾದಾನ ಮಾಡಿಕೊಳ್ಳಲು (ಅಂದರೆ, ಮರಳಿ ಪಡೆಯಲು) ಅಡ್ಡಿಯಿಲ್ಲ. ಆದರೆ ಖರ್ಚನ್ನು ಕಡಿಮೆಗೊಳಿಸಿಕೊಳ್ಳುವ ಯೋಜನೆಯನ್ನು ಕೈಬಿಡಬೇಕು. ಅನುದಾನವನ್ನು ಮುಂದುವರಿಸುವುದಲ್ಲದೆ ಅದನ್ನು ವಿಸ್ತರಿಸುವ ಅಗತ್ಯವಿದೆ. ಸಾಮಾನ್ಯ ಜನತೆಗೆ ಉನ್ನತ ಶಿಕ್ಷಣದ ಲಾಭ ದೊರಕುವ ಸಾಧ್ಯತೆ ಅದರಿಂದ ಹೆಚ್ಚಾಗುತ್ತದೆ. ವೃತ್ತಿ ಶಿಕ್ಷಣದ ಬಗ್ಗೆ ವಿಪುಲವಾದ ಮಾತು ಕೇಳಿಬರುತ್ತದೆ. ಅದೊಂದು ನೀರಿನ ಮೇಲಿನ ಗುಳ್ಳೆಯಂತೆ; ಯಾವಾಗ ಬೇಕಾದರೂ ಅದು ಒಡೆದು ಇಲ್ಲವಾಗಬಹುದು. ಅದು ಅನಿವಾರ್ಯವಾದ ಶಿಕ್ಷಣವಲ್ಲ, ಆದರೆ ಆಯ್ಕೆ ಮಾಡಿಕೊಂಡ ಶಿಕ್ಷಣ.

ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ಪುನ್ನಯ್ಯ ವರದಿಯಿಂದ ಕೆಲವು ಮಾತುಗಳನ್ನು ಉದ್ಧರಿಸುತ್ತಾ ನಮ್ಮ ಸಂಕ್ಷಿಪ್ತ ಚರ್ಚೆಯನ್ನು ಮುಕ್ತಾಯ ಮಾಡಬಹುದು.

''ನಮ್ಮ ಚಾರಿತ್ರಿಕ ಹಿನ್ನೆಲೆ, ಅಭಿವೃದ್ಧಿಯ ಈಗಿನ ಹಂತ ಮತ್ತು ಉನ್ನತ ಶಿಕ್ಷಣದ ಪಾತ್ರವನ್ನು ಹಾಗೂ ಪರ್ಯಾಯ ಸಂಪನ್ಮೂಲಗಳಿಂದ ಹಣವನ್ನು ತೊಡಗಿಸುವ ಸಾಧ್ಯತೆ ಮತ್ತು ಜಾಗತಿಕ ಅನುಭವಗಳನ್ನು ಗಮನದಲ್ಲಿರಿಸಿಕೊಂಡು ಸಮಿತಿಯು ಸ್ಪಷ್ಟವಾಗಿ ಪುನರುಚ್ಚರಿಸುವ ಸಂಗತಿ ಇದು : ಉನ್ನತ ಶಿಕ್ಷಣಕ್ಕೆ ಸರ್ಕಾರವು ಹಣವನ್ನು ತೊಡಗಿಸುವ ಕ್ರಮವನ್ನು ಮುಂದುವರಿಸಬೇಕು. ಇದು ಅತ್ಯಗತ್ಯವಾದ ಹಾಗೂ ಕೈಬಿಡಲಾಗದಂತಹ ವಿಚಾರ. ವಿಶ್ವವಿದ್ಯಾಲಯಗಳ ಧಾರಣ ಮತ್ತು ಅಭಿವೃದ್ಧಿಯ ಅವಶ್ಯಕತೆಗಳನ್ನು ಪೂರೈಸಲು ಸರ್ಕಾರವು ತನ್ನ ಮಹತ್ವದ ಜವಾಬ್ದಾರಿಯನ್ನು ಅಂಗೀಕರಿಸುತ್ತಲೇ ಮುಂದುವರಿಯಬೇಕೆಂಬುದು ಸಮಿತಿಯ ದೃಷ್ಟಿಯಾಗಿದೆ.

''ರಾಷ್ಟ್ರಕ್ಕೆ ಶಿಕ್ಷಣವು ಮೂಲಭೂತ ಬುನಾದಿಯೆಂಬುದನ್ನು ಯಾರೂ ನಿರಾಕರಿಸಲಾರರು. ಉನ್ನತ ಶಿಕ್ಷಣವು ದೇಶದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯನ್ನು ನಿರ್ಧರಿಸುತ್ತದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ಮತ್ತು ಸಂಪೂರ್ಣ ಸಾಕ್ಷರತೆಗಳನ್ನು ಸಾಧಿಸಬೇಕಾದ್ದು ದೇಶದ ಆದ್ಯಕರ್ತವ್ಯ. ಅದೇ ಸಮಯದಲ್ಲಿ ಉನ್ನತ ಶಿಕ್ಷಣದಲ್ಲಿ ಜಾಗತಿಕ ಮಟ್ಟವನ್ನು ಸಾಧಿಸುವ ಯತ್ನವನ್ನು ಅಲ್ಲಗಳೆದು ಅದನ್ನು ಕಡೆಗಾಣಿಸುವುದು ಸರ್ವಥಾ ಸಾಧುವಲ್ಲ. ಒಂದು ವಿಭಾಗವನ್ನು ಇನ್ನೊಂದಕ್ಕೆ ಎದುರುಮಾಡಿ, ಶಿಕ್ಷಣವನ್ನು ತುಂಡರಿಸಿ ನೋಡುವ ಮಾದರಿಯಲ್ಲಿ ಅರ್ಥೈಸುವ ಪ್ರವೃತ್ತಿಯನ್ನು ಸಮಿತಿಯು ಅಸಮ್ಮತವೆಂದೆಣಿಸುತ್ತದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಗುಣಮಟ್ಟವು ಹೆಚ್ಚಬೇಕಾದರೆ ಉನ್ನತ ಶಿಕ್ಷಣದ ಗುಣಮಟ್ಟವೂ ಅಷ್ಟೇ ಮುಖ್ಯ. ಮಾಧ್ಯಮಿಕ ಶಿಕ್ಷಣದ ಸವಲತ್ತು ಪಡೆದವರ ಪೈಕಿ ಅದನ್ನು ಮೊಟ್ಟಮೊದಲ ಬಾರಿಗೆ ಪಡೆದವರ ಪೀಳಿಗೆಯೂ ಸೇರಿದೆ. ಅವರು ಪ್ರತಿನಿಧಿಸುವುದು ಹೆಚ್ಚುಹೆಚ್ಚಾಗಿ ಪೆಟ್ಟುಗಳಿಗೆ ಬಲಿಯಾಗುವಂತಹ ಗುಂಪುಗಳನ್ನು. ಅಂಥವರಿಗೆ ಉನ್ನತ ಶಿಕ್ಷಣ ಕೈಗೆಟುಕುವಂತಿರಬೇಕು. ಹಾಗೆ ಮಾಡಿದಾಗ ಮಾತ್ರವೇ ಸಮಾನತೆ ಮತ್ತು ಸಾಮಾಜಿಕ ನ್ಯಾಯಕ್ಕೆ ಪುಷ್ಟಿ ದೊರೆಯಲು ಸಾಧ್ಯ. ಒಂದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವ್ಯಾಪಕ ತಳಹದಿಯ ಶಿಕ್ಷಣವು ಆಕಾಂಕ್ಷೆಗಳ ಹಾಗೂ ಆಶಯಗಳ ಪೂರೈಕೆಗೆ ಸಾಧನವಾಗುತ್ತದೆ. ಈ ಆಕಾಂಕ್ಷೆಗೆ ಬೆಂಬಲ ಸಿಗುವುದು ಉನ್ನತ ಶಿಕ್ಷಣವು ಕೈಗೆಟುಕುವಂತಿದ್ದಾಗ ಎಂಬುದನ್ನು ಮರೆಯದಿರೋಣ.''

ಪ್ರೊ॥ ಎ. ಎಂ. ನರಹರಿ
ಡೀನ್ ಮತ್ತು ಮುಖ್ಯಸ್ಥರು, ವಾಣಿಜ್ಯಶಾಸ್ತ್ರವಿಭಾಗ, ಸೆಂಟ್ ಅಲೋಶಿಯಸ್ ಕಾಲೇಜು, ಮಂಗಳೂರು - ೩




ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನದ ಮುಂದುವರಿದ ಕಾರ್ಯಕ್ರಮದ ಅಂಗವಾಗಿ ನಗರದ ಸೆಂಟ್ ಜಾನ್ಸ್ ಮೆಡಿಕಲ್ ಕಾಲೇಜು ಆಸ್ಪತ್ರೆಯ ಹೊರರೋಗಿ ವಿಭಾಗದಲ್ಲಿ ಒಂದು ವಾರದ ಕಾಲ ವೈದ್ಯಕೀಯ ಪುಸ್ತಕಗಳ ಪ್ರದರ್ಶನ ಮಾರಾಟ ನಡೆಯಿತು. ದಿನಾಂಕ ೧೦.೧೧.೦೩ರಂದು ಆಸ್ಪತ್ರೆಯ ಸಹನಿರ್ದೇಶಕರಾದ ಫಾ॥ ಎಂ.ಪಿ. ಸೆಬಾಸ್ಟಿಯನ್ ಮತ್ತು ಫಾ॥ ಜೇಕಬ್ ತೆಕ್ಕನಾಥ್ ಪ್ರದರ್ಶನ ಉದ್ಘಾಟಿಸಿದರು. ನವಕರ್ನಾಟಕ ಮತ್ತು ವೈದ್ಯಸಾಹಿತ್ಯ ಪರಿಷತ್ತಿನ ಪ್ರತಿನಿಧಿಗಳು ಚಿತ್ರದಲ್ಲಿದ್ದಾರೆ.

# ಭಾರತದಲ್ಲಿ ಉಪದ್ರವವಾಗಿ ಬೆಳೆಯುತ್ತಿರುವ ಮತೀಯ ಪ್ರಕ್ಷೋಭೆಯನ್ನು ತಡೆಗಟ್ಟಲು ಮಾರ್ಗವೇನು ?

ಭಾರತ ಅನೇಕ ಧರ್ಮಗಳನ್ನೊಳಗೊಂಡ, ಆ ಧರ್ಮಗಳು ಹಲವಾರು ಜಾತಿ, ಪಂಗಡ, ಪ್ರಭೇದಗಳನ್ನೊಳಗೊಂಡ ತುಂಬಾ ಸಂಕೀರ್ಣವಾದ ದೇಶ. ಭಾರತವನ್ನು ಜಾತ್ಯತೀತ, ಸರ್ವಧರ್ಮ ಸಹಿಷ್ಣು – ಎಂದೆಲ್ಲಾ ಕರೆಯಲಾಗುತ್ತಿದೆ. ಆದರೆ, ಇಂದು ಭಾರತದಲ್ಲಿ ಮತೀಯ ಗಲಭೆಗಳು ಹೆಚ್ಚಾಗುತ್ತಿವೆ. 'ಮತ' ಅಥವಾ 'ಧರ್ಮ' ಎಂಬುದು ಒಬ್ಬ ವ್ಯಕ್ತಿಯ ಭಾವನಾತ್ಮಕವಾದ ಮತ್ತು ಅತ್ಯಂತ ವೈಯಕ್ತಿಕ ವಿಚಾರ. ವ್ಯಕ್ತಿ 'ಧರ್ಮ'ವನ್ನು ತನ್ನ ವ್ಯಕ್ತಿತ್ವದ ಬೆಳವಣಿಗೆಗೆ, ಅಸ್ತಿತ್ವಕ್ಕೆ, ಸಂತೋಷಕ್ಕೆ, ಆತ್ಮಹಿತಕ್ಕೆ, ತನ್ನದೇ ಒಂದು ಭಾಗ ಎಂಬಂತೆ ಬಳಸುತ್ತಾನೆ. ಇಂಥ ಸೂಕ್ಷ್ಮವಾದ ವಿಚಾರವನ್ನು ಮತಾಂಧರು, ರಾಜಕೀಯ ವ್ಯಕ್ತಿಗಳು, ಕೋಮುವಾದಿಗಳು ತಮ್ಮ ಸಂಕುಚಿತ ಬುದ್ಧಿಯಿಂದ ಸ್ವಾರ್ಥಸಾಧನೆಗೆ ಬಳಸಿಕೊಂಡು, ದೇಶದಲ್ಲೆಲ್ಲಾ ಮತೀಯ ಪ್ರಕ್ಷೋಭೆಯನ್ನುಂಟುಮಾಡುತ್ತಿದ್ದಾರೆ.

ಜನರು ಇಂದು ಮತಾಂಧರಾಗಿ ವೈಚಾರಿಕತೆ, ವ್ಯವಹಾರ ಜ್ಞಾನವನ್ನು ಕಳೆದುಕೊಂಡು ಸ್ವಜಾತಿ, ಸ್ವವರ್ಣವನ್ನು ಆರಾಧಿಸುವುದು; ಯುದ್ಧ, ಆಕ್ರಮಣ, ರಕ್ತಪಾತವನ್ನು ವೈಭವೀಕರಿಸುವುದು ಸಾಮಾನ್ಯವಾಗಿದೆ. ಕೆಲವರು ಏಕಪಕ್ಷ, ಏಕಪಕ್ಷೀಯ ಧೋರಣೆಯನ್ನು ಎಲ್ಲೆಡೆ ಬೆಳೆಸುತ್ತಿದ್ದಾರೆ. ದೇಶದಲ್ಲೆಲ್ಲಾ ಕ್ರೌರ್ಯದ ಪರಂಪರೆ ಬೆಳೆಯುತ್ತಿದೆ. ದೇಶದ ರಾಜಕೀಯ ಹದಗೆಟ್ಟು ಮನುಷ್ಯರೆಲ್ಲ ರಾಕ್ಷಸರಾಗಿ ಎಲ್ಲೆಲ್ಲೂ ಹಣ, ಅಧಿಕಾರ, ಸ್ವಾರ್ಥವೇ ಪರಮೋದ್ದೇಶವಾಗಿದೆ. ಒಂದೆಡೆ ಅಯೋಧ್ಯೆಯಲ್ಲಿ ಬಾಬರಿ ಮಸೀದಿಯನ್ನು ನೆಲಸಮಗೊಳಿಸಿ ಆ ಮೂಲಕ ಪುರಾಣದ 'ರಾಮ'ನನ್ನು ಐತಿಹಾಸಿಕಗೊಳಿಸುವ ಮೌಢ್ಯತೆ; ಇನ್ನೊಂದೆಡೆ, ಗುಜರಾತಿನಲ್ಲಿ ಸಾವಿರಾರು ಮಂದಿ ಅಲ್ಪಸಂಖ್ಯಾತರನ್ನು ರಕ್ತದ ಮಡುವಿನಲ್ಲಿ ಮುಳುಗಿಸಿದ ಘಟನೆ; ಮತ್ತೊಂದೆಡೆ, ಸಮರಸದ ತಾಣವಾಗಿದ್ದ ಬಾಬಾಬುಡನ್‌ಗಿರಿಯಲ್ಲಿ ಅಶಾಂತಿ ಉಂಟುಮಾಡುತ್ತಿರುವುದು – ಹೀಗೆ ದೇಶದಾದ್ಯಂತ ಕೋಮು ಉನ್ಮಾದ ಕೆರಳಿಸುತ್ತಿರುವ ಮತಾಂಧರ ವಿರುದ್ಧ ನಾವಿಂದು ವಿವೇಕದ ಯುದ್ಧ ಸಾರಬೇಕಿದೆ.

ಹಿಂದು, ಮುಸ್ಲಿಂ, ಕ್ರೈಸ್ತ ಇತರ ಯಾವುದೇ ಧರ್ಮವಾಗಲಿ ಅದು ದ್ವೇಷಕ್ಕೆ ಗುರಿಯಾಗಬೇಕಿಲ್ಲ. ದೇಶದಾದ್ಯಂತ ಹಿಂದುತ್ವದ ಹೆಸರಿನಲ್ಲಿ ಅಲ್ಪಸಂಖ್ಯಾತರ ಧಾರ್ಮಿಕ ಅನನ್ಯತೆಯನ್ನು ಹಾಗೂ ಅವರ ಹಕ್ಕು ಬಾಧ್ಯತೆಯನ್ನು ಕಸಿದುಕೊಳ್ಳುವುದು ಯಾವ ನ್ಯಾಯ ? ಧರ್ಮದ ಹೆಸರಿನಲ್ಲಿ ಭಾವುಕರಾಗಿ ಹೊಡೆದಾಡದೆ, ನಮ್ಮಲ್ಲೇ ಅಡಗಿರುವ ಪರಂಪರಾಗತ ಜಡತ್ವ, ಮೌಢ್ಯ, ಜಾತಿಪದ್ಧತಿ, ನಿರುದ್ಯೋಗ, ಅನಕ್ಷರತೆ, ಬಡತನದ ವಿರುದ್ಧ ಪ್ರಗತಿಪರ ಹೋರಾಟ ಮಾಡಿ, ದೇಶವನ್ನು ಅಭಿವೃದ್ಧಿ ಪಥದೆಡೆಗೆ ನಡೆಸುವುದೇ ಎಲ್ಲರ ಕರ್ತವ್ಯ. ಈ ನಿಟ್ಟಿನಲ್ಲಿ ಸರ್ವರ ಸಮಾನತೆಗೆ, ಸರ್ವೋದಯದ ಗುರಿಯ ಕಡೆಗೆ, ಕೋಮುವಾದಿ ಶಕ್ತಿಗಳ ವಿರುದ್ಧ ಎಲ್ಲರ ಚಿಂತನೆಯನ್ನು, ಕ್ರಿಯೆಯನ್ನು ಹರಿಸಬೇಕಾದದ್ದು ನಮ್ಮೆಲ್ಲರ ಅತ್ಯಂತ ಜರೂರಿನ ಕೆಲಸ.

ಮನುಷ್ಯನಲ್ಲಿ ಪ್ರೀತಿ, ಸ್ನೇಹ, ಕ್ರೌರ್ಯ, ಹಿಂಸೆ ಇವೆಲ್ಲಾ ಸಹಜವಾದವು. ಆದರೆ, ಮನುಷ್ಯ ಪ್ರೀತಿ, ಸ್ನೇಹ, ವಿಶ್ವಾಸ, ಸಹಕಾರ – ಇವುಗಳನ್ನು ರೂಢಿಸಿಕೊಂಡು ಹಿಂಸೆಯನ್ನು ತ್ಯಜಿಸಿ, ಮಾನವೀಯತೆಯಿಂದ ಬದುಕಬೇಕು. ಒಂದು ಧರ್ಮದವರು ಮತ್ತೊಂದು ಧರ್ಮದವರನ್ನು ಪ್ರೀತಿಸಿ, ಗೌರವಿಸಬೇಕು. ರಾಜಕಾರಣಿಗಳು ತಮ್ಮ ಸಂಕುಚಿತ ಸ್ವಾರ್ಥವನ್ನು ಕೈಬಿಡಬೇಕು. ಸಂಘ ಪರಿವಾರ ಹಿಂದುತ್ವದ ಹೇರಿಕೆ ನಿಲ್ಲಿಸಬೇಕು. ಮುಸ್ಲಿಮರು ವೈಚಾರಿಕವಾಗಿ ಆಲೋಚಿಸುವುದನ್ನು ಕಲಿಯಬೇಕು. ಕ್ರೈಸ್ತರು ಬಲವಂತವಾಗಿ ಮತಾಂತರಗೊಳಿಸುವುದನ್ನು ನಿಲ್ಲಿಸಬೇಕು. ದೇಶದ ಜನರೆಲ್ಲಾ ಸಮರಸದಿಂದ ಸಹಬಾಳ್ವೆ ಮಾಡಬೇಕು. ಹಾಗೆ ಮಾಡಲು ಎಲ್ಲೆಲ್ಲೂ ಅಕ್ಷರದ ಕ್ರಾಂತಿ, ವಿಚಾರಕ್ರಾಂತಿ ಉಂಟಾಗಬೇಕು. ಶಾಲೆಗಳಲ್ಲಿ ಧರ್ಮ ಸಹಿಷ್ಣುತೆಯ ಪಾಠ ಕಲಿಸಬೇಕು. ಮನೆ ಮನೆಗಳಲ್ಲಿ 'ದೇಶದ ಪ್ರಜೆಗಳೆಲ್ಲ ಒಂದೇ' ಎಂಬ ಮನೋಭಾವ ಬೆಳೆಸಬೇಕು. ದೇವರು, ಧರ್ಮವನ್ನು ಮನೆ ಮನಗಳಲ್ಲಿ ಇಟ್ಟುಕೊಳ್ಳುವುದರ ಬದಲು ಬೀದಿಗೆ ತಂದು ನಿಲ್ಲಿಸಿ, ಕತ್ತಿ

*"ಭಾರತದಲ್ಲಿ ಉಪದ್ರವವಾಗಿ ಬೆಳೆಯುತ್ತಿರುವ ಮತೀಯ ಪ್ರಕ್ಷೋಭೆಯನ್ನು ತಡೆಗಟ್ಟಲು ಮಾರ್ಗವೇನು" ಎಂಬುದನ್ನು ಕುರಿತಂತೆ ಇನ್ನೂರು ಪದಗಳಲ್ಲಿ ತಮ್ಮ ಅಭಿಪ್ರಾಯ ತಿಳಿಸಲು ಓದುಗರಲ್ಲಿ ವಿನಂತಿಸಿಕೊಂಡಿದ್ದೆವು. ನಮಗೆ ಬಂದ ಪ್ರತಿಕ್ರಿಯೆಗಳಲ್ಲಿ ಕೆಲವನ್ನು ಆಯ್ದು ಪ್ರಕಟಿಸುತ್ತಿದ್ದೇವೆ. – ಸಂಪಾದಕರು*

# ಇನ್ನೊಂದು ವಿಶ್ವ ಸಾಧ್ಯ



**ಮ. ಶ್ರೀ. ಮುರಳಿ ಕೃಷ್ಣ**

**ಜಾ**ಗತೀಕರಣವೆನ್ನುವುದು ಒಂದು ಹೊಸ ಬೆಳವಣಿಗೆಯಲ್ಲ, ಅದು ಹಲವು ಶತಮಾನಗಳಿಂದ ಚಾಲ್ತಿಯಲ್ಲಿರುವ ಒಂದು ಪ್ರಕ್ರಿಯೆ. ಪ್ರಪಂಚದ ವಿವಿಧ ಭಾಗಗಳ ಜನರ ನಡುವೆ ಎಂದು ಪರಸ್ಪರ ವಾಣಿಜ್ಯ, ವ್ಯಾಪಾರ ಹಾಗೂ ಇತರ ಬಗೆಯ ವಿನಿಮಯಗಳು ಶುರುವಾದವೋ ಅಂದಿನಿಂದ ಇದು ಅಂಕುರವಾಯಿತು. ಸಮುದ್ರ ಮಾರ್ಗಗಳನ್ನು ಕಂಡುಹಿಡಿದ ನಂತರ ಜಾಗತೀಕರಣಕ್ಕೆ ಹೊಸ ಚಾಲನೆ ಸಿಕ್ಕಿತೆಂದು ಕೆಲವು ವಿಶೇಷಜ್ಞರ ಅಭಿಮತ.

ಆದರೆ ಪ್ರಸ್ತುತ ನಾವು ಕಾಣುತ್ತಿರುವ ಜಾಗತೀಕರಣದ ರೂಪುರೇಷೆಗಳೇ ಬೇರೆ. ಅದರ ಹಿಂದಿರುವ ಶಕ್ತಿಗಳೇ ಬೇರೆ. ಅದನ್ನು ಸಾಮ್ರಾಜ್ಯಶಾಹಿ ಜಾಗತೀಕರಣ ಎಂದು ಈಜಿಪ್ಟ್‌ನ ಚಿಂತಕ ಸಮೀರ್ ಅಮೀನ್ ಗುರುತಿಸುತ್ತಾರೆ. ಅವರ ಪ್ರಕಾರ ಅದು ಸಾಮ್ರಾಜ್ಯಶಾಹಿಯ ಮೂರನೇ ಘಟ್ಟ. ವಿಶ್ವದ ಪೋಲಿಸ್ ಪೇದೆ ಅಮೆರಿಕದಂಥ ಬಲಾಢ್ಯ ರಾಷ್ಟ್ರಗಳ ಸಾರಥ್ಯದಲ್ಲಿ ಅದು ತೃತೀಯ ಜಗತ್ತಿನ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯನ್ನು ಬುಡಮೇಲು ಮಾಡುತ್ತಿದೆ. ಈ ರಾಷ್ಟ್ರಗಳು ಅಂತರರಾಷ್ಟ್ರೀಯ ಸಂಸ್ಥೆಗಳಾದ ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ವಿತ್ತನಿಧಿ, ಜಾಗತಿಕ ವ್ಯಾಪಾರ ಸಂಸ್ಥೆ ಮುಂತಾದುವುಗಳನ್ನು ಸಮರ್ಥವಾಗಿ ಬಳಸಿಕೊಳ್ಳುತ್ತಾ ಬಂದಿವೆ. ಹಾಗೆಯೇ, ಬಹುರಾಷ್ಟ್ರೀಯ ಕಂಪನಿಗಳಿಗೂ ಸಹಾಯಹಸ್ತ ನೀಡಿ ವಿಶ್ವಾದ್ಯಂತ ಅವುಗಳ ವ್ಯಾಪಾರ ವೃದ್ಧಿಯಾಗಲು ಹಲವು ಬಗೆಯ ಯೋಜನೆಗಳನ್ನು ರೂಪಿಸುತ್ತಿವೆ. ಅನೇಕ ಸಣ್ಣ ಬಡ, ತೃತೀಯ ಜಗತ್ತಿನ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಮೂಗು ತೂರಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳು ಯಾವ ರೀತಿಯ ಅಡೆತಡೆಗಳಿಲ್ಲದೆ ಈ ರಾಷ್ಟ್ರಗಳಲ್ಲಿ ತಳವೂರಲು ಸಹಕರಿಸುತ್ತಿವೆ.

ಬಡ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಆರ್ಥಿಕ ನೆರವು ನೀಡುವಾಗ ಅಂತರರಾಷ್ಟ್ರೀಯ ಸಂಸ್ಥೆಗಳು ಕಠಿಣ ಷರತ್ತುಗಳನ್ನು ಹಾಕುತ್ತವೆ. ಅವುಗಳಲ್ಲಿ ಸಾರ್ವಜನಿಕ ಕ್ಷೇತ್ರದ ಸಂಸ್ಥೆಗಳನ್ನು ಖಾಸಗೀಕರಣಗೊಳಿಸಬೇಕು ಹಾಗೂ ಆಂತರಿಕ ಮಾರುಕಟ್ಟೆ ತೆರೆಯಬೇಕು ಎಂಬುವು ಮುಖ್ಯವಾದುವು. ಮಾರುಕಟ್ಟೆ ಶಕ್ತಿಗಳು ಆರ್ಥಿಕ ವ್ಯವಸ್ಥೆಯ ಆಗು-ಹೋಗುಗಳನ್ನು ನಿರ್ಧರಿಸಬೇಕೆಂದು ಅವು ತಾಕೀತು ಮಾಡುತ್ತವೆ. ಎಲ್ಲಾ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ಜಾರಿಮಾಡಬೇಕೆಂದು ಸೂಚನೆ ನೀಡುತ್ತವೆ. ಸಾಲದ ಶೂಲಕ್ಕೆ ಸಿಲುಕುವ ರಾಷ್ಟ್ರಗಳು ಒಂದೊಂದಾಗಿ ಈ ಸಂಸ್ಥೆಗಳ ನಿರ್ದೇಶನಗಳಂತೆ ನೀತಿಗಳನ್ನು ಜಾರಿಮಾಡುತ್ತವೆ. ಜಾಗತೀಕರಣದಲ್ಲಿ ಲಾಭಗಳಿಸುವುದೇ ತಾರಕ ಮಂತ್ರ. ಇದರಿಂದ ಹಲವು ಸಾಮಾಜಿಕ ಕಲ್ಯಾಣ ಯೋಜನೆಗಳಿಗೆ ಅರ್ಧಚಂದ್ರ. ವಿಶ್ವದ ಬಂಡವಾಳಿಗರು ಒಂದಾಗಿ ತಮ್ಮ ಯೋಜನೆಗಳನ್ನು ಸಾಕಾರಗೊಳಿಸಲು ಜಾಗತೀಕರಣವನ್ನು ಬಳಸಿಕೊಳ್ಳುತ್ತಾ ಬಂದಿರುವುದನ್ನು ಕಾಣಬಹುದು.

ಈ ರೀತಿಯ ಜಾಗತೀಕರಣದಿಂದ ಹಲವು ರಾಷ್ಟ್ರಗಳ ವಿವಿಧ ಕ್ಷೇತ್ರಗಳ ಮೇಲೆ ಅಪರಿಮಿತ ದುಷ್ಪರಿಣಾಮಗಳು ಉಂಟಾಗಿವೆ. ನಮ್ಮ ರಾಷ್ಟ್ರದಲ್ಲೂ ಅನೇಕ ಬಗೆಯ ನಕಾರಾತ್ಮಕ ಬೆಳವಣಿಗೆಗಳಾಗಿವೆ. ಅಸಂಖ್ಯ ಕಾರ್ಖಾನೆಗಳು, ಸಣ್ಣ ಕೈಗಾರಿಕೆಗಳು ಮುಚ್ಚಿ ಲಕ್ಷೋಪಲಕ್ಷ ಕಾರ್ಮಿಕರು ಬೀದಿ ಪಾಲಾಗಿದ್ದಾರೆ. ಸಾರ್ವಜನಿಕ ಕ್ಷೇತ್ರದ ಘಟಕಗಳನ್ನು ಸ್ವೇಚ್ಛೆಯಿಂದ ಖಾಸಗೀಕರಣಗೊಳಿಸಲಾಗುತ್ತಿದೆ. ಲಾಭ ಮಾಡುತ್ತಿರುವ ಸಾರ್ವಜನಿಕ ಕ್ಷೇತ್ರದ ಸಂಸ್ಥೆಗಳನ್ನೂ ಸಾರಾಸಗಟಾಗಿ ಖಾಸಗೀಕರಣದ ಪ್ರಕ್ರಿಯೆಗೆ ಒಳಪಡಿಸಲಾಗಿದೆ. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಕ್ರಮೇಣ ನಿಶ್ಶಕ್ತಿಗೊಳಿಸಲಾಗುತ್ತಿದೆ. ಕೃಷಿಕ್ಷೇತ್ರ ಸಹಾಯಧನದ ಕಡಿತವನ್ನು ಕಂಡಿದೆ. ಇತ್ತೀಚಿನ ವರ್ಷಗಳಲ್ಲಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ಸಾಮಾನ್ಯ ಸಂಗತಿಯಾಗುತ್ತಿರುವುದು ಕಳವಳಕಾರಿ ಬೆಳವಣಿಗೆ. ಹಲವು ವಸ್ತುಗಳ ಮೇಲೆ ಆಮದಿನ ನಿರ್ಬಂಧ ಸಡಿಲಿಸಿರುವುದರಿಂದ ದೇಶೀಯ ಮಾರುಕಟ್ಟೆ ಶಿಥಿಲವಾಗುತ್ತಿದೆ. ಈ ರೀತಿಯ ಋಣಾತ್ಮಕ ಬೆಳವಣಿಗೆಗಳು ತೃತೀಯ ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಆಗುತ್ತಿರುವುದು ಗಮನಾರ್ಹ.

ಈ ಜಾಗತೀಕರಣದ ವಿರುದ್ಧ ವಿಶ್ವಾದ್ಯಂತ ಹಲವು ರೀತಿಯ ಪ್ರತಿಭಟನೆಗಳಾಗುತ್ತಿವೆ. ಇವು ಒಂದು ಆಂದೋಳನದ ರೂಪ ಪಡೆಯುತ್ತಿರುವ ಎಲ್ಲಾ ಸೂಚನೆಗಳು ಕಂಡುಬರುತ್ತಿವೆ. ಪ್ರಪಂಚಾದ್ಯಂತ ಜನಪರ ಸಂಘಟನೆಗಳು ಜಾಗತೀಕರಣದಿಂದ ಸಾಮಾಜಿಕ ಹಾಗೂ ಆರ್ಥಿಕ ನ್ಯಾಯ ಮತ್ತು ಸುಸ್ಥಿರ ಏಳಿಗೆ ಸಾಧ್ಯವಿಲ್ಲವೆಂದು ಅರಿತು ಸ್ವಾವಲಂಬನಾಧಾರಿತ ಹಾಗೂ ಜನಕೇಂದ್ರಿತ ಪರ್ಯಾಯ ಮಾದರಿಗಳನ್ನು ಹುಡುಕುವುದರಲ್ಲಿ ನಿರತವಾಗಿವೆ. ಇವುಗಳ ಹಿನ್ನೆಲೆಯತ್ತ ಗಮನಹರಿಸೋಣ....

ಶ್ರೀಮಂತ ಹಾಗೂ ಬಲಾಢ್ಯ ರಾಷ್ಟ್ರಗಳು ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಜಾಗತಿಕ ಆರ್ಥಿಕ ವೇದಿಕೆಯನ್ನು ಸ್ಥಾಪಿಸಿದವು. ಅದರ ಮುಖ್ಯ ಗುರಿಯೆಂದರೆ ಅಭಿವೃದ್ಧಿಶೀಲ ಹಾಗೂ ಸಾಲದ ಹೊರೆಯಿಂದ ತತ್ತರಿಸುತ್ತಿರುವ ರಾಷ್ಟ್ರಗಳ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳನ್ನು ಲೂಟಿ ಮಾಡುವುದು. ಇದಕ್ಕೆ ಪೂರಕವಾಗಿ ಅದು ತನ್ನ ಕಾರ್ಯಸೂಚಿಯನ್ನು ರೂಪಿಸುತ್ತದೆ. ಪ್ರತಿ ವರ್ಷ ಸ್ವಿಟ್ಸರ್‌ಲ್ಯಾಂಡ್‌ನ ದಾವೋಸ್‌ನಲ್ಲಿ ಸಭೆ ಸೇರಿ ಸೂಕ್ತವಾದ ಕಾರ್ಯಕ್ರಮಗಳನ್ನು ಜಾರಿಮಾಡುವುದರ ಬಗ್ಗೆ ಚರ್ಚೆಯಾಗುತ್ತದೆ. ಜನವರಿ ೨೦೦೦ರಲ್ಲಿ ಸುಮಾರು ೫೦ ಮಂದಿಯ ಒಂದು ಸಣ್ಣ ಗುಂಪು ಸೇರಿ ಜಾಗತಿಕ ಆರ್ಥಿಕ ವೇದಿಕೆಯ ಜಾಗತೀಕರಣ ಪ್ರೇರಿತ ಆರ್ಥಿಕ ನೀತಿಗಳು ಹಾಗೂ ಇತರ ಹುನ್ನಾರಗಳ ವಿರುದ್ಧ ವಿಸ್ತೃತ ನೆಲೆಯಲ್ಲಿ ಹೋರಾಡಲು ನಿಶ್ಚಯ ಮಾಡಿತು. ಅದರಲ್ಲಿ ಕಾರ್ಮಿಕರು, ಕೃಷಿಕರು, ಬುದ್ಧಿಜೀವಿಗಳು, ಚಿಂತಕರು, ಮಹಿಳೆಯರು ಹಾಗೂ ಇತರ ಕ್ಷೇತ್ರಗಳ ಕಾರ್ಯಕರ್ತರಿದ್ದರು. ನಂತರದ ವರ್ಷಗಳಲ್ಲಿ ವಾಷಿಂಗ್‌ಟನ್, ಪ್ರಾಗ್, ದಾವೋಸ್, ಕ್ಯೂಬೆಕ್, ಗೋತೆನ್‌ಬರ್ಗ್, ಜಿನೀವ ಹಾಗೂ ಇತರ ಸ್ಥಳಗಳಲ್ಲಿ ಜಾಗತೀಕರಣದ ವಿರುದ್ಧ ಐತಿಹಾಸಿಕ ಪ್ರತಿಭಟನಾ ಪ್ರದರ್ಶನಗಳು ಜರುಗಿದವು. ಮುಂದುವರಿದ ಬಂಡವಾಳಶಾಹಿ ರಾಷ್ಟ್ರಗಳು ಹೇರುತ್ತಾ ಬಂದಿರುವ ಆರ್ಥಿಕ ಹಾಗೂ ಆಡಳಿತ ನಿಯಮಾವಳಿಗಳನ್ನು ಪ್ರಶ್ನಿಸಲು ಹಾಗೂ ಜಾಗತೀಕರಣದ ಕರಾಳ ಅಟ್ಟಹಾಸದ ಮುನ್ನಡೆಗೆ ತಡೆಯೊಡ್ಡಲು ವಿಶ್ವದಾದ್ಯಂತ ಕಾರ್ಮಿಕರು, ಕೃಷಿಕರು, ದಲಿತರು,

> **ಬೃಹತ್ ಸ್ವರೂಪದ ಜಾಗತೀಕರಣದ ಪರವಾದ ಶಕ್ತಿಗಳನ್ನು ಎದುರಿಸಲು ಬಹುಮುಖ ಹೋರಾಟ ಅನಿವಾರ್ಯ. ಇಂತಹ ಜಾಗತಿಕ ಸಂಘಟನೆಯಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಇರುವುದು ಸಹಜ. ಆದ್ದರಿಂದ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ, ಚಳುವಳಿಯನ್ನು ಮುಂದುವರೆಸುವುದು ಇಂದಿನ ತುರ್ತು.**

ಎರಡನೆಯದಾಗಿ, ಬೆಳಗಾಗೆದ್ದರೆ ಟಿ.ವಿ.ಯಲ್ಲಿ ಕಾಣಸಿಗುವ ಧಾರ್ಮಿಕ ಪ್ರವಚನಗಳಿಗೆ ತಡೆಹಾಕಬೇಕು. ರೇಡಿಯೋದಲ್ಲಿ ಪ್ರತಿದಿನವೂ ಹಿಂದೂ ಭಕ್ತಿಗೀತೆಗಳನ್ನು ಪ್ರಸಾರ ಮಾಡಿ, ಶುಕ್ರವಾರ ಮುಸ್ಲಿಮರಿಗೆ, ಭಾನುವಾರ ಕ್ರಿಶ್ಚಿಯನ್ನರ ಸನ್ನುತಿ ಗೀತೆಗೆ ಅವಕಾಶ ನೀಡಬೇಕೆ ? ಎಲ್ಲಾ ಮತದವರೂ ಪ್ರತಿದಿನ ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸುವುದಿಲ್ಲವೆ ? ಈ ಪಕ್ಷಪಾತವೇಕೆ ?

ಟಿ.ವಿ.ಗಳಲ್ಲಿ ಧರ್ಮಗುರುಗಳ ಪೀಠಾರೋಹಣ, ಹುಟ್ಟುಹಬ್ಬ, ವಿಶೇಷಪೂಜೆ ಇತ್ಯಾದಿಗಳ ನೇರಪ್ರಸಾರವನ್ನು ನಿಷೇಧಿಸಬೇಕು. ಗುಡಿ, ಮಸೀದಿ, ಚರ್ಚುಗಳಿಂದ ತುಂಬಿ ಹೋಗುತ್ತಿರುವ ನಮ್ಮ ದೇಶದಲ್ಲಿ ಇನ್ನಾದರೂ ಹೊಸ ಹೊಸದಾಗಿ ಪೂಜಾಮಂದಿರಗಳನ್ನು ನಿರ್ಮಿಸುವುದಕ್ಕೆ ತಡೆಹಾಕಬೇಕು.

ಇನ್ನು ಮತೀಯ ಗುರುಗಳು, ಶ್ರೀಗಳು – ಇವರು ತಮ್ಮ ಚಟುವಟಿಕೆಗಳನ್ನು, ತಮ್ಮ ಮಠಗಳಿಗೆ, ಪೂಜೆ ಪುನಸ್ಕಾರಗಳಿಗೆ, ಸೀಮಿತಗೊಳಿಸಬೇಕು. ಅದನ್ನು ಮರೆತು ರಾಜಕೀಯ ರಂಗಕ್ಕೆ ಪ್ರವೇಶ ಮಾಡಿದರೆ ಅಲ್ಲಿ ಕೋಮುವಾದ ಬೆಳೆಯದೆ ಇನ್ನೇನು ಮಾಡೀತು ? ಸಾರ್ವಜನಿಕರೂ ಸಹ ಅವರನ್ನು ಸಾಮಾಜಿಕ ಕಾರ್ಯಕ್ರಮಗಳಿಗೆ ಎಳೆದು ತರುವುದನ್ನು ನಿಲ್ಲಿಸಬೇಕು.

ಪ್ರತಿ ಜಾತಿಗೂ, ಅದರೊಳಗಿನ ಉಪಜಾತಿಗಳು, ಒಳಪಂಗಡಗಳಿಗೂ ಒಂದೊಂದು ಮಠ, ಪೀಠ, ಪೀಠಾಧಿಪತಿಗಳು – ಹೀಗೇ ಬೆಳೆಯುತ್ತಾ ಹೋಗುತ್ತಿದೆ. ಇದಲ್ಲದೆ ಆ ಜಾತಿಗಳ ಹೆಸರಿನಲ್ಲಿ ಸಂಘಸಂಸ್ಥೆಗಳೂ ಹೆಚ್ಚಾಗುತ್ತಿವೆ. ಯಾವುದೇ ಧರ್ಮ ಅಥವಾ ಜಾತಿಯ ಹೆಸರಿನಲ್ಲಿ ಸಂಘಸಂಸ್ಥೆಗಳನ್ನು ಸ್ಥಾಪಿಸಿ, ಭವನಗಳನ್ನು ಕಟ್ಟುವುದನ್ನು ನಿಲ್ಲಿಸಬೇಕು.

ಈ ನಿಟ್ಟಿನಲ್ಲಿ ವಿದ್ಯಾಸಂಸ್ಥೆಗಳು ಮತ್ತು ಶಿಕ್ಷಕ, ಶಿಕ್ಷಕಿಯರು ಮಾಡಬೇಕಾದುದು ಗುರುತರವಾದ ಕೆಲಸ. ಸಣ್ಣ ವಯಸ್ಸಿನಲ್ಲಿ ಭಾವನೆಗಳು ಮನಸ್ಸಿಗೆ ನಾಟುವಂತೆ, ದೊಡ್ಡವರಾದ ಮೇಲೆ ನಾಟುವುದು ಕಷ್ಟ; ಪೂರ್ವಗ್ರಹಗಳನ್ನು ಅಳಿಸುವುದೂ ಬಹಳ ಕಷ್ಟ. ಶಿಕ್ಷಕ, ಶಿಕ್ಷಕಿಯರು ದೇಶದ ಒಗ್ಗಟ್ಟಿನ ಸಲುವಾಗಿ ಕೋಮುಗಳ ಬಗ್ಗೆ ಪ್ರಸ್ತಾಪ ಮಾಡುವುದನ್ನು ತೊಡೆದುಹಾಕಿ, 'ನಾವೆಲ್ಲಾ ಒಂದು, ನಮ್ಮಲ್ಲಿ ಹರಿಯುವ ರಕ್ತ ಒಂದೇ' ಎಂಬುದನ್ನು ಮಕ್ಕಳಿಗೆ ತಿಳಿಯಹೇಳಬೇಕು. ಆಗಲೇ ಸೌಹಾರ್ದಯುತ, ನಿರ್ಭೀತ ಜೀವನ ಸಾಧ್ಯ.

ದೇಶದ ಹಿತವನ್ನು ಬಯಸುವ ಸದಾಶಯ ಉಳ್ಳವರು ಮೇಲೆ ಹೇಳಿದ ಕ್ರಮಗಳನ್ನು ರೂಢಿಗೆ ತರಲು ಒಂದು ಚಳವಳಿ ನಡೆಸುವುದು ಯುಕ್ತವಾದೀತು.

**ವಿದ್ಯಾಶಂಕರ್**
'ಮೈತ್ರಿ' (ಮಹಡಿ), ೧೨ನೇ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು - ೫೭೦ ೦೦೯

**ಯಾ**ವುದೇ ದೇಶ ತಾನು ಇರಿಸಿಕೊಂಡಿರುವ ಗುರಿಯನ್ನು ಮುಟ್ಟುವ ಸನ್ನಾಹದಲ್ಲಿ ಹಲವು ಅಡ್ಡಗಳು ಬರುವುದು ಸ್ವಾಭಾವಿಕ. ಅಂತೆಯೇ ಈ ತೆರನಾದ ಸಮಸ್ಯೆಗಳೇ ಅಭಿವೃದ್ಧಿಯ ಮಾರ್ಗದರ್ಶಿ ಕೂಡ. ಆದರೆ ಮತೀಯ ವಿಚಾರಗಳ ಹುಟ್ಟಿಗೆ ಕೈ ಹಾಕುವಾಗ ಆ ಜನರ ಅಥವಾ ಸಂಘಟನೆಯ ಉದ್ದೇಶಗಳನ್ನು ಅರಿಯುವುದು ಅತ್ಯವಶ್ಯ. ಆರೋಗ್ಯಕರವಾದ ಸಮಾಜದ ಬದುಕನ್ನು ಅಸ್ತವ್ಯಸ್ತಗೊಳಿಸುವ ವ್ಯವಸ್ಥಿತವಾದ ಹುನ್ನಾರವನ್ನು ಹಣಿಯುವರು ಅಕ್ಷರ ಸಂಸ್ಕೃತಿ ಬಲ್ಲಂಥ ಸಮ್ಮಂತವರೆ ಎಂಬುದು ಕೂಡ ಸುಸ್ಪಷ್ಟವಾಗುತ್ತಿದೆ.

ಹಲವು ನಾಗರಿಕತೆಗಳ ತೊಟ್ಟಿಲಾದ ಏಷಿಯಾ ಖಂಡ ಸಂಪನ್ಮೂಲಗಳ ಗಣಿ, ಅತ್ಯಂತ ಜನಸಾಂದ್ರತೆಯುಳ್ಳ ಪ್ರದೇಶ. ಬದುಕಿಗೆ ಅತ್ಯಂತ ಸುಂದರ ವಾತಾವರಣ ಪರಿಸರ ವೈಪರೀತ್ಯವನ್ನು ಹೊಂದಿದೆ. ಇದನ್ನು ಅರಸಿಯೇ ಇತರೆ ಖಂಡದ ಜನ ಇಲ್ಲಿಗೆ ನುಗ್ಗಿದರು, ಭಾರತವನ್ನು ಲೂಟಿ ಹೊಡೆದರು, ತಮ್ಮ ವಸಾಹತು ಸ್ಥಾಪಿಸಿದರು. ಈ ನಡುವೆ ಹೇಗೋ ಒತ್ತಡ ಹೇರಿ ಸ್ವಾತಂತ್ರ್ಯ ಪಡೆದಾಯಿತು. ಆದರೆ, ಸ್ವಾತಂತ್ರ್ಯದ ಬದುಕು ಇವರಿಗೆ ವರವಾಗಲಿಲ್ಲ, ಶಾಪವೆನಿಸಿತು. ಅಂತರ್ ಯುದ್ಧಗಳು ಜಾತಿ-ಜನಾಂಗದ ಕಲಹಗಳು ಇಂದಿಗೂ ಮುಂದುವರಿದು ಪ್ರಕ್ಷೋಭೆಯನ್ನುಂಟುಮಾಡುತ್ತಿರುವುದನ್ನು ಕಾಣಬಹುದಾಗಿದೆ.

ಈ ಶತಮಾನದ ಅತ್ಯಂತ ದಾರುಣವಾದ ಘಟನೆ ಎಂದರೆ ಗುಜರಾತಿನ ನರಮೇಧವಾಗಿದೆ. ಇದಕ್ಕೆ ಪ್ರಮುಖ ಕಾರಣ ಮತೀಯ ನಿಲುವೇ ಆಗಿದೆ. ಇಂತಹ ಬರ್ಬರ ಘಟನೆಗಳನ್ನು ಮಟ್ಟಹಾಕಲು ಅಥವಾ ತಡೆಗಟ್ಟಲು ಈ ಕೆಳ ಕಾಣಿಸಿದ ಮಾರ್ಗಗಳು ಪೂರಕವಾಗಬಹುದೆಂದು ನನ್ನ ಎಣಿಕೆ.

೧. ಕಡ್ಡಾಯ ಮತ್ತು ಉಚಿತ ಶಿಕ್ಷಣವನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸುವುದು.
೨. ಮೀಸಲಾತಿಯನ್ನು ತೆಗೆದುಹಾಕುವುದು, ಪ್ರತಿಭೆ ಗುರುತಿಸಿ ಗುರುತರ ಜವಾಬ್ದಾರಿ ನೀಡುವುದು.
೩. ಅನಿಷ್ಟ ಸಂಪ್ರದಾಯ ಹಾಗೂ ಗುಂಪುಗಾರಿಕೆಯ ಪುರೋಹಿತ ನಿಲುವುಗಳನ್ನು ವ್ಯವಸ್ಥಿತವಾಗಿ ಸುಧಾರಿಸುವುದು.
೪. ಪಟ್ಟಭದ್ರ ಹಿತಾಸಕ್ತಿಗಳ ಪ್ರಚೋದನಕಾರಿ ಸಂದೇಶಗಳಿಗೆ ಕಿವಿಗೊಡದಂತೆ ಶ್ರೀಸಾಮಾನ್ಯನನ್ನು ಜಾಗೃತಗೊಳಿಸುವುದು.
೫. ಬಡತನದ ಬವಣೆಗಿಂತ ಮತೀಯ ವಿಷಯಗಳು ಚರ್ಚೆಯಾಗುವುದನ್ನು ಖಂಡಿಸಿ, ಬಹುಸಂಖ್ಯಾತರ ಪರವಾಗಿ ಬುದ್ಧಿಜೀವಿಗಳೆನಿಸಿಕೊಂಡವರು ನಿಲ್ಲುವುದು.

# ದಿವ್ಯಯಾನದ ಕೊಂಡಿಯೇ



**ಹೆ**ಣ ಚಿಗಿತ ಎಲುವಿನಲಿ ಬಿಸಿ ಹೊಯ್ದ ಎರಕದಲಿ
ಸೂತಕದ ಹಾಡುಗಳು ಹಾಡುತಿವೆ ಕಣಿವೆಯಲಿ
ಹೊರಳು ದಾರಿಯ ಮೇಲೂ ಉಮ್ಮಳಿಕೆ ಉಬ್ಬರಿಕೆ
ತೆವಳುತಿವೆ ದುಃಖಗಳು ನಿರ್ವಾತ ಸಂದಿಯಲಿ

ಯಾವ ಹೂವಿನ ಪರಾಗವಿದು, ಯಾವ ದುಂಬಿಯ ರಾಗವಿದು
ಯಾವ ಸೌಖ್ಯದ ಕೊನೆಯಾಸರಿದು, ಯಾವ ಯಾತನೆಯ ಆರಂಭವಿದು
ತಿರುಗು ಭೂಮಿಯು ಹೊರಳಿ ಹೋಗುವ ಕಣ್ಣ ನೋಟದ ಕತ್ತಿ ಮೊನೆಯೇ
ಮಿಂಚು ಬಳುಕುವ ಬಳ್ಳಿ ಬಳುಕಲಿ ಜಾರು ನೀರಿನ ಪಾಚಿ ನೆಲವೇ

ತಂಪು ಚಂದ್ರನ ಕಂಪು ಗಾಳಿಗೆ ಎದೆಯ ಪುಪ್ಪಸ ಉಬ್ಬಿತೆ
ರಂಪರಾಣದ ಕ್ರಿಮಿಗಳಾಟದ ಉಗುಳು ಲೋಳೆಯ ಗೆದ್ದಿತೆ
ದೂರಗಗನದ ಬಿಂದು ಕರಗುತ ಹಂಗಿನಾಟವೆ ಮುಗಿಯಿತೆ
ಚಿಗುರು ಚಿಗುರಿಗೆ, ಹೂವು ಹೀಚಿಗೆ ಮುಗಿಯಿತೆ ? ಹಣ್ಣುಕನಸಿಗೆ ಜಗಿಯಿತೆ

ಹೆಣದ ಬಟ್ಟೆಯ ಹೊದ್ದು ನಡೆಯುವ ದಿವ್ಯಯಾನದ ಕೊಂಡಿಯೆ
ಕಂಡ ಬದುಕಿಗು ಕಾಣದಾಯಿತೆ ಕಾಣದಾ ತುದಿ ಕೂಡಿಕೆ
ಎಲ್ಲ ಬಿರುಕಿನ ಆಳ ಕತ್ತಲು ತಡಕುತಿದೆ ಒಳ ಅಂಗಳ
ನಡೆದ ಬಳಲಿಕೆಗಲ್ಲಿ ಕೇಳಿತೆ ಕೊನೆಯ ಹಾಡಿನ ಮಂಗಳ

**ಚಂದ್ರಶೇಖರ ತಾಳ್ಯ**
ತರ್ಕಶಾಸ್ತ್ರ ಉಪನ್ಯಾಸಕರು, ಕೆ. ಎಸ್. ಜ್ಯೂನಿಯರ್ ಕಾಲೇಜು, ಹೊಳಲ್ಕೆರೆ-೫೭೭ ೫೨೬

೬. ಮತೀಯ ವಿಷಯಗಳನ್ನು ಭಾವನಾತ್ಮಕವಾಗಿ ತೆಗೆದುಕೊಳ್ಳದೆ ವೈಚಾರಿಕ ತಳಹದಿಯ ಮೇಲೆ ನಿಲ್ಲುವಂತೆ ಅಣಿಗೊಳಿಸುವುದು.
೭. ಮತ-ಧರ್ಮಗಳಲ್ಲಿ ಉದ್ಧಾರಕ್ಕಿಂತ ವಿಹ್ವಲಗೊಳಿಸುವ ಸಂಗತಿಗಳೇ ಹೆಚ್ಚು ಎಂಬುದನ್ನು ಕಾರ್ಯಕರ್ತರಿಗೂ ತಿಳಿಸುವುದು.
೮. ಮತೀಯ ಸಂಘಟನೆಗಳ ನೋಂದಣಿಯನ್ನು ಇನ್ನಿಲ್ಲದಂತೆ ಮಾಡಿ ಅದಕ್ಕೆ ಜನಜಾಗೃತಿಯನ್ನುಂಟುಮಾಡುವ ಅಭಿಯಾನವನ್ನೇರ್ಪಡಿಸುವುದು.
೯. ಸಂವಿಧಾನಬದ್ಧವಾಗಿ ಅಂಥವುಗಳನ್ನು ತಿದ್ದುಪಡಿ ಮಾಡುವುದನ್ನು ನಿಷೇಧಿಸುವುದು.
೧೦. ಕಾನೂನಿನ ಪರಿಧಿಯನ್ನು ಮೀರಿ ನಡೆವ ಮತೀಯವಾದಿಗಳನ್ನು ಬಂಧಿಸುವುದು.
೧೧. ಹತಾಶ ಮನೋಭಾವದವರನ್ನು ಗುರುತಿಸಿ, ಪ್ರೋತ್ಸಾಹಿಸುವ ಯೋಜನೆಗಳನ್ನು ಅನುಷ್ಠಾನಕ್ಕೆ ತಂದು, ಮತೀಯ ಭ್ರಾಂತಿಯನ್ನು ತೊಲಗಿಸುವುದು ಇದಕ್ಕೆ ಮದ್ದು.
೧೨. ಈ ನೆಲೆಯಲ್ಲಿ ಭಾರತದ ಪ್ರಗತಿಗೆ ಅಡ್ಡಿ ಆತಂಕಗಳನ್ನು ಉಂಟುಮಾಡುತ್ತಿರುವ ಎನ್ನುವುದಕ್ಕಿಂತ, ಮಾಡಿಸುತ್ತಿರುವ ಹಣದ ಥೈಲಿ ಹರಿಸುವವರನ್ನು ಬದಲಾಯಿಸುವ ಕೆಲಸ ಬಹಳ ತುರ್ತಾಗಿ ಆಗಬೇಕಾಗಿದೆ.

**ಕೆ. ಎಂ. ಪಂಚಾಕ್ಷರಯ್ಯ**
''ಮಾನಸ ಕುಟೀರ'' ನಂ. ೧೯೬೫/೩೬ ಪಿ-೧, ೩ನೇ ತಿರುವು
ವಿನಾಯಕ ಬಡಾವಣೆ, ವಿದ್ಯಾನಗರ, ದಾವಣಗೆರೆ - ೫೭೭ ೦೦೫

---

**ಮ**ತಧರ್ಮಗಳ ನೆಪದಲ್ಲಿ ಜರಗುವ ಘರ್ಷಣೆಗಳಿಗೆ ಧಿಕ್ಕಾರವಿರಲಿ. ಅವುಗಳ ಹಿಂದಿರುವ ಜನರಲ್ಲಿ ಆಧ್ಯಾತ್ಮ ಭಾವ ಇಲ್ಲವೆಂಬುದು ಸರ್ವವಿದಿತ. ಇಂತಹ ಗಲಭೆಗಳು ಜರಗುವುದು ಆತ್ಮಶುದ್ಧಿ ಇಲ್ಲದಾಗ, ಆತ್ಮ ಕಲುಷಿತಗೊಂಡಾಗ. ಇದನ್ನು ಓದಿದ ತಕ್ಷಣ ಅವು ಯಾರ ಮಾತುಗಳು ಎಂಬುದು ಅರಿವಾಗುತ್ತದೆ. ಅವರೇ ಭಾರತ ಭಾರತೀಯ ವೀರಪುತ್ರ ಸ್ವಾಮಿ ವಿವೇಕಾನಂದರು. ಅವರು ಸರ್ವಧರ್ಮ ಸಮ್ಮೇಳನದಲ್ಲಿ ಭಾರತೀಯ ಪರಂಪರೆಯನ್ನು, ಅದರ ಅಗಣಿತ ಧರ್ಮ ಆಧ್ಯಾತ್ಮವನ್ನು ಎತ್ತಿ ಹಿಡಿದವರು.

ಆದರೆ ನಮ್ಮ ನಿರ್ಭಾಗ್ಯವೋ, ನಮ್ಮ ನೈತಿಕ ಅಧಃಪತನದ ಮುನ್ಸೂಚನೆಯೋ ಗೊತ್ತಿಲ್ಲ. ಮತ್ತೊಮ್ಮೆ ಭಾರತಮಾತೆ ವಿವೇಕಾನಂದರಂತಹವರಿಗೆ ಜನ್ಮ ನೀಡುವಳೇ ? ಅವರೇನಾದರೂ ಇದ್ದಿದ್ದರೆ ಗುಜರಾತದ ಹೃದಯವಿದ್ರಾವಕ ಹತ್ಯಾಕಾಂಡ ಖಂಡಿತ ನಡೆಯುತ್ತಿರಲಿಲ್ಲ.

ಆದರೆ ಶಿಶುನಾಳ ಶರೀಫರು ಗುರು ಗೋವಿಂದರೂ ತಂದೆ ಮಕ್ಕಳ ಹಾಗೇ ಬಾಳಿದ ನಮ್ಮ ಪವಿತ್ರ ನಾಡಿನಲ್ಲಿ ಇಂದು ನಾವು ಏನು ಮಾಡುತ್ತಿದ್ದೇವೆ ?

ಬಸವಣ್ಣನವರು ಪ್ರತಿಪಾದಿಸಿದ ಹೊಸ ಧರ್ಮ ವ್ಯವಸ್ಥೆಯನ್ನು, ಗಾಂಧೀಜಿಯವರ ಅಹಿಂಸೆಯನ್ನು ಎಲ್ಲಿಗೆ ತೂರಿಬಿಟ್ಟಿದ್ದೇವೆ ? ಜಾಗತೀಕರಣದ ಅಬ್ಬರದಲ್ಲಿ ತನ್ನತನವನ್ನು ಮಾರಿಕೊಳ್ಳುತ್ತಿರುವ ನಾಯಕರು ಒಮ್ಮೆ ತಮ್ಮ ಅಸ್ತಿತ್ವದ ಶೀತಲತೆಯಿಂದ ಹೊರಬಂದು ನೋಡಬಾರದೆ – ನೋವಿನ ಕಣ್ಣುಗಳನ್ನು, ಬೆಂದ ಹೃದಯಗಳನ್ನು, ವಿಕೃತ ಶರೀರಗಳನ್ನು ? ಆ ನತದೃಷ್ಟರು ನಮ್ಮ ಹಾಗೇ ಮನುಷ್ಯರಲ್ಲವೇ ?

ಎಷ್ಟೋ ದಶಕಗಳಿಂದ ಮನುಷ್ಯ-ಮನುಷ್ಯರನ್ನೇ ಪ್ರತ್ಯೇಕಿಸುತ್ತಾ ಬಂದಿರುವ ಈ ಚಾತುರ್ವರ್ಣ್ಯದ ಪದ್ಧತಿ ನಮಗೆ ಬೇಕೇ ? ನಮಗೆ ಬೇಡವಿದ್ದರೂ, ಚುನಾವಣೆಯನ್ನು ನಡೆಸಿ ಮಿನಿ ಜಲೀಯನ್‌ವಾಲಾ ಬಾಗ್ ಮಾಡಲು ಖಂಡಿತಾ ಬೇಕಾಗಬಹುದೇನೋ ?

ಕೇವಲ ಮೂಲಭೂತವಾದವನ್ನು ತಮ್ಮ ಅಸ್ತ್ರವನ್ನಾಗಿಸಿಕೊಂಡಿರುವ ಸಮಾಜ ವಿರೋಧಿ ಶಕ್ತಿಗಳಿಗೆ ಧಿಕ್ಕಾರ ಹೇಳಬೇಕಿದೆ. ಎಳ್ಳಷ್ಟೂ ಮೇಲ್ಮುಖ ಕೆಳಮುಖ ಚಲನೆ ಇರದ ನಮ್ಮ ಸಮಾಜದಲ್ಲಿನ ಮೌಢ್ಯತೆಗಳ ವಿರುದ್ಧ ಜನಾಂದೋಲನ, ಸಾಮಾಜಿಕ ಕ್ರಾಂತಿಗಳು ಜರುಗಬೇಕಾಗಿದೆ.

ನಮ್ಮಲ್ಲಿ ಗಾಳಿ, ನೀರು, ಉಸಿರಿನಲ್ಲಿ ಬೆರೆತುಹೋಗಿರುವ ಜಾತಿ-ಮತಗಳನ್ನು ಒಂದು ಮುಖ್ಯ ವಾಹಿನಿಯಲ್ಲಿ ಸಮೀಕರಿಸಿಕೊಂಡು ಹೋಗುವ (ಎಲ್ಲ ಧರ್ಮೀಯರಿಗೂ ಅನ್ವಯವಾಗುವಂತೆ) ಏಕರೂಪ ನಾಗರಿಕ ಸಂಹಿತೆ ಜಾರಿಗೆ ಬರಬೇಕು.

ಸಂವಿಧಾನಾತ್ಮಕವಾಗಿ ನಾವು ನಮ್ಮ ರಾಷ್ಟ್ರವನ್ನು ಜಾತ್ಯತೀತ ಎಂದು ಘೋಷಿಸಿದ ಮೇಲೂ ಮಾನವನ ರಕ್ತದೋಕುಳಿಯಾಡುತ್ತಿರುವವರೆಗೆ ರವರವ ನರಕ ಕಾದಿದೆ.

ಇದಕ್ಕೆಲ್ಲಾ ಕಾರಣಗಳೇನು ? ಈ ವರ್ಣ, ಜಾತಿ, ವರ್ಗ ತಾರತಮ್ಯಗಳು ಅನಿವಾರ್ಯವೇನಲ್ಲ.

ನೋಡಿ, ಇಂದು ಆ ದೇವರಿಗಾಗಿ, ರಾಮನಿಗಾಗಿ, ಅಲ್ಲಾನಿಗಾಗಿ ಎಷ್ಟು ಗಲಭೆಗಳು ? ಅಯೋಧ್ಯೆ ವಿವಾದ ಏತಕ್ಕಾಗಿ ? ಸರ್ಕಾರಗಳು ಬಂದರೂ ಹೋದರೂ ಈ ವಿವಾದ ಮತ್ತಷ್ಟು ಮೆರುಗು ಪಡೆಯುತ್ತಿದೆ.

ನಮಗೆ ಮಂದಿರ ಮಸೀದಿ ಬೇಡವೆಂದು ಸ್ವತಃ ಆ ದೇವರೇ ಬಂದು ಹೇಳಿದರೂ ಕೇಳುವ ತಾಳ್ಮೆ ಕೆಲವರಿಗಿಲ್ಲ. ದೇವರ ಮೇಲಿರುವ ಭಕ್ತಿ ಅವರಿಗೆ ಮುಖ್ಯವಲ್ಲ. ದೇವರು ಆಸ್ತಿಯ ರೂಪ ಪಡೆಯುತ್ತಿದ್ದಾನೆ.

ಪ್ರೀತಿ ಇಲ್ಲದ ಮೇಲೆ ಹೂ ಅರಳೀತು ಹೇಗೆ ?

ಪ್ರೀತಿ ಇಲ್ಲದ ಮೇಲೆ ಯುದ್ಧ ನಿಂತೀತು ಹೇಗೆ ? ಹೂ ಅರಳಲೂ ಯುದ್ಧ ನಿಲ್ಲಲೂ ಬೇಕಾದ ಅಗತ್ಯವಾಗಿರುವುದು ಪ್ರೀತಿ ಎನ್ನುವ ಪುಟ್ಟ ಪದ ಮಾತ್ರ. ಅಣುಬಾಂಬುಗಳ ತಯಾರಿಕೆಯ ಹಿಂದೆ ಇರುವ ಸ್ವಾರ್ಥದ ಮಾನವವಿರೋಧಿ ಮನೋಭೂಮಿಕೆ ಭಯಾನಕ.

ವರ್ಣಭೇದ ನೀತಿ ವಿರುದ್ಧ ಹೋರಾಡಿ ೨೭ ವರ್ಷ ಜೈಲುವಾಸದ ಅನುಭವ ನೆಲ್ಸನ್ ಮಂಡೇಲಾರಿಗೆ ಏಕೆ ಬೇಕಿತ್ತು? ರಾಜಾರಾಮ ಮೋಹನರಾಯ್ ಅವರಿಗೆ ಬೇಕಿತ್ತಾ ಸ್ತ್ರೀ ಶೋಷಣೆಯ ವಿರುದ್ಧ ಧ್ವನಿ ಎತ್ತುವುದು ?

ಈ ದೊಡ್ಡ ದೊಡ್ಡ ಜೀವಗಳ ಹಿಂದೆ ಇದ್ದದ್ದು ಜಾತಿ, ಮತಗಳ ಕಥೆಯಲ್ಲ. ಬದಲಾಗಿ ಪ್ರೀತಿಯ ಕಥೆ. ಅವರು ಧಿಕ್ಕರಿಸಿದ್ದು ಮೂಲಭೂತವಾದವನ್ನು. ಆ ನಿಟ್ಟಿನಲ್ಲಿ ನಾವೆಲ್ಲರೂ ಒಂದಾಗೋಣ.

**ಎ. ಪಿ. ಇಂಡಿ**
ಕೇರಾಫ್ : ಬಿ.ಎಸ್.ಎಸ್. ಕಾಲೇಜು, ಗಜೇಂದ್ರಗಡ

---

**ವಿ**ಶಾಲವಾದ ಭಾರತ ದೇಶದಲ್ಲಿ ಪ್ರತಿಯೊಂದು ಧರ್ಮಕ್ಕೂ ತನ್ನದೇ ಆದ ಇತಿಹಾಸವಿದೆ. ಭಾರತದಂತೆ ವಿವಿಧ ಧರ್ಮ, ಭಾಷೆ, ಸಂಸ್ಕೃತಿಗಳನ್ನು ಹೊಂದಿರುವ ದೇಶ ಮತ್ತೊಂದಿಲ್ಲ.

ಇಷ್ಟೆಲ್ಲಾ ಜಾತಿ, ಧರ್ಮ, ವಿವಿಧ ಸಂಸ್ಕೃತಿಗಳಿದ್ದರೂ, ಇಲ್ಲಿರುವ ಎಲ್ಲಾ ಜನಗಳು ಒಗ್ಗಟ್ಟಾಗಿಯೇ ಇದ್ದರು. ಆದರೆ, ಕಳೆದ ಒಂದು ದಶಕದ ಇತಿಹಾಸವನ್ನು ತಿರುಗಿ ನೋಡಿದಾಗ, ಅದು ಅಯೋಧ್ಯೆಯ ವಿಷಯವಾಗಿರಬಹುದು, ಅಥವಾ ಗುಜರಾತ್‌ನಲ್ಲಿ ನಡೆದ ಗಲಭೆಗಳಾಗಿರಬಹುದು, ಅವನ್ನು ಗಮನಿಸಿದರೆ ಭಾರತದಲ್ಲಿರುವ ಹಿಂದೂ ಮುಸ್ಲಿಂರ ಬಾಂಧವ್ಯದ ನಡುವೆ ಬಿರುಕು ಮೂಡುತ್ತಿರುವ ಎಲ್ಲಾ ಸೂಚನೆಗಳು ಕಂಡು ಬರುತ್ತವೆ. ಪರಿಸ್ಥಿತಿಯನ್ನು ಇನ್ನೂ ಗಮನಿಸಿ ನೋಡಿದಾಗ, ಇಲ್ಲಿರುವ ಯಾವೊಬ್ಬ ಹಿಂದೂವಿಗೂ ಮುಸ್ಲಿಂರ ಮೇಲೆ ದ್ವೇಷವಿಲ್ಲ, ಹಾಗೆಯೇ ಯಾವೊಬ್ಬ ಮುಸ್ಲಿಂನಿಗೂ, ಹಿಂದೂಗಳ ಮೇಲೆ ದ್ವೇಷ ಅಸೂಯೆಗಳಿಲ್ಲ. ಹೀಗಿದ್ದೂ ಉಂಟಾಗುತ್ತಿರುವ ಕೋಮುಗಲಭೆಗಳಿಗೆ ಕೆಲವೊಂದು ರಾಜಕೀಯ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ರಾಜಕೀಯದ ಬೇಳೆ ಬೇಯಿಸಿಕೊಳ್ಳಲು, ಹಿಂದೂ ಮುಸ್ಲಿಂರ ನಡುವೆ ಇರುವ ಸಾಮರಸ್ಯವನ್ನು ಕೆಡುವಂತೆ ಮಾಡುತ್ತಿವೆ.

ಮಂದಿರ-ಮಸೀದಿಗಳಿಗೆ ಹೊಡೆದಾಡುವುದನ್ನು ಬಿಟ್ಟು ದೇಶದಲ್ಲಿ ತಾಂಡವ ವಾಡುತ್ತಿರುವ ಬಡತನ, ಅನಕ್ಷರತೆ, ಅನಭಿವೃದ್ಧಿಗಳ ಕಡೆಗೆ ಇಂದಿನ ಯುವಪೀಳಿಗೆ ಗಮನ ಕೊಡಬೇಕು.

ಮೌಢ್ಯತೆಗೂ ಬಡತನಕ್ಕೂ, ಅನಕ್ಷರತೆಗೂ ನೇರ ಸಂಬಂಧವಿರುವುದರಿಂದ, ಮೌಢ್ಯತೆಯ ಹೊರದೂಡಿದಲ್ಲದೆ, ಬಡತನ, ಅನಕ್ಷರತೆ, ನಿವಾರಣೆಯಾಗಲಾರವು. ಬಡತನ ಅನಕ್ಷರತೆ ಎಲ್ಲಿಯವರೆಗೂ ನಿವಾರಣೆಯಾಗಲಾರವೋ ಅಲ್ಲಿಯವರೆಗೆ, ಇಂತಹ ಮತೀಯ ಗಲಭೆಗಳು ಉಂಟಾಗುತ್ತಲೇ ಇರುತ್ತವೆ.

ಹಳೆಯ ಮತಗಳನ್ನು ಬಿಟ್ಟು ಮನುಜ ಮತಕ್ಕೆ ಸೇರಿದಾಗ ಮಾತ್ರ ಈ ದೇಶದಲ್ಲಿ ಶಾಂತಿ ನೆಲೆಸುತ್ತದೆ ಎಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ದೇಶದಲ್ಲಿ ನಡೆಯುತ್ತಿರುವ ಅಶಾಂತಿ, ಅನಭಿವೃದ್ಧಿಗೆ, ರಕ್ತಪಾತಕ್ಕೆ, ಹಳೆಯ ಮತಗಳೇ ಕಾರಣ ಎಂದು ಕುವೆಂಪುರವರು ತಮ್ಮ ಆಕ್ರೋಶವನ್ನು ಹಿಂದೆಯೇ ವ್ಯಕ್ತಪಡಿಸಿದ್ದಾರೆ.

**ಜಿ. ಎಂ. ರೇಷ್ಮಾ**
ನಂ. ೫, ಚಂದ್ರಕಲಾ ಕಾಂಪ್ಲೆಕ್ಸ್, ಅಲಂಕಾರ ಚಿತ್ರಮಂದಿರದ ಹತ್ತಿರ,
ಪಾವಗಡ (ಅಂಚೆ) - ೫೬೧ ೨೦೨, ತುಮಕೂರು ಜಿಲ್ಲೆ

ಮಸೆಯುವುದನ್ನು ಬಿಟ್ಟುಬಿಡಬೇಕು. ವಿದ್ಯಾವಂತರು ತಮ್ಮ ಸಂಕುಚಿತ ಬುದ್ಧಿಯನ್ನು ಬದಿಗಿಟ್ಟು ಸರ್ವರ ಹಿತ ಕುರಿತು ಆಲೋಚಿಸಬೇಕು. ಹೀಗಾದಾಗ ದೇಶದಲ್ಲೆಲ್ಲ ಶಾಂತಿ, ನೆಮ್ಮದಿ ಉಂಟಾಗುತ್ತದೆ. ಈ ಕುರಿತು ನಾವೆಲ್ಲ ಆಲೋಚಿಸಿ ಕ್ರಿಯಾಶೀಲರಾಗೋಣ.

ಸುಜಾತ
೧೭೭, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೮೯

ಇಂದು ಮತೀಯ ಕ್ಷೋಭೆ ಹೆಚ್ಚಾಗುತ್ತಿರುವುದಕ್ಕೆ ಅನೇಕ ಕಾರಣಗಳಿವೆ. ಜಾತಿ, ಭಾಷೆ, ಧರ್ಮ, ಗಡಿಗಳನ್ನು ಮುಂದಿಟ್ಟುಕೊಂಡು ಜಗಳಕ್ಕಿಳಿಯುವ ಸಂಕುಚಿತತೆ ಹೆಚ್ಚಾಗಿದೆ. ರಾಜಕಾರಣಿಗಳೂ ಇವನ್ನೇ ಉದ್ದೀಪಿಸುವ ನೆಲೆಯಲ್ಲಿ ಉದ್ವೇಗದ ರಾಜಕಾರಣ ಮಾಡಿ, ಅದರ ಮೂಲಕವೇ ಓಟು ಗಿಟ್ಟಿಸುವ ಹುನ್ನಾರ ಮಾಡುತ್ತಿದ್ದಾರೆ. ಸೇವೆ-ಸಮಚಿತ್ತ- ಸಹ ಜೀವನ-ಸಂಘಟನೆಗಳಿಗೆ ಮಹತ್ವವೇ ಇಲ್ಲವಾಗಿದೆ. ಹಿಂದೆ, ಒಬ್ಬ ರಾಜಕಾರಣಿಯಾಗಲು ಸೇವೆ-ಆದರ್ಶ-ಜನಸಂಘಟನೆ ಮಾಡುವ ನಾಯಕತ್ವದ ಗುಣಗಳು ಮುಖ್ಯವಾಗಿ ಬೇಕಾಗಿರುತ್ತಿದ್ದವು. ಇಂದು, ಇದ್ಯಾವುವೂ ಇಲ್ಲದ ಕರೋಡಪತಿಯೊಬ್ಬ, ಸಿನಿಮಾ ನಟನೊಬ್ಬ, ಮಾಫಿಯಾ ಗ್ಯಾಂಗ್‌ಲೀಡರ್ ಒಬ್ಬ ರಾಜಕಾರಣದಲ್ಲಿ ಧುತ್ತನೆ ಅವತರಿಸುವಂತಹ ವಾತಾವರಣವಿದೆ. ಇವೇ ಕಾರಣಗಳಿಂದ ರಾಜಕಾರಣವೆಂದರೆ ಮನೋವಿಕಾರಗಳನ್ನು ಸಂತೃಪ್ತಿಗೊಳಿಸಿಕೊಳ್ಳುವ ಇನ್ನೊಂದು ಗಳಿಕೆಯ ದಾರಿಯಾಗಿದೆ. ಇದರಿಂದಲೇ ಮತೀಯ ಗಲಭೆಗಳು ಹಿಂದೆಂದಿಗಿಂತಲೂ ಇಂದು ಅಧಿಕಗೊಳ್ಳುತ್ತಿವೆ. ಸಂಘಟನೆಯನ್ನು ವೈಚಾರಿಕ, ತಾತ್ವಿಕ ತಳಹದಿಯ ಮೇಲೆ ಮಾಡದಿರುವುದೇ ಮತೀಯ ಗಲಭೆಗಳ ಗೊಂದಲಕ್ಕೆ ಕಾರಣವಾಗಿದೆ.

ಇದಕ್ಕೆ ಪರಿಹಾರೋಪಾಯಗಳೇನು ? ಈ ಬಗ್ಗೆ ಯೋಚಿಸಿದರೆ, ಮತೀಯ ಪ್ರಕ್ಷೋಭೆಯ ಹಿನ್ನೆಲೆಯಲ್ಲಿ ಇರುವುದು ಮುಖ್ಯವಾಗಿ ಅಜ್ಞಾನ. ಇದನ್ನು ಹೋಗಲಾಡಿಸಲು ದೇಶದಲ್ಲಿ ವ್ಯಾಪಕವಾದ ಸಾಕ್ಷರತಾ ಆಂದೋಲನ ಆಗಬೇಕು. ಇಂದಿನ ಯುವ ಜನಾಂಗಕ್ಕೆ ದೇಶದ ಇತಿಹಾಸದ ಪ್ರಜ್ಞೆಯೇ ಮೊಟಕಾಗಿದೆ. ಮಾರ್ಕ್ಸ್, ಲೆನಿನ್, ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಲೋಹಿಯಾ, ಜೆ. ಪಿ. – ಈ ವ್ಯಕ್ತಿಗಳ ಜೀವನ-ಆದರ್ಶ-ಸಾಧನೆಗಳ ಸಂಪೂರ್ಣ ಪರಿಚಯವನ್ನು ನಮ್ಮ ದೇಶದ ಜನತೆ ಮತ್ತೆ ಜ್ಞಾಪಿಸಿಕೊಳ್ಳುವಂತಾಗಬೇಕು. ರೈತ ಸಂಘಟನೆ, ಕಾರ್ಮಿಕ ಸಂಘಟನೆ, ಮಹಿಳಾ ಸಂಘಟನೆ, ವಿದ್ಯಾರ್ಥಿ ಸಂಘಟನೆ, ಯುವ ಸಂಘಟನೆಗಳು ರಾಜಕಾರಣದ ಆಧಾರಸ್ತಂಭಗಳಾದರೆ, ಜಾತಿ-ಧರ್ಮ-ಅಂತಸ್ತುಗಳ ಭೇದ ಮರೆತು, ಸಮಾನ ಉದ್ದೇಶಗಳಿಗಾಗಿ ಸಾಮೂಹಿಕವಾಗಿ ದುಡಿಯುವ ಮನೋಬಲ ವರ್ಧಿಸುತ್ತದೆ, ಮನುಷ್ಯ ಮನುಷ್ಯನ ನಡುವಿನ ಕಂದರವನ್ನು ಇಲ್ಲವಾಗಿಸುತ್ತದೆ. ಮನುಷ್ಯ ಮನುಷ್ಯನನ್ನು ಗುರುತಿಸುವಂತಾದರೆ, ಧರ್ಮಾಂಧತೆ ಅಳಿದು, ಮತೀಯ ಪ್ರಕ್ಷೋಭೆ ಇಲ್ಲವಾಗಬಹುದು.

ಎಸ್. ಮಾಲತಿ
'ಮಹಾಲಸ' ನಿಲಯ, ಸಾಗರ

'ಮನುಷ್ಯಜಾತಿ ತಾನೊಂದೆ ವಲಂ' ಎಂಬ ಪಂಪನ ಮಾತು ಇಂದು ಪ್ರಸ್ತುತವಾಗ ಬೇಕಾದ ಅಗತ್ಯತೆ ಇದೆ. ಹಳ್ಳಿಯಿಂದ ಹಿಡಿದು ರಾಷ್ಟ್ರದವರೆಗೆ, ಅಷ್ಟೇ ಏಕೆ ಇಡೀ ಜಾಗತಿಕ ಮಟ್ಟದಲ್ಲಿ ಇಂದು ಮತೀಯ ದ್ವೇಷದ ಜ್ವಾಲಾಮುಖಿ ನಿತ್ಯನಿರಂತರ ಭುಗಿಲೇಳುತ್ತಿದೆ. ಭಯೋತ್ಪಾದಕರು, ನಕ್ಸಲೈಟರು, ಎಲ್‌ಟಿಟಿಇಗಳು, ಉಗ್ರವಾದಿಗಳು, ಇತ್ಯಾದಿ ಹಣೆಪಟ್ಟಿ ಧರಿಸಿ ಕುಖ್ಯಾತಿ ಹೊತ್ತ ಜನರ ಪಟ್ಟಿ ಎದುರಾಗುತ್ತದೆ. ಅಮಾಯಕ ಜನರ ಹತ್ಯೆಗೆ ಇವರೆಲ್ಲಾ ಹಲವು ವಿಧಗಳಲ್ಲಿ ಕಾರಣರು. ಪ್ರಾಣ ನೀಡಲು ಶಕ್ತಿಯಿಲ್ಲದ ನಾವು, ಪರರ ಪ್ರಾಣ ತೆಗೆಯಲು ಅರ್ಹರೇ, ಶಕ್ತರೇ ಎಂದು ಒಮ್ಮೆಯೂ ಯೋಚಿಸಲಾರರೆ? ಸರಮಾಲೆಯಂತೆ ಇಂಥ ಎಷ್ಟೋ ಘಟನೆಗಳು ಹಿಂದೂ-ಮುಸ್ಲಿಂರಲ್ಲಿ ಮತಾಂಧತೆ ಬೆಳೆಯುವಂತೆ ಮಾಡಿವೆ. ಕೊಲೆಗೆ ಕೊಲೆಯೇ ಉತ್ತರವಾದರೆ ಮುಂದಿನ ಪೀಳಿಗೆ ರಕ್ತದ ಮಡುವಿನಲ್ಲಿ ಜೀವನ ಸಾಗಿಸಬೇಕಾದೀತು!

ಮತೀಯ ಭಾವನೆ ತೊಲಗಿ ಸುಖದ ಬಾಳುವೆ ಸಾಗಿಸಬೇಕಾದರೆ ನಾವೆಲ್ಲರೂ ಸಹೋದರರೆಂಬ ಭಾವ ಹೃದಯದಾಳದಿಂದ ಮೂಡಿಬರಬೇಕು. ಜಾತಿ, ಧರ್ಮ – ಇವು ನಮ್ಮ ಅಧೀನದಲ್ಲಿದ್ದು ಮನೆಯ ಆವರಣಕ್ಕೆ ಮಾತ್ರ ಸೀಮಿತವಾಗಿರಬೇಕು, ಬದಲು ಮತಧರ್ಮದ ಕೈಗೆ ಬುದ್ಧಿಕೊಟ್ಟು ನಮ್ಮತನ ಕಳೆದುಕೊಂಡ ಕ್ರೂರ ಮೃಗಗಳಂತಾಗಬಾರದು. ಗಲಭೆಯಾದರೆ ಅದನ್ನು ಶೀಘ್ರ ಪರಿಹರಿಸಿ, ಕೋಮುಜ್ವಾಲೆಯಾಗಿ ಹರಡದಂತೆ ನೋಡಿಕೊಳ್ಳಬೇಕು. ಹುಲುಮಾನವನ ಕೀಳುಮಟ್ಟದ ಯೋಚನೆ ಬಿಟ್ಟು ವಿಶ್ವಮಾನವನಾಗುವೆಡೆಯ ಪಥ ತುಳಿಯುವಂತಾಗಬೇಕು. ಹಿರಿಯರ ಆದರ್ಶದ, ಹೊಂದಾಣಿಕೆಯ ನುಡಿಗಳು ಕೇವಲ ಹೇಳಿ ಮೆಚ್ಚಿಸುವುದಕ್ಕಾಗಿರದೆ ಅವೆಲ್ಲವೂ ವಾಸ್ತವದಲ್ಲಿ ಆಚರಣೆಗೆ




ಹುಡುಕಲು ಹೊರಟಿರುವರು ಸೂರ್ಯನನ್ನು ಕಗ್ಗತ್ತಲೆಯಲ್ಲಿ
ಇಟ್ಟಿರುವರು ಅಡಗಿಸಿ ಚಂದ್ರನನ್ನು ಕಗ್ಗತ್ತಲೆಯಲ್ಲಿ

ಇಂಗಿಲ್ಲ ಮಣ್ಣಲ್ಲಿ ಮೃತ್ಯು ಹಾಕಿದ ಕಂಬನಿ ಇನ್ನೂ
ಹೂಳಿರುವರು 'ಹೇರಾಮ' ಧ್ವನಿಯನು ಕಗ್ಗತ್ತಲೆಯಲ್ಲಿ

ರಕ್ತದ ಹೊಳೆಯಲಿ ಬೆಂಕಿಯ ಸುರಿಮಳೆ ಹೆಣಗಳ ರಾಸಿಗಳು
ಹುರಿಗೊಳಿಸುತ್ತಿರುವರು ಮೀಸೆಯನ್ನು ಕಗ್ಗತ್ತಲೆಯಲ್ಲಿ

ರೋದಿಸುತ್ತಲಿವೆ ಎಲ್ಲ ದಾರಿಗಳು ಎದೆಯ ಗಾಯದಿಂದ
ಎಳೆಯುತ್ತಿರುವರು ಧರ್ಮದ ರಥವನು ಕಗ್ಗತ್ತಲೆಯಲ್ಲಿ

ಹಸಿದ ಹೊಟ್ಟೆಯಲಿ ರಾಷ್ಟ್ರಪ್ರೇಮವನು ಕೆದರಿ ನೋಡುತಿಹರು
ಸೆಳೆಯುತ್ತಿರುವರು ಲಕ್ಷ್ಮಿ ಸೀರೆಯನು ಕಗ್ಗತ್ತಲೆಯಲ್ಲಿ

ಹದ್ದು ಒಯ್ಯುತಿವೆ ಗುಪ್ತ ಕಣಜಗಳ ಹಾಡಹಗಲಿನೊಳಗೆ
ನೋಡುತ್ತಿರುವರು ಪಿಳಿಪಿಳಿ ನಭವನು ಕಗ್ಗತ್ತಲೆಯಲ್ಲಿ

ಜಾರಿ ಹೋಗುತಿವೆ ವೃದ್ಧರ ಕೈಯಾಸರೆ ಬಡಿಗೆಗಳೆಲ್ಲ
ಹೋ ಕಟ್ಟಲು ದೇವರ ರಾಜ್ಯವನ್ನು ಕಗ್ಗತ್ತಲೆಯಲ್ಲಿ

ಗೆಲುವಾಗಿ ಅದ್ದೂರಿಯ ಪೂಜೆ ಯಾಗ ಯಜ್ಞ ಏಸೋ
ಕುಂಯ್‌ಗುಡುತಿರುವರು ಮುದುರಿ ಬಾಲವನು ಕಗ್ಗತ್ತಲೆಯಲ್ಲಿ

ನುಸುಳಿದೆ ವೈರಿಯ ಜಾಲವು ಎಲ್ಲೆಡೆ ರಂಗೋಲಿಯ ಕೆಳಗೆ
ಮಲಗಿರುವರು ಕಾಣುತ ಸವಿಗನಸನು ಕಗ್ಗತ್ತಲೆಯಲ್ಲಿ

ಶಾಂತರಸ
'ಲಕ್ಷ್ಮೀ', ಫ್ಲಾಟ್ ೧೦, ಗಣೇಶ ನರ್ಸಿಂಗ್ ಹೋಂ ಹಿಂದೆ, ಹಳೇ ಜೇವರಗಿ ರಸ್ತೆ, ಗಣೇಶ ನಗರ, ಗುಲ್ಬರ್ಗ - ೨

ಬರಬೇಕು. 'ಧರ್ಮವನ್ನು ರಾಜಕೀಯಕ್ಕೆ ಬಳಸಿಕೊಂಡರೆ ಅದು ಆಯುಧಕ್ಕಿಂತಲೂ ಹರಿತವಾಗುತ್ತದೆ' ಎಂಬಂತೆ ನಡೆಯುವ ಹೊಲಸು ರಾಜಕಾರಣಿಗಳ ಸಮಯಚಾಣಾಕ್ಷತೆಯ ದಾಳಕ್ಕೆ ಬಲಿಬೀಳದೆ ಎಚ್ಚರಿಕೆಯಿಂದಿರಬೇಕು.

ಕೊನೆಯದಾಗಿ ಈ ಕವಿಋಷಿಯ ನುಡಿ ಎಲ್ಲರ ಮನದಲ್ಲಿ ಮಡಿಯದೆ ಸದಾ ಹಸಿರಾಗುಳಿದರೆ ಸಾಕು, ಆಗ ಬದುಕು ಬೇಕು ಎನಿಸುತ್ತದೆ, ಸಮೃದ್ಧವಾಗುತ್ತದೆ.

'ನೂರು ಮತದ ದೇವರುಗಳನ್ನೆಲ್ಲ ನೂಕಾಚೆ ದೂರ
ಭಾರತಾಂಬೆಯ ದೇವಿ ನಮಗಿಂದು ಪೂಜಿಸುವ ಬಾರ'

ಆಶಾವಾದಿ

---

''ಕುಲಕುಲವೆಂದು ಹೊಡೆದಾಡದಿರಿ.'' – ಕನಕದಾಸ

''ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ ?'' – ಸರ್ವಜ್ಞ

''ಎಲ್ಲ ಜನಾಂಗದವರೂ ನಿನ್ನ ರಕ್ತ ಮಾಂಸದವರೇ, ನಿನ್ನ ಸಹೋದರರೇ ಎಂಬುದನ್ನು ಮರೆಯದಿರು.'' – ಸ್ವಾಮಿ ವಿವೇಕಾನಂದ

ಮೇಲಿನ ಸಂತರ ನುಡಿಗಳು 'ನಾವೆಲ್ಲಾ ಒಂದೇ ಜಾತಿ', ಅದು 'ಮನುಷ್ಯ ಜಾತಿ' ಎಂಬ ಸತ್ಯವನ್ನು ತಿಳಿಸುತ್ತವೆ.

ನಮ್ಮ ದೇಶದಲ್ಲಿನ ಮತೀಯ ಪ್ರಕ್ಷೋಭೆಯನ್ನು ತಡೆಗಟ್ಟಲು ಮಾರ್ಗಗಳು ಈ ಕೆಳಗಿನಂತಿವೆ :

* ಎಲ್ಲಾ ಜನಾಂಗದ ಜನರನ್ನು ರಕ್ತಗತವಾಗಿ ಬಂಧಿಸುವ ಅಂತರ್‌ಜಾತಿ ವಿವಾಹಗಳಿಗೆ ಪ್ರೋತ್ಸಾಹ ನೀಡುವುದು.
* ಶಾಲಾ ಕಾಲೇಜುಗಳಲ್ಲಿ ಪ್ರವೇಶ ನೀಡುವಾಗ ವಿದ್ಯಾರ್ಹತೆಯನ್ನು ಮಾತ್ರ ಪರಿಗಣಿಸಬೇಕು.
* ಉದ್ಯೋಗಾವಕಾಶಗಳಲ್ಲಿ ಸಾಮರ್ಥ್ಯಕ್ಕೆ ಪ್ರಾಮುಖ್ಯತೆ ನೀಡಬೇಕು.
* ಪ್ರಪಂಚದ ಎಲ್ಲಾ ಧರ್ಮಗಳ ತಿರುಳು ಒಂದೇ ಎಂಬುದನ್ನು ಜನರಿಗೆ ಮನದಟ್ಟು ಮಾಡುವುದು.
* ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವುದರ ಮೂಲಕ ರಾಷ್ಟ್ರೀಯ ಭಾವೈಕ್ಯತೆಯನ್ನು ಮೂಡಿಸುವುದು.
* ಶಾಲೆಗಳಲ್ಲಿ ಎಲ್ಲರೂ ಒಂದೇ ಎಂಬ ಭಾವನೆಯನ್ನು ಮೂಡಿಸುವ ಪಠ್ಯಪುಸ್ತಕಗಳನ್ನು ರಚಿಸುವುದು.
* ಜಾತಿಮತಗಳ ಬಗ್ಗೆ ಪ್ರಚೋದನಕಾರಿ ಭಾಷಣಗಳನ್ನು ನಿಲ್ಲಿಸುವಿಕೆ ಮತ್ತು ಭಾಷಣಕಾರರ ವಿರುದ್ಧ ಕಠಿಣ ಕಾನೂನು ಕ್ರಮ ತೆಗೆದುಕೊಳ್ಳುವುದು.
* ಪ್ರಾಥಮಿಕ ಹಂತದಿಂದಲೇ ಮಕ್ಕಳಿಗೆ ಸೂಕ್ತ ಶಿಕ್ಷಣ ನೀಡಬೇಕು.
* ಜನರು ತಾವು ಬಯಸುವ ಯಾವುದೇ ಧರ್ಮವನ್ನು ಬೇಕಾದರೂ ಆಚರಿಸಲು ಮುಕ್ತ ಅವಕಾಶ ನೀಡಬೇಕು.

ಒಟ್ಟಾರೆಯಾಗಿ ಎಲ್ಲರೂ ಗಾಂಧೀ ಕನಸು ಕಂಡ 'ರಾಮರಾಜ್ಯ' ಮತ್ತು ಕುವೆಂಪುರವರ ಕನಸಿನ 'ಮನುಜಮತ ವಿಶ್ವಪಥ'ದತ್ತ ಒಂದೊಂದು ಹೆಜ್ಜೆಯನ್ನು ಇಡುತ್ತಾ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕು.

ಟಿ. ರೇವಣ್ಣ
ಸಂತೇಮಾವತ್ತೂರ್ (ಅಂಚೆ), ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ

---

ನಾಚಿಕೆ ಅದು ನಮಗೆ, ಅವರಿವರೆನ್ನದೆ ಒಟ್ಟು ಭಾರತಭೂಮಿಗೇ ಹೀಗೇಕೆ ? ನಮಗೆ ಆತ್ಮಗೌರವವಿಲ್ಲವೆ ? ಇದೆ. ಭಾರತಭೂಮಿಯವರೆನ್ನುವುದು ನಮಗೆ ಹೆಮ್ಮೆಯಲ್ಲವೆ ? ಮತ್ತ್ಯಾಕೆ ಕೀಳರಿಮೆ, ಭೇದ ಕಲ್ಪನೆ, ಆಕ್ರಮಿಸುವಿಕೆ ? ಕೇಳಿಕೊಳ್ಳೋಣ ನಾವೇ ನಮಗೆ.

'ಎಲ್ಲಾ ಬಿಟ್ಟ ಭಂಗಿ ನೆಟ್ಟ' ಸಲ್ಲ ನಮಗೆ. ನಮ್ಮೀ ಬದುಕು ಆರೋಗ್ಯಕರ, ಅಹಿಂಸಾ ಪ್ರಧಾನ. ಜಾತಿ ಮತ ಅಥವಾ ಇನ್ನಾವುದೇ ಭೇದವಿಲ್ಲದೆ ಸರ್ವ ಸಾಮಾನ್ಯ. ಪ್ರಾಮಾಣಿಕ, ಗಂಭೀರ – ಚಿಂತನೆ ನಮ್ಮದಾಗಬೇಕು.

'ಹೇಳುವುದು ಶಾಸ್ತ್ರ ಇಕ್ಕುವುದು ಗಾಳ' ವಾಗದೆ, ಮೌಢ್ಯಕ್ಕೆ ಬಲಿ ಹಾಕದೆ, ಬಲಿ ಬೀಳದೆ, ಜಾತಿ ಮತ ಮೀರಿ ಸಮಾಜ ಜೀವನ ನಡೆಸುವುದೇ ಉತ್ತಮ ಮಾರ್ಗ.

ಇನ್ನು ಭಾರತ ಸರಕಾರ, ಸಂವಿಧಾನ, ನೇರ ಜವಾಬ್ದಾರಿಯಿಂದ ತೆಗೆದುಕೊಳ್ಳಲು ಪ್ರಾಮಾಣಿಕ ನಿಷ್ಠುರ ಕ್ರಮ ತೆಗೆದುಕೊಳ್ಳಲು, ವಿವೇಚನಾರಹಿತವಾಗಿ ದುಡುಕುವುದನ್ನು ತಡೆಯಲು, ದೇಶ ಹಿತವನ್ನು ಕಾಪಾಡಲು, ಅರ್ಥಾತ್ ಎಲ್ಲರ ಸ್ವಾತಂತ್ರ್ಯವನ್ನು



ಆತ್ಮಗೌರವದ ಜೀವನವನ್ನು, ಭೇದವಿಲ್ಲದೆ ಸರ್ವಸಮಾನರಾಗಿರುವಂತೆ ಆಗ್ರಹಿಸಲು, ಸಮಯಸಾಧಕ ಆತ್ಮವಂಚನ, ಮೌಢ್ಯ ವಿಜೃಂಭಣ, ಆತ್ಮಘಾತಕತನ, ಸಲ್ಲದೆಂದು ಮನದಟ್ಟು ಮಾಡೋಣ.

ಸಮ್ಮೋಹ, ಸಮೂಹ ಸನ್ನಿರೋಗ, ಪೊಳ್ಳು ಪಲಾಯನ, ಸುಳ್ಳು ಉಪಶಮನ, ಕಂದಾಚಾರ, ದುಂದುವೆಚ್ಚ, ಅಡ್ಡ ಸಂಪಾದನೆ, ಜಾತಿ ಮತಾವಲಂಬನ, ವಿಕೃತ, ಕೃತಕ, ಕೈವಾಡ, ಪವಾಡ ಇವನ್ನೆಲ್ಲಾ ಮೀರಿ ನಿಲ್ಲಬೇಕು.

ಕಲ್ಲು ಹೊಡೆಯುವುದು, ಕೊಳ್ಳಿ ಇಡುವುದು, ಯಾರ ಬದುಕಿಗೂ ಸಲ್ಲ. ಮಾನವ ಜ್ಞಾನ ವಿಶೇಷವನ್ನು, ಸೌಹಾರ್ದವನ್ನು ಅರಿತು ಜೀವಿಸೋಣ. ಇದೇ ನಾವೆಲ್ಲರೂ ರೂಢಿಸಿಕೊಳ್ಳಬೇಕಾಗಿರುವ ಜೀವನಕ್ರಮ. ಯಾವುದೇ ಕ್ಷೋಭೆಯುಂಟಾಗದಂತಹ ರಕ್ಷಣಾ ಕ್ರಮ, ಒಂದು ವೇಳೆ ಉಂಟಾದರೆ ಅದರ ನಿವಾರಣಾ ಕ್ರಮ, ಇವನ್ನು ಕರಗತ ಮಾಡಿಕೊಳ್ಳಬೇಕು.

ಜವಾಬ್ದಾರಿಯಿಂದ ವರ್ತಿಸೋಣ, ಜಾಗೃತಿ ಮೂಡಿಸೋಣ. ಎಲ್ಲರೂ ಅವರವರ ಯೋಗ್ಯತಾನುಸಾರ, ವೃತ್ತಿ ಧರ್ಮಾನುಸಾರ, ಪ್ರಾಮಾಣಿಕವಾಗಿ ಕೆಲಸಗಳಲ್ಲಿ ತೊಡಗೋಣ. ಯಾರಿಗೂ ಸಾಧ್ಯವಿಲ್ಲ ಇಲ್ಲಿ ಸರ್ವಾಧಿಕಾರ; ಅಥವಾ ಕಾದು ಕೂರುವುದಲ್ಲ ಹಾಳುಗೆಡಿಸುತ್ತ, ಎಲ್ಲಾ ಸರಿಮಾಡಬಲ್ಲ ಸರ್ವಶಕ್ತ ದೇವರ ನಿರೀಕ್ಷೆಯಲ್ಲಿ.

ಬಿ. ಶಶಿಕರ ಶೆಟ್ಟಿ
ಸಾಗರ

---

ಇತ್ತೀಚಿನ ದಿನಗಳಲ್ಲಿ ಮತೀಯ ಗಲಭೆಗಳು, ಅಂದರೆ ಮತಗಳ ಹೆಸರಿನಲ್ಲಿ ಹಿಂಸಾಚಾರ, ಜಾತಿ ರಾಜಕೀಯ ಮುಂತಾದ ವಿಷಯಗಳೇ ದಿನಪತ್ರಿಕೆಗಳ ಬಹುಪಾಲನ್ನು ಆಕ್ರಮಿಸಿಕೊಂಡಿವೆ. ಒಂದು ಕಡೆ ರಾಷ್ಟ್ರೀಯ ಐಕ್ಯತೆ, ಜಾತಿ ನಿರ್ಮೂಲನ ಮುಂತಾದುವುಗಳ ಬಗ್ಗೆ ಭಾಷಣಗಳು ಮತ್ತು ಘೋಷಣೆಗಳು, ಇನ್ನೊಂದೆಡೆ ಅದಕ್ಕೆ ವಿರುದ್ಧವಾದ ವರ್ತನೆ – ಇಂತಹ ದ್ವಂದ್ವಗಳಿಂದ ನಮ್ಮ ದೇಶ ಅಸ್ತವ್ಯಸ್ತಗೊಂಡು ಕಂಗೆಟ್ಟಿದೆ. ಹೀಗೇ ಮುಂದುವರೆದರೆ ನಮ್ಮ ದೇಶದ ಗತಿ ಏನಾಗಬಹುದೆಂಬ ಕಲ್ಪನೆಯೂ ಜನಗಳಿಗೆ ಇದ್ದಂತಿಲ್ಲ. ಈ ದುಃಸ್ಥಿತಿಯ ನಿವಾರಣೆ ಒಬ್ಬರಿಂದ ಅಥವಾ ಒಂದು ಗುಂಪಿನಿಂದ ಆಗುವಂತಹದಲ್ಲ. ರಾಜಕೀಯ ಪಕ್ಷಗಳು, ಸರ್ಕಾರ, ಟಿ.ವಿ., ರೇಡಿಯೋ, ಪತ್ರಿಕಾ ಮಾಧ್ಯಮಗಳು, ವಿದ್ಯಾಸಂಸ್ಥೆಗಳು, ಸಾರ್ವಜನಿಕ ಸಂಸ್ಥೆಗಳು ಎಲ್ಲರ ಸಹಕಾರದಿಂದ ಆಗಬೇಕಾದ ಕೆಲಸವಿದು.

ಮೊದಲನೆಯದಾಗಿ, ದಿನಪತ್ರಿಕೆಗಳಲ್ಲಿ, ರೇಡಿಯೋ ಮತ್ತು ಟಿ.ವಿ. ವಾರ್ತೆಗಳಲ್ಲಿ ಮತೀಯ ಸಂಘರ್ಷಗಳ ಸಮಾಚಾರಕ್ಕೆ ಪ್ರಾಮುಖ್ಯ ನೀಡಬಾರದು. ಅದು ಕೇವಲ ಒಂದು ವರದಿ ಮಾತ್ರ ಆಗಿರಬೇಕು. ಒಂದು ಪಂಗಡದವರ ಸಾವುನೋವುಗಳನ್ನು ಕರುಣಾಜನಕವಾಗಿ ವಿವರಿಸಿ ತಿಳಿಸುವುದರಿಂದಾಗಿ ಪೂರ್ವಗ್ರಹಪೀಡಿತರಲ್ಲದ ವ್ಯಕ್ತಿಗಳಲ್ಲಿಯೂ ಇನ್ನೊಂದು ಪಂಗಡದವರ ವಿಷಯದಲ್ಲಿ ದ್ವೇಷ ಪ್ರಚೋದಿಸಿದಂತಾಗುತ್ತದೆ. ಅದರಲ್ಲೂ ಟಿ.ವಿ.ಯಂತಹ ದೃಶ್ಯ ಮಾಧ್ಯಮದಲ್ಲಿ ದಾರುಣವಾದ ಚಿತ್ರಣವನ್ನು ಅತಿಯಾಗಿ ಪ್ರಚಾರ ಮಾಡದಿರುವುದು ಒಳ್ಳೆಯದು.



ನೆಲ ಕುಲುಮೆಯಾಗಿ, ಉಸಿರುಗಟ್ಟಿ ಗಾಳಿಯೇ ಒದ್ದಾಡುವ ರಾತ್ರಿ
ಇಲ್ಲಾ, ನಿನ್ನವ್ವ ಅತ್ತಂತೆ ಕಣ್ಣೀರಿಡುವ ಮುಗಿಲ ಹನಿಗುಂಟ
ಅಥವಾ, ಎಳೆಯ ಚಳಿಗಾಳಿ ನಿನ್ನ ನೊಸಲ ತಂಪಾಗಿಸಿ ತಣ್ಣಗೆ
ತವರು ಮನೆಯಂತಾದ ಘಳಿಗೆ
ಮುರಿದ ಕೊಳಲ ಹಿಡಿದು
ಉಸಿರ ಉಡಿತುಂಬಿಕೊಂಡು ನಾನು ಬರುತ್ತೇನೆ.

ಯಾವುದಾದರೂ ವರನಿಗೆ ತೋರಿಸಲೆಂದು ತೆಗೆಸಿದ
ಫೋಟೊದ ನಿನ್ನ ಕಣ್ಣಲಿ ನಾ ಬಂದೇ ಬರುತ್ತೇನೆಂಬ ಸುಳಿವು
ಹೇಗೆ ಹೆಪ್ಪುಗಟ್ಟಿದೆ ಹೋಗಿ ನೋಡು.

ಇಡೀ ಜಗತ್ತಿನ ಭಾರ ಎರಡು ಹನಿ ಕಣ್ಣೀರಿನಲ್ಲಿದೆ ಎಂದು ಗೊತ್ತು ನನಗೆ;
ನಿಜದ ನಾಲಿಗೆಯಿಂದ ಕಣ್ಣ ದುಃಖ ಹೀರುವೆ
ಒಡೆದ ಕಂಠದಲಿ ಅದೇ ಪಲ್ಲವಿಯ ಹಾಡಿದರೂ
ನಿನ್ನ ಒಳಿತೆ ನುಡಿಯುವೆ.

ಹೇಳಲಾಗದ ನುಡಿಗಳನು ನಿರಿಗೆಗಳಾಗಿಸಿ
ಈ ಕೊಳಲ ಬೆರಳುಗಳು ನಿನ್ನ ಹೊಕ್ಕುಳಿಗೆ ತಾಕದಂತೆ
ಸೀರೆ ಉಡಿಸಲು, ಒಡಲಲ್ಲಿ ಸ್ವರವ ನುಡಿಸಲು
ನೆಲದ ಜೀವಗಳ ಕಣ್ಣ ಮುಂಗಾರಿನಂತೆ ಬರುತ್ತೇನೆ.

ನೋವ ನುಂಗಿ ಬಿಗಿದ ನಿನ್ನ ಕೊರಳಿಂದ
ಧಾರೆ ಎರೆ ನಿಟ್ಟುಸಿರ ನನ್ನ ಜೀವದ ಕೊಳಲಿಗೆ
ಒಂದು ತಾಯ್ತನದ ರಾಗವಾಗಿ ಜಗವ ತೂಗುತ್ತೇನೆ.

ಖಂಡಿತ, ನಿನ್ನ ಮನಸಿನ ಒಂಟಿ ಆಲಾಪವನು
ನಾನು ಹೇಗೆ ಸಂತೈಸಬಲ್ಲೆನೆಂದು ನಿನಗಷ್ಟೇ ಗೊತ್ತು

ನೆನಪಿರಲಿ,
ನಾನು ಮತ್ತದೆ ಹುಚ್ಚು ಹುಡುಗ;
ಹೃದಯದಲಿ ಮಿಂದಿರುವ ಒಂದೇ ಹೆಸರನು ಹೊತ್ತು
ಈ ಜಗತ್ತಿನಲಿ ಎಲ್ಲೆಂದರಲ್ಲಿ ಅಲೆದು ಬಂದಿದ್ದೇನೆ
ಇದೋ ಈಗ ನಾನು ಬಂದಿದ್ದೇನೆ.

---

ತುರುವೀಹಾಳ ಚಂದ್ರು
ಕೇರಾಫ್ ಡಾ|| ಎಲ್. ಟಿ. ನಾಯಕ, ೧೬೨, ಬಸವನಗರ ೧, ಹಳಿಯಾಳ ರಸ್ತೆ, ಧಾರವಾಡ-೩

ಬುಡಕಟ್ಟು ಜನರು, ಮಹಿಳೆಯರು, ಮೂಲನಿವಾಸಿಗಳು, ಅಲ್ಪಸಂಖ್ಯಾತರು ಹಾಗೂ ಅಂಚಿನಲ್ಲಿರುವವರ ದನಿಯಾಗಲು ವಿಶ್ವ ಸಾಮಾಜಿಕ ವೇದಿಕೆಯೆಂಬ ಅಂತರರಾಷ್ಟ್ರೀಯ ಮಟ್ಟದ ಸಂಘಟನೆ ಉದಯವಾಯಿತು.

ವಿಶ್ವ ಸಾಮಾಜಿಕ ವೇದಿಕೆ (ವಿಸಾವೇ) ಅಸ್ತಿತ್ವಕ್ಕೆ ಬಂದದ್ದು ೨೦೦೧ರಲ್ಲಿ, ಬ್ರೆಜಿಲ್‌ನ ಪೋರ್ಟೋ ಅಲೆಗ್ರೆಯಲ್ಲಿ ಇದರ ಸ್ಥಾಪನೆಯಾಯಿತು. ಇದು ಸಾಮ್ರಾಜ್ಯಶಾಹಿ ಜಾಗತೀಕರಣಕ್ಕೆ ವಿರುದ್ಧವಾಗಿ ಪ್ರಜಾತಾಂತ್ರಿಕ ಹಾಗೂ ಜನಕೇಂದ್ರಿತ ಪರ್ಯಾಯಗಳನ್ನು ರೂಪಿಸುವ ಗುರಿಯನ್ನು ಹೊಂದಿದೆ. ೨೦೦೧ರಲ್ಲಿ ಜರುಗಿದ ಮೊದಲ ಸಮಾವೇಶದಲ್ಲಿ ಸುಮಾರು ೨೦,೦೦೦ ಜನ ಭಾಗವಹಿಸಿದ್ದರು. ಜಾಗತೀಕರಣ ಸೃಷ್ಟಿಸುತ್ತಿರುವ ವಿಶ್ವಕ್ಕೆ ಪರ್ಯಾಯವಾಗಿ 'ಇನ್ನೊಂದು ವಿಶ್ವ ಸಾಧ್ಯ' ಎಂಬ ಘೋಷಣೆಯೊಂದಿಗೆ ವಿಸಾವೇ ಶುರುವಾಯಿತು. ಕಾರ್ಮಿಕ ಸಂಘಟನೆಗಳು, ರಾಜಕೀಯ ಗುಂಪುಗಳು, ಕೃಷಿ ಸಂಘಟನೆಗಳು, ಅಲ್ಪಸಂಖ್ಯಾತ ಗುಂಪುಗಳು, ಸರ್ಕಾರೇತರ ಸಂಸ್ಥೆಗಳು, ಸಾಂಸ್ಕೃತಿಕ ಸಂಘಟನೆಗಳು, ಮಹಿಳಾ ಸಂಘಟನೆಗಳು ಹಾಗೂ ಇನ್ನೂ ಅನೇಕ ಜನಪರ ಸಂಸ್ಥೆಗಳು ಈ ವೇದಿಕೆಯಡಿ ಸೇರಿದವು. ನಾಯಕತ್ವ ಇಲ್ಲದಿರುವುದು ಈ ಆಂದೋಳನದ ಒಂದು ವೈಶಿಷ್ಟ್ಯ. ವಿಸಾವೇ – ೨೦೦೧ರಲ್ಲಿ ಭಾಗವಹಿಸಿದ ವಿವಿಧ ಸಂಘಟನೆಗಳಿಗೆ ಹಲವು ಜವಾಬ್ದಾರಿಗಳನ್ನು ನೀಡಲಾಯಿತು. ಅದರಂತೆ ಅವು ತಮ್ಮ ತಮ್ಮ ಕ್ಷೇತ್ರಗಳಲ್ಲಿ, ರಾಷ್ಟ್ರಗಳಲ್ಲಿ ಕೆಲಸ ಮಾಡುವುದರಲ್ಲಿ ನಿರತವಾಗಿವೆ.

ವಿಸಾವೇ-೨೦೦೨ ಹಾಗೂ ವಿಸಾವೇ-೨೦೦೩ ಪೋರ್ಟೋ ಅಲೆಗ್ರೆಯಲ್ಲೇ ಜರುಗಿತು. ವಿಸಾವೇ-೨೦೦೨ ಹಾಗೂ ವಿಸಾವೇ-೨೦೦೩ರಲ್ಲಿ ಕ್ರಮವಾಗಿ ಸುಮಾರು ೫೫,೦೦೦ ಮತ್ತು ೧ ಲಕ್ಷ ಮಂದಿ ಭಾಗವಹಿಸಿದ್ದರು. ಪ್ರಸ್ತುತ ವಿಶ್ವದ ಬೇರೆ ಬೇರೆ ಪ್ರಾಂತಗಳಲ್ಲಿ ವಿಸಾವೇಯನ್ನು ರಚಿಸಲಾಗಿದೆ.

ಇದುವರೆಗೆ ಜರುಗಿದ ಜಾಗತಿಕ ವಿಸಾವೇ ಸಭೆಗಳಲ್ಲಿ ಈ ಕೆಳಕಂಡ ಕೆಲವು ಮುಖ್ಯ ವಿಷಯಗಳ ಬಗ್ಗೆ ಚರ್ಚೆ, ವಿಚಾರ ವಿನಿಮಯ ಜರುಗಿವೆ.

೧) ಜಾಗತೀಕರಣ ಹಾಗೂ ಬಂಡವಾಳಶಾಹಿ ಪ್ರೇರಿತ ನೀತಿಗಳಿಂದ ಜಗತ್ತಿನ ನಾನಾ ಭಾಗಗಳಲ್ಲಿರುವ ಸಾಮಾನ್ಯ ಜನರ ಮೇಲಾಗುತ್ತಿರುವ ಮಾರಕ ಪ್ರಹಾರಗಳು.

೨) ಮುಂದುವರಿದ ರಾಷ್ಟ್ರಗಳು ಬಡ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಗಳ ಮೇಲೆ ಹತೋಟಿ ಸ್ಥಾಪಿಸಲು ಹೂಡುತ್ತಿರುವ ಕುಟಿಲೋಪಾಯಗಳು.

೩) ಆಫ್ಘಾನಿಸ್ತಾನ, ಇರಾಕ್ ಮೇಲೆ ಅಮೆರಿಕ ಸಾರಿದ ಅಮಾನವೀಯ, ಕರಾಳ ಸಮರಗಳು ಹಾಗೂ ಅಲ್ಲಿನ ಜನರು ಅನುಭವಿಸುತ್ತಿರುವ ಬವಣೆಗಳು.

೪) ತಾನೇ ದೊಡ್ಡ ಭಯೋತ್ಪಾದಕ ರಾಷ್ಟ್ರವಾಗಿದ್ದು, ಭಯೋತ್ಪಾದನೆಯ ಬಗ್ಗೆ ಏಕ ಮುಖದ ವ್ಯಾಖ್ಯೆ ನೀಡಿ, ತನ್ನ ಅಭಿಪ್ರಾಯವನ್ನು ಇತರ ರಾಷ್ಟ್ರಗಳು ಒಪ್ಪಬೇಕೆಂದು ವಿಶ್ವದ ದೊಡ್ಡಣ್ಣ ಅಮೆರಿಕದ ನಿರೀಕ್ಷೆ ಹಾಗೂ ಅದು ಹೂಡುತ್ತಿರುವ ವಿವಿಧ ಹುನ್ನಾರಗಳು.

೫) ವಿಶ್ವಸಂಸ್ಥೆಯಂಥ ಜಾಗತಿಕ ಸಂಸ್ಥೆಗಳ ಸೂಚನೆಗಳಿಗೆ ರವಷ್ಟೂ ಮಾನ್ಯತೆ ನೀಡದ ಹಾಗೂ ಅವುಗಳನ್ನು ಧಿಕ್ಕರಿಸುವ ಅಮೆರಿಕದ ಯಾಜಮಾನ್ಯ ರೀತಿ, ನೀತಿಗಳು.

೬) ವಿಶ್ವಾದ್ಯಂತ ಜರುಗುತ್ತಿರುವ ಪರಿಸರ ನಾಶ, ಅದನ್ನು ತಡೆಯುವ ಮಾರ್ಗೋಪಾಯಗಳು ಹಾಗೂ ಈ ವಿಷಯದಲ್ಲಿ ಮುಂದುವರಿದ ರಾಷ್ಟ್ರಗಳು ತಳೆಯುವ ಇಬ್ಬಗೆಯ ನಿಲುವುಗಳು.

೭) ಪ್ರಪಂಚಾದ್ಯಂತ ಬೆಳವಣಿಗೆ ಎಂದು ಗುರುತಿಸಲ್ಪಡುವ ಪ್ರಕ್ರಿಯೆಯು ಕೇವಲ ಕೆಲವರ ಪಾಲಾಗಿರುವುದು ಹಾಗೂ ಈ ಪ್ರಕ್ರಿಯೆಗೆ ಪರ್ಯಾಯಗಳನ್ನು ರೂಪಿಸುವುದು.

ಇವುಗಳಲ್ಲದೆ ಇತರ ಕೆಲವು ಗಹನ, ಪ್ರಮುಖ ವಿಷಯಗಳೂ ವಿಸ್ತೃತ ನೆಲೆಯಲ್ಲಿ ಚರ್ಚೆಯಾಗಿವೆ. ವಿಸಾವೇ ವಿವಿಧ ಜನಪರ ಆಂದೋಳನಗಳ ನಡುವೆ ಸೌಹಾರ್ದಯುತ ಸಂಬಂಧವನ್ನು ಬೆಸೆಯುವ ಹಾಗೂ ಹೋರಾಟ ಕಾರ್ಯಕ್ರಮಗಳಲ್ಲಿ ಅವು ಭಾಗವಹಿಸುವಂತೆ ಮಾಡುವ ಚಾಲಕ ಶಕ್ತಿಯಾಗುತ್ತಿರುವುದು ಒಂದು ಇತ್ಯಾತ್ಮಕ ಬೆಳವಣಿಗೆ. ಎಲ್ಲೆಡೆ ಅದಕ್ಕೆ ಅಭೂತಪೂರ್ವ ಸ್ವಾಗತ ಸಿಗುತ್ತಿರುವುದು ಗಮನಾರ್ಹ. ಅಲ್ಲದೆ, ಒಂದೇ ವೇದಿಕೆಯಡಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಜಮಾಯಿಸಿ, ಜಾಗತಿಕ ಮಟ್ಟದಲ್ಲಿ ಸಂಘಟಿತರಾಗುತ್ತಿರುವುದು ಈ ಆಂದೋಳನದ ಬೆಳೆಯುತ್ತಿರುವ ಶಕ್ತಿಯ ಪ್ರತೀಕ.

ಕಳೆದ ವರ್ಷದ ಜನವರಿ ಮೊದಲನೇ ವಾರದಲ್ಲಿ ಹೈದರಾಬಾದಿನಲ್ಲಿ ಒಂದು ವಾರದ ಕಾಲ ಏಷಿಯಾ ಸಾಮಾಜಿಕ ವೇದಿಕೆಯ ಸಮಾವೇಶ ಜರುಗಿತು. ಇದಕ್ಕೂ ಜನರಿಂದ ಸಿಕ್ಕ ಪ್ರತಿಕ್ರಿಯೆ ಉತ್ತಮವಾಗಿತ್ತು. ವಿಸಾವೇ-೨೦೦೨ರಲ್ಲಿ ಜರುಗಿದ ಸಭೆಯಲ್ಲಿ ವಿಸಾವೇಯನ್ನು ಬ್ರೆಜಿಲ್‌ನ ಆಚೆ ಕೊಂಡೊಯ್ಯಬೇಕೆಂದು ನಿರ್ಧರಿಸಲಾಯಿತು. ಏಷಿಯಾ-ಆಫ್ರಿಕಾ ಖಂಡಗಳಲ್ಲಿ ಜಗತ್ತಿನ ಜನಸಂಖ್ಯೆಯ ಸುಮಾರು ೨/೩ರಷ್ಟು ಜನ ವಾಸಿಸುತ್ತಿದ್ದಾರೆ. ಅಲ್ಲಿ ಅಧಿಕ ಸಂಖ್ಯೆಯ ಜನರು ಹಸಿವೆ, ಬಡತನ, ಅನಕ್ಷರತೆ, ಅನಾರೋಗ್ಯ ಮುಂತಾದ ಜ್ವಲಂತ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವರನ್ನು ತಲುಪುವುದು ವಿಸಾವೇಯ ಆಶಯ.

ಭಾರತ ಒಂದು ಪ್ರಮುಖ ಅಭಿವೃದ್ಧಿಶೀಲ ರಾಷ್ಟ್ರ. ಏಷ್ಯಾ ಖಂಡದಲ್ಲಿ ಮಹತ್ವ ಸ್ಥಾನವಿರುವ ಇದರ ವೈಶಿಷ್ಟ್ಯಗಳು ಅನೇಕ. ಬಹುಮುಖೀ ಸಂಸ್ಕೃತಿ, ಬಹು ಧರ್ಮಗಳ, ಭಾಷೆಗಳ, ವೈವಿಧ್ಯತೆಗಳ ನಾಡಿದು. ಬಹುತ್ವವೇ ಇದರ ಜೀವಾಳ. ಇದು ಪುರಾತನ ನಾಗರಿಕತೆ ಹೊಂದಿರುವ ರಾಷ್ಟ್ರ. ಆದರೆ ಇತ್ತೀಚಿನ ದಶಕಗಳಲ್ಲಿ ಇಲ್ಲಿ ಧಾರ್ಮಿಕ ಪಂಥಾಭಿಮಾನ, ಭಯೋತ್ಪಾದನೆ, ಕೋಮು ಹಾಗೂ ಮೂಲಭೂತ ವಾದಗಳಂಥ ಚಟುವಟಿಕೆಗಳು ಬೆಳೆಯುತ್ತಿರುವುದು ಆತಂಕಕಾರಿ ವಿಷಯ. ಈ ಶಕ್ತಿಗಳು ಜಾಗತೀಕರಣದ ಶಕ್ತಿಗಳ ಜೊತೆ ಸಾಂಗತ್ಯ ಹೊಂದಿರುವುದು ಗಂಡಾಂತರಕಾರಿ ಬೆಳವಣಿಗೆ. ಈ ರೀತಿಯ ನಕಾರಾತ್ಮಕ ಬೆಳವಣಿಗೆಗಳಿಗೆ ಅನೇಕ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಇತರ ಪುರೋಗಾಮಿ ಸಂಘಟನೆಗಳು ತೀವ್ರ ಪ್ರತಿರೋಧವನ್ನು ಒಡ್ಡುತ್ತಿವೆ. ಇದು ಸ್ವಾಗತಾರ್ಹ ಪ್ರಕ್ರಿಯೆ. ಜಾಗತೀಕರಣದ ನಾನಾ ಸವಾಲುಗಳನ್ನು ಎದುರಿಸಲು ಭಾರತ ಸೂಕ್ತ ಎಂದು ಗುರುತಿಸಿ, ಮುಂಬೈನಲ್ಲಿ ೨೦೦೪ರ ಜನವರಿ ೧೬ರಿಂದ೨೧ರ ವರೆಗೆ ವಿಸಾವೇ-೨೦೦೪ರ ಸಭೆ ಜರುಗಲಿದೆ.

ವಿಸಾವೇ-ಭಾರತ ಈ ಕೆಳಕಂಡ ವಿಷಯಗಳ ಬಗ್ಗೆ ಗಮನಹರಿಸಿ, ಸೂಕ್ತ ನಿಲುವುಗಳನ್ನು ತೆಗೆದುಕೊಂಡು ಅವುಗಳಿಗೆ ಪೂರಕವಾಗುವಂಥ ಕಾರ್ಯಕ್ರಮಗಳನ್ನು ರೂಪಿಸುತ್ತದೆ.

೧) ಸಾಮ್ರಾಜ್ಯಶಾಹೀ ಜಾಗತೀಕರಣ.
೨) ಪಿತೃ ಪ್ರಾಧಾನ್ಯತೆ.
೩) ಸೈನಿಕವಾದ (ಯುದ್ಧ ಮನಸ್ಥಿತಿ) ಹಾಗೂ ಶಾಂತಿ.
೪) ಕೋಮುವಾದ (ಧಾರ್ಮಿಕ ಪಂಥಾಭಿಮಾನ ಮತ್ತು ಮೂಲಭೂತವಾದ).
೫) ಜಾತೀಯತೆ ಹಾಗೂ ಜನಾಂಗವಾದ (ಶೋಷಣೆ, ಹೊರತುಪಡಿಸುವಿಕೆ ಮತ್ತು ಕೆಲಸ ಹಾಗೂ ವಂಶದ ಆಧಾರದ ಮೇಲೆ ಪಕ್ಷಪಾತ).

ಮುಂಬೈನಲ್ಲಿ ಜರುಗಲಿರುವ ವಿಸಾವೇ-೨೦೦೪ ರಲ್ಲಿ ಸುಮಾರು ೭೫,೦೦೦ ಪ್ರತಿನಿಧಿಗಳು ಭಾಗವಹಿಸುವ ನಿರೀಕ್ಷೆಯಿದೆ. ವಿದೇಶಗಳಿಂದ ಆಗಮಿಸುವ ಪ್ರತಿನಿಧಿಗಳು ಸುಮಾರು ೧೦,೦೦೦. ಸುಮಾರು ೧೦,೦೦೦ ಯುವ ಜನರು ಈ ವೇದಿಕೆಯಡಿ ಸೇರುವರೆಂದು ಒಂದು ಅಂದಾಜು. ಪೋರ್ಟೊ ಅಲೆಗ್ರೆಯಲ್ಲಿ ಪ್ರಾರಂಭಿಸಿದ ಪರಂಪರೆಯಂತೆ ಇಲ್ಲೂ ಪ್ರತ್ಯೇಕ ಯುವ ವೇದಿಕೆಯಿರುತ್ತದೆ. ವಿದೇಶಗಳಿಂದಲೇ ಸುಮಾರು ೨,೦೦೦ ಯುವಜನರು ಪಾಲ್ಗೊಳ್ಳಬಹುದು. ಹಲವು ಕಾರ್ಯಾಗಾರಗಳು, ಕಮ್ಮಟಗಳು, ಗೋಷ್ಠಿಗಳು ಹಾಗೂ ಇತರ ಕಾರ್ಯಕ್ರಮಗಳನ್ನೂ ಯೋಜಿಸಲಾಗಿದೆ.

ವಿಸಾವೇ-೨೦೦೪ರ ಸಿದ್ಧತೆಯ ಒಂದು ಭಾಗವಾಗಿ ಕರ್ನಾಟಕ ಸಾಮಾಜಿಕ ವೇದಿಕೆ ಅಸ್ತಿತ್ವಕ್ಕೆ ಬಂದಿದೆ. ಇದು ದಾಪುಗಾಲು ಹಾಕುತ್ತಾ ಒಂದು ಪ್ರಬಲ ಸಾಮೂಹಿಕ ಸಂಘಟನೆಯಾಗುವ ಸೂಚನೆಗಳು ಕಂಡುಬರುತ್ತಿವೆ. ಇದೊಂದು ಇತ್ಯಾತ್ಮಕ ಬೆಳವಣಿಗೆ ಎನ್ನಬಹುದು.

ಆದರೆ ವಿಸಾವೇ ಬಗ್ಗೆ ಅಪಸ್ವರಗಳೂ ಎದ್ದಿವೆ. ವಿಸಾವೇಯ ಮೂರು ವರ್ಷಗಳ ಅಸ್ತಿತ್ವದ ಅವಧಿಯಲ್ಲಿ ಬರೀ ಚರ್ಚೆಗಳಾಗಿವೆ ವಿನಃ ಕ್ರಿಯಾತ್ಮಕ ಚಟುವಟಿಕೆಗಳು ಜರುಗಿಲ್ಲ ಎಂದು ಕೆಲವು ತೀವ್ರವಾದಿ ಸಂಘಟನೆಗಳು ಬೊಟ್ಟುಮಾಡಿ ತೋರಿಸಿವೆ. ವಿಶ್ವ ಬ್ಯಾಂಕ್, ಫೋರ್ಡ್ ಫೌಂಡೇಶನ್ ಹಾಗೂ ಅಂತಹ ಇತರ ಸಂಸ್ಥೆಗಳಿಂದ ಧನ ಸಹಾಯ ಸ್ವೀಕರಿಸುವ ಕೆಲವು ಸರ್ಕಾರೇತರ ಸಂಸ್ಥೆಗಳು (ಎನ್.ಜಿ.ಓ.ಗಳು) ಈ ಸಂಘಟನೆಯಲ್ಲಿ ಇರುವುದರಿಂದ ಬಂಡವಾಳಶಾಹಿ ಶಕ್ತಿಗಳು ನುಸುಳಿ, ಪ್ರತಿಭಟನೆಯನ್ನು ಕುಗ್ಗಿಸಿ, ದಾರಿ ತಪ್ಪಿಸುವ ಸಂದರ್ಭಗಳೇ ಜಾಸ್ತಿ ಎಂದು ಅವುಗಳ ತಕರಾರು. ಅದೇನೇ ಇರಲಿ, ಬೃಹತ್ ಸ್ವರೂಪದ ಜಾಗತೀಕರಣದ ಪರವಾದ ಶಕ್ತಿಗಳನ್ನು ಎದುರಿಸಲು ಬಹುಮುಖ ಹೋರಾಟ ಅನಿವಾರ್ಯ. ಇಂತಹ ಜಾಗತಿಕ ಸಂಘಟನೆಯಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಇರುವುದು ಸಹಜ. ಆದ್ದರಿಂದ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ, ಚಳುವಳಿಯನ್ನು ಮುಂದುವರಿಸುವುದು ಇಂದಿನ ತುರ್ತು.

ವಿಸಾವೇ-೨೦೦೪ ಸಾಮ್ರಾಜ್ಯಶಾಹೀ ಜಾಗತೀಕರಣ ವಿರುದ್ಧದ ಹೋರಾಟದಲ್ಲಿ ಹಾಗೂ ಪರ್ಯಾಯಗಳನ್ನು ಹುಡುಕುವ ಪ್ರಕ್ರಿಯೆಗಳಲ್ಲಿ ಒಂದು ಮೈಲಿಗಲ್ಲಾಗಲಿ. ಸಮಷ್ಟಿಯ ಹಿತದಲ್ಲಿ ಹೋರಾಡುವ ಜನರಿಗೆ ಸ್ಫೂರ್ತಿದಾಯಕ ಶಕ್ತಿ ನೀಡಲಿ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೧೦೦, ೨ನೇ 'ಎ' ಕ್ರಾಸ್, ಗವೀಪುರಂ ಬಡಾವಣೆ
ಬೆಂಗಳೂರು - ೫೬೦ ೦೧೯

# ಶಿಕ್ಷಣ ಮಾಧ್ಯಮವಾಗಿ ಮಾತೃಭಾಷೆಯ ಪ್ರಾಧಾನ್ಯ

ಪ್ರೊ॥ ಜಿ. ಟಿ. ನಾರಾಯಣರಾವ್

**ಮ**ಗುವಿಗೆ ಹುಟ್ಟಿನಿಂದಲೇ ಎರಡು ಬಳುವಳಿಗಳು ಒದಗಿರುತ್ತವೆ: ಒಡಲು ಮತ್ತು ನುಡಿ. ಒಡಲು ಎಂದರೆ ದೇಹ, ಪರಿಸರದಲ್ಲಿ ಮಗುವಿನ ಅಸ್ತಿತ್ವವನ್ನು ಎತ್ತಿ ಹಿಡಿವ ಜೀವಂತ ಸಲಕರಣೆ. ಮಗು ತನ್ನ ಇರವನ್ನೂ ಲಹರಿಯನ್ನೂ ಮೊದಲು ತಾಯಿಗೆ ಬಳಿಕ ಇತರರಿಗೆ ತಿಳಿಯಪಡಿಸುವ ಮಾಧ್ಯಮವೇ ನುಡಿ, ಅಂದರೆ ಭಾಷೆ. ಒಡಲು ನಿಸರ್ಗದ ವರ, ನುಡಿ ಹೀಗಲ್ಲ. ಹುಟ್ಟುತ್ತಲೇ ಯಾವ ಮಗುವೂ ಮಾತಾಡುವುದಿಲ್ಲ. ಆದರೆ ಭಾಷೆಯನ್ನು ಕೇಳಿ ಕಲಿತು ಅರ್ಥಮಾಡಿಕೊಳ್ಳುವ, ಸ್ಮರಣೆಯಲ್ಲಿಡುವ ಮತ್ತು ಅದರಲ್ಲಿ ಅಭಿವ್ಯಕ್ತಿಸುವ ಸುಪ್ತ ಸಾಮರ್ಥ್ಯ ಪ್ರತಿಯೊಂದು ಮಗುವಿಗೂ ಪ್ರಾಪ್ತವಾಗಿರುತ್ತದೆ. ಎಂದೇ ಈ ಮುಂದಿನ ಸೂಕ್ತಿ: ನಿಸರ್ಗದಿಂದ ಮಾನವ, ಮಾನವನಿಂದ ಭಾಷೆ, ಭಾಷೆಯಿಂದ ನಿಸರ್ಗದ ಪುನಸ್ಸೃಷ್ಟಿ. ಸಾಹಿತ್ಯ, ಕಲೆ, ವಿಜ್ಞಾನ ಎಲ್ಲವೂ ಪುನಸ್ಸೃಷ್ಟಿಯ ವಿವಿಧ ಪ್ರಕಾರಗಳು. ಸಹಜ ಸ್ಥಿತಿಯಲ್ಲಿ ತಾಯಿ ತನ್ನ ಮನೆಮಾತಿನಲ್ಲಿಯೇ ಮಗುವನ್ನು ಲಲ್ಲೆ ಮಾಡುವುದು ರೂಢಿ. ''ಅಳಬೇಡ ನನಕಂದ'' ಎಂದು ಸಮಾಧಾನಿಸುವ ಮಾತು ಹೇಳುವಾಗ, ''ನಾಕೆಮ್ಮೆ ಕರೆದ ನೊರೆಹಾಲ ನಿನಗೀವೆ'' ಎಂದು ಆಸೆ ಮೂಡಿಸುವಾಗ, ಅಥವಾ ''ಪೋಗದಿರೆಲೋ ರಂಗ ಬಾಗಿಲಿಂದಾಚೆಗೆ'' ಎಂದು ಎಚ್ಚರಿಸುವಾಗ, ಇತ್ಯಾದಿ,

> ಮಾತೃಭಾಷೆಯನುಳಿದು ಬೇರೆ
> ಭಾಷೆಗಳಿಲ್ಲ
> ಜ್ಞಾತೃತ್ವ ಜ್ಞೇಯತ್ವಕೇರುತ್ತ ಸರ್ವತ್ರ
> ಭ್ರಾತೃತ್ವ ವರ್ಧಿಸುತ್ತ ಸೌಹಾರ್ದ
> ಪಸರಿಸಲು...
> ಶ್ರೋತೃವಾಗೆಲೊ ತಾಯ ಸವಿನುಡಿಗೆ
> ಅತ್ರಿಸೂನು

ಮಗುವಿನ ಸುಪ್ತ ಮನದಲ್ಲಿ ಭಾವನೆ-ಭಾಷೆ ಸಂಬಂಧ ಕ್ರಮೇಣ ಅಚ್ಚುಗೊಳ್ಳುತ್ತದೆ. ಇದೇ ಮಾತೃಭಾಷೆ. ಇದರಲ್ಲಿ ವಸ್ತು, ಕ್ರಿಯೆ, ಗುಣ, ಲಕ್ಷಣ ಮುಂತಾದವೆಲ್ಲವೂ ತೀರ ಸಹಜವಾಗಿ ಎರಕಗೊಂಡಿರುತ್ತವೆ.

ಮೇಲಿನ ಮೂರು ಉದಾಹರಣೆಗಳನ್ನು ಇನ್ನೊಮ್ಮೆ ಪರಿಶೀಲಿಸೋಣ. 'ಅಳುವುದು' ಮಗುವಿನ ಅಸಮಾಧಾನದ ಅಭಿವ್ಯಕ್ತಿ. ಇದು ಶಮನವಾಗಿ ಮಗು ನಗಬೇಕಾದರೆ ಅದಕ್ಕೆ 'ನೊರೆಹಾಲು' ಕುಡಿಸುವ ಆಸೆ ತೋರಿಸಬೇಕು. ಹಾಲು ಕುಡಿದ ಮಗು ಆಡುತ್ತ ನಲಿಯುತ್ತ ಮನೆಯಿಂದ ಹೊರಕ್ಕೆ ಹೋಗಲು ಚಡಪಡಿಸುತ್ತದೆ. ಇದು ಅಪಾಯಕ್ಕೆ ಕಾರಣವಾದೀತು ಎಂಬ ಹೆದರಿಕೆಯಿಂದ ತಾಯಿ ಎಚ್ಚರಿಕೆ ನುಡಿ ಹೇಳುತ್ತಾಳೆ 'ಪೋಗದಿರೆಲೋ ರಂಗ' ಮುಂತಾಗಿ. ಇಂಥ ಒಂದು ಒಲುಮೆಯ ಕಲಿಕೆಯಲ್ಲಿ ಮಗುವಿನ ಮನಸ್ಸು ಪ್ರಫುಲ್ಲಗೊಂಡು ಅದರ ಭಾಷಾಸಂಪತ್ತು ಅಪ್ರಯತ್ನಿತವಾಗಿ ವೃದ್ಧಿಸುತ್ತದೆ. ಮಾತೃಭಾಷೆಯ ಮೂಲಕ ಮನೆಯಲ್ಲೇ ಲಭಿಸುವ ಈ ಮೊದಲ ಪಾಠಗಳ ಜೊತೆಗೆ ಸಂಗೀತ, ನಾಟಕ, ಹರಿಕತೆ, ಓದು, ಬರೆಹ ಮುಂತಾದವೂ ಸೇರಿ ಭಾಷಾಭಿವ್ಯಕ್ತಿ ಎಳೆಮನಗಳ ಸಹಜ ಚಟುವಟಿಕೆ ಆಗುವುದು. ಜನಾಂಗದ ಮಾತೃಭಾಷೆಯೇ ಆ ಸಂಸ್ಕೃತಿಯ ಕಣಜ ಹಾಗೂ ಪ್ರಸಾರಕ ಕೂಡ. ಸೀತೆ ಎಂದರೆ ಸ್ತ್ರೀ ಒಬ್ಬಳ ಹೆಸರಾಗಿರುವುದರ ಜೊತೆಗೆ ಭಾರತೀಯ ಸಂಸ್ಕೃತಿಯ ಒಂದು ಶ್ರೇಷ್ಠ ಮೌಲ್ಯವೂ ಆಗಿದೆ. ಕಂಸ ನಾವಾಗಬಾರದು, ಕೃಷ್ಣ ಆಗೋಣ ಎಂಬ ಸರಳ ವಾಕ್ಯದಲ್ಲಿರುವ ಸಾಂಸ್ಕೃತಿಕ ಮೌಲ್ಯವನ್ನು ಗಮನಿಸಬೇಕು.

ಯುಕ್ತ ಪ್ರಾಯದಲ್ಲಿ ಶಾಲೆಗೆ ದಾಖಲಾಗುವ ಎಳೆ ಮನಸ್ಸಿಗೆ – ಈಗ ಅವನೊಬ್ಬ ವಿದ್ಯಾರ್ಥಿ – ಅಲ್ಲಿಯ ಪಾಠ ಪ್ರವಚನ ಮಾತುಕತೆ ಎಲ್ಲವೂ ಮಾತೃಭಾಷೆಯಲ್ಲೇ ನಡೆಯುತ್ತಿದ್ದರೆ ಹೊಸ ಅವಕಾಶಗಳು ತಂತಾನೇ ಎದುರಾಗುತ್ತವೆ. ಇವನ್ನು ಆತ ಉತ್ಸಾಹದಿಂದ ಸ್ವಾಗತಿಸಿ ಶಿಕ್ಷಣದ ನಿಚ್ಚಣಿಕೆಯಲ್ಲಿ ಸಲೀಸಾಗಿ ಏರಲು ಮುಂದಾಗುತ್ತಾನೆ, ಅಂದರೆ ನೀರಿಗೆ ಬಿಟ್ಟ ಮೀನಿನಂತಾಗುವನು. ಎಲ್ಲ ಶಿಕ್ಷಣವೇತ್ತರಿಗೂ ಗೊತ್ತಿರುವ ಮತ್ತು ಆ ರೀತಿ ಅವರು ಸಾರುತ್ತಿರುವ ಜೀವನ ಸತ್ಯವಿದು. ಆದರೆ ವಾಸ್ತವ ಪರಿಸ್ಥಿತಿ ಇಷ್ಟು ನೇರವಾಗಿಲ್ಲ. ನಮ್ಮ ರಾಜ್ಯದ ಶಾಲಾಕಾಲೇಜುಗಳಲ್ಲಿ ಬೋಧನ ಮಾಧ್ಯಮ ಬಹುತೇಕ ಇಂಗ್ಲಿಷ್. ಕನ್ನಡ ಮಾಧ್ಯಮ ಸಂಸ್ಥೆಗಳೂ ಇಂಗ್ಲಿಷಿಗೆ ರೂಪಾಂತರಗೊಳ್ಳಲು ತಹತಹಿಸುತ್ತಿವೆ.

ಮೈಖೇಲ್ ಫ್ಯಾರಡೇ (೧೭೯೧-೧೮೬೭) ವಿದ್ಯುಚ್ಛಕ್ತಿಯ ಆವಿಷ್ಕರ್ತೃ ಎಂಬ ಸಂಗತಿ ಇಂದು ಶಾಲಾವಿದ್ಯಾರ್ಥಿಗಳಿಗೂ ತಿಳಿದಿದೆ. ಆತನ ಯುಗಪ್ರವರ್ತಕ ಪ್ರತಿಭೆಗೆ ಸಂಶೋಧನಾವಕಾಶ ಒದಗಿದ್ದು ತಾಯಿನುಡಿಯಲ್ಲಿ ನಿಹಿತವಾಗಿರುವ ಉತ್ತೇಜಕ ಗುಣಕ್ಕೆ ಒಂದು ನಿದರ್ಶನ. ಅಂದು ಖುದ್ದು ಇಂಗ್ಲೆಂಡಿನಲ್ಲೇ ಶಿಕ್ಷಣ ಮಾಧ್ಯಮವಾಗಿದ್ದುದು ದೇವಭಾಷೆ ಎಂದು ಜನ ಭಾವಿಸಿದ್ದ ಲ್ಯಾಟಿನ್. ಕುಲೀನರ ಸಮಸ್ತ ವ್ಯವಹಾರಗಳೂ ಇದರಲ್ಲೇ. ಹಾಗಾದರೆ ಇಂಗ್ಲಿಷ್? ಇದು ಕೇವಲ ಗ್ರಾಮೀಣ ಮಂದಿಯ, ಅಂದರೆ ಬಡವರ ಮತ್ತು ಕೆಳವರ್ಗದವರ, ಆಡುಭಾಷೆ. ಇಂದಿಗೂ ಖುದ್ದು ಕರ್ನಾಟಕದಲ್ಲೇ ಕನ್ನಡಕ್ಕೆ ಒದಗಿರುವ ಅವಜ್ಞೆಗೆ ಸಮಾನವಾದದ್ದು ಅಂದು ಇಂಗ್ಲೆಂಡಿನಲ್ಲಿ ಇಂಗ್ಲಿಷಿನ ನೆಲೆ ಮತ್ತು ಬೆಲೆ. ಬಡವ ಫ್ಯಾರಡೇ ''ಉಳ್ಳವರು ಶಿವಾಲಯವ ಮಾಡುವರಯ್ಯಾ ನಾನೇನ ಮಾಡಲಿ ಬಡವನಯ್ಯಾ'' ಎನ್ನುವಂತೆ ಚಿಲ್ಲರೆ ಕೆಲಸ ಮಾಡಿ ಹೊಟ್ಟೆ ಹೊರೆಯಬೇಕಾಯಿತು. ಪುಸ್ತಕಗಳಿಗೆ ರಟ್ಟು ಕಟ್ಟುವ ಅಂಗಡಿಯಲ್ಲಿ ಈ ಯುವ ಪ್ರತಿಭೆ ಒಬ್ಬ ಸಹಾಯಕ. ಹೆಚ್ಚಿನ ಪುಸ್ತಕಗಳು ಲ್ಯಾಟಿನ್ ಭಾಷೆಯಲ್ಲಿ ಮುದ್ರಣವಾಗಿದ್ದವು. ಎಂದೇ ಇವನಿಗೆ ಅಪ್ರವೇಶ್ಯ. ಆಗ ಆಕಸ್ಮಾತ್ತಾಗಿ ಒಂದು ಹಳೇ ವಿಶ್ವಕೋಶ ಇವನ ಕಣ್ಣಿಗೆ ಬಿತ್ತು. ಅದೃಷ್ಟ, ಅದರಲ್ಲಿ ವಿಜ್ಞಾನದ ಮೂಲಭೂತ ಪರಿಕಲ್ಪನೆ, ಸೂತ್ರ, ವ್ಯಾಖ್ಯಾನ ಮುಂತಾದವು 'ಕೂಲಿಗಳ ಭಾಷೆ' ಇಂಗ್ಲಿಷಿನಲ್ಲಿತ್ತು. ನಮಗೆ ಇಂದು ಅನ್ನಿಸುವಂತೆ ಈ ಒಂದು 'ಯಃಕಶ್ಚಿತ್ ಘಟನೆ' ಅಂದು ಆತನ ಫಲವಂತ ಮಿದುಳಿನೊಳಗೆ ವಿದ್ಯುತ್ತಿನ ಬೆಳಕು ಮಿನುಗಿಸಲು ಕಾರಣವಾಯಿತು.

ಬಡತನದ ಕತ್ತಲೆಯಲ್ಲಿ, ಹಳ್ಳಿಗಳ ಮೂಲೆಯಲ್ಲಿ, ತಿಳಿವಳಿಕೆ ಇರದ ತಂದೆ ತಾಯಿಗಳ ಕುರುಡು ತೆಕ್ಕೆಯಲ್ಲಿ, ಇತ್ಯಾದಿ, ನವೆಯುತ್ತಿರುವ ನಮ್ಮ ಎಳೆ ಮಕ್ಕಳು ಒಬ್ಬೊಬ್ಬರಲ್ಲಿಯೂ ಫ್ಯಾರಡೇಸದೃಶ ಪ್ರತಿಭೆ ಅಡಗಿರುತ್ತದೆ ಎಂಬ ನೈಸರ್ಗಿಕ ಸತ್ಯ ನಮಗೆ ತಿಳಿದಿದೆಯೇ? ಇದನ್ನು ದೀಪ್ತಿಸಲು ಮಾತೃಭಾಷೆಯೇ ಸಹಜ ಪ್ರೇರಕ ಎಂಬ ಅರಿವು ನಮಗಿದೆಯೇ? ಇಂಥ ಸಹಜ ಸನ್ನಿವೇಶ ರಾಜಕೀಯ ಮುಂತಾದ ಅಶೈಕ್ಷಣಿಕ ಕಾರಣಗಳಿಂದಾಗಿ ನಮ್ಮಲ್ಲಿ ಏರ್ಪಟ್ಟಿಲ್ಲವಾಗಿ ಎಳೆ ಕಂದಗಳು ಮರುಭೂಮಿಯಲ್ಲಿ ಸೆರೆಗೊಂಡ ಹೂ ಮೊಗ್ಗುಗಳಂತೆ ಮುರುಟಿ ಮಡಿಯುತ್ತವೆ ಎಂಬ ಪ್ರಜ್ಞೆ ನಮ್ಮಲ್ಲಿದೆಯೇ?

> ಮಾತೃಭಾಷೆಯನುಳಿದು ಬೇರೆ ಭಾಷೆಗಳಿಲ್ಲ
> ಜ್ಞಾತೃತ್ವ ಜ್ಞೇಯತ್ವಕೇರುತ್ತ ಸರ್ವತ್ರ
> ಭ್ರಾತೃತ್ವ ವರ್ಧಿಸುತ್ತ ಸೌಹಾರ್ದ ಪಸರಿಸಲು...
> ಶ್ರೋತೃವಾಗೆಲೊ ತಾಯ ಸವಿನುಡಿಗೆ ಅತ್ರಿಸೂನು.

ಇಲ್ಲಿ ಒಂದು ಸಂಗತಿ ಗಮನಿಸಬೇಕು. ಸಂಸ್ಕೃತ, ಲ್ಯಾಟಿನ್ನುಗಳನ್ನು ಸಹ ಒಳಗೊಂಡಂತೆ ಎಲ್ಲ ಭಾಷೆಗಳೂ ಮಾನವಕೃತ, ನಿಸರ್ಗದತ್ತವಲ್ಲ. ಆಯಾ ಜನಾಂಗದ ಸ್ಥಿತಿ-ಗತಿ, ಆಸೆ-ಅಭೀಪ್ಸೆ, ಅನುಭವ-ಆವಶ್ಯಕತೆ ಮುಂತಾದವುಗಳಿಗೆ ಅನುಗುಣವಾಗಿ ಅವು ವಿಕಸಿಸುತ್ತವೆ, ಪರಸ್ಪರ ಕೊಡುಕೊಳು ಪ್ರಕ್ರಿಯೆಗಳಲ್ಲಿ ನಿರತವಾಗುತ್ತವೆ, ರಾಜಕೀಯ ಅಥವಾ ಆರ್ಥಿಕ ಕಾರಣಗಳಿಗಾಗಿ ಹೋರಾಟಗಳಿಗೂ ಇಳಿಯುತ್ತವೆ. ಇಂಗ್ಲಿಷ್ ಏನು ಮಾಡಿತು ಗೊತ್ತೇ? ಭಾರತದ ಪ್ರಾಚೀನ ಮತ್ತು ಸಹಜ ಭಾಷೆಗಳನ್ನು ಹಿಮ್ಮೆಟ್ಟಿಸಿ ವಿಜೃಂಭಿಸಲು ತೊಡಗಿತು. ಇದು ಐತಿಹಾಸಿಕ ತಥ್ಯ. ಆದ್ದರಿಂದ ಯಾವುದೇ ಭಾಷೆ ಸ್ವತಃ ಅದರಷ್ಟಕ್ಕೆ ಶ್ರೇಷ್ಠವೂ ಅಲ್ಲ ಕನಿಷ್ಠವೂ ಅಲ್ಲ. ಅದು ನಮ್ಮ ಸೃಷ್ಟಿ. ಅದಕ್ಕೆ ಹಿರಿಮೆ ಒದಗುವುದು ನಾವು ಅದನ್ನು ಬಳಸುವ ಕ್ರಮದಿಂದ ಮಾತ್ರ. ತೊಟ್ಟು ಕಳಚಿದ ಹಣ್ಣು ಮರದಿಂದ ಕೆಳಕ್ಕೆ ಕೆಡೆಯುವ ಸರಳ ನೈಸರ್ಗಿಕ ವಿದ್ಯಮಾನ ಕಾಣುತ್ತದೆ. ಈ ಅನುಭವವನ್ನು ಅಭಿವ್ಯಕ್ತಿಸುವಾಗ, ಮುಂದೆ ಇದರ ಹಿನ್ನೆಲೆ ಕಾರಣವನ್ನು ಅರಸುವಾಗ ಮತ್ತು ಈ ಕಾರಣವನ್ನು ಸದೃಶ ವಿದ್ಯಮಾನಗಳಿಗೆ ಅನ್ವಯಿಸಿ ನಿಸರ್ಗದ ನಿಯಮಗಳನ್ನು ಆವಿಷ್ಕರಿಸಿ ನಿರೂಪಿಸುವಾಗ ನಾವು ಭಾಷೆಗೆ ನೂತನಾಯಾಮ ಆವಾಹಿಸುತ್ತೇವೆ. ಮಹಾಕವಿ ಶೇಕ್ಸ್‌ಪಿಯರ್ (೧೫೬೪- ೧೬೧೬) ತನ್ನ ಪ್ರಗಲ್ಭ

ಪ್ರತಿಭೆಯನ್ನು ತಾಯಿನುಡಿ ಇಂಗ್ಲಿಷಿನಲ್ಲಿ ಅಭಿವ್ಯಕ್ತಿಸಿದಾಗ ಭಾಷೆಗೆ ಹೊಸ ಅಂತಸ್ತು ಪ್ರಾಪ್ತವಾಯಿತು ಎಂಬುದು ಗಮನಾರ್ಹ. ಮಾತೃಭಾಷೆಯಲ್ಲಿ ನಿಹಿತವಾಗಿರುವ ಮೋಹಕ ಸೌಂದರ್ಯ ಹಾಗೂ ನೈಜ ತ್ರಾಣ ಸಾಮಾನ್ಯರ (ಅಷ್ಟೇಕೆ ಪರಭಾಷಿಕರ ಕೂಡ) ಅರಿವಿಗೆ ಬರುವುದು ಅದರಲ್ಲೇ ಸೃಜನಶೀಲ ಕ್ರಿಯಾಕಲಾಪಗಳು ನಡೆದಾಗ ಮಾತ್ರ.

''ಇವೆಲ್ಲ ವಾದದಲ್ಲಿ ಸರಿ. ಆದರೆ ಇಂದಿನ ಅಂತರಜಾಲ ಯುಗದಲ್ಲಿ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದಲ್ಲೇ ಶಿಕ್ಷಣ ಕೊಡಿಸುವುದು ಅಪೇಕ್ಷಣೀಯವಲ್ಲವೇ ? ಇಂಗ್ಲಿಷಿನಲ್ಲಿ ಸಹಜವಾಗಿ ಅರಳಿರುವ ವಿಜ್ಞಾನದ ವಿಶಿಷ್ಟ ಪಾರಿಭಾಷಿಕ ಪದಗಳನ್ನು ಕನ್ನಡಕ್ಕೆ ಹೇಗೆ ಆಮದಿಸೋಣ ?'' ಮುಂತಾದ ಸಹಜ ಸಂದೇಹಗಳನ್ನೆತ್ತಿ ತನ್ಮೂಲಕ ಕನ್ನಡ ಮಾಧ್ಯಮದ ಬಗ್ಗೆ ಗಂಭೀರ ಆತಂಕಗಳನ್ನು ವ್ಯಕ್ತಪಡಿಸುವವರ ಅವಗಾಹನೆಗೆ ನನ್ನ ಅಸಂಖ್ಯ ಅನುಭವಗಳಿಂದ ಆಯ್ದ ಒಂದನ್ನು ಇಲ್ಲಿ ನಿರೂಪಿಸುತ್ತೇನೆ. ಕೆಲವು ವರ್ಷಗಳ ಹಿಂದಿನ ಘಟನೆ. ಸ್ನೇಹಿತನೊಬ್ಬನ ಮನೆಯಲ್ಲಿ ನನಗೆ ಅನಿರೀಕ್ಷಿತವಾಗಿ ಸ್ವಾಮಿ ಚಿನ್ಮಯಾನಂದರ ಭೇಟಿ ಆಯಿತು. ಸ್ವಾಮೀಜಿಗೆ ಆತ ನನ್ನನ್ನು ಕನ್ನಡ ವಿಶ್ವಕೋಶದ ವಿಜ್ಞಾನ ಸಂಪಾದಕ ಎಂದು ಪರಿಚಯಿಸಿದ.

''ಅಂದರೆ ನೀವು ಇಂಗ್ಲಿಷಿನಲ್ಲಿರುವ ವಿಜ್ಞಾನ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸುವುದೇ ?''

ಸ್ವಾಮೀಜಿಯ ಈ ಪ್ರಶ್ನೆ ಸ್ವಲ್ಪ ಅಧಿಕ ಪ್ರಸಂಗ ಮತ್ತು ಅನುಗ್ರಹಭಾವಯುತವೆಂದು ನನಗೆ ಹೊಳೆಯಿತು. ''ಅಲ್ಲ ಸ್ವಾಮೀಜಿ! ನಾವು· ಕನ್ನಡದಲ್ಲೇ ಮೂಲ ಲೇಖನಗಳನ್ನು ತಜ್ಞರಿಂದ ಬರೆಯಿಸಿ ಪ್ರಕಟಿಸುತ್ತೇವೆ ಎಂದೆ.''

ತುಸು ಅಪ್ರತಿಭರಾದ ಅವರೆಂದರು, ''ಹಾಗಾದರೆ ಥಿಯರಿ ಆಫ್ ರಿಲೆಟಿವಿಟಿಯನ್ನು ಕನ್ನಡದಲ್ಲಿ ಹೇಗೆ ಬರೆಯಿಸುತ್ತೀರಿ ?''

''ಐನ್‌ಸ್ಟೈನ್ ತಮ್ಮ ಆ ಕ್ರಾಂತಿಕಾರಕ ಮತ್ತು ನವಯುಗ ಪ್ರವರ್ತಕ ಸಿದ್ಧಾಂತವನ್ನು ಅವರ ತಾಯಿನುಡಿ ಜರ್ಮನ್ ಭಾಷೆಯಲ್ಲಿ ಬರೆದರು. ಸಮಕಾಲೀನ ವಿಜ್ಞಾನಿಗಳು ಅದರ ಸೌಂದರ್ಯಕ್ಕೆ ಮಾರುಹೋಗಿ, ಅವಶ್ಯವಾದಲ್ಲಿ ಜರ್ಮನ್ ಕಲಿತು, ಆ ಸಿದ್ಧಾಂತದ ಹೂರಣವನ್ನು ಸ್ವಾಂಗೀಕರಿಸಿಕೊಂಡು, ಬಳಿಕ ತಮ್ಮ ತಮ್ಮ ಭಾಷೆಗಳಲ್ಲಿ ಪುನಾರೂಪಿಸಿದರು. ಕನ್ನಡದಲ್ಲಾದರೂ ನಾವು ಮಾಡುವುದು ಇದೇ ಕೆಲಸವನ್ನು! ಅದು ಯಾವುದೇ ಭಾಷೆಯಲ್ಲಿದ್ದರೂ ಆ ಭಾಷೆಯಲ್ಲೇ ವಿಷಯ ಗ್ರಹಿಸಿ ಕನ್ನಡದಲ್ಲಿ ಇದರ ಜಾಯಮಾನಕ್ಕೆ ಒಪ್ಪುವಂತೆ ಮತ್ತೆ ಬರೆಯುವುದು. ಅಮೂರ್ತ ಪರಿಕಲ್ಪನೆ ಸಾರ್ವದೈಶಿಕ ಮತ್ತು ಭಾಷಾತೀತ, ಮೂರ್ತ ಅಭಿವ್ಯಕ್ತಿಯಾದರೋ ಸ್ಥಳೀಯ ಮತ್ತು ಭಾಷಾಬಂಧಿತ, ಅಲ್ಲವೇ ?''

ಇಂದಿನ ವಾಸ್ತವ ಸಮಸ್ಯೆ ಶಿಕ್ಷಣ ಮಾಧ್ಯಮವೊಂದೇ ಅಲ್ಲ. ನಮ್ಮ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣರಂಗಗಳಲ್ಲಿ ಭಾಷೆಯ ನೆಲಗಟ್ಟನ್ನೇ ನಾವು ತೀರ ದುರ್ಬಲಗೊಳಿಸಿದ್ದೇವೆ. ಅದರ ಶಿಸ್ತು ಸಂಹಿತೆಯನ್ನು – ಅಂದರೆ ಪದಗಳ ಅರ್ಥ, ವ್ಯಾಕರಣ, ವಾಕ್ಯರಚನೆಯ ನಿಯಮ, ಗದ್ಯಲಯ ಮುಂತಾದವು – ಸುಲಭೀಕರಣದ ಸೋಗಿನಲ್ಲಿ ಉಲ್ಲಂಘಿಸಿದ್ದೇವೆ. ನಿದರ್ಶನ ಬೇಕೇ ? ಇಂದು ಕನ್ನಡದಲ್ಲಿಯೂ ಇಂಗ್ಲಿಷಿನಲ್ಲಿಯೂ ವಿದ್ಯಾರ್ಥಿಗಳಿಗೆ ವಿಧಿಸಲಾಗಿರುವ ಪಠ್ಯಪುಸ್ತಕಗಳನ್ನು ಓದಿನೋಡಿ. ವಿದ್ಯಾರ್ಥಿಗಳಿಗೆ ಸಾಮಾನ್ಯ ಪುಸ್ತಕ ಓದಲು ಕಾಲಾವಕಾಶವೇ ಇಲ್ಲ. ಉಪಾಧ್ಯಾಯರ ಆಸಕ್ತಿ ಖಾಸಗಿ ಪಾಠ. ತಂದೆ ತಾಯಿಯರ ದೃಷ್ಟಿ ಮಗು ಪರೀಕ್ಷೆಗಳಲ್ಲಿ ಹೆಚ್ಚು ಅಂಕ ಗಳಿಸಿ ಮುಂದೊಂದು ದಿನ ಅಮೆರಿಕಕ್ಕೆ ಹೋಗುವುದರತ್ತ ಮಾತ್ರ. ಇಂಥ ಬರಡು ಬಂಜರಿನಲ್ಲಿ ಪ್ರತಿಭೆಯ ಕುಡಿ ಮುರುಟಿ ಹೃದಯಹೀನ ಸ್ವಯಂಚಲಿತ ಯಂತ್ರ ವಿಜೃಂಭಿಸೀತಲ್ಲದೆ ಬೇರೇನು ಸಾಧ್ಯ ?

ಇನ್ನು ಕನ್ನಡದಲ್ಲಿ ಪಾರಿಭಾಷಿಕ ಪದಗಳ ಕೊರತೆ, ಆಕರ ಗ್ರಂಥಗಳ ಅಲಭ್ಯತೆ, ಶಿಕ್ಷಣವೇತ್ತರ ವಿರಳತೆ ಮುಂತಾದ – ಬಹುತೇಕ ಸ್ವಕಪೋಲಕಲ್ಪಿತ ಅಭ್ಯಂತರಗಳು ಮಾತ್ರ – ಕಾರಣಗಳನ್ನು ಎದುರೊಡ್ಡುವವರಿಗೆ ಒಂದು ಮಾತು. ನಿಜಕ್ಕೂ ಇವು ಸಮಸ್ಯೆಗಳೇ ಅಲ್ಲ. ಕನ್ನಡ ವಿಶ್ವಕೋಶದ ವಿಜ್ಞಾನ ಸಂಪಾದಕನಾಗಿ ೧೭ ವರ್ಷ, ಅಸಂಖ್ಯ ವಿಜ್ಞಾನ ಪುಸ್ತಕಗಳ ಲೇಖಕನಾಗಿ, ತೀರ ಈಚೆಗೆ ಕನ್ನಡ-ಇಂಗ್ಲಿಷ್ ವಿಜ್ಞಾನ ಪದವಿವರಣ ಕೋಶದ ಪ್ರಧಾನ ಸಂಪಾದಕನಾಗಿ, ಇತ್ಯಾದಿ, ನನ್ನ ಮತ್ತು ನನ್ನಂತೆ ದುಡಿದವರ ಅನುಭವ ಬೇರೆಯೇ : ವಿಷಯ ಬಲ್ಲವನಿಗೆ, ಮಾತೃಭಾಷೆಯಲ್ಲಿ ಪ್ರಭುತ್ವವಿರುವವನಿಗೆ ಯಾವುದೇ ಆಧುನಿಕ ವಿಷಯವನ್ನು ಕನ್ನಡದಲ್ಲಿ ಅಭಿವ್ಯಕ್ತಿಸುವುದು ಬಲು ಸುಲಭ.

೧೯೨೦ರ ದಶಕದಷ್ಟು ಹಿಂದೆಯೇ ನಂಗಪುರಂ ವೆಂಕಟೇಶ ಅಯ್ಯಂಗಾರ್, ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಬೆಳ್ಳಾವೆ ವೆಂಕಟನಾರಣಪ್ಪ, ಆರ್. ಎಲ್. ನರಸಿಂಹಯ್ಯ, ಕೋಟ ಲಕ್ಷ್ಮೀನಾರಾಯಣ ಕಾರಂತ ಮೊದಲಾದ ಮಹಾನುಭಾವರು ಕೇವಲ ಮಾತೃಭಾಷೆಯ ಮೇಲಿನ ಪ್ರೀತಿಯಿಂದ ಕನ್ನಡದಲ್ಲಿ ರಚಿಸಿದ ಪಾಠ ಪುಸ್ತಕಗಳನ್ನು ನೋಡಿದರೆ ತಿಳಿಯುತ್ತದೆ. ಅವರೆಲ್ಲರಿಗಿದ್ದ ಉಭಯ ಭಾಷಾಪ್ರಭುತ್ವ ಮತ್ತು ಈ ಕೆಲಸದ – ಅಂದರೆ ಕನ್ನಡದಲ್ಲಿ ಗಹನ ವಿಷಯಗಳನ್ನು ವಿವರಿಸುವುದು – ಬಗ್ಗೆ ಇದ್ದ ಶ್ರದ್ಧೆ. ನಿಜಕ್ಕೂ ಅಂದಿನವರಿಗೆ, ಆ ಸಂಪರ್ಕ ಕೊರತೆಯ ದಿನಗಳಂದು ಸಾಧ್ಯವಾದ ಈ ಸಾಹಸ, ಇಂದಿನ ಮಾಹಿತಿ-ಸ್ಫೋಟ ಮತ್ತು ಕ್ಷಿಪ್ರ ಸಂಪರ್ಕ ದಿನಗಳಂದು ನಮಗೆ ಲೀಲಾಜಾಲವಾಗಬೇಕು. ಮುಖ್ಯವಾಗಿ ಬೇಕಾದದು ಸಂಕಲ್ಪ.

ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಸರ್ವತ್ರ ಕನ್ನಡದಲ್ಲಿ ಆಗಬೇಕು, ಜೊತೆಯಲ್ಲೇ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸಬೇಕು ಎಂಬ ವೈಜ್ಞಾನಿಕ ನಿಲುವನ್ನು ಸರ್ಕಾರ, ಶಿಕ್ಷಣ ಸಂಸ್ಥೆಗಳು ಮತ್ತು ಪೋಷಕರು ಒಡನೆ ತಳೆದು ಅನುಷ್ಠಾನಕ್ಕೆ ತರಬೇಕು. ಹೀಗಲ್ಲದೆ ಶಿಕ್ಷಣ ಮಾಧ್ಯಮವಾಗಿ ಇಂಗ್ಲಿಷ್ ಬರಬೇಕು, ಆಡುಭಾಷೆಯಾಗಿ ಅವಶ್ಯವಿರುವಲ್ಲಿ ಕನ್ನಡ ಉಳಿಯಬೇಕು ಎನ್ನುವವರ ವಾದ, ವಿವರಣೆ, ಸಾಕ್ಷ್ಯಾಧಾರಗಳು ಖುದ್ದು ಶಿಕ್ಷಣದ ಉದ್ದೇಶಕ್ಕೇ ಮುಳುವಾಗಿವೆ. ಅಂಥವರು ತ್ರಿವಿಧ ಮೌಢ್ಯ ಪೀಡಿತರಾಗಿರುವರು ಎಂದು ಹೇಳದೇ ವಿಧಿಯಿಲ್ಲ: ಪರಭಾಷೆ ಇಂಗ್ಲಿಷ್ ಕುರಿತಂತೆ ಅಜ್ಞಾನ, ಮಾತೃಭಾಷೆ ಕನ್ನಡದ ಬಗ್ಗೆ ಅವಜ್ಞೆ, ಮತ್ತು ವಿಷಯದ ವಿಚಾರದಲ್ಲಿ ಅಂಧತೆ. ಇವರೆಲ್ಲರೂ ಮುಂದಿನ ಮೂರು ಮುಖ್ಯ ಸಂಗತಿಗಳನ್ನು ಗಮನಿಸಬೇಕು :

೧. ಜ್ಞಾನ ಸಂಪಾದನೆಗೆ ಭಾಷೆ ಕೇವಲ ಸಾಧನ. ಈಗ, ಶಿಕ್ಷಣ ಮಾಧ್ಯಮ ಪರಕೀಯ ಭಾಷೆ ಆಗಿದ್ದರೆ ಇದರ ಸಿಕ್ಕುಗಳನ್ನು ಬಿಡಿಸುವುದರಲ್ಲೇ ವಿದ್ಯಾರ್ಥಿಯ ಕಾಲ ಮತ್ತು ಶ್ರಮ ಅಪವ್ಯಯವಾಗುತ್ತವೆ. ಇದು ಅನಿವಾರ್ಯವೇ ?

೨. ಪರಕೀಯ ಭಾಷೆಯಲ್ಲಿ ಪಾಠಗಳು ಅರ್ಥವಾಗುವುದಿಲ್ಲ, ಆಗ ವಿದ್ಯಾರ್ಥಿಗಿರುವ ಉಪಾಯ ಅವನ್ನು ಉರುಹೊಡೆದು ಕಕ್ಕುವುದು ಮಾತ್ರ. ಜ್ಞಾನನಿರ್ಮಾಪಕವಾಗಬೇಕಾದ ಪ್ರತಿಭೆ ಈ ತೆರನಾಗಿ ಅದರ ದಾಸ ಅಥವಾ ಬಂದಿಯಾಗಿರುವುದು ಅವಶ್ಯವೇ ?

೩. ವಿದ್ಯಾರ್ಥಿ ಎಂಥ ಪ್ರತಿಭಾವಂತನೇ ಆಗಿದ್ದರೂ ಪರಕೀಯ ಭಾಷೆಯ ಗೋಡೆ ದಾಟಲಾಗದೆ ಆತನ ಸೃಜನಶೀಲತೆಯ ಸೆಲೆ ಬತ್ತಿಹೋಗುವುದು ಖರೆ. ಇದರಿಂದ ಆತನಿಗೆ ಮಾತ್ರವಲ್ಲ ದೇಶಕ್ಕೂ ಆಗುವ ನಷ್ಟ ಅಪಾರ. ಇಂಥ ನಷ್ಟ ನಿವಾರಣೀಯವಲ್ಲವೇ ?

ಸಮಾರೋಪವಾಗಿ ಒಂದು ಮಾತು ಹೇಳಬೇಕು. ಮಾತೃಭಾಷಾ ಮಾಧ್ಯಮವನ್ನು ಯಾವುದೇ ಕಾರಣಕ್ಕೆ ತಿರಸ್ಕರಿಸಿ ಪರಭಾಷಾ ಮಾಧ್ಯಮಕ್ಕೆ ಶರಣಾಗುವವರಿಗೆ ಏಕಕಾಲದಲ್ಲಿ ಅವರ ಅರಿವಿಗೆ ಬರದೇ ಎರಡು ನಷ್ಟಗಳು ಸಂಭವಿಸಿರುತ್ತವೆ : ಕನ್ನಡ ಅಳಿಯಿತು, ಇಂಗ್ಲಿಷ್ ಉಳಿಯಲಿಲ್ಲ! ಅವರೆಲ್ಲರೂ ಅವಶ್ಯವಾಗಿ ಅರಿತಿರಬೇಕಾದ ಮುಖ್ಯ ಸಂಗತಿ ಒಂದುಂಟು : ಜ್ಞಾನಭಂಡಾರದ ಕೀಲಿ ಮಾತೃಭಾಷೆ: ಇದರಲ್ಲಿ ಪ್ರಾವೀಣ್ಯ ಸಂಪಾದಿಸಿದಾತ ವಿಷಯ ಮತ್ತು ಭಾಷೆ ಎರಡರ ಪ್ರಭು ಆಗುತ್ತಾನೆ; ಸುಸಂಸ್ಕೃತನೂ ಆಗಿರುತ್ತಾನೆ. ಇಂಥ ಪರಿಣತನಿಗೆ ಅವಶ್ಯವಾದಾಗ ಇತರ ಯಾವುದೇ ಭಾಷೆಯನ್ನು ಕಲಿಯುವುದು ಬಲು ಸುಲಭ. ಆದ್ದರಿಂದ ಕರ್ನಾಟಕದಲ್ಲಿ ಕನ್ನಡ ಮಾಧ್ಯಮವನ್ನು ಎಲ್ಲ ಹಂತಗಳಲ್ಲೂ ಜಾರಿಗೆ ತರಲೇಬೇಕು. ಜೊತೆಯಲ್ಲೇ ಇಂಗ್ಲಿಷ್ ಅಥವಾ ಇತರ ಭಾಷೆಯನ್ನು ದಕ್ಷವಾಗಿ ಕಲಿಸಲೂಬೇಕು.


**ಜಿ. ಟಿ. ನಾರಾಯಣರಾವ್**
ನಂ. ೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು - ೫೭೦ ೦೦೯


## ಸಂದಿಗ್ಧ

ಸುಳ್ಳು
ಹೇಳುವವರಿಗೇ
ಅಪಾರ
ಧೈರ್ಯ ಇದ್ದಾಗ
ಸತ್ಯ ಸಂಧರಿಗೆ
ಯಾಕೀ ಸಂದಿಗ್ಧ?

ವಸ್ತು ಬಳಸಿದಷ್ಟು
ಹೊಳೆಯುತ್ತದೆ
ಸುಳ್ಳೂ ಹಾಗೆ!

ಬಳಸದ ವಸ್ತು
ತುಕ್ಕು ಹಿಡಿಯುತ್ತದೆ.
ಸತ್ಯದ ಹಾಗೆ!!


**ಎಸ್. ಶಶಿಕಾಂತ್**
ಬೆಂಗಳೂರು



ಭಾರತೀ ಕಾಸರಗೋಡು

# [illegible]
# ಚಿನ್ನ ವರಿ...

ಅಪ್ಪ ಅನ್ನುವ ವಸ್ತು ಈ ಭೂಮಿಯ ಮೇಲಿದೆ ಅನ್ನುವುದು ಹರಿಗೆ ಗೊತ್ತು. ಆದರೆ ಆ ಪದಾರ್ಥದೊಡನೆ ನೇರ ಸಂಪರ್ಕ ಅಥವಾ ಅವನು ಆಶಿಸುವಂಥ ಆತ್ಮೀಯ ಅನುಭವಗಳು ಅವನಿಗೆಂದೂ ಪ್ರಾಪ್ತವಾಗಿಲ್ಲ. ಹಾಗೆ ನೋಡಿದರೆ ದಿನನಿತ್ಯದ ಬದುಕಿನಲ್ಲಿ ಅವನು ಅದೆಷ್ಟು ಬಗೆಯ ಅಪ್ಪಂದಿರನ್ನು ಕಂಡಿಲ್ಲ! ಗಿರಿಜಾ ಮೀಸೆಯ ಅಪ್ಪ, ಮೀಸೆಯೇ ಇಲ್ಲದೆ ಹೆಣ್ಣು ಹೆಣ್ಣಾಗಿ ಕಾಣುವ ಅಪ್ಪ, ಮೂರು ಹೊತ್ತೂ ಹೊಟ್ಟೆ ಗುಡ್ಡೆ ಹಾಕಿಕೊಂಡು ಜಗುಲಿಯಲ್ಲಿ ತೂಕಡಿಸುವ ಅಪ್ಪ– ಹೀಗೆ ಅನೇಕ ಬಗೆಯ ಅಪ್ಪಂದಿರನ್ನು ಪ್ರತಿನಿತ್ಯ ಕಾಣುತ್ತಾ ಅವರುಗಳಲ್ಲಿ ತನ್ನ ಅಪ್ಪ ಯಾರನ್ನು ಹೋಲಬಹುದು ಎಂದು ಚಿತ್ರಿಸಿಕೊಳ್ಳಲು ಯತ್ನಿಸುತ್ತಾ ಪ್ರಯತ್ನ ಫಲಿಸದೆ ಪ್ರತಿಬಾರಿ ಮನಸ್ಸಿನಲ್ಲಿ ಖಾಲಿ ಹಾಳೆಯೇ ಉಳಿದು ನಿರಾಶನಾಗುತ್ತಾನೆ. ಕಡೇಪಕ್ಷ ಮನೆಯಲ್ಲಿ ಅಪ್ಪನ ಒಂದು ಸಣ್ಣ ಫೋಟೋ ಕೂಡ ಇಲ್ಲ. ಸಾಮಾನ್ಯವಾಗಿ ಎಲ್ಲರ ಮನೆಗಳಲ್ಲಿ ಅಪ್ಪ-ಅಮ್ಮ ಯಾವುದಾದರೂ ಸಂದರ್ಭದಲ್ಲಿ ನಗುನಗುತ್ತ ನಿಂತ ಒಂದು ಹಳೇ ಕಪ್ಪು-ಬಿಳುಪು ಚಿತ್ರವಾದರೂ ಇರುತ್ತದೆ. ತನ್ನ ಮನೆಯಲ್ಲಿ ಅದೂ ಇಲ್ಲ. ಈ ವಿಷಯ ಸಹ ಅವನಲ್ಲಿ ಒಂದು ಬಗೆಯ ಕೀಳರಿಮೆಯನ್ನೇ ಸೃಷ್ಟಿಸಿದೆ.

ಅಪ್ಪನ ಬಗ್ಗೆ ಅಮ್ಮನನ್ನು ಕೇಳಿ ಹೆಚ್ಚು ಪ್ರಯೋಜನವಿಲ್ಲ. ಆ ಪ್ರಸ್ತಾಪ ಬಂದಾಗಲೆಲ್ಲ ತಪ್ಪದೆ ಅಳುಮೋರೆ ಮಾಡುತ್ತಾಳೆ. ''ಎಷ್ಟು ಸಾರಿ ಹೇಳೋದೋ ? ನಂಗೇನೂ ಗೊತ್ತಿಲ್ಲ. ಹೋಗುವಾಗ ಇಂಥ ಕಡೆ ಹೋಗ್ತೀನಿ ಅಂತ ಹೇಳಿದರೇ ? ಆಮೇಲಾದ್ರೂ ಏನಾದ್ರೂ ವಿಷಯ ತಿಳಿಸಿದರೇ ? ಏನೇನೂ ಇಲ್ಲ. ನಿನ್ನನ್ನು ನನ್ನ ಮಡಿಲಿಗೆ ಹಾಕಿದ್ರು, ನಿಸೂರಾಗಿ ದೇಶದ ಮೇಲೆ ಹೊರಟುಬಿಟ್ರು. ಅಷ್ಟೇ ನಂಗೊತ್ತಿರೋದು'' ಅನ್ನುತ್ತಾಳೆ. ಮತ್ತಷ್ಟು ಅಳುತ್ತಾಳೆ.

ಮನೆಯಲ್ಲಿರೋ ಚಿಕ್ಕಪ್ಪಂದಿರಿಗೇನೋ ಆ ಬಗ್ಗೆ ಒಂದಿಷ್ಟು ತಿಳಿದಿರುವಂತಿದೆ. ಆದರೆ ಅವರನ್ನು ಸಮೀಪಿಸಿ ವಿಷಯ ತಿಳಿದುಕೊಳ್ಳುವ ಸಲಿಗೆ ಅವನಿಗಿಲ್ಲ. ಅವರೇನಿದ್ದರೂ ತನ್ನನ್ನೂ ತನ್ನ ಅಮ್ಮನನ್ನೂ ಪಾಲಿಸುವ ಧಣಿಗಳಷ್ಟೆ. ಆದರೂ ಅವರುಗಳು ಕೆಲವೊಮ್ಮೆ ಬೇರೆ ದೊಡ್ಡವರೊಡನೆ ಆಡುವ ಮಾತುಗಳಿಂದ ಅಪ್ಪನ ಬಗ್ಗೆ ಅಷ್ಟಿಷ್ಟು ತಿಳಿದುಬಂದಿದೆ. ಅಪ್ಪ ಮಿಲಿಟರಿ ಸೇರಿದ್ದಾರಂತೆ. ಬಹಳ ವರ್ಷಗಳಿಂದ ಅಲ್ಲೇ ಕೆಲಸ ಮಾಡುತ್ತಾರಂತೆ. ಅವರನ್ನು ಬನಾರಸಿನಲ್ಲಿ ಕಂಡೆವು ಅಂತ ಒಬ್ಬರೆಂದರೆ ದೆಹಲಿಯಲ್ಲಿ ಕಂಡೆವೆಂದು ಮತ್ತೊಬ್ಬರೆನ್ನುತ್ತಾರೆ. ಇನ್ನೊಬ್ಬರ ಪ್ರಕಾರ ಅವರು ಮದರಾಸಿನ ಸಮುದ್ರ ತೀರದಲ್ಲಿ ಬೀಡುಬಿಟ್ಟಿದ್ದರು. ಇಷ್ಟಾಗಿ ಅಪ್ಪ ಮನೆಗೊಂದು ಕಾಗದ ಯಾಕೆ ಬರೆಯಲ್ಲ ಅನ್ನುವುದೇ ಹರಿಯ ದುಃಖ. ಇದ್ದಕ್ಕಿದ್ದಂತೆ ಕೆಲವು ಸಾರಿ ಅವನಿಗೆ ಅಪ್ಪನ ವಿಷಯವಾಗಿ ಏನೇನೋ ಕೆಟ್ಟ ಯೋಚನೆ ಕೂಡ ಬಂದುಬಿಡುತ್ತದೆ. ಭಯವಾಗುತ್ತದೆ. ಕೂಡಲೇ ರಾಮದೇವರ ಪಟದ ಬಳಿಗೆ ಓಡಿ ''ಸ್ವಾಮಿ, ಶ್ರೀರಾಮ, ನನ್ನ ಅಪ್ಪನ್ನ ಕಾಪಾಡಪ್ಪ!'' ದೀನನಾಗಿ ಪ್ರಾರ್ಥಿಸುತ್ತಾನೆ. ಸದ್ಯ, ಅಮ್ಮ ಕುಂಕುಮ ಇಡುತ್ತಾಳೆ, ಬಳೆ ತೊಡುತ್ತಾಳೆ, ಯಾರಾದರೂ ಕೊಟ್ಟರೆ ಆಗಾಗ ಹೂವು ಕೂಡ ಮುಡೀತಾಳೆ. ಅದೇ ಸಮಾಧಾನ.

* * *

ಹರಿಯ ಕೌತುಕದ ಕಣ್ಣು ಪ್ರಪಂಚವನ್ನೆಲ್ಲ ತನ್ನದೇ ಆದ ಮುಗ್ಧರೀತಿಯಲ್ಲಿ ಅನ್ವೇಷಿಸತೊಡಗಿದಂತೆ ಒಳಗೊಳಗೆ ಹುದುಗಿದ್ದ ಅಪ್ಪನ ಗೀಳು ಕೂಡ ತೀವ್ರ ಸ್ವರೂಪ ತಾಳತೊಡಗಿತು. ಕೂತಲ್ಲಿ ನಿಂತಲ್ಲಿ ತಾನು ಕಾಣದ ತನ್ನ ಅಪ್ಪನ ಆಕಾರ ಎಡೆಬಿಡದೆ ಕಾಡತೊಡಗಿತು. ಭರವಸೆಗಳನ್ನೇ ನಂಬಿ ಬದುಕುತ್ತಿದ್ದನಾದರೂ ಇದ್ದಕ್ಕಿದ್ದಂತೆ ಎಂದಾದರೊಮ್ಮೆ ತನ್ನ ಭವ್ಯ ಭರವಸೆಗಳೆಲ್ಲ ಹುಸಿ ಹೋಗಿ ಬಿಡಲಾರವೇ ಎಂದಾತ ಅಂಜುತ್ತಲೂ ಇದ್ದ. ಇಷ್ಟಕ್ಕೂ ಅವನ ಭರವಸೆಗಳಿಗೆ ಆಕಾರವಾದರೂ ಎಲ್ಲಿತ್ತು? ಅಂತರಂಗದ ಗೆಳೆಯ ಚಾಮಿಯನ್ನೊಂದು ಸಾರಿ ಆಪ್ತವಾಗಿ ವಿಚಾರಿಸಿಕೊಂಡ ''ಅಪ್ಪ ಅಂದ್ರೆ ಹೇಗಿರ್ತಾರೋ ?'' ಅವನು ಎಲ್ಲ ಬಲ್ಲ ಜ್ಞಾನಿಯಂತೆ ''ಅಯ್ಯೋ, ಅಷ್ಟೂ ಗೊತ್ತಿಲ್ವ ? ಅಪ್ಪ ಅಂದ್ರೆ ನೋಡಕ್ಕೆ ಚೆನ್ನಾಗಿರ್ತಾರೆ. ತುಂಬ ಮುದ್ದು ಮಾಡ್ತಾರೆ. ಸೈಕಲಲ್ಲಿ ಮುಂದೆ ಕೂರಿಸ್ಕೊಂಡು ತಿರುಗಾಡಿಸ್ತಾರೆ. ಬಿಸ್ಕತ್ತು ಕೊಡಿಸ್ತಾರೆ'' ಅಂತ ಪ್ರಬುದ್ಧವಾಗಿ ಅಪ್ಪನ ಸ್ವರೂಪವನ್ನು ವ್ಯಾಖ್ಯಾನಿಸಿದ. ಹರಿಗೆ ಬಾಯಲ್ಲಿ ನೀರೇ ಬಂತು. ''ಎಲ್ಲರ ಅಪ್ಪಂದಿರೂ ಹಾಗೇನೇನೋ ?'' ಹಸನ್ಮುಖನಾಗಿ ಪ್ರಶ್ನಿಸಿದ. ''ಮತ್ತಿನ್ನೇನು ? ಅದಿಕ್ಕೆತಾನೇ ಅವ್ರನ್ನ ಅಪ್ಪ ಅಂತ ಕರ್ಯೋದೂ ?'' ಅಂದು ಚಾಮಿ ತಾನು ತಿನ್ನುತ್ತಿದ್ದ ಕಡಲೆ ಉಂಡೆಯನ್ನು ಕಾಗೆ ಎಂಜಲು ಮಾಡಿ ಸ್ನೇಹಿತನಿಗೂ ಒಂದಿಷ್ಟು ದಯಪಾಲಿಸಿದ. ಹರಿ ಖುಷಿಯಾಗಿಬಿಟ್ಟ. ಅವನ ಈವರೆಗಿನ ಅಗೋಚರ ನಂಬಿಕೆಗಳಿಗೆಲ್ಲ ಒಮ್ಮೆಲೇ ಅತುಳ ಬಲ ಬಂದಂತಾಗಿಬಿಟ್ಟಿತು. ಸಂತೋಷಗಳನ್ನೆಲ್ಲ ಒಬ್ಬನೇ ಮೆಲುಕು ಹಾಕಲು ಕೆರೆಯ ತೀರಕ್ಕೆ ಓಡಿದ. ಆ ನೀರವ ಸಂಜೆ ಕೆರೆಯ ಕನ್ನಡಿ ಮೂಡಿಸಿದ ರಮ್ಯ ಪ್ರಕೃತಿ ದೃಶ್ಯಗಳನ್ನು ಸುಮ್ಮಾನದಿಂದ ವೀಕ್ಷಿಸುತ್ತ ಕೂತವನ ಅಂತರಂಗದೊಳಗಿನ ಮೌನ ಕಲರವಗಳಿಗೆ ಪಾರವೇ ಇಲ್ಲ. ಯಾವುದೋ ದಿವ್ಯ ಸಡಗರದ ಗಳಿಗೆಯಲ್ಲಿ ಭರವಸೆಗಳ ಮಹಾಪೂರವೇ ಹರಿದು ಎದೆತುಂಬ ಹಿಗ್ಗಾಯ್ತು.

ಅವತ್ತು ರಾತ್ರಿ ಅಂಗಳದಲ್ಲಿ ಅಮ್ಮನ ಮಡಿಲಲ್ಲಿ ಮಲಗಿ ನಕ್ಷತ್ರ ಎಣಿಸುತ್ತಾ ಇದ್ದ. ಅಮ್ಮನ ಮಡಿಲಿಗಿಂತ ಆಪ್ಯಾಯಮಾನ ಸಂಗತಿ ಬೇರೊಂದಿಲ್ಲ ಅವನಿಗೆ. ಅಂಥ ಮಮತೆಯ ಕಾವಿದೆ ಆ ಮಡಿಲಲ್ಲಿ. ಆ ಮಾಸಲು ಸೆರಗಿನಲ್ಲಿ ಸಹಜ ಸುಗಂಧದ ಸಾಂತ್ವನವಿದೆ. ಸುಮ್ಮನೆ ಕತ್ತೆತ್ತಿ ನಕ್ಷತ್ರ ಎಣಿಸುತ್ತಿದ್ದವನು ಏಕಾಏಕಿ ''ಅಮ್ಮ, ಅಪ್ಪ ಒಳ್ಳೇವ್ರಾ ?'' ಅಂದ. ಅವಳು ಯಥಾಪ್ರಕಾರ ಒಂದು ಒಬ್ಬೆ ಅತ್ತಳು. ''ಒಂಥರಕ್ಕೆ ಒಳ್ಳೇವ್ರು ಅಂತಲೇ ಹೇಳಬೇಕು.'' ನಿಟ್ಟುಸಿರಿಟ್ಟು ಅವನನ್ನು ಗಾಢವಾಗಿ ಅಪ್ಪಿ ''ನಿನ್ನಂಥ ಮುದ್ದು ಮಗನನ್ನು ನಂಗೆ ಕೊಟ್ರಲ್ಲಪ್ಪ ಅದಿಕ್ಕೆ'' ಅಂದಳು.

ತಾನು ಅಪ್ಪನ ಬಗ್ಗೆ ಕೇಳಿದಾಗಲೆಲ್ಲ ಅಮ್ಮ ಗೋಳಾಡೋದೇನೋ ಸರಿ. ಆದರೆ ಅದರಿಂದ ಅಪ್ಪ ಬಂದ ಹಾಗಾಗುತ್ತಾ? ಅಪ್ಪ ಮನೆಗೆ ಬರುವಂತೆ ಮಾಡಲು ಯಾರೂ ಏನೂ ಪ್ರಯತ್ನ ಮಾಡುತ್ತಿರುವಂತೆ

ಕೂಡ ತೋರುವುದಿಲ್ಲ. ಹಾಗಾದರೆ ತಾನೇನು ಜೀವಮಾನ ಪೂರಾ ಅಪ್ಪನಿಲ್ಲದೆಯೇ ಇರಬೇಕೇ ? ಕ್ರಮೇಣ ಈ ಆಕ್ರೋಶ ಅವನಲ್ಲಿ ಎಷ್ಟು ಬಲಿತುಬಿಟ್ಟಿತೆಂದರೆ ಒಂದು ಸಾರಿ ಸೀದಾ ಅಮ್ಮನ ಹತ್ತಿರ ಹೋಗಿ ''ಅಮ್ಮ ನೀನು ಸುಳ್ಳು ಹೇಳ್ತೀಯಾ, ನಂಗೊತ್ತು ಅಪ್ಪ ಯಾವತ್ತೂ ಬರಲ್ಲ. ಬರದಿದ್ರೆ ಬೇಡ ನೀನು ಬೇರೆ ಒಂದು ಅಪ್ಪನನ್ನಾದ್ರೂ ತಗೊಂಡುಬಾ. ನಂಗಂತು ಅಪ್ಪ ಬೇಕೇ ಬೇಕು'' ಅಂತ ಹಟದಿಂದ ಹೇಳಿ ಬೆನ್ನೆಲ್ಲ ಬಾಸುಂಡೆ ಬರುವ ಹಾಗೆ ಒದೆ ತಿಂದ. ನೋವಿನಿಂದ ಅವಮಾನದಿಂದ ಕಣ್ಣೀರು ಸುರಿದುಹೋಯಿತು. ನಾನೇನು ಹೇಳಬಾರದು ಹೇಳಿದೇಂತ ಈ ಅಮ್ಮ ಹೀಗೆ ಚಚ್ಚಿದ್ದು ಅಂತ ಊಟಾನೂ ಮಾಡದೆ ಮೂಲೆ ಸೇರಿಬಿಟ್ಟ ಕಡೆಗೆ ಅಮ್ಮನೇ ತಟ್ಟೆಯಲ್ಲಿ ಒಂದಿಷ್ಟು ಸಾರನ್ನ, ಕುಡಿಕೆಯಲ್ಲಿ ಕೊಬ್ಬರಿ ಎಣ್ಣೆ ತಗೊಂಡು ಅವನ ಹತ್ತಿರ ಬಂದಳು. ''ಏಳು ನನ್ನ ಮಾಣಿಕ್ಯವೇ ಊಟ ಮಾಡು, ಹೊಟ್ಟೆ ಉರಿಸಬೇಡ'' ಅಂತ ತಬ್ಬಿ ತೊಡೆಮೇಲೆ ಕೂರಿಸಿಕೊಂಡು ಅನ್ನ ತಿನ್ನಿಸ ತೊಡಗಿದಳು. ಅವನಿಗೂ ಹೊಟ್ಟೆ ಸೀದಿತ್ತಾಗಿ ಹೆಚ್ಚು ವಿರೋಧ ತೋರಿಸದೆ ಉಣ್ಣ ತೊಡಗಿದ. ಮಧ್ಯೆ ಮಧ್ಯೆ ಸುರಿದುಹೋಗುತ್ತಿದ್ದ ಸಿಂಬಳವನ್ನು ಅವಳೇ ಒರೆಸಿದಳು. ಎಷ್ಟು ಹಲುಬುತಾನೆ, ತಂದೆಯ ಪ್ರೀತಿಗೆ ಇನ್ನೊಂದು ಅಪ್ಪನನ್ನು ತಾ ಅನ್ನುತ್ತಾನಲ್ಲ! ಹಾಗೆಲ್ಲ ತರಬಾರದು ಅನ್ನುವ ನೀತಿಬದ್ಧತೆಗಿಂತ ತರಲಾಗದು ಅನ್ನುವ ತನ್ನ ಅಸಹಾಯಕತೆಯೇ ಒಡಲಲ್ಲಿ ಕಿಚ್ಚಾಗಿ ಮಗನನ್ನು ಥಳಿಸಿ ಹಾಕುವಂತೆ ಮಾಡಿತೇ ಅಂದುಕೊಂಡಾಗ ಅವಳ ಉಮ್ಮಳ ಹೆಚ್ಚಾಯಿತು. ಮೆಲ್ಲಗೆ ಅವನ ಅಂಗಿಯನ್ನು ಓಸರಿಸಿ ಬೆನ್ನಿನ ಗಾಯಕ್ಕೆಲ್ಲ ತಣ್ಣಗೆ ಎಣ್ಣೆ ಲೇಪಿಸಿ ಹಾಸಿಗೆಯಲ್ಲಿ ಮಲಗಿಸಿದಳು. ಹಗುರಾಗಿ ಹಣೆ ನೇವರಿಸುತ್ತ ಗದ್ಗದಿತ ಮೆಲುದನಿಯಲ್ಲಿ ''ಚಿತ್ರವಿದು ಗೋಪಾಲ ಬಾಲಕೃಷ್ಣ ಲೀಲೆಯು'' ಹಾಡತೊಡಗಿದಳು. ಹಾಡು ಅರ್ಧಕ್ಕೆ ಬರುವ ವೇಳೆಗೆ ಗೊರೆಯುತ್ತಿದ್ದವನು ಇವತ್ತು ಪೂರ್ತಿ ಹಾಡು ಮುಗಿದರೂ ಮಲಗಲೇ ಇಲ್ಲ. ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ಸೂರು ನೋಡುತ್ತಾ ಸುಮ್ಮನಿದಾನೆ. ಕಣ್ಣಂಚಿನಲ್ಲಿ ಕಂಬನಿ ಒಣಗಿ ಉಪ್ಪಾಗಿದೆ. ''ಯಾಕೋ ಕಂದ ಹೀಗೆ ಗೋಳು ಹುಯ್ದುಕೊಳ್ಳುತ್ತಿ? ಇಲ್ಲದ್ದನ್ನ ಎಲ್ಲಿಂದ ತರಲಿ? ನನ್ನನ್ನೇ ಅಪ್ಪ ಅಮ್ಮ ಎರಡೂಂತ ತಿಳ್ಕೊಳ್ಳೋ..'' ಮತ್ತೆ ಮತ್ತೆ ಮುದ್ದಿಸಿದಳು. ಅಷ್ಟೊಂದು ನೋವಿನಲ್ಲೂ ಹರಿಗೆ ತುಂಬ ನಗು ಬಂದುಬಿಟ್ಟಿತು. ಅಯ್ಯೋ ನನ್ನ ಮುದ್ದುಯೆಂಕಮ್ಮ! ಅಮ್ಮ ಎಲ್ಲಾದ್ರೂ ಅಪ್ಪ ಆಗಕ್ಕೆ ಸಾಧ್ಯಾನಾ ? ನಿಂಗೇನು ಮೀಸೆ ಇದೆಯಾ ? ಇದ್ದಿದ್ರೆ ನೀನೀಗ ನಂಗೆ ಗಟ್ಟಿ ಮುತ್ತು ಕೊಟ್ಟಾಗ ಚುಚ್ಚಬೇಕಾಗಿತ್ತಲ್ಲ? ಹಾಗಂತ ನೇರವಾಗಿ ಅಮ್ಮನನ್ನು ಕೇಳಿಯೂ ಬಿಟ್ಟ ಆ ಮಾತು ಕೇಳಿ ಅವಳು ಎಷ್ಟೊಂದು ನಕ್ಕಳೆಂದರೆ! ತನ್ನ ಅಪರಿಮಿತ ನೋವುಗಳನ್ನೆಲ್ಲ ಆ ಗಳಿಗೆಯಲ್ಲಿ ಮರೆತುಬಿಟ್ಟವಳಂತೆ, ಒಡಲೆಲ್ಲ ಹೂ ಹಗುರವಾದಂತೆ ಬಹಳ ಹೊತ್ತು ಮುಕ್ತವಾಗಿ ನಕ್ಕುಬಿಟ್ಟಳು. ಅವಳಲ್ಲಿ ಅಷ್ಟೊಂದು ನಗುವಾದರೂ ಎಲ್ಲಿತ್ತೋ? ಅಮ್ಮನ ನಿರ್ಮಲ ನಗುವಿನುಬ್ಬರದಿಂದ ಉಬ್ಬಿಹೋದ ಅವನು ತಾನೂ ಬೇಕಂತ ಬರಿಸಿಕೊಂಡು ಬರಿಸಿಕೊಂಡು ನಗತೊಡಗಿದ. ಅವರಿಬ್ಬರ ಅಕೃತ್ರಿಮ ಅಟ್ಟಹಾಸದಿಂದ ವಾತಾವರಣದ ಮ್ಲಾನತೆಯೆಲ್ಲ ತೊಳೆದುಹೋದಂತಾಗಿ ಹರ್ಷದ ಹೊಸ ಬೆಳಕೊಂದು ತಿಳಿಯಾಗಿ ತಂಪಾಗಿ ಅಲ್ಲಿ ಸುಳಿಯತೊಡಗಿತು.



*　　*　　*

ತನ್ನೆಲ್ಲ ಗೆಳೆಯರಂತೆ ತನಗೂ ಅಪ್ಪ ಹತ್ತಿರದಲ್ಲಿಲ್ಲ ಅನ್ನುವುದನ್ನು ಬಿಟ್ಟರೆ ಉಳಿದ ಕೆಲವು ವಿಷಯಗಳಿಗೆ ಹರಿಗೆ ಅಷ್ಟೇನೂ ಕೊರತೆಯಿರಲಿಲ್ಲ. ಹೊತ್ತು ಹೊತ್ತಿಗೆ ಒಂದಿಷ್ಟು ಮಿಡ್ಡೆ ಅನ್ನ, ಗೊಡ್ಡುಹುಳಿ, ನೀರು ಮಜ್ಜಿಗೆ ಧಾರಾಳವಾಗಿ ದೊರೆಯುತ್ತಿತ್ತು. ಆ ಮಜ್ಜಿಗೆ ಮಾತ್ರ ಬ್ರಹ್ಮ ಹುಟ್ಟಿದ ದಿನವೇ ಹುಟ್ಟಿದ್ದು. ಹೊಸಹೆಪ್ಪು ಎಂಬುದು ಆ ಮನೆಯಲ್ಲಿ ಇಲ್ಲ. ಪ್ರತಿರಾತ್ರಿ ಉಳಿಯುವ ನೀರು ಮಜ್ಜಿಗೆಗೆ ತಪ್ಪದೆ ಇನ್ನೊಂದಿಷ್ಟು ನೀರು ಹಾಲನ್ನು ಸೇರಿಸಿಕೊಂಡು ಧಾರಾವಾಹಿಯಾಗಿ ಉಣ್ಣುವವರ ಎಲೆಗಳ ಮೇಲೆ ವೆಂಕಮ್ಮನ ಕಣ್ಣೀರಿನಂತೆಯೇ ಹರಿಯುತ್ತಿತ್ತು. ಮನೆಯಲ್ಲಿ ಎರಡು ವಿಧವೆ ಅಜ್ಜಿಗಳಿದ್ದವು. ಅಡಿಗೆ ಮನೆ ಸಾಮ್ರಾಜ್ಯದ ಸಂಪೂರ್ಣ ಸರ್ವಾಧಿಕಾರ ಅವುಗಳದೇ! ತಮಗೆ ಬೇಕಾದವರಿಗೆ ಮೆತ್ತಗಿನ ಮೆಂತ್ಯದ ದೋಸೆ, ತುಪ್ಪದ ಸಜ್ಜಿಗೆ, ರವೆ ಉಂಡೆಗಳು ಕದ್ದು ಮುಚ್ಚಿ ಸರಬರಾಜು ಆಗುತ್ತಿದ್ದರೂ ಹರಿಯ ಪಾಲಿಗೆ ಆ ಭಾಗ್ಯ ಎಂದೂ ಬರಲಿಲ್ಲ. ತಾನೂ ತನ್ನ ಅಮ್ಮನೂ ಈ ಮನೆಯಲ್ಲಿ ಆಟಕ್ಕುಂಟು ಲೆಕ್ಕಕ್ಕಿಲ್ಲ ಅನ್ನುವ ಸಂಗತಿ ಯಾರೂ ಹೇಳದೆಯೇ ಅವನಿಗೆ ಅರ್ಥವಾಗಿತ್ತು.

ದೊಡ್ಡ ಚಿಕ್ಕಪ್ಪ ಸೋಮಯ್ಯ ಹೋಟೆಲನ್ನು ನಡೆಸುವ ಹೊಣೆ ಹೊತ್ತಿದ್ದರು. ಅದೊಂದು ಅನುಪಮ ಕಾರಣದಿಂದಾಗಿ ಜಗತ್ತಿನ ವಿಶಿಷ್ಟ ಬಗೆಯ ಪಾಕಪ್ರವೀಣತೆಗಳೆಲ್ಲ ತಮಗೆ ಸಿದ್ಧಿಸಿಬಿಟ್ಟಿವೆ ಎಂದವರು ದೃಢವಾಗಿ ನಂಬಿದ್ದರು ಮತ್ತು ಈ ವಿಷಯದಲ್ಲಿ ಹೊಸ ರೀತಿಯ ಪ್ರಯೋಗಗಳನ್ನು ಮಾಡಿಸಲು ಅವರು ಸರ್ವದಾ ಕುತೂಹಲಿಗಳಾಗಿದ್ದರು. ಅವರ ಅನುಜ್ಞೆಯಂತೆ ಮುಲ್ಲಂಗಿ ಉಪ್ಪಿಟ್ಟು, ಬೀಟ್ರೂಟ್ ಪಾಯಸ, ಕುಂಬಳಕಾಯಿ ವಾಂಗೀಭಾತು ಮುಂತಾದ ಪಾಕ ಪರುಠವಣೆಗಳು ಮನೆಯಲ್ಲಿ ತಯಾರಾಗಬೇಕಿತ್ತು. ಈ ವಿಚಿತ್ರ ಭಕ್ಷ್ಯಗಳು ತಮ್ಮಳವಿಗೆ ಮೀರಿದವು ಎಂದು ಹೆಂಗೆಳೆಯರು ದೂರುವಂತಿಲ್ಲ. ''ಹೆಂಗಸು ಮಾತು ಕಲಿತ ಮನೆ ಸರ್ವನಾಶ!'' ನಾಭಿಯಿಂದ ಹೊರಟ ಅವರ ಆರ್ತನಾದ ಪುಷ್ಕಳವಾಗಿ ಆಚೆಬೀದಿ ತಲುಪಿರುತ್ತಿತ್ತು.

ಕಡೇ ಚಿಕ್ಕಪ್ಪ ವೆಂಕಟಗಿರಿ ವಾಚಾಳಿ ಮಾತ್ರವಲ್ಲ, ಒಂದು ರೀತಿಯಲ್ಲಿ ಮನೆವಾರ್ತೆಗಳ ಅನಭಿಷಿಕ್ತ ಯಜಮಾನ. ಅವನ ಸಾಮರ್ಥ್ಯಗಳೂ ದೊಡ್ಡವೇ. ಸಂತಾನಾಭಿವೃದ್ಧಿಯಲ್ಲಿ ಅವನು ತುಂಬ ಯಶಸ್ಸು ಸಾಧಿಸಿದ್ದ. ಮತ್ತು ಈಗಲೂ ವರ್ಷಕ್ಕೊಂದರಂತೆ ತಪ್ಪದೆ ಹುಟ್ಟುತ್ತಲೇ ಇದ್ದವು. ಅವನ ಇನ್ನೊಂದು ಮುಖ್ಯ ತಾಕತ್ತು ಅಂದರೆ ಅವನ ಶಕುನಿ ಬುದ್ಧಿ. ಜಗಳಗಳನ್ನು ಸೃಷ್ಟಿಸುವುದೆಂದರೆ ಅವನಿಗೆ ಪರಮಾನಂದ. ಅದರಲ್ಲೂ ತಮ್ಮಷ್ಟಕ್ಕೆ ಸಭ್ಯವಾಗಿ ಬಾಳುವ ಹೆಣ್ಣುಮಕ್ಕಳ ಮೇಲೆ ಇಲ್ಲದ ಆಪಾದನೆ ಹೊರಿಸಿ ಸಂಬಂಧಗಳನ್ನು ಕೆಡಿಸಿ ತಮಾಷೆ ನೋಡುವುದು ಅವನ ಪ್ರಿಯ ಹವ್ಯಾಸ. ಅವನ ಅಷ್ಟಾವಕ್ರ ವರ್ತನೆಗಳಿಗೆ ರೋಸಿ, ಊರ ಹೆಂಗೆಳೆಯರೆಲ್ಲ ಅವನನ್ನು ದೂರ ಇಟ್ಟಿದ್ದರೆ, ಚಿನ್ನಜ್ಜಿ ಮಾತ್ರ ಹಿರಿಯತನದ ಗತ್ತಿನಲ್ಲಿ ಒಂದು ಸಾರಿ ಮುಖದೆದುರಿಗೇ ಮುಲಾಜಿಲ್ಲದೆ ಗದರಿಬಿಟ್ಟಳು. ''ಲೋ, ವೆಂಕಟಗಿರೀ, ದುಷ್ಟಕಣೋ ನೀನು! ನೆಲ, ನೀರು, ಸಾರ, ಒಂದೇ ಆದ್ರೂ ದತ್ತೂರಿ ವಿಷ ಆಗತ್ತೆ. ಕಬ್ಬು ಅಮೃತ ಆಗತ್ತೆ. ನೀನೂ ಹಾಗೇ: ಹತ್ತು ಚಿತ್ತಾರದ ಮಧ್ಯೆ ಒಂದು ಕಪ್ಪು ಚುಕ್ಕೆ! ನಿನ್ನ ಯೋಗ್ಯತೇನೇ ಅಷ್ಟು ಬಿಡು.. ಒಂದೋ ಮಾತು ಹುಟ್ಟಿಸುತಿರಬೇಕು, ಇಲ್ಲಾ ಮಕ್ಕಳು ಹುಟ್ಟಿಸುತಿರಬೇಕು!''

ಇಂಥದೊಂದು ಕುಟುಂಬದಲ್ಲಿ, ಗಂಡನ ಅನುಪಸ್ಥಿತಿಯ ಅಭದ್ರತೆಯಲ್ಲಿ ಕಾಲ ನೂಕುತ್ತಿದ್ದ ವೆಂಕಮ್ಮನಿಗೆ ಬದುಕಿನ ಕುರೂಪದ ಮಗ್ಗುಲುಗಳೇ ಹೆಚ್ಚು ಪರಿಚಿತ. ಸತ್ಯದ ವಿಳಾಸವನ್ನು ಕೊಡುವ ಸುಳ್ಳುಗಳು, ಪ್ರಾಮಾಣಿಕತೆಯ ಹೊದಿಕೆಯಲ್ಲಿ ಮೆರೆಯುವ ದೇಶಾವರಿ, ಮುಗ್ಧರನ್ನು ಪೀಡಿಸುವ ವಿಕೃತ ವ್ಯವಸ್ಥೆ ಇವೆಲ್ಲಕ್ಕೂ ಅವಳು ಪ್ರಯತ್ನ ಪೂರ್ವಕವಾಗಿ ಒಗ್ಗಿಕೊಂಡಿದ್ದಳು. ಇಂಥ ಒಗ್ಗುವಿಕೆಗೆ ಬೇಕಾದ ಗಟ್ಟಿತನವನ್ನು ಸಾಕಷ್ಟು ಬೆಳೆಸಿಕೊಂಡಿದ್ದಳಾದರೂ, ಕೆಲವು ಮೂಲಭೂತ ನಾಗರಿಕ ಗುಣಗಳನ್ನಾಕೆ ಬಿಡಲಾರದವಳಾಗಿದ್ದಳು. ಅದರಿಂದಾಗಿ ಮತ್ತಷ್ಟು ಕ್ಷೋಭೆಗೂ ಒಳಗಾಗುತ್ತಿದ್ದಳು. ಇಷ್ಟಾಗಿ ಅವಳ

ನಂಬಿಕೆಗಳೇ ಅವಳ ಜೀವನ ಹಿತವೆಂದೋ ಹತ್ತಿರವೆಂದೋ ಅಡ್ಡದಾರಿ ಹಿಡಿಯಲಾರಳು. ಕೇಡು ಬಗೆಯುವವರ ನಡುವೆಯೇ ಇದ್ದುಕೊಂಡೂ ವಾಪಸು ಕೇಡು ಬಗೆಯಲಾರಳು. ಹಾಗಾಗಿ ಮೈದುನ ವೆಂಕಟಗಿರಿ ಮತ್ತು ಅವನಂಥ ಹಲವರು ತಲೆಗೊಂದು ಮಾತನಾಡಿದರೂ ಅವಳು ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಅವಳ ಆತ್ಮಸಿದ್ಧತೆಯೇ ಬೇರೆ. ''ನನ್ನನ್ನು ನಿರ್ಣಯಿಸುವ ಸಭ್ಯ ಜನ ಬೇರೆಯೇ ಇದ್ದಾರೆ. ಈ ಅನಾಗರಿಕ ಮಾತುಗಳಿಗೆ ಬೆಲೆ ಕೊಡಬೇಕಾದ್ದಿಲ್ಲ, ನನ್ನ ಕೆಲಸ ಬದುಕು ನನಗೆ ಸಾಕು.''

* * *

ಯಾರೋ ಯಾವಾಗಲೋ ಅಕ್ಷರಾಭ್ಯಾಸ ಮಾಡಿಸಿದ್ದು ಹರಿಗೆ. ಅದರ ವಿವರಗಳು ಕೂಡ ಅವನಿಗೆ ಅಸ್ಪಷ್ಟ. ಆದರೆ ನಿಜವಾಗಿ ಅವನಿಗೆ ಸ್ಕೂಲಿಗೆ ಸೇರುವ ವಯಸ್ಸು ಬಂದಾಗ ಮನೆಯಲ್ಲಿ ಯಾರಿಗೂ ಅದರ ಬಗ್ಗೆ ಗಮನವೇ ಇದ್ದಂತಿರಲಿಲ್ಲ. ಇತ್ತ ಅವನ ಓರಗೆಯವರೆಲ್ಲ ಆಗಾಗ ಅವನ ಸುತ್ತ ನೆರೆದು ತಾವು ಶಾಲೆಯಲ್ಲಿ ಕಲಿತ ಮಗ್ಗಿ-ಕಾಗುಣಿತಗಳನ್ನು ಅವನೆದುರು ಆಡಂಬರದಿಂದ ಪ್ರದರ್ಶಿಸುತ್ತ ಜತೆಜತೆಗೇ ಅವನನ್ನೊಬ್ಬ ಪೆದ್ದಂಭಟ್ಟನನ್ನಾಗಿ ಮಾಡಿಬಿಡುವ ಸತತ ಪ್ರಯತ್ನ ಬೇರೆ ನಡೆಸಿದ್ದರು. ಇದಂತೂ ಅವನಿಗೆ ತೀರಾ ಅವಮಾನದ ವಿಷಯ. ಅವನು ದುಃಖಾರ್ತನಾಗಿ ಅಮ್ಮನ ಬಳಿ ಹೋಗಿ ''ಬಾರಮ್ಮ ಈಗ್ಲೇ... ನನ್ನ ಸ್ಕೂಲಿಗೆ ಸೇರಿಸು ಬಾ!'' ಅಂತ ಸೆರಗು ಹಿಡಿದು ಕಾಡಗೊಡಗಿದ. ಅವಳು ಚಟ್ನಿಪುಡಿಗೆ ಕೊಬರಿ ಸುರಿಯುತ್ತಿದ್ದವಳು ಬೆಚ್ಚಿ ''ದಮ್ಮಯ್ಯ ನನ್ನ ಕಾಡಬೇಡ ಕಂದ, ಅಲ್ಲಿಗೆಲ್ಲ ಬರೋದು ಮೇಷ್ಟ್ರ ಹತ್ತಿರ ಮಾತಾಡೋದು ಇದೆಲ್ಲ ನನ್‌ಕೈಲಿ ಆಗುತ್ತೇನೋ? ಹೋಗು ರಾಜಾ... ನಿನ್ನ ಚಿಕ್ಕಪ್ಪಂದಿರನ್ನ ಕೇಳು'' ಅಂತಂದು ತುರಿದು ಕೈಲಿ ಉಳಿದಿದ್ದ ಆದರೆ ಆಕಾರದಲ್ಲಿ ಇನ್ನೂ ದೊಡ್ಡದೇ ಆಗಿದ್ದ ಕೊಬ್ಬರಿ ತುಂಡನ್ನು ಅವನ ಬಾಯಿಗೆ ಜಡಿದು ಕಳಿಸಿಬಿಟ್ಟಳು.

ಅವತ್ತು ಮನೆಯಲ್ಲಿದ್ದ ಏಕೈಕ ಗಂಡಸೆಂದರೆ ವೆಂಕಟಗಿರಿ. ಅವನು ಪಡಸಾಲೆಯಲ್ಲಿ ಲೋಲನಾಗಿ ಕಂಬಕ್ಕೊರಗಿ ಕೂತು ಊಟದೆಲೆ ಹಚ್ಚಿಕೊಳ್ಳುವ ಸಂಭ್ರಮದ ಕಾಯಕದಲ್ಲಿದ್ದ. ಅಳುಕುತ್ತ ತನ್ನೆದುರು ನಿಂತ ಹರಿಯನ್ನು ಕಂಡು ಹುಬ್ಬುಗಂಟಿಕ್ಕಿ ''ಏನೋ ಅದು ನಿನ್ನ ಗೋಳು...'' ಅಂತ ಮುಂಗಡವಾಗಿಯೇ ಗದರಿದ. ''ಸ್ಕೂಲಿಗೆ ಸೇರ್ಕೋಬೇಕಾಗಿತ್ತು ಚಿಕ್ಕಪ್ಪ'' ಅವನು ವಿನಯವಾಗಿಯೇ ಬಿನ್ನವಿಸಿಕೊಂಡ. ''ಅದು ಬೇರೆ ಕೇಡು! ಏನು, ದಿವಾನ ಆಗಿಬಿಡ್ತೀಯೋ?'' ತನ್ನನ್ನೇ ದುರುಗುಟ್ಟಿನೋಡುವ ಚಿಕ್ಕಪ್ಪನ ಕಣ್ಣುಗಳು ಹಿಂದಿನ ದಿನ ಗದ್ದೆಯ ಹತ್ತಿರ ನೋಡಿದ್ದ ನರಿಯ ಕಣ್ಣುಗಳಂತೆಯೇ ಕಂಡವು. ಅವನೇನೂ ಹೆದರಲಿಲ್ಲ. ''ಜತೇವ್ರೆಲ್ಲಾ ಸೇರಿದಾರೆ ನಾನೂ ಸೇರಲೇಬೇಕು'' ಪಟ್ಟು ಹಿಡಿದ. ''ಹಾಗಾದ್ರೆ ನನ್ನೇನು ಕೇಳ್ತೀಯಾ? ಹಾಳಾಗಿ ಹೋಗು!'' ಚಿಕ್ಕಪ್ಪನ ಆಶೀರ್ವಾದ ಬಾಯ್ತುಂಬ ಹೊರಬಿತ್ತು!

ಅವನು ಶಾಲೆಯ ಬಳಿ ಬಂದಾಗ ಉಪಾಧ್ಯಾಯರೊಬ್ಬರೇ ತರಗತಿಯಲ್ಲಿ ಕೂತು ಪತ್ರಿಕೆಯಲ್ಲಿ ತಲ್ಲೀನರಾಗಿದ್ದರು. ಭಯ-ಭಕ್ತಿಗಳಿಂದ ಅಳುಕುತ್ತಲೇ ಮೆಲ್ಲಗೆ ಹತ್ತಿರ ಬಂದ. ಪತ್ರಿಕೆಯಿಂದ ಕತ್ತೆತ್ತಿ ನೋಡಿದರು ಉಪಾಧ್ಯಾಯರು. ಅವನ ಕೃಷ್ಣ ನಿಲುವು ಅವರನ್ನಾಕರ್ಷಿಸಿತು. ಏನು ಬೇಕೋ ಮರಿ ನಿಂಗೆ ಅಂತ ಆತ್ಮೀಯವಾಗಿ ಮುಗುಳ್ನಕ್ಕರು. ಆ ನಗುವಿನಲ್ಲಿದ್ದ ಭರವಸೆ ಅವನಿಗೆ ಸಾಕಾಯಿತು. ಚಹರೆಗಳಲ್ಲಿ ಜವಾಬ್ದಾರಿ ತುಂಬಿಸಲು ಹೆಣಗುತ್ತ ''ನಾನೂ ಸ್ಕೂಲಿಗೆ ಸೇರಬೇಕಾಗಿತ್ತು ಸಾರ್'' ತಡವರಿಸಿದನಾದರೂ, ಜೀವನದಲ್ಲಿ ಮೊಟ್ಟ ಮೊದಲಬಾರಿಗೆ 'ಸಾರ್' ಪ್ರಯೋಗವನ್ನು – ಅದೂ ಸರಿಯಾದ ಸಂದರ್ಭದಲ್ಲಿ ಮತ್ತು ಸರಿಯಾದ ವ್ಯಕ್ತಿಯ ವಿಷಯದಲ್ಲಿ– ಮಾಡಿಬಿಟ್ಟದ್ದು, ಶಾಲೆಯೊಳಗೆ ಕಾಲಿಡುತ್ತಿದ್ದಂತೆಯೇ ಅಷ್ಟೊಂದು ಅರ್ಹತೆಗೆ ತಾನು ಪಾತ್ರನಾಗಿಬಿಟ್ಟದ್ದು ಅವನಿಗೆ ರೋಮಾಂಚನವನ್ನುಂಟುಮಾಡಿತು.

''ಆ ಹೋಟೆಲಿನೋರ ಹುಡುಗ ಅಲ್ವೇನಪ್ಪಾ ನೀನು? ಸರಿಸರಿ. ಏನು ನಿನ್ನ ಹೆಸರು?'' ಸಾವಕಾಶವಾಗಿ ಪುಸ್ತಕ ಹೊರತೆಗೆಯುತ್ತ ಉಪಾಧ್ಯಾಯರು ಕೇಳಿದರು. ''ಹರೀ ನನ್ನ ಹೆಸರು'' ಸ್ವಲ್ಪ ಲಜ್ಜೆಯಿಂದಲೇ ಉಲಿದ. ''ಪೂರ್ತಿ ಹೆಸರು ಹೇಳೋ ಮಗೂ'' ಅಂದರವರು. ಎಷ್ಟು ಯೋಚಿಸಿದರೂ ತನ್ನ ಪೂರ್ತಿ ಹೆಸರು ಏನಿರಬಹುದೆಂದು ಅವನಿಗೆ ತೋಚಲೇ ಇಲ್ಲ. ಕಡೆಗೆ ಅವನ ಪೇಚಾಟ ಕಂಡು ಉಪಾಧ್ಯಾಯರೇ ''ಹರಿನಾಥ ಅಂತ ಬರೆದು ಬಿಡೋಣ್ವಾ?'' ಅಂದರು. ಆಗಲಿ ಅಂದ. ಯಾಕೋ ಏನೋ ಅಷ್ಟರಿಂದಲೂ ಅವರಿಗೆ ಸಮಾಧಾನವಾದಂತೆ ತೋರಲಿಲ್ಲ. ಪೆನ್ನನ್ನು ಸ್ವಲ್ಪಹೊತ್ತು ಕೈಲೇ ಹಿಡಿದು ಅವನನ್ನೊಮ್ಮೆ ಆಪಾದ ಮಸ್ತಕ ದಿಟ್ಟಿಸಿದರು. ಗುಂಡು ಗುಂಡಾಗಿ ರಸವತ್ತಾಗಿ ಶೋಭಾಯಮಾನನಾಗಿದ್ದ ಇಂಥ ಚೆಲುವ ಬಾಲಕ ಮತ್ತೊಂದು ವಿಶೇಷ ಉಪನಾಮಕ್ಕೆ ಸರ್ವಥಾ ಅರ್ಹನಾಗಿದ್ದಾನೆ ಎಂದವರಿಗೆ ತೋರಿತು. ಪ್ರಸನ್ನಚಿತ್ತರಾಗಿ ''ಹರಿನಾಥ ಪಂಡಿತ ಅಂತ ಬರೆದುಬಿಡ್ತೀನಿ ಕಣೋ... ಒಳ್ಳೇ ಜರ್ಬಾಗಿರುತ್ತೆ!'' ಅಂದರು ಹಣೆಯೆಲ್ಲ ಮಿಂಚುವಂಥ ಮಂದಸ್ಮಿತ ಸೂಚಿಸುತ್ತ!

* * *

ಹರಿಯ ಪುಟ್ಟ ಬದುಕಿನಲ್ಲಿ ಎಷ್ಟೆಲ್ಲ ಬದಲಾವಣೆಗಳು, ಸಣ್ಣಪುಟ್ಟ ಪ್ರಗತಿಗಳು ಮೆಲ್ಲ ಮೆಲ್ಲಗೆ ನುಸುಳುತ್ತಿದ್ದರೂ ಅವನ ಅರಿವಿನ ಪರಿಧಿಯೊಳಗೆ ಅಪ್ಪ ಮಾತ್ರ ಬರಲೇ ಇಲ್ಲ. ಬಹುಶಃ ಇನ್ನು ಬರಲಾರರು ಎಂದು ಎದೆ ಗಟ್ಟಿಮಾಡಿಕೊಂಡು ಅಪ್ಪನಿಲ್ಲದ ಬದುಕಿಗೇ ಒಗ್ಗಿಕೊಳ್ಳಲು ಹೃತ್ಪೂರ್ವಕವಾಗಿ ಪ್ರಯತ್ನಿಸತೊಡಗಿದ. ಆದರೂ ಎಲ್ಲೋ ಬಚ್ಚಿಟ್ಟುಕೊಂಡಿದ್ದ ಒಳನೋವು ಆಗಿಂದಾಗ ಚುಚ್ಚುವುದು ಮಾತ್ರ ತಪ್ಪಲಿಲ್ಲ.

ಇತ್ತ ಮನೆಯಲ್ಲಿ ಮತ್ತು ಹೋಟೆಲಿನಲ್ಲಿ ಅವನು ಮಾಡಿಕೊಡಬೇಕಾದ ಕೆಲಸಗಳ ಸಂಖ್ಯೆಯೂ ದಿನೇ ದಿನೇ ಹೆಚ್ಚಾಗತೊಡಗಿತು. ಚುನಾವಣೆಗಳು ಬಂದರಂತೂ ಯಾರಿಗೂ ಉಸಿರಾಡಲೂ ಪುರುಸೊತ್ತಿಲ್ಲ. ಹೋಟೆಲಿನಲ್ಲಿ ಬೆಳಗಿನಿಂದ ಸಂಜೆವರೆಗೆ ಗಿರಾಕಿಗಳ ನೂಕುನುಗ್ಗಲು. ಜತೆಗೆ ಅಲ್ಲಲ್ಲಿ ಪ್ರಚಾರ ಸಭೆಗಳಿಗೆ ಊಟ ಕೂಡ ಸರಬರಾಜು ಆಗಬೇಕು. ಎಳೆಯನೆಂದು ಹರಿನಾಥನಿಗೇನೂ ವಿನಾಯಿತಿ ಇಲ್ಲ. ಹೋಟೆಲಿನ ಇತರ ಹುಡುಗರ ಜತೆಗೆ ಅವನೂ ದೊಡ್ಡದೊಡ್ಡ ಊಟದ ಕ್ಯಾರಿಯರ್‌ಗಳನ್ನು ತಲೆಮೇಲೆ ಹೊತ್ತೊಯ್ಯಬೇಕು, ಅಲ್ಲಿ ಎಲ್ಲರಿಗೂ ಎಲೆಹಾಕಿ ಬಡಿಸಬೇಕು, ಖಾಲಿಯಾದ ಪಾತ್ರೆಗಳನ್ನೆಲ್ಲ ತೊಳೆದು ಹಿಂದಕ್ಕೆ ತರಬೇಕು. ಇದನ್ನೆಲ್ಲ ಒಂದು ಸಂಕಷ್ಟ ಅಂತ ಹರಿ ಭಾವಿಸಲೇ ಇಲ್ಲ. ತನ್ನ ಕರ್ತವ್ಯಗಳ ಅನಿವಾರ್ಯತೆ ಅವನಿಗೆ ಚೆನ್ನಾಗಿ ಗೊತ್ತಿತ್ತಾಗಿ ಎಲ್ಲವನ್ನೂ ಸದ್ದು-ಸುದ್ದಿಯಿಲ್ಲದೆ ಮಾಡಿ ಮುಗಿಸುತ್ತಿದ್ದ.

ಹೀಗೊಂದು ಸಂದರ್ಭದಲ್ಲಿ ಜಿಲೇಬಿ ತುಂಬ ಉಳಿದುಬಿಟ್ಟಿತು. ಜಿಲೇಬಿ ತಟ್ಟೆಯನ್ನು ವಾಪಸು ಕೊಂಡೊಯ್ದು ಇಡುವ ಸಿಹಿ ಜವಾಬ್ದಾರಿ ಹರಿಯ ಹೆಗಲಿಗೇ ಬಿತ್ತು. ಈ ವಿಶೇಷ ಕಾರ್ಯಭಾರದಿಂದ ಅವನಿಗೆ ತುಂಬ ಸಂತೋಷವೂ ಆಯಿತು. ಹೊರೆ ಹೊತ್ತ ರೈತ ಮಹಿಳೆಯರ ಉಲ್ಲಾಸದಲ್ಲಿ, ಅದೇ ಲಾಲಿತ್ಯದಲ್ಲಿ ನಡಿಗೆಯನ್ನು ನಿರ್ವಹಿಸುತ್ತಿದ್ದವನು, ಸತತವಾಗಿ ಕಾಡುತ್ತಿದ್ದ ಸುವಾಸನೆಗೆ ಮರುಳಾಗಿ, ಮೆಲ್ಲಗೆ ಕೈಚಾಚಿ ಒಂದೇ ಒಂದು ಜಿಲೇಬಿಯನ್ನು ಸೆಳೆದುಕೊಂಡು ಅತ್ತಿತ್ತ ನೋಡಿ ಸ್ವಾಹಾ ಮಾಡಿದ. ಸೀದಾ ಮೆದುಳಿಗೇ ಹೋಗಿಬಿಟ್ಟಿತು ಅದರ ಸ್ವಾದ! ಹೇಗೂ ಇಷ್ಟೊಂದಿದೆಯಲ್ಲ ಯಾರಿಗೇನು ಗೊತ್ತಾಗುತ್ತೆ ಅಂತ ಮೆಲ್ಲಗೆ ಮತ್ತೂ ಒಂದು ತೆಗೆದು ತಿಂದ. ಆಮೇಲೆ ಅವನು ಹಿಂತಿರುಗಿ ನೋಡಲೇ ಇಲ್ಲ. ದಾರಿಯುದ್ದಕ್ಕೂ ಕೈಬಾಯಿಗಳಿಗೆ ಬಿಡುವಿಲ್ಲದ ಕೆಲಸ. ಹೋಟೆಲು ತಲುಪುತ್ತಿದ್ದಂತೆ ಅವನ ರುಚಿ ವ್ಯಾಮೋಹ ಎಷ್ಟು ತೀವ್ರವಾಗಿಬಿಟ್ಟಿತ್ತೆಂದರೆ ಸ್ವಲ್ಪವೂ ಯೋಚಿಸದೆ ಮುಷ್ಟಿ ಭರ್ತಿ ಜಿಲೇಬಿ ತೆಗೆದು ಚಡ್ಡಿ ಜೇಬಿನೊಳಗೆ ಬಚ್ಚಿಟ್ಟುಕೊಂಡೂ ಬಿಟ್ಟ. ಮುಸ್ಸಂಜೆ ಆಗುತ್ತಿದ್ದಂತೆ




'ಪುಸ್ತಕಗಳ ಮೂಲಕ ಮನುಕುಲದ ಸೇವೆ' ಎಂಬುದು ನವಕರ್ನಾಟಕ ಪ್ರಕಾಶನದ ಧ್ಯೇಯವಾಕ್ಯ. ಓದುಗರಲ್ಲಿಗೆ ಪುಸ್ತಕ ಒಯ್ಯುವುದು ಅದರ ಪ್ರಧಾನ ಕಾರ್ಯಗಳಲ್ಲೊಂದು. ಹಾಗಾಗಿ, ಇಡೀ ವರ್ಷ ಎಂಟು ತಂಡಗಳು ಕರ್ನಾಟಕದ ಬೇರೆ ಬೇರೆ ಊರುಗಳಲ್ಲಿ ಪುಸ್ತಕ ಪ್ರದರ್ಶನ ನಡೆಸುತ್ತವೆ. ಡಿಸೆಂಬರ್ ೮, ೨೦೦೩ರಂದು ಚಿತ್ರದುರ್ಗದಲ್ಲಿ ಶ್ರೀ ಕಬೀರಾನಂದ ಮಠದ ಸ್ವಾಮೀಜಿ ಪುಸ್ತಕ ಪ್ರದರ್ಶನ ಉದ್ಘಾಟಿಸುತ್ತಿರುವುದು.

ಹಿತ್ತಲಲ್ಲಿ ಬಾವಿಕಟ್ಟೆ ಬಳಿ ಕೂತು ಅದಷ್ಟನ್ನೂ ತಿಂದು ಚೆನ್ನಾಗಿ ಮೂತಿ ಒರೆಸಿಕೊಂಡೇ ಒಳಗೆ ಬಂದ.

ಫಜೀತಿ ಶುರು ಆದದ್ದು ಮಾತ್ರ ರಾತ್ರಿ ಒಂದು ಹೊತ್ತಿನಲ್ಲಿ ತೊಡೆ ಸಂದುಗಳಲ್ಲಿ ದಿವ್ಯವಾಗಿ ಉರಿ ಹತ್ತಿದಾಗ! ಫಕ್ಕನೆ ಎಚ್ಚರವಾಗಿ ನೋಡುತ್ತಾನೆ, ಮೃದುಜಾಗಗಳಲ್ಲೆಲ್ಲ ಕೆಂಪಿರುವೆಗಳ ದಂಡುದಂಡು ಮೆರವಣಿಗೆ ಸಂಭ್ರಮದಿಂದ ಸಾಗಿದೆ! ಮನುಷ್ಯ ಶರೀರದಲ್ಲಿ ಯಾವುದು ಸಭ್ಯ ಯಾವುದು ಅಶ್ಲೀಲ ಅನ್ನುವುದು ಇರುವೆಗಳಿಗೇನು ಗೊತ್ತು? ಕ್ಷೀರ ಸೋರಿದ ಭಾಗವನ್ನೆಲ್ಲ ನೆಮ್ಮದಿಯಾಗಿ ಮೇದು-ಹಾಕಿದ್ದವು. ಅಳುತ್ತಳುತ್ತ ಅಮ್ಮನನ್ನು ಎಬ್ಬಿಸಿದ. ''ಅರ್ಧರಾತ್ರೀಲೂ ಪ್ರಾಣ ತಿಂತಾನೆ!'' ಸಿಡಿಮಿಡಿ ಮಾಡುತ್ತ ಬಚ್ಚಲಿಗೆ ಎಳೆದೊಯ್ದು ಚಡ್ಡಿ ಕಳಚಿ ನೆನೆಸಿಹಾಕಿ ಹಿಂದೆ-ಮುಂದೆ ಚೆನ್ನಾಗಿ ತೊಳೆದು ಹಾಸಿಗೆಯಲ್ಲಿ ತಂದು ಮಲಗಿಸಿದಳು. ಇನ್ನೊಂದು ಚಡ್ಡಿ ತೊಡಿಸುವ ಆಲೋಚನೆಯೇ ಅವಳಿಗಿದ್ದಂತಿರಲಿಲ್ಲ. ಅವನೇ ಮರ್ಯಾದಸ್ಥನಂತೆ ''ಇನ್ನೊಂದು ಚಡ್ಡಿ ಕೊಡಮ್ಮ'' ಅಂದ. ''ಏನೂ ಬೇಡ ಸುಮ್ನೆ ಮಲಿಕ್ಕೋ, ಗಾಳಿ ಆಡಲಿ ಮಹಾಮಹಾ ಯಾರೂ ಕಾಣದ್ದು'' ಆಕಳಿಸುತ್ತ ಆಕಳಿಸುತ್ತಲೇ ಸುದೀರ್ಘವಾಗಿ ಗದರಿಬಿಟ್ಟಳು. ಅವನು ಸ್ವಲ್ಪ ನಾಚಿಕೆಯಿಂದ ಸ್ವಲ್ಪ ಸಂಭ್ರಮದಿಂದ ಗೋಡೆ ಕಡೆ ತಿರುಗಿ ಮುದುಡಿ ಮಲಗಿಬಿಟ್ಟ. ಛೇಛೆ ಎಂಥ ಕೆಲಸ ಮಾಡಿಬಿಟ್ಟಳಪ್ಪ ಈ ಅಮ್ಮ! ಯಾರಾದರೂ ಮನುಷ್ಯರು ರಾತ್ರಿಹೊತ್ತು ಪೃಷ್ಠ ಕವಚ ಇಲ್ಲದೆಯೆ ಮಲಗುತಾರೆಯೇ?

> **ಅರ್ಹತೆ**
>
> ಆಗ<br>ಸ್ಥಾವರ<br>ನಿರಾಕರಿಸಿ<br>ಜಂಗಮನಾದ<br>ಶರಣ!
>
> ಈಗೀಗ<br>ಜಂಗಮ<br>ಹುಟ್ಟುತ್ತಲೇ<br>ಮಾಡುತ್ತಾನೆ<br>ಸ್ಥಾವರಗಳತ್ತ<br>ಪಯಣ!!
>
> **ಎಸ್. ಶಶಿಕಾಂತ್**<br>ಬೆಂಗಳೂರು-೭೧

* * *

ಶನಿವಾರ ಶಾಲೆ ಬಿಟ್ಟು ಎಷ್ಟೋ ಹೊತ್ತಾದರೂ ಹರಿಗೆ ಮನೆಗೆ ಹೋಗಲು ಮನಸ್ಸೇ ಇಲ್ಲ. ಮಾವ ಮೊನ್ನೆ ಬಂದವನೇ ಅಜ್ಜಿಗೆ ತೀರಾ ಹುಷಾರಿಲ್ಲ ಅಂತ ಅಮ್ಮನನ್ನು ತನ್ನೊಟ್ಟಿಗೆ ಊರಿಗೆ ಕರೆದುಕೊಂಡು ಹೋಗಿಬಿಟ್ಟಿದ್ದಾನೆ. ಹರಿಗೆ ಮಂಕು ಕವಿದಂತಾಗಿದೆ. ಅಮ್ಮನಿಲ್ಲದ ಮನೆ ಜನರಿಂದ ಗಿಜಗುಟ್ಟುತ್ತಿದ್ದರೂ ಅವನಿಗೆ ಮಾತ್ರ ಬಿಕೋ ಅನ್ನುತ್ತದೆ. ಒಂಟಿತನ ಕಾಡುತ್ತದೆ. ಹೊಸಿಲೊಳಗೆ ಕಾಲಿಡುತ್ತಿದ್ದಂತೆ ''ಚಂದ್ರನ ಹಾಗೆ ಹೊಳಿಯೋ ಮುಖ ಹ್ಯಾಗೆ ಧೂಳು ತುಂಬಿಕೊಂಡಿದೆ ನೋಡು...'' ಗದರುತ್ತಲೇ ಆರ್ತಿಯಿಂದ ಮುಖ ತೊಳೆದು ಸೆರಗಿನಿಂದ ಮೆಲುವಾಗಿ ಮುಖವೊತ್ತುವ, ಮಡಿಲಲ್ಲಿ ಮುಚ್ಚಿಟ್ಟುಕೊಂಡ ಖರ್ಜೂರವನ್ನೋ, ಕಿತ್ತಳೆ ತೊಳೆಯನ್ನೋ ಮಮತೆಯಿಂದ ಬಾಯಿಗಿಟ್ಟು ತೃಪ್ತನಗೆ ಸೂಸುವ ಯೆಂಕಮ್ಮ ಮನೆಯಲ್ಲಿಲ್ಲ. ಯಾಕಾದರೂ ಮನೆಗೆ ಹೋಗಬೇಕು ಅನ್ನಿಸಿಬಿಟ್ಟಿತು ಅವನಿಗೆ. ಕಡೆಗೊಮ್ಮೆ ವಿಧಿಯಿಲ್ಲದೆ ಮೇಲೆದ್ದು ವ್ಯಥೆಯ ಗುಂಗಿನಲ್ಲೇ ಮನೆಯ ಹತ್ತಿರ ಬಂದಾಗ ಅಂಗಳದಲ್ಲಿ ಭವ್ಯ ಆಕಾರವೊಂದು ಸಿಗರೇಟು ಸೇದುತ್ತ ನಿಂತಿತ್ತು. ಯಾರು ಈ ಆಜಾನುಬಾಹು? ಅದೆಷ್ಟು ಎತ್ತರ... ಇನ್ನೆಷ್ಟು ಕೆಂಪು! ಒಳ್ಳೇ ಗರುಡನ ವಿಗ್ರಹ ಇದ್ದ ಹಾಗಿದಾರೆ! ಇವರನ್ನು ಯಾವತ್ತಾದರೂ ನೋಡಿದ ನೆನಪು ಕೂಡ ತನಗಿಲ್ಲವಲ್ಲ! ಕೌತುಕದಿಂದ ಅವರನ್ನೇ ದಿಟ್ಟಿಸುತ್ತ ಅಲ್ಲೇ ನಿಂತ. ಆಗಷ್ಟೇ ತರಕಾರಿ ಚೀಲ ಹೊತ್ತು ಪೇಟೆಯಿಂದ ಬಂದ ಸೋಮಯ್ಯ ''ಲೋ, ಅವ್ರು ಯಾರೂಂತ ಮಾಡುದ್ಯೋ, ನಿನ್ನ ಅಪ್ಪ ಕಣೋ'' ಅಂದು ನಕ್ಕು ಒಳನಡೆದರು.

ಹರಿಗೆ ತನ್ನ ಕಣ್ಣುಗಳನ್ನೆ ನಂಬಲಾಗಲಿಲ್ಲ. ಅಸ್ತಿತ್ವವೇ ಅನುಮಾನವಾಗಿಹೋಗಿದ್ದ ಈ ಮಾಯಾ ಮನುಷ್ಯ ಹೀಗೆ ದಿಢೀರನೆ ಮೂಳೆ-ಮಾಂಸಗಳಲ್ಲಿ ಮತ್ತು ಸಿಗರೇಟು ಸೇದುವ ಇಂಥದೊಂದು ರಾಜಠೀವಿಯಲ್ಲಿ ಪ್ರತ್ಯಕ್ಷವಾಗಿಬಿಟ್ಟ ಸತ್ಯವನ್ನು ಅರಗಿಸಿಕೊಳ್ಳುವುದೇ ದುಸ್ತರವಾಗಿಬಿಟ್ಟಿತು. ಆದರೂ ತನ್ನ ಬಹುಕಾಲದ ಹಲುಬುವಿಕೆಯ ಶ್ರೀಮಂತ ಮೂರ್ತ ಸ್ವರೂಪವನ್ನು ಕಣ್ಣೆದುರಿಗೇ ಕಂಡು ವಿವಶನಾದ. ಬೇಗಬೇಗ ಅವರ ಬಳಿಗೆ ಹೋಗಿ ನೆಟ್ಟಗೆ ನಿಂತು ಕತ್ತೆತ್ತಿ ಒಂದು ವೀರೋಚಿತ ಸೆಲ್ಯೂಟ್ ಹೊಡೆದ.

* * *

ಎಷ್ಟು ಮುದ್ದಾಗಿದ್ದಳು ಆ ಹೆಣ್ಣು ಮಗು! ಯಾವ ಶುಭ್ರ ಕಾನನದಿಂದ ತಪ್ಪಿಸಿಕೊಂಡು ಬಂದ ವನದೇವತೆಯೋ, ವೇಷ ಮರೆಸಿಕೊಂಡು ಬಂದ ಯಾವ ದಿವ್ಯಲೋಕದ ಯಾವ ದೇವಕನ್ನಿಕೆಯೋ ಅನ್ನುವಂತೆ ಮಿಂಚು ಹರಿಸುತ್ತ ಸುತ್ತ ಸುಳಿದಾಡುತ್ತಿದ್ದಳು. ನೋವುಗಳಿಲ್ಲದ ಮಾತಿನಂತೆ ಅಬ್ಬರವಿಲ್ಲದ ಹಾಡಿನಂತೆ ಪ್ರಶಾಂತವಾಗಿದ್ದಳು. ನೋಡಿದವರಿಗೆಲ್ಲ ಮೋಹ ಉಕ್ಕಿಸುತ್ತಿದ್ದಳು. ಮನೆಯವರಿಗಿರಲಿ, ಹೋಟೆಲಿನ ನೌಕರರಿಗೂ ಈ ಪುಟ್ಟದೇವತೆ ಪ್ರಿಯಳಾಗಿಬಿಟ್ಟಳು. ಮಕ್ಕಳಿಲ್ಲದ ಶಾಮಾಚಾರಿಗಂತು ಅವಳು ಕಣ್ಮಣಿ. ಸದಾ ಕಾಲ ಹೆಗಲ ಮೇಲೆ ಮೆರೆಸುತ್ತಿದ್ದ. ಅವಳೂ ಅಷ್ಟೆ, ತನ್ನ ಮುಗ್ಧ ಭಿನ್ನಾಣಗಳಿಂದ ಅವನನ್ನು ಮರುಳು ಮಾಡುತ್ತಿದ್ದಳು. ಅವನು ಚಟ್ನಿ ರುಬ್ಬುತ್ತಿದ್ದರೆ ತಾನೂ ವ್ಯಯಾರವಾಗಿ ಎದುರಿಗೆ ಕೂತು ಅವನಂತೆಯೇ ತಲೆಯಾಡಿಸುತ್ತ ಕಿಲಕಿಲನೆ ನಗುತ್ತಿದ್ದಳು. ಅವನು ತೆಂಗಿನಕಾಯಿ ತುರಿಯುತ್ತಿದ್ದರೆ ಓಡಿಹೋಗಿ ಪುಟ್ಟ ಅಂಗೈ ಚಾಚುತ್ತಿದ್ದಳು. ಅವಳ ಶೀತಲ ಕೋಮಲ ಪಾದಗಳಿಗೆ ಮುತ್ತಿಟ್ಟು ''ಇಂಥದೊಂದು ಪುಟ್ಟ ಕಂದನನ್ನು ನೀನು ನನಗೆ ಕೊಡಲಿಲ್ಲವಲ್ಲ'' ಎಂದವನು ದೇವರನ್ನು ಆಕ್ಷೇಪಿಸುತ್ತಿದ್ದ.

ಈ ಹುಡುಗಿ ಯಾರೋ ಎಲ್ಲಿಂದ ಬಂದಳೋ ಯಾಕೆ ಬಂದಳೋ ಒಂದೂ ಹರಿನಾಥನಿಗೆ ಗೊತ್ತಿಲ್ಲ. ಆದರೆ ಅವಳು ಬಂದ ದಿನವೇ ಶುಭ್ರ ಸ್ನೇಹಲೋಕಗಳೆಲ್ಲ ಒಟ್ಟಿಗೇ ತೆರೆದುಕೊಂಡಂತಾಗಿತ್ತು. ಹೃದಯ ಹಾಲಾಗಿತ್ತು! ಅದೆಷ್ಟು ಪರಿಚಿತ ಸಿಹಿ ನಗುವನ್ನು ನಕ್ಕಳು ಅವಳು! ಆಮೇಲೆ ಪ್ರೀತಿಯಿಂದ ಕೈಹಿಡಿದು ಮಹಡಿಯಲ್ಲಿದ್ದ ತನ್ನ ಅಮ್ಮನ ಬಳಿಗೆ ಕರೆದೊಯ್ದಿದ್ದಳು. ಅರ್ಥವಾಗದ ಅಪರಿಚಿತ ಭಾಷೆಯಲ್ಲಿ ಏನೇನೋ ತೊದಲಿದಳು. ಅಪ್ಪನ ಜತೆ ಬಂದಿದ್ದ ಆ ಚೆಲುವ- ಹೆಂಗಸು ಮಂಚದ ಮೂಲೆಯಲ್ಲಿ ಸಂಕೋಚದಿಂದ ಕೂತವಳು ತನ್ನ ಕಂಡೊಡನೆ ಆರ್ದ್ರಳಾಗಿ ಅಪ್ಪಿ ತೊಡೆಮೇಲೆ ಕೂರಿಸಿಕೊಂಡಳು. ನೆತ್ತಿ

ಮೂಸಿದಳು. ಆಕೆ ಬುಟ್ಟಿಯಿಂದ ತೆಗೆದು ಬಾಯಿಗಿಟ್ಟ ಮಿಠಾಯಿ ತುಂಡಿಗೆ ಅಮ್ಮನದೇ ಪ್ರೀತಿಯಿತ್ತು!

ಈ ಚೆಲುವ ಹೆಂಗಸಿನ ಬಗೆಗಾಗಲಿ, ಈ ಪುಟ್ಟ ಕಿನ್ನರಿಯ ಬಗೆಗಾಗಲಿ, ಹರಿಗೆ ಹೆಚ್ಚು ತಿಳಿಯದಿದ್ದರೂ ಅಪ್ಪ ಕರೆದುಕೊಂಡು ಬಂದಿರುವ ಕಾರಣ ಈ ಮನೆಯ ಅತಿಥಿಗಳು ಎಂದಷ್ಟೆ ತಿಳಿಯಿತು. ಅಪ್ಪನಿಗಂತು ಈ ಬಾರಿ ಎಲ್ಲಿಲ್ಲದ ರಾಜೋಪಚಾರ. ಬಂದ ಮಧ್ಯಾಹ್ನವೇ ಅವರು ಟ್ರಂಕಿನಿಂದ ಹೊಸ ನೋಟುಗಳ ಕಟ್ಟನ್ನು ತೆಗೆದು ತಮ್ಮಂದಿರ ಕೈಗಿತ್ತು ''ವ್ಯಾಪಾರಕ್ಕೆ ಬಳಸಿಕೊಳ್ಳಿ'' ಅಂದಿದ್ದರು. ಆಮೇಲೆ ಅವರು ಮಾತಾಡಿದ್ದೇ ಕಡಿಮೆ. ಮನೆಯವರೇ ಅವರ ಇಷ್ಟಾರ್ಥಗಳನ್ನೆಲ್ಲ ಚಾಚೂ ತಪ್ಪದೆ ಅರಿತುಕೊಂಡು ವಿಧೇಯತೆಯಿಂದ ನಡೆಸಿಬಿಡುತ್ತಿದ್ದರು. ವೆಂಕಟಗಿರಿ ಆ ಪುಟ್ಟ ಹುಡುಗಿಯನ್ನು – ರಾಣಿ ಅವಳ ಹೆಸರು – ತೊಡೆಮೇಲೆ ಕೂರಿಸಿಕೊಂಡು ಮುದ್ದುಗರೆಯುವುದನ್ನು ನೋಡಿ ಈ ಚಿಕ್ಕಪ್ಪನ ಭಂಡಾರದಲ್ಲಿ ಇಂಥ ಪ್ರೀತಿ ಮಾತುಗಳಿಗೂ ಸ್ಥಳವುಂಟೇ ಎಂದು ಹರಿಗೆ ಬೆರಗು.

ಅವನಿಗಂತು ಅವಳು ದಿನದಿನಕ್ಕೆ ಆಪ್ತವಾಗುತ್ತ ಬದುಕಿನ ಒಂದು ಅನಿವಾರ್ಯ ಅಕ್ಕರೆಯ ಭಾಗವಾಗುತ್ತ ಹೋದಳು. ಆ ನಾಲ್ಕಾರುದಿನ ಅವರಿಬ್ಬರೂ ಅದೆಷ್ಟು ಆಟವಾಡಿದ್ದು, ಚಿಟ್ಟೆ ಹಿಡಿದದ್ದು, ಕಪ್ಪೆಗೂಡು ಕಟ್ಟಿದ್ದು! ಆ ಮುದ್ದು ಆಕಾರಕ್ಕೆ ಅವನು ಬೆರಗಾಗುತ್ತಿದ್ದ. ಆ ಕೋಮಲ ಕರಪಲ್ಲವ, ಹಾಲ್ದುಟಿಯ ಮಿರುಗು, ಕಣ್ಣಂಚಿನ ಹೊಳಪು, ಲಲಾಟದ ಮೇಲೆ ಕುಣಿಯುವ ಮುದ್ದು ಮುಂಗುರುಳು – ಅವನಲ್ಲಿ ಅವ್ಯಕ್ತ ಆಮೋದಗಳನ್ನು ಸೃಷ್ಟಿಸುತ್ತಿದ್ದವು. ಸ್ವಾರಸ್ಯದ ಸಂಗತಿಯೆಂದರೆ ಆ ಎಳೆಯರಿಬ್ಬರ ನಡುವೆ ಮಾತುಗಳೇ ಇರಲಿಲ್ಲ. ಅದರ ಅವಶ್ಯಕತೆಯೂ ಅವರಿಗಿದ್ದಂತಿರಲಿಲ್ಲ. ಶಬ್ದ- ಅರ್ಥಗಳ ಗೊಡವೆಗೇ ಹೋಗದೆ ಮುಗ್ಧ ಭಾವ ಸಾಂಗತ್ಯದಲ್ಲಿ ನಕ್ಕು ನಲಿದರು. ಮನೆಯಂಗಳವನ್ನೆಲ್ಲ ಬೆಳಕು ಮಾಡಿಬಿಟ್ಟರು.

*    *    *

ನೋಡನೋಡುತ್ತ ಅವರೆಲ್ಲ ಹಿಂತಿರುಗಿ ಹೊರಡುವ ದಿನವೂ ಬಂದೇ ಬಿಟ್ಟಿತು. ಎಲ್ಲಿಗೆ ಹೋಗುತ್ತಾರೆ ಯಾಕೆ ಹೋಗುತ್ತಾರೆ ತಿರುಗಿ ಬರುವುದಿಲ್ಲವಾ ಏನೊಂದೂ ತಿಳಿಯದು ಹರಿಗೆ. ಟ್ರಂಕು-ಹಾಸಿಗೆ ಸುರುಳಿ ಹೊತ್ತು ಹೊರಟ ಆಳು ಕೆಂಚನನ್ನು ತಾನೂ ಬೆಪ್ಪನಂತೆ ಹಿಂಬಾಲಿಸಿದ. ರಾಣಿಯನ್ನೂ ಆಕೆಯನ್ನೂ ಹತ್ತಿಸಿ ಅಪ್ಪ ತಾವೂ ಬಸ್ಸಿನೊಳಗೆ ಹತ್ತಿ ಕೂತರು. ಇವನು ಹೊರಗೇ ಉಳಿದ. ದೂರದಿಂದ ಅವನನ್ನೇ ಕರುಣೆಯಿಂದ ದಿಟ್ಟಿಸುತ್ತಿದ್ದ ಆಕೆ ಅಪ್ಪನ ಹತ್ತಿರ ಸರಿದು ಕಿವಿಯಲ್ಲಿ ಏನೋ ಹೇಳಿದಳು. ಕಿತ್ತಳೆ ಹಣ್ಣು ಬಿಡಿಸುತ್ತಿದ್ದ ಅಪ್ಪ ಕತ್ತೆತ್ತದೆಯೇ ಮಗುಮ್ಮಾಗಿ ತಲೆಯಾಡಿಸಿ ಒಪ್ಪಿಗೆ ಕೊಟ್ಟರು. ಕೂಡಲೇ ಆಕೆ ಸಡಗರದಿಂದ ಕಿಟಕಿಯಾಚೆ ತಲೆ ತೂರಿಸಿ ''ಓಡಿ ಬಾ ಓಡಿ ಬಾ ಪುಟ್ಟ!'' ತಾಯ್ತನದ ಪರಿಭಾಷೆಯಲ್ಲಿ ಕೈ ಬೀಸಿ ಕರೆದಳು. ಒಂದೇ ಉಸಿರಿಗೆ ಓಡೋಡಿ ಬಂದ ಹರಿ ಏದುತ್ತ ಆಕೆಯ ಮುಂದೆ ನಿಂತಾಯ್ತು. ತೊಡೆ ಮೇಲಿದ್ದ ರಾಣಿಯನ್ನು ಮೆಲ್ಲಗೆ ಅಪ್ಪನ ತೊಡೆಗೆ ವರ್ಗಾಯಿಸಿ ಅವನನ್ನು ತೊಡೆಯ ಮೇಲೇರಿಸಿಕೊಂಡು ಪುಟ್ಟದೊಂದು ಮುತ್ತು ಕೊಟ್ಟಳು. ಕೋಮಲವಾಗಿ ಮುಗುಳ್ನಕ್ಕಳು. ಶುದ್ಧ ಮಂದಹಾಸ ಮೂಡಿಸಿದ ಆ ಕೆನ್ನೆದಿಂಡಿನಲ್ಲಿ ಎಂಥ ಒಳ್ಳೆಯತನ ಇತ್ತು!

ಆಮೇಲೆ ಬೆಂಗಳೂರಿನಲ್ಲಿ ಕಳೆದ ಹತ್ತಾರು ದಿನ ಅವನ ಪಾಲಿಗೆ ಸ್ವರ್ಗ ಸಮಾನವಾಗಿತ್ತು. ಬಂದ ದಿನವೇ ಆಕೆ ಅವನನ್ನು ಪೇಟೆಗೆ ಕರೆದುಕೊಂಡು ಹೋಗಿ ಹೊಸಬಟ್ಟೆ ಕೊಡಿಸಿದಳು. ಚಪ್ಪಲಿ ಕೊಡಿಸಿದಳು. ಅದರ ಅಭ್ಯಾಸವೇ ಇರದಿದ್ದ ಅವನಿಗೆ ಮೊದಮೊದಲು ಕಚಗುಳಿಯಾಯಿತಾದರೂ ಆಮೇಲಾಮೇಲೆ ತಾನಾವುದೋ ಪ್ರಾಂತ್ಯದ ಮಠಾಧಿಪತಿಯೋ ಅಥವಾ ಧೀಮಂತ ರಾಜಕುವರನೋರ್ವನೋ ಇರಬೇಕೆಂಬ ಭ್ರಮೆಯೂ ಅಷ್ಟಿಷ್ಟು ಉಂಟಾಯಿತು.

ಎಲ್ಲಕ್ಕಿಂತ ಖುಷಿ ಕೊಟ್ಟ ಸಂಗತಿಯೆಂದರೆ ರಾತ್ರಿ ಹೊತ್ತು ತಾನು ಆಕೆ ಮತ್ತು ಅಪ್ಪನ ನಡುವೆ ಮಲಗುತ್ತಿದ್ದುದು. ಹೆಮ್ಮೆಯಿಂದ ಅವನ ಹೃದಯ ಬಿರಿದುಹೋಗಿತ್ತು. ಈ ಸಾರಿ ಊರಿಗೆ ಹೋದಾಗ ಚಾಮಿಗೆ ಈ ವಿಷಯ ಮರೆಯದೆ ಹೇಳಬೇಕು! ಆದರೂ ಅವನ ಈ ನಿಸ್ಸೀಮ ಆನಂದದ ಹಿಂದೆ ಒಂದು ವಿಷಾದದ ಎಳೆಯೂ ಇತ್ತು. ನ್ಯಾಯವಾಗಿ ಆಕೆಯ ಜಾಗದಲ್ಲಿ ತನ್ನ ಅಮ್ಮ ಅಲ್ವಾ ಇರಬೇಕಾದ್ದು? ತನ್ನ ಯೆಂಕಮ್ಮ ಯಾರಿಗೇನು ಕಡಿಮೆ? ಎಷ್ಟು ಬೆಳ್ಳಗಿದೆ ಅವಳ ಹೊಟ್ಟೆ! ಅವಳ ನಗು ಎಷ್ಟು ಚಂದ! ಒಬ್ಬಟ್ಟು ಎಷ್ಟು ಚೆನ್ನಾಗಿ ಮಾಡುತ್ತಾಳೆ! ಇದೆಲ್ಲ ಅಪ್ಪನಿಗೆ ಯಾಕೆ ಗೊತ್ತಾಗಲ್ಲ?

ಬೆಂಗಳೂರಿನಲ್ಲಿದ್ದಷ್ಟು ದಿನವೂ ಹರಿಗೆ ಕಂಡರಿಯದ ಬೆಚ್ಚಗಿನ ಅನುಭವಗಳೇ. ರಾಣಿಯ ಮತ್ತವಳ ತಾಯಿಯ ಅಕ್ಕರೆಯ ಆಪ್ತತೆಯಲ್ಲಿ ಅವನು ಕರಗಿಹೋದ. ಹೊಸ ಸ್ನೇಹ ಹೊಸ ನೋಟ ಹೊಸ ತಿರುಗಾಟ! ಅವನಂತು ಉತ್ಸಾಹದ ತುತ್ತ ತುದಿಯಲ್ಲಿದ್ದ. ಹಸಿವು, ನೋವು, ದುಗುಡ-ದುಮ್ಮಾನಗಳ ಗೋಜಲುಮಯ ಬದುಕಿನಲ್ಲಿ ಇಂಥದೊಂದು ಸುಖದ ಆಯಾಮ ಕೂಡ ಇರಬಹುದೆಂಬ ಕಲ್ಪನೆಯೇ ಅವನಿಗಿರಲಿಲ್ಲ.

*    *    *

ನಕ್ಷತ್ರಲೋಕಗಳಲ್ಲಿ ಹರಿ ತೇಲುತ್ತಿದ್ದ. ನಕಾಸೆಗಳ ನೀಲಿಕುಲಾವಿ ತಲೆ ಮೇಲೆ: ಮೈ ಮೇಲೆ ರೇಷ್ಮೆ ಅಂಗಿ. ಎಲ್ಲೆಲ್ಲೂ ಹೂವು ಹಸಿರು ಸಂಗೀತ ಸುಗಂಧ! ಉಲ್ಲಸಿತನಾಗಿದ್ದಾನೆ. ರಾಣಿಯೂ ಅಷ್ಟೇ. ಬಣ್ಣಬಣ್ಣದ ಹೂಗಳನ್ನೇ ಆಭರಣಗಳಾಗಿ ಧರಿಸಿ ಗಂಧರ್ವ ಕನ್ಯೆಯಂತೆ ಹೊಳೆಯುತ್ತಿದ್ದಾಳೆ. ನದಿ ನೊರೆಯಂಥ ನಿರಿಗೆ ಲಂಗ, ಆಕಾಶ ಬಣ್ಣದ ಪುಟ್ಟ ರವಿಕೆ. ನಗುನಗುತ್ತ ಅವನ ಕೈಹಿಡಿದೆಳೆದು ''ಬಾರೋ ಹರಿ, ಬೆಟ್ಟದ ತುದಿಗೆ ಹೋಗೋಣ. ಆಕಾಶ ಅಲ್ಲಿಗೆ ತುಂಬಾ ಹತ್ರ ಗೊತ್ತಾ ನಿಂಗೆ?'' ಕರೆಯುತ್ತಿದ್ದಾಳೆ. ''ಬೆಟ್ಟದ ತುದಿಗಾ? ಅಯ್ಯಪ್ಪ, ನನ್‌ಕೈಲಿ ಆಗಲ್ಲಮ್ಮ'' ನಾಟಕೀಯವಾಗಿ ಉಲಿಯುತ್ತಿದ್ದಾನೆ ಹರಿ. ಅವಳು ಕಿಲಕಿಲನೆ ನಗುತ್ತ ''ಅಯ್ಯೋ ಪೆದ್ದಾ, ನಡಕೊಂಡು ಅಲ್ವೋ, ಕುದುರೆ ಬರುತ್ತೆ... ಬಿಳೀ ಕುದುರೆ!'' ಅನ್ನುವಷ್ಟರಲ್ಲಿ, ಅಗೋ, ಶಂಖದಂತೆ ಹೊಳೆಯುತ್ತ ಅಷ್ಟೆತ್ತರದ ಕುದುರೆ ಬಂದೇಬಿಟ್ಟಿತು. ಎಷ್ಟು ಚಂದ ಅದರ ಮುಖ! ಎಷ್ಟು ಸೊಗಸು ಅದರ ಮೈಮಾಟ! ಧೀರ ಗಂಭೀರವಾಗಿ ಕುತ್ತಿಗೆಯೊಲೆಯುತ್ತಾ ರಾಜಕುದುರೆಯಂತೆ ಬರುತ್ತಿದೆ. ಟಕ್!.... ಟಕ್!... ಟಕ್! ಆ ಮೃದು ಮಧುರ ಹೆಜ್ಜೆ ಸಪ್ಪುಳ ತನ್ನ ಹೃದಯದ ಬಡಿತದಂತೆಯೇ ಲಯಬದ್ಧವಾಗಿದೆ. ಸಂಭ್ರಮವುಕ್ಕಿಸುತ್ತಿದೆ. ಕುದುರೆ ಹತ್ತಿರ ಬಂದು ತಲೆಬಾಗಿ ನಿಂತಿತು. ರಾಣಿಯನ್ನು ಅದರ ಮೇಲೆ ಹತ್ತಿಸಿಯಾಯ್ತು. ''ನೀನೂ ಬಂದುಬಿಡೋ... ಕುದುರೆ ಹೊರಟುಬಿಡುತ್ತೆ...'' ರಾಣಿ ಆತಂಕದಿಂದ ಅವನತ್ತ ಕೈ ಚಾಚಿದ್ದಾಳೆ. ಇನ್ನೇನು ಅವನೂ ಹಾರಿ ಕೂತುಕೊಳ್ಳಬೇಕು...

''ಲೋ ಮಗೂ, ಏಳಪ್ಪಾ ಬೇಗ! ಎಂಟುಗಂಟೆ ಆದ್ರೂ ಮಲಗೇ ಇದೀಯಲ್ಲ ಏಳು ಏಳು ನಾವಿನ್ನು ಹತ್ತುಗಂಟೆ ರೈಲಾದ್ರೂ ಹಿಡೀಲೇಬೇಕು. ಸಂಜೆ ಒಳಗೆ ನಿನ್ನ ಊರು ತಲುಪಿಸದಿದ್ರೆ ನಿಮ್ಮ ಚಿಕ್ಕಪ್ಪ ನನ್ನ ಬೈತಾರೆ ಅಷ್ಟೇ'' ಎಂದು ಅಲುಗಿಸಿ ಅಲುಗಿಸಿ ಎಬ್ಬಿಸುತ್ತಿದ್ದಾನೆ ನೆಂಟರ ಹುಡುಗ ಧ್ರುವ. ಬೆಚ್ಚಿ ಕಣ್ತೆರೆದ ಹರಿ. ಧ್ರುವ ಬಿಟ್ಟು ಬೇರಾರೂ ಇಲ್ಲ. ರೂಮೆಲ್ಲ ಖಾಲಿಖಾಲಿ. ತೀರಾ ಪೆಚ್ಚಾಗಿ ಅವ್ರೆಲ್ಲ ಎಲ್ಲಿ? ಅಂದ. ''ಬೆಳಗಿನ ಗಾಡಿಗೇ ಅವ್ರೆಲ್ಲಾ ಬನಾರಸಿಗೆ ಹೊರಟು ಹೋದ್ರಲ್ಲ'' ಧ್ರುವ ಹೇಳಿದ. ಶರವೇಗದಿಂದ ಅಂಗಳಕ್ಕೆ ಧಾವಿಸಿದ ಹರಿ. ಮೂಲೆಯಲ್ಲಿ ರಾಣಿಯ ಕೆಂಪು ಮಕಮಲ್ ಚಪ್ಪಲಿ ಇರಲಿಲ್ಲ. ಮಾವಿನ ಮರದಡಿ ಅವಳು ಕಟ್ಟಿದ್ದ ಚಪ್ಪರ ಇರಲಿಲ್ಲ. ದಾಳಿಂಬೆ ರೆಂಬೆ ಮೇಲೆ ತಾನೇ ಒಣಗಿಹಾಕಿದ್ದ ಅವಳ ಪುಟ್ಟ ಕರ್ಚೀಫು ಇರಲಿಲ್ಲ. ಒಟ್ಟಾರೆ ಅವತ್ತಿನ ಬೆಳಗಿನ ನಿಷ್ಕರುಣ ವಾತಾವರಣದಲ್ಲಿ ಅವಳ ಕಿಂಚಿತ್ ಕುರುಹೂ ಇರಲಿಲ್ಲ. ಅಪ್ಪ ಸೇದಿ ಬಿಸಾಕಿ ಹೋಗಿರುವ ಸಿಗರೇಟು ತುಂಡು, ಆಕೆಯ ಮುಡಿಯಿಂದ ಉದುರಿರಬಹುದಾದ ಒಂದೆರಡು ಮಲ್ಲಿಗೆಯರಳು, ರಾತ್ರಿಯೆಲ್ಲ ಹದವಾಗಿ ಹೊಡೆದ ಮಳೆಯ ಕೆಸರಲ್ಲಿ ಅಸ್ಪಷ್ಟ ಕುದುರೆ ಹೆಜ್ಜೆಗಳು ಇದಿಷ್ಟೇ ಕಂಡದ್ದು ಅವನಿಗೆ. ಪಡೆಯಲಾಗದ ನಿರಾಶೆ, ಖಾಲಿತನ ಆವರಿಸಿ ಅಳುಬಂತು. ದೂರ ಪ್ರಯಾಣದಲ್ಲೆಲ್ಲೋ ಕಳೆದುಹೋದ ಒಂಟಿಯಾತ್ರಿಕನಂತೆ ಹತಾಶನಾಗಿ ನಿಂತುಬಿಟ್ಟ. ಕನಸಿನಲ್ಲಿ ಕಂಡ ಕುದುರೆಯ ಹೆಜ್ಜೆ ಮನೆಯಂಗಳದಲ್ಲಿ ಮೂಡಿದ್ದಾದರೂ ಹೇಗೆ ಅನ್ನುವುದು ಕಡೆಗೂ ಅವನಿಗೆ ತಿಳಿಯಲಿಲ್ಲ.

---

**ಭಾರತೀ ಕಾಸರಗೋಡು**
೭೩೩, ೧೪ನೇ ಕ್ರಾಸ್, ಬಿ.ಇ.ಎಲ್. ಬಡಾವಣೆ (ಮೊದಲ ಹಂತ)
ಭಾರತ್ ನಗರ, ಮಾಗಡಿ ರಸ್ತೆ, ಬೆಂಗಳೂರು - ೫೬೦ [illegible]



‘ಪ್ರತ್ಯಕ್ಷವಾದರೂ ಪರಾಂಬರಿಸಿ ನೋಡು’ ಎಂಬುದು ಒಂದು ಅರ್ಥಪೂರ್ಣವಾದ ಗಾದೆ ಮಾತು. ಈ ಮಾತು ಅಮೆರಿಕದ ಕುರಿತು ಹೇಳುವಾಗ ಇನ್ನೂ ಹೆಚ್ಚು ಅರ್ಥಪೂರ್ಣವಾಗುತ್ತದೆ. ಯಾಕೆಂದರೆ ಇಂದು ಅದು ಜಗತ್ತಿನ ಮನಸ್ಸಿನ ಆಕರ್ಷಕ ಕೇಂದ್ರವಾಗಿದೆ. ಹಾಗೆಯೇ ನವವಸಾಹತುಶಾಹಿಯ ಶಕ್ತಿ ಕೇಂದ್ರ ಕೂಡ ಹೌದು. ಇಂಥ ಸಂದರ್ಭದಲ್ಲಿ ಹೊರ ಬಂದ ‘ಅಮೆರಿಕಾದೊಳಗೊಂದು ಇಣುಕುನೋಟ’ ಒಂದು ಅರ್ಥಪೂರ್ಣವಾದ ಮತ್ತು ಸಕಾಲಿಕವಾದ ಪ್ರವಾಸ ಕಥನವಾಗಿದೆ.

ಈ ಗ್ರಂಥದ ಕುರಿತು ಬಹುಮುಖ್ಯವಾದ ಮೆಚ್ಚಿಕೆಯೆಂದರೆ ಇಲ್ಲಿಯ ವಸ್ತುನಿಷ್ಠ ವಿಶ್ಲೇಷಣೆಯನ್ನೊಳಗೊಂಡ ವಿವರಣೆ. ಅಮೆರಿಕದ ತಂತ್ರಜ್ಞಾನದ ಪ್ರಗತಿಯ ಕುರಿತು ಬೆರಗು-ಮೆಚ್ಚಿಗೆ ಇರುವಂತೆ ಈ ಅಂತಶ್ಶಕ್ತಿ ಯಾವುದು; ಇಲ್ಲಿಯ ಕುಟುಂಬ ಜೀವನದ ಮತ್ತು ನಿತ್ಯಜೀವನದ ಬೆರಗಿನ ಹಿಂದಿರುವ ಜೀವನ ಸೆಲೆ ಯಾವುದು; ಇಲ್ಲಿಯ ವಿಲಾಸ ಮತ್ತು ಸಾಹುಕಾರಿಕೆಯ ಹಿಂದೆ ಇರುವ ಚಾರಿತ್ರಿಕ ಗುಣ ಯಾವುದು – ಎಂದು ಕೆದಕಿ ನೋಡುವ ಲೇಖಕರ ಕುತೂಹಲ ಮತ್ತು ಪೂರ್ವಗ್ರಹವಿಲ್ಲದ ದರ್ಶನ ಈ ಕಥನದ ಶಕ್ತಿಯಾಗಿದೆ.

ಅಮೆರಿಕದ ಸಾಹುಕಾರಿಕೆಯ ಕುರಿತು ಒಂದು ಉದಾಹರಣೆಯನ್ನು ಕೊಟ್ಟರೆ ಅಗಳನ್ನು ಹಿಚುಕಿ ಇಡೀ ಮಡಕೆಯ ಗುಣ ತಿಳಿಯಬಹುದು.

‘‘ನಮ್ಮ ಕಾಲೋನಿಯಲ್ಲೂ ಹೀಗೆ ಪ್ರತಿ ಮನೆಗೆ ಒಂದು ಪಾರ್ಕಿಂಗ್ ಜಾಗ ರಿಸರ್ವ್ ಮಾಡಲಾಗುತ್ತದೆ. ಇದಲ್ಲದೆ ಹೆಚ್ಚುವರಿ ಕಾರುಗಳಿಗೆ ಹಾಗೂ ಸಂದರ್ಶಕರ ಕಾರುಗಳಿಗೆ ಜಾಗ ಮಾಡಲಾಗಿದೆ.. ನಮ್ಮ ಕಾಲೋನಿಯಲ್ಲಿ ನಾನು ಗಮನಿಸಿದಂತೆ ಗಂಡನಿಗೆ ಬೇರೆ ಕಾರು, ಹೆಂಡತಿಗೆ ಬೇರೆ ಕಾರು ಸಾಮಾನ್ಯ. ಸಾಮಾನ್ಯವಾಗಿ ಇಬ್ಬರೂ ಕೆಲಸ ಮಾಡುವುದರಿಂದ ಮತ್ತು ಗೃಹಿಣಿಯಾದರೂ ಎಲ್ಲಾ ಅವಶ್ಯಕ ಸಾಮಾನುಗಳನ್ನು ತರಲು ಕಾರಿನಲ್ಲೇ ಹೋಗಬೇಕಾದ್ದರಿಂದ ಇದು ಒಂದು ರೀತಿಯಲ್ಲಿ ಇಲ್ಲಿನ ಜೀವನದ ಅವಶ್ಯಕತೆ ಎನ್ನಬಹುದು. ಆದರೂ ಮನೆಗಳು, ಆಫೀಸುಗಳು, ಅಂಗಡಿಗಳು ಕೊನೆಗೆ ಇಡೀ ನಗರವೇ ಕಾರುಗಳಿಗಾಗಿ ವಿನ್ಯಾಸ ಮಾಡಿದ್ದಾರೋ ಎನ್ನಿಸುವುದಂತೂ ಸಾಮಾನ್ಯ.’’ ಇಲ್ಲಿಯೇ ತಂತ್ರಜ್ಞಾನದ ಸಾರ್ವತ್ರಿಕತೆಯನ್ನೂ ಗಮನಿಸಬಹುದು.



ಅಧ್ಯಯನ ಪ್ರಕಾಶನ

ಪುಟ : ೨೨೪+೧೬ ಬೆಲೆ ರೂ. ೯೫

‘‘ಕಾರಿನ ಒಳಗಡೆ ಬಳಸಲಾಗುತ್ತಿರುವ ತಂತ್ರಜ್ಞಾನ ಬೆರಗುಗೊಳಿಸುವಂತಹದು. ಹೆಚ್ಚು ಕಡಿಮೆ ಎಲ್ಲಾ ಕಾರುಗಳೂ ಏರ್ ಕಂಡೀಶನ್ಡ್, ಪವರ್ ವಿಂಡೊ ಅಂದರೆ ಬಟನ್ ಒತ್ತಿದರೆ ಮೇಲೆ ಕೆಳಗೆ ಹೋಗುವ ವಿದ್ಯುತ್ ಶಕ್ತಿಯಿಂದ ಚಲಿಸುವ ಕಿಟಕಿ, ಎಲ್ಲಾ ಬಾಗಿಲು ಸರಿಯಾಗಿ ಮುಚ್ಚದಿದ್ದರೆ ಎಚ್ಚರಿಕೆ ಕೊಡುವ ಸಾಧನ, ರಿಮೋಟ್ ಕಂಟ್ರೋಲ್‌ದಿಂದ ತೆಗೆಯುವ ಬಾಗಿಲು, ಧ್ವನಿ ಚಲನೆ ಎಚ್ಚರಿಕೆ, ಅಪಘಾತ ಆದಾಗ ಸ್ವಯಂಚಾಲಿತವಾಗಿ ತೆರೆದುಕೊಂಡು ಡ್ರೈವರನ್ನು ರಕ್ಷಿಸುವ ಏರ್‌ಬ್ಯಾಗುಗಳು, ಪಾರ್ಕ್ ಮಾಡಿದಲ್ಲಿ ಯಾರಾದರೂ ಬಿಡಿ ಭಾಗವನ್ನು ಕಳುವು ಮಾಡಲು ಪ್ರಯತ್ನಿಸಿದರೆ ಹೊಡೆದುಕೊಳ್ಳುವ ಅಲಾರಾಂ – ಹೀಗೆ ಕಾರಿನಲ್ಲಿ ಬಳಸುವ ತಂತ್ರಜಾಣಗಳಿಗೆ ಮಿತಿಯಿಲ್ಲ.’’

ಕಚೇರಿಗಳಲ್ಲಿ ಹಗಲೂ ಇರುಳೂ ಫ್ಯಾನ್ ಮತ್ತು ಲೈಟನ್ನು ಆರಿಸುವುದೇ ಇಲ್ಲವಂತೆ. ಬ್ಯಾಂಕಿನಲ್ಲಿ ದುಡ್ಡು ತೆಗೆಯಲು ಒಂದು ಮೆಶಿನ್ ನಮ್ಮ ಗುರುತಿನ ಕಾರ್ಡ್ ಅನ್ನು ಹಾಕಿದಾಗ ನಮ್ಮ ಗುಪ್ತ ನಂಬರನ್ನು ಕೇಳುತ್ತದೆ. ಎಷ್ಟು ದುಡ್ಡು ಬೇಕು ಎಂದು ಕೇಳುತ್ತದೆ. ಕೀ ಬೋರ್ಡಿನ ಮುಖಾಂತರ ಉತ್ತರಿಸಿದಾಗ ಅಷ್ಟು ನೋಟನ್ನು ಉಗುಳುತ್ತದೆ. ಅದೇ ಸಮಯ ನಮ್ಮ ಫೋಟೋವನ್ನು ನಮಗೆ ತಿಳಿಯದಂತೆ ತೆಗೆದುಕೊಳ್ಳುತ್ತದೆ; ಯಾರಾದರೂ ಮೋಸ ಮಾಡಿ ಹಣ ಒಯ್ದರೆ! ಹಾಗೇ ನಮ್ಮ ಖಾತೆ ಅಲ್ಲೇ ಇರಬೇಕೆಂದಿಲ್ಲ, ಬೇರೆ ಬ್ಯಾಂಕಿನಲ್ಲಿದ್ದರೆ ಆ ಮೆಶಿನ್ ಅಲ್ಲಿ ಫೋನ್ ಮಾಡಿ ಚೌಕಾಶಿ ಮಾಡುತ್ತದೆ. ನಮ್ಮ ಖಾತೆಯಲ್ಲಿ ಹಣ ಇಲ್ಲದಿದ್ದರೆ ‘ಸಾರಿ’ ಎನ್ನುತ್ತದೆ! ಇಲ್ಲಿ ಪ್ರತಿಯೊಂದಕ್ಕೂ ಯಂತ್ರ. ಯಂತ್ರ ಮಾನವ ಕೂಡ ಸೇವೆಗೆ ನಿಂತಿರುತ್ತದೆ. ಫೋನ್ ಸಹ ನಿಮ್ಮ ಉತ್ತರವನ್ನು ಸಂಗ್ರಹಿಸಿ ಅದೇ ಉತ್ತರಿಸುತ್ತದೆ. ‘‘ಅಮೆರಿಕನ್ನರು ಹುಟ್ಟಿನಿಂದ ಸಾವಿನವರೆಗೆ ಯಂತ್ರಗಳು, ಹೊಸ ತಂತ್ರಜ್ಞಾನದ ಬಳಕೆಗೆ ಎಷ್ಟು ಒಗ್ಗಿಹೋಗಿದ್ದಾರೆಂದರೆ, ಅವರಿಗೆ ಯಂತ್ರಗಳ ಬಗ್ಗೆ ವಿಶ್ವಾಸ, ಸ್ವಲ್ಪ ಅಂಧ ವಿಶ್ವಾಸವೇ ಎನ್ನಬಹುದು. ಆದರೆ ಮನುಷ್ಯರ ಮೇಲೆ ವಿಶ್ವಾಸವೇ ಇಲ್ಲ.’’ ಇದು ಬರೀ ಹೇಳಿಕೆಯಲ್ಲ. ಅಮೆರಿಕನ್ನರ ನಡಾವಳಿಗಳನ್ನು ಒಳಹೊಕ್ಕಿ ನೋಡಿದಾಗ ಈ ಮಾತಿನ ರಕ್ತನಾಳಗಳು ಇಡೀ ದೇಹವನ್ನು ಪಸರಿಸಿದ್ದು ತಿಳಿಯುತ್ತದೆ. ಇಷ್ಟಾಗಿಯೂ ಲೇಖಕರು ತಮ್ಮ ವಿವೇಚನಾ ಬುದ್ಧಿಯನ್ನು ಮಂದಗೊಳಿಸಿಕೊಳ್ಳುವುದಿಲ್ಲ. ‘‘ಅಮೆರಿಕನ್ನರಲ್ಲಿ ಹೊಸ ತಂತ್ರಜ್ಞಾನವನ್ನು ಸೃಷ್ಟಿಸುವ, ಅದನ್ನು ಪಟಾರನೆ ಬಳಕೆಗೆ ತರುವ, ಅದನ್ನು ಬಳಕೆಯಲ್ಲಿ ಅರಗಿಸಿಕೊಳ್ಳುವ ಅಗಾಧ ಸಾಮರ್ಥ್ಯ ಇದೆ. ಬಹುಶಃ ಇದು ಅಮೆರಿಕದ ಪ್ರಮುಖ ಸತ್ವಗಳಲ್ಲಿ ಒಂದು. ಅಮೆರಿಕದ ಇನ್ನೊಂದು ಮುಖ್ಯ ವಿಶಿಷ್ಟತೆಯೆಂದರೆ ಉದ್ಯಮಶೀಲತೆ’’ ಎನ್ನುತ್ತಾರೆ.

ಲೇಬರ್ ಡೇಗಾಗಿ ಲೇಖಕರು ಮಿತ್ರರೊಡಗೂಡಿ ಅವರಿರುವ ಡ್ಯಾಲಸ್ ನಗರದ ಕೇಂದ್ರ ಸ್ಥಳಕ್ಕೆ ಬರುತ್ತಾರೆ. ಅಲ್ಲಿ ಅವರಿಗೆ ಅಮೆರಿಕದ ವೈಭವದ ಒಳಗಡೆಯದೊಂದು ಚಿತ್ರ ಸಿಕ್ಕುತ್ತದೆ. ‘‘ನಾವು ಡ್ಯಾಲಸ್ ಕೇಂದ್ರ ಭಾಗದ ಹತ್ತಿರಕ್ಕೆ ಬರುತ್ತಿದ್ದಂತೆ, ನಾವು ಈವರೆಗೆ ನೋಡದ ದೃಶ್ಯಗಳು ಕಂಡವು. ಹಳೆಯ ಮುರುಕು ಮನೆಗಳು, ಕಣ್ಣು ಕೋರೈಸುವ ಅಂಗಡಿಗಳು ಇಲ್ಲದ ಹರಕು ಮುರುಕು ಮನೆಗಳು, ರಸ್ತೆಯಲ್ಲಿ ಹರಿದ ಬಟ್ಟೆ ತೊಟ್ಟುಕೊಂಡು ಓಡಾಡುವ ಕರಿಯರು. ಇದೇನು ಬೇರೆ ಜಗತ್ತು? ಅಮೆರಿಕದಲ್ಲಿ ಹೀಗೂ ಉಂಟೆ? ಎಂದುಕೊಂಡೆ. ಭಾರಿ ದೊಡ್ಡ ನಗರಗಳ ಡೌನ್‌ಟೌನ್ ಪ್ರದೇಶದ ಹತ್ತಿರ ಬಡವರು-ಕರಿಯರು ಇರುವುದು ಅಮೆರಿಕಾದಲ್ಲೆಲ್ಲ ಸಾಮಾನ್ಯವಂತೆ’’ ಎನ್ನುತ್ತಾರೆ. ಇದು ಕೇವಲ ಡ್ಯಾಲಸ್ ನಗರದ ಕೇಂದ್ರ ಮಾತ್ರವಲ್ಲ, ಇದು ಅಮೆರಿಕದ ವೈಭವದ ಅಂತರಾಳದಲ್ಲಿದ್ದ ಪಾಪದ ಕೇಂದ್ರವೂ ಆಗಿರುವುದನ್ನು ಸಂಕೇತಿಸುತ್ತದೆ.

ರೆಡ್ ಇಂಡಿಯನ್ನರು ಅಮೆರಿಕದ ಮೂಲನಿವಾಸಿಗಳು. ಮೊದಲು ಬಿಳಿಯರು ಅಲ್ಲಿ ಬಂದಿಳಿದಾಗ ರೆಡ್ ಇಂಡಿಯನ್ನರು ಸ್ವಾಗತಿಸಿದರಂತೆ. ಅವರಿಗೆ ಕೃಷಿಗೆ ಸಹಾಯ ಮಾಡಿದರು. ಅವರಿಂದ ಲಾಭ ಪಡೆದ ನಂತರ ಬಿಳಿಯರು ತಮ್ಮ ಸುಧಾರಿತ ಶಸ್ತ್ರಾಸ್ತ್ರಗಳಿಂದ ಆ ಮೂಲನಿವಾಸಿಗಳನ್ನು ನಾಶ ಮಾಡಿದರು. ಒಂದೂವರೆ ನೂರು ವರ್ಷಗಳಲ್ಲಿ ಮೆಕ್ಸಿಕೋದಿಂದ ಉತ್ತರಕ್ಕಿರುವ ಒಟ್ಟು ರೆಡ್ ಇಂಡಿಯನ್‌ರ ಜನಸಂಖ್ಯೆ ಒಂದು ಕೋಟಿಯಿಂದ ಹತ್ತು ಲಕ್ಷಕ್ಕೆ ಇಳಿಯಿತಂತೆ!

ಹಿರೋಶಿಮಾದ ಮೇಲೆ ಅಮೆರಿಕಾ ಬಾಂಬ್ ಹಾಕಿದ ದಿನದ ‘ವಿಜಯೀದಿನ’ದ ಒಂದು ಆಚರಣೆಯಲ್ಲಿ ಟಿ.ವಿ.ಯಲ್ಲಿ ಒಂದು ಚರ್ಚೆ ಇತ್ತಂತೆ. ಅದರಲ್ಲಿ ಅದೇ ಯುದ್ಧದಲ್ಲಿ ಭಾಗವಹಿಸಿದ ಒಬ್ಬ ಮಾಜಿ ಸೈನಿಕನ ಸಂದರ್ಶನ ನಡೆಸಲಾಯಿತಂತೆ. ಲೇಖಕರೆನ್ನುತ್ತಾರೆ : ‘‘ಅದರಲ್ಲಿ ಒಂದು ಪ್ರಶ್ನೆಗೆ ಒಬ್ಬ ಮಾಜಿಯೋಧ ಉತ್ತರಿಸಿದ್ದು ಕೇಳಿ ನಾನು ದಂಗಾಗಿ ಹೋದೆ. ಹಿರೋಶಿಮಾ, ನಾಗಸಾಕಿ ಮೇಲೆ ಅಣುಬಾಂಬು ಹಾಕಿದ್ದು ಸರಿಯೇ ಅಂತ ಕೇಳಿದ್ದಕ್ಕೆ ‘ಹೌದು’, ಎರಡು ನಗರಗಳು ನಿರ್ನಾಮವಾಗಿ ನಾಲ್ಕು ಲಕ್ಷ ಜನರ ಸಾಮೂಹಿಕ ಹತ್ಯೆಗೆ ಕಾರಣವಾದರೂ ಅದು ಸರಿ! ಅಣು ಬಾಂಬು ಹಾಕಿಲ್ಲದಿದ್ದರೆ ನಾನು ಖಂಡಿತವಾಗಿ ಸಾಯುತ್ತಿದ್ದೆ. ನನ್ನಂತೆ ಎಷ್ಟೋ ಅಮೆರಿಕನ್ನರು ಸಾಯುತ್ತಿದ್ದರು. ನಾವು ಬದುಕುಳಿಯಲು ಅಣುಬಾಂಬು ಹಾಕುವುದು ಅವಶ್ಯವಾಗಿತ್ತು.’’

ಇದು ಒಬ್ಬ ಯೋಧನ ಮಾತು ಎಂದಲ್ಲ. ನಿಜವಾಗಿ ಇಂದಿಗೂ ಅಮೆರಿಕ ಬದುಕುವುದು ಬೇರೆಯವರನ್ನು ಕೊಂದೇ.

ಲೇಖಕರು ಕೆನಡಿ ಮ್ಯೂಸಿಯಂಗೆ ಹೋಗುತ್ತಾರೆ. ೧೯೬೪ರಲ್ಲಿ ಹತ್ಯೆಯಾದ ಆಗಿನ ಅಮೆರಿಕಾ ಅಧ್ಯಕ್ಷ ಕೆನಡಿಯವರ ಜೀವನ ಸಾಧನೆ ಮತ್ತು ಹತ್ಯೆಯ ಕುರಿತಾದ ವಿವರವನ್ನು ಓದಿ ದಂಗಾಗಿಬಿಡುತ್ತೇವೆ. ಕೆನಡಿ ತೆರೆದ ಕಾರಿನಲ್ಲಿ ಬರುತ್ತಿರುವಾಗ ಲಕ್ಷಾಂತರ ಜನರು ಅವರನ್ನು ಸ್ವಾಗತಿಸುತ್ತಾರೆ. ಆ ಸಮಯದಲ್ಲಿ ಒಂದು ಕಟ್ಟಡದಿಂದ ಗುಂಡುಹಾರಿಸಿ ಕೊಲ್ಲಲಾಗುತ್ತದೆ. ಕೊನೆಗೂ ಕೆನಡಿ ಕೊಲೆಗಾರನ ಪತ್ತೆಯೊಂದನ್ನು ಬಿಟ್ಟರೆ ಅದರ ಹಿಂದಿನ ಜಾಲದ ಪತ್ತೆಯಾಗುವುದೇ ಇಲ್ಲ. ಕೆನಡಿ ಸಾವಿಗೆ ಪ್ರತ್ಯಕ್ಷದರ್ಶಿಗಳಾದ ನೂರಾರು ಜನರನ್ನು ಕೊಲೆ ಮಾಡಿದ ಜಾಡು ಇಲ್ಲಿ ಸಿಕ್ಕುತ್ತದೆ. ಕೆನಡಿ ಹತ್ಯೆಗೆ ಅಮೆರಿಕದ ಬೇಹುಗಾರಿಕಾ ಸಂಸ್ಥೆಯಾದ ಸಿಐಎದ ಕೈವಾಡವೂ ಇತ್ತು ಎಂಬುದಕ್ಕೆ ಇಲ್ಲಿ ಪುರಾವೆಗಳನ್ನು ಒದಗಿಸಲಾಗಿದೆ. ಅಂದರೆ ಅಮೆರಿಕದ ಬಂಡವಾಳಶಾಹಿ ವರ್ಗದ ಹಿತಾಸಕ್ತಿಗೆ ಯಾರೇ (ಕೆನಡಿ ಅಮೆರಿಕದವರೇ ಆಗಿದ್ದು ಕಪ್ಪು ಜನರ ಪರವಾಗಿದ್ದರು) ಅಡ್ಡ ಬಂದರೂ ಅವರನ್ನು ಕೊಲೆ ಮಾಡಲಾಗುತ್ತದೆ. ಸಿಐಎಯ ಜಾಲ ಜಗತ್ತಿನಾದ್ಯಂತ ಇದ್ದು ಮುಕ್ತ ಆರ್ಥಿಕ ನೀತಿಯ ಮೂಲಕ ಅವರು ಭಾರತದ ಒಳಗೆ ನುಗ್ಗಿಬಂದು ತಮಗೆ ಬೇಕಾದವರನ್ನು ದಿಲ್ಲಿ ಗಾದಿಯಲ್ಲಿ ಇರಿಸಿ, ಸಲ್ಲದವರನ್ನು

ಡಾ|| ಆರ್. ವಿ. ಭಂಡಾರಿ

ಕೊಲೆ ಮಾಡಬಲ್ಲರು.

''ಅಮೆರಿಕದ ಈ ಭಯಾನಕ ಅಪರಾಧದ ಅಂಕೆ-ಸಂಖ್ಯೆಗಳ ಬಗ್ಗೆ ಏನೂ ಗೊತ್ತಿಲ್ಲದಿದ್ದರೂ ಈ ಸಮಾಜದ ನರ ನಾಡಿಗಳಲ್ಲೂ ಅಪರಾಧ ತುಂಬಿ ಹರಿಯುತ್ತಿದೆ ಎಂಬುದು ಇಲ್ಲಿ ಬಂದವರಿಗೆ ಸ್ಪಷ್ಟ. ''ಇಲ್ಲಿ ಫಿಲಂಗಳಲ್ಲಿ, ಕಾರ್ಟೂನ್‌ಗಳಲ್ಲಿ, ವಿಡಿಯೋ ಗೇಮ್ಸ್, ಕಂಪ್ಯೂಟರ್ ಗೇಮ್ಸ್‌ಗಳಲ್ಲಿ ಹಿಂಸಾಚಾರ ತಾಂಡವವಾಡುತ್ತವೆ'' ಎನ್ನುತ್ತಾರೆ ಲೇಖಕರು. ಇಲ್ಲಿ ೨೫ ಕೋಟಿ ಜನರಲ್ಲಿ ೨೦ ಕೋಟಿ ಗನ್‌ಗಳಿವೆ.

ಇಲ್ಲಿಯವರ ಉಪಭೋಗದ ರೂಢಿ ಎಷ್ಟಿದೆಯೆಂದರೆ ಅದನ್ನು 'ಕೊಳ್ಳುಬಾಕ ಸಂಸ್ಕೃತಿ' ಅಥವಾ 'ಬಕಾಸುರ ಸಂಸ್ಕೃತಿ' ಎಂದು ಕರೆಯಲಾಗುತ್ತದೆ. ಅಂಥ ಹಸಿವನ್ನು ಅಲ್ಲಿಯ ದೊಡ್ಡ ಕಂಪನಿಗಳವರು ತಮ್ಮ ಜಾಹಿರಾತಿನ ಮೂಲಕ ಹುಟ್ಟಿಸುತ್ತಾರೆ. ಇವರ ವೈಭೋಗಗಳಿಗೆ ಜಗತ್ತಿನ ಪರಿಸರವನ್ನೇ ಹಾಳುಗೆಡಹುತ್ತಾರೆ. ಓಝೋನ್ ಪದರದಲ್ಲಿ ರಂಧ್ರ, ಆಸಿಡ್ ಮಳೆ ಇವಕ್ಕೆಲ್ಲ ಅಮೆರಿಕನ್ ಲೈಫ್‌ಸ್ಟೈಲೇ ಕಾರಣ ಎಂದು ಅಲ್ಲಿಯ ಜನರೇ ಹೇಳುತ್ತಾರೆ. ತಂದೆ ತಾಯಿಗಳನ್ನು ಕೊಂದರೆ ಇನ್ಶೂರೆನ್ಸ್ ಹಣ ಖರ್ಚಿಗೆ ಸಿಕ್ಕುತ್ತದೆಂದು ಕೊಲ್ಲುವ ಮಕ್ಕಳೂ ತಯಾರಾಗಿದ್ದಾರೆ.

ಅಮೆರಿಕ - ಅತ್ಯಂತ ಮುಂದುವರಿದ ರಾಷ್ಟ್ರ. ಆದರೆ ಅಲ್ಲಿಯ ಮಹಿಳೆಯರು ಇಂದಿಗೂ ಪುರುಷರ ಭೋಗದ ವಸ್ತುಗಳೇ. ಒಬ್ಬ ಮಹಿಳೆ ಮೂರು ನಾಲ್ಕು ಮಕ್ಕಳನ್ನು ಹಡೆದು ಎರಡು-ಮೂರು ಸಲ ವಿವಾಹ ವಿಚ್ಛೇದನ ಹೊಂದಿ ಸುಸ್ತು ಆಗಿರುತ್ತಾಳೆ. ಆದರೆ ಗಂಡಸು ಮತ್ತೊಂದು ಹುಡುಗಿಯ ಬೆನ್ನು ಹತ್ತುತ್ತಿರುತ್ತಾನೆ. ಕೆಲಸದ ಭದ್ರತೆಯೂ ಅವಳಿಗಿಲ್ಲ.

ಅಮೆರಿಕ ಸ್ವರ್ಗವೆಂದು ಭ್ರಮೆಗೊಂಡು ಹೋದವರು ಈಗ ಭ್ರಮನಿರಸನ ಹೊಂದುತ್ತಿದ್ದಾರೆ. ಅಮೆರಿಕದ ಆರ್ಥಿಕ ಕುಸಿತದಿಂದಾಗಿ ದಿನೇ ದಿನೇ ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಜನರಲ್ ಮೋಟರ್ಸ್ ಅಮೆರಿಕದ ದೊಡ್ಡ ಕಂಪನಿ. ಕಳೆದ ೧೫ ವರ್ಷಗಳಲ್ಲಿ ಅದರ ಲಾಭ ೩೪೦೦ ಕೋಟಿ ಡಾಲರ್. ಅದೇ ಅವಧಿಯಲ್ಲಿ ಅದು ಎರಡೂವರೆ ಲಕ್ಷ ಕಾರ್ಮಿಕರನ್ನು ಮನೆಗೆ ಕಳಿಸಿದೆ. ಇಲ್ಲಿ ಉದ್ಯೋಗಿಗಳಲ್ಲಿ ಮೂವರಲ್ಲಿ ಒಬ್ಬ ಪಾರ್ಟ್‌ಟೈಂ ಕಾರ್ಮಿಕ. ಉದ್ಯೋಗ ಭದ್ರತೆಗೆ ಕನಿಷ್ಠ ಗಮನ. ಇಂಥ ಔದ್ಯೋಗಿಕ-ಬಂಡವಾಳ ಶಾಹಿ ಉದ್ಯೋಗವನ್ನು ಪುಷ್ಕಳ ಹೆಚ್ಚಿಸುತ್ತದೆ ಎಂದು ಭಾರತ ಅಲ್ಲಿಯ ಬೃಹತ್ ಕಂಪನಿಗಳನ್ನು ಕೈಮಾಡಿ ಕರೆಯುತ್ತದೆ! ಥಳಥಳಿಸುವ ಮಕಮಲ್ಲನ್ನು ಹೊದೆದು ಜನರ ಮನಸೆಳೆಯುವ ಅಮೆರಿಕದ ತೆರೆ ಸರಿಸಿ ಅದರ ನಿಜ ದರ್ಶನವನ್ನು ಇಲ್ಲಿ ತೋರಲಾಗಿದೆ. ಅಮೆರಿಕದಲ್ಲಿ ಎಲ್ಲಾ ಉಂಟು, ಮನುಷ್ಯ ಸಂಬಂಧವೊಂದನ್ನು ಬಿಟ್ಟು. ವಸಂತರಾಜ ಅವರ ಶೈಲಿ ಸರಳವೂ ಆತ್ಮೀಯವೂ ಆಗಿದೆ. ಕಾದಂಬರಿಯನ್ನು ಓದಿಸಿಕೊಂಡು ಹೋದಂತೆ ಓದಿಸಿಕೊಂಡು ಹೋಗುತ್ತದೆ. ಇಲ್ಲಿಯದು ಒರಟು ಬರಹ. ಅದನ್ನು ಓದಿಯೇ ಸವಿಯಬೇಕು. ಹೆಂಡತಿಗೆ ಕಾಗದ ಬರೆದದ್ದು ಎಂದು ಬರೆದ ಮುನ್ನುಡಿಯಲ್ಲಿ... ಹೀಗೆ ಗುರುತಿದ್ದಲ್ಲಿ ಸೆನ್ಸಾರ್ ಮಾಡಲಾಗಿದೆ ಎಂದು ಕಟ್ಟುನಿಟ್ಟಾಗಿ ಅನುಸರಿಸದಿದ್ದರೆ ಈ ವಿಷಯದಲ್ಲಿ ಅವರು ತುಸು ಉದಾರಿಯಾಗಬಹುದಿತ್ತು. ಏನಂತೀರಿ?

ಡಾ। ಆರ್. ವಿ. ಭಂಡಾರಿ
ಕೆರೆಕೋಣ ಅಂಚೆ, ಅರೆಅಂಗಡಿ-೫೮೧೩೪೦, ಹೊನ್ನಾವರ ತಾ.

# ಹೀಗಿರುತ್ತಿರಲೊಂದು ದಿನ...



ಅಮ್ಮನಿಗೆ ನಾನು ಹೀಗಿರಬೇಕು...
ಗಂಡನನು ಕೈಯೊಳಗಿರಿಸಿಕೊಂಡೂ ಕೊಂಡಿರದಂತೆ
ಅವರನ್ನು ಕೇಳದೆ ನಾನೇನೂ ಮಾಡಲ್ಲವೆನ್ನುತ್ತಲೇ
ನನಗೆ ಬೇಕಾದುದನೆ ಅವನು ಮಾಡುವಂತೆ
ಅವನ ಹುಂಡಿಗೆ ಖಂಡಿಕೆ ಹಾಕಿ
''ಅದರಿಂ ಭವಿಸಿರ್ಪ ನವನೂತನ ಸಿದ್ಧಿಗಳೆಲ್ಲಮುಂ''
ತವರಮನೆಗೇ ಹೆಸರಿಸುವಂತೆ;

ನನ್ನ ಗಂಡನಿಗೆ ನಾನು ಹೀಗಿರಬೇಕು...
ಹಲ್ಲು ಸಮೇತವಾದ ತುಂಬು ಬಾಯಿಂದವನ ಪರಾಕಿಸುತ್ತ
ಅವನು ಮಾಡಿರುವ, ಮಾಡುತ್ತಿರುವ, ಮಾಡಬಹುದಾದ
ಪ್ರಮಾದಗಳೆಲ್ಲವನೂ ಮರೆಯುತ್ತ
''ಪಗಲ್ ತ್ರಿಕರಣಗಳಿಂ ಮತ್ತಿರುಳ್ ಏಕಕರಣದಿಂ''
ಅವನ ಸೇವಿಸುತ್ತ
ಶೇಕಡಾ ನೂರು ನಂಬುಗೆಯ ಖಜಾಂಚಿಯೂ ಘೂರ್ಖಾಳೂ
ಏಕಕಾಲದಲ್ಲಾಗುತ್ತ;

ನನ್ನ ಮಗಳಿಗೆ ನಾನು ಹೀಗಿರಬೇಕು...
ಆಗಾಗ ರೇಗುವ ಚಿತ್ತವೂ ಸೇರಿ
''ತರುಣ ತನ್ನ ಷಟ್ಚೇಂದ್ರಿಯಗಳಿಂ ಹೊರಸೂಸಿರ್ಪ''
ತ್ಯಾಜ್ಯಕ್ಕೆ ತಿಪ್ಪೆಯಾಗಿ
ಅವಳ ಖಿನ್ನತೆಗೆ ಗುರಾಣಿಯಾಗಿ
ಥಕ್ಕನೆ ಮಗುವಾಗಿಬಿಟ್ಟಾಗ ಒರಗಿಕೊಳ್ಳುವ
ಮಾಂಸಲ ತೊಡೆಯಾಗಿ;

ನನ್ನೊಳಗಿನ ಕವಿ ಚಪಲಕ್ಕೆ ನಾನು ಹೀಗಿರಬೇಕು...
ಸೇರಿದ್ದು, ನನಗೆ ಸೇರದ್ದು, ಇಕ್ಕುಳದಿಂದಲೂ ಸ್ಪರ್ಶಿಸದ್ದು,
ಸಕಲಕೂ ಸಮಿನಾರಾಗಿ
''ಘನಗಂಭೀರಂ, ಧೀರಂ, ಶಾಂತಂ, ಅವಿಚಲಿತಂ''
ಆಗಿರುತ್ತಲೇ ಚಳವಳಿಗಳಿಗೂ ಕಡ್ಡಾಯವಾಗಿ
ಕವನಕ್ಕೊಗ್ಗದ್ದನ್ನೂ ಕವನೀಕರಿಸುವ
ಹಠವಾದಿಯಾಗಿ;

ನನಗೆ ನಾನು ಹೀಗಿರಬೇಕು...
''ಅವರಿವರ ಎರಕಕ್ಕೆ ಅಳತೆಗೋಲಾಗುತಂ ಆಗುತಂ''
ಅದು ಮರೆತೇಹೋಗಿದೆ.

ಲಲಿತಾ ಸಿದ್ಧಬಸವಯ್ಯ
ನಂ. ೫೨೧೭, 'ಗುರು ಸನ್ನಿಧಿ', ೨ನೇ ಕ್ರಾಸ್
ಅಶೋಕನಗರ, ತುಮಕೂರು - ೫೭೨ ೧೦೩

# ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಏಳು ಬೀಳುಗಳು

## ಕರ್ನಾಟಕ ಮತ್ತು ಬೆಂಗಳೂರಿಗೆ ಅನ್ವಯಿಸಿದಂತೆ ಒಂದು ಅವಲೋಕನ

ಡಾ|| ಯು. ಬಿ. ಪವನಜ

**ಜಾ**ಗತಿಕ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕರ್ನಾಟಕ, ಅದರಲ್ಲೂ ಕರ್ನಾಟಕದ ರಾಜಧಾನಿಯಾದ ಬೆಂಗಳೂರು ಹೆಸರು ಮಾಡಿದೆ. ಮಾಹಿತಿ ತಂತಜ್ಞಾನ ಒಂದು ಉದ್ದಿಮೆಯಾಗಿ ಕಳೆದ ಹತ್ತು ವರ್ಷಗಳಲ್ಲಿ ಯಾರೂ ಎಂದೂ ಕಂಡರಿಯದ ಕೇಳರಿಯದ ಮಟ್ಟಕ್ಕೆ ಅತಿ ವೇಗದಲ್ಲಿ ಏರಿ ಅಷ್ಟೇ ವೇಗದಲ್ಲಿ ಕೆಳಗೆ ಕುಸಿದು ಇದೀಗ ಪುನಃ ಚೇತರಿಸಿಕೊಳ್ಳುತ್ತಿದೆ. ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಈ ಎಲ್ಲ ಬೆಳವಣಿಗೆ ಮತ್ತು ಕುಸಿತಗಳಲ್ಲಿ ಬೆಂಗಳೂರು ವಿಶೇಷತಃ ಭಾಗಿಯಾಗಿದೆ.

ಮಾಹಿತಿ ತಂತ್ರಜ್ಞಾನವು ಜಗತ್ತಿನಲ್ಲಿ ಅತಿ ವೇಗವಾಗಿ ಬೆಳೆಯುತ್ತಿರುವ ತಂತ್ರಜ್ಞಾನ ಎಂದರೆ ಅತಿಶಯೋಕ್ತಿಯಲ್ಲ. ವಿಜ್ಞಾನ ತಂತ್ರಜ್ಞಾನದ ಬೇರಾವ ಪ್ರಭೇದವೂ ಮಾಹಿತಿ ತಂತ್ರಜ್ಞಾನದಷ್ಟು ವೇಗವಾಗಿ ಬೆಳೆಯಲಿಲ್ಲ. ಈ ಬೆಳವಣಿಗೆಯ ಜೊತೆಗೆ ಬೆಂಗಳೂರು ಕೂಡ ಬೆಳೆಯಿತು. ದಶಕದ ಹಿಂದೆ ಕೇವಲ ಸಾಂಪ್ರದಾಯಿಕ ಉದ್ದಿಮೆಗಳಿಂದ ತುಂಬಿದ್ದ ಬೆಂಗಳೂರು ಇಂದು ಜಾಗತಿಕ ನಕ್ಷೆಯಲ್ಲಿ ಗುರುತಿಸಲ್ಪಡುತ್ತಿರುವುದು ಈ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಕ್ರಾಂತಿಯಿಂದ.

ಭಾರತದ ಒಟ್ಟು ತಂತ್ರಾಂಶ ನಿರ್ಯಾತ ಸುಮಾರು ರೂ. ೪೬,೦೦೦ ಕೋಟಿಗಳಷ್ಟಿದೆ. ಇದು ದೇಶದ ಒಟ್ಟು ಉತ್ಪಾದನೆಯ ಪ್ರತಿಶತ ೨ ಆಗುತ್ತದೆ. ಇದರಲ್ಲಿ ಕರ್ನಾಟಕದ ಪಾಲು ರೂ. ೧೪,೦೦೦ ಕೋಟಿ. ಅಂದರೆ ರಾಷ್ಟ್ರದ ಅಂದಾಜು ಪ್ರತಿಶತ ೩೦. ಇದರಲ್ಲಿ ಬಹುತೇಕ ತಂತ್ರಾಂಶ ತಯಾರಿ ಬೆಂಗಳೂರಿನಲ್ಲೇ ಆಗುತ್ತದೆ. ಬೆಂಗಳೂರನ್ನು ಭಾರತದ ಮಾಹಿತಿ ತಂತ್ರಜ್ಞಾನ ರಾಜಧಾನಿ ಎಂದು ಕರೆಯಲು ಆಧಾರ ಈ ಮಾಹಿತಿಯಲ್ಲಿದೆ.

ಟೆಕ್ಸಾಸ್ ಇನ್‌ಸ್ಟ್ರುಮೆಂಟ್ಸ್ ಬೆಂಗಳೂರಿಗೆ ಕಾಲಿಟ್ಟ ಮೊದಲ ಬಹುರಾಷ್ಟ್ರೀಯ ಕಂಪೆನಿ. ಐ.ಬಿ.ಎಂ, ಇಂಟೆಲ್, ಡಿಜಿಟಲ್, ಹೀಗೆ ಹಲವು ಬಹುರಾಷ್ಟ್ರೀಯ ಕಂಪೆನಿಗಳು ಇದನ್ನು ಹಿಂಬಾಲಿಸಿದವು. ೯೦ರ ದಶಕದಲ್ಲಿ ಇನ್ಫೋಸಿಸ್, ವಿಪ್ರೋ, ಎಚ್.ಸಿ.ಎಲ್., ಇತ್ಯಾದಿ ಹಲವು ಭಾರತೀಯ ಕಂಪೆನಿಗಳೂ ತಮ್ಮ ಛಾಪನ್ನು ಒತ್ತಿದವು. ಕರ್ನಾಟಕ ಸರಕಾರವು ಇಲೆಕ್ಟ್ರಾನಿಕ್ಸ್ ನಗರ ಸ್ಥಾಪಿಸಿ ಇಂತಹ ಕಂಪೆನಿಗಳಿಗೆ ನೆರವಾಯಿತು.

ಬೆಂಗಳೂರು ಏಕೆ ಮಾಹಿತಿ ತಂತ್ರಜ್ಞಾನ ಕಂಪೆನಿಗಳಿಗೆ ತುಂಬ ಆಕರ್ಷಣೀಯವಾಗಿದೆ ? ಉತ್ತರ ಸುಲಭ. ದಶಕಗಳಿಂದ ಎಚ್.ಎಂ.ಟಿ., ಬಿ.ಇ.ಎಲ್., ಎಚ್.ಎ.ಎಲ್., ಭಾರತೀಯ ವಿಜ್ಞಾನ ಮಂದಿರ, ಹೀಗೆ ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಹಲವು ಸಂಸ್ಥೆಗಳು ಬೆಂಗಳೂರಿನಲ್ಲಿ ನೆಲೆಸಿವೆ. ಇದರಿಂದಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ಒಂದು ವಾತಾವರಣ ಇಲ್ಲಿ ಸೃಷ್ಟಿಯಾಗಿತ್ತು. ಮುಂದೆ ಬರಲಿದ್ದ ಮಾಹಿತಿ ತಂತ್ರಜ್ಞಾನವೆಂಬ ಕ್ರಾಂತಿಗೆ ಇವು ಪೂರಕವಾದವು. ಇದರ ಜೊತೆಗೆ ಇಲ್ಲಿಯ ಹವಾಮಾನ ಮತ್ತು ಪರಿಸರ. ಹವಾನಿಯಂತ್ರಿತ ನಗರ ಎಂಬ ಹೆಸರು ಹೊಂದಿದ ಇಲ್ಲಿಯ ತಾಪಮಾನ ೩೭ ಡಿಗ್ರಿಗಳ ಮಿತಿಯನ್ನು ಮೀರಿ ಮೇಲೇರುವುದಿಲ್ಲ. ಅತಿ ಚಳಿಯೂ ಇಲ್ಲಿಲ್ಲ. ತೇವಾಂಶವೂ ಕಡಿಮೆ. ಇವೆಲ್ಲ ಇಲೆಕ್ಟ್ರಾನಿಕ್ ಉದ್ದಿಮೆಗಳಿಗೆ ಹೇಳಿ ಮಾಡಿಸಿದಂತಿವೆ.

ಕರ್ನಾಟಕ ರಾಜ್ಯದಲ್ಲಿ ದೇಶದಲ್ಲೇ ಅತಿ ಹೆಚ್ಚಿನ ಸಂಖ್ಯೆಯ ಇಂಜಿನಿಯರಿಂಗ್ ಕಾಲೇಜುಗಳಿವೆ. ಇವುಗಳಿಂದ ಪ್ರತಿ ವರ್ಷ ಸಹಸ್ರಾರು ಇಂಜಿನಿಯರಿಂಗ್ ಪದವೀಧರರು ಹೊರಬರುತ್ತಿದ್ದಾರೆ. ಇವರಿಗೆಲ್ಲ ಕೆಲಸ ನೀಡಲು ರಾಜ್ಯದೆಲ್ಲೆಡೆ ಉದ್ಯೋಗಾವಕಾಶಗಳಿಲ್ಲ. ಇವರೆಲ್ಲ ಬೆಂಗಳೂರಿಗಭಿಮುಖವಾಗಿ ಸಾಗಿದರೆ ಅದು ಸಹಜ. ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಕಂಪೆನಿಗಳು ಇಂಜಿನಿಯರಿಂಗ್ ಕಾಲೇಜುಗಳಿಗೇ ಹೋಗಿ ಅಲ್ಲಿಯೇ ಸಂದರ್ಶನ ನಡೆಸಿ ಪ್ರತಿಭಾವಂತರನ್ನು ತಮ್ಮ ಕಂಪೆನಿಗಳಿಗೆ ನೇಮಿಸುತ್ತಾರೆ. ನಮ್ಮ ದೇಶದಲ್ಲಿ ನಡೆಯುತ್ತಿರುವ ಬಹುಪಾಲು ತಂತ್ರಾಂಶ ತಯಾರಿಯು ಸೇವೆಗೇ ಸೀಮಿತವಾಗಿದೆ. ಇಂತಹ ತಂತ್ರಾಂಶ ತಯಾರಿಗೆ ಇಂಜಿನಿಯರಿಂಗ್ ಪದವೀಧರರೇ ಬೇಕಾಗಿಲ್ಲ. ಸ್ವಲ್ಪ ಇಂಗ್ಲಿಷ್ ಜ್ಞಾನ ಮತ್ತು ಉತ್ತಮ ತರ್ಕಶಕ್ತಿಯಿರುವ ಯಾರೂ ಆಗಬಹುದು. ಆದರೆ ಕಂಪೆನಿಗಳು ಮಾತ್ರ ಇಂಜಿನಿಯರಿಂಗ್ ಪದವಿ ಇದ್ದವರನ್ನೇ ಕೆಲಸಕ್ಕೆ ನೇಮಿಸಿ ಕೊಳ್ಳುತ್ತಿವೆ. ಇದರಿಂದಾಗಿ ಇಂಜಿನಿಯರಿಂಗ್ ಕೋರ್ಸ್‌ಗಳಿಗೆ ಅತೀವ ಬೇಡಿಕೆ ಬಂದಿದೆ.

ಗಣಕದ ಪ್ರಯೋಜನ ಜನಸಾಮಾನ್ಯರನ್ನು ದೊಡ್ಡ ಮಟ್ಟದಲ್ಲಿ ತಲುಪಿದ್ದು ರೈಲುಗಳ ಮುಂಗಡ ಟಿಕೇಟು ಕಾದಿರಿಸುವಿಕೆಯ ಗಣಕೀಕರಣದಿಂದ. ಹತ್ತು ವರ್ಷಗಳ ಹಿಂದೆ ರೈಲುಗಳಿಗೆ ಮೂರು ತಿಂಗಳುಗಳ ಮೊದಲೇ ಟಿಕೇಟು ಕಾದಿರಿಸಬಹುದಿತ್ತು (ಈಗ ಎರಡು ತಿಂಗಳ ಮೊದಲು ಕಾದಿರಿಸಬಹುದು). ಏಪ್ರಿಲ್ ತಿಂಗಳು ಬಂದರೆ ಮುಂಬಯಿಯಿಂದ ಭಾರತದ ಎಲ್ಲ ದಿಕ್ಕುಗಳಿಗೆ ಜನರ ಮಹಾಪೂರವೇ ಹರಿಯುವುದು. ಏಪ್ರಿಲ್ ಒಂದನೇ ದಿನಾಂಕದ ಗಾಡಿಗೆ ಜನವರಿ ಒಂದರಂದು ಟಿಕೇಟು ನೀಡುತ್ತಾರೆ. ಜನರು ಡಿಸೆಂಬರ್ ೨೮-೨೯ಕ್ಕೇ ಟಿಕೇಟಿಗಾಗಿ ಕ್ಯೂ ನಿಲ್ಲುತ್ತಿದ್ದರು. ಒಂದು ಗಾಡಿಗೆ ಒಂದು ಕೌಂಟರಿನಲ್ಲಿ ಮಾತ್ರ ಟಿಕೇಟು ನೀಡುವ ಪದ್ಧತಿ ಇತ್ತು. ಕ್ಯೂ ನಿಲ್ಲಲೆಂದೇ ಬಾಡಿಗೆ ಜನರೂ ದೊರಕುತ್ತಿದ್ದರು! ೧೯೯೩-೯೪ರಲ್ಲಿ ರೈಲು ಟಿಕೇಟು ಮುಂಗಡ ಕಾದಿರಿಸುವಿಕೆಯನ್ನು ಗಣಕೀಕರಣಗೊಳಿಸಲಾಯಿತು. ಈಗ ಯಾವ ರೈಲಿಗೆ ಯಾವ ಕೌಂಟರಿನಲ್ಲಿ ಬೇಕಾದರೂ ಕ್ಯೂ ನಿಂತು ಟಿಕೇಟು ಕೊಳ್ಳಬಹುದು. ಅಷ್ಟು ಮಾತ್ರವಲ್ಲ, ದೇಶದ ಯಾವ ಮೂಲೆಯಿಂದ ಯಾವ ಮೂಲೆಗೆ ಬೇಕಾದರೂ ಯಾವುದೇ ನಗರದಲ್ಲಿ ಟಿಕೇಟು ಕೊಳ್ಳಬಹುದು. ದೇಶವ್ಯಾಪಿ ಗಣಕ ಜಾಲದಿಂದ ಇದು ಸಾಧ್ಯವಾಗಿದೆ.

> ವಿಜ್ಞಾನ ತಂತ್ರಜ್ಞಾನದ ಬೇರಾವ ಪ್ರಭೇದವೂ ಮಾಹಿತಿ ತಂತ್ರಜ್ಞಾನದಷ್ಟು ವೇಗವಾಗಿ ಬೆಳೆಯಲಿಲ್ಲ. ಈ ಬೆಳವಣಿಗೆಯ ಜೊತೆಗೆ ಬೆಂಗಳೂರು ಕೂಡ ಬೆಳೆಯಿತು. ದಶಕದ ಹಿಂದೆ ಕೇವಲ ಸಾಂಪ್ರದಾಯಿಕ ಉದ್ದಿಮೆಗಳಿಂದ ತುಂಬಿದ್ದ ಬೆಂಗಳೂರು ಇಂದು ಜಾಗತಿಕ ನಕ್ಷೆಯಲ್ಲಿ ಗುರುತಿಸಲ್ಪಡುತ್ತಿರುವುದು ಈ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಕ್ರಾಂತಿಯಿಂದ.



ಜನಸಾಮಾನ್ಯರ ಮಟ್ಟಿಗಂತೂ ಈ ಸೌಕರ್ಯ ಅತಿದೊಡ್ಡ ಕೊಡುಗೆ ಎನ್ನಬಹುದು.

ಸುಮಾರು ೧೯೯೫-೯೬ರ ಸಮಯದಲ್ಲಿ ಮನೆಗಳಲ್ಲೂ ಗಣಕಗಳು ಕಾಲಿಡತೊಡಗಿದವು. ಕೇಂದ್ರ ಮತ್ತು ಹಲವು ರಾಜ್ಯ ಸರಕಾರಗಳು, ಸಾರ್ವಜನಿಕ ರಂಗದ ಉದ್ದಿಮೆಗಳು, ಕೆಲವು ಖಾಸಗಿ ಕಂಪೆನಿಗಳು, ಇತ್ಯಾದಿ ತಮ್ಮ ಉದ್ಯೋಗಿಗಳಿಗೆ ವೈಯಕ್ತಿಕ ಗಣಕ ಕೊಳ್ಳಲು ಧನಸಹಾಯ ನೀಡತೊಡಗಿದವು. ಬೀದಿಬೀದಿಗಳಲ್ಲಿ ಗಣಕ ತರಬೇತಿ ಕೇಂದ್ರಗಳು ತಲೆಯೆತ್ತಿದವು. ಬಹುಪಾಲು ಬೆರಳಚ್ಚು ತರಬೇತಿ ಕೇಂದ್ರಗಳು ಡಿ.ಟಿ.ಪಿ. ಕೇಂದ್ರಗಳಾಗಿ ಪರಿವರ್ತನೆಗೊಂಡವು. ಭಾರತದ ಪ್ರತಿಯೊಬ್ಬ ನಾಗರಿಕನನ್ನೂ ಒಂದಲ್ಲ ಒಂದು ರೀತಿಯಲ್ಲಿ ಗಣಕಗಳು ಪ್ರಭಾವಿಸತೊಡಗಿದವು. ಎನ್.ಐ.ಐ.ಟಿ., ಆಪ್ಟೆಕ್, ಜೆಟ್‌ಕಿಂಗ್ ಇತ್ಯಾದಿ ದೊಡ್ಡ ಹೆಸರುಗಳ ಜೊತೆ ಹಲವು ಗಣಕ ತರಬೇತಿ ಕೇಂದ್ರಗಳು ಎಲ್ಲೆಂದರಲ್ಲಿ ತಲೆಯೆತ್ತಿದವು. ಇವುಗಳಲ್ಲಿ ಹಲವು ಕೇಂದ್ರಗಳು ವಿದ್ಯಾರ್ಥಿಗಳಿಂದ ಹಣ ದೋಚಿ ನಾಪತ್ತೆಯಾದವೂ ಇವೆ. ಕೋರ್ಸ್ ಮುಗಿದೊಡನೆ ಕೆಲಸ ಕೊಡಿಸುವುದಾಗಿ ನಂಬಿಸಿ ಕೈಕೊಟ್ಟ ಕೇಂದ್ರಗಳೂ ಇವೆ.

ಭಾರತದ ಮಾಹಿತಿ ತಂತ್ರಾಂಶ ಕ್ಷೇತ್ರ ಇದ್ದಕ್ಕಿದ್ದಂತೆ ಅತಿ ವೇಗವಾಗಿ ಬೆಳೆಯಲು ವೈಟೂಕೆ ಸಮಸ್ಯೆಯ ಕೊಡುಗೆ ಇದೆ. ಎರಡು ದಶಕಗಳ ಹಿಂದೆ ತಯಾರಾದ ತಂತ್ರಾಂಶಗಳಲ್ಲಿ ಯಾವುದಾದರೂ ತಾರೀಖಿನ ಇಸವಿಯನ್ನು ಸೂಚಿಸುವಾಗ ಎರಡು ಅಂಕೆಗಳನ್ನು ಮಾತ್ರ ಬಳಸುತ್ತಿದ್ದರು. ಉದಾಹರಣೆಗೆ ೧೯೫೯ ಎಂಬುದನ್ನು ಸೂಚಿಸಲು ೫೯ ಎಂದು ಬರೆದರೆ ಆಯಿತು. ಇದೇ ವಿಧಾನವನ್ನು ಬಳಸಿ ೨೦೦೩ ಎಂಬುದನ್ನು ೦೩ ಎಂದು ದಾಖಲಿಸಿದರೆ ೦೩ರಿಂದ ೫೯ನ್ನು ಕಳೆಯುವುದು ಹೇಗೆ ? ಇಂತಹ ಸಮಸ್ಯೆಗಳ ಪರಿಹಾರ ಬಹು ಸುಲಭ. ಎರಡು ಅಂಕೆಗಳಲ್ಲಿದ್ದ ಇಸವಿಗಳನ್ನು ನಾಲ್ಕು ಅಂಕೆಗಳಾಗಿ ಪರಿವರ್ತಿಸಿದರೆ ಆಯಿತು. ಇದು ಮೇಲ್ನೋಟಕ್ಕೆ ಬಹಳ ಸರಳ ಕೆಲಸ. ಸಾವಿರಾರು ಸಾಲುಗಳಿರುವ ಗಣಕ ಕ್ರಮವಿಧಿಗಳಲ್ಲಿ ಇಂತಹ ಪರಿವರ್ತನೆ ಮಾಡುವುದು ತುಂಬ ಸಮಯ ಹಿಡಿಯುವ ಕೆಲಸ. ಇದನ್ನು ಮಾಡಲು ಪ್ರತಿಭಾವಂತ ಇಂಜಿನಿಯರಿಂಗ್ ಪದವೀಧರರೂ ಬೇಕಾಗಿಲ್ಲ. ತುಂಬ ಹಿಂದೆಯೇ ತಮ್ಮ ಎಲ್ಲ ಕೆಲಸ ಕಾರ್ಯಗಳಿಗೆ ಗಣಕಗಳನ್ನು ಅವಲಂಬಿಸಿದ್ದ ಅಮೆರಿಕದ ಕಂಪೆನಿಗಳಿಗೆ ಈ ವೈಟೂಕೆಯ ಸಮಸ್ಯೆ ಪರಿಹರಿಸಲು ಅಗ್ಗವಾಗಿ ಸಿಕ್ಕದ್ದು ಭಾರತದ ಯುವಕರು. ಪ್ರಪಂಚದಲ್ಲಿ ಅಗ್ಗದಲ್ಲಿ ಮಾನವಶಕ್ತಿ ದೊರೆಯುವುದು ಏಷಿಯಾ (ಜಪಾನ್ ಹೊರತುಪಡಿಸಿ) ಮತ್ತು ಆಫ್ರಿಕಾದಲ್ಲಿ. ಆಫ್ರಿಕಾದಲ್ಲಿ ಇಂಗ್ಲಿಷ್ ಬಲ್ಲವರು ವಿರಳ. ಏಷಿಯಾದಲ್ಲಿ ಉತ್ತಮ ಇಂಗ್ಲಿಷ್ ಜ್ಞಾನ ಇರುವುದು ಭಾರತೀಯರಿಗೆ. ಹೀಗಾಗಿ ಅಮೆರಿಕದ ಕಂಪೆನಿಗಳವರು ಭಾರತೀಯರನ್ನು ಇಂತಹ ಕೆಲಸಗಳಿಗೆ ನೇಮಿಸಿಕೊಂಡರು. ಸುಮಾರು ಇದೇ ಸಮಯಕ್ಕೆ ಅಮೆರಿಕದ ಕಂಪೆನಿಗಳಿಗೆ ಭಾರತೀಯ ಯುವಕರನ್ನು ಒದಗಿಸುವುದನ್ನೇ ಉದ್ಯೋಗವನ್ನಾಗಿಸಿಕೊಂಡ ಹಲವು ಕಂಪೆನಿಗಳು ತಲೆಯೆತ್ತಿಕೊಂಡವು. ಇಂತಹ ಕಂಪೆನಿಗಳ ಮೂಲಕ ಅಮೆರಿಕಾಕ್ಕೆ ಹೋದ ಯುವಕರು ಅಲ್ಲಿ ಕಂಪೆನಿ ಬದಲಿಸಿ ತಮ್ಮನ್ನು ಕಳುಹಿಸಿದ ಕಂಪೆನಿಗಳಿಗೆ ಟೋಪಿ ಹಾಕಿದ ಉದಾಹರಣೆಗಳೂ ಸಾಕಷ್ಟಿವೆ.

೨೦೦೦ನೇ ಇಸವಿಯನ್ನು ಮಾಹಿತಿ ತಂತ್ರಜ್ಞಾನದ ಇತಿಹಾಸದಲ್ಲಿ ವಿಶೇಷವಾಗಿ ದಾಖಲಿಸಬೇಕಾಗುತ್ತದೆ. ಇದನ್ನು ಡಾಟ್‌ಕಾಂ ಕಾಲವೆನ್ನಬಹುದು. ಇದ್ದಕ್ಕಿದ್ದಂತೆ ಎಲ್ಲಾ ನಮೂನೆಯ ಡಾಟ್‌ಕಾಂಗಳು ಹುಟ್ಟಿಕೊಂಡಿದ್ದು ಈ ಸಮಯದಲ್ಲಿ. ಚಿಕ್ಕಪುಟ್ಟ ವಿಷಯಗಳಿಗೂ ಒಂದೊಂದು ಅಂತರಜಾಲ ತಾಣಗಳು ಹುಟ್ಟಿಕೊಂಡವು. ವಿದ್ಯುನ್ಮಾನ ವಾಣಿಜ್ಯ ಮನೆಮಾತಾಯಿತು. ಅಮೆರಿಕಾದಲ್ಲಿ ಒಬ್ಬಾತನಂತೂ ಸಂಪೂರ್ಣ ೨೦೦೦ ಇಸವಿಯನ್ನು ಮನೆಯಿಂದ ಹೊರಗೆ ಕಾಲಿಡದೆ ಕೇವಲ ವಿದ್ಯುನ್ಮಾನ ವಾಣಿಜ್ಯದ ಮೂಲಕವೇ ಜೀವಿಸಿ ದಾಖಲೆ ನಿರ್ಮಿಸಿದ. ಈ ಡಾಟ್‌ಕಾಂನ ಸಮೂಹ ಸನ್ನಿ ಭಾರತವನ್ನೂ ಬಿಡಲಿಲ್ಲ. ಈ ಸಮಯದಲ್ಲಿ ಕನ್ನಡವೂ ಸೇರಿದಂತೆ ಹಲವಾರು ಭಾರತೀಯ ಡಾಟ್‌ಕಾಂಗಳು ಹುಟ್ಟಿಕೊಂಡವು. ಭಾರತೀಯ ಸಾಮಗ್ರಿಗಳನ್ನು ಮಾರುವ ಅಂತರಜಾಲ ಅಂಗಡಿಗಳು ವಿದ್ಯುನ್ಮಾನ ವಾಣಿಜ್ಯದ ಮೂಲಕ ಕಾರ್ಯ ನಿರ್ವಹಿಸತೊಡಗಿದವು. ಅಮೆರಿಕಾದಲ್ಲಿ ನೆಲೆಸಿರುವ ಭಾರತೀಯರು ಅಲ್ಲಿಯ ತಮ್ಮ ಕ್ರೆಡಿಟ್ ಕಾರ್ಡ್ ಬಳಸಿ ಹುಟ್ಟೂರಿನಲ್ಲಿರುವ ತಮ್ಮ ಮನೆಯವರಿಗೆ ಮನೆ ಸಾಮಾನು, ಉಡುಗೊರೆ ಕಳುಹಿಸುವುದು ಸಾಧ್ಯವಾದುದು ಈ ವಿದ್ಯುನ್ಮಾನ ವಾಣಿಜ್ಯದಿಂದ. ಕನ್ನಡದ

ದಿನಪತ್ರಿಕೆಗಳೂ ತಮ್ಮ ಅಂತರಜಾಲ ತಾಣ ಸ್ಥಾಪಿಸಿದವು. ಕನ್ನಡದ ಡಾಟ್‌ಕಾಂಗಳಂತೂ ತಾಯಿನಾಡು ಮತ್ತು ವಿದೇಶಗಳ ನಡುವೆ ಸಾಂಸ್ಕೃತಿಕ ಸೇತುವೆಯಾಗಿ ಕೆಲಸ ಮಾಡತೊಡಗಿದವು.

ಡಾಟ್‌ಕಾಂ ಯುಗದಲ್ಲಿ ಸಂಬಳವೂ ಗಗನಕ್ಕೇರಿತು. ಕೆಲಸಕ್ಕೆ ಸೇರುವಾಗಲೇ ತಿಂಗಳಿಗೆ ೧೨ರಿಂದ ೧೮ ಸಾವಿರ, ಆರು ತಿಂಗಳು ಅನುಭವವಿದ್ದವರಿಗೆ ೩೦,೦೦೦, ಪ್ರೋಜೆಕ್ಟ್ ಮ್ಯಾನೇಜರುಗಳಿಗೆ ಒಂದೂವರೆ ಲಕ್ಷ ಹೀಗೆ ಹುಚ್ಚುಚ್ಚಾಗಿ ವೇತನ ಏರತೊಡಗಿತು. ಬರಿಯ ವೇತನ ಮಾತ್ರವಲ್ಲ, ಈ ಡಾಟ್‌ಕಾಂ ಕಂಪೆನಿಗಳ ವೆಚ್ಚಗಳಿಗೂ ಅರ್ಥವಿರಲಿಲ್ಲ. ಪ್ರತಿ ಶುಕ್ರವಾರ ರಾತ್ರಿ ಉದ್ಯೋಗಿಗಳಿಗೆ ಭರ್ಜರಿ ಗುಂಡು ಪಾರ್ಟಿ, ಯಾವುದಾದರೂ ಪ್ರವಾಸಿ ತಾಣಕ್ಕೆ ಪಿಕ್‌ನಿಕ್, ಟೀಶರ್ಟ್, ಬ್ಯಾಗ್, ಇತ್ಯಾದಿ ಉಡುಗೊರೆಗಳು, ಹೀಗೆ ಈ ಡಾಟ್‌ಕಾಂ ಏಲುಪೈಲುಗಳಿಗೆ ಲೆಕ್ಕವೇ ಇರಲಿಲ್ಲ. ಎಲ್ಲ ಹಿರಿಯ ಉದ್ಯೋಗಿಗಳಿಗೆ ಕಾರು, ಬಂಗಲೆ, ರೆಸೋರ್ಟ್‌ಗಳಿಗೆ ಸದಸ್ಯತ್ವ, ಲ್ಯಾಪ್‌ಟಾಪ್, ಹೀಗೆ ಈ ಪಟ್ಟಿ ಬೆಳೆಯುತ್ತಿತ್ತು. ಒಂದು ಡಾಟ್‌ಕಾಂ ಕಂಪೆನಿಯಂತೂ ಕಡತಗಳನ್ನು ಜೋಪಾನವಾಗಿ ಇಡಲೆಂದು ಒಂದಕ್ಕೆ ಹನ್ನೆರಡು ಲಕ್ಷ ರೂಪಾಯಿ ಬೆಲೆಯ ಎರಡು ಸುರಕ್ಷ ಕಪಾಟುಗಳನ್ನು ಕೊಂಡು ಕೊಂಡು ಅವನ್ನು ಇನ್ನೂ ಸರಿಯಾಗಿ ಬಳಸಿಲ್ಲ. ಒಂದು ಡಾಟ್‌ಕಾಂ ಕಂಪೆನಿ ತನ್ನ ಪ್ರಾರಂಭವನ್ನು ಒಂದೇ ದಿನದಲ್ಲಿ ಎರಡೂಮುಕ್ಕಾಲು ಕೋಟಿ ರೂಪಾಯಿಗಳನ್ನು ಎಲ್ಲ ಪ್ರಮುಖ ದಿನಪತ್ರಿಕೆಗಳ ಮುಖಪುಟವನ್ನೇ ಬದಲಿಸುವ ಜಾಹಿರಾತಿಗೆ ಖರ್ಚು ಮಾಡಿದ್ದು ಬಹುಶಃ ಭಾರತೀಯ ಇತಿಹಾಸದಲ್ಲೇ ದಾಖಲೆಯಾಗಬಹುದೇನೋ! ಇದೇ ಕಂಪೆನಿ ಮುಂಬಯಿ ನಗರದ ಪ್ರತಿಶತ ೮೦ ಜಾಹಿರಾತು ಫಲಕಗಳನ್ನು ಖರೀದಿಸಿತ್ತು. ಈ ಕಂಪೆನಿಯ ಮುಖ್ಯಸ್ಥ ಸಂಬಳ ವರ್ಷಕ್ಕೆ ಕೇವಲ ಒಂದು ಕೋಟಿ ಇಪ್ಪತ್ತು ಲಕ್ಷ ರೂಪಾಯಿ ಮತ್ತು ಮೂರು ಬಂಗಲೆ ಆಗಿತ್ತು. ಈಗ ಆ ಕಂಪೆನಿ ಹೇಳ ಹೆಸರಿಲ್ಲದಾಗಿದೆ.

ಮಾಹಿತಿ ತಂತ್ರಜ್ಞಾನದ ಅತೀವ ಬೇಡಿಕೆಯಿಂದಾಗಿ ಅದಕ್ಕೆ ಪೂರಕವಾದ ಉದ್ದಿಮೆಗಳೂ ಹುಟ್ಟಿಕೊಂಡವು ಅಥವಾ ಈಗಾಗಲೇ ಇದ್ದ ಉದ್ದಿಮೆಗಳು ಮಾಹಿತಿ ತಂತ್ರಜ್ಞಾನಕ್ಕೆ ಪೂರಕವಾದವು. ಜಾಹೀರಾತು ಕಂಪೆನಿಗಳು, ಕಾರು ಮಾರಾಟ ಏಜೆನ್ಸಿಗಳು, ಹೋಟೆಲ್ ಮತ್ತು ಪ್ರವಾಸಿ ತಾಣಗಳ ಏಜೆನ್ಸಿಗಳು, ಕೊರಿಯರ್ ಕಂಪೆನಿಗಳು, ಮಧ್ಯಾಹ್ನದ ಊಟ ಸರಬರಾಜು, ಹೀಗೆ ಹಲವು ಉದ್ದಿಮೆಗಳು ಹುಟ್ಟಿಕೊಂಡವು ಮತ್ತು ಬೆಳೆದವು. ಬೆಂಗಳೂರಿನಲ್ಲಿ ಆಸ್ತಿ, ಸೈಟು, ಮನೆಗಳ ಬೆಲೆ ಗಗನಕ್ಕೇರಿದವು. ಮನೆ ಬಾಡಿಗೆಗೆ ಕೊಡುವವರಂತೂ ಮಾಹಿತಿ ತಂತ್ರಜ್ಞಾನದಲ್ಲಿ ಕೆಲಸ ಮಾಡುವವರನ್ನೇ ಬಾಡಿಗೆದಾರರನ್ನಾಗಿಸಲು ಉತ್ಸುಕರಾದರು. ಜನಸಾಮಾನ್ಯರಿಗೆ ಕೋರಮಂಗಲ, ಇಂದಿರಾನಗರ, ಬಿಟಿಎಂ ಬಡಾವಣೆಗಳು ಕೈಗೆಟುಕದಂತಾದವು.

ಮದುವೆ ಮಾರುಕಟ್ಟೆಯ ಮೇಲೂ ಈ ಡಾಟ್‌ಕಾಂ ಮತ್ತು ಮಾಹಿತಿ ತಂತ್ರಜ್ಞಾನ ಒಂದು ರೀತಿಯ ಸನ್ನಿಪ್ರಭಾವ ಬೀರಿತು. ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಉದ್ಯೋಗ ದೊರಕಿಸಿಕೊಳ್ಳುವುದೇ ಪ್ರತಿಯೊಬ್ಬ ಯುವಕನ ಧ್ಯೇಯವಾಯಿತು. ಬೇರೆ ಕೆಲಸದಲ್ಲಿದ್ದವರೂ ಅವಸರವಸರವಾಗಿ ಕೆಲವು ಕೋರ್ಸ್‌ಗಳಿಗೆ ಸೇರಿ ಡಾಟ್‌ಕಾಂ ಕಂಪೆನಿಗಳಿಗೆ ಧುಮುಕಿದರು. ಹಿಂದೆಲ್ಲ ಡಾಕ್ಟರ್ ಅಥವಾ ಇಂಜಿನಿಯರ್ ಹುದ್ದೆಯಲ್ಲಿರುವ ಹುಡುಗನೇ ಬೇಕು ಎನ್ನುತ್ತಿದ್ದ ಕನ್ಯಾಪಿತೃಗಳು ಸಾಫ್ಟ್‌ವೇರ್ ಹುಡುಗ ಬೇಕೆನ್ನತೊಡಗಿದರು. ಅಮೆರಿಕಾಕ್ಕೆ ಎಚ್೧ ವೀಸಾದಲ್ಲಿ ಹೋದ ತಂತ್ರಾಂಶ ತಜ್ಞ ಹುಡುಗರು ಒಂದು ತಿಂಗಳ ರಜೆ ಹಾಕಿ ಊರಿಗೆ ಬಂದು ಹತ್ತು ಹುಡುಗಿಯರನ್ನು ಎರಡೇ ದಿನಗಳಲ್ಲಿ ನೋಡಿ ಅವರಲ್ಲಿ ಒಬ್ಬಳನ್ನು ಆಯ್ಕೆ ಮಾಡಿ ಅವಸರದಲ್ಲಿ ಮದುವೆ ಮಾಡಿಕೊಂಡು ಹೋಗುವುದು ದಿನನಿತ್ಯದ ಮಾತಾಯಿತು. ಇಂತಹ ಹುಡುಗ ಹುಡುಗಿಯರನ್ನು ಜೋಡಿಸಲು, ಮದುವೆ ಮಾಡಿಸಲು, ಕಲ್ಯಾಣ ಮಂಟಪ ಹುಡುಕಲು, ಹೀಗೆ ಹತ್ತು ಹಲವು ಡಾಟ್‌ಕಾಂಗಳು ಹುಟ್ಟಿಕೊಂಡವು. ಊರಿಗೆ ಬಂದು ಹುಡುಗಿ ನೋಡುವುದರಲ್ಲಿ ಸಮಯ ವ್ಯರ್ಥವಾಗುವುದು, ಕೆಲವೊಮ್ಮೆ ಸೀಮಿತ ಸಮಯದಲ್ಲಿ ಸೂಕ್ತ ಹುಡುಗಿ ದೊರಕುವುದಿಲ್ಲ, ಇತ್ಯಾದಿ ಸಮಸ್ಯೆಗಳಿಗೆ ಮಾಹಿತಿ ತಂತ್ರಜ್ಞಾನವೇ ಪರಿಹಾರವನ್ನೂ ನೀಡಿದೆ. ಅದುವೇ ಇ-ಮೈಲ್ ಮತ್ತು ಚಾಟ್. ಅಮೆರಿಕಾದ ಹುಡುಗ ಬೆಂಗಳೂರಿನ ಹುಡುಗಿ ಜೊತೆ ಅಂತರಜಾಲದ ಮೂಲಕ ಚಾಟ್ ಸಂದರ್ಶನ ನಡೆಸಿ ಮದುವೆಯಾದ ಉದಾಹರಣೆಗಳೂ ಇವೆ. ಗಣಕಕ್ಕೆ ವೆಬ್ ಕ್ಯಾಮರಾ ಸೇರಿಸಿದರೆ ಹುಡುಗ ಹುಡುಗಿ ಪರಸ್ಪರ ಮುಖ ನೋಡಿ ತೀರ್ಮಾನ ತೆಗೆದುಕೊಳ್ಳಬಹುದು. ಒಂದೇ ಕಚೇರಿಯಲ್ಲಿ ಕೆಲಸ ಮಾಡುವ ಹುಡುಗ ಹುಡುಗಿ ಮದುವೆ ಮಾಡಿಕೊಂಡ ಉದಾಹರಣೆಗಳೂ ಇವೆ.

> **ಡಾಂಭಿಕತೆ**
>
> ಆಚಾರ್ಯ
> ಶಂಕರ
> ಹೇಳುತ್ತಾನೆ :
> 'ಬ್ರಾಹ್ಮಣೇತರರಿಗೆ
> ಬ್ರಹ್ಮಜ್ಞಾನವಿಲ್ಲ' !
> ಅಬ್ರಾಹ್ಮಣರು
> ಉತ್ತರಿಸುತ್ತಾರೆ :
> 'ಇಂತಹ
> ಡಾಂಭಿಕತೆಗೆ
> ಭವಿಷ್ಯವಿಲ್ಲ'.
>
> ಎಸ್. ಶಶಿಕಾಂತ ಯಡಹಳ್ಳಿ
> ಬೆಂಗಳೂರು

ಬೆಂಗಳೂರಿನ ಮಲ್ಲೇಶ್ವರ ಬಡಾವಣೆಯಲ್ಲಿ ಈಗಂತೂ ಕೇವಲ ಮುದುಕರೇ ವಾಸವಾಗಿದ್ದಾರೆ ಎನ್ನಬಹುದು. ಮಕ್ಕಳೆಲ್ಲ ಅಮೆರಿಕಾ ವಾಸಿಗಳಾಗಿದ್ದಾರೆ. ಅಮೆರಿಕಾದಲ್ಲಿ ಮಗಳು ಯಾ ಸೊಸೆ ಗರ್ಭಿಣಿಯಾದಾಗ ಹೆರಿಗೆ ಸಮಯದಲ್ಲಿ ಸಹಾಯಕ್ಕೆ ಮತ್ತು ಮೊಮ್ಮಕ್ಕಳನ್ನು ನೋಡಿಕೊಳ್ಳಲು ಹೋಗುವುದೂ ನಮ್ಮ ಹೆಂಗಸರಿಗೆ ಒಂದು ಹೆಮ್ಮೆಯಾಗಿದೆ. ಇವರನ್ನು ಅಮೆರಿಕನ್ ಸೂಲಗಿತ್ತಿ ಎಂದರೆ ತಪ್ಪಾಗಲಾರದೇನೋ! ಅಮೆರಿಕಾದಲ್ಲಿ ಮಕ್ಕಳನ್ನು ನೋಡಿಕೊಳ್ಳುವ ಬೇಬಿ ಸಿಟ್ಟರ್‌ಗಳು ತುಂಬ ದುಬಾರಿ. ಸುಮಾರು ತಿಂಗಳಿಗೆ ೫೦೦ ಡಾಲರ್ ಕೊಡಬೇಕು. ಆರು ತಿಂಗಳಿಗೆ ಅಮ್ಮ ಯಾ ಅತ್ತೆಯನ್ನು ಕರೆಸಿಕೊಂಡರೆ ಉಳಿತಾಯ ೩,೦೦೦ ಡಾಲರ್. ಟಿಕೇಟಿನ ಬೆಲೆ ಸುಮಾರು ಒಂದು ಸಾವಿರ ಡಾಲರ್. ಹೇಗಿದೆ ಲೆಕ್ಕಾಚಾರ? ಭಾರತೀಯರು ಖಂಡಿತವಾಗಿಯೂ ಯಾವಾಗಲೂ ಗಣಿತದಲ್ಲಿ ಮುಂದು! ಆರು ತಿಂಗಳಿಗೆ ಅಮ್ಮ ಅಥವಾ ಅತ್ತೆ ನಂತರ ಆರು ತಿಂಗಳಿಗೆ ಅಪ್ಪ ಅಥವಾ ಮಾವ, ಹೀಗೆ ಮಕ್ಕಳು ಶಾಲೆಗೆ ಹೋಗುವ ತನಕ ಸರಣಿ ನಡೆಯುತ್ತಿರುತ್ತದೆ.

ಅಮೆರಿಕಾದಲ್ಲಿ ಭಾರತೀಯರ ಸಂಖ್ಯೆ ಗಣನೀಯವಾಗಿದೆ. ಸಿಲಿಕಾನ್ ವ್ಯಾಲಿಯಲ್ಲಿ ಭಾರತೀಯ ಅಂಗಡಿಗಳು, ಊಟದ ಹೋಟೆಲ್‌ಗಳು ಹುಟ್ಟಿಕೊಂಡವು. ಅನ್ನ ಸಾರು, ಪಲಾವ್, ಬಿಸಿಬೇಳೆ ಹುಳಿಯನ್ನಗಳು ಸಿಲಿಕಾನ್ ವ್ಯಾಲಿಯ ಭಾರತೀಯ ಹೋಟೆಲಿನಲ್ಲಿ ದೊರೆಯುತ್ತವೆ. ಭಾರತೀಯರಿಗೆ ಬೇಕಾದ ಹಲವು ಸಾಮಗ್ರಿಗಳು ಅಮೆರಿಕಾದಲ್ಲೇ ಲಭ್ಯ. ಪೂಜಾ ಸಾಮಗ್ರಿಗಳು, ಅಡುಗೆಯ ಮಸಾಲೆ ಸಾಮಗ್ರಿಗಳು, ಸಂಗೀತ, ಚಲನಚಿತ್ರ, ಪುಸ್ತಕ, ಬಟ್ಟೆಬರೆ, ಹೀಗೆ ಅಪ್ಪ ಅಮ್ಮ ಹೊರತುಪಡಿಸಿ ಎಲ್ಲ ವಸ್ತುಗಳು ಅಮೆರಿಕಾದಲ್ಲೇ ಸಿಗುತ್ತವೆ. ಅಮೆರಿಕ ದೇಶದವರಿಗೂ ಭಾರತದ ಬಗ್ಗೆ ಸಮಗ್ರ ಮಾಹಿತಿ ದೊರೆಯಲು ಪ್ರಾರಂಭವಾಗಿದ್ದು ಈ ಮಾಹಿತಿ ತಂತ್ರಜ್ಞಾನ ಕ್ರಾಂತಿಯಿಂದಲೇ. ಭಾರತ ಎಂದರೆ ಹಾವಾಡಿಸುವವರ ದೇಶ ಎಂದು ಅವರು ಈಗ ಭಾವಿಸಿಲ್ಲ. ಭಾರತದಲ್ಲೂ ಇಂಟರ್‌ನೆಟ್ ಸೌಕರ್ಯ ಇದೆ ಎಂದು ಅವರಿಗೆ ಗೊತ್ತಾಗಿದೆ.

ಮಾಹಿತಿ ತಂತ್ರಜ್ಞರಿಂದಾಗಿ ಅಮೆರಿಕಾದಲ್ಲಿ ಕನ್ನಡಿಗರ ಸಂಖ್ಯೆಯೂ ಗಣನೀಯವಾಗಿ ಏರಿದೆ. ಎಷ್ಟರ ಮಟ್ಟಿಗೆ ಎಂದರೆ ಬಸವೇಶ್ವರನಗರ ವಿರುದ್ಧ ವಿಜಯನಗರ ಎಂದು ಕ್ರಿಕೆಟ್ ಮ್ಯಾಚ್ ಅಮೆರಿಕಾದಲ್ಲಿ ನಡೆಯಿತು. ಇದು ಮುಂದುವರೆದು ಮಲ್ಲೇಶ್ವರ ೧೧ನೇ ಕ್ರಾಸ್ ವಿರುದ್ಧ ೮ನೇ ಕ್ರಾಸ್ ಎಂಬ ಕ್ರಿಕೆಟ್ ಮ್ಯಾಚ್ ಕೂಡ ಅಮೆರಿಕಾದ ನ್ಯೂಜೆರ್ಸಿ ನಗರದಲ್ಲಿ ನಡೆಯಿತು. ವಾರಾಂತ್ಯ ಕನ್ನಡ ಕಾರ್ಯಕ್ರಮಗಳು, ಸಭೆ ಸಮಾರಂಭಗಳು, ಪಿಕ್‌ನಿಕ್‌ಗಳು, ಹೀಗೆ ಸಾಮಾಜಿಕವಾಗಿ ಕನ್ನಡಿಗರು ತಾಯ್ನಾಡಿನಿಂದ ದೂರ ಇದ್ದೇವೆ ಎಂಬ ಕೊರತೆಯನ್ನು ತುಂಬಲು ಪ್ರಯತ್ನಿಸುತ್ತಿದ್ದಾರೆ.

ಡಾಟ್‌ಕಾಂಗಳಿಗೆ ಸರಿಯಾದ ವ್ಯವಹಾರ ಸೂತ್ರ ಇಲ್ಲದುದರಿಂದ ಅದು ಎಷ್ಟು ವೇಗವಾಗಿ ಮೇಲೇರಿತೋ ಅಷ್ಟೇ ವೇಗವಾಗಿ ಕೆಳಗುರುಳಿತು. ಈ ಕುಸಿತಕ್ಕೆ ಸೆಪ್ಟೆಂಬರ್ ೧೧ರ ಘಟನೆ ಕೂಡ ಅಗ್ನಿಗೆ ತುಪ್ಪ ಧಾರೆ ಎರೆದಂತೆ ಸಹಾಯಕಾರಿಯಾಯಿತು. ೨೦೦೧ನೇ ಇಸವಿಯನ್ನು ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಕೆಟ್ಟ ಕಾಲ ಎನ್ನಬಹುದು. ಹೆಚ್ಚಿನ ಡಾಟ್‌ಕಾಂ ಕಂಪೆನಿಗಳು ಮುಚ್ಚಿಕೊಂಡವು. ಡಾಟ್‌ಕಾಂ ಕುಸಿತ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಇತರೆ ವಿಭಾಗಗಳ ಮೇಲೂ ಪ್ರಭಾವ ಬೀರಿತು. ಡಾಟ್‌ಕಾಂ ಅಂದರೆ ಅಂತರಜಾಲ ಸಂಬಂಧಿ ಹಲವು ಕಂಪೆನಿಗಳು ದಿವಾಳಿಯಾದವು. ಸಾವಿರಾರು ತಂತ್ರಜ್ಞರು ನಿರುದ್ಯೋಗಿ

ಗಳಾದರು. ಅಮೆರಿಕಾದಿಂದ ನಿರುದ್ಯೋಗಿಗಳು ತಾಯ್ನಾಡಿಗೆ ಮರಳಿದರು. ಗ್ರೀನ್‌ಕಾರ್ಡ್ ಹೊಂದಿದ ಹಲವರು ಅಲ್ಲೇ ನಿರುದ್ಯೋಗಿಗಳಾಗಿ ನಿರುದ್ಯೋಗಿ ಭತ್ತೆ ಪಡೆದುಕೊಂಡು ಹೇಗೋ ಕಾಲ ತಳ್ಳತೊಡಗಿದರು. ಇತರೆ ಕ್ಷೇತ್ರಗಳಿಂದ ಮಾಹಿತಿ ತಂತ್ರಜ್ಞಾನ ಕ್ಷೇತ್ರಕ್ಕೆ ಧುಮುಕಿದವರ ಪರಿಸ್ಥಿತಿ ಶೋಚನೀಯ.

ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಕುಸಿತ ಹಲವು ಪರಿಣಾಮಗಳಿಗೆ ಕಾರಣೀಭೂತವಾಯಿತು. ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಗಣಕ ವಿಜ್ಞಾನ ಕೋರ್ಸ್‌ಗಳನ್ನು ಈಗ ಕೇಳುವವರಿಲ್ಲ. ಸುಮಾರು ೨೦೦೦ ಸ್ಥಾನಗಳು ಖಾಲಿ ಬಿದ್ದಿವೆ. ಸಂಬಳವೂ ಡಾಟ್‌ಕಾಂ ಕಾಲದ ಹಿಂದಿನ ಮಟ್ಟಕ್ಕೆ ಬಂದಿದೆ. ಕೆಲವು ಕಂಪೆನಿಗಳಲ್ಲಿ ಈಗಲೂ ಜನ ಅರ್ಧ ಸಂಬಳಕ್ಕೆ ಕೆಲಸ ಮಾಡುತ್ತಿದ್ದಾರೆ. ಹಲವಾರು ಡಾಟ್‌ಕಾಂಗಳು ನಾಪತ್ತೆಯಾದವು. ದೊಡ್ಡ ಸಂಬಳ ಬರುತ್ತಿದ್ದಾಗ ವಿಪರೀತ ಖರ್ಚಿನ ಹವ್ಯಾಸ ಬೆಳೆಸಿಕೊಂಡವರಿಗೆ ತುಂಬ ಕಷ್ಟ. ಕೆಲವರಂತೂ ದುಬಾರಿ ಮನೆಗಳನ್ನು ಖರೀದಿಸಿ ಈಗ ಕಂತು ಕಟ್ಟಲು ಪೇಚಾಡುತ್ತಿದ್ದಾರೆ. ಕಾರುಗಳನ್ನು ಮಾರಿದವರು ಹಲವರು.

ಸುಮಾರು ಎರಡು ವರ್ಷಗಳ ಕಾಲ ಹೇಗೋ ಜೀವ ಹಿಡಿದುಕೊಂಡಿದ್ದ ಮಾಹಿತಿ ತಂತ್ರಜ್ಞಾನ ಕ್ಷೇತ್ರಕ್ಕೆ ಈಗ ಪುನಃ ಜೀವ ಬರುತ್ತಿದೆ. ಆದರೆ ಈಗ ಸುದ್ದಿಯಲ್ಲಿರುವುದು ಬಹುಪಾಲು ಬಿ.ಪಿ.ಓ. ಎಂದರೆ ಬಿಸಿನೆಸ್ ಪ್ರೋಸೆಸ್ ಔಟ್‌ಸೋರ್ಸಿಂಗ್ ಮತ್ತು ತಂತ್ರಾಂಶಾಧಾರಿತ ಸೇವೆ. ಕಾಲ್‌ಸೆಂಟರ್‌ಗಳವರು ಈ ಪಟ್ಟಿಯಲ್ಲಿ ಸೇರ್ಪಡೆಯಾಗುತ್ತಾರೆ. ಅಮೆರಿಕದ ಬಹುಪಾಲು ಕಂಪೆನಿಗಳು ತಮ್ಮ ಕೆಲಸಗಳನ್ನು ಭಾರತಕ್ಕೆ ದಾಟಿಸುತ್ತಿದ್ದಾರೆ. ಆದರೆ ಅವು ಯಾವುವೂ ತಾಂತ್ರಿಕವಾಗಿ ಉನ್ನತ ಮಟ್ಟದ ಕೆಲಸಗಳಲ್ಲ. ಬಹು ಸರಳವಾದ, ಹತ್ತನೇ ತರಗತಿ ಪಾಸಾದ ಯಾರು ಬೇಕಾದರೂ ಮಾಡಬಲ್ಲ ತಂತ್ರಾಂಶ ಸೇವೆಗಳು ಮತ್ತು ತಂತ್ರಾಂಶಾಧಾರಿತ ಸೇವೆಗಳು. ಭಾರತದ ಕಂಪೆನಿಗಳು ತಂತ್ರಾಂಶ ಸೇವೆಯಲ್ಲೇ ತೊಡಗಿಸಿಕೊಂಡಿವೆ. ತಂತ್ರಾಂಶ ಉತ್ಪನ್ನಗಳೇನಿದ್ದರೂ ಅಮೆರಿಕಾದಿಂದ ಬರುತ್ತವೆ. ಬಿಪಿಓ ವಿಭಾಗ ಅತಿ ವೇಗದಲ್ಲಿ ಬೆಳೆಯುತ್ತಿದೆ. ಒಂದು ವರ್ಷದಲ್ಲೇ ಪ್ರತಿಶತ ೨೫೦ ಬೆಳವಣಿಗೆ ಬೆಂಗಳೂರಿನಲ್ಲಿ ದಾಖಲಾಗಿದೆ. ಕರ್ನಾಟಕ ರಾಜ್ಯಕ್ಕೆ ಕಳೆದ ಹಣಕಾಸಿನ ವರ್ಷದಲ್ಲಿ ಒಟ್ಟು ೯೦೦ ಕೋಟಿ ರೂ. ಬಿಪಿಓ ಮೂಲಕ ಬಂದಿದೆ. ಕರ್ನಾಟಕ ಸರಕಾರವಂತೂ ಬಿಪಿಓ ಕಂಪೆನಿಗಳಿಗೆ ಬೇಕಾಗುವ ತರಬೇತಾದ ತಂತ್ರಜ್ಞರ ಸರಬರಾಜಿಗೆ ಅಂತಹ ತಂತ್ರಜ್ಞರಿಗೆ ಪರೀಕ್ಷೆ, ತಂತ್ರಜ್ಞರ ಮಾಹಿತಿ ಭಂಡಾರ, ಇತ್ಯಾದಿ ಮಾಡಲು ಹೊರಟಿದೆ. ಡಾಟ್‌ಕಾಂನ ಸನ್ನಿ ಇನ್ನೊಂದು ರೂಪ ತಾಳುತ್ತಿದೆಯೇನೋ ಎಂಬ ಅನುಮಾನ ಮೂಡುತ್ತಿದೆ.

ಈಗ ಅಮೆರಿಕಾ ಮತ್ತು ಇಂಗ್ಲೆಂಡ್ ದೇಶಗಳಲ್ಲಿ ತಂತ್ರಾಂಶಾಧಾರಿತ ಸೇವೆಗಳನ್ನು ಭಾರತಕ್ಕೆ ದಾಟಿಸುವುದರ ವಿರುದ್ಧ ಜನರ ಪ್ರತಿಭಟನೆ ಪ್ರಾರಂಭವಾಗಿದೆ. ಕಾಲ್‌ಸೆಂಟರ್‌ಗಳನ್ನು ಅಮೆರಿಕಾ ದೇಶದಿಂದ ಹೊರಗಡೆ ಸ್ಥಾಪಿಸಬಾರದು ಎಂದು ಅಮೆರಿಕಾದ ನ್ಯೂಜೆರ್ಸಿ ರಾಜ್ಯದಲ್ಲಿ ಕಾನೂನನ್ನೇ ಮಾಡಿದ್ದಾರೆ. ಇನ್ನು ಕೆಲವು ಅಮೆರಿಕನ್ ಕಂಪೆನಿಗಳು ಭಾರತಕ್ಕಿಂತ ಅಗ್ಗವಾಗಿ ಜನಸಂಪತ್ತು ದೊರೆಯಬಹುದಾದ ಮತ್ತು ಇಂಗ್ಲಿಷ್ ಭಾಷೆ ಬಲ್ಲ ಫಿಲಿಪ್ಪೈನ್ಸ್ ಕಡೆ ಹೊರಟಿದ್ದಾರೆ. ಬಿಪಿಓ ಮೇಲೆ ಅತಿಯಾಗಿ ಅವಲಂಬಿಸಲು ಹೊರಟ ಭಾರತೀಯ ಕಂಪೆನಿಗಳು ಹೊಡೆತ ತಿನ್ನುವ ಕಾಲ ದೂರವಿಲ್ಲ. ಡಾಟ್ ಕಾಂ ಗುಳ್ಳೆ ಒಡೆದ ಇತಿಹಾಸದಿಂದ ಪಾಠ ಕಲಿಯದಿದ್ದರೆ ಇವರು ಅದೇ ಇತಿಹಾಸವನ್ನು ಪುನರಾವರ್ತಿಸುವ ಸಂಭವವಿದೆ. ನಮ್ಮವರು ಆದಷ್ಟು ಬೇಗ ತಾಂತ್ರಿಕ ಪ್ರಾವೀಣ್ಯದ ಅಗತ್ಯವಿರುವಂತಹ ಸೇವಾ ಕ್ಷೇತ್ರಕ್ಕೆ ಕಾಲಿಡುವುದು ಒಳಿತು. ಉತ್ಪನ್ನಗಳ ಕಡೆ ಗಮನ ಹರಿಸಿದರೆ ಇನ್ನೂ ಒಳ್ಳೆಯದು. ಜಾಗತಿಕ ಮಾಹಿತಿ ತಂತ್ರಜ್ಞಾನದ ಕ್ಷೇತ್ರದಲ್ಲಿ ಭಾರತ ದೇಶವು ಸೇವೆಗೆ ಅಲ್ಲ ಉತ್ತಮ ಗುಣಮಟ್ಟದ ಉತ್ಪನ್ನಗಳಿಗೆ ಹೆಸರುವಾಸಿಯಾಗುವ ಕಾಲ ಬರಲೆಂದು ಹಾರೈಸೋಣ.

**ಡಾ॥ ಯು. ಬಿ. ಪವನಜ**
೬೫, ಮೂರನೇ ಅಡ್ಡರಸ್ತೆ, ಅಮರಜ್ಯೋತಿನಗರ
ವಿಜಯನಗರ, ಬೆಂಗಳೂರು - ೫೬೦೦೪೦



# ಭಾರತ್ ಬಂದು ಹೋದ

ಆಳದ ಬೇರುಗಳ ಅಗೆಯುತ್ತ
ಎಷ್ಟೋ ವರ್ಷಗಳ ನಂತರ
ಅಯೋಧ್ಯೆಗೆ ಬಂದಿದ್ದೇನೆ ದೇವರೇ,
ನನ್ನ ತಾಯಿಯ ಹುಟ್ಟೂರನ್ನು ಹುಡುಕಿಕೊಂಡು
ನನಗೆ ನನ್ನ ಧರ್ಮ ಗೊತ್ತಿಲ್ಲ
ತಂದೆ ಯಾರೆಂದು ತಿಳಿದಿಲ್ಲ
ಅವ್ವನ ಬಗ್ಗೆ ಕೂಡ ಅಷ್ಟಕ್ಕಷ್ಟೇ.

ನನ್ನ ತಾಯಿ ಮುನ್ನಾಬಾಯಿ
ಅಯೋಧ್ಯೆಯ ಒಂದು ಗುಡಿಸಲಲ್ಲಿ ಜನಿಸಿದಳು
ನನ್ನಜ್ಜಿ ಕೂಡ ಅವಳಿಗೆ
ಅವಳ ತಂದೆಯ ಹೆಸರು ಹೇಳಿರಲಿಲ್ಲವಂತೆ
ಹೀಗಾಗಿ ನಮ್ಮ ವಿಷಯದಲ್ಲಿ
ವರ್ಗ ಜಾತಿಗಳ ಪ್ರಶ್ನೆ ಯಾರಿಂದಲೂ ಉದ್ಭವಿಸಲಿಲ್ಲ
ದೇವರೇ,
'ಕುಟುಂಬ'ದ ಅರ್ಥವನ್ನು ಮನಗಾಣದವ ನಾನು
ಬೇಕಾದರೆ ನಮ್ಮದನ್ನು 'ಮಾತೃ ಕುಟುಂಬ'ವೆಂದು ಪರಿಗಣಿಸು

ನಾನು ಬಾಲಕನಾಗಿದ್ದಾಗ ಟಿಕೆಟ್ ತೆಗೆಸದೇ ರೈಲು ಹತ್ತಿ
ಈ ಊರನ್ನು ಬಿಡುವದಕ್ಕೆ ಮುಂಚೆ
ಕಣ್ಣಾರೆ ಕಂಡದ್ದನ್ನು ಹೇಳುತ್ತೇನೆ ಕಿವಿಗೊಟ್ಟು ಕೇಳು
ದೇವರೇ
ಗೆರೆ ಕೊರೆದಂತೆ ಎಲ್ಲವೂ ನೆನಪಾಗುತ್ತಿಲ್ಲ

ಭಯಂಕರ ಕತ್ತಲೆಯ ಇಕ್ಕಟ್ಟಿನಲ್ಲಿ
ಹುಗಿದುಹೋದ ಆ ರುಕ್ಷ ಗುಡಿಸಲು
... ಭಿಕಾರಿಗಳು, ರಕ್ಕರು, ಮಾಜಿ ಖೈದಿಗಳು, ಕುಡುಕರು
ತಲೆ ಹಿಡುಕರು... ಮತ್ತು ಕೆಲರಾತ್ರಿ ಒಮ್ಮಿಂದೊಮ್ಮೆಲೇ
ಸೀಟಿಯ ಸಪ್ಪಳ...
ಪಾನಮತ್ತನಾದ ಡೊಳ್ಳು ಹೊಟ್ಟೆಯ ಕಾನ್‌ಸ್ಟೇಬಲ್
ಧೊಪ್ಪನೇ ಬಾಗಿಲು ಮುರಿದು ನಮ್ಮ ಗುಡಿಸಲ ಒಳಹೊಕ್ಕ
ಅವನ ಉಸಿರಿನ ತುಂಬ ಸರಾಯಿ ವಾಸನೆ
ಬಾಯಿಯ ತುಂಬ ವೀಳ್ಯದ ವಾಸನೆ
ತುಟಿಮೇಲೆ ನಿರಾಶೆಯ ಮುಗುಳ್ನಗೆ

ಆ ರಾತ್ರಿ ನನ್ನ ಹಡದವ್ವ ನನ್ನನ್ನು ಹೊರದಬ್ಬಿದಳು
ಆಕಾಶದ ತುಂಬ ಬೆಳಗುತ್ತಿದ್ದ ಅಸಂಖ್ಯ ನಕ್ಷತ್ರಗಳ ಆ ರಾತ್ರಿ
ಹೊನ್ನಬಣ್ಣದ ತೇಜೋಮಂಡಲದ ಆ ರಾತ್ರಿ
ನಾನು ರಸ್ತೆ ಬದಿಯ ಗೋಡೆಯ ಪಕ್ಕದಲ್ಲಿ ಆಶ್ರಯ ಪಡೆದೆ.
ನಾನು ಅನುಭವಿಸಿದ್ದನ್ನು ಮಾತ್ರ ಉಸಿರುತ್ತಿದ್ದೇನೆ
ನಿಜ, ಅಯೋಧ್ಯೆಯನ್ನು ಬಿಟ್ಟಮೇಲೆ ನಾನೆಲ್ಲಿದ್ದೆ
ಏನೇನು ಮಾಡಿದೆನೆಂದು ವಿವರಿಸುವ ಅಗತ್ಯ
ಈಗ ಉಳಿದಿಲ್ಲ.

ನನ್ನ ದೇವರೇ ನನಗೆ ಇಷ್ಟು ಮಾತ್ರ ಗೊತ್ತು:
ನನ್ನ ತಾಯಿಗೆ ಆಗ ಗುಡಿಸಲಿನಿಂದ
ಬಂಗಲೆಗೆ ಹೋಗುವ ಶಕ್ತಿ ಬಂತು

ಆಮೇಲೆ ■ ಬಂಗಲೆ ಕೂಡ ಅವಳ ಯೌವನದೆದುರೇ
ಅವಳನ್ನು ಬಿಟ್ಟುಹೋಯಿತು ಅಥವಾ
ಅವಳನ್ನು ಒದ್ದು ಹೊರಹಾಕಿತು
ಅವಳು ಹುಡುಕಿದ ಎಲ್ಲ ದಾರಿಗಳೂ
ಅವಳನ್ನು ಮರಳಿ ಗುಡಿಸಲಿಗೇ ತಂದವು
ಕೊನೆಗೊಂದು ದಿನ ಆ ಗುಡಿಸಲಲ್ಲೇ
ಅವಳು ಕೊನೆಯುಸಿರೆಳೆದಳು.

ಕ್ಷಮಿಸು ದೇವರೇ
ನನ್ನ ಕಂಗಳು ಒದ್ದೆಯಾಗಿವೆ.
ಆದರೆ ಹಲವಾರು ವರುಷಗಳ ನಂತರ
ನನ್ನ ತಾಯಿಯ ಜನ್ಮಸ್ಥಳವನ್ನು
ಹುಡುಕುತ್ತ ಬಂದ ನನಗೆ ಕಂಡದ್ದೇನು ಗೊತ್ತೇ ?
ಕೆಲವರು ಹೇಳುತ್ತಾರೆ :
ಇಲ್ಲಿ ಪುರಾಣಪ್ರಸಿದ್ಧ ರಾಜನೊಬ್ಬ ಜನಿಸಿದ್ದ
ಕೆಲವರ ಪ್ರಕಾರ
ಮಧ್ಯಪೂರ್ವದಿಂದ ಬಾದಶಹನೊಬ್ಬ ಇಲ್ಲಿಗೆ ಬಂದಿದ್ದ
ಪುರಾಣ ಪುರುಷರೆಂಬುವರು ಎಲ್ಲಿಯಾದರೂ
ಯಾವಾಗಲಾದರೂ ಜನಿಸಿರುತ್ತಾರೋ ?
ನನಗಂತೂ ಗೊತ್ತಿಲ್ಲ
ಹಲವಾರು ವರುಷಗಳ ಹಿಂದೆ ಬಂದ ಬಾದಶಹನ
ಹೆಜ್ಜೆಗುರುತು ಇವರಿಗೆ ಹೇಗೆ ಕಾಣಿಸುತ್ತಿವೆಯೋ ?
ನನಗಂತೂ ತಿಳಿದಿಲ್ಲ
ಆದರೆ ನನಗೆ ಸ್ಪಷ್ಟವಾಗಿ ಗೊತ್ತಿದೆ
ನನ್ನ ತಾಯಿ ಇಲ್ಲಿಯೇ ಈ ಅಯೋಧ್ಯೆಯಲ್ಲಿಯೇ
ಈ ಗುಡಿಸಲಲ್ಲಿಯೇ ಹುಟ್ಟಿದ್ದಾಳೆಂದು.
ನಾನೂ ಸಹ ಇಲ್ಲಿಯೇ ಹುಟ್ಟಿದವನಲ್ಲವೇ ?

ದೇವರೇ, ನನಗೆ ಸಾವಿನ ಭಯವಿಲ್ಲ
ಸ್ವರ್ಗದ ಹಂಬಲವಿಲ್ಲ ಅಮೃತದ ಆಸೆ ಇಲ್ಲ
ನನ್ನ ರೋಜಾ ಏನಿದ್ದರೂ ನನ್ನ ಗುಡಿಸಲಿಗಾಗಿ
ಕೇವಲ ನನ್ನ ಜನ್ಮ ಸ್ಥಳಕ್ಕಾಗಿ
ನನ್ನ ಉಪವಾಸ ಪ್ರತಿ ದಿನದ ಎಂಟು ಪ್ರಹರಗಳ ಪ್ರಾರ್ಥನೆ
ಐದು ಬಾರಿ ನಮಾಜು ಎಲ್ಲವೂ ಕೇವಲ
ನನ್ನ ಜನ್ಮಭೂಮಿಗಾಗಿ, ಅಯೋಧ್ಯೆಗಾಗಿ

ದೇವರೇ,
ಈಗಲಾದರೂ ದಯೆ ತೋರು
ನನ್ನ ಮಾತೃಭೂಮಿಯನ್ನು
ಮರಳಿ ಕರುಣಿಸು ನನಗೆ
ಹತಾಶನಾಗಿ ಸಾಯುವ ಮೊದಲೇ
ನನ್ನ ಜನ್ಮಸ್ಥಳವನ್ನು
ಮರಳಿ ಕೊಟ್ಟುಬಿಡು ನನಗೆ.

ಬಂಗಾಲಿ ಮೂಲ : ಜಯದೇವ ಬಸು
ಕನ್ನಡಕ್ಕೆ : ಎಂ. ಡಿ. ಒಕ್ಕುಂದ
ಮುಖ್ಯಸ್ಥರು, ಕನ್ನಡ ವಿಭಾಗ, ಶ್ರೀ ಸಿದ್ಧೇಶ್ವರ ಸರಕಾರಿ ಪದವಿ ಕಾಲೇಜು, ನರಗುಂದ (ಗದಗ ಜಿಲ್ಲೆ)




# ಇತಿಹಾಸದ ಅಧ್ಯಯನ ಏಕೆ ಮತ್ತು ಹೇಗೆ?

ಇತ್ತೀಚಿನ ದಿನಗಳಲ್ಲಿ ಇತಿಹಾಸದ ಅಧ್ಯಯನ ವಿಶೇಷ ಮಹತ್ವ ಪಡೆಯುತ್ತಿದೆ. ಅಂದರೆ ಹಿಂದೆ ಇತಿಹಾಸದ ಅಧ್ಯಯನ ಆಗಿರಲಿಲ್ಲ ಅಥವಾ ಸರಿಯಾಗಿ ಆಗಿರಲಿಲ್ಲ ಎಂದು ಅರ್ಥವಲ್ಲ. ಬಹಳ ಹಿಂದಿನಿಂದಲೂ ಇತಿಹಾಸದ ಅಧ್ಯಯನ ಆಗಿದೆ. ಅದರ ಸ್ವರೂಪ ಏನು ಎಂದು ಈಗ ಪ್ರಶ್ನಿಸದೆ ಇರುವುದು ಸಾಧ್ಯವಿಲ್ಲ. ಹೇಗೆ ಎಂಬ ಪ್ರಶ್ನೆ ಇದ್ದಾಗ ಮಾತ್ರ ಹೊಸ ಹಾಗೂ ಸತ್ಯಕ್ಕೆ ಹತ್ತಿರವಾದ ವಿಷಯಗಳನ್ನು ಸಂಶೋಧನೆಯ ಮೂಲಕ ತಿಳಿಯಲು ಸಾಧ್ಯ. ಯಾವುದೇ ಪ್ರಶ್ನೆ ಇಲ್ಲದಿದ್ದಾಗ ನಾವು ತಿಳಿದಿರುವುದೇ ಸತ್ಯ ಹಾಗೂ ಅದೇ ಅಂತಿಮ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಹೊಸ ಹಾಗೂ ತಾರ್ಕಿಕವಾಗಿಯೂ ಒಪ್ಪಬಹುದಾದ ವಿಚಾರಗಳು ಲಭಿಸಿದಾಗ ಇತಿಹಾಸದಲ್ಲಿ ಬಿಟ್ಟುಹೋಗಿರುವ ಕೊಂಡಿಗಳನ್ನು ಸೇರಿಸಿ, ಸತ್ಯಕ್ಕೆ ಸಮೀಪವಾದ ಇತಿಹಾಸವನ್ನು ಪುನಾರಚಿಸಲು ಸಾಧ್ಯ. ತಾರ್ಕಿಕವಾಗಿಯೂ ಒಪ್ಪಲು ಸಾಧ್ಯವಾಗದ ವಿಚಾರಗಳನ್ನು ಸತ್ಯ ಎಂದು ಒಪ್ಪುವುದು ಕಷ್ಟದ ಮಾತು. ಸತ್ಯವಾದ ವಿಚಾರಗಳೇ ಇತಿಹಾಸ ಮತ್ತು ಇತಿಹಾಸವು ಸತ್ಯವೇ ಆಗಿರಬೇಕು. ಅಸತ್ಯವಾದ ಮತ್ತು ಕಲ್ಪನೆಯ ಯಾವ ವಿಚಾರಗಳೂ ಇತಿಹಾಸದ ವ್ಯಾಪ್ತಿಗೆ ಸೇರುವುದು ಸಾಧ್ಯವೇ ಇಲ್ಲ.

ಭಾರತದಲ್ಲಿ ಇತ್ತೀಚಿನ ದಿನಗಳಲ್ಲಿ ವಿಜ್ಞಾನಿಗಿಂತಲೂ ಹೆಚ್ಚಾಗಿ ಇತಿಹಾಸಕಾರನಿಗೆ ಮಹತ್ವ ದೊರೆಯುತ್ತಿದೆ. ಇದು ಸಿನಿಕತನದ ಮಾತೆನಿಸಿದರೂ ಅಲ್ಲಗಳೆಯುವಂತಹುದಲ್ಲ. ಇಂದಿನ ಇತಿಹಾಸಕಾರ ಹಿಂದೆ ನಡೆದುಹೋದ ಘಟನೆಗಳು ಮತ್ತು ಲಭಿಸಿರುವ ದಾಖಲೆಗಳ ಜೊತೆಗೆ ನಡೆಸುವ ಸಂವಾದವು ಇತಿಹಾಸವಾಗಿ ಮುಂದಿನ ಪೀಳಿಗೆಗೆ ಮಾರ್ಗದರ್ಶನ ನೀಡಬೇಕು. ಅದಕ್ಕೆ ಹಿಂದಿನ ಘಟನೆಗಳ ಯಥಾವತ್ ದಾಖಲೆ ಆವಶ್ಯಕ. ಹಿಂದಿನ ದಾಖಲೆಗಳಲ್ಲಿ ವೈಯ್ಯಕ್ತಿಕ ಸ್ವರೂಪದವು ಎಷ್ಟು ಮತ್ತು ಸಾಮಾಜಿಕ ಸ್ವರೂಪದವು ಎಷ್ಟು ಎಂಬುದನ್ನು ಗಮನದಲ್ಲಿಟ್ಟುಕೊಂಡೇ ಅಧ್ಯಯನ ನಡೆಯಬೇಕಾದ್ದು ಆವಶ್ಯಕ. ವೈಯ್ಯಕ್ತಿಕ ಸ್ವರೂಪದ ದಾಖಲೆ/ಮಾಹಿತಿಗಳು ಸಾಮಾಜಿಕ ಅಧ್ಯಯನಕ್ಕೆ ಅಷ್ಟೇನೂ ಪ್ರಮುಖ ಆಗಲಾರವು. ಆದರೆ, ಒಂದು ನಿರ್ದಿಷ್ಟ ಹಂತದಲ್ಲಿ ವೈಯ್ಯಕ್ತಿಕ ವಿಚಾರಗಳು ಸಾಮಾಜಿಕ ಜೀವನದ ಮೇಲೆ ಅಥವಾ ಸಾಮಾಜಿಕ ಬದುಕು ವೈಯ್ಯಕ್ತಿಕ ಜೀವನದ ಮೇಲೆ ಬೀರಿರುವ ಅಥವಾ ಬೀರಿರಬಹುದಾದ ಪ್ರಭಾವಗಳ ಅಧ್ಯಯನಕ್ಕೆ ವೈಯ್ಯಕ್ತಿಕ ಮಾಹಿತಿ/ದಾಖಲೆಗಳು ಆವಶ್ಯಕವಾಗಬಹುದು.

ಯಾವುದೇ ದಾಖಲೆಯನ್ನು ಅಧಿಕೃತ ಮತ್ತು ವಿಶ್ವಸನೀಯ ಎಂದು ಸ್ವೀಕರಿಸಬೇಕಾದರೂ ಎಚ್ಚರ ಬೇಕಾಗುತ್ತದೆ. ಗಂಗರ ಕಾಲದ ಸುಮಾರು ತಾಮ್ರ ಶಾಸನಗಳು ಕೂಟ ಎಂದು ನಿರ್ಧರಿತವಾಗಿವೆ. ಅವಿಶ್ವಸನೀಯ/ಕೂಟ ದಾಖಲೆಗಳನ್ನು ಪತ್ತೆಹಚ್ಚುವುದು ಕಷ್ಟದ ಮಾತಲ್ಲ. ಎಲ್ಲ ದಾಖಲೆಗಳನ್ನೂ ಒಮ್ಮೆಗೇ ನಂಬಬೇಕಾದ್ದಿಲ್ಲ. ಕೆಲವು ಸಂದರ್ಭಗಳಲ್ಲಿ ಕೆಲವು ಮಾಹಿತಿಗಳು ಕಹಿಯಾದರೂ ವಿಶ್ವಸನೀಯವಾಗಿ ಇರುತ್ತವೆ. ಅಪ್ರಿಯವಾದರೂ ಅಂತಹ ದಾಖಲೆಗಳನ್ನು ಒಪ್ಪಿಕೊಳ್ಳಬೇಕಾದ್ದು ಆವಶ್ಯಕ ಮತ್ತು ಅನಿವಾರ್ಯ. ಸಾರ್ವಜನಿಕ ಸ್ವರೂಪದಲ್ಲಿ ಲಭ್ಯವಿರುವ ದಾಖಲೆಗಳು ಸಾಮಾನ್ಯವಾಗಿ ನಂಬಲರ್ಹವಾಗಿರುತ್ತವೆ. ಏಕೆಂದರೆ ಅವು ದಾಖಲೆಯಾದ ಸಂದರ್ಭದಲ್ಲೇ ಸಾರ್ವಜನಿಕರ ಗಮನಕ್ಕೆ ಬಂದಿರುತ್ತವೆ. ಆದ್ದರಿಂದ ಮೋಸಕ್ಕೆ ಅಥವಾ ಸುಳ್ಳು ದಾಖಲೆಗೆ ಅವಕಾಶಗಳು ಕಡಿಮೆ. ಇತಿಹಾಸಕಾರ ಒಬ್ಬ ನ್ಯಾಯಾಧೀಶನಂತೆ ನಿಷ್ಪಕ್ಷಪಾತವಾಗಿ ತೀರ್ಪು ನೀಡುವ ಜವಾಬ್ದಾರಿ ಹೊತ್ತಿರುತ್ತಾನೆ. ದಾಖಲೆಗಳು ಅವನ ಪಾಲಿಗೆ

---

ಇತಿಹಾಸದ ಅಧ್ಯಯನ ಕುರಿತಂತೆ ಕರ್ನಾಟಕದ ಹಿರಿಯ ಮತ್ತು ಕಿರಿಯ ತಲೆಮಾರಿನ ಕೆಲವು ಇತಿಹಾಸ ಪ್ರಾಧ್ಯಾಪಕರಿಗೆ ಐದು ಪ್ರಶ್ನೆಗಳನ್ನು ಕೇಳಲಾಗಿತ್ತು. ನಾವು ಕೇಳಿದ್ದ ಪ್ರಶ್ನೆಗಳು ಈ ಕೆಳಕಂಡಂತಿವೆ :

೧. ಇತಿಹಾಸದ ಅಧ್ಯಯನವು ಎಂದಾದರೂ ಸರಿಯಾದ ದಿಕ್ಕಿನಲ್ಲಿ ಆಗಿದೆಯೇ ?

೨. ಧಾರ್ಮಿಕ ಸಂಘರ್ಷಕ್ಕೆ ಕಾರಣವಾಗುವ ಇತಿಹಾಸದ ಅಧ್ಯಯನವೇ ಮಹತ್ವ ಪಡೆಯುವುದೇಕೆ ?

೩. ಮನುಷ್ಯನನ್ನು ಕೆರಳಿಸಿ, ನೆಮ್ಮದಿಯನ್ನು ಹಾಳುಮಾಡುವ ಇತಿಹಾಸದ ಅಧ್ಯಯನ ಅವಶ್ಯಕವೇ ?

೪. ಧಾರ್ಮಿಕ ಇತಿಹಾಸವಷ್ಟೇ ಇತಿಹಾಸವೇ ? ಇತಿಹಾಸದಿಂದ ನಾವು ಕಲಿತಿರುವುದೇನು ?

೫. ದಾಖಲೆಗಳು ತಿಳಿಸುವ ಸತ್ಯವನ್ನು ಒಪ್ಪಿಕೊಳ್ಳಲು ಇರುವ ಕಷ್ಟವೇನು ?

ನಮ್ಮ ಪ್ರಶ್ನೆಗಳಿಗೆ ಕೆಲವು ವಿದ್ವಾಂಸರು ಉತ್ತರಿಸಿದ್ದಾರೆ. ಅವರ ಉತ್ತರಗಳನ್ನು ಯಾವ ಬದಲಾವಣೆಗಳೂ ಇಲ್ಲದೆ, ಹಾಗೆಯೇ ಪ್ರಕಟಿಸಲಾಗಿದೆ. ಇತಿಹಾಸದ ಅಧ್ಯಯನ ಕುರಿತಂತೆ ಇರುವ ಬೇರೆ ಬೇರೆ ಅಭಿಪ್ರಾಯಗಳನ್ನು ತಿಳಿಯುವ ಪ್ರಯತ್ನ ನಮ್ಮದು.

ವಕೀಲರಂತೆ ನೆರವು ನೀಡಬೇಕು. ವಕೀಲನು ತನ್ನ ಕಕ್ಷಿದಾರನ ಪಕ್ಷ ವಹಿಸಿ ಮಾತನಾಡಬೇಕಾದ್ದು ಅನಿವಾರ್ಯ. ಆದ್ದರಿಂದ ತನ್ನ ಕಕ್ಷಿದಾರನನ್ನು ಉಳಿಸುವ ಸಲುವಾಗಿ ಆತ ದಾಖಲೆಗಳನ್ನು/ಸಾಕ್ಷಿಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುವ ಅವಕಾಶಗಳಿರುತ್ತವೆ. ಇವುಗಳೆಲ್ಲವನ್ನೂ ಕೂಲಂಕಷವಾಗಿ ಕೇಳಿ ತನಿಖೆ ಮಾಡಿ ತೀರ್ಪು ನೀಡಿ ನಿರಪರಾಧಿಗೆ ಶಿಕ್ಷೆ ಆಗದಂತೆ ಎಚ್ಚರ ವಹಿಸಬೇಕಾದ್ದು ನ್ಯಾಯಾಧೀಶನ ಕರ್ತವ್ಯ. ತನ್ನ ಕರ್ತವ್ಯದಲ್ಲಿ ಸೋತ ಅಥವಾ ತಪ್ಪು ಮಾಡಿದ ನ್ಯಾಯಾಧೀಶ ನಿರಪರಾಧಿಗೆ ಶಿಕ್ಷೆ ವಿಧಿಸುವ ಸಾಧ್ಯತೆಗಳಿರುತ್ತವೆ. ಇತಿಹಾಸಕಾರ ಎನಿಸಿಕೊಂಡವನು ಅಥವಾ ಹಾಗೆಂದು ಘೋಷಿಸಿಕೊಂಡವನು ತಾನು ಬದುಕುತ್ತಿರುವ ಸಮಾಜದ ವಕ್ತಾರನಾಗುತ್ತಾನೆ. ಆ ಸಮಾಜಕ್ಕೆ ಹಿಂದಿನ ಸಮಾಜದ ಏಳುಬೀಳುಗಳನ್ನು ವಿವರವಾಗಿ ತಿಳಿಸುತ್ತಾನೆ. ನಾವು ತಿಳಿದಿದ್ದೇವೆ ಎಂದು ಭಾವಿಸಿರುವ ಕಳೆದ ಕಾಲದ ಸಮಾಜವು ಕೇವಲ ಆಳುವ ವರ್ಗದ/ಮೇಲ್ವರ್ಗದವರಿಗೆ ಸೀಮಿತವಾಗಿದ್ದುದು ಎಂದು ಹೇಳಲು ಯಾವ ಸಂಕೋಚ ಅಥವಾ ಮುಜುಗರವೂ ಬೇಕಾಗಿಲ್ಲ. ರಾಜ ಮಹಾರಾಜರ, ಅವರ ಸಚಿವ/ದಂಡನಾಯಕ ಇತ್ಯಾದಿ ಮೇಲ್ವರ್ಗದ ಅಧಿಕಾರದಲ್ಲಿದ್ದವರ ಬಗ್ಗೆ ಮಾತ್ರ ನಮಗೆ ತಿಳಿಸಲಾಗಿದೆ. ಸಾಮಾನ್ಯರು ಎನಿಸಿಕೊಂಡ ಅನೇಕರ ಬಗೆಗೆ ದಾಖಲೆಗಳು ಇಲ್ಲವೇ ಇಲ್ಲ ಎಂದು ತಿಳಿಯುವಂತಿಲ್ಲ. ಸಾಮಾನ್ಯರಿಗೆ ಸಂಬಂಧಿಸಿದ ಎಷ್ಟು ದಾಖಲೆಗಳನ್ನು ನಾವು ಎಷ್ಟರಮಟ್ಟಿಗೆ ಗಂಭೀರವಾಗಿ ವಿಶ್ಲೇಷಿಸಿದ್ದೇವೆ ಎಂದು ನಾವೇ ಪ್ರಶ್ನಿಸಿಕೊಂಡು, ಉತ್ತರಕ್ಕೆ ಹುಡುಕಬೇಕಾಗುತ್ತದೆ. ಇತಿಹಾಸದಲ್ಲಿ ಏನನ್ನೂ ಊಹಿಸಲು ಸಾಧ್ಯವಿಲ್ಲ.

ಇತಿಹಾಸವು ಭೌತಶಾಸ್ತ್ರ, ರಸಾಯನ ಶಾಸ್ತ್ರ, ಜೀವ ವಿಜ್ಞಾನ ಮತ್ತು ಇತರ ವಿಜ್ಞಾನದ ವಿಷಯಗಳಂತಲ್ಲ. ವಿಜ್ಞಾನದಲ್ಲಿ ಅನ್ವೇಷಣಾ ಪ್ರಕ್ರಿಯೆಯು ಸಹಜ. ಇತಿಹಾಸದಲ್ಲಿ ಅನ್ವೇಷಣೆಗೆ ಅವಕಾಶವೇ ಇಲ್ಲ. ಇಲ್ಲಿ ಏನಿದ್ದರೂ ಸಂಶೋಧನೆ ಮಾತ್ರ ಸಾಧ್ಯ. ನಡೆದು ಹೋಗಿರುವ ವಿಷಯಗಳನ್ನು ಪತ್ತೆ ಮಾಡುವ ಪತ್ತೆದಾರನ ಕೆಲಸವನ್ನು ಇತಿಹಾಸಕಾರ ಮಾಡಬೇಕಾಗುತ್ತದೆ. ಇತಿಹಾಸವು ಸೃಜನಾತ್ಮಕ ಸ್ವರೂಪದ ಸಾಹಿತ್ಯವೂ ಆಗಲಾರದು.

ಇತಿಹಾಸ ಅಧ್ಯಯನದ ಸಂದರ್ಭದಲ್ಲಿ ಧರ್ಮವನ್ನು ಕೈಬಿಡುವಂತೆಯೇ ಇಲ್ಲ. ಅದು ಸಮಾಜದ ವಿಭಿನ್ನ ಅಂಗ. ಆದರೆ ಅಧ್ಯಯನ ಮಾಡಬೇಕಾದ ಧರ್ಮದ ವಿಚಾರದಲ್ಲಿ ಸ್ಪಷ್ಟವಾದ ತಿಳುವಳಿಕೆ ಇರುವುದು ಆವಶ್ಯಕ. ಮನುಷ್ಯರನ್ನು ಒಡೆಯುವ ಯಾವುದೇ ಧರ್ಮದ ವಿಚಾರದಲ್ಲಿ ಅಧ್ಯಯನ ಮಾಡುವಾಗ ಎಚ್ಚರ ಅನಿವಾರ್ಯ. ಯಾವುದೇ ಧರ್ಮ ನೇರವಾಗಿ ಅನೀತಿಯನ್ನು ಪ್ರೋತ್ಸಾಹಿಸುವುದಿಲ್ಲ. ಹಾಗೆ ಅನೀತಿಯನ್ನು ಸಮರ್ಥಿಸಿ, ಪ್ರೋತ್ಸಾಹಿಸುವ ಯಾವುದೇ ಧರ್ಮವನ್ನು ಯಾರೂ ಒಪ್ಪಲು ಸಾಧ್ಯವಾಗುವುದಿಲ್ಲ. ಕೆಲವು ವ್ಯಾಖ್ಯಾನಕಾರರ ಪ್ರಕಾರ ಸಾಮಾನ್ಯವಾಗಿ ಧರ್ಮವು ಮನುಷ್ಯನ ವರ್ತಮಾನದ ಬದುಕಿಗಿಂತ ಸಾವಿನ ನಂತರದ ಬದುಕಿನ ಬಗೆಗೇ ಹೆಚ್ಚು ಹೇಳುತ್ತದೆ. ಆತ್ಮ, ಪರಮಾತ್ಮ ಇತ್ಯಾದಿ ಸಾವಿನಾಚೆಗಿನ, ಕಾಣದ, ತಿಳಿಯದ ಮತ್ತು ಸ್ಪಷ್ಟವಾಗದ ವಿಚಾರಗಳ ಬಗೆಗೇ ಹೆಚ್ಚು ಹೇಳುತ್ತವೆ. ಯಾವುದೇ ವ್ಯಕ್ತಿಯ ಅಂತರಂಗಕ್ಕೆ ಸೇರಿದ ಧರ್ಮದ ಆಚಾರ-ವಿಚಾರಗಳು ಸಾಮಾಜಿಕವಾಗಿಯೂ ಒಳಿತನ್ನೇ ಸಾಧಿಸಬೇಕು ಎಂದು ನಿರೀಕ್ಷಿಸುವುದು ತಪ್ಪಲ್ಲ. ಬದುಕಿಗೊಂದು ಸರಿದಾರಿ, ಒಂದು ಅರ್ಥ, ಒಂದು ಬಯಕೆ ಮತ್ತು ಒಂದು ಗುರಿಯನ್ನು ವರ್ತಮಾನದಲ್ಲಿ ಕಾಣಬೇಕಾದ್ದು ಬದುಕಿರುವ, ಸಾರ್ಥಕವಾಗಿ ಬದುಕಬೇಕೆನ್ನುವವರೆಲ್ಲರ ನಿರೀಕ್ಷೆ. ವ್ಯಾಖ್ಯಾನಕಾರರು ಧರ್ಮವನ್ನು ತಮ್ಮ ಮೂಗಿನ ನೇರಕ್ಕೆ ವ್ಯಾಖ್ಯಾನಿಸಿ, ಸಂಪ್ರದಾಯದ ಚೌಕಟ್ಟಿನಲ್ಲಿ ಅದರ ಅರ್ಥಕ್ಕೆ ಧಕ್ಕೆ ತಂದಿದ್ದಾರೆ ಎಂದು ಭಾವಿಸಿದರೆ, ಅದೂ ತಪ್ಪು ಗ್ರಹಿಕೆಯಾಗಬಹುದೆಂದು ಆತಂಕವಾಗುತ್ತದೆ.

ಇತಿಹಾಸವನ್ನು ಯಾರೂ ತಮ್ಮ ಮೂಗಿನ ನೇರಕ್ಕೆ, ತಮಗೆ ಅನುಕೂಲವಾಗುವಂತೆ, ತಾವು ನಂಬಿದ ರಾಜಕೀಯ ಸಿದ್ಧಾಂತಗಳಿಗೆ ತಕ್ಕಂತೆ ವ್ಯಾಖ್ಯಾನಿಸುವುದು ಸರಿಯಾಗುವುದಿಲ್ಲ. ಇದರಿಂದ ಇತಿಹಾಸದ ಸ್ವರೂಪ ಸತ್ಯದಿಂದ ದೂರ ಸರಿಯುವ ಅಪಾಯ ಇರುತ್ತದೆ. ಸಾಮಾನ್ಯವಾಗಿ ಒಂದು ವರ್ಗ/ಒಂದು ಸಿದ್ಧಾಂತಕ್ಕೆ ಬದ್ಧರಾದ ವ್ಯಾಖ್ಯಾನಕಾರರು ಒಂದು ವಿಚಾರದ ಬಗ್ಗೆ ತಾವು ಮಾಡಿದ ವ್ಯಾಖ್ಯಾನವೇ ಅಂತಿಮ ಹಾಗೂ ಸತ್ಯ ಎಂದು ಪ್ರಮಾಣೀಕರಿಸುವುದು ಹೊಸ ಮಾತೇನಲ್ಲ. ತಾವು ಹೇಳಿದ್ದೇ ಸರಿ ಎಂದು ಪಟ್ಟು ಹಿಡಿಯುವ ಸಂದರ್ಭದಲ್ಲಿ, ಬೇರೆಯವರ ವಿಚಾರಗಳನ್ನು ನಿರಾಕರಿಸುವ/ತಿರಸ್ಕರಿಸುವ ಸಂದರ್ಭದಲ್ಲಿ ಆರೋಗ್ಯಕರ ಹಾಗೂ ಮುಕ್ತ ಮನಸ್ಸು ಇದ್ದರೆ, ಸಮಸ್ಯೆಗಳು ಬಗೆಹರಿಯುತ್ತವೆ ಮತ್ತು ಚರ್ಚೆಗಳು ಸತ್ಯವನ್ನು ಕಾಣಲು ಅವಕಾಶ ನೀಡುತ್ತವೆ. ಆದರೆ ಇತ್ತೀಚಿನ ದಿನಗಳಲ್ಲಿ ಐತಿಹಾಸಿಕ ಸತ್ಯದ ಬಗೆಗಿನ ಚರ್ಚೆಗಳು ಆರೋಗ್ಯಕರವಾಗಿ ನಡೆಯುತ್ತಿವೆಯೇ ಎಂಬ ಅನುಮಾನ ಕಾಡುತ್ತದೆ. ಇತಿಹಾಸಕಾರ ಭವಿಷ್ಯ ನುಡಿಯುವವನಲ್ಲವಾದರೂ ಭವಿಷ್ಯವನ್ನು ರೂಪಿಸಬೇಕಾದವನು ಎಂಬ ಎಚ್ಚರ ಆವಶ್ಯಕ.

ಭಾರತೀಯರಾದ ನಮಗೆ ಪ್ರಪಂಚದ ಬೇರೆ ಭಾಗಗಳ ಇತಿಹಾಸಕ್ಕಿಂತ ಭಾರತದ ಇತಿಹಾಸದ ಬಗ್ಗೆ ಕುತೂಹಲ ಹೆಚ್ಚು. ನಮ್ಮ ಹಿರಿಯರ ಸಾಧನೆಗಳು, ವೈಫಲ್ಯಗಳು, ತಮ್ಮ ಜೀವಿತ ಅವಧಿಯ ಬದುಕನ್ನು ಉತ್ತಮ ಪಡಿಸಿಕೊಳ್ಳಲು ಅವರು ಕಂಡುಕೊಂಡ ಮಾರ್ಗಗಳು, ಅವರ ನಡುವಿನ ಪ್ರೀತಿ, ವಿಶ್ವಾಸ ಮತ್ತು ದ್ವೇಷಾಸೂಯೆಗಳು ನಮ್ಮ ಬದುಕನ್ನು ಉತ್ತಮಪಡಿಸಿಕೊಳ್ಳಲು ನೆರವಾಗಬೇಕು. ಇಲ್ಲವಾದರೆ ಇತಿಹಾಸದಿಂದ ನಾವು ಏನನ್ನೂ ಕಲಿತಂತಾಗುವುದಿಲ್ಲ.

ಯಾವ ದಾಖಲೆಗಳನ್ನು ನಂಬಿ ಇತಿಹಾಸವನ್ನು ರಚಿಸಬೇಕು ಎಂಬಲ್ಲೇ ಗೊಂದಲಗಳಿವೆ. ಪುರಾಣಗಳನ್ನೂ ಐತಿಹ್ಯಗಳನ್ನೂ ಇತಿಹಾಸದ ದಾಖಲೆಯಾಗಿ ಸ್ವೀಕರಿಸುವುದು ಸರಿಯಲ್ಲ ಎಂದರೆ ಅನೇಕರಿಗೆ ಸಿಟ್ಟು ಬರುತ್ತದೆ. ಆ ಸಿಟ್ಟು ಹಲವಾರು ಅನರ್ಥಗಳಿಗೂ ಕಾರಣವಾಗುತ್ತದೆ. ಅನರ್ಥಗಳು ಸಂಭವಿಸಿದರೂ ತಪ್ಪಿಲ್ಲ; ನಮ್ಮ ನಂಬಿಕೆಯನ್ನು ಯಾರೂ ಪ್ರಶ್ನಿಸಬಾರದು ಎಂಬ ಮೊಂಡುತನ ಒಳ್ಳೆಯ ಫಲವನ್ನು ನೀಡಲು ಸಾಧ್ಯವೇ ಇಲ್ಲ. ಅಂತಹ ಮೊಂಡುತನ ನಾವು ಭವಿಷ್ಯಕ್ಕೆ ಬಿಟ್ಟುಕೊಡಬೇಕಾದ ಉದಾಹರಣೆಯಲ್ಲ. ಬರವಣಿಗೆಯ ಅಥವಾ ವಸ್ತುಗಳ ದಾಖಲೆಯು ವ್ಯಾಖ್ಯಾನಕ್ಕೆ ಸಿಕ್ಕಾಗ ಇತಿಹಾಸ ದಕ್ಕುತ್ತದೆ. ಇದಾವುದೂ ಇಲ್ಲದ, ಕೇವಲ ಹೇಳಿಕೆ, ನಂಬಿಕೆ ಮತ್ತು ಐತಿಹ್ಯಗಳು ಇತಿಹಾಸ ಆಗುವುದಿಲ್ಲ.

ಭಾರತದಲ್ಲಿ ಸ್ವಾತಂತ್ರ್ಯಕ್ಕೆ ಮೊದಲು ಬ್ರಿಟಿಷ್ ಇತಿಹಾಸಕಾರರು, ತಮ್ಮ ಆಳ್ವಿಕೆಗೆ ಅನುಕೂಲವಾಗುವಂತೆ ಭಾರತದ ಇತಿಹಾಸವನ್ನು ಬರೆದರು. ಕೆಲವರು ಆಕರಗಳ ಸಂಗ್ರಹಕ್ಕೆ ಮಾತ್ರ ಹೆಚ್ಚು ಒತ್ತು ನೀಡಿದರು. ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವ ಪ್ರಯತ್ನದಲ್ಲಿ ಬರೆದ ನಮ್ಮ ಕೆಲವು ಇತಿಹಾಸ ಕೃತಿಗಳು ಸಹಜವಾಗಿಯೇ ಉತ್ತೇಕ್ಷೆಗೆ ಎಡೆಮಾಡಿಕೊಂಡವು. ಸ್ವಾತಂತ್ರ್ಯ ಬಂದ ಮೇಲೆ ಬರೆದ ಇತಿಹಾಸ ಕೃತಿಗಳಲ್ಲಿ ಸಹಜವಾಗಿಯೇ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ ಮತ್ತು ಅಂತಹುದೇ ಘರ್ಷಣೆ ಮತ್ತು ಹೋರಾಟದ ವಿಚಾರಗಳು ಹೆಚ್ಚು ಮಹತ್ವ ಪಡೆದವು. ಒಂದಲ್ಲ ಒಂದು ಕಾರಣದಿಂದ ಭಾರತದ ನೆಲದ ಮೇಲೆ ಆದ ಆಕ್ರಮಣಗಳು ಮತ್ತು ಅವುಗಳ ದುಷ್ಪರಿಣಾಮಗಳೇ ಹೆಚ್ಚು ಗಮನ ಸೆಳೆದವು. ಇಂತಹ ಏಕಪಕ್ಷೀಯ ವಿಚಾರಗಳಿಂದ ಇತಿಹಾಸವನ್ನು ಪ್ರತ್ಯೇಕಿಸಿ ಸಾಮಾಜಿಕ, ಆರ್ಥಿಕ, ವಾಣಿಜ್ಯ, ಕೈಗಾರಿಕೆ ಇತ್ಯಾದಿ ವಿಚಾರಗಳ ಬಗ್ಗೆ ಯಾರೂ ಹೆಚ್ಚು ಒತ್ತು ನೀಡುವ ಪ್ರಯತ್ನ ಮಾಡಿಲ್ಲವೆಂದು ಹೇಳುವುದು ಅನಿವಾರ್ಯವಾಗಿದೆ. ಮೇಲ್ವರ್ಗದವರ ಇತಿಹಾಸಕ್ಕಷ್ಟೇ ಸೀಮಿತಗೊಂಡಿರುವ ಇತಿಹಾಸದಲ್ಲಿ ಕೆಳವರ್ಗದವರ ಸೊಲ್ಲೇ ಕೇಳಿಸುವುದಿಲ್ಲ. ಆಕಸ್ಮಾತ್ ಯಾರಾದರೂ ಕೆಳವರ್ಗದವರ ಇತಿಹಾಸದ ಬಗ್ಗೆ ಚರ್ಚಿಸಿದರೆ ಅಂತಹವರಿಗೆ ಯಾವುದಾದರೂ ಒಂದು ಪಂಥದ ಪಟ್ಟ ಕಟ್ಟಿ, ಕಾಲೆಳೆಯುವ ಕೆಲಸ ಆರಂಭವಾಗುತ್ತದೆ. ಅಂತಹ ಸಂದರ್ಭದಲ್ಲಿ ಯಾವ ರೀತಿಯಲ್ಲೂ ಯಾವುದೇ ವಿಧವಾದ ಒಳಿತನ್ನು ಕಲ್ಪಿಸಿಕೊಳ್ಳಲೂ ಅವಕಾಶ ನೀಡದ ಇತಿಹಾಸ ಅಧ್ಯಯನ ಬೇಡವೇ ಬೇಡ ಎನಿಸುತ್ತದೆ. ಯಾರೇ ಆದರೂ ಇತಿಹಾಸದ ಜೊತೆಗೆ ಮತ್ತೇನನ್ನೋ ಸೇರಿಸುವುದು ಸರಿಯಲ್ಲ. ಇತಿಹಾಸದ ಹೆಸರಿನಲ್ಲಿ ನಡೆಯುವ ಹೋರಾಟ, ಗಲಭೆ ಇತ್ಯಾದಿಗಳು ಇತಿಹಾಸದ ಅಧ್ಯಯನ ಏಕೆ ಬೇಕು, ಎಂಬ ಪ್ರಶ್ನೆಯನ್ನು ಹುಟ್ಟುಹಾಕಿವೆ. ಜನತೆಯನ್ನು ವಿವಿಧ ಕಾರಣಗಳಿಂದ ಒಡೆಯುವಂತಹ ವ್ಯಾಖ್ಯಾನ ಇರುವ ಇತಿಹಾಸ ಯಾರಿಗೂ ಬೇಡ. ಸತ್ಯಕ್ಕೆ ಬೆಲೆ ಕೊಡದ ವ್ಯಾಖ್ಯಾನದ ಅವಶ್ಯಕತೆಯಾದರೂ ಏನು ? ಇತಿಹಾಸದ ರಚನೆಗಿಂತ ವಿರಚನೆಯೇ ಹೆಚ್ಚು ಸೂಕ್ತ ಎಂದು ಯಾರಿಗಾದರೂ ಅನಿಸಿದರೆ ಆಶ್ಚರ್ಯಪಡಬೇಕಾದ್ದಿಲ್ಲ. ಕೇವಲ ರಾಜಕೀಯ ಮತ್ತು ಅದರ ಜೊತೆಗೆ ಹೊಂದಿಕೊಂಡ ಇತಿಹಾಸ ಮಾತ್ರ ಇತಿಹಾಸವಲ್ಲ. ಸಮಗ್ರ ಇತಿಹಾಸದ ಅಧ್ಯಯನದ ಅವಶ್ಯಕತೆ ಇದೆ ಎಂದು ಮನಗಂಡು, ಹಿಂದೆ ಆಗಿರುವ ದುರಂತಗಳು ಮತ್ತೆ ಸಂಭವಿಸದಂತೆ ಕೇವಲ ಒಳ್ಳೆಯದು ಮಾತ್ರ ಇತಿಹಾಸದಲ್ಲಿ ಪುನರಾವರ್ತನೆಗೊಳ್ಳಲಿ ಎಂಬ ಸದಾಶಯ ಇತಿಹಾಸಕಾರನಿಗೆ ಇರಬೇಕಾದ್ದು ಅತ್ಯಂತ ಆವಶ್ಯಕ.



ಹಿಂದೆ ಭಾರತದ ಇತಿಹಾಸವನ್ನು ಬರೆದ

ಬ್ರಿಟಿಷರು ತಮ್ಮ ಆಳ್ವಿಕೆಯು ನಿರಂತರವಾಗಿ ಮುಂದುವರಿಯಲು ಅವಶ್ಯಕವಾದ ಕ್ರಮವನ್ನು ಅನುಸರಿಸಿದರು ಎಂದು ಆರೋಪ ಮಾಡುವುದಾದರೆ, ರಾಷ್ಟ್ರೀಯವಾದಿಗಳು ರಾಷ್ಟ್ರದ ಬಗ್ಗೆ ಜನತೆಯಲ್ಲಿ ಅಭಿಮಾನ, ಹೆಮ್ಮೆ ಮೂಡಬೇಕೆಂಬ ನಿರೀಕ್ಷೆಯಿಂದ ಮಾತ್ರ ಇತಿಹಾಸವನ್ನು ಬರೆದರು ಎಂದು ಆಕ್ಷೇಪಿಸುವುದಾದರೆ, ಸ್ವಾತಂತ್ರ್ಯ ಬಂದ ಮೇಲಾದರೂ ಸತ್ಯಕ್ಕೆ ಮಾತ್ರ ಬದ್ಧವಾದ ಇತಿಹಾಸ ರಚನೆ ಆಗಬೇಕಾಗಿತ್ತು. ಬಹುತೇಕ ಇದು ಸಾಧ್ಯವಾಗುವ ಅವಕಾಶಗಳನ್ನು ಈಗ ಕಳೆದುಕೊಂಡಿದ್ದೇವೆ ಎಂಬ ಅಂಜಿಕೆ ಆರಂಭವಾಗಿದೆ. ಈಗಲೂ ಇತಿಹಾಸವು ಪಂಪನ ಮಾತುಗಳಾದ 'ಜೋಳವಾಳಿ'ಯ ಕ್ರಮದಲ್ಲೇ ರಚನೆಯಾಗುತ್ತಿದೆ ಎಂದು ತಿಳಿಯಬೇಕಾಗುತ್ತದೆ. ಹಿಂದೆ ರಾಜ-ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಯಾರೋ ಒಬ್ಬ ರಾಜ, ಅಧಿಕಾರಿಯನ್ನು ಮೆಚ್ಚಿಸಿದ್ದರೆ ಸಾಕಾಗುತ್ತಿತ್ತು. ಆದರೆ ಈಗ ಆಳುವವರ ಸಂಖ್ಯೆ ಜಾಸ್ತಿ; ಅಧಿಕಾರಿಗಳ ಸಂಖ್ಯೆಯಂತೂ ಗಾಬರಿ ಹುಟ್ಟಿಸುವಷ್ಟು. ಆದ್ದರಿಂದ ಬಹುಸಂಖ್ಯೆಯಲ್ಲಿರುವ ಈ ಅಧಿಕಾರಿ ವರ್ಗವನ್ನು ತಣಿಸಲು, ಸಂತೋಷಪಡಿಸಲು, ಅವರು ಹೇಳಿದ ರೀತಿಯ ಇತಿಹಾಸವನ್ನು ರಚಿಸಬೇಕಾದ್ದು ಅನಿವಾರ್ಯ ಎನ್ನುವಂತಹ ಪರಿಸ್ಥಿತಿ ಬಂದಿದೆ. ಕಾಲದಿಂದ ಕಾಲಕ್ಕೆ ಅಧಿಕಾರಸ್ಥರೂ ಬದಲಾಗುವುದರಿಂದ, ಹೊಸದಾಗಿ ಅಧಿಕಾರಕ್ಕೆ ಬಂದವರು ತಮ್ಮ ಅಭಿರುಚಿಗೆ ತಕ್ಕಂತಹ ಅಥವಾ ತಮಗೆ ಪ್ರಿಯವಾಗುವಂತಹ ಅಥವಾ ತಮ್ಮನ್ನು ಆರಿಸಬಲ್ಲ ಜನರಿಗೆ ಪ್ರಿಯವಾಗುವಂತಹ ಇತಿಹಾಸ ರಚನೆಗೆ ಆದೇಶ ಹೊರಡಿಸಬಹುದು. ಆಳುವ ವರ್ಗದವರ ಮರ್ಜಿಗೆ ತಕ್ಕಂತೆ, ಅವರ ಆದೇಶದ ಪ್ರಕಾರ ರಚನೆಯಾಗುವ ಇತಿಹಾಸ ಸತ್ಯನಿಷ್ಠವಾಗಿರಲು ಸಾಧ್ಯವೇ ಇಲ್ಲ. ಬಂದೂಕಿನ ಅಥವಾ ಯಾವುದಾದರೂ ಆಯುಧದ ಮೊನಚು ತುದಿಯ ನಿರ್ದೇಶನದಂತೆ ರಚಿತವಾದ ಇತಿಹಾಸವು ಪ್ರಾಮಾಣಿಕವಾಗಿರಲು ಸಾಧ್ಯವಿಲ್ಲ. ಕಾಲದಿಂದ ಕಾಲಕ್ಕೆ ಸಂಶೋಧನೆಗಳಿಗಿಂತ ಹೆಚ್ಚಿಗೆ, ಆಳುವವರ ಮರ್ಜಿಗೆ ತಕ್ಕಂತೆ ಬದಲಾಗುವ ಇತಿಹಾಸವು ಕೇವಲ ಗೊಂದಲಗಳನ್ನು ಸೃಷ್ಟಿಸುತ್ತದೆ. ಅಂತಹ ಇತಿಹಾಸವನ್ನು ನಂಬಲಾಗಲೀ, ಅನುಸರಿಸಲಾಗಲೀ ಸಾಧ್ಯವಿಲ್ಲ. ಆಳುವವರ ಮರ್ಜಿಯ ಜೊತೆಗೆ ಯಾವುದೋ ನಿರೀಕ್ಷೆಗಳಿಂದ ಯಾವುದೇ ಧರ್ಮದವರ ಒಲವನ್ನು ಸಂಪಾದಿಸಲು ತಿರುಚಲಾಗುವ ಇತಿಹಾಸವು ಮತ್ತಷ್ಟು ಹಾನಿ ಮಾಡುವ ಅವಕಾಶಗಳಿರುತ್ತವೆ. ಇದರಿಂದ ಮನುಷ್ಯನ ನೆಮ್ಮದಿ ಹಾಳಾಗುವುದು ಸತ್ಯ. ಮನುಷ್ಯ ಆತಂಕದಲ್ಲಿಯೇ ಬದುಕಬೇಕಾಗುತ್ತದೆ. ಯಾವುದೇ ಸಂಘರ್ಷಕ್ಕೆ ಕಾರಣವಾಗದ, ಎಲ್ಲರ ಪ್ರೀತಿ, ವಿಶ್ವಾಸ ಮತ್ತು ನಂಬಿಕೆಗಳನ್ನು ಗಳಿಸುವ, ಸಾಮರಸ್ಯವನ್ನು ಸೃಷ್ಟಿಸುವ ಇತಿಹಾಸ ಈಗ ಬೇಕಾಗಿದೆ. ಇತಿಹಾಸದಿಂದ ತಿಳಿಯುವ ಸತ್ಯ ಎಷ್ಟೇ ಅಪ್ರಿಯವಾಗಿದ್ದರೂ, ಕಹಿಯಾಗಿದ್ದರೂ ಅದನ್ನೆಲ್ಲ ಸಹಿಸಿಕೊಂಡು, ಕಹಿ ಘಟನೆಗಳು ಮತ್ತೆ ಮರುಕಳಿಸದಂತಹ ಇತಿಹಾಸದ ಪುನರಾವರ್ತನೆಯನ್ನು ಬಯಸುವುದು ತಪ್ಪಲ್ಲ. ಯಾರನ್ನೇ ಆಗಲಿ ಗುಮಾನಿಯಿಂದ ಕಾಣುವ, ಅನುಮಾನಿಸುವ, ಭಯಪಡಿಸುವ ಅಥವಾ ಭಯಪಡುವ ಸ್ಥಿತಿ ನಿವಾರಣೆ ಆದರೆ ಇತಿಹಾಸದ ಅಧ್ಯಯನ ಸಾರ್ಥಕವಾಗುತ್ತದೆ. ಇಲ್ಲವಾದರೆ ಇತಿಹಾಸದ ಅಧ್ಯಯನ ಅವಶ್ಯಕವಲ್ಲ. ಇತಿಹಾಸದ ಅಧ್ಯಯನದಿಂದ ಹಾನಿಯಾಗುತ್ತದೆ ಎನಿಸಿದಾಗ ಅದರ ವಿರಚನೆಗೂ ಅವಕಾಶ ಕಲ್ಪಿಸಬೇಕಾದ್ದು ಜನರ ಕೆಲಸವಾಗುತ್ತದೆ. ಆದರೆ ಯಾವುದೇ ಆಳುವ ವರ್ಗ ಇಂತಹ ವಿರಚನೆಗೆ ಅವಕಾಶ ನೀಡುವುದಿಲ್ಲ; ಬದಲಿಗೆ ತಮಗೆ ಬೇಕಾದಂತಹ ಇತಿಹಾಸ ರಚನೆಗೆ ವೇದಿಕೆಗಳನ್ನು ಸಿದ್ಧಗೊಳಿಸುತ್ತಲೇ ಇರುತ್ತದೆ.

**ಡಾ|| ಎಚ್. ಎಸ್. ಗೋಪಾಲರಾವ್**

'ಸ್ವಸ್ತಿಶ್ರೀ ಸ್ಕಂದ', ಅರಿಶಿನ ಕುಂಟೆ, ನೆಲಮಂಗಲ ತಾಲ್ಲೂಕು - ೫೬೨ ೧೨೩

## ಪ್ರೊ|| ಜಿ. ಎಸ್. ದೀಕ್ಷಿತ್

೧. ಇತಿಹಾಸದ ಅಧ್ಯಯನದಲ್ಲಿ ಒಂದು ಕಾಲದಲ್ಲಿ ಸರಿಯಾದ ಅಧ್ಯಯನವಾಗುತ್ತಿತ್ತು, ಉಳಿದ ಕಾಲದಲ್ಲಿ ಆಗುತ್ತಿದ್ದಿಲ್ಲವೆಂದು ಹೇಳಲು ಬರುವುದಿಲ್ಲ. ಎಲ್ಲಾ ಕಾಲದಲ್ಲಿಯೂ ಎಲ್ಲಾ ತರಹದ ಇತಿಹಾಸಕಾರರು ಇರುತ್ತಾರೆ. ಎಲ್ಲಾ ಕಾಲದಲ್ಲಿಯೂ ಕೆಲವು ಇತಿಹಾಸಕಾರರು ಬರೆದಿದ್ದುದು ಎಲ್ಲರಿಗೂ ಒಪ್ಪಿಗೆಯಾಗುವ ರೀತಿಯಲ್ಲಿ ಬರೆದಿದ್ದೆಂದು ಹೇಳಬಹುದು. ಬ್ರಿಟಿಷರು ನಮ್ಮನ್ನು ಆಳುತ್ತಿದ್ದ ಕಾಲದಲ್ಲಿ ಅವರ ಇತಿಹಾಸಕಾರರಲ್ಲಿ ಬಹಳ ಬರಹಗಾರರು ಭಾರತೀಯರನ್ನು ಅವಹೇಳನ ಮಾಡುವ ರೀತಿಯಲ್ಲಿ ಬರೆಯುತ್ತಿದ್ದರು. ಅವರ ಉದ್ದೇಶ ಭಾರತದಲ್ಲಿ ಬ್ರಿಟಿಷ್ ಆಡಳಿತ ಅನೇಕ ಶತಮಾನಗಳು ಮುಂದುವರಿಯಬೇಕೆಂಬುದು. ಇದಕ್ಕೆ ಅವರು ಕೊಡುತ್ತಿದ್ದ ಕಾರಣ ಭಾರತೀಯರಲ್ಲಿ ಒಗ್ಗಟ್ಟಿಲ್ಲ, ಅವರಿಗೆ ತಮ್ಮನ್ನು ತಾವು ಆಳಿಕೊಳ್ಳುವುದು ಬರುವುದಿಲ್ಲ, ಎಂದು Stanley Lane-poole ಎನ್ನುವ ಇತಿಹಾಸಕಾರನು ಭಾರತೀಯರಿಗೆ ಸ್ವಾತಂತ್ರ್ಯ ಕೊಟ್ಟರೆ, ಅವರು ಒಬ್ಬ ಸರ್ವಾಧಿಕಾರಿಯನ್ನು ನೇಮಿಸಿ ಅವನ ಆಡಳಿತ ಎಷ್ಟು ಕೆಟ್ಟದ್ದರೂ, ಅದನ್ನು ಪ್ಲೇಗ್ ಅಥವಾ ಬರಗಾಲವನ್ನು ಹೇಗೆ ಸಹಿಸುತ್ತಾರೋ ಹಾಗೆ ತಮ್ಮ ದುರದೃಷ್ಟವೆಂದು ಸಹಿಸಿಕೊಳ್ಳುತ್ತಾರೆಂದು ಬರೆದಿದ್ದಾನೆ. ಅದೇ ಇತಿಹಾಸಕಾರನು ಹಿಂದೂಗಳೂ ಮುಸ್ಲಿಮರೂ ಎಂದೂ ಸ್ನೇಹ ಸೌಹಾರ್ದಗಳಿಂದ ಬಾಳುವುದಿಲ್ಲ; ಅವರು ಯಾವಾಗಲೂ ಒಬ್ಬರನ್ನೊಬ್ಬರು ದ್ವೇಷಿಸುತ್ತಾ ಬಡಿದಾಡುತ್ತಾರೆಂದೂ ಬರೆದಿದ್ದಾನೆ. ಹೀಗೆ ಬರೆಯುವುದರ ತಾತ್ಪರ್ಯ ಬ್ರಿಟಿಷರಿಲ್ಲದಿದ್ದರೆ ಭಾರತದಲ್ಲಿ ಶಾಂತಿ ಸ್ಥಾಪನೆ ಅಸಾಧ್ಯ, ಎಂದು. ಎಲ್ಲಾ ಬ್ರಿಟಿಷ್ ಇತಿಹಾಸಕಾರರೂ ಈ ರೀತಿ ಬರೆಯಲಿಲ್ಲ. ಅವರಲ್ಲಿ ಕೆಲವರು ಭಾರತೀಯರ ಇತಿಹಾಸವನ್ನು ಸರಿಯಾದ ರೀತಿಯಲ್ಲಿ ಬರೆದಿದ್ದಾರೆ. ಇಂಥವರಲ್ಲಿ A. L. Basham ಎನ್ನುವವನು ಪ್ರಮುಖ. ಅವನ ಪುಸ್ತಕ The Wonder that was India ಒಂದು ಒಳ್ಳೆಯ ಉದಾಹರಣೆ. ಇದರಲ್ಲಿ ಭಾರತೀಯ ಸಂಸ್ಕೃತಿಯ ಯಥಾವತ್ ವರ್ಣನೆ ಇದೆ.

ಅದೇ ಕಾಲದಲ್ಲಿ ಅನೇಕ ಭಾರತೀಯ ಇತಿಹಾಸಕಾರರು ತಮ್ಮ ದೇಶದ ಇತಿಹಾಸವನ್ನು ಬರೆದಿದ್ದಾರೆ. ಬ್ರಿಟಿಷರ ಬರವಣಿಗೆಗೆ ವಿರುದ್ಧವಾಗಿ ಇವರಲ್ಲಿ ಅನೇಕರು ತಮ್ಮ ದೇಶದ ಇತಿಹಾಸದಿಂದ ಜನರಲ್ಲಿ ದೇಶಾಭಿಮಾನ ಹೆಚ್ಚಾಗುವ ಉದ್ದೇಶದಿಂದ ಬರೆದಿದ್ದಾರೆ. Stanley Lane-poole ಬರೆದುದಕ್ಕೆ ವಿರುದ್ಧವಾಗಿ ಕೆ. ಪಿ. ಜಯಸ್ವಾಲರು ತಮ್ಮ Hindu Polity ಎನ್ನುವ ಪುಸ್ತಕದಲ್ಲಿ ಭಾರತೀಯರಿಗೆ ಪ್ರಜಾತಂತ್ರ ಸರ್ಕಾರದ

ಪರಿಚಯವಿತ್ತು; ಇವತ್ತಿನವರೆಗೂ ಅದನ್ನು ತಮ್ಮ ಪಂಚಾಯಿತಿಗಳಲ್ಲಿ ಉಳಿಸಿಕೊಂಡು ಬಂದಿದ್ದಾರೆಂದು ಬರೆದಿದ್ದಾರೆ. ಬ್ರಿಟಿಷ್ ಇತಿಹಾಸಕಾರರು ನಮ್ಮನ್ನು ಅವಹೇಳನೆ ಮಾಡುತ್ತಿದ್ದರೆ, ನಮ್ಮಲ್ಲಿ ಅನೇಕರು ನಮ್ಮ ಇತಿಹಾಸವನ್ನು ಸಂಸ್ಕೃತಿಯನ್ನು ವೈಭವೀಕರಿಸುತ್ತಿದ್ದರು. ಭಾರತೀಯ ಇತಿಹಾಸಕಾರರಲ್ಲಿ ಸಮತೋಲನದಿಂದ ಬರೆದವರೆಂದರೆ ಜದುನಾಥ ಸರ್ಕಾರರು. ಅವರು ತಮ್ಮ ಕಾಲದಲ್ಲಿ ಭಾರತೀಯ ಇತಿಹಾಸವನ್ನು ಸಾಧ್ಯವಿದ್ದಷ್ಟು ಇದ್ದಕ್ಕಿದ್ದ ಹಾಗೆ ಬರೆದಿದ್ದಾರೆಂದು ಹೇಳಬಹುದು. ಅವರು ಭಾರತೀಯರಿಂದಲೂ ಮತ್ತು ಬ್ರಿಟಿಷರಿಂದಲೂ ಏಕಕಾಲದಲ್ಲಿ ಮನ್ನಣೆಯನ್ನು ಪಡೆದರು. ಅವರು ಔರಂಗಜೇಬ ಮತ್ತು ಶಿವಾಜಿಯ ಬಗ್ಗೆ ಬರೆಯುವಾಗ ಇಬ್ಬರಲ್ಲಿಯೂ ಇದ್ದ ಕೆಟ್ಟದನ್ನು ಕೆಟ್ಟದೆಂದೂ ಮತ್ತು ಒಳ್ಳೆಯದನ್ನು ಒಳ್ಳೆಯದೆಂದೂ ಬರೆದಿದ್ದಾರೆ. ಅವರನ್ನು ಆದರ್ಶ ಇತಿಹಾಸಕಾರನೆಂದು ನಿಸ್ಸಂಕೋಚವಾಗಿ ಹೇಳಬಹುದು.

೨. ಧಾರ್ಮಿಕ ಸಂಘರ್ಷದ ಇತಿಹಾಸದ ಅಧ್ಯಯನಕ್ಕೆ ನಾವು ಕೊಡಬೇಕಾಗಿರುವ ಪ್ರಾಮುಖ್ಯತೆ ನಮ್ಮ ಪಾರತಂತ್ರ್ಯದ ಅವಶೇಷ. ಹಿಂದೂ-ಮುಸಲ್ಮಾನರಲ್ಲಿ ಬೇರೆ ಬೇರೆ ಧರ್ಮಗಳ ಮಧ್ಯ ಇರುವ ಹಾಗೆ ವ್ಯತ್ಯಾಸಗಳಿವೆ. ಹಿಂದೆ ಹೇಳಿದ ಹಾಗೆ ಬ್ರಿಟಿಷ್ ಆಳರಸರು ಇವುಗಳಿಗೇ ಮಹತ್ವವನ್ನು ಕೊಟ್ಟು ಅವು ಶಾಶ್ವತವಾಗಿ ಉಳಿಯುವ ಹಾಗೆ ಮತ್ತು ಹೆಚ್ಚಾಗುವ ಹಾಗೆ ಮಾಡಿದರು. ಈ ವ್ಯತ್ಯಾಸಗಳನ್ನು ಎಂತಹ ವಿಕೋಪಕ್ಕೆ ತೆಗೆದುಕೊಂಡು ಹೋದರೆಂದರೆ ಬ್ರಿಟಿಷರು ಈ ದೇಶವನ್ನು ಬಿಟ್ಟು ಹೋಗುವಾಗ ಪಾಕಿಸ್ತಾನ ಮತ್ತು ಭಾರತವೆನ್ನುವ ಎರಡು ಪ್ರತ್ಯೇಕ ರಾಷ್ಟ್ರಗಳನ್ನಾಗಿ ವಿಭಜಿಸುವುದು ಅನಿವಾರ್ಯವಾಯಿತು. ವಿಭಜನೆಯಿಂದ ಎರಡು ರಾಷ್ಟ್ರಗಳ ಮಧ್ಯ ಮತ್ತು ಭಾರತದಲ್ಲಿ ಹಿಂದೂ ಮುಸ್ಲಿಮರ ಮಧ್ಯ, ದ್ವೇಷ ಹೆಚ್ಚಾಯಿತೇ ವಿನಃ ಕಡಿಮೆಯಾಗಲಿಲ್ಲ. ಈ ದ್ವೇಷ ನಾಲ್ಕು ಯುದ್ಧಗಳಿಗೆ ಕಾರಣವಾಯಿತು. ಈ ಯುದ್ಧಗಳಿಂದ ದ್ವೇಷ ಮತ್ತು ಮತೀಯ ಘರ್ಷಣೆ ಇನ್ನೂ ಹೆಚ್ಚಾದವು. ಈ ಯುದ್ಧಗಳು ಮತ್ತು ಘರ್ಷಣೆಗಳು ಎರಡು ರಾಷ್ಟ್ರಗಳ ಆರ್ಥಿಕ ಪ್ರಗತಿಗೆ ಮಾರಕವೆಂದು ತಿಳಿದುಕೊಳ್ಳದ ಹೊರತು ಈ ಉಪಖಂಡ ಶಾಶ್ವತವಾಗಿ ಹಿಂದೆ ಉಳಿಯಬೇಕಾಗುತ್ತದೆ.

೩. ಮನುಷ್ಯರ ನೆಮ್ಮದಿಯನ್ನು ಕೆರಳಿಸುವ ಇತಿಹಾಸಕ್ಕೆ ಕಡಿವಾಣ ಅತ್ಯವಶ್ಯ. ಸಮಾಜದಲ್ಲಿರುವ ಬೇರೆ ಬೇರೆ ಮತಗಳು, ಭಾಷಿಕರು, ಬುಡಕಟ್ಟು ಜನಾಂಗದವರು, ದೀನ ದಲಿತರು– ಇವರಲ್ಲಿ ಸಾಮರಸ್ಯವನ್ನು ಉಂಟುಮಾಡುವ ಪ್ರಯತ್ನಗಳಿಗೆ ಸಮಾಜ-ಸರ್ಕಾರಗಳು ಪ್ರಯತ್ನ ಮಾಡಬೇಕೇ ವಿನಃ ಬ್ರಿಟಿಷರು ಮಾಡುತ್ತಿದ್ದಂತೆ, ಅವುಗಳ ವ್ಯತ್ಯಾಸಗಳನ್ನು ಹೆಚ್ಚಿಸುವುದಕ್ಕಲ್ಲ. ನೆಮ್ಮದಿ ಕೆಡಿಸುವ ಇತಿಹಾಸದಿಂದ ನಾವು ಭಾರತೀಯರು ಪ್ರಪಂಚದಲ್ಲಿ ಆರ್ಥಿಕ ಪ್ರಗತಿಯಲ್ಲಿ ಹಿಂದೆ ಉಳಿದಿದ್ದೇವೆ. ಅದರಲ್ಲಿಯೂ ದೀನ ದಲಿತರು, ಅಲ್ಪಸಂಖ್ಯಾತರು, ಮತ್ತು ಸ್ತ್ರೀಯರ ಅಭಿವೃದ್ಧಿಗೆ ವಿಪುಲ ಅವಕಾಶ ಅವಶ್ಯ.

ಈಗ ನಾವು ಬರೆಯುತ್ತಿರುವ, ಓದುತ್ತಿರುವ ಮತ್ತು ಪ್ರೋತ್ಸಾಹಿಸುತ್ತಿರುವ ಇತಿಹಾಸ ಮೇಲ್ವರ್ಗದವರ ಇತಿಹಾಸ. ಕೆಳವರ್ಗದವರ ಅಥವಾ subaltern ಇತಿಹಾಸಕ್ಕೆ ಕೊಡಬೇಕಾದ ಪ್ರಾಶಸ್ತ್ಯವನ್ನು ಕೊಡದೆ ಸಮಾಜದ ಏಳಿಗೆಗೆ ಘೋರ ಅನ್ಯಾಯವನ್ನು ಮಾಡಿದ್ದೇವೆ. ಎಷ್ಟು ಬೇಗನೆ ಈ ಅನ್ಯಾಯವನ್ನು ಸರಿಪಡಿಸುತ್ತೇವೆಯೋ ಅಷ್ಟು ಬೇಗನೆ ಸಮಾಜದಲ್ಲಿ ಸಮತೋಲನ, ಶಾಂತಿ ಮತ್ತು ಸಮೃದ್ಧಿಗಳು ಕಾಣಿಸಿಕೊಳ್ಳುತ್ತವೆ.

೪. ಭಾರತೀಯರು ಕಂಡುಹಿಡಿದ ಇತಿಹಾಸದ ಪಾಠ – ಧರ್ಮ, ಅರ್ಥ ಮತ್ತು ಕಾಮಗಳೆಂಬ ತ್ರಿವರ್ಗಗಳಲ್ಲಿ ಯಾವ ಒಂದಕ್ಕೆ, ಧರ್ಮಕ್ಕೆ ಆಗಲಿ, ಅರ್ಥಕ್ಕೆ ಆಗಲಿ, ಕಾಮಕ್ಕೆ ಆಗಲಿ, ಹೆಚ್ಚು ಪ್ರಾಶಸ್ತ್ಯ ಕೊಡುವುದು ತಪ್ಪು. ಎಲ್ಲಕ್ಕೂ ಅವುಗಳಿಗೆ ತಕ್ಕ ಸ್ಥಾನವನ್ನು ಕೊಡಬೇಕು. ಈ ಸ್ಥಾನವು ಯಾವುದೆನ್ನುವುದನ್ನು ನಮ್ಮ ಪೂರ್ವಜರು ನಿರ್ಧರಿಸಿದ್ದಾರೆ. ತ್ರಿವರ್ಗದಲ್ಲಿ ಕಾಮಕ್ಕಿಂತ ಅರ್ಥವು, ಅರ್ಥಕ್ಕಿಂತ ಧರ್ಮವೂ ಮುಖ್ಯವಾದುವು. ಆದರೆ ಧರ್ಮಕ್ಕೆ ಪ್ರಾಶಸ್ತ್ಯ ಕೊಟ್ಟು ಉಳಿದವುಗಳಿಗೆ ತಿಲಾಂಜಲಿ ಕೊಟ್ಟರೆ ಸಮಾಜದ ಸ್ವಾಸ್ಥ್ಯ ಉಳಿಯುವುದಿಲ್ಲವೆಂದೂ ಹೇಳಿದ್ದಾರೆ.

ಮೇಲೆ ಹೇಳಿರುವುದು ತಾತ್ವಿಕವಾಗಿ. ವಾಸ್ತವವಾಗಿ ಇತಿಹಾಸದಿಂದ ನಾವು ಕಲಿತಿರುವುದೇನು ? ಏನು ಕಲಿಯಬಹುದೆನ್ನುವುದನ್ನು ನೋಡಿ, ಅದನ್ನು ಕಲಿತಿದ್ದೇವೇನೋ ನೋಡೋಣ. ಪ್ರವಾಸದಿಂದ ಹೇಗೆ ನಾವು ಬೇರೆ ಬೇರೆ ಜನರ ನಡವಳಿಕೆಗಳನ್ನು, ಆಶೆ ಆಕಾಂಕ್ಷೆಗಳನ್ನು ತಿಳಿದುಕೊಳ್ಳುತ್ತೇವೆಯೋ ಹಾಗೆ ಇತಿಹಾಸದಿಂದ ನಮ್ಮ ಹಿಂದಿನ ಪೀಳಿಗೆಯವರ ನಡೆ-ನುಡಿಗಳನ್ನು ತಿಳಿದು, ಅವರು ಮಾಡಿದ ತಪ್ಪನ್ನು ನಾವು ಪುನಃ ಮಾಡಬಾರದೆನ್ನುವುದನ್ನು ಕಲಿಯಬೇಕು. ಹಾಗೆ ನಾವು ಮಾಡುತ್ತೇವೆಯೇ? ಒಬ್ಬ ವ್ಯಕ್ತಿಯ ವಿಷಯದಲ್ಲಿ ಈ ಪ್ರಶ್ನೆಗೆ ಹೆಚ್ಚು ಖಚಿತವಾದ ಉತ್ತರವನ್ನು ಹೇಳಬಹುದು. ಒಬ್ಬ ಮನುಷ್ಯನು ತಾನು ಹಿಂದೆ ಮಾಡಿದ ತಪ್ಪನ್ನು ಮುಂದೆ ಸಾಧಾರಣವಾಗಿ ಮಾಡುವುದಿಲ್ಲ, ಅನುಭವದಿಂದ ಕಲಿಯಲು ಸಾಧ್ಯವಿರುತ್ತದೆ. ಎಂತಲೆ, ಮನುಷ್ಯನೆನಿಸಿಕೊಳ್ಳುತ್ತಾನೆ. ಒಂದು ಸಮಾಜದ ವಿಷಯದಲ್ಲಿ– ರಾಷ್ಟ್ರಗಳ ವಿಷಯ ಡಲ್ಲಿ ಅವು ಇತಿಹಾಸದಿಂದ ಅಥವಾ ಅನುಭವದಿಂದ ಪಾಠ ಕಲಿತಿವೆಯೋ ಎಂದು ಕೇಳಿದರೆ ಇಲ್ಲವೆಂದು ಹೇಳಬೇಕಾಗುತ್ತದೆ. ಇಲ್ಲದೆ ಹೋದರೆ, ಯುದ್ಧಗಳಿಂದ ಆಗುವ ಅನಾಹುತಗಳು, ಮತೀಯ ಘರ್ಷಣೆಗಳಿಂದ ಆಗುವ ಸಾವು-ನೋವುಗಳು ಎಲ್ಲರಿಗೂ ಗೊತ್ತಿದ್ದರೂ ಅವನ್ನು ನಾಶ ಮಾಡುವುದು ಯಾರಿಂದಲೂ ಆಗಿಲ್ಲ. ಆದ್ದರಿಂದ ಅವು ಎಲ್ಲಾ ಕಾಲದಲ್ಲಿಯೂ ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ನಡೆದೇ ಇವೆ. ಅದಕ್ಕೇ History repeats itself ಎಂದು ಹೇಳುತ್ತಾರೆ.



೫. ೧೯೯೨ನೇ ಇಸ್ವಿ ಡಿಸೆಂಬರ್ ೬ನೇ ತಾರೀಖಿನಂದು ಬಾಬ್ರಿ ಮಸೀದಿಯನ್ನು ಕೆಡವಿದ್ದು ಹಿಂದೂ-ಮುಸ್ಲಿಮರು ಒಗ್ಗೂಡುವ ಪ್ರಯತ್ನಕ್ಕೆ ಕೊಡಲಿಪೆಟ್ಟಾಯಿತು. ಆದರೂ ಅದರಿಂದ ಒಂದು ಕಠಿಣ ಪ್ರಶ್ನೆಗೆ ಉತ್ತರ ಸಿಕ್ಕಿದೆ. ಅದೇ ಈ ಪ್ರಶ್ನೆ – ದಾಖಲೆಗಳು ಹೇಳುವ ಸತ್ಯವನ್ನು ಒಪ್ಪಿಕೊಳ್ಳಲು ಇರುವ ಕಷ್ಟವೇನು? ಮಸೀದಿಯ ಗೋಡೆಗಳು ನೆಲಸಮವಾದ್ದರಿಂದ ಅವುಗಳಲ್ಲಿ ಅಡಕವಾಗಿದ್ದ ದೇವಸ್ಥಾನದ ಶಿಲ್ಪಗಳು ಮತ್ತು ಮೂರು ಶಾಸನಗಳು ಪುರಾತತ್ವ ತಜ್ಞರ ಅಭ್ಯಾಸಕ್ಕೆ ಲಭ್ಯವಾದವು. ಅದರಲ್ಲಿ ಒಂದು ಶಾಸನವನ್ನು ಪ್ರಸಿದ್ಧ ಶಾಸನ ವಿಜ್ಞಾನ ತಜ್ಞ ಡಾ॥ ಅಜಯ ಮಿತ್ರ ಶಾಸ್ತ್ರಿಯವರು ಅರ್ಥೈಸಿದ್ದಾರೆ. ಈ ಶಾಸನ ಕುರಿತ ಅವರ ಲೇಖನ Indian Archaeological Society ಯ 'ಪುರಾತತ್ವ' ಎನ್ನುವ ನಿಯತ ಕಾಲಿಕದ ೨೩ನೇ ಸಂಪುಟ (೧೯೯೨-೯೩) ಪು. ೫೩ರಲ್ಲಿ ಪ್ರಕಟವಾಗಿದೆ. ಅದರ ಸಾರಾಂಶ, ೧೯೯೮ನೇ ಇಸ್ವಿಯ ಜುಲೈ ೧೪ರ 'ಹಿಂದೂ' ಪತ್ರಿಕೆಯಲ್ಲಿ ಬಂದಿದೆ. ಅದರ ಆಧಾರದ ಮೇಲೆ ಮುಂದೆ ಹೇಳುವ ಮಾಹಿತಿಯನ್ನು ಕೊಡಲಾಗಿದೆ. ೧೧-೧೨ನೇ ಶತಮಾನದ ಶುದ್ಧ ನಾಗರೀ ಲಿಪಿಯಲ್ಲಿ ಸಂಸ್ಕೃತ ಭಾಷೆಯ ಈ ಶಾಸನವನ್ನು ಬರೆಯಲಾಗಿದೆ: ವಿಷ್ಣು-ಹರಿಗೆ ಒಂದು ಸುಂದರವಾದ ದೇವಸ್ಥಾನವನ್ನು ಕಲ್ಲಿನಲ್ಲಿ ಇಲ್ಲಿ ಕಟ್ಟಲಾಗಿದೆ. ಅದಕ್ಕೆ ಆಕರ್ಷಕವಾದ ಬಂಗಾರದ ಕಳಸವನ್ನು ಇಡಲಾಗಿದೆ. ಇಂತಹ ದೇವಸ್ಥಾನವನ್ನು ಹಿಂದೆ ಯಾರೂ ಕಟ್ಟಿಲ್ಲ. ಇಂತಹ ಅದ್ಭುತ ದೇವಸ್ಥಾನವನ್ನು ಸಾಕೇತ ಮಂಡಳದ ಅನೇಕ ದೇವಸ್ಥಾನಗಳಿಂದ ಅಲಂಕೃತವಾದ ಅಯೋಧ್ಯೆಯಲ್ಲಿ ಕಟ್ಟಲಾಗಿದೆ.

ಮೇಲೆ ಹೇಳಿದ ಶಾಸನದ ವಿಶ್ಲೇಷಣೆ ಅನವಶ್ಯಕ. ಅದು ಬಾಬ್ರಿ ಮಸೀದಿಯ ಗೋಡೆಯೊಳಗೆ ಸಿಕ್ಕಿರುವುದರಿಂದ, ಆ ಶಾಸನದಲ್ಲಿ ಕಟ್ಟಲಾಗಿದೆಯೆಂದು ಹೇಳಿದ ದೇವಸ್ಥಾನವಿದ್ದ ಸ್ಥಳದಲ್ಲಿ ಮಸೀದಿಯನ್ನು ಕಟ್ಟಲಾಯಿತೆನ್ನುವುದು ಸುಸ್ಪಷ್ಟ. ಆ ದೇವಸ್ಥಾನವನ್ನು ಕಟ್ಟಿದ ವಿವರಗಳನ್ನು ಹೇಳುವ ಶಾಸನವನ್ನು ಅದೇ ದೇವಸ್ಥಾನದ ಸ್ಥಳದಲ್ಲಿ ನಂತರ ಮಸೀದಿಯನ್ನು ಕಟ್ಟಲಾಗಿದೆ. ಈ ರೀತಿ ಮಸೀದಿ ಮತ್ತು ದೇವಸ್ಥಾನಕ್ಕೂ ಇರುವ ಸಂಬಂಧ ಇಷ್ಟು ಸ್ಪಷ್ಟವಾಗಿ ಇರುವಾಗ ಪುನಃ ಉತ್ಖನನ ಅನವಶ್ಯಕವಾಗಿತ್ತು. ಆ ಶಾಸನದ ಖಚಿತತೆಯ ಬಗ್ಗೆ ಮತ್ತು ಡಾ॥ ಅಜಯ ಮಿತ್ರ ಶಾಸ್ತ್ರಿಯವರ ವಿಶ್ಲೇಷಣೆ ಬಗ್ಗೆ ಶಾಸನ ವಿಜ್ಞಾನ ತಜ್ಞರು ಹೇಳಬಲ್ಲರೇ ವಿನಃ ನ್ಯಾಯಾಧೀಶರಾಗಲಿ, ರಾಜಕಾರಣಿಗಳಾಗಲಿ, ಧಾರ್ಮಿಕ ಮುಖಂಡರುಗಳಾಗಲಿ ಹೇಳಲಾಗುವುದಿಲ್ಲ.



ಕೊನೆಯದಾಗಿ ಶಾಸನಗಳು ಎಷ್ಟು ಖಚಿತವೆನ್ನುವುದನ್ನು ಸಾರ್ವಜನಿಕರು ತಿಳಿದುಕೊಳ್ಳುವುದು ಅವಶ್ಯ. ಈಗ ಸಬ್‌ರಿಜಿಸ್ಟ್ರಾರರ ಕಚೇರಿಯಲ್ಲಿ ಆಸ್ತಿಗಳ ಮಾಲಿಕತ್ವದ ಬಗ್ಗೆ ಹೇಗೆ ದಾಖಲೆಗಳನ್ನು ಕಾದಿರಿಸಿಟ್ಟಿರುತ್ತಾರೆಯೋ



ಹಾಗೆ ಪ್ರಾಚೀನ ಭಾರತದಲ್ಲಿ ಕಲ್ಲಿನ ಶಾಸನಗಳು ಆ ಕೆಲಸವನ್ನು ಮಾಡುತ್ತಿದ್ದವು. ಆಗಿನ ಕಾಲದಲ್ಲಿ ಸರ್ಕಾರಗಳು ಆಸ್ತಿಗಳ ಮಾಲಿಕತ್ವದ ಬಗ್ಗೆ ಮೂರು ಪ್ರತಿಗಳನ್ನು ಕಾಪಾಡಿಕೊಂಡು ಬರುತ್ತಿದ್ದವು. ಮೂಲ ಹಸ್ತಪ್ರತಿ ತಾಳೆಗರಿ ಅಥವಾ ಭೂರ್ಜ ಪತ್ರದ ಮೇಲಿರುತ್ತಿತ್ತು. ಇದನ್ನು ಶಾಸನಾಧಿಕಾರಿಯ ಕಚೇರಿಯಲ್ಲಿ ಇಟ್ಟಿರುತ್ತಿದ್ದರು. ಅದನ್ನು ನೋಡಿ ರೂವಾರಿ ಅಥವಾ ಶಿಲ್ಪಿ ಕಲ್ಲಿನ ಮೇಲೆ ಪ್ರತಿ ಮಾಡುತ್ತಿದ್ದರು. ಅದು ದೇವಸ್ಥಾನಕ್ಕೆ ಸಂಬಂಧಿಸಿದ್ದರೆ, ಆ ದೇವಸ್ಥಾನದ ಗೋಡೆಯ ಮೇಲಿರುತ್ತಿತ್ತು. ಇತರರಿಗೆ ಸಂಬಂಧಿಸಿದ್ದರೆ ಸಾರ್ವಜನಿಕ ಸ್ಥಳದಲ್ಲಿ ಇರುತ್ತಿತ್ತು. ಪಂಡಿತನಿಗೆ ಸರ್ಕಾರ ದಾನವಾಗಿ ಭೂಮಿಯನ್ನು ಕೊಟ್ಟಿದ್ದರೆ, ಒಂದು ಪ್ರತಿಯನ್ನು ತಾಮ್ರದ ಹಲಗೆಯ ಮೇಲೆ ಪ್ರತಿ ಮಾಡಿ ಅದನ್ನು ಪಂಡಿತರಿಗೆ ಕೊಡಲಾಗುತ್ತಿತ್ತು. ಇಂತಹ ತಾಮ್ರ ಶಾಸನಗಳಲ್ಲಿ ನಕಲಿ ಶಾಸನಗಳು ಆಗಿರುವ ಸಾಧ್ಯತೆ ಇದೆ. ಆದರೆ ಕಲ್ಲಿನ ಶಾಸನದಲ್ಲಿ ನಕಲಿ ಶಾಸನಗಳ ಉದಾಹರಣೆಗಳು ಇಲ್ಲ. ಇಂತಹ ಖಚಿತ ಶಾಸನವನ್ನು ಡಾ|| ಅಜಯ ಮಿತ್ರ ಶಾಸ್ತ್ರಿಗಳಂತಹ ತಜ್ಞರು ಓದಿದ ಮೇಲೆ ಅವರ ನಿರ್ಣಯವನ್ನು ಪ್ರಶ್ನಿಸುವವರು ಸಿಗುವುದು ಕಠಿಣವೆಂದು ಹೇಳಬಹುದು.

**ಪ್ರೊ|| ಜಿ. ಎಸ್. ದೀಕ್ಷಿತ್**, ನಿವೃತ್ತ ಪ್ರಾಧ್ಯಾಪಕರು, ೧, ಸ್ವಸ್ತಿ ನವೋದಯ ನಗರ, ಧಾರವಾಡ

## ಡಾ|| ಬಿ. ಷೇಕ್ ಅಲಿ

೧. ಅಪರೂಪವಾಗಿ ಆಗಿದೆ. ಥುಸಿಡೈಡಿಸ್ ಪರ್ಷಿಯನ್ನರ ವಿರುದ್ಧದ ಗ್ರೀಕ್ ಯುದ್ಧಗಳ ಬಗ್ಗೆ ಬರೆದಾಗ ವಾಸ್ತವವಾದಿಯಾಗಿದ್ದ. ವೈಜ್ಞಾನಿಕ ಇತಿಹಾಸದ ಪಿತಾಮಹ ಎನಿಸಿಕೊಂಡ ರಾಂಕೆ, ತಾನು ಜರ್ಮನನಾಗಿದ್ದರೂ ಫ್ರೆಂಚರ ಬಗ್ಗೆ ಬರೆದಾಗ ಯಾವ ಫ್ರೆಂಚನೂ ಅದರಲ್ಲಿ ತಪ್ಪುಗಳನ್ನು ಕಾಣಲಿಲ್ಲ. ನಮ್ಮ ದೇಶದಲ್ಲೂ ಜದುನಾಥ್ ಸರ್ಕಾರ್, ತಾರಾಚಂದ್, ಬಿ. ಎನ್. ಪಾಂಡೆ, ತ್ರಿಪಾಠಿ, ಮೊಹಮದ್ ಹಬೀಬ್ (ಇರ್ಫಾನ್ ಹಬೀಬ್‌ನ ತಂದೆ), ಷಾಫತ್ ಅಹಮದ್ ಖಾನ್ ಮತ್ತು ಇಷ್ತಿಕ್ ಹುಸೇನ್ ಖುರೇಷಿ ಅವರು ಇತಿಹಾಸವನ್ನು ಬರೆದಿದ್ದಾರೆ. ಯಾರೂ ಅವರಲ್ಲಿ ತಪ್ಪುಗಳನ್ನು ಕಂಡಿಲ್ಲ. ಮುಖ್ಯ ವಿಷಯವೆಂದರೆ ಹೆಚ್ಚು ಅಥವಾ ಕಡಿಮೆ ಎನ್ನದಂತೆ ಇತಿಹಾಸವೂ ವಿಜ್ಞಾನ. ಸತ್ಯವನ್ನು ಹೊರಗೆ ತರುವುದೇ ಅದರ ಉದ್ದೇಶ. ಯಾವುದೇ ಪೂರ್ವಾಗ್ರಹದ ಅಡೆತಡೆ ಇಲ್ಲದ ವಾಸ್ತವದ ಪ್ರತಿಫಲನವೇ ಸತ್ಯ. ಇತಿಹಾಸದ ಸತ್ವವನ್ನು ಮರೆತವರು ತಪ್ಪು ದಾರಿಗಿಳಿಯುತ್ತಾರೆ.

೨. ಏಕೆಂದರೆ ಧರ್ಮವು ಮನುಷ್ಯ ಮತ್ತು ದೇವರ ನಡುವಿನ ಸಂಪರ್ಕ ಬಿಂದು. ಮನುಷ್ಯನ ಅಂತರ್ಯದಲ್ಲಿರುವ ದೇವರನ್ನು ಬಹಿರಂಗಗೊಳಿಸುವುದೇ ಧರ್ಮ. ವಿಶೇಷವಾಗಿ ಪ್ರೀತಿ, ಸೌಂದರ್ಯ, ನ್ಯಾಯ ಮತ್ತು ಸೃಜನಾತ್ಮಕತೆಯಲ್ಲಿ ಮನುಷ್ಯನನ್ನು ದೇವರ ಸಂಗಾತಿ ಮಾಡುವುದೇ ಧರ್ಮ. ಧರ್ಮದ ದುರ್ಬಳಕೆ ಅಥವಾ ಇತಿಹಾಸದ ನಿಂದನೆಯು ಧರ್ಮ ಅಥವಾ ಇತಿಹಾಸದ ತಪ್ಪುಗಳಲ್ಲ.

೩. ಇಲ್ಲ, ಅಂತಹ ಇತಿಹಾಸದ ಅವಶ್ಯಕತೆ ಇಲ್ಲ; ಆದರೆ ಇತಿಹಾಸವನ್ನೇ ತಿರಸ್ಕರಿಸಬೇಕಾಗಿಲ್ಲ. ಇತಿಹಾಸವು ಮನುಷ್ಯನ ನೆನಪು. ನೆನಪುಗಳು ಕಳೆದುಹೋದರೆ ಮನುಷ್ಯ ಸದಾ ಮಗುವಾಗಿರುತ್ತಾನೆ. ಇತಿಹಾಸವು ಮನುಷ್ಯ ಜನಾಂಗದ ಅನುಭವಗಳು. ಉದಾಹರಣೆಗಳ ಮೂಲಕ ಬೋಧಿಸುವ ತತ್ವವೇ ಇತಿಹಾಸ. ಘಟನೆಗಳೆಂಬ ಉಡುಪನ್ನು ಧರಿಸಿರುವ ಮನಸ್ಸೇ ಇತಿಹಾಸ. ಭವಿಷ್ಯದ ಬೀಜಗಳು ಭೂತಕಾಲದಲ್ಲಿ ಹುದುಗಿರುತ್ತವೆ. ಇತಿಹಾಸವನ್ನು ಕಡೆಗಣಿಸಿದವರು ಅದಕ್ಕೆ ಪುನರ್ಜೀವ ಕೊಡಲೂ ಸಾಧ್ಯವಿಲ್ಲ.

೪. ಧಾರ್ಮಿಕ ಇತಿಹಾಸವು ಸಮಗ್ರ ಇತಿಹಾಸದ ಒಂದು ಭಾಗ; ಉದ್ದವಾದ ಸರಪಳಿಯ ಒಂದು ಕೊಂಡಿ. ಮನುಷ್ಯನ ಅನುಭವಗಳ ಸಮಗ್ರ ವ್ಯಾಪ್ತಿಯೇ ಇತಿಹಾಸ. ಕಲೆ, ಸಾಹಿತ್ಯ, ತತ್ವಶಾಸ್ತ್ರ, ಸಂಗೀತ, ಸಮಾಜ, ಆರ್ಥಿಕತೆ, ರಾಜಕೀಯ ಮತ್ತು ಮನುಷ್ಯನ ಇತರ ಪ್ರಮುಖ ಕ್ರಿಯೆಗಳ ಜೊತೆಗೆ ಮನುಷ್ಯನ ಬದುಕಿನಲ್ಲಿ ಧರ್ಮವೂ

ಸಹ ಪ್ರಮುಖ ಪಾತ್ರ ವಹಿಸುತ್ತದೆ. ಧರ್ಮವನ್ನು ಮರೆತರೆ, ಬಹುಶಃ ನೀತಿ ಮತ್ತು ನಡತೆಗಳು ಹಿಂದೆ ಸರಿಯುತ್ತವೆ. 'ನೈತಿಕತೆ'ಯನ್ನು ಹೇಗೆ ವ್ಯಾಖ್ಯಾನಿಸಲಾಗುತ್ತದೆ ಎಂಬುದನ್ನು ಇದು ಅವಲಂಬಿಸುತ್ತದೆ. ಪ್ಲೇಟೋನ ಪ್ರಕಾರ ನೈತಿಕತೆಯು ಸಾಮರಸ್ಯ. ಜೀಸಸ್‌ನ ಪ್ರಕಾರ ಸಹಾನುಭೂತಿ. ಪ್ರವಾದಿ ಮಹಮದ್ ಹೇಳಿರುವಂತೆ ನೈತಿಕತೆಯು ದೈವಿಕತೆಯ ಪ್ರತಿಫಲನ. ನೀತ್ಸೆಯ ಪ್ರಕಾರ ನೈತಿಕತೆಯು ಬಲ, ಶಕ್ತಿ, ಸಾಮರ್ಥ್ಯ. ಇತ್ತೀಚಿನ ದಿನಗಳಲ್ಲಿ ನೈತಿಕತೆಯು ತನ್ನ ಅರ್ಥವನ್ನು ಕಳೆದುಕೊಂಡಿದೆ.

೫. ತೆಗೆದುಕೊಳ್ಳಬೇಕಾದ ಬಹುಮುಖ್ಯ ಎಚ್ಚರಿಕೆ ಎಂದರೆ, ದಾಖಲೆಗಳ ನೈಜತೆ ಮತ್ತು ಪ್ರಾಮಾಣಿಕತೆ. ನ್ಯಾಯಾಲಯಗಳಲ್ಲಿ ಮೊಕದ್ದಮೆಗಳು ದೀರ್ಘಕಾಲ ವಿಳಂಬ ಆಗುವುದು ಏಕೆಂದರೆ ನ್ಯಾಯಾಧೀಶನು ಸತ್ಯವನ್ನು ಸ್ಥಾಪಿಸಲು ಪ್ರಯತ್ನಿಸುತ್ತಾನೆ. ಇತಿಹಾಸವು ಪ್ರಮುಖ ನ್ಯಾಯಾಧೀಶ. ಅದು ನ್ಯಾಯವಾದಿಗಳನ್ನು ಅವಲಂಬಿಸಲು ಸಾಧ್ಯವಿಲ್ಲ. ಬಹುತೇಕ ದಾಖಲೆಗಳು ಒಂದಲ್ಲ ಒಂದು ದೃಷ್ಟಿಯನ್ನು ಸಮರ್ಥಿಸುತ್ತವೆ. ಅದೇ ತೊಂದರೆ.

ಡಾ|| ಬಿ. ಷೇಕ್ ಅಲಿ

ವಿಶ್ರಾಂತ ಉಪಕುಲಪತಿಗಳು, ಮಂಗಳೂರು ಮತ್ತು ಗೋವಾ ವಿಶ್ವವಿದ್ಯಾಲಯ, ಬೆಂಗಳೂರು

## ಪ್ರೊ|| ಎಸ್. ಶೆಟ್ಟರ್

೧. ವಿಶ್ವದ ನಾಡಿನ ಹಾಗೂ ಸ್ಥಳೀಯ ಇತಿಹಾಸ ಅಧ್ಯಯನಗಳು ಸಾಗಿರುವ ಬಗೆಯಲ್ಲಿ ದಿಕ್ಕು ಕೆಡಿಸುವಷ್ಟು ಅಂತರವನ್ನು ಕಾಣುವೆವು. ಯಾವ ಇತಿಹಾಸವು (ವಿಶ್ವದ ಇತಿಹಾಸ) ನಮಗೆ ಅಪರೋಕ್ಷ ಪ್ರಸ್ತುತವೋ ಅದರಲ್ಲಿ ಕಾಣುವಂತಹ ಸ್ಥೂಲ ಬಗೆಯ ಸಮಾಧಾನವು ಪರೋಕ್ಷ ಪ್ರಸ್ತುತವಾದ (ನಾಡಿನ, ಸ್ಥಳೀಯ) ಇತಿಹಾಸದಲ್ಲಿ ನಮಗೆ ಕಾಣಸಿಗುವುದಿಲ್ಲ. ಇದರಿಂದಾಗಿ ಇತಿಹಾಸ-ಅಧ್ಯಯನದಲ್ಲಿ 'ನಿಶ್ಚಿತ' ಎನ್ನಬಹುದಾದ ಒಂದು ದಿಕ್ಕಿದೆಯೇ ಎಂಬ ಪ್ರಶ್ನೆ ಸಹಜವಾಗಿ ಉದ್ಭವಗೊಳ್ಳುವುದು. ಆದರೂ, ಇತಿಹಾಸಕಾರನು ಸರಿಯಾದ ದಿಕ್ಕಿನಲ್ಲಿ ಸಾಗದಿದ್ದರೆ ಆಗುವ ಆತಂಕಗಳನ್ನು ಮನದಟ್ಟು ಮಾಡಿಕೊಡಬಲ್ಲ ಇತಿಹಾಸವು ನಮ್ಮಿಂದ ಬಹುದೂರವಿಲ್ಲವೆಂದೇ ಹೇಳಬೇಕಾಗುವುದು.

ಈ ಪ್ರಶ್ನೆಯಲ್ಲಿ ಮೂರು ಮೂಲ ಪದಗಳಿವೆ. ಅವು – 'ಅಧ್ಯಯನ', 'ಎಂದಾದರೂ', 'ಸರಿಯಾದ ದಿಕ್ಕು.' ಇವುಗಳಲ್ಲಿ ಮೂರನೆಯದಕ್ಕೆ ಪ್ರಮುಖ ಸ್ಥಾನ ಕೊಡುವುದವಶ್ಯ.

ಇತಿಹಾಸವನ್ನು ಪೋಷಿಸುವ ಪರಂಪರೆಯು ನಮ್ಮ ನಾಡಿನಲ್ಲಿ ಅತಿ ಪುರಾತನ ಕಾಲಕ್ಕೆ ಹೋಗಬಹುದಾದರೂ, ಆಧುನಿಕ ಬಗೆಯ ಇತಿಹಾಸ ರಚನೆಗೆ ಇನ್ನೂ ಎರಡು ನೂರು ವರ್ಷ ತುಂಬಿಲ್ಲವೆಂದೇ ಹೇಳಬೇಕು. ಈ ಎರಡು ಶತಮಾನಗಳಲ್ಲಿ ಸುಮಾರು ಒಂದು ಶತಮಾನ ಕಾಲವನ್ನು ನಾವು ಆಕರಗಳನ್ನು ಹುಡುಕುವುದರಲ್ಲಿ, ಇನ್ನರ್ಧ ಶತಮಾನವನ್ನು ವೈಜ್ಞಾನಿಕ ವಿಧಾನಕ್ರಮವನ್ನು ಕಂಡುಕೊಳ್ಳುವುದರಲ್ಲಿ ಕಳೆದಿದ್ದೇವೆ. ಇಪ್ಪತ್ತನೆಯ ಶತಮಾನದಲ್ಲಿ ಆರಂಭಗೊಂಡ ನಮ್ಮ ಕಾರ್ಯವು ಸ್ವಾತಂತ್ರ್ಯ ಆಂದೋಲನ, ಭಾಷಾವಾರು ಪ್ರಾಂತರಚನೆಯ ಆಕಾಂಕ್ಷೆ ಮುಂತಾದುವುಗಳಿಂದ ಸಾಕಷ್ಟು ಪ್ರಭಾವಗೊಂಡು, ಒಂದು ಬಗೆಯ ದಿಕ್ಕನ್ನು ಕಂಡುಕೊಂಡಿತು. ಆಗ ಹಿಡಿದ ಜಾಡು ಅಂದಿಗೆ ಸರಿ ಎನಿಸಿದರೂ, ಮುಂದೆ ಅದರ ಬಗ್ಗೆ ಅನುಮಾನಗಳು ಹುಟ್ಟತೊಡಗಿದವು. ಉತ್ಕಟತೆ ಮತ್ತು ಭಾವಾವೇಶ ಕಡಿಮೆಯಾಗಿ, ನಿಧಾನವಾಗಿ ನಮ್ಮ ನಿಲುವನ್ನು - ದಿಶೆಯನ್ನು ನಾವು ನಿರ್ಧರಿಸಿಕೊಳ್ಳಬೇಕಾದ ಹಂತವನ್ನು ಈಗ ಮುಟ್ಟತೊಡಗಿರುವೆವು. ಅದು ಅಷ್ಟೊಂದು ಸುಲಭ ಕಾರ್ಯವಲ್ಲವೆಂಬುದನ್ನು 'ಉತ್ಕಟತೆ', 'ಭಾವಾವೇಶ'ದಿಂದ ದೂರ ಸರಿಯುವುದು ಎಷ್ಟು ಕಷ್ಟಕರ ಎಂಬುದನ್ನು ಈಗ ನಾವು ಮನಗಾಣುತ್ತಲಿರುವೆವು. ಕನ್ನಡಿಯಲ್ಲಿ ನಮ್ಮ ಮುಖವನ್ನು ಮಾತ್ರ ಕಾಣುವ ಹಂಬಲವು ನಮ್ಮನ್ನು ನಾವು ಪರಿಪೂರ್ಣವಾಗಿ ಅರಿತುಕೊಳ್ಳಲು ಅಡ್ಡಿ ಬರುತ್ತಲಿದೆ ಎಂಬುದನ್ನು ನಾವು ಗುರುತಿಸಿಕೊಳ್ಳಬೇಕಾಗಿದೆ.

ಅಂದರೆ, ಅಂದಾಗಲೀ-ಇಂದಾಗಲೀ (ಎಂದಾಗಲೀ) ನಾವು ಮಾಡಿದ-ಮಾಡಲೆಣಿಸಿದ ಅಧ್ಯಯನವು ಸರಿಯಾದ ದಿಕ್ಕನ್ನು ಗುರುತಿಸಿಕೊಂಡು ಮುಂದುವರಿದಿದೆಯೇ ಎಂಬ ಅನುಮಾನ ಬರುವುದು ಅನಿವಾರ್ಯ. ಈ 'ಅನುಮಾನ' ಮೇಲಿಂದ ಮೇಲೆ ಬರುವುದೊಂದೇ ಸಮಾಧಾನ ತರುವ ಸಂಗತಿ – ಏಕೆಂದರೆ ಅದು ನಮ್ಮ ಬಗ್ಗೆ ಪುನಃ ಪುನಃ ಮೆಲುಕು ಹಾಕಲು ಪ್ರಚೋದಿಸುವುದು.

೨. ಸ್ವಾರ್ಥ, ಅಜ್ಞಾನ, ಸಂಕುಚಿತ ಮನೋಭಾವನೆ, ಅಮಾಯಕತನ ಇದಕ್ಕೆ ಕಾರಣ. ಆದರೂ ಎಲ್ಲ ಕಾಲದಲ್ಲೂ ಎಲ್ಲ ದೇಶಗಳಲ್ಲೂ ಎಲ್ಲ ಜನಾಂಗಗಳಲ್ಲೂ ತನ್ನ ಹಂತವನ್ನು ಮೀರಿದ ಸ್ಥಾನವನ್ನು ಧಾರ್ಮಿಕ ಇತಿಹಾಸವು ಪಡೆದುಕೊಳ್ಳಲಿಲ್ಲವೆಂಬುದೊಂದು ಸಮಾಧಾನ ತರುವ ಸಂಗತಿ. ಯಾವ ಸಮಾಜದಲ್ಲಿ ಧರ್ಮ ಸಹಿಷ್ಣುತೆ ಇಲ್ಲವೋ ಅಲ್ಲಿ ಇದಕ್ಕೆ ಮೇಲುಗೈ ಇದೆ ಎಂಬುದನ್ನು ಒಪ್ಪಲೇಬೇಕು – ಏಕೆಂದರೆ ಅಲ್ಲಿ ಧರ್ಮದ ದುರ್ಬಳಕೆ ಮಾಡಿಕೊಂಡೇ ಬೆಳೆಯುವ ಶಕ್ತಿಗಳು ಸಾಂದ್ರಗೊಂಡಿರುತ್ತವೆ. ಯಾವ ರಾಷ್ಟ್ರ ಜನಾಂಗ ಧರ್ಮವನ್ನು ದೂರದಿಂದ ಗೌರವಿಸಿ, ಅದರ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲವೋ ಆ ರಾಷ್ಟ್ರ - ಜನಾಂಗ ಪ್ರಬುದ್ಧಾವಸ್ಥೆಯನ್ನು ಮುಟ್ಟಿದವುಗಳೆನ್ನಬಹುದು. 'ಧರ್ಮ'ಕ್ಕೆ ಅಗ್ರಸ್ಥಾನ ಕೊಡುವ ಜನಾಂಗದಲ್ಲಿ ಏನೋ ಒಂದು ಬಗೆಯ ಕೊರತೆ ಕಾಡುತ್ತಿರುತ್ತದೆ ಎಂಬ ಸ್ಥೂಲ ಭಾವನೆ ಬರುವುದು – ಇದು ಕೀಳರಿಮೆಯಾಗಿರಬಹುದು, ಮತ್ತಿನ್ನೇನಾದರೂ ಆಗಿರಬಹುದು. ಆದರೆ ಇಲ್ಲಿ ಬಳಕೆಯಾಗುವ 'ಧರ್ಮ' ಪದವು 'ಧರ್ಮ'ವನ್ನು ನಿಜವಾದ ಅರ್ಥದಲ್ಲಿ ಸಂಕೇತಿಸುವುದಿಲ್ಲ – ಧರ್ಮದ ಹೊರಪದರಾದ ಡಾಂಭಿಕತೆಯನ್ನು ಮಾತ್ರ ಸಂಕೇತಿಸುವುದು. ಧರ್ಮವನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ಶಕ್ತಿಗಳೇ ಇಲ್ಲಿ ಎದ್ದು ಕಾಣುವ ವಸ್ತುಗಳು. ಅಲ್ಪ ಆಮಿಷಕ್ಕೊಳಪಟ್ಟು ತಮ್ಮ ವಿಚಾರಶಕ್ತಿಯನ್ನು ಅಡವಿಡುವ 'ಇತಿಹಾಸಕಾರ'ರಿಂದಾಗಿ ಇತಿಹಾಸವೇ ಧಾರ್ಮಿಕ ಸಂಘರ್ಷಕ್ಕೆ ಕಾರಣವಾದಂತೆ ಕಂಡುಬರುವುದು – ಆದರೆ ಅದು ಇತಿಹಾಸದ ತಪ್ಪಲ್ಲ, 'ಇತಿಹಾಸಕಾರ'ರೆನಿಸಿಕೊಂಡವರು ಮಾಡುವ ತಪ್ಪು. ಕಣ್ಣು ಕಟ್ಟಿಕೊಂಡ ಕುದುರೆಯು ಓಡುವಂತೆ, ಏಕಮುಖಿಯಾಗಿ ಸಾಗುವ, ಅತ್ತ-ಇತ್ತ ಕಣ್ಣಾಡಿಸದೆ ತನ್ನ ಅಕ್ಕಪಕ್ಕ, ಸನಿಹ-ದೂರದಲ್ಲಿರುವುದನ್ನು ಎಳ್ಳಷ್ಟೂ ಗಮನಿಸದ, ತನ್ನ ಮನೋವೈಶಾಲ್ಯತೆಯನ್ನು ಹೆಚ್ಚಿಸಿಕೊಳ್ಳದೆ, ಸಾಗುವ 'ಪಂಡಿತ ಪಥ'ದ ಪರಿಣಾಮವಿದು. ಸಮಾಧಾನದ ವಿಷಯವೆಂದರೆ ಇತಿಹಾಸ ರಚನೆಯು ಇಂಥವರ ಸ್ವಾಮ್ಯವಲ್ಲ; ಅಂಥವರಿಗೆ ಯಾವ ಬಗೆಯ (ರಾಜಕೀಯ, ಧಾರ್ಮಿಕ) ಪೋಷಣೆ ಸಿಕ್ಕರೂ ಅವರು ಪರಿಣಾಮಕಾರೀ ಪ್ರಭಾವವನ್ನು ಬೀರಲಾಗುವುದಿಲ್ಲ. ನಿಜ, ಆಗೊಮ್ಮೆ ಈಗೊಮ್ಮೆ ಅವರ ಅಬ್ಬರ ಮನಸ್ಸನ್ನು ಘಾಸಿಗೊಳಿಸುವುದು – ಆದರೆ ಅದು ಕಾಲ ಸೀಮಿತ ಮಾತ್ರ. ಇದನ್ನು ಪ್ರಶ್ನಿಸುವ ಪ್ರಾಜ್ಞರು ಇರುವುದರಿಂದ ಈ ಅಬ್ಬರವು ಕ್ರಮೇಣ ತಣ್ಣಗಾಗುವುದು. ಎಲ್ಲಿ ಈ ಬಗೆಯ ಅಬ್ಬರಗಳನ್ನು ಪ್ರಶ್ನಿಸುವ ಪ್ರಜ್ಞೆ ಇರುವುದೋ ಅಲ್ಲಿ ಧಾರ್ಮಿಕ ಸಂಘರ್ಷಕ್ಕೆ ಕಾರಣವಾಗುವ ಇತಿಹಾಸದ ಅಧ್ಯಯನವು ಮಹತ್ವ ಪಡೆಯುವುದಿಲ್ಲ.

೩. ಅನಿವಾರ್ಯ. ಇತಿಹಾಸ ಪ್ರಜ್ಞೆ ಇಲ್ಲದೆ ಬಾಳುವುದು, ಬೆಳೆಯುವುದು ಅಸಾಧ್ಯ. ನೆರಳಿನಂತೆ ನಮಗಂಟಿಕೊಂಡೇ ಇರುವ ಇತಿಹಾಸದಿಂದ ಬಿಡಿಸಿಕೊಳ್ಳುವುದೂ ದುಸ್ಸಾಧ್ಯ. ಇತಿಹಾಸದ ಸ್ವರೂಪ ಕರಾಳವೆನಿಸಿದಾಗ ಅದರಿಂದ ದೂರವಿರುವುದೇ ಹಿತವೆನಿಸುವುದು, ಆದರೆ ಅದರ ಸ್ವರೂಪ ಹೆಮ್ಮೆ ತರುವಂತಹದಾದಾಗ ಅದರಷ್ಟು ಸಮ್ಮೋಹಗೊಳಿಸುವ ವಸ್ತು ಮತ್ತೊಂದಿಲ್ಲ ಎನಿಸುವುದು. ಕುರೂಪಿಗೂ ಕನ್ನಡಿಯ ಮೋಹವಿರುವಾಗ, ನಮಗೆ ಇತಿಹಾಸದ ಮೋಡಿಯಿಂದ ದೂರ ಸರಿಯಲು ಸಾಧ್ಯವೇ?

'ಕೆರಳಿಸುವ', 'ನೆಮ್ಮದಿ ಹಾಳು ಮಾಡುವ' ವಸ್ತುಗಳೂ ನಮ್ಮನ್ನು ಚೇತನಗೊಳಿಸುವ ಸಾಧನೆಗಳಾಗಬಲ್ಲವಲ್ಲವೇ? ಜಡಜೀವಿಗಳು ಕೆರಳುವುದಿಲ್ಲ. ನಿರ್ಜೀವಿಗಳು ನೆಮ್ಮದಿ ಹಾಳು ಮಾಡಿಕೊಳ್ಳುವುದಿಲ್ಲ. ಜೀವಂತ ಸಮಾಜ - ಜನಾಂಗ ಮಾತ್ರ ಈ ಬಗ್ಗೆ ಚಿಂತನೆ ಮಾಡುವುವು. ಅಂದರೆ 'ಕೆರಳುವ' 'ನೆಮ್ಮದಿ ಹಾಳು ಮಾಡಿ' ಕೊಳ್ಳುವ ಸಮಾಜವು ಜೀವಂತ ಸಮಾಜವೆಂದೇ ಬಗೆಯಬೇಕಾಗುವುದು. ಅಂತಹ ಜೀವಂತ-ಜನಾಂಗ ಪ್ರತಿಸ್ಪಂದಿಸುವುದು ಮಾತ್ರವಲ್ಲ, ಕೆರಳಿಸುವ ವಸ್ತುವಿನ ನಿಜ ಸ್ವರೂಪವನ್ನೂ ಹೊರಗೆಡಹುವುದು. ಇದರಿಂದಾಗಿ ಇತಿಹಾಸದ ಪುನರ್ನಿರ್ಮಾಣ ಸಾಧ್ಯವಾಗುವುದು, ಸರಿ ಅಲ್ಲದುದನ್ನು ಸರಿಪಡಿಸುವ ಕಾರ್ಯಕ್ಕೆ ಎಡೆ ಸಿಗುವುದು.

ಇತಿಹಾಸದಲ್ಲಿ ಭೂಕಂಪ ಶಕ್ತಿ ಅಡಗಿರುವುದು – ಆ ಶಕ್ತಿಯನ್ನು ಸದುಪಯೋಗಪಡಿಸಿಕೊಂಡ ಸಮಾಜವು ಲೋಕಕಲ್ಯಾಣದ ಗುರಿ ಹೊಂದಿರುವುದು. ದುರ್ಬಳಕೆ ಮಾಡಿಕೊಂಡ ವ್ಯಕ್ತಿಗಳಾಗಲೀ - ಸಮಾಜವಾಗಲೀ ಲೋಕನಾಶಕ್ಕೆ ಹಾದಿ ಮಾಡಿಕೊಡುವುವು. ಇವೆರಡಕ್ಕೂ ನಿದರ್ಶನಗಳು ಇತಿಹಾಸದಲ್ಲಿಯೇ ದೊರೆಯುವುವು. ಮಹಾಕ್ರಾಂತಿಗಳಿಗೆ ಬಳಸಿಕೊಂಡ ಇತಿಹಾಸದ ಬಗೆಯನ್ನು ಮಹಾಯುದ್ಧಗಳನ್ನು



ಮಾಡಲು ಬಳಸಿಕೊಂಡ ಇತಿಹಾಸದ ಬಗೆಯನ್ನು ಚರಿತ್ರೆಯೇ ಒದಗಿಸಿ ಕೊಡುವುದು. ಇತಿಹಾಸದ ಪುಟ ತಿರುವಿ ನಾವು ಇವನ್ನು ಕಂಡು ಕೊಳ್ಳಬಹುದು. ನೆಮ್ಮದಿ ಗಳಿಸಿ ಕೊಳ್ಳಬಹುದು.

೪. ಅಲ್ಲ, ಮಾನವ ಇತಿಹಾಸದಲ್ಲಿ ಧಾರ್ಮಿಕ ಇತಿಹಾಸಕ್ಕೆ ಸಾಮಾನ್ಯ ಸ್ಥಾನ ಮಾತ್ರ ದೊರೆತಿರುವುದು. ಇತಿಹಾಸವು ಧರ್ಮಕ್ಕೆಂದೂ ಪರಿಪೂರ್ಣವಾಗಿ ಶರಣಾಗಿಲ್ಲ – ಆದರೆ ಧರ್ಮವೂ ಪುರುಷಾರ್ಥಗಳಲ್ಲೊಂದು ಎಂಬುದನ್ನೂ ಮರೆತಿಲ್ಲ.

'ಧರ್ಮ'ವನ್ನು ವಸ್ತುವನ್ನಾಗಿ ಮಾಡಿಕೊಂಡ ಇತಿಹಾಸವನ್ನು ಬಿಟ್ಟರೆ, ಸಾಮಾನ್ಯ ಇತಿಹಾಸದಲ್ಲಿ ಧರ್ಮಕ್ಕೆ ದೊರಕಿರುವ ಸ್ಥಾನವು ಗೌಣ ಮಾತ್ರ. ಯಾವ ರಾಷ್ಟ್ರದ ಇತಿಹಾಸವನ್ನಾದರೂ ತೆಗೆದು ನೋಡಿ, ಈ ಮಾತು ಮನವರಿಕೆಯಾಗುವುದು. ಆದರೆ 'ಧರ್ಮ'ವನ್ನೇ ಮುಖವಾಡ ಮಾಡಿಕೊಂಡ 'ಥಿಯೋಕ್ರಾಟಿಕ್' ರಾಜ್ಯಗಳ ಇತಿಹಾಸದಲ್ಲಿ ಇದರ ಪಾತ್ರ ಭಿನ್ನತರದ್ದಾಗಿದೆ. ರಾಜಕೀಯ ಶಕ್ತಿಯನ್ನು ಸದಾ ಹತೋಟಿಯಲ್ಲಿಟ್ಟುಕೊಳ್ಳಲು, ಧರ್ಮದ ಹೆಸರಿನಲ್ಲಿ ಸಮಾಜವನ್ನು ಗಡಚುಗೊಳಿಸಲು, ತಮ್ಮ ಪಾರಂಪರಿಕ ಸವಲತ್ತುಗಳನ್ನು ಉಳಿಸಿಕೊಳ್ಳಲು, ಈ ವಸ್ತುವನ್ನು ಬಳಕೆ ಮಾಡಿಕೊಳ್ಳುತ್ತಾ ಬಂದ ವರ್ಗಗಳು ಇತಿಹಾಸದಲ್ಲಿ ಇಲ್ಲದಿಲ್ಲ. ಇಂತಹ ಅನಿಷ್ಟ ಪರಂಪರೆಯನ್ನು ಪ್ರತಿರೋಧಿಸದೆ, ಅವನ್ನೇ ಆದರ್ಶಗಳನ್ನಾಗಿ ಮಾಡಿಕೊಂಡು, ಅನುಕರಿಸಿದ ಜನಾಂಗಗಳನ್ನೂ ನಾವು ಕಾಣುವೆವು. ಅದು ಮೊದಲಿನದಕ್ಕಿಂತ ಹೆಚ್ಚು ದುಃಖಕರ. ಇವುಗಳಲ್ಲೆಲ್ಲ ಎದ್ದುಕಾಣುವ ವಸ್ತುವೆಂದರೆ ಸ್ವಾರ್ಥ – ವ್ಯಕ್ತಿಯ, ಜನಾಂಗದ, ಸಮಾಜದ, ರಾಷ್ಟ್ರದ ಸ್ವಾರ್ಥ. ತನ್ನ ಮೂಗಿನ ನೇರ ನೋಡುವ ಧರ್ಮಗಳು ನಮ್ಮ ಮಧ್ಯದಲ್ಲಿವೆ ನಿಜ – ಅವುಗಳನ್ನು ಪ್ರತಿರೋಧಿಸುವ ಬದಲು ನಾವೂ ಅವುಗಳಂತೆ ಮೂಗಿನ ನೇರವೇ ನೋಡಬೇಕೆಂಬುದು ಸಲ್ಲ. ನಮ್ಮ ಧರ್ಮವು ಎಲ್ಲರನ್ನೂ ಪ್ರೀತಿಸು ಎಂದು ಹೇಳಿದರೆ ಈ ತತ್ವವನ್ನು ಮರೆಮಾಚಿಸುವಂತಹ ಪ್ರಯತ್ನ ನಮ್ಮಿಂದಾಗಬಾರದು. ಅಂದರೆ ಒಂದು ಧರ್ಮದ ಮೇಲೆ ಮತ್ತೊಂದು ಧರ್ಮವು ದೌರ್ಜನ್ಯ ನಡೆಸಿದರೆ ಶರಣಾಗಬೇಕೆಂದಲ್ಲ. ನಮ್ಮನ್ನು ನಾವು ರಕ್ಷಿಸಿಕೊಳ್ಳುವ ಹೊಣೆ ನಮ್ಮದಾಗಿರುವ ಕಾರಣ ಅದನ್ನು ನಾವೇ ಪೂರೈಸಿಕೊಳ್ಳಬೇಕಾಗುವುದು. ಯಾವ ಬಗೆಯಲ್ಲಿ ನಮ್ಮನ್ನು ನಾವು ರಕ್ಷಣೆ ಮಾಡಿಕೊಳ್ಳಬೇಕು, ಯಾವುದನ್ನು ಯಾವ ಬಗೆಯಲ್ಲಿ ಪ್ರತಿರೋಧಿಸಬೇಕು – ಎಂಬುದನ್ನು ಇತಿಹಾಸವೇ ಕಲಿಸಿಕೊಡುವುದು.

ಇತಿಹಾಸವು ಕಲಿಸಿಕೊಡದ ಪಾಠವಿಲ್ಲ. ಆದರೆ ಅದರಿಂದ ಕಲಿಯುವವರ ಅಭಾವ ಇದೆ.

೫. ದಾಖಲೆಗಳು ಸತ್ಯವನ್ನು ತಿಳಿಸಿದರೆ ಒಪ್ಪಿಕೊಳ್ಳಲು ಏನೂ ಕಷ್ಟವಿಲ್ಲ. ಆದರೆ ದಾಖಲೆಯೇ ಇತಿಹಾಸವಲ್ಲ; ದಾಖಲೆಯನ್ನು ವ್ಯಾಖ್ಯಾನಿಸಿದಾಗ ಮಾತ್ರ ಇತಿಹಾಸ ರೂಪಗೊಳ್ಳುವುದು, ಅಂದರೆ ದಾಖಲೆ ಮತ್ತು ಇತಿಹಾಸದ ನಡುವೆ ವ್ಯಾಖ್ಯಾನಕಾರನೊಬ್ಬನಿರುವನು, ಎಂದರ್ಥ. ಇವನ ಮನ-ಮೂಸೆಯಿಂದ ಹೊರಹೊಮ್ಮುವ ದಾಖಲೆಯು ಇತಿಹಾಸದಲ್ಲಿ ಹೊಸ ಸ್ವರೂಪವನ್ನು ಪಡೆದುಕೊಳ್ಳುವುದು. ಇದರಿಂದಾಗಿ ಇತಿಹಾಸದ ನಿರ್ಣಯಗಳು ವಿವಾದಾತ್ಮಕವಾಗುವುವು.

ಎಲ್ಲಿ ದಾಖಲೆಗಳ ಅಡಚಣೆ ಇದೆಯೋ ಅಲ್ಲಿ ಕೈಗೆ ಸಿಗುವುದನ್ನೆಲ್ಲಾ ಇತಿಹಾಸಕಾರ ಬಳಸಿಕೊಳ್ಳುತ್ತಾನೆ. ಅತಿ ಪ್ರಾಚೀನಕಾಲದ ಇತಿಹಾಸದಲ್ಲಿ ಇದು ಹೆಚ್ಚು ಸಂಭವ. ಅಲ್ಲಿ ಹೊರಹೊಮ್ಮುವ ಚಿತ್ರವು ಸಮಗ್ರವಾಗಿರುವುದಿಲ್ಲ – ಅನಿವಾರ್ಯವಾಗಿ, ಅದೇ ಸಮಗ್ರವೆಂದು ನಾವು ಭಾವಿಸುವೆವು.

ಎಲ್ಲಿ ದಾಖಲೆಗಳು ಸಂಪದ್ಭರಿತವಾಗಿರುವುವೋ ಅಲ್ಲಿ ಇತಿಹಾಸಕಾರನು ತನ್ನ ವಿವೇಕವನ್ನು ಬಳಸಿಕೊಂಡು ಹಲವನ್ನು ಆಯ್ಕೆ ಮಾಡಿಕೊಳ್ಳುವನು. ಏಕೆಂದರೆ ಸಿಗುವುದನ್ನೆಲ್ಲ ಬಳಸಿಕೊಳ್ಳಲು ಸಾಧ್ಯವಾಗದಿರುವುದರಿಂದ ಈ ಆಯ್ಕೆ ಕಾರ್ಯವು ಬಹುಸೂಕ್ಷ್ಮ ಬಗೆಯದ್ದು – ಅದನ್ನು ಸಾಧಿಸಿಕೊಳ್ಳುವುದು ಎಲ್ಲರಿಗೂ ಸಾಧ್ಯವಾಗ

ಲಾರದು. ಯಾವುದೋ ಒಂದು ಗುರಿಯನ್ನಿಟ್ಟುಕೊಂಡು, ಅದನ್ನು ಸಾಧಿಸಲೆಂದೇ ಹೊರಟ ಇತಿಹಾಸಕಾರನು ತನ್ನ ಗುರಿಗೆ ಒಗ್ಗದ - ಬಗ್ಗದ ದಾಖಲೆಗಳನ್ನು ದೂರವಿಡಲು ಪ್ರಯತ್ನಿಸುವನು. ಇದರಿಂದಾಗಿ ಅವನಿಂದ ಹೊರಹೊಮ್ಮಿದ 'ಇತಿಹಾಸವು' ಅಸಮರ್ಪಕವಾಗುವುದು. ಪ್ರಶ್ನಾರ್ಹವಾಗುವುದು. ಅನುಮಾನಕ್ಕೆ ಎಡೆಮಾಡಿಕೊಡುವುದು. ಕೆರಳಿಸುವುದು. ನೆಮ್ಮದಿ ಹಾಳು ಮಾಡುವುದು. ಆಗ ಮತ್ತೊಬ್ಬ ಇತಿಹಾಸಕಾರನು ಅದಕ್ಕೆ ಸ್ಪಂದಿಸುವನು – ಪ್ರತಿರೋಧಿಸಿ, ಮೊದಲಿನವನಲ್ಲಿನ ಲೋಪದೋಷಗಳನ್ನು ಹೊರಕೆಡವುತ್ತಾನೆ. ಹೀಗಾಗಿ ಇತಿಹಾಸವು ಚರ್ಚಾಸ್ಪದವಾದ ವಸ್ತುವೆನಿಸುವುದು. ಇತಿಹಾಸ ರಚನೆಯು ಎಂದೂ ಅಂತ್ಯಗೊಳ್ಳದೆ, ಸದಾ ಮುಂದುವರಿಯುವ ಕಾರ್ಯ. ಒಂದು ಹಂತ ಮುಟ್ಟಿದಾಗ ವಸ್ತುವಿನ ಸಮಸ್ಯೆಯ ಅನೇಕ ಮುಖಗಳನ್ನು ನಾವು ಪರಿಚಯ ಮಾಡಿಕೊಳ್ಳಲು ಸಾಧ್ಯವಾಗಬಹುದು. ಆದರೆ ಅದರಿಂದಲೂ ಚರ್ಚೆಯನ್ನು ಅಂತ್ಯಗೊಳಿಸಲು ಸಾಧ್ಯವಾಗುವುದಿಲ್ಲ. ಈ ಬಗೆಯ ಕಷ್ಟ ನಮ್ಮನ್ನು ಕಾಡುವುದು.

ಇತಿಹಾಸಕಾರ ಘಟನೆಯ ಪ್ರತ್ಯಕ್ಷದರ್ಶಿಯಲ್ಲ. ಪರೋಕ್ಷದರ್ಶಿ ಮಾತ್ರ. ಹಿಂದೆಂದೋ ನಡೆದ ಘಟನೆಯನ್ನು ಅಂದು (ಅಥವಾ ಮುಂದೆಂದೋ) ದಾಖಲಿಸಿದವನ ಮೂಲಕ ಅದನ್ನು ಅವನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವನು. ಈ ವಿಧಾನವು ಎಲ್ಲರಿಗೂ ಕರಗತವಾಗುವುದಿಲ್ಲ. ಆದರೂ ಎಲ್ಲರೂ ಇತಿಹಾಸ ಬರೆಯುವ ಸ್ವಾತಂತ್ರ್ಯವನ್ನು ಪಡೆದಿರುವರು. ಸತ್ಯದ ಮುಖವನ್ನು ಪರಿಚಯಿಸಿಕೊಳ್ಳಲು ಇದು ಒಮ್ಮೊಮ್ಮೆ ಸಹಕಾರಿಯಾಗಬಲ್ಲದು. ಇಲ್ಲವೇ ಅಡಚಣೆಯನ್ನು ಉಂಟುಮಾಡಬಹುದು. ದಾಖಲೆ ತಿಳಿಸುವ 'ಸತ್ಯ'ವನ್ನು ಅರಿತುಕೊಳ್ಳಲು ಇರುವ ಕಷ್ಟಗಳಲ್ಲಿ ಇವು ಕೆಲವು ಮಾತ್ರ.

'ದಾಖಲೆ'ಗಳು, 'ಹೇಳುವ ಸತ್ಯ' ಮತ್ತು 'ಒಪ್ಪಿಕೊಳ್ಳುವ ಕಷ್ಟ' – ಎಂಬ ಮೂರು ಒತ್ತುಗಳು ಇದರಲ್ಲಿ ಸೇರಿವೆ.

'ದಾಖಲೆ' ಎಂದರೆ ಒಂದು ಘಟನೆಯ ಬಗ್ಗೆ ನಾವೆ ಮಾಡಿಕೊಂಡ ಟಿಪ್ಪಣಿ, ವಿವರ, ವರದಿ. ಇದು ಮಾನವ ನಿರ್ಮಿತ ವಸ್ತು ಇಲ್ಲವೇ ವಸ್ತುವಿನ ಅವಶೇಷ ಆಗಿರಬಹುದು. ಅಂದರೆ ಇದೊಂದು 'ಇಮೇಜು'; ಇಮೇಜಿನ ಇಮೇಜೂ ಆಗಿರಬಹುದು.

ದಾಖಲೆ 'ಸಂಗತಿ'ಯನ್ನು ಅರುಹಬಹುದು – ಆದರೆ ಅದು ಪೂರ್ಣ ಸತ್ಯವನ್ನು ತನ್ನಷ್ಟಕ್ಕೆ ತಾನೇ ಹೇಳುವುದಿಲ್ಲ. ಎಷ್ಟೋ ಬಾರಿ ಅದನ್ನು ಹುಡುಕಿ ತೆಗೆಯಬೇಕು. ದಾಖಲೆಯನ್ನು ಹುಡುಕುವುದು, ದಾಖಲೆಯಲ್ಲಿ ಅಡಗಿರುವ ವಸ್ತು (ವಾಸ್ತವಾಂಶ)ವನ್ನು ಹುಡುಕುವುದು ಇತಿಹಾಸಕಾರನ ಕೆಲಸ. ಅಂದರೆ 'ದಾಖಲೆ'ಯು ದಾಖಲಿಸುವವನ ಗ್ರಹಣಾಶಕ್ತಿ, ದೃಷ್ಟಿಕೋನ, ಗುರಿ, ಹಿನ್ನೆಲೆ, ಪರಿಸರ, ಆಶೆ-ಆಮಿಷ, ಮುಂತಾದವುಗಳಿಂದ ಪ್ರಭಾವಿತವಾಗಿ ರೂಪಗೊಂಡಿರುತ್ತದೆ ಎಂದು ಅರ್ಥ. ಇಂತಹ ದಾಖಲೆಗಳನ್ನು ಬಳಸಿಕೊಳ್ಳುವವನ ಗೊತ್ತುಗುರಿಯ ಮೇಲೆಯೂ ಅದರಲ್ಲಿ ಅಡಗಿರುವ ಅಂಶವು ನಿರ್ಧರಿಸಲ್ಪಡುವುದು.

ಸಿಂಧೂ ಸಂಸ್ಕೃತಿಯ ಅವಶೇಷಗಳಲ್ಲಿ ದೊರೆತ ಗಡ್ಡಧಾರಿ ಸದೃಢಮೂರ್ತಿ, ಒಂದು ದಾಖಲೆ. ಅದು ಯೋಗಿಯದೋ-ಭೋಗಿಯದೋ, ಗುರುವಿನದೋ-ಗೃಹಸ್ಥನದೋ ಅನ್ನುವುದನ್ನು ನಿರ್ಧರಿಸುವಾಗ ನಮ್ಮ ದೃಷ್ಟಿಕೋನ ಮಾತ್ರವಲ್ಲ, ದೃಷ್ಟಿಯನ್ನು ರೂಪಿಸುವ ಒಳಮನಸ್ಸು ಪ್ರಮುಖ ಪಾತ್ರ ವಹಿಸುವುದು. ಇದರಂತೆ 'ದ್ವಾರಕೆಯ' ಅವಶೇಷಗಳ ಅರ್ಥವು ಸಾಗರದಾಳದಲ್ಲಿ ಹುದುಗಿರುವ ಪಳೆಯುಳಿಕೆಗಳಷ್ಟೇ ನಮ್ಮ ಅಂತರಾಳದಲ್ಲಿ ಹುದುಗಿರುವ ಹಳಹಳಿಕೆಗಳೂ ಪ್ರಮುಖ ಪಾತ್ರ ವಹಿಸಬಹುದು. ಸಾಗರದಾಳದಲ್ಲಿರುವ ಅವಶೇಷಗಳು ದಾಖಲೆಗಳು. ಈ ಬಗ್ಗೆ ಅನುಮಾನವಿಲ್ಲ. ಆದರೆ ಅವು ಯಾವುದಕ್ಕೆ ಸಂಬಂಧಪಟ್ಟ ದಾಖಲೆಗಳು ಎಂಬ ಅಂಶ ಅಷ್ಟು ಸುಲಭಗ್ರಾಹ್ಯವಲ್ಲ. ಆ ಬಂಡೆಗಲ್ಲುಗಳು ಒಂದು ಕೋಟೆ ಗೋಡೆಯ ಭಾಗಗಳು, ಆ ಕೋಟೆ ಒಂದು ಅರಮನೆಯ ಹೊರಭಿತ್ತಿ, ಆ ಅರಮನೆ ಪುರಾಣ ಪುರುಷನಾದ ಕೃಷ್ಣನದು, ಎಂದೆಲ್ಲ ಊಹೆ ಮಾಡುತ್ತಾ ಕೃಷ್ಣನು ಬರೀ ಪೌರಾಣಿಕ ವ್ಯಕ್ತಿಯಲ್ಲ, ಇತಿಹಾಸ ಪುರುಷನೆಂದೂ, ಅವನು ವಾಸಿಸಿದ್ದ ಅರಮನೆಯ ಅವಶೇಷಗಳೇ ಇವೆಂದು ಸಾಧಿಸಹೊರಟಾಗ ತೊಂದರೆಗಳು-ಗೊಂದಲಗಳು ಉದ್ಭವಿಸುವುವು. ಅಲ್ಲಿ ದೊರೆತ ಬಂಡೆ-ಗುಂಡುಗಳೆಲ್ಲ ದ್ವಾರಕಾನಗರದ ಅವಶೇಷಗಳೆಂದು ನಿರ್ಧರಿಸಲು ಸಾಧ್ಯವಾದರೆ ಮಥುರೆಯ ಉತ್ಖನನದಲ್ಲಿ ದೊರೆಯುವ ಮಡಕೆಯ ಚೂರುಗಳೆಲ್ಲ ಗೋಪಿಯರು ಹೊತ್ತೊಯ್ಯುತ್ತಿದ್ದ ಮೊಸರಿನ ಗಡಿಗೆಗಳು, ಅವನ್ನು ಕೆಳಕೆಡವಿ ಚೂರುಗೊಳಿಸಿದವನು ತುಂಟ ಕೃಷ್ಣನೆಂದೂ ಸಾಧಿಸಬಹುದಲ್ಲ! ಇದರ ಜೊತೆ ಬಳೆಚೂರುಗಳು ಸಿಕ್ಕರಂತೂ ಅವು ಗೋಪಿಯರು ಕೃಷ್ಣನೊಡನೆ 'ರಾಸ'ದಲ್ಲಿ ತೊಡಗಿದಾಗ ಕಳಚಿ ಬಿದ್ದವುಗಳೆಂದೂ ಭಾವಿಸಲು-ಸಾಧಿಸಲು ಬರುವುದಲ್ಲವೇ ? ಇತ್ತೀಚೆಗೆ ಅಯೋಧ್ಯೆಯಲ್ಲಿ ದೊರೆತವೆಂಬ ಅವಶೇಷಗಳ ಬಗ್ಗೆ – ದೇವಾಲಯದ ಭಗ್ನಾವಶೇಷ ಮತ್ತು ಶಾಸನ – ಇಂತಹ ಪ್ರಶ್ನೆಗಳನ್ನು ಕೆಲವರು ಎತ್ತಿರುವರಲ್ಲವೇ ? ಉತ್ಖನನವು ವೈಜ್ಞಾನಿಕ ಬಗೆಯಲ್ಲಿ ನುರಿತ ಹಾಗೂ ಅನುಮಾನಕ್ಕೆ ಆಸ್ಪದ ಕೊಡದಂತಹ ಪ್ರಾಕ್ತನರಿಂದ ಆಗಿದ್ದರೆ, ಅಲ್ಲದೇ ಒಂದು ಸಹಜ ಸಂಶೋಧನಾ ಕ್ರಿಯೆಯಾಗಿದ್ದಿದ್ದರೆ, ಈ ಪ್ರಶ್ನೆಗಳಲ್ಲಿ ತಿರುಳಿರುತ್ತಿರಲಿಲ್ಲವೇನೋ – ಆದರೆ, ಭಾವಾವೇಶಕ್ಕೊಳಗಾದ ಒಂದು ಜನಾಂಗದ 'ಅನಿಸಿಕೆ'ಗಳನ್ನು ಸಾಧಿಸಿ ತೋರಿಸಲು ಹೊರಟ ತಂಡದವರನ್ನು ನಂಬಬೇಕೇ-ಬಿಡಬೇಕೆ ಎಂಬ ಅನುಮಾನಗಳು ಏಳುವುವು. ಆಗಲೇ ದಾಖಲೆ ಮೂಕವಾಗುವುದು – ದಾಖಲೆಯನ್ನು ಬಳಸುವವರು ವಿಪರೀತ ವ್ಯಾಖ್ಯಾನಕಾರರಾಗುವುದು. ಇಂತಹ ಸಂದರ್ಭಗಳಲ್ಲಿ ದಾಖಲೆಯು 'ಹೇಳುವ ಸತ್ಯ'ವು ಹೇಳಿಸಿದ 'ಸತ್ಯ'ಕ್ಕಿಂತ ಭಿನ್ನವಾಗಬಹುದು. ಇತಿಹಾಸದ ಪುನಾರಚನೆಯಲ್ಲಿ ಊಹೆ ಪ್ರಮುಖಪಾತ್ರ ವಹಿಸುವುದು – ಇದು ನಿಜ; ಆದರೆ, ಕೆಲವರ ಊಹೆ ಮೇರೆಮೀರಿ ಗಾಳಿಗೋಪುರ ನಿರ್ಮಾಣ ಮಾಡುವ ಮಟ್ಟ ಮುಟ್ಟಿದಾಗ, ಅವರು ಗಟ್ಟಿಧ್ವನಿಯಲ್ಲಿ ಅದನ್ನು ಸಾಧಿಸತೊಡಗಿದಾಗ, ತಮ್ಮೊಡನೆ ಪರಾಕು ಹಾಕುವ ಪಂಗಡ ಕಟ್ಟಿಕೊಂಡು ಪ್ರಸಾರಕ್ಕೆ ತೊಡಗಿದಾಗ, ಪರರ ಅನಿಸಿಕೆಗಳು ಮೊಳಕೆಯೊಡೆಯಲೂ ಬಿಡದಿರುವಾಗ, ಸಂಖ್ಯೆ-ಸಂಸ್ಥೆಗಳನ್ನು ಸಮರ್ಥವಾಗಿ ಬಳಸಿಕೊಂಡು ತಮ್ಮ ಮೂಗಿನ ನೇರ ಸಾಧಿಸತೊಡಗಿದಾಗ...

'ದಾಖಲೆ' ದಾಖಲೆಯಾಗಿ ಉಳಿಯದು. 'ಹೇಳುವ ಸತ್ಯವು' ಹೇಳಿದ ಸತ್ಯವಾಗಲಾರದು. ಆಗ ಒಪ್ಪಿಕೊಳ್ಳಲು ಆಗುವ ಕಷ್ಟಗಳನ್ನು ಅನುಭವಿಸದವರಿಂದಲೇ ಅರಿತುಕೊಳ್ಳಬೇಕಾಗುವುದು.

ಆದರೆ ಇಂತಹ ಅನುಮಾನಗಳಿಗೆ ಎಡೆ ಕೊಡದಂತಹ 'ದಾಖಲೆ'ಗಳು 'ಹೇಳುವ ಸತ್ಯ'ವನ್ನು ಒಪ್ಪಿಕೊಳ್ಳಲು ಯಾವ ಕಷ್ಟವೂ ಉದ್ಭವಿಸಲಾರದು. ಈ ಬಗೆಯಲ್ಲಿ ಹೇಳುವ – ಕೇಳಿ ಒಪ್ಪುವ ಜನಾಂಗವಿರುವುದರಿಂದಲೇ ಇತಿಹಾಸ ರಚನೆಯು ಅವಿಚ್ಛಿನ್ನವಾಗಿ ಮುಂದುವರಿಯಲು ಸಾಧ್ಯವಾಗಿರುವುದು.

**ಪ್ರೊ॥ ಎಸ್. ಶೆಟ್ಟರ್**, ಡಾ॥ ಎಸ್. ರಾಧಾಕೃಷ್ಣನ್ ಸಂದರ್ಶನ ಪ್ರಾಧ್ಯಾಪಕ
ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್, ಬೆಂಗಳೂರು - ೧೨

## ಡಾ॥ ರಾಜಾರಾಂ ಹೆಗಡೆ

೧. ನೈತಿಕ ನೆಲೆಯಲ್ಲಿ ಯೋಚನೆ ಮಾಡಿದರೆ ಕೆಲವರಿಗೆ ಸರಿ ಕಂಡದ್ದು ಇನ್ನು ಕೆಲವರಿಗೆ ತಪ್ಪು ಎನ್ನಿಸಬಹುದು. ವರ್ತಮಾನದ ಯಾವುದೋ ಪ್ರಯೋಜನವನ್ನಾಧರಿಸಿ ಈ ಸರಿ - ತಪ್ಪುಗಳನ್ನು ನಿರ್ಣಯಿಸುವುದಾದರೆ ಒಬ್ಬರ ಅನುಕೂಲ ಮತ್ತೊಬ್ಬರಿಗೆ ಅನಾನುಕೂಲತೆಯನ್ನು ಸೃಷ್ಟಿಸಬಹುದು. ಹಾಗಾಗಿ ಸಾರ್ವತ್ರಿಕ ನೆಲೆಯಲ್ಲಿ ಈ ಸರಿ-ತಪ್ಪುಗಳನ್ನು ನಿರ್ಣಯಿಸುವಂತಿಲ್ಲ ಎಂಬುದು ವಾಸ್ತವ. ಯಾವುದೇ ಅಧ್ಯಯನದ ವೈಧಾನಿಕ ನೆಲೆಯಲ್ಲಿ ನೋಡಿದಾಗ ಆಯಾ ಅಧ್ಯಯನ ಸರಿಯಾಗಿದೆಯೇ, ತಪ್ಪಾಗಿದೆಯೇ ಎಂಬುದನ್ನು ತೀರ್ಮಾನಿಸಲು ಕೆಲವು ಪ್ರಮಾಣಗಳು ಇವೆ. ಅವುಗಳನ್ನು ಈ ಮುಂದಿನಂತೆ ಗುರುತಿಸಬಹುದು : ೧) ಆಯಾ ಕಾಲದ ಸಂಶೋಧನಾ ವಿಧಾನಕ್ಕೆ ಆಯಾ ಅಧ್ಯಯನ ಸಮ್ಮತವಾಗಿದ್ದರೆ ಆ ಅಧ್ಯಯನ ವಿಧಾನ ಸರಿಯಾದ ದಿಕ್ಕಿನಲ್ಲಿ ಇದೆ ಎಂದು ತೀರ್ಮಾನಿಸಬಹುದು. ೨) ಯಾವುದೇ ಅಧ್ಯಯನ ಕ್ಷೇತ್ರದಲ್ಲಿ ನಾವು ಪ್ರತಿಪಾದಿಸುವ ವಿಚಾರಗಳು ಲಭ್ಯ ಮಾಹಿತಿಯ ಬೆಳಕಿನಲ್ಲಿ ತರ್ಕಬದ್ಧ ಎನ್ನಿಸುವಂತಿರಬೇಕು.



ಇತಿಹಾಸದ ಅಧ್ಯಯನದ ಸಂದರ್ಭದಲ್ಲಿ ಈ ಮೇಲಿನ ಎರಡೂ ವಿಧಾನಗಳೂ ಕಾಲದಿಂದ ಕಾಲಕ್ಕೆ ಬದಲಾಗಿವೆ. ನಮ್ಮ ಪ್ರತಿಪಾದನೆಗಳು ನಮ್ಮ ದೃಷ್ಟಿಕೋನವನ್ನು ಆಧರಿಸಿರುತ್ತವೆ, ಹಾಗೂ ಅದನ್ನು ಸಮರ್ಥವಾಗಿ ಪ್ರತಿಬಿಂಬಿಸಬಲ್ಲ ಮಾಹಿತಿಯನ್ನು ನಾವು ಆಯ್ಕೆ ಮಾಡಿ ತರ್ಕವನ್ನು ಬೆಳೆಸುತ್ತೇವೆ. ದೃಷ್ಟಿಕೋನಗಳು ಬದಲಾದಂತೆಲ್ಲ ಆಯ್ಕೆ ಮಾಡಿಕೊಳ್ಳುವ ಮಾಹಿತಿಗಳೂ ಬದಲಾಗಿ ಹೊಸ ದೃಷ್ಟಿಕೋನಗಳೂ ತರ್ಕಬದ್ಧ ಎನ್ನಿಸಿಬಿಡುತ್ತವೆ.

ವರ್ತಮಾನದ ಯಾವುದೋ ಒಂದು ವಾದಕ್ಕೆ ಇತಿಹಾಸದ ಮಾಹಿತಿಗಳನ್ನು ಸಮೀಕರಿಸುವ ಕ್ರಿಯೆಯಲ್ಲಿ ಈ ರೀತಿ ಸರಿ-ತಪ್ಪುಗಳನ್ನು ನಿರ್ಣಯಿಸುವ ತೊಡಕು ಮೂಲಭೂತವಾಗಿ ಇದೆ. ಇತಿಹಾಸ ಎನ್ನುವುದು ತನ್ನ ಮಾಹಿತಿಯನ್ನು ಗಳಿಸುವ, ಅರ್ಥೈಸುವ ಒಂದು ಕ್ರಮವನ್ನು ಹಾಕಿಕೊಂಡಿದೆ. ಆ ಕ್ರಮದಲ್ಲಿ ಹೋದರೆ ಸರಿ ಎನ್ನಬಹುದು. ಸಾಂದರ್ಭಿಕವಾಗಿ, ತಾತ್ಕಾಲಿಕವಾಗಿ 'ಸರಿ'ಗಳು ಇರುತ್ತವೆ.

ಇದನ್ನು ಗಮನಿಸಿದಾಗ ಇತಿಹಾಸವು ಸರಿ ದಿಕ್ಕಿನಲ್ಲಿ ಸಾಗಿದೆಯೆ? ಎಂಬ ಪ್ರಶ್ನೆಯೇ ಅಪ್ರಸ್ತುತ. ಹಾಗೆ ನೋಡಿದಾಗ ವೈಯಕ್ತಿಕವಾಗಿ ನನಗೆ ನಮ್ಮ ಇತಿಹಾಸ ಗ್ರಹಿಕೆಯ ಕ್ರಮದಲ್ಲಿ ತೊಡಕುಗಳಿವೆ ಎನ್ನಿಸುತ್ತದೆ. ಇಂದಿನ ವಿದ್ವಾಂತರು ಇತಿಹಾಸದ ಸಂಬಂಧಿಸಿ ಎದುರಿಸುತ್ತಿರುವ ಬಿಕ್ಕಟ್ಟುಗಳೆಲ್ಲ ಈ ಇತಿಹಾಸ ಗ್ರಹಿಕೆಯ ತೊಡಕುಗಳೇ. ಇವುಗಳಿಂದ ಹೊರಬರಬಹುದಾದ ಮಾರ್ಗವೊಂದು ಇದ್ದರೆ ಇಂದು ಅದೇ ಸರಿಯಾದ ದಿಕ್ಕು.

೨. 'ಧಾರ್ಮಿಕ' ಎನ್ನುವ ಶಬ್ದದ ಮೂಲಾರ್ಥವನ್ನು ಈ ಪ್ರಶ್ನೆ ಉದ್ದೇಶಿಸಿಲ್ಲ ಎಂಬುದು ಸ್ಪಷ್ಟ. 'ಧರ್ಮ' ಎನ್ನುವುದನ್ನು 'ರಿಲಿಜನ್' ಕಲ್ಪನೆಗೆ ಪ್ರತಿಯಾಗಿ ಬಳಸಿದ್ದಲ್ಲಿ ಈ ತರ್ಜುಮೆ ಸರಿಯಲ್ಲ. ಸರಿಯಾದ ತರ್ಜುಮೆ ಯಾವುದು ಎಂಬುದು ನನಗೂ ಸ್ಪಷ್ಟವಿಲ್ಲ. ಕೆಲ ವಿದ್ವಾಂಸರ ಪ್ರಕಾರ 'ರಿಲಿಜನ್' ಕಲ್ಪನೆಯೇ ಭಾರತದಲ್ಲಿ ಇಲ್ಲ. ಇಂದಿನ 'ಹಿಂದೂ - ಮುಸ್ಲಿಂ' ಸಂದರ್ಭದಲ್ಲಿ ಈ 'ಧಾರ್ಮಿಕ ಸಂಘರ್ಷ' ಪದದ ಬಳಕೆಯಾಗಿರುವುದರಿಂದ ಹಿಂದೂ - ಮುಸ್ಲಿಂ ಸಂಘರ್ಷಕ್ಕೆ ಕಾರಣವಾಗುವ ಇತಿಹಾಸವೇ ಏಕೆ ಪ್ರಾಮುಖ್ಯತೆ ಪಡೆಯುತ್ತಿದೆ, ಎಂಬುದು ನಿಮ್ಮ ಪ್ರಶ್ನೆ ಎಂದು ಗ್ರಹಿಸುತ್ತೇನೆ.

ಹಿಂದೂ-ಮುಸ್ಲಿಂ ಸಂಘರ್ಷದ ಇತಿಹಾಸ ಯಾಕೆ ಇಂದು ಮಹತ್ವ ಪಡೆದಿದೆ ಎಂದರೆ ಆ ಸಮಸ್ಯೆಯನ್ನಿಟ್ಟುಕೊಂಡೆ ಪ್ರಭುತ್ವ ನಿರ್ಮಾಣದ ಪ್ರಯತ್ನಗಳು ಇಂದು ನಡೆಯುತ್ತಿವೆ. ಇದು ಬಹಳ ಸರಳವಾದ ಆದರೂ ವಾಸ್ತವಿಕ ಎನ್ನಬಹುದಾದ ಉತ್ತರ. ಹಿಂದೂ-ಮುಸ್ಲಿಂ ಸಂಘರ್ಷದ ಇತಿಹಾಸಕ್ಕೂ-ಪ್ರಭುತ್ವ ನಿರ್ಮಾಣಕ್ಕೂ ಇರುವ ಸಂಬಂಧ ಪರಸ್ಪರವಾದದ್ದು. ಇಂದು ಈ ಸಂಬಂಧ ತೀವ್ರತೆಯನ್ನು ಪಡೆದಿದೆ. ಈ ಸಂಘರ್ಷವನ್ನು ಹುಟ್ಟುಹಾಕ ಬಯಸಿದ ಪ್ರಭುತ್ವವೂ ಒಂದು ಇತಿಹಾಸ ಜ್ಞಾನವನ್ನೇ ಅವಲಂಬಿಸಿ ಹುಟ್ಟಿಕೊಂಡಿದೆ. ಈ ಸಂಘರ್ಷದ ಇತಿಹಾಸ ಆಧುನಿಕ ಕಾಲದಲ್ಲೇ ಹುಟ್ಟಿಕೊಂಡಿತು ಎಂಬುದೂ ಸರಿಯಲ್ಲ. ಆದರೆ ಈ ಇತಿಹಾಸಕ್ಕೆ ಆಧುನಿಕ ಕಾಲದಲ್ಲಿ ತನ್ನದೇ ಆದ ಆಯಾಮಗಳು ದಕ್ಕಿವೆ. ಅವುಗಳಲ್ಲಿ 'ರಾಷ್ಟ್ರ ಪ್ರಭುತ್ವ'ವನ್ನು ನಿರ್ಮಿಸುವ ರಾಜಕೀಯಕ್ಕೆ ಆ ಇತಿಹಾಸ ಒಂದು ನೆಲೆಯಾದದ್ದು, ಪ್ರಮುಖವಾದ ಈ ಪ್ರಶ್ನೆಗೆ ಸಂಬಂಧಿಸಿದ ಆಯಾಮವಾಗಿದೆ.



ರಾಷ್ಟ್ರ ಪ್ರಭುತ್ವಕ್ಕೆ ಗತಕಾಲದ ಸಂಘರ್ಷದ ನೆನಪು ಏಕೆ ಅಷ್ಟು ನಿರ್ಣಾಯಕವಾಗಬೇಕು? ವಸಾಹತುಶಾಹಿಯ ನಂತರ ನಾವು ಅಳವಡಿಸಿಕೊಂಡ ಪಾಶ್ಚಾತ್ಯ 'ಹಿಸ್ಟರಿ' ಸಂಪ್ರದಾಯದಲ್ಲೇ ಆ ಗುಣಗಳಿವೆ. 'ಹಿಸ್ಟರಿ' ಎನ್ನುವುದು ವರ್ತಮಾನದ ಕಾರ್ಯಕ್ರಮವಾಗಿ ವಸಾಹತುಗಳಲ್ಲಿ ಅಸ್ತಿತ್ವಕ್ಕೆ ಬಂದಿದೆ. ಇತಿಹಾಸ ಕಾಲದಲ್ಲಿ ಮನುಷ್ಯನ ವಿಕಾಸದ ವಿಭಿನ್ನ ಹಂತಗಳಿದ್ದು ವರ್ತಮಾನದಲ್ಲಿ ನಿಂತು ನೋಡಿದಾಗ ಅವೆಲ್ಲ ತಿದ್ದುಪಡಿ ಯಾದ, ಆಗಬೇಕಾದ ಕಚ್ಚಾ ಪ್ರತಿಗಳು ಎಂಬ ಗ್ರಹಿಕೆ ಈ 'ಹಿಸ್ಟರಿ'ಗೆ ಇದೆ. ಇಡೀ ವಸಾಹತು ಭಾರತವೇ ಈ ರೀತಿ ತಿದ್ದುಪಡಿಗೆ ಕಾಯುತ್ತಿರುವ ಗತಕಾಲವಾಗಿ ಕೂಡ ಪಾಶ್ಚಾತ್ಯರಲ್ಲಿ ಒಂದು ಸಂಪ್ರದಾಯದ ಇತಿಹಾಸಕಾರರಿಗೆ ಕಂಡಿದೆ. ಮತ್ತೊಂದು ಸಂಪ್ರದಾಯದವರಿಗೆ ಅದು ವರ್ತಮಾನದಲ್ಲಿ ಅನುಕರಿಸಬೇಕಾದ ವಾಸ್ತವವಾಗಿ ಕಂಡಿದೆ. ಇವೆಲ್ಲ ಗ್ರಹಿಕೆಗಳು ರಾಜಕೀಯದ ಕಾರ್ಯ ಕ್ರಮಗಳಾಗುತ್ತವೆ, ಹಾಗೂ ಪ್ರಭುತ್ವವನ್ನು ನಿರ್ಮಾಣ ಮಾಡುವ ಶಕ್ತಿಯಾಗುತ್ತವೆ. ಒಂದು ಪ್ರಭುತ್ವವು ಯಾವುದಾದರೂ ಒಂದು ಅಧಿಕೃತವಾದ ಇತಿಹಾಸ ಸಂಪ್ರದಾಯವನ್ನು ಆಧರಿಸಿ ತನ್ನ ಕಾರ್ಯಕ್ರಮಗಳನ್ನು ಸಮರ್ಥಿಸಿಕೊಳ್ಳ ಬಯಸುತ್ತದೆ. ಅಧಿಕೃತ ಇತಿಹಾಸದ ಸ್ಥಾನವನ್ನು ಪಡೆಯಲಾರದ ಜೀವನ ಕ್ರಮಗಳು ತಮ್ಮ ಇತಿಹಾಸದ ಜೊತೆಗೆ ಶಕ್ತಿಯನ್ನು ಕಳೆದುಕೊಳ್ಳುತ್ತವೆ. ಹಾಗಾಗಿ 'ಅಧಿಕೃತ' ಇತಿಹಾಸದ ಹೆಸರಿನಲ್ಲಿ ವರ್ತಮಾನದ ಸಂಘರ್ಷ ನಡೆಯುತ್ತದೆ. ಎಲ್ಲ ಇತಿಹಾಸ ಸಂಪ್ರದಾಯಗಳೂ ಒಪ್ಪಿಕೊಳ್ಳುವ ಒಂದು ಸಾಮಾನ್ಯ ನಿರ್ಣಯವೆಂದರೆ ಇತಿಹಾಸವನ್ನಾಧರಿಸಿ, ಅದರ ತಪ್ಪುಗಳನ್ನು ತಿದ್ದುವ ಕಾರ್ಯಕ್ರಮ ವರ್ತಮಾನದಲ್ಲಿ ನಡೆಯಬೇಕೆನ್ನುವುದು.

ಯಾವುದೋ ಕಾಲದಲ್ಲಿ, ಸ್ವತಂತ್ರ ಭಾರತದ ನ್ಯಾಯಾಂಗ ವ್ಯವಸ್ಥೆ ಅಸ್ತಿತ್ವದಲ್ಲಿ ಬರುವುದಕ್ಕೂ ಐನೂರು ವರ್ಷಗಳಷ್ಟು ಹಿಂದೆ, ಧ್ವಂಸವಾಗಿದೆ ಎನ್ನಲಾದ ದೇವಾಲಯವೊಂದರ ಸ್ಥಳವನ್ನು ಅಂದಿನ ಅದರ ಮಾಲಿಕರಿಗೆ ವಾಪಸು ಕೊಡಲು ಇಂದು ಸಾಧ್ಯವಿಲ್ಲ. ಆದರೆ ಇಂದು ಅದರ ವಾರಸುದಾರರು ಎನಿಸಿಕೊಂಡ ಸಮುದಾಯವೊಂದು ಅದನ್ನು ಬೇಡುತ್ತಿದೆ. ಇಂಥ ಬೇಡಿಕೆ ಸಾಧ್ಯ ಎನ್ನಬಹುದಾದ ವಿಚಿತ್ರ ತರ್ಕವೊಂದು ಇಂದು ಪ್ರಸ್ತುತತೆ ಪಡೆದಿದೆ. ಅಂದರೆ ೧೬ನೇ ಶತಮಾನದ ಪ್ರಾಕ್ತನಾಧಾರಗಳನ್ನು ಪರಿಶೀಲಿಸಿ ಇಂದು ನ್ಯಾಯ ನೀಡುವ ಸಾಧ್ಯತೆ ಹೇಗೆ ಉಂಟಾಯಿತು? ಇದನ್ನು ಎದುರಿಸಬೇಕಾದರೆ ಈ ತೀರ್ಮಾನಕ್ಕೆ ಐತಿಹಾಸಿಕ ಆಧಾರಗಳಿಲ್ಲ ಎಂದು ಸಾಧಿಸುವ ಕೆಲಸ ಅದರ ವಿರೋಧಿಗಳ ಮಾರ್ಗವಾಗುತ್ತದೆ. ಒಟ್ಟಾರೆಯಾಗಿ ಈ ಸಂಘರ್ಷವೇ ಪ್ರಸ್ತುತವಲ್ಲ ಎಂದು ವಾದಿಸಬಯಸುವವರೂ ಈ ಸಂಘರ್ಷಕ್ಕೆ ಐತಿಹಾಸಿಕ ಆಧಾರವಿಲ್ಲ ಎಂದೇ ಸಿದ್ಧಪಡಿಸುವ ಪ್ರಯತ್ನ ನಡೆಸುತ್ತಾರೆ. ಹೀಗೆ ವರ್ತಮಾನದಲ್ಲಿ ನಾವು ತೆಗೆದುಕೊಳ್ಳಬೇಕಾದ ನೈತಿಕ ನಿರ್ಧಾರಗಳಿಗೂ ಇತಿಹಾಸದ ಸತ್ಯಗಳು ಪ್ರಮಾಣವಾಗಿ ಪ್ರಸ್ತುತತೆ ಪಡೆಯುತ್ತವೆ.

ಇತಿಹಾಸಕ್ಕೆ ತನ್ನದೇ ಆದ, ವರ್ತಮಾನದಿಂದ ಹೊರತಾದ, ಅಸ್ತಿತ್ವ ಸಾಧ್ಯವಿದೆಯೆ, ಎಂಬ ಪ್ರಶ್ನೆ ಏಳುತ್ತದೆ. ಯಾವ ಇತಿಹಾಸಕ್ಕೂ ಅದು ಸಾಧ್ಯವಿಲ್ಲ. ಇತಿಹಾಸ ಎನ್ನುವುದು ವರ್ತಮಾನದ ಕ್ರಿಯೆಯಲ್ಲಿ ಹುಟ್ಟುವ ಜ್ಞಾನ. ಆದರೆ ಆ ಜ್ಞಾನಕ್ಕೆ ವರ್ತಮಾನದಲ್ಲಿ ಎಷ್ಟರಮಟ್ಟಿಗಿನ, ಯಾವ ಸ್ವರೂಪದ ಪ್ರಾಧಾನ್ಯತೆ ನೀಡುತ್ತೇವೆ ಎಂಬುದು ವ್ಯತ್ಯಾಸವಾಗಬಹುದು. ಹಿಂದೂ-ಮುಸ್ಲಿಂ ಸಂಘರ್ಷದ ರಾಜಕೀಯವು ಇತಿಹಾಸಕ್ಕೆ ಅತೀ ಪ್ರಾಧಾನ್ಯತೆಯನ್ನು ಕೊಡುವ ನಮ್ಮ ಕಾಲದ ಪ್ರವೃತ್ತಿಯಿಂದಲೇ ಹುಟ್ಟಿದ್ದು ಎಂಬುದೂ ಗಮನಿಸಬೇಕಾದ ವಿಷಯ. ಹಾಗೂ ಪೌರಾತ್ಯ ಸಂಕಥನಗಳ ಮಿತಿಗಳೂ ಈ ಜ್ಞಾನಕ್ಕೆ ಇವೆ. ಪೌರಾತ್ಯ ಸಂಕಥನಗಳೂ ವಸಾಹತುಶಾಹಿಯ ವಾಸ್ತವದಲ್ಲಿ ರೂಪುಗೊಂಡ ಜ್ಞಾನ ಪ್ರಕಾರಗಳಾಗಿವೆ.

೩. ಇತಿಹಾಸದ ಧ್ಯೇಯಗಳಲ್ಲಿ ಮನುಷ್ಯರ 'ನೆಮ್ಮದಿಯನ್ನು ಉಳಿಸುವ' ಕೆಲಸಕ್ಕೆ ಆದ್ಯತೆ ನೀಡಿದ್ದನ್ನು ಅದರ ಯಾವ ವ್ಯಾಖ್ಯೆಗಳಲ್ಲೂ ನಾನು ಗಮನಿಸಿಲ್ಲ. ಗತಕಾಲವನ್ನು ಆದಷ್ಟೂ ಇದ್ದಕ್ಕಿದ್ದಂತೇ ಪುನರ್‌ರಚಿಸುವುದು ಇತಿಹಾಸದ ಧ್ಯೇಯವಾಗಿದೆ. ಇಲ್ಲಿ ನಮ್ಮ ಭವಿಷ್ಯದ ಸಾಧನೆಗಾಗಿ ಒದಗಬಲ್ಲ ಒಂದು ಜ್ಞಾನ ಎಂದೂ ಅದನ್ನು ಗ್ರಹಿಸಲಾಗಿದೆ. ವರ್ತಮಾನದಲ್ಲಿ ನೆಮ್ಮದಿಯನ್ನು ನೀಡುವ ಇತಿಹಾಸವನ್ನು ಮಾತ್ರ ಸಂಶೋಧಿಸುವಾ, ನೆಮ್ಮದಿಯನ್ನು ಹಾಳುಮಾಡುವ ಇತಿಹಾಸವನ್ನು ಬಿಟ್ಟುಬಿಡುವಾ ಎಂಬ ತೀರ್ಮಾನ ಮನಸ್ಸಿಗೆ ಸಮಾಧಾನ ತರಬಹುದು. ಆದರೆ ಒಬ್ಬರ ನೆಮ್ಮದಿ ಮತ್ತೊಬ್ಬರ ದುಃಖವಾಗುವ ವಿಪರ್ಯಾಸದ ವಾಸ್ತವಕ್ಕೆ ಇತಿಹಾಸವು ಏನು ಪರಿಹಾರ ಹೇಳಬಹುದು? ನಾನು ಹೇಳುವ ಇತಿಹಾಸ ಮತ್ತೊಬ್ಬನ ನೆಮ್ಮದಿಯನ್ನು ಹಾಳು ಮಾಡಬಹುದು, ಅವನನ್ನು ಕೆರಳಿಸಲೂಬಹುದು ಎಂಬ ವಾಸ್ತವವನ್ನು ಹೇಗೆ ಉಪೇಕ್ಷಿಸಲು ಸಾಧ್ಯ? ಆ ಕಾರಣದಿಂದ ಸಂಶೋಧನೆಯನ್ನು ಬಿಡಲು ಸಾಧ್ಯವೆ? ಸಾರ್ವತ್ರಿಕವಾಗಿ ನೆಮ್ಮದಿಯನ್ನು ತರುವ ಇತಿಹಾಸ

ಎನ್ನುವುದೊಂದು ಉಳಿದುಕೊಳ್ಳುತ್ತದೆಯೆ ? ಇತಿಹಾಸವು ಒಂದು ಜ್ಞಾನ ಪ್ರಕಾರವಾಗಿ ಈ ವಾಸ್ತವವನ್ನು ಎದುರಿಸಲು ಸೋಲುತ್ತದೆ.

ಈ ಮೇಲಿನ ಉತ್ತರವು ಹಾರಿಕೆಯದೆಂದೋ, ಅಪಾಯಕಾರಿ ಎಂದೋ ಗ್ರಹಿಸುವ ಅಗತ್ಯವಿಲ್ಲ. ನಾನು ಹೇಳಬಯಸುವುದೆಂದರೆ ವರ್ತಮಾನದ ನೆಮ್ಮದಿ ಇತಿಹಾಸದಿಂದ ನಿರ್ಣಯವಾಗುತ್ತದೆ ಎಂದೇ. ಆದರೆ ಈ ಮೇಲಿನ ತೊಡಕುಗಳೂ ಎದುರಾಗುತ್ತವೆ ಎಂಬುದನ್ನಷ್ಟೇ. ಇತಿಹಾಸದ ಜೊತೆ ಭಾವನಾತ್ಮಕವಾಗಿ ಗುರುತಿಸಿಕೊಂಡು ನೆಮ್ಮದಿ ಪಡೆಯುತ್ತೇವೆ ಎಂದರೆ ಅದೊಂದು ಮರೀಚಿಕೆಯಾಗಬಹುದು ಅಷ್ಟೆ. ಇಲ್ಲ ಇಂದಿನ ರಾಜಕೀಯ ಕಾರ್ಯಕ್ರಮಕ್ಕೆ ನೆಲೆಯಾಗಬಹುದು. ಇತಿಹಾಸವನ್ನು ಬಳಸಿಕೊಂಡ ಒಂದು ರಾಜಕೀಯ ಮನುಷ್ಯರ ನೆಮ್ಮದಿಯನ್ನು ಹಾಳುಮಾಡುತ್ತದೆ ಅಂತಾದರೆ 'ಮನುಷ್ಯರ ನೆಮ್ಮದಿಯನ್ನು ಹಾಳುಮಾಡುವ ಈ ರಾಜಕೀಯ ಅಗತ್ಯವೆ ?' ಎಂದು ಯೋಚಿಸುವುದು ಹೆಚ್ಚು ವಾಸ್ತವಿಕವಾಗಬಹುದಲ್ಲ ?

೪. ನಮ್ಮಲ್ಲಿ ವಸಾಹತು ಕಾಲದಿಂದ 'ರಿಲಿಜಿಯಸ್ ಹಿಸ್ಟರಿ' ಎಂಬುದೊಂದು ಪ್ರಕಾರವು ಸೃಷ್ಟಿಯಾಗಿದೆ. ಈ ಇತಿಹಾಸದಲ್ಲಿ ಭಾರತದ ವಿಭಿನ್ನ ಮತಗಳ, ದೇವತಾ ಪಂಥಗಳ, ದರ್ಶನ ಸಂಪ್ರದಾಯಗಳ ಇತಿಹಾಸವನ್ನು ಕಥಿಸಲಾಗಿದೆ. ಹಾಗೂ ಈ ಇತಿಹಾಸದಲ್ಲಿ ಹಿಂದೂ, ಮುಸ್ಲಿಂ, ಬೌದ್ಧ, ಜೈನ ಮುಂತಾದ 'ರಿಲಿಜನ್'ಗಳನ್ನು ಗುರುತಿಸಲಾಗಿದೆ ಮತ್ತು ಪಾಶ್ಚಾತ್ಯ ರಿಲಿಜಿಯಸ್ ಹಿಸ್ಟರಿಯ ಪಡಿಯಚ್ಚಿನಲ್ಲೇ ಅದನ್ನು ಕಾಣಲಾಗಿದೆ. ಇದು 'ಧಾರ್ಮಿಕ' ಇತಿಹಾಸದ ಇಂಗಿತವಾಗಿದ್ದರೆ ಅದಕ್ಕೇ ಒತ್ತು ನೀಡುವ ಸಂದರ್ಭ ಇಂದು ಉಂಟಾಗಿದೆ. ಆದರೆ ಅದು ಒಂದು ನಿರ್ದಿಷ್ಟ ರೀತಿಯಲ್ಲಿ ರಾಷ್ಟ್ರ ಪ್ರಭುತ್ವದ ನೆಲೆಗೆ ಬಳಕೆಯಾಗುತ್ತಿದೆ ಎಂಬುದನ್ನೂ ಗಮನಿಸಬೇಕು. ಹಾಗಾಗಿ ಅಧ್ಯಯನ ಆಗಬೇಕಾದ ರೀತಿಯಲ್ಲಿ ಈ ಕ್ಷೇತ್ರದಲ್ಲಿ ಆಗುತ್ತಿಲ್ಲ ಎಂಬ ವಾಸ್ತವವನ್ನು ಓದುಗರ ಗಮನಕ್ಕೆ ತರಬಯಸುತ್ತೇನೆ. ಇತಿಹಾಸದ ಅಧ್ಯಯನವು ಪಾಶ್ಚಾತ್ಯ ಗ್ರಹಿಕೆಯಿಂದ ಕಳಚಿಕೊಳ್ಳಬೇಕು ಹಾಗೂ ಅಂಥದೊಂದು ಅಧ್ಯಯನ ನಡೆಯಬೇಕು ಎಂದು ಬಯಸುವ ವಿದ್ವಾಂಸರೂ ಇದ್ದಾರೆ.

ಇಂದು ಈ ಮೇಲೆ ಉಲ್ಲೇಖಿಸಿದ ಪಾಶ್ಚಾತ್ಯ ಅರ್ಥದಲ್ಲಿ ಧಾರ್ಮಿಕ ಇತಿಹಾಸವು ಸಮಸ್ಯಾತ್ಮಕವಾಗಿ ಏಕೆ ಕಾಣುತ್ತಿದೆ, ಎಂಬುದನ್ನು ಕುರಿತು ಪರಿಶೀಲಿಸುವುದು ಅಗತ್ಯವಾಗಿದೆ. ಈ ಮತಗಳು, ದೇವತಾ ಪಂಥಗಳು, ಸಂಪ್ರದಾಯಗಳು ಮುಂತಾದವೆಲ್ಲ ಪ್ರಗತಿ ವಿರೋಧಿ ಎಂದು ಪ್ರಗತಿಪರರು ಗ್ರಹಿಸುತ್ತಾರೆ. ಅದು ಒಂದು ಅವೈಚಾರಿಕ ವ್ಯವಸ್ಥೆಯಾಗಿದ್ದು, ಐತಿಹಾಸಿಕ ಪರಿವರ್ತನೆಯನ್ನು, ಪ್ರಗತಿಯನ್ನು ತಡೆಯುತ್ತದೆ. ಶೋಷಣಾತ್ಮಕವಾಗಿದೆ ಎಂದೂ ಈ ನಿಲುವಿನವರು ಗ್ರಹಿಸುತ್ತಾರೆ. ಆದರೆ ಈ ಸಂಸ್ಥೆಗಳ ಇತಿಹಾಸವನ್ನು ಗಮನಿಸಿದರೆ ಈ ಮೇಲಿನ ಗ್ರಹಿಕೆಗೆ ವ್ಯತಿರಿಕ್ತವಾದ ಮಾಹಿತಿಗಳೂ ನಮಗೆ ದೊರೆಯುತ್ತವೆ. ಹಾಗಾದರೆ ಇಂಥ ಐತಿಹಾಸಿಕ ಮಾಹಿತಿಗಳನ್ನು ಇಟ್ಟುಕೊಂಡು ಈ ಮೇಲಿನ ರೀತಿಯ ಐತಿಹಾಸಿಕ ಗ್ರಹಿಕೆ ಎಲ್ಲಿಂದ ಬಂದಿತು ? ಬಹುಶಃ ಬೇರೆ ಬೇರೆ ಸಿದ್ಧಾಂತಗಳಿಂದ ಬಂದಿರಬಹುದು. ಏಕೆ ನಾವು ಈ ಎಲ್ಲ ಪ್ರಕಾರದ ಇತಿಹಾಸಗಳನ್ನೂ 'ಧಾರ್ಮಿಕ' ಎಂದು ಸಾಧಾರಣೀಕರಿಸುತ್ತೇವೆ ? ಏಕೆಂದರೆ ಇವುಗಳಿಗೆಲ್ಲ ನಾವು 'ರಿಲಿಜನ್' ಎಂಬ ಪರಿಕಲ್ಪನೆಯನ್ನು ಹಚ್ಚುತ್ತೇವೆ. ಅಂದಮೇಲೆ 'ಹಿಂದೂ'ಎಂಬ ಒಂದು ಧರ್ಮವು ಸೆಮೆಟಿಕ್ ಧರ್ಮಗಳಂತೇ ಇಲ್ಲ ಎಂದು ನಾವು ವಾದಿಸಿದರೂ ಅದಕ್ಕೆ 'ರಿಲಿಜನ್' ಪರಿಕಲ್ಪನೆಯನ್ನೂ, ಅದರ ಕುರಿತು ಆಧುನಿಕ ಪಾಶ್ಚಾತ್ಯರು ಆರೋಪಿಸುವ ಗುಣಗಳನ್ನೂ ಹಚ್ಚುವದನ್ನೂ ಬಿಟ್ಟಿಲ್ಲ ಎಂದಂತಾಯಿತು. ಇದೇ ಪರಿಕಲ್ಪನೆಯನ್ನು ಇಟ್ಟುಕೊಂಡೇ 'ಹಿಂದುತ್ವ'ದ ರಾಜಕೀಯವೂ ಹುಟ್ಟಿದೆ. ಅವರ ವಾದವೆಂದರೆ ಹಿಂದುತ್ವಕ್ಕೆ 'ರಿಲಿಜನ್'ನ ಎಲ್ಲ ಅಂಶಗಳನ್ನೂ ಸೇರಿಸಿ ಅದನ್ನು ಪ್ರಾಯೋಗಿಕವಾಗಿ ಒಂದು ಸರ್ವವ್ಯಾಪೀ ರಚನೆಯನ್ನಾಗಿ ಮಾಡಬೇಕು ಎಂಬುದಾಗಿದೆ. ಹಾಗೂ ಅದನ್ನಾಧರಿಸಿ ಒಂದು ರಾಷ್ಟ್ರ ಪ್ರಭುತ್ವವನ್ನು ನಿರ್ಮಿಸಬೇಕೆಂಬುದಾಗಿದೆ. ಅವರ ಇತಿಹಾಸಕ್ಕೆ ಅದೇ ಮುಖ್ಯ.

ಹಾಗಾಗಿ ಭಾರತೀಯ ಮತಗಳೋ, ಅಥವಾ ಅಂಥ ಸಮುದಾಯಗಳೋ ತಮ್ಮದೇ ಆದ ಇತಿಹಾಸವನ್ನು ತಿಳಿಸುತ್ತಿದ್ದರೆ ನಾವಂತೂ ಅದನ್ನು ಸರಿಯಾಗಿ ತಿಳಿದುಕೊಂಡಿಲ್ಲ. ಅದನ್ನು ಗ್ರಹಿಸುವ ಕೆಲಸವಷ್ಟೇ ಎಲ್ಲ ಇತಿಹಾಸವೂ ಅಲ್ಲ, ಎಂಬುದು ನಿಜ. ಆದರೆ ಅದನ್ನು ತಿಳಿದುಕೊಳ್ಳುವುದೂ ಮಹತ್ವಪೂರ್ಣವೇ ಆಗಿದೆ.

೫. ಇತಿಹಾಸದ ಅಧ್ಯಯನಕ್ಕೆ ಅದರದ್ದೇ ಆದ ಮಿತಿಗಳು ಹಾಗೂ ಸಮಸ್ಯೆಗಳು ಇರುತ್ತವೆ. ಆ ಅಧ್ಯಯನ ನಡೆಸುವವನಿಗೆ ಅವನದೇ ಆದ ಮಿತಿಗಳು ಹಾಗೂ ಸಮಸ್ಯೆಗಳು ಇರುತ್ತವೆ. ದಾಖಲೆಗಳಿಂದ ಈಗಾಗಲೇ ಸಿದ್ಧವಾದ ಸತ್ಯಗಳನ್ನು ಪ್ರಶ್ನಿಸುವುದು ಈ ಕಾರಣದಿಂದ ಇತಿಹಾಸದಲ್ಲಿ ಒಂದು ಸಕ್ರಮವಾದ ಕ್ರಿಯೆಯೇ ಆಗಿದೆ. ಹಾಗಾಗಿ ದಾಖಲೆ ಏನನ್ನು ತಿಳಿಸುತ್ತದೆ ಎಂಬುದು ಸದಾ ಪ್ರಶ್ನಾರ್ಹವಾಗಿ ಉಳಿಯುತ್ತದೆ. ಈ 'ವಿಚಾರಣೆ'ಯ ಮಾರ್ಗ ಪ್ರಾರಂಭವಾದದ್ದೇ ಸಾಂಪ್ರದಾಯಿಕ ಐತಿಹ್ಯಗಳನ್ನು, ಪುರಾಣಗಳನ್ನು ಪ್ರಶ್ನಿಸಿದ ಆಧುನಿಕ ಇತಿಹಾಸ ಅಧ್ಯಯನಗಳಿಂದ. ಮತ ಪಂಥೀಯ ಪುರಾಣಗಳನ್ನು ಮತಶ್ರದ್ಧೆಯ ಒಂದು ಭಾಗವಾಗಿ ಒಪ್ಪಿಕೊಳ್ಳಲಾಗುತ್ತಿತ್ತು. ಹಾಗೆ ಒಪ್ಪಿಕೊಳ್ಳುವುದು ವೈಜ್ಞಾನಿಕವಲ್ಲ, ಮನುಷ್ಯನು ತನ್ನ ವಿಚಾರ ಮತ್ತು ತರ್ಕಗಳಿಂದ ಸತ್ಯಗಳನ್ನು ಹೊರತೆಗೆದು ಇತಿಹಾಸವನ್ನು ಕಟ್ಟಬೇಕು ಎಂದು ಈ ಇತಿಹಾಸ ಹೇಳುತ್ತದೆ. ಸತ್ಯವನ್ನು ಶೋಧಿಸುವ ವೈಜ್ಞಾನಿಕ ಕ್ರಮದಲ್ಲಿ ಬದಲಾವಣೆಯಾದರೆ ಅಥವಾ ಅವುಗಳನ್ನು ಅರ್ಥೈಸುವ ಸಿದ್ಧಾಂತಗಳಲ್ಲಿ ಬದಲಾವಣೆಯಾದರೆ ಈಗಾಗಲೇ ತಿಳಿದ ಸತ್ಯವನ್ನು ಪ್ರಶ್ನಿಸುವ ಹಾಗೂ ಹೊಸ ಸತ್ಯಗಳನ್ನು ಮಂಡಿಸುವ ಕ್ರಿಯೆ ಜರುಗುತ್ತದೆ. ಅದಕ್ಕೇ ವರ್ತಮಾನದ ಸನ್ನಿವೇಶ ಬದಲಾದಂತೆ ಇತಿಹಾಸವೂ ಬದಲಾಗುತ್ತದೆ, ಇತಿಹಾಸವನ್ನು ಕಾಲಕಾಲಕ್ಕೆ ಪುನರ್ರಚಿಸಬೇಕು ಎಂಬೆಲ್ಲ ಹೇಳಿಕೆಗಳು ವೈಜ್ಞಾನಿಕ ಇತಿಹಾಸದಲ್ಲಿ ಸಾಮಾನ್ಯ. 'ಇತಿಹಾಸವನ್ನು ತಿದ್ದುಪಡಿ ಮಾಡಬೇಕು' ಎಂಬ ಹೇಳಿಕೆ ಅದರಷ್ಟಕ್ಕೆ ವೈಜ್ಞಾನಿಕವಾಗಿಯೇ ಇದೆ.



ಇತಿಹಾಸದ ಅಧ್ಯಯನದಲ್ಲಿ ಸತ್ಯ, ನಿಜ ಎಂಬೆಲ್ಲ ಶಬ್ದಗಳಿಗೆ ನಿರ್ದಿಷ್ಟಾರ್ಥವಿಲ್ಲ. ಒಂದೇ ಭಾಷೆಯನ್ನು ಬಳಸುವ ಇತಿಹಾಸಕಾರರಿಗೆ ಒಂದು ದಾಖಲೆಯಲ್ಲಿ ಬರುವ ವಾಚ್ಯಾರ್ಥಗಳನ್ನು ನಿರ್ವಿವಾದಿತವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಆದರೆ ಸೂಚ್ಯಾರ್ಥಗಳನ್ನು ಗ್ರಹಿಸುವಲ್ಲಿ ಒಮ್ಮತ ಬರದೇ ಇರಬಹುದು. ಅಲ್ಲಿ ವರ್ತಮಾನದ ಸನ್ನಿವೇಶಗಳು ಪ್ರಸ್ತುತತೆ ಪಡೆದುಕೊಳ್ಳುತ್ತವೆ. ಇದಲ್ಲದೇ ಕೆಲ ಮಾಹಿತಿಗಳನ್ನು ತಾಂತ್ರಿಕ ಪರಿಣತಿಯಿಂದ ಪಡೆಯಬೇಕಾಗುತ್ತದೆ, ಹಾಗೂ ಪರಿಣತರು ಹೇಳಿದ್ದನ್ನು ಉಳಿದವರು ಒಪ್ಪಿಕೊಳ್ಳಬೇಕಾಗುತ್ತದೆ. ಈ ಪರಿಣತರು ವರ್ತಮಾನದ ಯಾವುದೋ ಉದ್ದೇಶಕ್ಕೆ ಬದ್ಧರಾದರೆ ಮಾಹಿತಿಗಳ ಆಯ್ಕೆ ನಡೆದರೂ ಉಳಿದವರಿಗೆ ಗೊತ್ತಾಗುವುದಿಲ್ಲ.

ಇವೆಲ್ಲವುಗಳನ್ನು ಗಮನಿಸಿದಾಗ ದಾಖಲೆಗಳಲ್ಲಿರುವ ಸತ್ಯಗಳು ಇತಿಹಾಸಕಾರರ ಮರ್ಜಿಗೆ ಒಳಪಟ್ಟಿರುವುದು ದೃಢವಾಗುತ್ತದೆ. ಇಂಥ ಸನ್ನಿವೇಶದಲ್ಲಿ ಸತ್ಯವನ್ನು ಪ್ರಶ್ನಿಸುವುದೊಂದೇ ಸುರಕ್ಷಿತ ಮಾರ್ಗ. ಅದು ಎಲ್ಲಿ ಸಮಸ್ಯಾತ್ಮಕವಾಗುತ್ತದೆ ಎಂದರೆ ವರ್ತಮಾನದ ಅನ್ಯ ಉದ್ದೇಶಗಳಿಗೆ ಈ ಪ್ರಕ್ರಿಯೆಯನ್ನು ಬಳಸಿಕೊಂಡಾಗ. ಹಾಗಾಗಿ ಅಂಥ ಸಂದರ್ಭಗಳಲ್ಲಿ 'ದಾಖಲೆಗಳು ತಿಳಿಸುವ ಸತ್ಯವನ್ನು ಒಪ್ಪಿಕೊಳ್ಳಲು ಇರುವ ಕಷ್ಟವೇನು ?' ಎಂದರೆ 'ವರ್ತಮಾನದಲ್ಲಿ ನಿರ್ದಿಷ್ಟ ನಿಲುವುಗಳಿಗೆ, ವಾಸ್ತವಗಳಿಗೆ ಬದ್ಧರಾದವರಿಗೆ' ಕೆಲವು ಸತ್ಯಗಳನ್ನು ಒಪ್ಪಿಕೊಳ್ಳಲು ಸುಲಭ ಹಾಗೂ ಇನ್ನು ಕೆಲವನ್ನು ಒಪ್ಪಿಕೊಳ್ಳಲು ಕಷ್ಟವಾಗುತ್ತದೆ ಎನ್ನಬಹುದು.



**ಡಾ॥ ರಾಜಾರಾಂ ಹೆಗಡೆ**
ಇತಿಹಾಸ ಮತ್ತು ಪ್ರಾಕ್ತನ
ಶಾಸ್ತ್ರ ವಿಭಾಗ,
ಕುವೆಂಪು ವಿಶ್ವವಿದ್ಯಾಲಯ,
ಶಂಕರಘಟ್ಟ, ಶಿವಮೊಗ್ಗ

ಧರ್ಮನಿರಪೇಕ್ಷೆಯ ಸಂಕಲ್ಪನೆಯಲ್ಲಿ ಜನತೆಯ ಧರ್ಮಶ್ರದ್ಧೆಯ ವಿಚಾರ ಅಪ್ರಸ್ತುತ ಎನ್ನುವುದು ಸರಿಯಾದರೂ ಕೂಡ, ಧರ್ಮಶ್ರದ್ಧೆಯು ಧರ್ಮನಿರಪೇಕ್ಷತೆಗೆ ಸವಾಲಾಗಿ ನಿಂತಿರುವುದರಿಂದ ಈ ಕುರಿತು ವಿಶೇಷ ಚಿಂತನೆಯ ಆವಶ್ಯಕತೆ ಇದೆ. ಜೀವಸೃಷ್ಟಿಯ ಸ್ವಯಂ ನಿಯಂತ್ರಿತ ನಿರ್ಮಿತಿ ಪ್ರಕ್ರಿಯೆಯಲ್ಲಿ ನಿಸರ್ಗದತ್ತ ಪ್ರೇರಣೆಗಳಿಂದ ಜೀವನ ನಿರ್ವಹಿಸುವ ಪ್ರಾಣಿಗಳದು ಒಂದು ಹಂತ. ಪ್ರಾಣಿ ವರ್ಗದಲ್ಲಿ ವಿಚಾರಶಕ್ತಿ ಮೂಡಿಬಂದು ಮಾನವ ಪ್ರಾಣಿ ರೂಪಗೊಂಡಂದಿನಿಂದ, ಮಾನವಾತೀತ ಶಕ್ತಿಗಳ ವಿಚಾರ ಮನದಲ್ಲಿ ಸುಳಿದು ಬೆಳೆದು ಬಂದುದನ್ನು ಮಾನವ ವಂಶಶಾಸ್ತ್ರವು ನಿಚ್ಚಳವಾಗಿ ತೋರಿಸಿಕೊಟ್ಟಿದೆ.

# ಧರ್ಮನಿರಪೇಕ್ಷತೆ ಧರ್ಮಶ್ರದ್ಧೆ ಧರ್ಮಾಂಧತೆ

**ಶಂಕರ ಮ. ಪಾಟೀಲ**

**ಧ**ರ್ಮನಿರಪೇಕ್ಷತೆ ಎಂಬ ಶಬ್ದ ಹಾಗೂ ಅದು ರೂಪಿಸಿಕೊಡುವ ಸಂಕಲ್ಪನೆಯ ಕುರಿತು – ಒಂದು ರಾಜ್ಯ ಶಾಸನ ವ್ಯವಸ್ಥೆಯ ಆದರ್ಶದ ಸಂಕಲ್ಪನೆಗೆ ರೂಢವಾಗಿ ಬಂದಿರುವ ಹಾಗೂ 'ಸೆಕ್ಯುಲರಿಸಂ' ಎಂಬ ಇಂಗ್ಲಿಷ್ ಪದಕ್ಕೆ ಸಮನಾರ್ಥವಾಗಿ ಬಳಸಲ್ಪಡುತ್ತಿರುವ ಈ ಶಬ್ದ ಸಮುಚ್ಚಯದ ಆಶಯಗಳ ಕುರಿತು – ಖಚಿತತೆಗಿಂತ ವೈಚಾರಿಕ ಗೊಂದಲವೆ ಹೆಚ್ಚುತ್ತಲಿರುವುದು ಒಂದು ವಿಷಾದನೀಯ ಸಂಗತಿಯಾಗಿದೆ. ಈ ಸಂದರ್ಭದಲ್ಲಿ, ಮಾನವನ ಸಾಮಾಜಿಕ ರಾಜಕೀಯ ಸಂಘಟನೆಯ ವಿವಿಧ ಚಾರಿತ್ರಿಕ ರೂಪಗಳಲ್ಲಿ ಒಂದಾದ ಧರ್ಮನಿಯಂತ್ರಿತ ಶಾಸನ ವ್ಯವಸ್ಥೆಯ ವಿಚಾರಸರಣಿಯನ್ನು ಪೂರ್ತಿಯಾಗಿ ಮೈಯಲ್ಲಿ ಇಂಗಿಸಿಕೊಂಡಿರುವ ಆದರೂ ಪ್ರಜಾಸತ್ತಾತ್ಮಕ ರಾಜಕೀಯ ಧೋರಣೆಯನ್ನು ಮುಖವಾಡವಾಗಿ ಹೊಂದಿರುವ ಶಕ್ತಿಗಳು ಈ ಧರ್ಮನಿರಪೇಕ್ಷತೆಯ ಸಂಕಲ್ಪನೆಯನ್ನು ವೈಚಾರಿಕ ಗೊಂದಲದಲ್ಲಿ ಪ್ರಯತ್ನಪೂರ್ವಕವಾಗಿ ಸಿಲುಕಿಸುತ್ತಿರುವುದು ಸ್ಪಷ್ಟವಾಗಿ ಕಾಣುತ್ತಿದೆ. ಆದರೂ ಸಾಮಾಜಿಕ-ರಾಜಕೀಯ ಸಂರಚನೆಯಲ್ಲಿ, ಅದರ ಶಾಸನ ವ್ಯವಸ್ಥೆಯಲ್ಲಿ ಧರ್ಮದ ಅಂದರೆ ಯಾವುದೇ ಶ್ರದ್ಧಾಮೂಲ ಮತೀಯ ವಿಚಾರ ಪ್ರಣಾಳಿಕೆಗೆ ಅವಕಾಶ ಅಧಿಕಾರ ಇರಕೂಡದು ಎಂಬ ತಾತ್ವಿಕ ನಿಲುವನ್ನು ತಳೆದಿರುವ ವಿಚಾರವಂತರು ಈ ದಿಶೆಯಲ್ಲಿ ಜನತೆಯ ಪ್ರಜ್ಞೆಯನ್ನು ಜಾಗೃತಗೊಳಿಸುವ ಪರಿಣಾಮಕಾರಿ ಪ್ರಯತ್ನ ಮಾಡದೆ ಇರುವುದು ಖೇದಕರವಾಗಿದೆ. ಪರಿಣಾಮವಾಗಿ ಧರ್ಮಾಧಿಷ್ಠಿತ ಶಕ್ತಿಗಳು ತಾವು ತಳೆದಿರುವ ಧೋರಣೆಯೆ ನಿಜವಾದ ಧರ್ಮನಿರಪೇಕ್ಷೆಯೆಂದೂ ಇತರ ವಿಚಾರವಂತರು ಮಂಡಿಸುವ ಧೋರಣೆಯು ಖೋಟಾ ಧರ್ಮನಿರಪೇಕ್ಷತೆಯೆಂದೂ ಭಂಡತನದ ಮಾತುಗಳನ್ನು ಹೇಳುತ್ತ ಹೊರಟಿರುವುದೂ, ಜನರಲ್ಲಿ ಅದೇ ವಿಚಾರಕ್ಕೆ ಅನುಕೂಲ ಮತ ನಿರ್ಮಾಣಗೊಳಿಸುತ್ತಿರುವುದೂ ಸಲೀಸಾಗಿ ನಡೆಯುತ್ತಿದೆ. ಒಂದೇ ಮೆದುಳು, ಒಂದೇ ಮನ ಹೊಂದಿರುವ ಈ ಮಹಾಕಾಯ ಪ್ರಾಣಿಯ ರಾಜಕೀಯ ಪಕ್ಷ ಮುಖದಿಂದ ಧರ್ಮನಿರಪೇಕ್ಷತೆಯ ತತ್ವದ ಮನ್ನಣೆಯ ಮಾತುಗಳು ಹೊರಬರುತ್ತವೆ. ಇದು ಅನಿವಾರ್ಯ. ಏಕೆಂದರೆ ರಾಷ್ಟ್ರದ ವಿವಿಧ ಶಾಸನ ಸಂಸ್ಥೆಗಳಲ್ಲಿ ಅಧಿಕಾರ ಚಲಾಯಿಸುವುದಕ್ಕೆ, ಧರ್ಮನಿರಪೇಕ್ಷತೆಯ ತತ್ವವನ್ನು ಒಳಗೊಂಡಿರುವ ಭಾರತದ ಸಂವಿಧಾನಕ್ಕೆ ನಿಷ್ಠೆಯನ್ನು ತಳೆದಿರುವುದಾಗಿ ಪ್ರತಿಜ್ಞೆಯನ್ನು ಮಾಡುವುದು ಬಂಧನಕಾರಿಯಾಗಿದೆ. ಆದರೆ ಆಕ್ಟೋಪಸ್‌ನಂತಿರುವ ಈ ಪ್ರಾಣಿಯ ಇನ್ನೊಂದು ಮುಖವು ತನ್ನ ಒಂದೇ ಆಗಿರುವ ಮೆದುಳು ಮನಗಳಿಂದಲೇ ಪ್ರೇರಿತವಾಗಿ ಭಾರತ ದೇಶವು ಒಂದು ಧರ್ಮಸತ್ತೆಯಾಗಬೇಕು, ಹಿಂದೂರಾಷ್ಟ್ರವಾಗಬೇಕು ಎಂದು ಧರ್ಮನಿಯಂತ್ರಿತ ಶಾಸನ ವ್ಯವಸ್ಥೆಯನ್ನು ಬಹಿರಂಗವಾಗಿಯೆ ಸಮರ್ಥಿಸುತ್ತಿದೆ. ರಾಜಕೀಯ ಪಕ್ಷ ಮುಖವು, ಈ ಉಗ್ರ ಧರ್ಮಾಂಧ ಮುಖ ತನ್ನದಲ್ಲವೆಂದು ಅಲ್ಲಗಳೆದು ಝಾಡಿಸಿಕೊಳ್ಳುತ್ತದೆ. ಇದು 'ಇಬ್ಬಗೆಯ ಮಾತಿ'ನ ಧಾಟಿ ಎಂಬುದನ್ನು ಪ್ರಾಜ್ಞರು ಅರಿಯಬಲ್ಲರು. ರಾಜಕಾರಣ, ಸಮಾಜಕಾರಣ, ಅರ್ಥಕಾರಣ, ಸಂಸ್ಕೃತಿ, ಧರ್ಮಕಾರಣ, ವಿದ್ಯಾರ್ಥಿವಲಯ ಇತ್ಯಾದಿ ವಿವಿಧ ಕ್ಷೇತ್ರಗಳಲ್ಲಿಯ ಸಂಘಟನೆಗಳ ರೂಪದಲ್ಲಿರುವ ಈ ಎಲ್ಲ ಮುಖಗಳಿಗೂ ಮೂಲ ಪ್ರೇರಣೆ, ಪ್ರಚೋದನೆ, ಪ್ರಶಿಕ್ಷಣ ದೊರೆಯುವುದು ಆ ಒಂದೇ ಮೆದುಳು-ಮನಗಳಿಂದ ಈ ಎಲ್ಲಾ ಕ್ಷೇತ್ರಗಳಲ್ಲಿಯ ಸಂಘಟನೆಗಳ ನಿಯಂತ್ರಕ ಅಧಿಕಾರಿ ವ್ಯಕ್ತಿಗಳು. ಮೂಲ 'ಸಂಘಟನೆಯ ನಿಷ್ಠಾವಂತ ಸಮರ್ಪಿತ ಪ್ರಚಾರಕ' ಕಾರ್ಯಕರ್ತರು ಎಂಬುದನ್ನು ಅಧೋರೇಖಿತಗೊಳಿಸುವುದು ಅತ್ಯವಶ್ಯವಾಗಿದೆ.

ಮತಧರ್ಮ ವಾದವನ್ನೇ-ಹಿಂದುತ್ವವನ್ನೇ ಪುರಸ್ಕರಿಸುವ ಇಂಥದೆ ಇನ್ನೊಂದು 'ಸಿಂಹಮುಖ' ರಾಜಕೀಯ ಸಂಘಟನೆಯ ಸರ್ವಾಧಿಕಾರಿಯು (ನಿನ್ನ ಕೇಸರಿ ವರ್ಣಕ್ಕಿಂತ ನನ್ನ ಕೇಸರಿ ವರ್ಣನೆ ಹೆಚ್ಚು ಗಡದ್ದಾಗಿದೆ ಎಂದು ಸಂಘವನ್ನೇ ಮೂದಲಿಸುವಂತೆ ಮಾತನಾಡುವ ಪರಿಪಾಠ ಇವರಿಗೆ) ಈ ದೇಶದಲ್ಲಿಯ ಧರ್ಮವೊಂದರ ಅನುಯಾಯಿಗಳ ಮತದಾನದ ಹಕ್ಕನ್ನು ಕಸಿದುಕೊಳ್ಳುವ ಸೂಚನೆಯನ್ನೂ ನೀಡುವ ಮಟ್ಟಕ್ಕೂ ಹೋಗುತ್ತಾರೆ. (ಈ ವಿಚಾರದ ಬೀಜವು ಸುಮಾರು ೬೦ ವರ್ಷಗಳ ಹಿಂದೆಯೆ ಅಂದಿನ ಸರಸಂಘಚಾಲಕರು ಹೇಳಿದ ಈ ಮಾತುಗಳಲ್ಲಿ ಇದೆ : ''ಹಿಂದುಸ್ತಾನದಲ್ಲಿರುವ ಹಿಂದುಗಳಲ್ಲದ ಜನರು... ಸಂಪೂರ್ಣವಾಗಿ ಹಿಂದುರಾಷ್ಟ್ರಕ್ಕೆ ಅಧೀನರಾಗಿ ಬದುಕಬೇಕು. ಯಾವುದೇ ಹೆಚ್ಚಿನ ಸೌಲಭ್ಯಗಳನ್ನು ಕಡೆಗೆ ಪೌರತ್ವವನ್ನು ಕೂಡ ನಿರೀಕ್ಷಿಸಬಾರದು'' – ಶ್ರೀ ಎಂ. ಎಸ್. ಗೋಲವಲಕರ). ಮಾತು ಮಾತಿಗೆ ಶಿವಾಜಿಯ ಹೆಸರನ್ನು ಉದ್ಗರಿಸುವ ಈ ಶಿವಸೇನೆಯ ಮಹಾನಾಯಕರು, ತಾವು ಯಾವ ಧರ್ಮೀಯರ ನಾಗರಿಕ ಅಸ್ತಿತ್ವವನ್ನೇ ಅಳಿಸಿಹಾಕುವ ಯೋಚನೆ ಮಾಡುತ್ತಿರುವರೊ ಅದೇ ಧರ್ಮಕ್ಕೆ ಸೇರಿದ ಪರಾಕ್ರಮಿ ಯೋಧರನ್ನು ಶಿವಾಜಿ ಮಹಾರಾಜರು ತಮ್ಮ ಸೈನ್ಯದಲ್ಲಿ ಇಟ್ಟುಕೊಂಡಿದ್ದರಲ್ಲದೆ, ಪ್ರಮುಖ ಜವಾಬ್ದಾರಿಯ ಸ್ಥಾನಗಳನ್ನೂ ಕೊಟ್ಟಿದ್ದರು ಎಂಬುದನ್ನು ಸುಲಭವಾಗಿ ಮರೆತುಬಿಡುತ್ತಾರೆ.

ಪ್ರಜಾಪ್ರಭುತ್ವ ರಾಜ್ಯ ವ್ಯವಸ್ಥೆಯಲ್ಲಿ ಚುನಾವಣೆಗಳು ಸತ್ತೆಯ ಏಕಮೇವ ಮಾರ್ಗ. ಚುನಾವಣೆಯು ನಾಗರಿಕನ ರಾಜಕೀಯ ಹಕ್ಕನ್ನು ಪ್ರಯೋಗಿಸುವ ಮಾಧ್ಯಮ ಎಂದು ತಾತ್ವಿಕವಾಗಿ ಹೇಳಿದರೂ ಚುನಾವಣೆ ಗುಂಪಿನಾಟವಾಗಿರುವುದು ವಾಸ್ತವ. ಗುಂಪಿಗೆ ಆಧಾರ ದೊರೆಯುವುದು ಹೆಚ್ಚಾಗಿ ಮತಧರ್ಮದ ಶ್ರದ್ಧೆಯಿಂದ ಎಂಬುದು ಇನ್ನೊಂದು ವಾಸ್ತವ. ಹೀಗಾಗಿ ಚುನಾವಣೆಗಳು ಮತಧರ್ಮದ-ಜಾತಿಗಳ ರಾಜಕೀಯ

ಆಖಾಡಗಳಾಗಿರುವುದು ಸಾರ್ವತ್ರಿಕ ವಾಸ್ತವ. ಈ ಪರಿಸ್ಥಿತಿಯ ದುಷ್ಪರಿಣಾಮವಾಗಿರುವುದು ಧರ್ಮನಿರಪೇಕ್ಷತೆಯ ಸಂಕಲ್ಪನೆಯ ಮೇಲೆ. ಹೀಗಾಗಿ ಯಾವುದೇ ರಾಜಕೀಯ ಪಕ್ಷಕ್ಕೆ ಧರ್ಮನಿರಪೇಕ್ಷೆಯ ಕುರಿತು ಜನತೆಗೆ ತಿಳಿವಳಿಕೆ ನೀಡುವುದಿರಲಿ, ಆ ಬಗ್ಗೆ ಮಾತನಾಡುವುದೂ ಅಡಚಣೆಯನ್ನುಂಟುಮಾಡುತ್ತದೆ. ಇದೂ ಅಲ್ಲದೆ ಭಾರತೀಯ ಜೀವನ ಪ್ರವಾಹದಲ್ಲಿ ಮತಧರ್ಮದ ಕುರಿತು ಇರುವ ಸಂವೇದನಶೀಲತೆ ಸಾಮಾನ್ಯ ಜನರಲ್ಲೂ ಅವರ ಮುಖಂಡರುಗಳಲ್ಲಿಯೂ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇರುವುದರಿಂದ, ಧರ್ಮನಿರಪೇಕ್ಷತೆಯ ವಿಚಾರ ಮಾಡುವುದಕ್ಕೆ ಮುಂಚೆಯೆ 'ಧರ್ಮ' ಶಬ್ದವೆ ಅವರಲ್ಲೂ ಮಾನಸಿಕ ಪರದೆಯನ್ನು ನಿರ್ಮಿಸುತ್ತದೆ. ಅಂತೆಯೇ 'ರಾಷ್ಟ್ರವಾದಿ' ಎಂದು ಕರೆದುಕೊಳ್ಳುವ ಯಾರನ್ನಾದರೂ ಪರಚಿ ನೋಡಿದರೆ ಒಳಗಡೆ ಕೋಮುವಾದಿ ಕಾಣಸುತ್ತಾನೆ, ಎಂಬ ಎಂ. ಎನ್. ರಾಯ್ ಅವರ ಮಾತು ಸತ್ಯವೆನ್ನಿಸುತ್ತದೆ.

ಇಂತಹ ಒಂದು ಮಾನಸಿಕ ಪರ್ಯಾವರಣದಲ್ಲೂ ಧರ್ಮನಿರಪೇಕ್ಷೆಯ ವಿಚಾರ ಗೊಂದಲದಲ್ಲಿ ಪರ್ಯವಸಾನಗೊಳ್ಳುವುದು ವಿವಂಚನೆಯನ್ನು ಉಂಟುಮಾಡುತ್ತದೆ. ಧರ್ಮ, ಧರ್ಮಶ್ರದ್ಧೆ, ಧರ್ಮಾಭಿಮಾನ, ಧರ್ಮಾಂಧತೆ, ಧರ್ಮ ವಿಶೇಷ, ಧರ್ಮ ಸಮಾನತೆ, ಧರ್ಮ ಸಮನ್ವಯ ಎಂಬುದಾಗಿ ಹಲವಾರು ವಿಚಾರ ಪ್ರವಾಹಗಳ ಸುಳಿಯಲ್ಲಿ ಧರ್ಮನಿರಪೇಕ್ಷತೆ ಎಂಬ ಒಂದು ಸರಳ ವಿಚಾರವು ಸಿಲುಕಿಕೊಂಡು ಕೊಚ್ಚಿ ಹೋಗುತ್ತಿರುವುದು ಅಪಾಯಕಾರಿ ಬೆಳವಣಿಗೆಯಾಗಿದೆ. ಈ ಎಲ್ಲ ವಿಚಾರ ಪ್ರಭಾವಗಳು ಗಮನಾರ್ಹವೆ ಆಗಿವೆ ಎಂಬುದನ್ನು ಅರಿತುಕೊಂಡು ಆ ಮೂಲಕ ಧರ್ಮನಿರಪೇಕ್ಷತೆಯ ವಿಚಾರವನ್ನು ಪರೀಕ್ಷಿಸುವುದೂ ಯಥೋಚಿತವಾಗಿದೆ. ಆದರೆ ಈ ವೈಚಾರಿಕ ಕಲ್ಲೋಲದಲ್ಲಿ ಧರ್ಮನಿರಪೇಕ್ಷತೆಯ ಮೂಲ ಸಂಕಲ್ಪನೆಯೇ ಮಸುಕಾಗಿಹೋಗುವ ಸಂದರ್ಭಗಳೇ ಹೆಚ್ಚು. ಈ ಪಾರ್ಶ್ವಭೂಮಿಯ ಕೆಲ ವಿಚಾರ ಸರಣಿಗಳನ್ನು ಇಲ್ಲಿ ಗಮನಕ್ಕೆ ತೆಗೆದುಕೊಂಡು ವಿಶ್ಲೇಷಿಸಲು ಪ್ರಯತ್ನಿಸಿದೆ.




ಮಾನವನ ಸ್ವಭಾವಮೂಲ ಶ್ರದ್ಧೆಯ ಸಾಮಾಜಿಕ ಆವಿಷ್ಕಾರವಾಗಿ ಜಗತ್ತಿನಲ್ಲಿ ಹಲವಾರು ಧರ್ಮಗಳು ಉದಯವಾದುವು. ಹಲವು ನಶಿಸಿಹೋಗಿ ಕೆಲವು ಇಂದಿಗೂ ಉಳಿದುಕೊಂಡು ಬಂದಿವೆ. ಜಾಗತಿಕ ಧರ್ಮಗಳು, ರಾಷ್ಟ್ರಮಟ್ಟದ ಧರ್ಮಗಳು, ಬುಡಕಟ್ಟಿನ ಧರ್ಮಗಳು – ಹೀಗೆ ಅನೇಕ ಧರ್ಮಗಳು ಇಂದು ಅಸ್ತಿತ್ವದಲ್ಲಿವೆ. ಒಂದೇ ಭೂಪ್ರದೇಶದಲ್ಲೂ – ಒಂದೇ ದೇಶದಲ್ಲೂ ಹಲವಾರು ಧರ್ಮಗಳ ಅನುಯಾಯಿಗಳು ಜೀವಿಸುತ್ತಿರುವಂಥ ಪರಿಸ್ಥಿತಿಯಿಂದಾಗಿ ಉದ್ಭವಿಸಿರುವ ಸಮಸ್ಯೆಗಳಲ್ಲೂ ಪ್ರಾಮುಖ್ಯವಾದುದು ಧಾರ್ಮಿಕ ಅಲ್ಪಸಂಖ್ಯಾತರ ಸಮಸ್ಯೆ. ರಾಜ್ಯ ವ್ಯವಸ್ಥೆಯ ಸತ್ತಾ ಕೇಂದ್ರಗಳು ಬಹುಸಂಖ್ಯಾತ ಧರ್ಮೀಯರ ನಿಯಂತ್ರಣಕ್ಕೆ ಒಳಗಾಗುವುದು ಅನಿವಾರ್ಯ. ಇಂಥ ಸಂದರ್ಭಗಳಲ್ಲೂ ಅಲ್ಪಸಂಖ್ಯಾತರಿಗೆ ಅನ್ಯಾಯವಾಗುವುದರ ಅರಿವು ಉಂಟಾಗಿ ವಿಚಾರವಂತರು ಅಲ್ಪಸಂಖ್ಯಾತರ ಹಿತರಕ್ಷಣೆಯ ಕುರಿತು ಯೋಚಿಸುವಂತಾಗುವುದು ಸಹಜ. ಧರ್ಮನಿರಪೇಕ್ಷತೆಯ ಸಂಕಲ್ಪನೆ ಈ ಸಮಸ್ಯೆಗೆ ಪರಿಹಾರ ಒದಗಿಸಬಲ್ಲದು ಎಂದು ಮನಗಂಡು ಆ ದಿಶೆಯಲ್ಲಿ ವಿಚಾರವಂತರು ವಿವೇಚನೆ, ಕಾರ್ಯಕ್ರಮ ರಚನೆ ಮುಂತಾದ ಚಟುವಟಿಕೆಗಳನ್ನು ಕೈಗೊಳ್ಳುತ್ತಿರುವುದನ್ನೂ ಕಾಣಬಹುದು.

''೧೯೫೦ರ ಮಧ್ಯಭಾಗದವರೆಗೆ, ಅಂದರೆ ಭಾರತೀಯ ರಾಜಕಾರಣದಲ್ಲಿ ಹಿಂದು ಮತೀಯವಾದವು ಉಲ್ಬಣಿಸುವವರೆಗೆ, ಬುದ್ಧಿಜೀವಿಗಳು ಮತಧರ್ಮ ನಿರಪೇಕ್ಷತೆಯ ವಿಚಾರವನ್ನು ಹೆಚ್ಚು ಕಡಿಮೆ ಮರೆತೇಬಿಟ್ಟಿದ್ದರು'' ಎಂಬ ಇತಿಹಾಸ ನಿರೀಕ್ಷಣೆಯ ಮಾತನ್ನು ಹೇಳಿ, ಡಾ॥ ಬದರಿನಾಥ ಕೆ. ರಾವ್ ಎಂಬ ಸಂಶೋಧಕ ವಿದ್ವಾಂಸರು, ಅಲ್ಪಸಂಖ್ಯಾತರ ಸಮಸ್ಯೆಯ ಅಂಗವಾಗಿ ಧರ್ಮನಿರಪೇಕ್ಷತೆಯನ್ನು ವಿವೇಚಿಸಿರುವರು. ಡಾ॥ ರಾವ್ ಅವರು ಈ ವಿಷಯದಲ್ಲಿ ಕೂಲಂಕಷ ಸಂಶೋಧನೆ ನಡೆಸಿ ವಿಪುಲ ಸಾಧನ ಸಾಮಗ್ರಿಗಳನ್ನು ಸಂಗ್ರಹಿಸಿ, ಈ ವಿಷಯದ ವಿವಿಧ ಅಂಗಗಳ ಕುರಿತು ನಡೆದ ಅದ್ವಾವತ ಅಧ್ಯಯನಗಳನ್ನು ಪರಿಶೀಲಿಸಿ ಆಳವಾದ ಚಿಂತನೆ ಚಿಕಿತ್ಸಕ ವಿವೇಚನೆಗಳ ಮೂಲಕ ಧರ್ಮನಿರಪೇಕ್ಷತೆಯ ಬಗ್ಗೆ ಒಂದು ಸಂಶೋಧನ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಕೆನಡಾ ದೇಶದ ವಿಶ್ವವಿದ್ಯಾಲಯವೊಂದರ ಪಿಎಚ್.ಡಿ. ಪದವಿಯನ್ನು ಪಡೆದ ಅವರ ಈ ಪ್ರಬಂಧದ ಸಂಕ್ಷಿಪ್ತ ರೂಪವಾಗಿ ''ಧರ್ಮನಿರಪೇಕ್ಷತೆ ಮತ್ತು ಅಲ್ಪಸಂಖ್ಯಾತರು'' ಎಂಬ ಗ್ರಂಥವನ್ನು ಅವರು ಬರೆದಿದ್ದಾರೆ. (ನವಕರ್ನಾಟಕ ಪ್ರಕಾಶನ ೨೦೦೨). ಪುಸ್ತಕದ ಹೆಸರೆ ಸೂಚಿಸುವಂತೆ ಡಾ॥ ಬದರಿನಾಥ ಕೆ. ರಾವ್ ಅವರು ಧರ್ಮನಿರಪೇಕ್ಷತೆಯ ಸಮಸ್ಯೆಯನ್ನು ಭಾರತೀಯ ಸಂದರ್ಭದಲ್ಲೂ ಅಲ್ಪಸಂಖ್ಯಾತರ ಅನುಷಂಗದಲ್ಲಿ ವಿಶ್ಲೇಷಿಸಿದ್ದಾರೆ. ''ಭಾರತದ ಧರ್ಮನಿರಪೇಕ್ಷತೆಗೆ ಅರ್ಥ ಬರಬೇಕಾದರೆ ಅದನ್ನು ಅಲ್ಪಸಂಖ್ಯಾತರ ದೃಷ್ಟಿಕೋನದಲ್ಲಿ ಅಳವಡಿಸುವುದು ಅಗತ್ಯ'' ಎಂಬುದು ಅವರ ಪ್ರಮುಖ ನಿಲವು. ಶೋಷಕ ವರ್ಗ ಹಾಗೂ ಶೋಷಿತ ವರ್ಗಗಳ ನಡುವಿನ ವರ್ಗ ಸಂಘರ್ಷದ ಚೌಕಟ್ಟಿನಲ್ಲಿ ಅವರು ಸಮಸ್ಯೆಗೆ ಪರಿಹಾರವನ್ನು ಶೋಧಿಸುತ್ತಾರೆ. ಆದಾಗ್ಯೂ ಧರ್ಮನಿರಪೇಕ್ಷತೆಯನ್ನು ಅವರು ಸಾಂಸ್ಕೃತಿಕ, ರಾಜಕೀಯ, ಚುನಾವಣೀಯ ಹಾಗೂ ಕಾನೂನು ಮತ್ತು ನ್ಯಾಯಾಲಯದ ತೀರ್ಪುಗಳು ಇವೆಲ್ಲ ಅಂಗಗಳಲ್ಲಿ ಪರಿಶೀಲಿಸುತ್ತಾರೆ. ಭಾರತದ ಸದ್ಯದ ರಾಜಕೀಯ ಪರಿಸರದಲ್ಲಿಯ ಧರ್ಮಾಂಧ ಶಕ್ತಿಗಳ ವೈಚಾರಿಕ ನಿಲವುಗಳನ್ನೂ ಕಾರ್ಯಾಚರಣೆಗಳನ್ನೂ ವಿಶ್ಲೇಷಿಸಿ ಸುಸ್ಪಷ್ಟ ಚಿತ್ರವೊಂದನ್ನು ಅವರು ಕೊಟ್ಟಿದ್ದಾರೆ. ಅವರು ಕೊಟ್ಟ ಸಂದರ್ಭಸೂಚಿಯಲ್ಲಿಯ ೫೨ ಗ್ರಂಥ ಹಾಗೂ ಪ್ರಬಂಧಗಳನ್ನು ನೋಡಿದರೆ, ಅವರು ತಮ್ಮ ವಿವೇಚನೆಯನ್ನು ಎಷ್ಟೊಂದು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸಿದ್ದಾರೆ ಎಂಬುದು ವಿದಿತವಾಗುವುದು.

ಪ್ರಸ್ತುತ ಲೇಖನವು ಧರ್ಮನಿರಪೇಕ್ಷತೆಯ ಸಮಸ್ಯೆಯನ್ನು ಕೇವಲ ಅಲ್ಪಸಂಖ್ಯಾತರ ಸಂದರ್ಭದಲ್ಲಿ ಮಾತ್ರ ವಿವೇಚಿಸದೆ ಅದರ ಎಲ್ಲ ಅಂಗಗಳನ್ನೂ ಪರಿಶೀಲಿಸುವ ಉದ್ದೇಶವುಳ್ಳದುದಾಗಿದೆ. ಆದ್ದರಿಂದ ಡಾ॥ ಬದರಿನಾಥ ಕೆ. ರಾವ್ ಅವರ ಗ್ರಂಥದ ಬಗ್ಗೆ ವಿವರವಾಗಿ ವಿವೇಚಿಸುವುದು ಇಲ್ಲಿ ಅಪ್ರಸುತವಾಗುವುದು.

'ಧರ್ಮನಿರಪೇಕ್ಷತೆ' ಎಂದರೆ ಧರ್ಮಶ್ರದ್ಧೆಯನ್ನೇ ಅಲ್ಲಗಳೆಯುವುದು, ಆ ಮೂಲಕ ರಾಜ್ಯ ವ್ಯವಸ್ಥೆಯು ಜನಸಾಮಾನ್ಯರ ಧಾರ್ಮಿಕ ಭಾವನೆಗಳನ್ನು ತಿರಸ್ಕರಿಸುವುದು ಎಂಬ ಅಭಿಪ್ರಾಯವೂ ಪ್ರಚಲಿತವಾಗಿದೆ. ದೇವರು, ಧರ್ಮ, ಭಕ್ತಿ, ಮುಕ್ತಿ ಇತ್ಯಾದಿ ಭಾವನೆಗಳು ಜನಸಾಮಾನ್ಯರ ಮನದಲ್ಲಿ ಆಳವಾಗಿ ಬೇರೂರಿರುವುದರಿಂದ ಈ ಭಾವನೆಗಳನ್ನು ಪ್ರಚೋದಿಸಿ ಜನರನ್ನು ಧರ್ಮನಿರಪೇಕ್ಷತೆಯ ವಿರುದ್ಧ ಎತ್ತಿಕಟ್ಟುವ ಧರ್ಮಾಂಧ ಶಕ್ತಿಗಳೆ ಈ ಅಭಿಪ್ರಾಯವನ್ನು ಪಸರಿಸುತ್ತಿರುವುವು. ಧರ್ಮನಿರಪೇಕ್ಷೆಯ ಸಮರ್ಥಕರೆಲ್ಲ ನಾಸ್ತಿಕರು, ಸಮಾಜವನ್ನೇ ನಾಸ್ತಿಕತೆಯತ್ತ ಎಳೆದೊಯ್ಯುವುದೆ ಅವರ ಉದ್ದೇಶ ಎಂಬ ತಪ್ಪು ತಿಳಿವಳಿಕೆಯನ್ನು ಜನರ ಮನಸ್ಸಿನ ಮೇಲೆ ಬಿಂಬಿಸುವ ಪ್ರಯತ್ನಗಳು ನಡೆಯುತ್ತಲೆ ಇವೆ. ಧರ್ಮನಿರಪೇಕ್ಷತೆಯನ್ನು ಪುರಸ್ಕರಿಸುವವರಲ್ಲಿ ವಿಶೇಷ ಪಾತ್ರ ವಹಿಸುತ್ತಿರುವವರು ಭೌತಿಕವಾದಿ ವಿಚಾರ ಸರಣಿಯವರು ಎಂಬ ವಸ್ತುಸ್ಥಿತಿಯೂ ಈ ತಪ್ಪು ತಿಳುವಳಿಕೆಗೆ ಚಾಲನೆ ನೀಡುತ್ತದೆ. ಆದರೆ ಪ್ರಜಾಸಾರ್ವಭೌಮತ್ವವನ್ನು ಆಧರಿಸಿರುವ ರಾಜ್ಯಸಿದ್ಧಾಂತದ ಒಂದು ಮಹತ್ವದ ಸಂಕಲ್ಪನೆಯಾದ ಧರ್ಮನಿರಪೇಕ್ಷತೆಯಲ್ಲಿ ಜನಸಾಮಾನ್ಯರ ಧರ್ಮಶ್ರದ್ಧೆಯ ಸಂದರ್ಭದಲ್ಲೂ ನಿರಪೇಕ್ಷತೆಯ ಧೋರಣೆಯು ಅಂತರ್ಗತವಾಗಿದೆ ಎಂಬುದನ್ನು ಒತ್ತಿ ಹೇಳುವುದು ಅಗತ್ಯವಾಗಿದೆ.

ಧರ್ಮನಿರಪೇಕ್ಷೆಯ ಸಂಕಲ್ಪನೆಯಲ್ಲಿ ಜನತೆಯ ಧರ್ಮಶ್ರದ್ಧೆಯ ವಿಚಾರ ಅಪ್ರಸ್ತುತ ಎಸ್ಸುವುದು ಸರಿಯಾದರೂ ಕೂಡ, ಧರ್ಮಶ್ರದ್ಧೆಯು ಧರ್ಮನಿರಪೇಕ್ಷತೆಗೆ ಸವಾಲಾಗಿ ನಿಂತಿರುವುದರಿಂದ ಈ ಕುರಿತು ವಿಶೇಷ ಚಿಂತನೆಯ ಆವಶ್ಯಕತೆ ಇದೆ. ಜೀವಸೃಷ್ಟಿಯ ಸ್ವಯಂ ನಿಯಂತ್ರಿತ ನಿರ್ಮಿತಿ ಪ್ರಕ್ರಿಯೆಯಲ್ಲಿ ನಿಸರ್ಗದತ್ತ ಪ್ರೇರಣೆಗಳಿಂದ ಜೀವನ ನಿರ್ವಹಿಸುವ ಪ್ರಾಣಿಗಳದು ಒಂದು ಹಂತ. ಪ್ರಾಣಿ ವರ್ಗದಲ್ಲಿ ವಿಚಾರಶಕ್ತಿ ಮೂಡಿ ಬಂದು ಮಾನವ ಪ್ರಾಣಿ ರೂಪಗೊಂಡಂದಿನಿಂದ, ಮಾನವಾತೀತ ಶಕ್ತಿಗಳ ವಿಚಾರ

ಮನದಲ್ಲಿ ಸುಳಿದು ಬೆಳೆದುಬಂದುದನ್ನು ಮಾನವ ವಂಶಶಾಸ್ತ್ರವು ನಿಚ್ಚಳವಾಗಿ ತೋರಿಸಿ ಕೊಟ್ಟಿದೆ. ಈ ಆದಿಮಾನವ ವಿಚಾರಗಳ ಪರಿಣತಿಯೆ ಧರ್ಮಶ್ರದ್ಧೆಯಾಗಿ ಜನಮನದಲ್ಲಿ ನೆಲೆಯೂರಿ ನಿಂತಿದೆ. ಈ ಧರ್ಮಶ್ರದ್ಧೆಯನ್ನು ಆಧರಿಸಿ ಅನೇಕ ಮತಧರ್ಮಗಳು ನಿರ್ಮಾಣಗೊಂಡು ಬೆಳೆದುಬಂದಿವೆ. ದೇವರು ಸಂಕಲ್ಪನೆಯ ಆಧಾರದ ಶ್ರದ್ಧೆಯನ್ನು ಸ್ವೀಕರಿಸದೆ ಇರುವಂಥ ಅಲೌಕಿಕ ದೈವೀಶಕ್ತಿಗೆ ಸ್ಥಾನವನ್ನೆ ನೀಡದಂಥ ಮತಧರ್ಮಗಳೂ ಪಂಥಗಳೂ ಹುಟ್ಟಿಬಂದಿವೆ. ಸೃಷ್ಟಿಯ ನಿರ್ಮಾಪಕ, ನಿಯಂತ್ರಕ ಜೀವಿಗಳಿಗೆ ಮೋಕ್ಷದಾಯಕ ಇತ್ಯಾದಿ ಗುಣವಿಶೇಷಗಳುಳ್ಳ ದೇವರು ಎಂಬ ಸಂಕಲ್ಪನೆಯನ್ನೆ ಬುದ್ಧ ಹಾಗೂ ಜೈನಧರ್ಮಗಳು ಕೈಬಿಟ್ಟು ತಮ್ಮ ಮತಧರ್ಮವನ್ನು ನಿರ್ಮಿಸಿದವು. ಭೌತಿಕವಾದಿ ವಿಚಾರಸರಣಿಯ ಪಂಥಗಳಾದ ಚಾರ್ವಾಕ, ಲೋಕಾಯತರ ಸಿದ್ಧಾಂತಗಳೂ ಅದೇ ವಿಚಾರಸರಣಿಯನ್ನು ಪ್ರತಿಪಾದಿಸುವ ಸಾಂಖ್ಯದರ್ಶನವೂ ಅಲೌಕಿಕ ಶಕ್ತಿಯ ಸ್ವರೂಪದ ದೇವರ ಸಂಕಲ್ಪನೆಗೆ ಅವಕಾಶ ಒದಗಿಸಿಲ್ಲ. ಅಷ್ಟೇ ಏಕೆ ವೈದಿಕ ಪರಂಪರೆಯಲ್ಲೆ ಬರುವ ಯಜ್ಞ ಸಂಸ್ಕೃತಿಯ ಪರಿಣತ ಸ್ವರೂಪ ಸಿದ್ಧಾಂತವಾಗಿರುವ ಮೀಮಾಂಸಾ ದರ್ಶನವೂ ಕೂಡ ದೇವರ ಅಸ್ತಿತ್ವವನ್ನು ನಿರಾಕರಿಸಿದೆ. ಯಜ್ಞಗಳಿಂದ ಲಭ್ಯ ಫಲವು ಕಾರ್ಯಕಾರಣ ಸಂಬಂಧದಿಂದ ಯಾತು ಕ್ರಿಯೆಯ ಮೂಲಕ ದೊರೆಯುವಂಥದೆ ಹೊರತು ಯಜ್ಞಗಳ ಹವಿಸ್ಸಿನಿಂದ ಸಂತುಷ್ಟರಾಗಿ ಫಲನೀಡುವ ದೇವತೆಗಳೆಂಬವರು ಇಲ್ಲವೆ ಎಲ್ಲ ಎಂದು ಜೈಮಿನಿಯ ಮೀಮಾಂಸಾ ದರ್ಶನವು ಪಸ್ತಾಪಿಸುತ್ತದೆ. ಆದರೂ ಈ ಮತಧರ್ಮಗಳ ಅನುಯಾಯಿಗಳೂ ಕೂಡ ಇಂದಿನ ಸಾಮಾನ್ಯವಾಗಿರುವ ಧರ್ಮಶ್ರದ್ಧೆಯಿಂದ ಹೊರತಾಗಿಲ್ಲ.

ಆರ್ಥಿಕ ಅಡಿಪಾಯದ ಮೇಲೆಯೆ ಮಾನವೇತಿಹಾಸವನ್ನು ವಿಶ್ಲೇಷಿಸುತ್ತ, ಮತ ಧರ್ಮಗಳು ಆರ್ಥಿಕವಾಗಿ ಶೋಷಿಸಲ್ಪಡುವ ವರ್ಗಗಳನ್ನು ಹದ್ದುಬಸ್ತಿನಲ್ಲಿ ಇಡುವಲ್ಲಿ ಶೋಷಕ ವರ್ಗಗಳಿಗೆ ಸಹಾಯಕವಾಗಿವೆ, ''ಧರ್ಮ ಸಾಮಾನ್ಯಜನರ ಅಫು'' ಎಂದು ಪ್ರತಿಪಾದಿಸಿದ ಕಾರ್ಲ್ ಮಾರ್ಕ್ಸನ ವಿಚಾರಸರಣಿಯ ಆಧಾರದ ಮೇಲೆ ನಿರ್ಮಿತವಾದ ಒಂದು ಬೃಹತ್ ಸಮಾಜ ಒಂದು ಬಲಿಷ್ಠ ರಾಜ್ಯಸತ್ತೆ ಸೋವಿಯೆತ್ ರಶಿಯಾ ಕಮ್ಯುನಿಸ್ಟ್ ವಿಚಾರ ಪ್ರಣಾಲಿಯ ಭೌತಿಕವಾದವನ್ನು ಪ್ರತ್ಯಕ್ಷ ರೂಪಕ್ಕೆ ಇಳಿಸಲು ಪ್ರಯತ್ನಿಸಿತು; ಮತಧರ್ಮಗಳ ಅಸ್ತಿತ್ವವನ್ನೇ ಕಿತ್ತುಹಾಕಲೆಂದು ಧಾರ್ಮಿಕ ಸಂಸ್ಥೆಗಳನ್ನು ಪ್ರತಿಬಂಧಿಸಿ ಧರ್ಮಾಚರಣೆಗಳನ್ನೂ ನಿಲ್ಲಿಸಿತು. ಇಷ್ಟೆಲ್ಲ ಪ್ರಯತ್ನಪಟ್ಟರೂ ಸಾಮಾನ್ಯ ಜನತೆಯ ಧರ್ಮಶ್ರದ್ಧೆಯನ್ನು ಅಳಿಸಿಹಾಕುವುದು ಸಾಧ್ಯವಾಗಲಿಲ್ಲ ಎಂಬುದನ್ನು ಇತಿಹಾಸ ದಾಖಲಿಸಿದೆ.

ಸೋವಿಯತ್ ರಶಿಯಾದ ಅಧಃಪತನದಿಂದಾಗಿ ಕಮ್ಯುನಿಸ್ಟ್ ವಿಚಾರಸರಣಿಗೆ ಉಂಟಾದ ಆಘಾತದಿಂದ ಪ್ರೇರಿತರಾಗಿ ಧರ್ಮಶ್ರದ್ಧೆಯ ಕುರಿತು ಪುನಃಪರಿಶೀಲನೆ, ಮರುಚಿಂತನೆಗಳು ನಡೆಯುತ್ತಲಿವೆ. ಭೌತಿಕವಾದವು ವೈಚಾರಿಕವಾಗಿ ವೈಜ್ಞಾನಿಕವಾಗಿ ಎಷ್ಟೇ ಸಮರ್ಥನೀಯವಾಗಿದ್ದರೂ ಕೂಡ ಸಾಮಾನ್ಯಜನರ ನಿತ್ಯಜೀವನಕ್ಕೆ ಅದು ಆಧಾರ ನೀಡಬಲ್ಲುದೆ ಎಂಬ ಶಂಕೆ ಮೂಡುತ್ತಲಿದೆ. ಈ ದಿಶೆಯಲ್ಲಿಯ ಒಂದು ಮಹತ್ವಪೂರ್ಣ ಚಿಂತನೆಯನ್ನು ಇಲ್ಲಿ ಉಲ್ಲೇಖಿಸುವುದು ಅವಶ್ಯವೆನಿಸುತ್ತಿದೆ.

ಮಹಾರಾಷ್ಟ್ರದ ಆಧುನಿಕ ವಿಚಾರವಂತರಲ್ಲಿ ಶ್ರೀ ವಿ. ಕೆ. ಬೇಡೆಕರ್ ಅವರಿಗೆ ವೈಶಿಷ್ಟ್ಯಪೂರ್ಣ ಮಹತ್ವದ ಸ್ಥಾನ ಇದೆ. ಅವರು ಅಚ್ಚ ಮಾರ್ಕ್ಸ್‌ವಾದಿ ವಿಚಾರವಂತರಷ್ಟೆ ಅಲ್ಲದೆ ಸಾಮ್ಯವಾದಿ ಚಳುವಳಿಯ ನಿಷ್ಠಾವಂತ ಕಾರ್ಯಕರ್ತರೂ ಆಗಿದ್ದಾರೆ. ಜತೆಯಲ್ಲಿಯೆ ಶ್ರೀ ಬೇಡೆಕರ್ ಅವರಿಗೆ ಸಾಹಿತ್ಯ, ಕಲೆ, ಸೌಂದರ್ಯ ಶಾಸ್ತ್ರಗಳಲ್ಲೂ ಆಳವಾದ ಆಸಕ್ತಿ, ಚಿಂತನಶೀಲ ಅಭಿರುಚಿ. ಈ ವಿವಿಧ ಕ್ಷೇತ್ರಗಳಲ್ಲಿಯ ಅವರ ಬರೆಹಗಳು ಪ್ರಖರ ವೈಚಾರಿಕತೆ, ಸೂಕ್ಷ್ಮ ವಿವೇಚನೆ, ಪ್ರಗಲ್ಭ ಚಿಂತನೆಗಳಿಗೆ ಸಾಕ್ಷಿಗಳಾಗಿವೆ. ಧರ್ಮಶ್ರದ್ಧೆಯ ಕುರಿತ ಅವರ ದೀರ್ಘ ವ್ಯಾಸಂಗ ಹಾಗೂ ಚಿಂತನೆಗಳ ಫಲವಾಗಿ ಅವರು 'ಧರ್ಮಶ್ರದ್ಧೆ – ಒಂದು ಪುನರ್ವಿಚಾರ' ಎಂಬುದಾಗಿ ಮೂರು ಉಪನ್ಯಾಸಗಳನ್ನು ನೀಡಿ ಅವನ್ನು ಗ್ರಂಥರೂಪದಲ್ಲಿ ಪ್ರಕಟಿಸಿದರು. ಸೋವಿಯೆತ್ ರಶಿಯಾದ ಕಮ್ಯುನಿಸ್ಟ್ ಸಮಾಜ ಹಾಗೂ ರಾಜ್ಯ ವ್ಯವಸ್ಥೆ ಕುಸಿದು ಬೀಳುವುದಕ್ಕೆ ಮುಂಚೆ, ಎರಡು ದಶಕಗಳ ಪೂರ್ವದಲ್ಲಿಯೆ ಅವರು ತಮ್ಮ ಈ ಪುನರ್ವಿಚಾರಗಳನ್ನು ಮಂಡಿಸಿದ್ದು ಗಮನಾರ್ಹವಾಗಿದೆ. ಮಾನವೀ ಜೀವನದಲ್ಲಿ ಧರ್ಮಶ್ರದ್ಧೆಯ ಆವಿಷ್ಕಾರವನ್ನು ವಿವೇಚನಾತ್ಮಕವಾಗಿ ವಿವರಿಸುತ್ತ ಶ್ರೀ ಬೇಡೆಕರ್ ಅವರು, ಮಾನವಿ ಮನಸ್ಸು ಶ್ರದ್ಧೆಯಲ್ಲಿ ರಮಿಸುವಂಥದು, ಹಾಗೂ ಶ್ರದ್ಧೆ ಮಾನವನ ಅಂಗಭೂತ ಆವಶ್ಯಕತೆಯಾಗಿದೆ ಎಂಬ ನಿರ್ಧಾರಕ್ಕೆ ಬರುತ್ತಾರೆ. ಶ್ರದ್ಧೆಯ ಪುನರ್ಲಾಭವನ್ನು ಪ್ರಸ್ತಾಪಿಸುತ್ತ ಅವರು ಹೀಗೆನ್ನುತ್ತಾರೆ :

''ಮಾನವನ ಮನಸ್ಸಿನಲ್ಲಿ ಧರ್ಮಶಕ್ತಿಗೆ ಒಂದು ಶಾಶ್ವತ ಸ್ಥಾನ ಇದೆ ಎಂಬ ಸಂಗತಿಯನ್ನು ಗ್ರಹಿತವಾಗಿಟ್ಟುಕೊಂಡು ಈ ಭಾವನೆಯ ಅಥವಾ ಶ್ರದ್ಧೆಯ ಅಂತರ್ಯವನ್ನು ಶೋಧಿಸಲು ಪ್ರಯತ್ನ ಮಾಡಿದಾಗ ಕಂಡುಬರುವುದೇನೆಂದರೆ, ಮಾನವನು ತನ್ನ ಅಸ್ತಿತ್ವದ ಬಗ್ಗೆ ವಿಚಾರ ಮಾಡುತ್ತಿರುವಾಗ ತನ್ನ ಸಾಂತತೆಯನ್ನು ಅನುಭವಿಸುತ್ತಾನೆ. ಜತೆಯಲ್ಲಿಯೆ ಈ ಸಾಂತತೆಯಲ್ಲಿಯ ಅವನಿಗೆ ತನ್ನ ಉನ್ನಯನದ ಸ್ವಾತಂತ್ರ್ಯದ ಅನುಭವವೂ ಉಂಟಾಗುತ್ತದೆ. ತನ್ನ ಅಸ್ತಿತ್ವದ ಜತೆಯಲ್ಲಿಯೆ ಸುತ್ತಮುತ್ತಲಿನ ವಿಶ್ವದ ಕುರಿತೂ ಮಾನವನು ವಿಚಾರ ಮಾಡುತ್ತಾನೆ. ವಿಶ್ವದಲ್ಲೂ ಕಾರ್ಯಕಾರಣಭಾವ ಹಾಗೂ ನಿಯಮಬದ್ಧತೆಯ ಅನುಭವ ಬರುತ್ತದೆ; ಆದರೆ ಅದೇ ಕಾಲಕ್ಕೆ ವಿಶ್ವದ ರಚನೆಯಲ್ಲಿಯ ರಹಸ್ಯವು ಅವನಿಗೆ ಗೂಢವೂ, ಅದ್ಭುತವೂ ಆಗಿದೆ ಎನಿಸುತ್ತದೆ. ತನ್ನ ಜ್ಞಾನದ ಸಾಂತತೆ ಅವನಿಗೆ ತಿಳಿದಿರುತ್ತದೆ. ಮಾನವನ ಪ್ರಜ್ಞೆಗೆ ವಿಶ್ವದ ಗೂಢತೆಯ ಪ್ರತ್ಯಯವೂ ಅತ್ಯಂತ ಗಾಢವಾಗಿ ಉಂಟಾಗುತ್ತದೆ. ಈ ಪ್ರತ್ಯಯದ ಮೂಲಕವೇ ಮಾನವನ ಮನಸ್ಸಿನಲ್ಲೂ ಅತೀವ ನಮ್ರತೆ ಹಾಗೂ ಶ್ರದ್ಧೆಯ ಉದಯವಾಗುತ್ತದೆ'' (ಮಾನವಿ ಬುದ್ಧಿ, ಮನಸ್ಸು, ಕರ್ತವ್ಯ, ತಿಳಿವಳಿಕೆ ಇವೆಲ್ಲವುಗಳಿಗೂ ಒಂದು ಮರ್ಯಾದೆ ಇದೆ ಎನ್ನುತ್ತ ಶ್ರೀ ಬೇಡೆಕರರು ಅದಕ್ಕೆ 'ಮಾನವನ ಸಾಂತತ್ವ' ಎಂದು ಹೆಸರು ಕೊಟ್ಟಿದ್ದಾರೆ).

ಶ್ರೀ ಬೇಡೆಕರರ 'ನವಶ್ರದ್ಧೆ'ಯು ವಿಜ್ಞಾನದ ಜಿಜ್ಞಾಸಾ ವೃತ್ತಿ, ಕಲೆಯ ಸಹೃದಯ ವೃತ್ತಿ ಇವುಗಳನ್ನು ಆಧಾರವಾಗಿಸಿ, ವಿಶ್ವಸಂವಾದಿಯಾದ 'ಮಾನುಷ ವಿಶ್ವ'ವನ್ನು ನಿರ್ಮಿಸುತ್ತಿರುವೆನೆಂಬ ನಂಬಿಕೆಯನ್ನೊಳಗೊಂಡ ವಿಶ್ವಶ್ರದ್ಧೆಯ ರೂಪತಾಳಿದೆ. ಆಶ್ಚರ್ಯಕರ ಸಂಗತಿ ಎಂದರೆ ಶ್ರೀ ಬೇಡೆಕರರಿಗೆ 'ಧರ್ಮ' ಶಬ್ದದ ಆಕರ್ಷಣೆ ಇರುವ ತಾವು ಪ್ರತಿಪಾದಿಸಿದ ಈ ನವಶ್ರದ್ಧೆಗೆ ಅವರು ಧರ್ಮಶ್ರದ್ಧೆ ಎಂದು ಕರೆಯದಿದ್ದರೂ ಅದನ್ನು 'ಧರ್ಮಪ್ರಾಯಶ್ರದ್ಧೆ' ಎಂದು ಕರೆಯುತ್ತಾರೆ. ಶ್ರೀ ಬೇಡೆಕರರ ವಿಚಾರಗಳಿಗೆ ಪ್ರತಿಕ್ರಿಯೆ ನೀಡುವ ಪರಂಪರಾಪ್ರಿಯ ಧರ್ಮವಾದಿಗಳು, ''ಆಧ್ಯಾತ್ಮ ಶಬ್ದ ನಿಮ್ಮ ನಾಲಿಗೆಯ ತುದಿಯ ಮೇಲೆ ಇದೆ. ಆದರೆ ನೀವು ಅದನ್ನು ಉಚ್ಚರಿಸುತ್ತಿಲ್ಲ'' ಎಂದು ಅವರನ್ನು ಛೇಡಿಸಿದ್ದೂ ಉಂಟು.

ಶ್ರೀ ಬೇಡೆಕರರ ವಿಚಾರಗಳ ವಿವೇಚನೆ ಪರಾಮರ್ಶೆ ಇಲ್ಲಿ ಅಪ್ರಸ್ತುತ. ಜನಸಾಮಾನ್ಯರ ಧರ್ಮಶ್ರದ್ಧೆಯನ್ನು ನಿರ್ಲಕ್ಷಿಸುವುದು ಧರ್ಮನಿರಪೇಕ್ಷತೆಯ ವಿಚಾರಕ್ಕೆ ಘಾತಕವಾಗಬಲ್ಲುದು ಎಂಬುದನ್ನು ಮನಗಾಣಿಸಲೆಂಬ ಉದ್ದೇಶದಿಂದ ಶ್ರೀ ಬೇಡೆಕರರ ವಿಚಾರಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಧರ್ಮಶ್ರದ್ಧೆಯ ಅನಿವಾರ್ಯತೆಯನ್ನು ಮನಗಂಡು ಅದಕ್ಕೆ ಸಮಾಜ ಜೀವನದಲ್ಲಿ ಅನುವು ಮಾಡಿಕೊಡುವುದು ಸಮಾಜ ಸ್ವಾಸ್ಥ್ಯ ದೃಷ್ಟಿಯಿಂದ ಆವಶ್ಯಕ ಎಂಬುದರ ಬಗ್ಗೆ ಚಿಂತನೆ ಅಗತ್ಯವಾಗಿದೆ. ಧರ್ಮನಿರಪೇಕ್ಷತೆ ಧರ್ಮಶ್ರದ್ಧೆಯನ್ನು ಭಂಗಗೊಳಿಸುವ ಕಾರ್ಯಕ್ರಮ ಎಂಬ ಅಪಪ್ರಚಾರವನ್ನು ಎದುರಿಸಲು ಇದೊಂದೆ ಮಾರ್ಗ.

ಆಧುನಿಕ ಯುಗದ ಪ್ರಜಾಸತ್ತಾತ್ಮಕ ಸಂವಿಧಾನೀಯ ರಾಜ್ಯ ಶಾಸನ ವ್ಯವಸ್ಥೆಯಲ್ಲಿ ಬೇರ್ಪಡಿಸಲಾಗದಂತೆ ಅಂತರ್ಭೂತ ವಾಗಿರುವ ಧರ್ಮನಿರಪೇಕ್ಷೆಯ ತತ್ವದ ಸ್ವರೂಪವನ್ನು ಈಗ ಈ ರೀತಿಯಾಗಿ ವಿವರಿಸಬಹುದು :

– ಆಡಳಿತ ವ್ಯವಸ್ಥೆಯಲ್ಲಿ ಸಾರ್ವಜನಿಕ ವ್ಯವಹಾರಗಳಲ್ಲಿ ಯಾವುದೇ ಮತಧರ್ಮದ ವಿಚಾರಗಳಿಗೆ, ಆಚರಣೆಗಳಿಗೆ ಸ್ಥಾನ ವಿಲ್ಲ. ಸರ್ವಜನ ಹಿತರಕ್ಷಣೆಯ ಉದ್ದೇಶವುಳ್ಳ ಕಾರ್ಯಕ್ರಮಗಳಲ್ಲಿ ಯಾವುದೇ ಒಂದು ಧರ್ಮಸಮುದಾಯದ ಆಚಾರ ವಿಚಾರಗಳ ಹಸ್ತಕ್ಷೇಪ ಸಲ್ಲದು. ಧಾರ್ಮಿಕ ವಿಧಿ ವಿಧಾನಗಳಿಗಷ್ಟೆ ಅಲ್ಲದೆ ಒಂದು ಮತಧರ್ಮೀಯ ಸಮುದಾಯದ ಧಾರ್ಮಿಕೇತರ ಹಿತ

**ಉಚಿತ**

ಸಗಟು
ಕವಿಯ
ಚಿಲ್ಲರೆ
ಪದ್ಯಗಳು
ಬಿಕರಿಗಿವೆ !
ಒಂದು ಕೊಂಡರೆ
ಇನ್ನೊಂದು
ಉಚಿತ !
ಓದಿದರೆ
ನಿದ್ರೆಯಂತೂ
ಖಚಿತ !

ಎಸ್. ಶಶಿಕಾಂತ ಯಡಹಳ್ಳಿ
ಬೆಂಗಳೂರು

ಸಂಬಂಧಗಳಿಗೂ ಆಡಳಿತೆಯಲ್ಲಿ ಅವಕಾಶವಿರದು.

– ಪ್ರಜಾಸತ್ತಾತ್ಮಕ ಸಂವಿಧಾನದಲ್ಲಿ ದೇಶದ ಜನರೆಲ್ಲ ಸರಿಸಮಾನರು ಎಂಬುದು ಮೂಲಭೂತ ಸೂತ್ರವಾಗಿರುವುದರಿಂದ, ಆಡಳಿತೆಯು ಕೈಕೊಳ್ಳುವ ಯಾವುದೇ ಕ್ರಮಗಳು ಸರ್ವರನ್ನೂ ಒಳಗೊಳ್ಳಬೇಕು. ಯಾವುದೇ ರೀತಿಯ ಭೇದಭಾವಕ್ಕೆ ಇಲ್ಲಿ ಆಸ್ಪದವಿಲ್ಲ. ಆದರೆ ಸಮಾಜದಲ್ಲೂ ಹಲವಾರು ಕಾರಣಗಳಿಂದಾಗಿ ಕೆಲವು ಜನಸಮುದಾಯಗಳು ಆರ್ಥಿಕವಾಗಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತೀರ ಹಿಂದೆ ಉಳಿದಿರುವ ಸಂದರ್ಭಗಳನ್ನು ಎಲ್ಲ ದೇಶಗಳಲ್ಲಿಯೂ ಕಾಣಬಹುದು. ಇಂಥ ಪರಿಸ್ಥಿತಿಯಲ್ಲಿ ಆ ಸಮುದಾಯಗಳ ಹಿತರಕ್ಷಣೆಗಾಗಿ ಅವರಿಗೆ ವಿಶೇಷ ಸವಲತ್ತುಗಳನ್ನು ಒದಗಿಸಿ ಅವರನ್ನು ಸಮಾಜದ ಉಳಿದ ಸಮುದಾಯಗಳ ಮಟ್ಟಕ್ಕೆ ತಂದು ನಿಜವಾದ ಸಮಾನತೆಯನ್ನು ಸಾಧಿಸುವುದು ಒಂದು ಸರ್ವಮಾನ್ಯ ಉದ್ದಿಶ್ಯವಾಗಿದೆ. ಈ ಉದ್ದಿಶ್ಯ ಸಾಧನೆಗಾಗಿ ಭೇದಭಾವ ನಿಷೇಧ ತತ್ವಕ್ಕೂ ಒಂದು ಅಪವಾದವನ್ನು ಒದಗಿಸಿ ಅದನ್ನು ಎಲ್ಲ ಪ್ರಗತಿಪರ ದೇಶಗಳ ಸಂವಿಧಾನಗಳಲ್ಲಿ ಅಳವಡಿಸಲಾಗಿದೆ. ರಾಜ್ಯಶಾಸ್ತ್ರ ಪರಿಭಾಷೆಯಲ್ಲಿ ಇದಕ್ಕೆ 'ಸಕಾರಾತ್ಮಕ ಭೇದಭಾವ' ಎಂದು ಕರೆಯಲಾಗುತ್ತಿದೆ. ಈ ತತ್ವ ಪ್ರಾಗತಿಕ ಜಗತ್ತಿನ ಎಲ್ಲೆಡೆಯಲ್ಲೂ ಸ್ವೀಕೃತವಾಗಿದೆ. ಭಾರತದ ಸಂವಿಧಾನದಲ್ಲೂ ಅದು ಸೇರ್ಪಡೆಯಾಗಿದೆ. ಇದು ಧರ್ಮನಿರಪೇಕ್ಷತೆಯ ತತ್ವಕ್ಕೂ ಸಮ್ಮತವಾದ ಅಂಶ. ಈ ತತ್ವದ ಆನುಷಂಗವಾಗಿ ಕೈಗೊಂಡ ಧೋರಣೆ ಕಾರ್ಯಕ್ರಮಗಳನ್ನು, ಬಹುಸಂಖ್ಯಾತ ಸಮುದಾಯಕ್ಕೆ ಅನ್ಯಾಯವೆಸಗಿ ಅಲ್ಪಸಂಖ್ಯಾತರಿಗೆ-ಅಲ್ಪಸಂಖ್ಯಾತ ಧರ್ಮೀಯರಿಗೆ ವಿಶೇಷ ಸವಲತ್ತುಗಳನ್ನೂ ಸಂರಕ್ಷಣೆಗಳನ್ನೂ ಕೊಡುವುದು ಅದೆಂಥ ಧರ್ಮನಿರಪೇಕ್ಷತೆ ಎಂದು ಟೀಕಿಸುವುದು ಶುದ್ಧ ವಿವೇಕಶೂನ್ಯತೆ.

– ಧರ್ಮನಿರಪೇಕ್ಷತೆಯ ಆಡಳಿತ ವ್ಯವಸ್ಥೆಯಲ್ಲಿ ಧರ್ಮಶ್ರದ್ಧೆಯ ಅಸ್ತಿತ್ವಕ್ಕೂ, ಆವಿಷ್ಕಾರಕ್ಕೂ ಪೂರ್ಣ ಸ್ವಾತಂತ್ರ್ಯವಿದೆ; ಎಲ್ಲ ಮತಧರ್ಮಗಳಿಗೂ ಸಂವಿಧಾನಾತ್ಮಕ ಹಕ್ಕುಬಾಧ್ಯತೆಗಳು ಇವೆ. ಧರ್ಮಶ್ರದ್ಧೆ ಮೂಲತಃ ಒಂದು ವೈಯಕ್ತಿಕ ವಿಷಯ; ಆದರೆ ವ್ಯಕ್ತಿಗಳ ಶ್ರದ್ಧೆ ಸಮುದಾಯ ಶ್ರದ್ಧೆಯಾದಾಗ ಅದಕ್ಕೊಂದು ಸಾಮಾಜಿಕ ಸ್ವರೂಪ ಬರುತ್ತದೆ. ಈ ಮತಧರ್ಮ ಆಧಾರಿತ ಸಮಾಜದ ಸಾಮೂಹಿಕ ಚಟುವಟಿಕೆಗಳಿಗೂ ಅವಕಾಶ ಇರುತ್ತದೆ. ಆದರೆ ಇಂಥ ಚಟುವಟಿಕೆಗಳಿಂದ ಉಳಿದ ಜನ ಸಮುದಾಯದ ನಿತ್ಯಜೀವನಕ್ಕೆ ಬಾಧೆಯುಂಟಾಗದಂತೆ ಜಾಗ್ರತೆವಹಿಸುವ ಕರ್ತವ್ಯವೂ ಆಡಳಿತಕ್ಕೆ ವಿಧಿಯುಕ್ತವಾಗಿದೆ.

– ಧರ್ಮಶ್ರದ್ಧೆಗೆ ಅವಕಾಶವಿರುವಂತೆಯೆ, ಧರ್ಮದ ಹೆಸರಿನಲ್ಲಿ ನಡೆಯುವ ಅಂಧಶ್ರದ್ಧೆ, ಬೂಟಾಟಿಕೆ, ಮೋಸ, ವಂಚನೆ, ಶೋಷಣೆ, ಕ್ರೌರ್ಯ ಇತ್ಯಾದಿಗಳನ್ನು ತೊಡೆದುಹಾಕಲು ಧರ್ಮನಿರಪೇಕ್ಷತೆಯ ತತ್ವ ಅಡ್ಡ ಬರಲಾರದು. ಧರ್ಮಾಂಧ ಶಕ್ತಿಗಳು ಮಾತ್ರ, ಇವುಗಳ ವಿರುದ್ಧ ನಡೆಯಿಸುವ ಆಂದೋಲನೆಯನ್ನು ಧರ್ಮದ ಹೆಸರಿನಲ್ಲಿ ವಿರೋಧಿಸುತ್ತವೆ. ಧರ್ಮನಿರಪೇಕ್ಷತೆಯನ್ನು ಅದೇ ಆಧಾರದ ಮೇಲೆ ಟೀಕಿಸುತ್ತವೆ. ಗಣಪತಿ ಉತ್ಸವದ ಸಮಯದಲ್ಲಿ ಅಸಂಖ್ಯಾತ ಗಣಪತಿಯ ಮೂರ್ತಿಗಳನ್ನು ಕೆರೆಗಳಲ್ಲಿ, ಹೊಳೆಗಳಲ್ಲಿ ವಿಸರ್ಜಿಸುವುದರಿಂದ ಉಂಟಾಗುವ ಜಲಪ್ರದೂಷಣವನ್ನು ತಡೆಗಟ್ಟಲೆಂದು ಕೈಗೊಂಡ ಯೋಜನೆಗಳನ್ನು ಈ ಧರ್ಮಾಂಧ ಶಕ್ತಿಗಳು ವಿರೋಧಿಸುತ್ತವೆ. ಧಾರ್ಮಿಕ ಭಾವನೆಗಳನ್ನು ಕೆರಳಿಸಿ ಜನರನ್ನು ತಪ್ಪು ಹಾದಿಗೆ ಹಚ್ಚುತ್ತವೆ.

ಧರ್ಮನಿರಪೇಕ್ಷತೆಯ ಧ್ಯೇಯ ಧೋರಣೆಗಳಿಗೆ ಜನತೆಯ ಧರ್ಮಶ್ರದ್ಧೆಯನ್ನು ದುರುಪಯೋಗಪಡಿಸಿಕೊಳ್ಳುವ ಸತ್ತೆಯ ಪಿಪಾಸುಗಳಾದ ಧರ್ಮಾಂಧ ಶಕ್ತಿಗಳೆ ಅಪಾಯವನ್ನು ಒಡ್ಡುತ್ತಿವೆ. ಜನಸಾಮಾನ್ಯರ ಧರ್ಮಶ್ರದ್ಧೆಯನ್ನು ಆದರಿಸುತ್ತಲೆ ಧರ್ಮನಿರಪೇಕ್ಷತೆಯ ರಾಜಕೀಯ ಮೌಲ್ಯಗಳನ್ನು ಜನರಲ್ಲಿ ಬಿಂಬಿಸುವಂತಹ ಪ್ರಚೋದನ ಕಾರ್ಯದ ಮೂಲಕವೆ ಧರ್ಮಾಂಧತೆಯ ಸನಾತನಿ ಸೈತಾನಿ ಶಕ್ತಿಯನ್ನು ಎದುರಿಸುವುದು ಸಾಧ್ಯ.

**ಶಂಕರ ಮ. ಪಾಟೀಲ**
೩೩/೯೨, ಪ್ರಿಯದರ್ಶಿನಿ ಸೊಸೈಟಿ, ರಂಕಾಲ ಪಾರ್ಕ್
ಕೊಲ್ಹಾಪುರ - ೪೧೬ ೦೧೦

# ಪ್ರಬಲ ರಾಷ್ಟ್ರಗಳ ಅಟ್ಟಹಾಸ - ದುರ್ಬಲ ರಾಷ್ಟ್ರಗಳ ಅಸಹಾಯಕತೆ




ಸೀಯಾರ್ಕೆ

### ಭಾರತ-ಪಾಕೀಸ್ತಾನ : ಸ್ವಾಗತಾರ್ಹ ಬೆಳವಣಿಗೆ

ಇನ್ನೂರು ವರ್ಷಗಳ ಕಾಲ ಕುಖ್ಯಾತವಾದ 'ವಿಭಜಿಸಿ ಆಳು' ಸೂತ್ರವನ್ನು ಪಾಲಿಸಿ ಆಳ್ವಿಕೆ ನಡೆಸಿದ ಬ್ರಿಟಿಷ್ ವಸಾಹತುಶಾಹಿಗಳು ಭಾರತದಿಂದ ಕಾಲ್ತೆಗೆದದ್ದೂ ಮತೀಯ ಆಧಾರದ ಮೇಲೆ ದೇಶದ ವಿಭಜನೆ ಮಾಡಿಯೆ. ಅದರ ದುಷ್ಪರಿಣಾಮಗಳು ಈಗಲೂ ಅಳಿಸಿಹೋಗಿಲ್ಲ. ಸ್ವತಂತ್ರ ರಾಷ್ಟ್ರಗಳಾಗಿ ಉದಯಿಸಿದಾಗಿನಿಂದಲೇ ಪ್ರಾರಂಭವಾದ ಭಾರತ-ಪಾಕೀಸ್ತಾನಗಳ ನಡುವಣ ದ್ವೇಷಾಸೂಯೆಗಳು, ಅಪನಂಬಿಕೆಗಳು, ಘರ್ಷಣೆಗಳು ಬೆಳೆದುಬಂದು ಅರ್ಧ ಶತಮಾನಕ್ಕೂ ಮೇಲಾಯಿತು. ಇದು ಒಮ್ಮೆಗೇ ಅದೃಶ್ಯಗೊಂಡು ಸಂಬಂಧಗಳು ಕುದುರುವುದೆಂದು ನಿರೀಕ್ಷಿಸುವುದು ಭ್ರಮೆ. ಸಂಬಂಧಗಳ ಸುಧಾರಣೆಗೆ ಎರಡೂ ಕಡೆಯಿಂದ ಪ್ರಾಮಾಣಿಕ ಪ್ರಯತ್ನ ಅಗತ್ಯ. ಈ ದಿಶೆಯಲ್ಲಿ ಸದ್ಭಾವನೆಯಿಂದ ಇರಿಸುವ ಪ್ರತಿಯೊಂದು ಹೆಜ್ಜೆಯೂ ಮುಖ್ಯವಾದುದಾಗಿ ಇರುತ್ತದೆ. ಪರಸ್ಪರ ವಿಶ್ವಾಸ ಮೂಡಿಸುವ ನಿಟ್ಟಿನಲ್ಲಿ ಭಾರತ-ಪಾಕೀಸ್ತಾನಗಳು ಈಚೆಗೆ ಕೈಗೊಂಡಿರುವ ಕ್ರಮಗಳು ಈ ದೃಷ್ಟಿಯಿಂದ ಒಂದು ಗುಣಾತ್ಮಕ ಬೆಳವಣಿಗೆ.

ನಾಲ್ಕು ಸಶಸ್ತ್ರ ಘರ್ಷಣೆಗಳನ್ನು ಅನುಭವಿಸಿರುವ ಈ ಎರಡು ದೇಶಗಳೂ ಸಾಕಷ್ಟು ಕಷ್ಟ ನಷ್ಟಗಳನ್ನು ಕಂಡಿವೆ. ಶಾಂತಿಯುತ ಸಹಬಾಳ್ವೆಗಾಗಿ ಎರಡು ದೇಶಗಳೂ ಪ್ರಯತ್ನಿಸುತ್ತಿರುವುದು ಇದೇ ಮೊದಲ ಸಲವೇನಲ್ಲ. ಎಲ್ಲ ವಿವಾದಾತ್ಮಕ ಪ್ರಶ್ನೆಗಳನ್ನೂ ಶಾಂತಿಯುತವಾಗಿ ನೇರವಾದ ಮಾತುಕತೆಗಳ ಮೂಲಕ ಬಗೆಹರಿಸಿಕೊಳ್ಳಬೇಕೆಂದು ಒಪ್ಪಂದಗಳಾಗಿದ್ದರೂ ಅದು ಕಾರ್ಯರೂಪದಲ್ಲಿ ಫಲಕಾರಿಯಾಗಲಿಲ್ಲ. ಅದಕ್ಕೆ ಪ್ರತಿಯಾಗಿ ಗಡಿಯಲ್ಲಿ ಘರ್ಷಣೆಗಳು, ಸೈನ್ಯ ಜಮಾವಣೆ, ಮುಖಾಮುಖಿ ಮುಂದುವರಿದು ಸಮಸ್ಯೆಗಳು ಪರಿಹಾರ ಕಾಣದೆ ಉಳಿದುಕೊಂಡುವು. ಮೂರನೆಯವರ, ಮುಖ್ಯವಾಗಿ ಅಮೆರಿಕದ, ಮಧ್ಯಸ್ಥಿಕೆಯನ್ನು ಪಾಕೀಸ್ತಾನ ಅಪೇಕ್ಷಿಸಿದರೂ, ಭಾರತದ ಸ್ಪಷ್ಟವಾದ ತಾತ್ವಿಕ ನಿಲುವಿನಿಂದ ಅದು ತಿರಸ್ಕೃತವಾಗಿದೆ. ಮೂಗು ತೂರಿಸಲು ಸಿದ್ಧವಾಗಿರುವ ಅಮೆರಿಕದ ಮಧ್ಯಸ್ಥಿಕೆಯು ಅಪೇಕ್ಷಣೀಯವೂ ಅಲ್ಲ. ಭಾರತ-ಪಾಕೀಸ್ತಾನಗಳ ಮಧ್ಯೆ ಬಗೆಹರಿಸಬೇಕಾಗಿರುವ ಹಲವು ಸಮಸ್ಯೆಗಳು ಬೃಹದಾಕಾರವಾಗಿ ಬೆಳೆದಿವೆ. ಅವುಗಳ ಪೈಕಿ ಕಾಶ್ಮೀರದ ಪ್ರಶ್ನೆ ಅತ್ಯಂತ ಜಟಿಲವಾದ್ದಾಗಿದೆ. ಎರಡೂ ದೇಶಗಳಿಗೆ ಇದು ಭಾವಾವೇಶದ ಪ್ರಶ್ನೆಯಾಗಿದ್ದು ಬಿಗಿ ನಿಲುವಿಗೆ ಕಾರಣವಾಗಿದೆಯಲ್ಲದೆ, ಘರ್ಷಣೆಗೂ ಮೂಲವಾಗಿದೆ. ನೇರವಾದ ದ್ವಿಪಕ್ಷೀಯ ಮಾತುಕತೆಗಳಿಂದ ಈ ಸಮಸ್ಯೆಯನ್ನು ಬಗೆಹರಿಸಲು ಸರಿಯಾದ ಮನಃಸ್ಥಿತಿ, ವಾತಾವರಣ ಸೃಷ್ಟಿಯಾಗುವುದು ಅಗತ್ಯ. ಪರಸ್ಪರ ವಿಶ್ವಾಸ ಮೂಡಿದಾಗ ಮಾತ್ರವೇ ಅದು ಸಾಧ್ಯ. ಅದಕ್ಕೆ ಸಾಕಷ್ಟು ಸಮಯವೂ ಹಿಡಿಯುತ್ತದೆ. ಈ ಪರಿಸ್ಥಿತಿಯಲ್ಲಿ ಕಾಶ್ಮೀರವೊಂದನ್ನೇ ಮುಂದೆಮಾಡಿ, ಅದು ಬಗೆಹರಿಯದೆ ಸಂಬಂಧಗಳ ಸುಧಾರಣೆಯಾಗಲಿ, ಇತರ ಸಮಸ್ಯೆಗಳ ಪರಿಹಾರವಾಗಲಿ ಅಸಾಧ್ಯ ಎಂಬ ನಿಲುವು ಸರಿಯಲ್ಲ. ಹಂತಹಂತವಾಗಿ ವಿಶ್ವಾಸ ಮೂಡಿಸುವ ಕ್ರಮಗಳನ್ನು ಕಾರ್ಯಗತ ಮಾಡಿದರೆ ಕ್ರಮೇಣ ಸಮಸ್ಯೆಗಳಿಗೆ ಪರಿಹಾರ ಕಾಣಬಹುದು.

ಇದಕ್ಕೆ ಸರಕಾರಗಳು ಕೈಗೊಳ್ಳುವ ಉಪಕ್ರಮಗಳು ಒಂದು ಬಗೆಯವಾದರೆ, ಜನಸಾಮಾನ್ಯರ ನಡುವೆ ಬೆಸುಗೆಯಾಗುವ ಸಂಬಂಧಗಳು ಮಹತ್ವಪೂರ್ಣವಾದ್ದಾಗಿರುತ್ತವೆ. ಈ ವಿಚಾರದಲ್ಲಿ ಎರಡೂ ದೇಶಗಳ ಸರಕಾರಗಳು ಈವರೆಗೆ ಕೈಗೊಂಡಿರುವ ಕ್ರಮಗಳು ಬಹುಮುಖ್ಯವಾದ್ದಾಗಿವೆ. ಭಾರತ-ಪಾಕೀಸ್ತಾನಗಳ ಮಧ್ಯೆ ಬಸ್ ಸಂಚಾರದ ಪುನರಾರಂಭ, ವಿಮಾನಯಾನಗಳಿಗೆ ಅವಕಾಶ, ಸಮಜೋತಾ ಎಕ್ಸ್‌ಪ್ರೆಸ್ ರೈಲು ಸಂಚಾರ ಪ್ರಾರಂಭಿಸುವುದು ಮೊದಲಾದುವು ಜನಸಾಮಾನ್ಯರ ಮಧ್ಯೆ ಸಂಪರ್ಕ ಬೆಳೆಸಲು ಉಪಯುಕ್ತವಾಗಿವೆ. ಅದೇ ಬಗೆಯಲ್ಲಿ ಹಂತ ಹಂತವಾಗಿ ಭಾರತ-ಪಾಕೀಸ್ತಾನ ಕಾರಾಗಾರಗಳಲ್ಲಿ ಕೊಳೆಯುತ್ತಿರುವ ಬಂಧಿಗಳ ಬಿಡುಗಡೆ ಹಾಗೂ ವಿನಿಮಯ, ಮೀನುಗಾರರ ಬಿಡುಗಡೆ, ಭಾರತದಲ್ಲಿ ಪಾಕೀಸ್ತಾನಿ ಹೃದ್ರೋಗ ಪೀಡಿತ ಮಕ್ಕಳಿಗೆ ಚಿಕಿತ್ಸೆ, ಶಾಸಕರು, ಸಂಸದರು, ಸಾಂಸ್ಕೃತಿಕ ಕಾರ್ಯಕರ್ತರ ಪರಸ್ಪರ ಭೇಟಿ ಇವೆಲ್ಲ ವಿಶ್ವಾಸ ಮೂಡಿಸುವುದಕ್ಕೆ ಸಹಾಯಕವಾಗಿರುತ್ತವೆ. ಭಾರತ-ಪಾಕೀಸ್ತಾನಗಳ ನಾಯಕರು ರಾಜಕೀಯ ಮುತ್ಸದ್ದಿತನದಿಂದ ವ್ಯವಹರಿಸಿ, ಕೊಡುಕೊಳ್ಳು ಮನೋಭಾವ ತೋರಬೇಕು ಅಷ್ಟೆ. ಪಾಕೀಸ್ತಾನದಲ್ಲಿ ಜರುಗುವ 'ಸಾರ್ಕ್' ಶೃಂಗ ಸಮಾವೇಶವು ಈ ಎರಡು ದೇಶಗಳ ನಾಯಕರ ಭೇಟಿಗೆ ಅವಕಾಶವಾದರೆ ಒಳ್ಳೆಯದು. ಅದರಿಂದ ಹೆಚ್ಚಿನದೇನೂ ಆಗದಿದ್ದರೂ, ಮುಂದಿನ ಸಂಧಾನಗಳಿಗೆ ಸೂಕ್ತವಾದ ಸನ್ನಿವೇಶ ನಿರ್ಮಿಸೀತು. ಉಪಖಂಡದಲ್ಲಿ ದೊಡ್ಡ ರಾಷ್ಟ್ರವಾಗಿರುವ ಭಾರತದ ಸರಕಾರ ಈಗಾಗಲೇ ಕೈಗೊಂಡಿರುವ ಉಪಕ್ರಮಗಳನ್ನು ಮುಂದುವರಿಸಿಕೊಂಡು ಹೋಗಬೇಕಾಗಿದೆ. ಅದರ ಮೇಲೆ ಹೆಚ್ಚಿನ ಹೊಣೆಗಾರಿಕೆಯೂ ಇದೆ. ಈ ವಿಷಯದಲ್ಲಿ ತತ್‌ಕ್ಷಣದ ರಾಜಕೀಯ ಲಾಭ ಪಡೆದುಕೊಳ್ಳುವ ಸಂಕುಚಿತ ಮನೋಭಾವ ತೋರದೆ ಎರಡೂ ಸರಕಾರಗಳು ಮುಂದಿನ ಹೆಜ್ಜೆ ಇರಿಸಬೇಕು.

### ಇರಾಕ್-ಮುಗಿಯದ ಯುದ್ಧ

ಪ್ರಪಂಚದ ಜನಾಭಿಪ್ರಾಯವನ್ನು, ವಿಶ್ವಸಂಸ್ಥೆಯನ್ನು ಕಡೆಗಣಿಸಿ ಇರಾಕಿನ ಮೇಲೆ ದುರಾಕ್ರಮಣ ನಡೆಸಿ, ವಿಜಯದ ಅಟ್ಟಹಾಸದಿಂದ ಮೆರೆದ ಅಮೆರಿಕಾಗೆ ಈಗ ಅದು ಬಿಸಿ ತುಪ್ಪ, ನುಂಗಲೂ ಆಗದು, ಉಗುಳಲೂ ಆಗದು ಎನ್ನುವಂತಾಗಿದೆ. ಇರಾಕ್ ಇನ್ನೊಂದು ವಿಯೆಟ್ನಾಮ್ ಆದೀತೆಂಬ ಭೀತಿ ಅಮೆರಿಕನ್ನರನ್ನು ಆವರಿಸಿದೆ. ಸಾಮೂಹಿಕ ವಿನಾಶಕಾರಿ ಅಸ್ತ್ರಗಳನ್ನು, ರಾಸಾಯನಿಕ ಅಸ್ತ್ರಗಳನ್ನು ಇರಾಕಿನ ಸರ್ವಾಧಿಕಾರಿ ಸದ್ದಾಮ್ ಹುಸೇನ್ ಸಂಗ್ರಹಿಸಿ ಇರಿಸಿಕೊಂಡಿದ್ದಾನೆ ಎಂದು ಅಮೆರಿಕ ಹಾಗೂ ಅದರ ಚೇಲ ಬ್ರಿಟನ್ ಹೊರಿಸಿದ ಆಪಾದನೆ ಹಸೀ ಸುಳ್ಳು ಎಂದು ಸಾಬೀತಾಗಿದೆ. ಅದರಿಂದ ಮುಖಭಂಗವಾದರೂ, ಸೇಡು ತೀರಿಸಿಕೊಂಡ ತೃಪ್ತಿ ಅವಕ್ಕೆ. ಅತಿ ಕಡಿಮೆ ಯೋಧರನ್ನು ಕಳೆದುಕೊಂಡು, ಅತಿ ಶೀಘ್ರವಾಗಿ ದೇಶವನ್ನು ಆಕ್ರಮಿಸಿಕೊಂಡ ಹೆಗ್ಗಳಿಕೆ ಅಮೆರಿಕಾಗೆ. ಯುದ್ಧಕ್ಕೆ ಆದ ಭಾರಿ ಮೊತ್ತದ ವೆಚ್ಚವಾಗಲಿ, ಇರಾಕಿನ ನಗರಗಳ ಮೇಲೆ ಮಳೆಗರೆದ ಬಾಂಬು ದಾಳಿಯಿಂದ ಅಸುನೀಗಿದ, ಗಾಯಗೊಂಡ ಅಮಾಯಕ ಜನರ ಬಗ್ಗೆಯಾಗಲಿ ಅಮೆರಿಕಾಗೆ ಚಿಂತೆಯಿಲ್ಲ. ಪ್ರಪಂಚದ ಅತ್ಯಂತ ಶ್ರೀಮಂತ, ಬಲಿಷ್ಠ ರಾಷ್ಟ್ರ ತನ್ನ ಉದ್ದೇಶ ಸಾಧನೆಗಾಗಿ ಯಾವ ಮಟ್ಟಕ್ಕಾದರೂ ಇಳಿಯಲು ಸಿದ್ಧ ಎನ್ನುವುದಕ್ಕೆ ಇರಾಕಿನ ದುರಾಕ್ರಮಣ ಸಾಕ್ಷಿ. ಅಫ್ಘಾನಿಸ್ತಾನದ ಮೇಲೆ, ಆನಂತರ ಇರಾಕಿನ ಮೇಲೆ ಅಮೆರಿಕ ನಡೆಸಿದ ದಾಳಿ ಇಪ್ಪತ್ತೊಂದನೆ ಶತಮಾನದಲ್ಲಿ ಸಾಮ್ರಾಜ್ಯಶಾಹಿಯ ಹೊಸ ಅವತಾರವನ್ನು ತೋರಿಸಿದೆ. ವಿಶ್ವಸಂಸ್ಥೆಯನ್ನು ಮೂಲೆಗುಂಪಾಗಿಸಿದ್ದು ಮಾತ್ರವಲ್ಲದೆ, ಅದನ್ನು ತನಗೆ ಬೇಕಾದಂತೆ ಉಪಯೋಗಿಸಿಕೊಳ್ಳುವುದರಲ್ಲಿ ಅಮೆರಿಕ ಯಶಸ್ವಿಯಾದ್ದು ಈ ಜಾಗತಿಕ ಸಂಸ್ಥೆಯ ಉಪಯುಕ್ತತೆಗೆ, ಭವಿಷ್ಯಕ್ಕೆ ಸವಾಲು ಒಡ್ಡಿದೆ.

ಇಷ್ಟೆಲ್ಲ ಆಗಿದ್ದರೂ ಅಮೆರಿಕಾಗೆ ಇರಾಕಿನ ಆಕ್ರಮಣವನ್ನು ಜೀರ್ಣಿಸಿಕೊಳ್ಳಲಾಗಿಲ್ಲ. ಯುದ್ಧ ಮುಗಿದು ಏಳೆಂಟು ತಿಂಗಳು ಕಳೆದಿದ್ದರೂ, ಹೆಸರಿಗೆ ಇರಾಕಿಗಳ ಒಂದು ಗುಂಪು ಅಧಿಕಾರ ನಡೆಸುತ್ತಿದ್ದರೂ ಲಕ್ಷಕ್ಕೂ ಹೆಚ್ಚು ಮಂದಿಯ ಅಮೆರಿಕದ ಸೇನೆಗೆ ಶಾಂತಿ, ಸುವ್ಯವಸ್ಥೆ ಸ್ಥಾಪಿಸಲು ಸಾಧ್ಯವಾಗಿಲ್ಲ. ದುರಾಕ್ರಮಣಕಾರರ ವಿರುದ್ಧ ಇರಾಕಿ ಜನರ ಪ್ರತಿಭಟನೆ ದಿನೇ ದಿನೇ ತೀವ್ರವಾಗುತ್ತಿದೆ. ಮೂರು ಸೇನಾ ಹೆಲಿಕಾಪ್ಟರುಗಳು ಧ್ವಂಸವಾಗಿರುವುದರ ಜೊತೆಗೆ ಪ್ರತಿದಿನವೂ ಅಮೆರಿಕದ ಸೈನಿಕರು ಸಾವಿಗೀಡಾಗುತ್ತಿದ್ದಾರೆ, ವಾಹನಗಳು ಸುಟ್ಟು ಬೂದಿಯಾಗುತ್ತಿವೆ. ಇರಾಕಿನಲ್ಲಿದ್ದ ವಿಶ್ವಸಂಸ್ಥೆ ಕಚೇರಿಯ ಮೇಲೆ, ರೆಡ್‌ಕ್ರಾಸ್ ಹಾಗೂ ಇತರ ಸಂಸ್ಥೆಗಳ ಮೇಲೆ ದಾಳಿಗಳು ನಡೆದು ನೆರವಿನ ಕಾರ್ಯಕ್ರಮವೆಲ್ಲ ಸ್ಥಗಿತಗೊಂಡಿದೆ. ಅಮೆರಿಕದ ಮಿತ್ರರಾಷ್ಟ್ರಗಳಾದ ಬ್ರಿಟನ್, ಇಟಲಿ, ಸ್ಪೇನಿನ ಸೈನಿಕರೂ ಇರಾಕಿಗಳ ದಾಳಿಗೆ ಬಲಿಯಾಗಿದ್ದಾರೆ. ಇರಾಕಿನ ಪುನರ್ನಿರ್ಮಾಣಕ್ಕೆ ಪ್ರತಿಯಾಗಿ ಅಳಿದುಳಿದಿರುವುದೂ ಈಗ ಧ್ವಂಸವಾಗತೊಡಗಿದೆ. ಯುದ್ಧದಲ್ಲಿ ಮಡಿದ ಯೋಧರ ಸಂಖ್ಯೆಗಿಂತ ಹೆಚ್ಚು ಮಂದಿ ಅಮೆರಿಕನ್ ಯೋಧರು ಯುದ್ಧಾನಂತರ ಇರಾಕಿನಲ್ಲಿ ಸಾವನ್ನಪ್ಪಿದ್ದಾರೆ. ಸರ್ವಾಧಿಕಾರಿ ಸದ್ದಾಮ್ ಹುಸೇನನ ಆಡಳಿತವನ್ನು ತಾಳಿಕೊಂಡ ಇರಾಕೀಯರು ದುರಾಕ್ರಮಣಕಾರರನ್ನು ತಾಳಲಾರರು ಎಂಬುದನ್ನು ಇರಾಕಿನ ಜನ ರುಜುವಾತುಗೊಳಿಸಿದ್ದಾರೆ. ಹಾಗಿದ್ದರೂ

ಅಮೆರಿಕ ಇರಾಕಿನಿಂದ ಕಾಲ್ತೆಗೆಯಲು ಸಿದ್ಧವಿಲ್ಲ. ಅಮೆರಿಕನ್ ಸೈನಿಕರಿಗೆ ಸ್ಫೂರ್ತಿ ನೀಡಲು ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಇರಾಕಿಗೆ ಕಳ್ಳತನದಿಂದ ಬಂದು ಹೋಗಬೇಕಾಗಿ ಬಂದ ಘಟನೆ ಪರಿಸ್ಥಿತಿಗೆ ಕೈಗನ್ನಡಿಯಾಗಿದೆ. ದುರಾಕ್ರಮಣಕಾರಿ ಸೇನೆಗಳು ಇರಾಕಿನಲ್ಲಿರುವವರೆಗೆ ಪರಿಸ್ಥಿತಿ ಸುಧಾರಿಸದು. ಆದಷ್ಟು ಬೇಗ ವಿದೇಶೀ ಸೇನೆಗಳು ವಾಪಸ್ಸಾಗುವಂತೆ ಒತ್ತಾಯ ತರುವುದು ಜರೂರು ಅಗತ್ಯ. ಅಸ್ತಿತ್ವ ಉಳಿಸಿಕೊಳ್ಳಲು ವಿಶ್ವಸಂಸ್ಥೆ ಈ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಬೇಕಾಗಿದೆ.

ಭಯೋತ್ಪಾದನೆಯ ವಿರುದ್ಧ ಅಮೆರಿಕ ಸಮರ ಸಾರಿ ಎರಡು ವರ್ಷ. ಈ ಅವಧಿಯಲ್ಲಿ ಪ್ರಪಂಚದಲ್ಲಿ ಭಯೋತ್ಪಾದನೆ ಕೃತ್ಯಗಳು ಹೆಚ್ಚಿವೆಯೇ ಹೊರತು ಕಮ್ಮಿಯಾಗಿಲ್ಲ. ಇಂಡೋನೇಷಿಯಾದ ಬಾಲಿ, ಥೈಲ್ಯಾಂಡ್, ಸೌದಿ ಅರೇಬಿಯ, ಟರ್ಕಿ ಮೊದಲಾದ ದೇಶಗಳಲ್ಲಿ ಜರುಗಿದ ಆಸ್ಫೋಟನೆ ಪ್ರಕರಣಗಳು ಅದನ್ನು ಸಾರಿ ಹೇಳುತ್ತವೆ. ಭಯೋತ್ಪಾದನೆ ವಿರುದ್ಧ ಸಮರದ ಹೆಸರಿನಲ್ಲಿ ಅಫ್ಘಾನಿಸ್ತಾನ, ಇರಾಕ್‌ಗಳನ್ನು ಆಕ್ರಮಿಸಿಕೊಂಡಿದ್ದೇ ಅಮೆರಿಕದ ಸಾಧನೆ. ಇರಾಕಿನಲ್ಲಿ ಕೈ ಸುಟ್ಟುಕೊಳ್ಳುತ್ತಿದ್ದರೂ ಅಮೆರಿಕ ಸಿರಿಯಾ, ಇರಾನ್‌ಗಳನ್ನು ಆಕ್ರಮಿಸಿಕೊಳ್ಳಲು ಸಂಚು ಹೂಡಿದೆ. ಸಿರಿಯಾದ ಮೇಲೆ ಭಯೋತ್ಪಾದನೆಯ ಗೂಬೆ ಕೂರಿಸಿರುವ ಅಮೆರಿಕ, ಇರಾನಿನ ಮೇಲೆ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆ ಆಪಾದನೆ ಹೊರಿಸಿದೆ. ಈ ಎರಡು ದೇಶಗಳನ್ನು ಕಬಳಿಸಿದರೆ ಇಡೀ ಪಶ್ಚಿಮ ಏಶಿಯಾದ ಭೂಭಾಗವನ್ನು ತನ್ನ ತೆಕ್ಕೆಗೆ ಹಾಕಿಕೊಂಡ ಹಾಗೆ ಎಂಬುದು ಅಮೆರಿಕದ ಲೆಕ್ಕಾಚಾರ. ಅದು ಸಾಧ್ಯವಾದರೆ ಪ್ರಪಂಚದ ಮೇಲೆ ಅಧಿನಾಯಕತ್ವ ಸ್ಥಾಪಿಸಲು ದಾರಿ ಸುಗಮ. ಅಮೆರಿಕದ ಈ ಹೆಬ್ಬಯಕೆಗಳಿಗೆ ಕಡಿವಾಣ ಹಾಕಲು ಯಾವ ರಾಷ್ಟ್ರವೂ ಮುಂದೆಬಾರದೆ ಹೋಗಿರುವುದು ದುರಂತ. ಇರಾಕಿನ ಮೇಲೆ ದುರಾಕ್ರಮಣವನ್ನು ವಿರೋಧಿಸಿದ ಪ್ರಮುಖ ಐರೋಪ್ಯ ದೇಶಗಳು, ಆನಂತರ ವಿಶ್ವಸಂಸ್ಥೆಯ ಭದ್ರತಾಮಂಡಳಿಯಲ್ಲಿ ಅಮೆರಿಕದ ಒತ್ತಡಗಳಿಗೆ ಮಣಿದದ್ದು ಅದಕ್ಕೆ ಉದಾಹರಣೆ. ಮುಂಬರುವ ದಿನಗಳಲ್ಲಿ ಸಾಮ್ರಾಜ್ಯಶಾಹಿ ಪ್ರಾಬಲ್ಯವನ್ನು ಎದುರಿಸಲು ಐಕ್ಯ ಕಾರ್ಯಾಚರಣೆಯೊಂದೇ ಮಾರ್ಗ.

**ಪ್ಯಾಲಸ್ತೈನ್-ಮುಂದುವರಿಯುತ್ತಿರುವ ದುರಂತ**

ಪ್ಯಾಲಸ್ತೈನ್ ಜನತೆಗೆ ಸ್ವತಂತ್ರ ತಾಯ್ನಾಡಿನ ಸ್ಥಾಪನೆ ಇಸ್ರೇಲಿನ ಹಠಮಾರಿತನದಿಂದಾಗಿ ಮರೀಚಿಕೆಯಾಗುತ್ತಿದೆ. ಸ್ವತಂತ್ರ ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆಗೆ ಪೂರ್ವಭಾವಿಯಾಗಿ ಸ್ಥಾಪನೆಗೊಂಡ ಪ್ಯಾಲಸ್ತೈನ್ ಸ್ವಾಯತ್ತ ಆಡಳಿತೆ ನಿರ್ಜೀವಗೊಂಡಿದೆ. ಪ್ಯಾಲಸ್ತೈನ್ ವಿಮೋಚನಾರಂಗದ ನಾಯಕ ಯಾಸೆರ್ ಅರಾಫತ್ ಅಧ್ಯಕ್ಷರಾಗಿರುವ ಪ್ಯಾಲಸ್ತೈನ್ ಆಡಳಿತ ಮಂಡಳಿ ಅಧಿಕಾರ ಚಲಾಯಿಸಲು ಇರುವ ದೊಡ್ಡ ಅಡ್ಡಿ ಇಸ್ರೇಲಿ ಸೈನಿಕರ ಕಾರ್ಯಾಚರಣೆ. ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆಯನ್ನು ತಡೆಯುವುದು ಇಸ್ರೇಲಿನ ಮುಖ್ಯ ಗುರಿ. ಅದಕ್ಕಾಗಿಯೇ ಅದು ಎಲ್ಲ ಒಪ್ಪಂದಗಳನ್ನು ಮುರಿಯುತ್ತಿದೆ. ಪ್ಯಾಲಸ್ತೈನ್‌ಗೆ ಸೇರಬೇಕಾದ ಪ್ರದೇಶಗಳಲ್ಲಿ ಸ್ಥಾಪಿಸಲಾಗಿರುವ ಯೆಹೂದ್ಯರ ಸ್ವಾಸ್ಥ್ಯಗಳನ್ನು ತೆರವು ಮಾಡಲು ನಿರಾಕರಿಸುತ್ತಿದೆ. ಪ್ಯಾಲಸ್ತೈನ್‌ರ ಮೇಲೆ ದಿನ ಬೆಳಗಾದರೆ ಭಯೋತ್ಪಾದಕ ದಾಳಿಗಳನ್ನು ನಡೆಸುತ್ತಿರುವ ಇಸ್ರೇಲಿ ಸೇನೆಗಳು ಪ್ಯಾಲಸ್ತೈನ್ ಭಯೋತ್ಪಾದಕರ ನಿಗ್ರಹಕ್ಕಾಗಿ ಕಾರ್ಯಾಚರಣೆ ಎಂದು ಹೇಳುತ್ತ ಬಂದಿವೆ. ಪ್ಯಾಲಸ್ತೈನ್ ಆಯಕಟ್ಟಿನ ಪ್ರದೇಶಗಳಲ್ಲಿ ಟ್ಯಾಂಕುಗಳನ್ನು ನೆಲೆಗೊಳಿಸಿ ಬೆದರಿಕೆ ಹಾಕುವುದು ಇಸ್ರೇಲಿ ಸರಕಾರದ ಕ್ರಮವಾಗಿದೆ.

ಪ್ಯಾಲಸ್ತೈನ್ ರಾಜ್ಯ ನಿರ್ಮಾಣ ಕುರಿತು ಅಮೆರಿಕ ವರ್ಷಾರಂಭದಲ್ಲಿ ತಯಾರಿಸಿದ ಎರಡು ವರ್ಷಗಳ ಯೋಜನೆ ಈಗ ಮುರಿದುಬಿದ್ದಿದೆ ಎಂದೇ ಹೇಳಬೇಕು. ಅಮೆರಿಕದ ಈ ಯೋಜನೆಯನ್ನು ಅರೆಮನಸ್ಸಿನಿಂದ ಒಪ್ಪಿಕೊಂಡ ಇಸ್ರೇಲ್ ಅದನ್ನು ಮೂಲೆಗುಂಪಾಗಿಸಲು ತಡಮಾಡಲಿಲ್ಲ. ಅಧ್ಯಕ್ಷ ಯಾಸೆರ್ ಅರಾಫತ್ ಭಯೋತ್ಪಾದಕರಿಗೆ ಕುಮ್ಮಕ್ಕು ನೀಡುತ್ತಿದ್ದಾರೆಂದು ಆಪಾದಿಸಿ ಅವರ ಕಚೇರಿಯ ಮೇಲೆ ದಾಳಿ ನಡೆಸಿ, ಸುತ್ತ ಸೇನಾ ಪಹರೆ ಹಾಕಿತು. ಅರಾಫತ್ ವಸ್ತುತಃ ಒಂದು ರೀತಿಯ ಗೃಹಬಂಧನದಲ್ಲೇ ಇದ್ದಾರೆ. ಅರಾಫತ್‌ರನ್ನು ಪ್ಯಾಲಸ್ತೈನ್‌ನಿಂದ ಹೊರಹಾಕಲು ಪ್ರಯತ್ನಿಸಿದ ಇಸ್ರೇಲ್ ಅವರ ಕೊಲೆಗೆ ಬೆದರಿಕೆ ಹಾಕಿದ್ದು ಉದ್ಧಟತನದ ಪರಮಾವಧಿ. ಅಮೆರಿಕ ಇಸ್ರೇಲಿನ ಬೆದರಿಕೆಯನ್ನು ತೋರಿಕೆಗೆ ವಿರೋಧಿಸಿದರೂ, ಅದರೊಂದಿಗೆ ಶಾಮೀಲಾಗಿರುವುದರಲ್ಲಿ ಸಂಶಯವಿಲ್ಲ. ಅರಾಫತ್ ಮೇಲೆ ಭ್ರಷ್ಟಾಚಾರದ ಆರೋಪ ಹೊರಿಸಿ ಅವರು ಅಧಿಕಾರ

ತ್ಯಜಿಸಬೇಕೆಂಬ ಒತ್ತಾಯಕ್ಕೆ ಅಮೆರಿಕ ಬೆಂಬಲವಿದ್ದುದು ಸರ್ವವಿದಿತ. ಯಾಸೆರ್ ಅರಾಫತ್‌ರನ್ನು ಹೊರಗಿಟ್ಟು ಕೈಗೊಂಬೆ ಸರಕಾರವೊಂದನ್ನು ರಚಿಸಿ, ನೆಪಮಾತ್ರಕ್ಕೆ ಪ್ಯಾಲಸ್ಟೈನ್ ರಾಜ್ಯ ಸ್ಥಾಪಿಸುವುದು ಇಸ್ರೇಲ್-ಅಮೆರಿಕಗಳ ಸಂಚು. ಅಧ್ಯಕ್ಷ ಅರಾಫತ್‌ರ ಜನಪ್ರಿಯತೆಯಿಂದಾಗಿ ಅದು ಫಲಿಸದೆ ಹೋಗಿದೆ. ಪ್ಯಾಲಸ್ಟೈನ್ ಜನರ ಮೇಲೆ ಇಸ್ರೇಲಿನ ದಬ್ಬಾಳಿಕೆ ಮಾತ್ರ ನಿರಂತರವಾಗಿ ಸಾಗಿದೆ. ಪ್ಯಾಲಸ್ಟೈನ್ ಜನತೆಯ ದುರಂತಕ್ಕೆ ಅರಬ್ ರಾಷ್ಟ್ರಗಳ ಅನೈಕ್ಯತೆ ಒಂದು ಮುಖ್ಯಕಾರಣ. ಕಳೆದ ಐವತ್ತಕ್ಕೂ ಹೆಚ್ಚು ವರ್ಷಗಳಿಂದ ಸ್ವತಂತ್ರ ತಾಯ್ನಾಡಿನ ಸ್ಥಾಪನೆಗಾಗಿ ಪ್ಯಾಲಸ್ಟೈನ್ ಜನತೆ ನಡೆಸುತ್ತಿರುವ ಹೋರಾಟ ಯಶಸ್ವಿಯಾಗಬೇಕಾದರೆ ಎಲ್ಲ ಪ್ರಜಾಪ್ರಭುತ್ವ ರಾಷ್ಟ್ರಗಳ ಬೆಂಬಲ ಅಗತ್ಯ. ಒಪ್ಪಂದಗಳನ್ನು ಕಾರ್ಯಗತ ಮಾಡಲು ಇಸ್ರೇಲಿನ ಮೇಲೆ ಒತ್ತಡ ತರಲು ಎಲ್ಲ ಪ್ರಜಾಪ್ರಭುತ್ವವಾದಿ ದೇಶಗಳೂ ಪ್ರಯತ್ನಿಸಬೇಕಾಗಿದೆ. ಪ್ಯಾಲಸ್ಟೈನ್ ಪ್ರದೇಶದಲ್ಲಿರುವ ಇಸ್ರೇಲಿ ಸೇನೆಗಳು, ಟ್ಯಾಂಕುಗಳು ವಾಪಸ್ಸಾಗಬೇಕಾದ್ದು, ಅಧ್ಯಕ್ಷ ಯಾಸರ್ ಅರಾಫತ್ ಮೇಲೆ ಇಸ್ರೇಲ್ ವಿಧಿಸಿರುವ ಎಲ್ಲ ನಿರ್ಬಂಧಗಳ ತೆರವು ಜರೂರು ಅವಶ್ಯ.

**ಬಗೆಹರಿಯದ ಪ್ರಶ್ನೆಗಳು**

ದಕ್ಷಿಣ ಏಶಿಯಾಗೆ ಸಂಬಂಧಿಸಿದಂತೆ ಶ್ರೀಲಂಕಾದಲ್ಲಿ ಎಲ್‌ಟಿಟಿಇಯೊಂದಿಗೆ ಸಂಧಾನಗಳು ಸಂಪೂರ್ಣವಾಗಿ ಸ್ಥಗಿತಗೊಂಡಿವೆ. ನಾರ್ವೆ ದೇಶದ ಮಧ್ಯಸ್ಥಿಕೆಯಲ್ಲಿ ಸುದೀರ್ಘ ಸಂಧಾನಗಳ ನಂತರ ಏರ್ಪಟ್ಟ ಯುದ್ಧಸ್ತಂಭನ ಒಪ್ಪಂದ ಇನ್ನೂ ಮುಂದುವರಿಯುತ್ತಿರುವುದೊಂದೇ ಸಮಾಧಾನದ ಸಂಗತಿ. ತಮಿಳು ಭಾಷಿಕ ಜನರೇ ಅಧಿಕವಾಗಿರುವ ಶ್ರೀಲಂಕಾದ ಈಶಾನ್ಯದಲ್ಲಿರುವ ಮೂರು ಪ್ರಾಂತಗಳು ವಸ್ತುಶಃ ಎಲ್‌ಟಿಟಿಇಯ ವಶದಲ್ಲಿಯೇ ಇವೆ. ಶ್ರೀಲಂಕಾದ ಪ್ರಾದೇಶಿಕ ಸಮಗ್ರತೆಗೆ ಭಂಗಬಾರದ ಹಾಗೆ ಫೆಡರಲ್ ವ್ಯವಸ್ಥೆಯ ಸ್ಥಾಪನೆಯ ಉದ್ದೇಶ ಎಲ್‌ಟಿಟಿಇ ಸಂಧಾನದ ಒಂದು ಹಂತದಲ್ಲಿ ಮಂಡಿಸಿದ ಯೋಜನೆಯಿಂದ ಮುರಿದುಬಿದ್ದಂತಾಗಿದೆ. ಎಲ್‌ಟಿಟಿಇ ಸೂಚನೆಗಳು ಶ್ರೀಲಂಕಾ ಸರಕಾರದಲ್ಲಿ ಬಿಕ್ಕಟ್ಟನ್ನೇ ಉಂಟುಮಾಡಿತು. ವಸ್ತುಶಃ ಎಲ್‌ಟಿಟಿಇ ಯೋಜನೆ ತಮಿಳರಿಗಾಗಿ ಪ್ರತ್ಯೇಕ ರಾಜ್ಯದ ಸ್ಥಾಪನೆಯನ್ನೇ ಪ್ರತಿಪಾದಿಸಿದೆ. ಸರಕಾರದಲ್ಲಿ ಉಂಟಾಗಿರುವ ಬಿಕ್ಕಟ್ಟಿನ ಹಿನ್ನೆಲೆಯಲ್ಲಿ ಸಂಧಾನಗಳಲ್ಲಿ ಪ್ರಮುಖಪಾತ್ರ ವಹಿಸಿದ್ದ ನಾರ್ವೆ ಈಗ ಹಿಂದೆ ಸರಿದಿದೆ.

ಅಫ್ಘಾನಿಸ್ತಾನದಲ್ಲಿ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತಿದೆ. ತಾಲಿಬಾನ್‌ನ ಅನುಯಾಯಿಗಳ ಉಪಟಳ ಹೆಚ್ಚಾಗುತ್ತಿದೆ. ಅಲ್ಲಿ ಅಮೆರಿಕದ ಬೆಂಬಲದಿಂದ ಸ್ಥಾಪನೆಗೊಂಡಿರುವ ಹಂಗಾಮಿ ಸರಕಾರದ ಅಧಿಕಾರ ಕಾಬೂಲಿನಿಂದಾಚೆ ಚಲಾವಣೆಯಲ್ಲಿ ಇಲ್ಲವೆಂಬ ದೂರು ಬಲವಾಗಿ ಕೇಳಿಬರುತ್ತಿದೆ. ಅಮೆರಿಕದ ಸೇನೆಗಳು ಸ್ವದೇಶಕ್ಕೆ ಮರಳಬೇಕೆಂಬ ಒತ್ತಾಯ ಪ್ರಬಲಗೊಳ್ಳುತ್ತಿದೆ. ಅಮೆರಿಕನ್ ಸೈನಿಕರ ಮೇಲೆ ದಾಳಿ ನಡೆಯುವುದು ಈಚೆಗೆ ಹೆಚ್ಚಾಗುತ್ತಿದೆ. ಅಫ್ಘಾನಿಸ್ತಾನದ ಪುನರುತ್ಥಾನಕ್ಕೆ ಅಮೆರಿಕ ನೀಡಿದ್ದ ಆಶ್ವಾಸನೆಗಳೆಲ್ಲ ಕಾಗದದ ಮೇಲೆ ಉಳಿದಿವೆ. ಅಭಿವೃದ್ಧಿಕಾರ್ಯಗಳೇನೂ ಜರುಗುತ್ತಿಲ್ಲ. ದೇಶದಲ್ಲಿ ಚುನಾಯಿತ ಸರಕಾರವೊಂದನ್ನು ಅಸ್ತಿತ್ವಕ್ಕೆ ತರಲು ಅಮೆರಿಕ ತಯಾರಿಸಿರುವ ಸಂವಿಧಾನ ಅಂಗೀಕಾರವಾಗುವುದು ಸುಲಭವೇನಲ್ಲ. ಎಲ್ಲ ಆಫ್ಘಾನ್ ಬುಡಕಟ್ಟುಗಳ ನಾಯಕರ ಅಂಗೀಕಾರ ಅದಕ್ಕೆ ಅಗತ್ಯ. ದೇಶದ ಪುನರ್ನಿರ್ಮಾಣ ಕನಸಿನ ಗಂಟಾಗಿರುವುದರಿಂದ ಜನ ಬೇಸತ್ತಿದ್ದಾರೆ. ಬಡತನ ನಿರುದ್ಯೋಗಗಳು ತಾಂಡವವಾಡುತ್ತಿವೆ.

ಒಟ್ಟಿನಲ್ಲಿ ಪ್ರಬಲ ರಾಷ್ಟ್ರದ ಅಟ್ಟಹಾಸ, ದುರ್ಬಲ ರಾಷ್ಟ್ರಗಳ ನಿಷ್ಕ್ರಿಯತೆ, ಈ ಸಾಲಿನಲ್ಲಿ ಎದ್ದುಕಾಣುವ ಬೆಳವಣಿಗೆ. ಹಳೆಯ ಸಮಸ್ಯೆಗಳು ಉಳಿದುಕೊಂಡು ಹೊಸ ಪ್ರಶ್ನೆಗಳು ಹುಟ್ಟಿಕೊಂಡಿವೆ. ಅವುಗಳ ಪರಿಹಾರಕ್ಕೆ ಎಲ್ಲ ದೇಶಗಳ ಸಂಯುಕ್ತ ಪ್ರಯತ್ನ ಅಗತ್ಯ. ಅಮೆರಿಕದ ಪ್ರಾಬಲ್ಯದಿಂದ ನಿರ್ಜೀವಗೊಂಡಿರುವ, ನಿಷ್ಕ್ರಿಯಗೊಂಡಿರುವ ವಿಶ್ವಸಂಸ್ಥೆಯನ್ನು ಪುನಶ್ಚೇತನಗೊಳಿಸುವುದು ಅದಕ್ಕೆ ಸಹಾಯಕವಾದೀತು. ಆ ದಿಶೆಯಲ್ಲಿ ಮುಂದುವರಿಯಲು ವಿಶ್ವಸಂಸ್ಥೆಯ ಅಂಗರಚನೆಯನ್ನು ಪುನರ್‌ರೂಪಿಸುವುದು, ಸಂಸ್ಥೆಯನ್ನು ಪ್ರಜಾಪ್ರಭುತ್ವಗೊಳಿಸುವುದು ಅಗತ್ಯ. ಬಹುಮತದ ತೀರ್ಮಾನಗಳಿಗೆ ವಿಶ್ವಸಂಸ್ಥೆಯಲ್ಲಿ ಆದ್ಯತೆ ಕಲ್ಪಿಸುವುದು ಮುಖ್ಯ. ವಿಶ್ವಸಂಸ್ಥೆ ಅಸ್ತಿತ್ವಕ್ಕೆ ಬಂದದ್ದು ಎರಡನೇ ಮಹಾಯುದ್ಧದ ಅಂತ್ಯದಲ್ಲಿ. ಅಂದಿನ ವಿಶಿಷ್ಟ ಪರಿಸ್ಥಿತಿಯಲ್ಲಿ ಅಗ್ರರಾಷ್ಟ್ರಗಳು ಎನಿಸಿಕೊಂಡಿದ್ದ ಸದಸ್ಯ ರಾಷ್ಟ್ರಗಳಿಗೆ ನೀಡಿದ್ದ ವೀಟೋ ಹಕ್ಕು ಇಂದಿನ ಪರಿಸ್ಥಿತಿಗೆ ಒಗ್ಗದು. ನಿರರ್ಥಕವಾಗಿರುವ ವೀಟೋ ಹಕ್ಕು ರದ್ದುಗೊಳಿಸಿ, ವಿಶ್ವಸಂಸ್ಥೆಯ ಪುನಾರಚನೆ, ಪುನಶ್ಚೇತನ ಸಾಧ್ಯವಾದೀತೆ ?

ಸೀಯಾರ್ಕೆ
'ಚೌಜೀನ' ೮೪೯, ೬ನೇ ಅಡ್ಡರಸ್ತೆ, ಬನಶಂಕರಿ ೩ನೇ ಹಂತ, ೧ನೇ 'ಏ' ಮುಖ್ಯರಸ್ತೆ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫




ಈ ಸಂಜೆಗೆ ಎಷ್ಟೊಂದು ಬೇಜಾರು
ಬಂದಿದೆಯೆಂದರೆ
ಸೂರ್ಯ ನೀರಿನಲ್ಲಿ ಬಣ್ಣಗಳನ್ನು
ಕದಡುತ್ತಲೇ ಇಲ್ಲ
ಆ ಮಿಂಚುಳ್ಳಿ ಕುಸುಗೋಣು
ಮಾಡಿಕೊಂಡು
ಕುಳಿತೇ ಇದೆ, ಅತ್ತಿತ್ತ ಕೂಡ
ನೋಡದೆ.

ನೀರಂತೂ ಅಲೆಗಳನ್ನು
ಬೇಕೋ ಬೇಡವೋ ಎಂಬಂತೆ
ದಂಡೆಗೆ ಕಳಿಸುತ್ತಿದೆ.
ಕಪ್ಪೆ ಚಿಪ್ಪು ನಿರ್ಜೀವ
ಬೋರಲು ಬಿದ್ದ ತೆಪ್ಪ ಕೂಡ

ಆದರೆ ಆ ಸುಟ್ಟುಹೋದ ಮರ
ಮಾತ್ರ ಹಾಡುತ್ತಿದೆ.
ಒಳಗೊಳಗೆ ಹೊತ್ತಿ ಉರಿದ
ಬೆಂಕಿಯಿಂದ ಸುಟ್ಟ ಹೃದಯ
ಯಾವುದೋ ಸಂದಿಯಿಂದ
ಹೊಗೆಯ ಕಾರಿ ಹಾಡುತ್ತಿದೆ

ಈ ಸೂರ್ಯ, ನೀರು, ಹಕ್ಕಿಗಿರದ
ಜವಾಬ್ದಾರಿ ಆದಕ್ಕಿದೆ.
ಹೊಗೆಯ ಹಾಡು ಗಾಳಿ ಸೇರಿ
ಗಾಳಿಯಲ್ಲಿ ದೂರ ಸಾಗಿ
ಯಾರನೋ ತಲುಪುತ್ತಿದೆ
ಮನಸ್ಸುಗಳ ಹೊಕ್ಕು
ನೆಲೆ ಕಾಣುತ್ತಿದೆ
ಕತೆ ಹೇಳುತ್ತಿದೆ.

ಮೀನಾ ಸದಾಶಿವ, 'ಸಂಕ್ರಮಣ', ಜ್ಯೋತಿ ಲೇಔಟ್, ಯಲಚೇನಹಳ್ಳಿ
ಜೆ.ಪಿ.ನಗರ ಅಂಚೆ, ಬೆಂಗಳೂರು - ೫೬೦ ೦೭೮

ಆಳುದ್ದದ ಗಣಪತಿ ಮುಂದೆ ಗೌರವ್ವ ಕುಳಿತಿದ್ದರು. ಮಿಣುಕು ಬೆಳಕಿನಲ್ಲಿ ಜನರ ನೋಡುತ್ತಿದ್ದರು. ಐದು ದಿನಕ್ಕೆ ವಿಸರ್ಜನೆ ಮಾಡಬೇಕು. ಎಲ್ಲಾ ಸಿದ್ಧತೆಗಳು ಆಗಿದ್ದವು. ಆದರೆ ಕೆರೆಯಲ್ಲಿ ನೀರೇ ಇರಲಿಲ್ಲ. ಎಂದೂ ಬತ್ತದ ಕಪಿಲೆ ಬಾವಿಯಲ್ಲೂ ನೀರಿರಲಿಲ್ಲ. ಊರಾದ ಊರಲ್ಲೇ ಕಣ್ಣಗ್ಗೊತ್ತಿಕೊಳ್ಳಲೂ ಸಿಗುತ್ತಿಲ್ಲ. ಈ ಗೌರಿ ಗಣೇಶನನ್ನು ಬೀದಿಪಾಲು ಮಾಡಬೇಕಲ್ಲ, ಎಂದು ಜನ ಗೌರಿ ಗಣಪತಿಯನ್ನು ನೋಡುತ್ತಾ ಕುಳಿತಿದ್ದರು. ಅಲ್ಲಿಗೇ ರಾಮವ್ವ ನೆನ್ನೆ ಹರಿಜನರೊಂದಿಗೆ ನಡೆದ ಗಲಾಟೆಯನ್ನು ಜನರಿಗೆ ಒಪ್ಪಿಸಲು ಬಂದಳು.

''ಎಲೆ ಮೇಗಳ ಇಬ್ಬನಿ ಹನಿಗೂ ಬರ ಬಂದದೆ. ನಾಡು ಬೆಂಗಾಡಾಗದೆ, ಆದರೆ ಜನರ ಅಹಂಕಾರಕ್ಕೆ ಇನ್ನೂ ಬರ ಬಂದಿಲ್ಲ. ಅದರಲ್ಲೂ ಹೊಲಾರಿಗೆ ಬಂದಿರೊ ಅಹಂಕಾರವನ್ನು ಊರಿಗೆಲ್ಲಾ ಹಂಚಬಹುದು. ಇರೋ ಒಂದು ಹಳ್ಳದಲ್ಲೂ ಇವರೆ ಅವರೆ. ಈಗ ಒಂದು ಚೂರು ನೀರಿದ್ರೆ ಅಲ್ಲೆ. ಅದ್ನ ಹಂಚ್ಗ ಕುಡಿಯೊ ನಿಯತ್ತಿಲ್ಲ ಅವ್ಕೆ. ಲೆಕ್ಕ ನಾವು ಅಲ್ಲಿಗೆ ಹೋಗಂಗೇ ಇಲ್ಲ. ಆದರೂ ನಮ್ಮ ದೊಡ್ಡಸ್ತಿಕೆ ಬಿಟ್ಟು ನಾವು ಅಲ್ಲಿಗೆ ನೀರಿಗೋದ್ರೆ, ಅವರು ನಡ್ಕಳದು ಇಂಗೇನ್ರಣ್ಣ. ಎಲ್ರಂಗೆ ನಾವೂ ಸಾಲನಲ್ಲಿ ಚೌರ್ಗೆ ಮಡಿಕಂಡು ಕಾಯ್ತಿದ್ದೊ. ಆ ನಿಂಗನ ಗಂಡು ನಮ್ಮ ಚೌರ್ಗೆಗಳ ಕಾಲಲ್ಲಿ ಒದ್ಕ ಹೊಯ್ತನಲ್ಲ; ಅವನ ಹಮ್ಮು ಎಷ್ಟಿರಬೇಕು. ಕೇಳದ್ರೇ ಅವನೇನನ್ನಬೇಕು, 'ಏನೊ ಕಾಣನಿಲ್ಲ' ಅಂದಿದ್ರೆ ಆಯ್ತಿರ್ನಿಲ್ವ! ನಿಮ್ದೇನು ಮಹಾ, ನಾವೂ ಮನುಸ್ರಲ್ವಾ ! ಅಂತ ಎದೆಯತ್ಗ ಬತ್ತನಲ್ಲ; ಅವನ ರೌಳ ನೋಡ್ರಣ್ಣ.

''ಆಗ ಅವರ ದೊಡ್ಡಪ್ಪ ಸಟ್ಟಯ್ಯನೆ ಎದ್ದು ಬಂದು 'ಯಾಕ್ಲ ಮೂದೇವಿ ಹೆಂಗಸರೊಂದಿಗೆ ಇಂಗಾಡಯಿ. ಒಂದಂದು ಹನ್ನೆರಡ ಆಡಸ್ಗತೀಯಲ್ಲ. ನೀವು ಆಡದ್ಕೆ ಹೊಲೇರನ್ನೆಲ್ಲಾ ದೂರ್ತರೆ. ಈಗ್ಲೆ ಇಂಗೆ ಆಗ ಅವರ ರೌಳ ನೋಡಬೇಕಿತ್ತು. ನೀರಿಲ್ಲದೆ ನನ್ನ ಹಂಡ ನೀನು, ನಿನ್ನ ಹಂಡ ನಾನು ಸೆಕ್ಕಂಗೆ ಆಗೋಗಿತ್ತು. ಇದ್ದದ್ದು ಒಂದೇ ಬಾವಿ ಅದು ಅವರ ಕೇರಿಲ್ಲಿತ್ತು. ನಮಗೆ ಬಾವಿನೇ ಇರಲಿಲ್ಲ, ಕೆರೆನೂ ಸುಂಡೋಗಿತ್ತು. ನೀರಿಗೆ ನಮ್ಮ ಕೇರಿ ಐಕಮಕ್ಕ ಎಲ್ಲಾ ಗರಗರನೆ ತಿರುಗುತಿದ್ದೊ. ಆಗ ನಮ್ಮ ನೋಡ್ದ ಈರೇಗೌಡನಿಗೆ ಏನನಸ್ತೊ ಏನೋ ? ಸರಿ ರಾತ್ರೀಲಿ ನಮ್ಮ ಕೇರಿಗೆ ಬಂದ. ನಮ್ಮನ್ನೆಲ್ಲಾ ಯೇಳಸ್ಕಂಡು ತಮ್ಮ ಬಾವಿಗೆ ಕರಕಂಡೋದ. ಗುಟ್ಟಾಗಿ ನೀರ ಸೇದಿ ಸೇದಿ ನಮಗೆ ಕೊಟ್ಟು ಕಳಿಸ್ತಿದ್ದ. ಆ ನೀರ ಕುಡ್ದು ಬೆಳೆದವನು ಕಣೊ ನಾನು. ಈಗ ನನ್ನ ಕೈಲಿ ಅಂಥಾ ಕೆಲಸ ಮಾಡೊ ಚೈತನ್ಯವಿಲ್ಲ. ನೀವಾದ್ರು ಮಾಡಿ' ಎಂದ. ಆ ಐಕಳು ಅವನ ಮಾತ ಕೇಳವಾ ?''

ರಾಮವ್ವನ ದೂರನ್ನು ಕೇಳಿಸಿಕೊಂಡ ಯಜಮಾನ, ''ತಡ್ಕಳಿ, ತಡ್ಕಳಿ ಅವರನ್ನೆಲ್ಲಾ ಹಡಗ್ಸೊ ಕಾಲ ದೂರ ಇಲ್ಲ. ಅವರು ಹಿಂದೆ ಯಂಗೆ ಕತ್ಗೆ ಕಂಟ ಕಟ್ಗಂಡು ತಿರುಗತಿದ್ರು ಅಂಥಾ ಕಾಲ ತಿರುಗ ಬತ್ತದೆ. ಅದಕೆಲ್ಲಾ ಸ್ಕೆಚ್ ಆಯ್ತಾ ಅದೆ. ಅಲ್ಲಿಗಂಟ ವಸಿ ತಡ್ಕಳಿ'' ಎಂದ.

''ಅಲ್ಲಿಗಂಟ ನಾವು ಇರಬೇಕಲ್ಲಣ್ಣ. ನೆನ್ನೆ ಆ ಡಾಕ್ಟ್ರ ಮುಂದೆ ಎಂಥಾ ಅವಮಾನ ಮಾಡುದ್ರು ಗೊತ್ತಾ ? ಅವರ ಕೇರಿಯವರೂ ಸಾಲನಲ್ಲಿ ಬಂದು ನಿಂತಿದ್ರು. ನಿಂತ್ಗಂಡು ಸುಮ್ಮನೆ ಔಷದಿ, ಮಾದ್ರಿ ಈಸ್ಗ ಹೋಗಬೇಕು ತಾನೆ; ನಮ್ಮ ಮುಡುಸ್ಗಳಂಗೇ ಬತ್ತಿದ್ರು. ನಾವು ವಸಿ ಸರ್ಕ ನಿಂತ್ಗಳ್ರಮ್ಮ ಮೇಲೇ ಬಿಳ್ತೀರಲ್ಲ, ಮೇಲು ಕೀಳೂ ಅನ್ನದು ಯಾತಕಾಯ್ತು ಅಂದದ್ದೆ ಮಹಾ ತಪ್ಪಣ್ಣ ? ಆಯ್ತು ಬುಡ್ರವ್ವ ಅಂತ ಸರ್ಕ ನಿಂತಿದ್ರೆ ಆಯ್ತಿರ್ನಿಲ್ವ; ಅದಬುಟ್ಟು ಅವಳೆನನ್ನದು 'ಬರೀ ನಿಮ್ಮವರಿಗೆಯಾ ? ಡಾಕ್ಟ್ರು ಬಂದಿರದು ನಮಗೂವೆ' ಅಂದ್ಲು. ನಮ್ಮದು ಆದಮೇಲೆ ನೀನೆ ತೋರಿಸ್ಗೊ ಬ್ಯಾಡ ಅಂದವರಾರು ಅಂತಿದ್ದಂಗೆ ಮಾತಿಗೆ ಬಿದ್ದುದಲ್ಲದೆ 'ಬರಬಾರದ ಕಾಯಿಲೆಯಲ್ಲಾ ನಿಮಗೇ ಬರಲಿ ನೀವೆ ತೋರಸ್ಕಳಿ' ಅನ್ನದೇನಣ್ಣ; ಇವರ ಮಾತು ಕತೆ ಕೇಳ್ತಾ ಇದ್ರೆ ಯಾಕೆ ಅವರಿಗೂ ನಮಗೂ ಅಣೆಯಂಗೇ ಕಾಣಲ್ಲ. ಮೊದ್ಲು ಅರ್ಜೆಂಟಾಗಿ ನೀರಿನ ಬಗ್ಗೆ ಏನಾದ್ರು ತೀರ್ಮಾನ ತಕಳಿ. ಇಲ್ಲಾಂದ್ರೆ ಊರಲ್ಲಿ ನಮಗೂ ಅವರಿಗೂ ಹತ್ತದ ಜಗಳ ಆರಿಯಲ್ಲ'' ಎಂದಳು.

''ಆಯ್ತು ರಾಮಕ್ಕ ಮೊದ್ಲು ನೀರ್ನ ಅನುಸರಿಸ್ಗಂಡು ಕುಡಿರಿ ಅಂತ ಹೇಳನ, ಆಮೇಲೆ ನೋಡನ. ಬರ ಜಾತಿ ಒಂದಕ್ಕೆ ಬಂದಿಲ್ಲ ಊರಿಗೇ ಬಂದದೆ. ಸರ್ಕಾರದವರು ಬಂದಿದ್ರು, ದಾನಿಗಳು ಬಂದಿದ್ರು, ಸಿಕ್ಕ ಸಿಕ್ಕದ ಕಡಲೆಲ್ಲಾ ಅವರು ಬಾವಿಗಳ ಕೊರಿಸಿದ್ರು, ಎಲ್ಲೂ ಹನಿ ನೀರು ಸಿಗಲಿಲ್ಲ. ಎಲ್ಲಿಂದ ಎಲ್ಲಿಗಂಟ ಅಗೆದ್ರೂ ಬರೀ ಧೂಳೇ. ಜಲ ಇದ್ರೆ ಅಲ್ಲವಾ ಬರದು.''

ಆಗ ರಾಮಕ್ಕ ''ಜಲ ಬರದೆ ಎಲ್ಲಿಗೋದದು; ಇಂದಲ್ಲ ನಾಳೆ ಬರಲೇಬೇಕು. ಈ ವರ್ಷ ತಪ್ಪೋದ್ರೆ ಬರೋ ವರ್ಷ, ಇಲ್ಲಾಂದ್ರೆ ಮುಂದಿನ ವರ್ಷ ದೇವೇಂದ್ರಾಯ ಬರಲೇ ಬೇಕು. ಎಷ್ಟು ದಿನ ಅಂತ ಅವನು ಇಂಗಾಡನು. ಲೋಕದ ಮೇಲೆ ಅವನ ಹೆಸರು ಉಳಿಬೇಕಲ್ಲ! ಒಂದು ಕಾಸಿನ ದೂಪ ಆಕಸ್ಕಳಕಾದ್ರು ಅವನು ದರೆಗೆ ಬರಲೇಬೇಕು. ಆಗ ನ್ಯಲದಲ್ಲಿ ಜಲ ಉಕ್ತದೆ.''

# ಅಂಗೆ ನಸ್ಗಾವೆ...?

ಬಸವರಾಜ ಕುಕ್ಕರಹಳ್ಳಿ



''ಅಲ್ಲಿಗಂಟ ಈಗಿನ ಕತೆ ಹೇಳಕ್ಕ. ಭೂಮಿ ತಕಳವರಗೂ ಮನೆಗೊಂದು ಕೆಲಸ, ಊರಿಗೆ ಬಾವಿ, ಸ್ಕೂಲು ಮನೆ, ದೇವಸ್ಥಾನ ಅಂತ ಏನೇನೋ ಹೇಳ್ದ. ಸದ್ಯಕ್ಕೆ ಅವೇನು ನಮಗೆ ಬೇಡ. ಮನೆಗೊಂದು ಕೆಲ್ಸನಾದ್ರು ಕೊಟ್ಟಿದ್ರೆ ಎಂಗೋ ಬದಿಕಳವು. ಕೊಡೊ ದುಡ್ಡನಾದ್ರು ನ್ಯಾಯವಾಗಿ ಕೊಟ್ಟನಾ ! ಹಿಂಜೀ ಹಿಂಜೀ ಕೊಟ್ಟ. ಅದು ಕಾದ ಕಬ್ಬಿಣ ನೀರ ಕುಡ್ದಂಗಾಯ್ತು. ಊರಿಗೆ ಬಾವಿ ಅಂದವನು ಇದ್ದ ಬಾವಿನೂ ಕಿತ್ಗಂಡ. ಅದಕೆ ಸುತ್ತಾ ಬೇಲಿ ಹಾಕ್ಸಿ ಕರೆಂಟ ಕೊಡಸ್ಗಂಡ. ಜನ ಅಲ್ಲಿಗೆ ಸುಳಿದಂಗೆ ಮಾಡಿ ಪ್ಯಾಕ್ಟರಿಗೆ ನೀರ ಬುಟ್ಗಂಡ. ಕೇಳವ ಅಂದ್ರೆ ಅವನು ಇಲ್ಲಿಗೆ ಬರೋದೇ ಇಲ್ಲವಲ್ಲ!''

''ಅದ್ಯಾಕೆ ಬರಲ್ಲ ಬತ್ತನೆ ಕಣಣ್ಣೊ, ಅವತ್ತು ಬಂದಿದ್ದ. ಆದರೆ ಕೆಳಕ್ಕೆ ಇಳಿನಿಲ್ಲ ಹೆಲಿಕ್ಯಾಪ್ಟರ್ ಮೇಲೆ ಕೂತ್ಗಂಡು ಫ್ಯಾಕ್ಟರಿ ಸುತ್ತಾ ಒಂದು ಸತ್ತಾಕ್ಬುಟ್ಟು ಅಂಗೇ ಹೊಂಟೋದ. ಇನ್ನು ಮುಂದೆ ಬಂದರೂ ಅಂಗೇ ಮಾಡ್ತನಂತೆ. ಅಂಗಂತ ಬಾವಿ ತಾವು ಕಾವಲು ಕಾಯ್ತಾವ್ನಲ್ಲ ಅವಯ್ಯ ಹೇಳ್ದ'' ಹೌದಾ ಎಂದ ಜನ 'ಸಂಜೆಗೆ ಬತ್ತಿವಿ ಕೂತ್ಗ ಮಾತಾಡವ' ಎಂದು ಊರಿಗೆ ಬಂದ ಲಾರಿಗೆ ಹತ್ತಿಕೊಂಡು ಎಲ್ಲರೂ ಕೆಲಸಕ್ಕೆ ಹೊರಟರು.

ಈ ರಾಮವ್ವ ಜಮೀನು ಜಹಗೀರು ಅಂತ ಏನೂ ಇಲ್ಲದವಳು. ಜಾತಿಯಲಿ ದೊಡ್ಡವಳು. ಚಂದ್ರನಂತ ಮಗನ ಪಡೆದವಳು. ಕಾಲದಿಂದಲೂ ಕೂಲಿ ನಾಲಿ ಮಾಡಿ ಚಂದ್ರನ ಸಾಕಿದವಳು. ಚಂದ್ರ ಅಲ್ಪಸ್ವಲ್ಪ ಓದಿ ಅಲ್ಲಿಗೇ ಬಿಟ್ಟು ಬಿಟ್ಟಿದ್ದ. ಮೋಸವರಿಯದ ಸಾಧು ಹುಡುಗ. ಮಾದೇವ ಹರಿಜನನಾದರೂ ಇವನಿಗೆ ಬಹಳ ಆತ್ಮೀಯ. ಇಬ್ಬರೂ ಒಟ್ಟಿಗೆ ಸ್ಕೂಲಿಗೆ ಸೇರಿದವರು. ಚಂದ್ರ ಈಗ ದುಡಿಯಲೇಬೇಕು. ಏನು ಕೆಲಸಮಾಡಬೇಕು ಎಂದು ತಿಳಿಯುತ್ತಿಲ್ಲ. ಓದಿದ ಹುಡುಗನ ಕೂಲಿಗೆ ಕಳಿಸಬೇಕು ಎಂದರೆ, ರಾಮವ್ವನ ಮನಸ್ಸಿಗೂ ಒಪ್ಪುತ್ತಿಲ್ಲ. ಚಂದ್ರನೂ ಹಿಂದೇಟು ಹಾಕುತ್ತಿದ್ದ. ಕಡೆಗೆ ಕೆಲಸ ಹುಡುಕಿಕೊಂಡು ದೂರದ ಪೇಟೆಗೆ ಹೊರಟುಬಿಟ್ಟ.

ಚಂದ್ರ ನಾಕಾರು ತಿಂಗಳು ಕಳೆದ ಮೇಲೆ ಊರಿಗೆ ಬಂದ. ನೋಡಲು ಚಂದಗಾಗಿದ್ದ ದಪ್ಪದುಡವಾಗಿದ್ದ ಒಳ್ಳೆಯ ಬಟ್ಟೆತೊಟ್ಟಿದ್ದ ಕೈಗೆ ವಾಚು ಕಟ್ಟಿದ್ದ ಸ್ವಲ್ಪ ಬಣ್ಣವೂ ಬಂದಿದ್ದ ಸ್ನೇಹಿತರೆಲ್ಲಾ ಚಂದ್ರನ ನೋಡಿದರು. ಅವನ ಸುತ್ತಾ ಮುತ್ತುಕೊಂಡರು.

''ನಮ್ಮನ್ನು ಪೇಟೆಗೆ ಕರೆದುಕೊಂಡು ಹೋಗೋ'' ಎಂದರು.

ಚಂದ್ರ ''ನಿಮಗೆ ಪೇಟೆಯ ಸಹವಾಸವೇ ಬೇಡ'' ಎಂದ.

''ಯಾಕೊ ತಿರುಗಿ ಕಜ್ಜೆ ಬಂದಿವೆಯಾ ?'' ಎಂದರು.

''ಕಜ್ಜಿ ಬರುವ ಅಡುಗೆಯನ್ನು ಆ ಹೋಟೆಲಿನಲ್ಲಿ ಮಾಡುವುದೇ ಇಲ್ಲವಲ್ಲ''

''ಮತ್ತೆ!''

''ಅಲ್ಲೇನಿದ್ದರೂ ಮುದ್ದೆ ಕಾರ, ರೊಟ್ಟಿಯ ಊಟ.''

ಹುಡುಗರು ಗೊಳ್ಳೆಂದು ನಕ್ಕರು. ''ಹಿಟ್ಟು ರೊಟ್ಟಿಯ ತಿನ್ನಲು ಬಸ್ ಚಾರ್ಜ್ ಆಕಿಕೊಂಡು ಪೇಟೆಗೇಕೆ ಹೋಗಬೇಕು ?'' ಎಂದರು.

ಚಂದ್ರ ''ಈಗ ನಾನು ಆ ಹೋಟೆಲ್ಲನ್ನೂ ಬಿಟ್ಟುಬಿಟ್ಟೆ.''

''ಆಮೇಲೆ ?''

''ಒಂದು ಬಟ್ಟೆ ಅಂಗಡಿ ಸೇರಿಕೊಂಡೆ.''

''ಅಲ್ಲಿ ಬಟ್ಟೆ ಅಳೆಯುವ ಕೆಲಸವೇನು ?''

''ಇಲ್ಲ ಬಟ್ಟೆ ತೂಗುವುದು !''

ಹುಡುಗರು ''ಏನೇನೊ ಮಾತಾಡ್ತಿಯಲ್ಲೋ, ಬಟ್ಟೆನೂ ತೂಗ್ತಾರೇನೊ ?'' ಎಂದರು.

''ಹೌದು ಕಣ್ರೊ ಆದರೆ ನನಗೆ ಬೇರೆ ಕೆಲಸ ವಹಿಸಿದ್ದರು.''

''ಏನು ?''

''ಕೋತಿ, ಕಿರುಬ, ಕತ್ತೆ, ಚಿಂಪಾಂಜಿ ಹೀಗೆ ದಿನಾ ಒಂದೊಂದು ಪ್ರಾಣಿಯ ಬಟ್ಟೆತೊಟ್ಟು ಅಂಗಡಿ ಮುಂದೆ ಕುಣಿಯುವುದು. ದಾರಿಯಲ್ಲಿ ಹೋಗುವವರನ್ನು ಕೈಬೀಸಿ ಕರೆಯುವುದು.''

''ಇದೇನು ಚಂದ್ರ ನಿನ್ನ ಕತೆ ?''

''ಮುಂದಕ್ಕೆ ಕೇಳಿ, ಆ ಬಟ್ಟೆ ತೊಟ್ಗಬುಟ್ಟಾ : ಒಂದೇ ಸಲಕ್ಕೆ ಉಬ್ಬ ಹೆಚ್ಚಾಗೊಯ್ತು. ಒಳಗೆಲ್ಲಾ ಬೆವರು ಕಿತ್ಗತ್ತು. ಹೊರಗಿನ ಗಾಳಿ ಹೊರಗೆ, ಒಳಗಿನ ಗಾಳಿ ಒಳಗೆ, ಬಾಯಲ್ಲಾ ಒಣಗೋಯ್ತು. ಊಸಿದ ಗಾಳಿಯೂ ಆಚೆಗೆ ಹೋಗದೆ ತಲೆ ಸುತ್ತಿ ಬಿದ್ದುಬಿಟ್ಟೆ.'' ಹುಡುಗರು ಬಿದ್ದು ಬಿದ್ದು ನಕ್ಕರು. ''ಈಗೇನು ಕತೆ ಮಾಡಿದ್ದಯಿ ಹೇಳಪ್ಪ'' ಎಂದರು.

''ಈಗ ನಾನು ದೊಡ್ಡ ಸಾಹೇಬರ ಮನೇಲಿ ಇದ್ದೀನಿ. ಅವರು ದೊಡ್ಡ ಶ್ರೀಮಂತರು. ವಯಸ್ಸಾದವರು. ಅವರ ಜೊತೆಗೆ ಇರೋದೇ ನನ್ನ ಕೆಲಸ. ಅವರಿಗೆ ಬಟ್ಟೆ ಹಿಕ್ಕೋದು, ಊಟ ಮಾಡ್ಸೋದು, ಯಕ್ಕಡ ಆಕೋದು, ಕಾರಿನಲ್ಲಿ ಕೂರಿಸಿಕೊಂಡು ಪಾರ್ಕಿನಲ್ಲಿ ಸುತ್ತಾಡಿ ಬರೋದು. ಇಷ್ಟಕ್ಕೆ ನನಗೆ ಸಂಬಳ, ಕಣ್ಣಿಗೆ ಬೇಕಾದ ಊಟ, ಅವರ ಮಕ್ಕಳ ಜೊತೆಯಲ್ಲಿ ಆಟ, ಪಾಠ ಸಿಟಿಯ ಸುತ್ತಾಟ. ನನಗೊಂದು ಕಾರು ಕೊಟ್ಟವರೆ. ಅದು ಸೊಪ್ಪು ತರೋಕೆ, ಮಕ್ಕಳ್ನ ಸ್ಕೂಲಿಗೆ ಬಿಡೋಕೆ. ನೋಡಿ ಇವೇ ಹೊಸಾ ಬಟ್ಟೆ, ಕೈಗೆ ವಾಚು, ಕಾಲಿಗೆ ಚಪ್ಪಲಿ ಜೇಬಿಗೆ ಕಾಸು. ಇವೆಲ್ಲಾ ನನ್ನವೆ.''

ಹುಡುಗರು ಆಸೆ ತುಂಬಿಕೊಂಡು ಊದಿದರು. ಬಾರ ತಾಳಲಾರದೆ ''ಚಂದ್ರ ಇಂಗಿದ್ರೆ ನಾವೂ ಪೇಟೆಗೆ ಬತ್ತಿವಿಕಣ್ಲಾ''

''ಲೇ ಬರೋಕ್ಕೆ ಮುಂಚೆ ಇನ್ನೂ ಮುಂದುಕ್ಕೆ ಕೇಳ್ರೊ. ಅವರು ತಟ್ಟೇಲಿ ತಿನ್ದೆ ಬುಟ್ ಬುಡ್ತರಲ್ಲ, ಪೂರಿಯಂತೆ, ಚಪಾತಿ, ಪಲಾವ್, ಇಡ್ಲಿ, ದೋಸೆ, ವಡೆ, ಇವೆಲ್ಲಾ ಮನೆ ಜನಕ್ಕೆ ಆಗೋಯ್ತದೆ. ಮುಂದುಕ್ಕೆ ಕೇಳಿ, ಅವರು ಅಳದಾಕ್ತರಲ್ಲ ಬಟ್ಟೆಗಳು ಅವ್ನ ಒಗೆಯಕ್ಕು ಮುಂಚೆ ಸೋಸ್ಗಂಡ್ರೆ ಸಾಕು ಹತ್ತು ಇಪ್ಪತ್ತು ದುಡ್ಡು ಸಿಕ್ತದೆ.''

ಹುಡುಗರು ''ಚಂದ್ರ ನಮಗೂ ಅಂತ ಮನೆಗೆ ಸೇರ್ಸಲ'' ಎಂದರು. ಮನೆಗೆ ಹೋಗಿ ಅವರ ಅವ್ವಂದಿರಿಗೆ ಈ ವಿಷಯ ಹೇಳಿದರು. 'ಚಂದ್ರನಿಗೆ ಹೇಳಿ ನಮಗೂ ಅಂತಾ ಕೆಲ್ಸ ಕೊಡ್ಸಿ' ಎಂದು ದುಂಬಾಲು ಬಿದ್ದರು.

ಹೀಗೆ ಚಂದ್ರನ ಆದಾಯದಿಂದ ರಾಮವ್ವ ಸುಖದ ಜೀವನ ನಡೆಸುತ್ತಿದ್ದಳು. ಎರಡು ಮೂರಕ್ಕೆ ಹುಟ್ಟ ಬಟ್ಟೆಯ ಹಳಿಯುತ್ತಿದ್ದಳು. ಬಳೆ ತೊಡುತ್ತಿದ್ದಳು, ಕಿವಿಗೆ ಓಲೆ, ಬಾಗಿಲಿಗೆ ರಂಗೋಲೆ, ಕೋಳಿಗಳ ಲೀಲೆ. ನಿತ್ಯ ಎತ್ತುತ್ತಿದ್ದಳು ದೀಪ. ಕೈ ಮುಗಿಯುತ್ತಿದ್ದಳು ದೇವರಿಗೆ, ಮಗನಿಗೆ ಕೆಲಸ ಕೊಟ್ಟಿರುವ ಮನೆಯವರಿಗೆ ಅವರು ತಣ್ಣಗಿರಲಿ ಎಂದು ಹರಸುತ್ತ ಹಬ್ಬ ಮಾಡಿದಳು.

ಚಂದ್ರ ಹಬ್ಬ ಮುಗಿಸಿ ಪೇಟೆಗೆ ಹೊರಟನು. ರಾಮವ್ವ ಬಸ್ಸು ಹತ್ತಿಸಲು ಅವನ ಜೊತೆ ಹೊರಟಳು. ದಾರಿಯುದ್ದಕ್ಕೂ ಮಗನಿಗೆ ಬುದ್ಧಿವಾದ ಹೇಳುತ್ತಿದ್ದಳು. ''ಉಷಾರು ಮಗನೆ ದೊಡ್ಡವರ ಮನೇಲಿದ್ದೀಯ, ಅವರೇ ನಿನಗೆ ತಂದೆ ತಾಯಿಗಳು. ಅವರು ಕಾಲಲ್ಲಿ ತೋರಿದ್ದನ್ನು ನೀನು ತಲೆಯಲ್ಲಿ ಹೊತ್ಗ ಮಾಡಬೇಕು. ಅವರು ಕೊಡೋದೆ ನಮಗೆ ಜೀವನ. ಆ ಅಪ್ಪನೋರು ಒಪ್ಪದಾದ್ರೆ, ನಾನು ಸಾಯೋದರೊಳಗೆ ಒಂದು ಜಿನವಾದ್ರು ಬಂದು ಅವರ ಜೀತ ಮಾಡಬೇಕು ಅನ್ನದು ಮನ್ಸಲದೆ. ಆ ದೇವರು ಯಾವಾಗ ಕಣ್ಣು ಬುಡ್ತನೊ ನೋಡವ'' ಎಂದು ಮಗನ ಕಳಿಸಿಕೊಟ್ಟಳು.

ಕ್ಯಾರೆ ಎನ್ನದಿದ್ದ ರಾಮಕ್ಕನಿಗೆ ಈಗ ಎಲ್ಲೂ ಇಲ್ಲದ ಬೇಡಿಕೆ. ಈಗ ಎಲ್ಲರೂ ಅವಳನ್ನೆ ಹುಡುಕಿಕೊಂಡು ಬರಲು ಶುರುಮಾಡಿದ್ದಾರೆ. ಅಕ್ಕ, ಅವ್ವ, ಅತ್ತೆ, ಚಿಕ್ಕಿ ಎಂದೇನೇನೊ ಸಂಬಂಧ ಕಟ್ಟಿಕೊಂಡು ಕೂಗುತ್ತಿದ್ದಾರೆ. ಅವಳು ಕೊಡುವ ಚೂರು ಎಲೆ ಅಡಿಕೆ, ಚಿಟಿಕೆ ನಶ್ಯಕ್ಕೆ ಕೈಯೊಡ್ಡುತ್ತಾರೆ. ಅವಳ ಜೊತೆ ಕಷ್ಟ ಸುಖ ಮಾತಾಡುತ್ತಾ, ಒಳಗೊಳಗೇ ಕರುಬುತ್ತಾರೆ. ಅವಳು ತೊಟ್ಟಿರುವ ಸೀರೆ ರವಿಕೆಯ ಗುಣಗಾನ ಮಾಡುತ್ತಾ, ''ವಸಿ ಈಗಿನಿಂದ್ಲ ಚಂದ್ರನಿಗೆ ಹೇಳಕ್ಕ, ನಮ್ಮ ಹುಡುಗುನ್ನೂ ಪ್ಯಾಟೇಲಿ ಯಂತದಾದ್ರು ಕೆಲಸ ಕೊಡ್ಸು ಅಂತ. ಅವನ ಗ್ರೇಡ್‌ನಂತದೇನು ಬ್ಯಾಡ ಅವನು ಓದಿದವನು. ಬೇಕಿದ್ರೆ ನಮ್ಮ ಹುಡುಗನಿಗೆ ಗೇಟು ಕಾಯದಾಗ್ಲಿ ಅಷ್ಟೇ ಸಾಕು. ಬಾಳದಿನದಿಂದ ಇದ ನಿನಗೆ ಹೇಳಬೇಕು ಹೇಳಬೇಕು ಅಂತ್ಲೆಕಾಯಿತ್ದಿ, ಸೌಳಾಗ್ನಿಲ್ಲ ಅದಕೇ ಮುಂದುಗ್ ಮುಂದಾಗಿ ನಿನ್ನ ಕಿವಿಗೆ ಆಕಿವ್ನಿ ನೋಡಕ್ಕ.''

ಇವಳ ಮಾತುಗಳನ್ನು ಕೇಳಿದ ರಾಮಕ್ಕ, ''ಚಂದ್ರನಿಗೆ ಅಂಗೆ ಏಕಾಏಕಿ ಹೇಳಕ್ಕಾದದವ್ವಾ? ಸಮೆದಮೆ ಕಾಯಬೇಕು. ಅಂಥಾ ಮನೆ ಸೇರಬೇಕಾದ್ರೆ ಬಾಳ ಕಟ್ಟುನಿಟ್ಟಾಗಿ ಇರಬೇಕು. ನೋಡವ ಇರು. ಅವರು ನನ್ನೂ ಬರೇಳಿ ಹೇಳಿ ಕಳಿಸುತ್ಲೇ ಅವರೆ. ನಾನೇ ಈ ಯಾಸದಲ್ಲಿ ಯಂಗೋಗದು ಅಂತ ಸುಮ್‌ನಿವ್ನಿ. ನಾನು ಕಾಲೆದ್ದು ಕಡ್ದರೆ ಕೋಳಿ ಕವುಚವ್ರಿಲ್ಲ, ಬಾಗಿಲಿಗೆ ನೀರಾಕವ್ರಿಲ್ಲ. ನಾನು ಅಲ್ಲಿಗೆ ಒಂದು ಸಲ ಹೋಗಿದ್ದು ಬರಬೇಕು, ಆಗ ನಿನಗೆ ಯಾವುದ್ನು ಹೇಳಬೇಕು. ಅಲ್ಲಿಗಂಟ ಸುಮ್ನಿರು. ಅವರ ಹುಡುಗರು ಕಚ್ಚಿ ತಿನ್ದೆ ಬಿಸಾಕ್ತವಲ್ಲ ಆ ಸೇಬನನ್ನ ಕುಂತ್ಗಂಡು ಆಯ್ಕಂಡ್ರೆ ಸಾಕು, ನಿಮ್ಮ ದಿನದ ಯಾಪ್ತಿ ಆಗೇ ಹೋಯ್ತದೆ.''

ರಾಮವ್ವ ಹೀಗೆ, ಆಗ ಈಗ ಅಲ್ಲಿಗೆ ಹೋಗಿಬರಬೇಕು ಎನ್ನುವಷ್ಟರಲ್ಲಿ ಮತ್ತೊಂದು ದೀಪಾವಳಿಯೇ ಬಂತು. ಇದೇ ಊರಿಗೆ ದೊಡ್ಡ ಹಬ್ಬ. ಅಂಕ ಅಂಕಕೂ ದೀಪವನೆತ್ತಿ ಎಂಥಾ ಬಡವರನ್ನೂ ಬಿಡದೆ ಕಾಡುವ ಹಬ್ಬ. ಅದಕ್ಕೇ ಚಂದ್ರ ಯಾವುದೇ ಹಬ್ಬಕ್ಕೆ ತಪ್ಪಿಸಿಕೊಂಡರೂ ಈ ಹಬ್ಬಕ್ಕೆ ಬಂದುಬಿಡುತ್ತಿದ್ದ. ರಾಮವ್ವನೂ ಬಸ್ಸು ನಿಲ್ದಾಣದಲ್ಲಿ ಚಂದ್ರನಿಗಾಗಿ ಕಾಯುತ್ತಾ ನಿಲ್ಲುತ್ತಿದ್ದಳು. ಆದರೆ ಚಂದ್ರ ಬರಲಿಲ್ಲ. ರಾಮವ್ವನಿಗೆ ಜೀವವೇ ಹೋದಂತಾಯಿತು. ಮಗ ಏಕೆ ಬರಲಿಲ್ಲವೋ ತಿಳಿಯದಾಯಿತು. ಹೇಳಿಕೊಳ್ಳಲಾಗದ ತಳಮಳ. ಹೋದ ಬಸ್ಸು ನೋಡುತ್ತ ನಿಲ್ಲಲಾರದೆ ಮನೆಗೆ ಬಂದಳು.

ನಿಲ್ಲಲಾಗುತ್ತಿಲ್ಲ ಕೂರಲಾಗುತ್ತಿಲ್ಲ ತಲೆಯ ತುಂಬೆಲ್ಲಾ ತರಲೆಗಳೇ ತುಂಬಿಕೊಂಡಿದ್ದವು. ಆಗದವರು ಏನಾದರೂ ಮಾಡಿದರೆ ? ನಾನು ಕಾಣದಂತೆ ಅವನ ಕಿವಿ ಹಿಂಡಿದರೆ ? ಒಂದು ಪಕ್ಷ ಚಂದ್ರ ಹೀಗೇ ಬರದೆ ನನ್ನನ್ನು ಮರೆತುಬಿಟ್ಟರೆ; ಇವೆಲ್ಲಾ ತಲೆಗೆ ಸುತ್ತಿಗೆಯಲ್ಲಿ

ಹೊಡೆದಂತಾಗಿ ಗೋಡೆಗೆ ತಲೆ ಚಚ್ಚಿಕೊಂಡಳು. ಮನೆಯಲ್ಲಿ ಕಸ ಮುಸುರೆ ಹಾಗೆ ಬಿದ್ದಿತ್ತು. ಚಂದ್ರ ಕೈ ತಪ್ಪಿದರೆ ಎನ್ನುವ ಭಯವಿತ್ತು. ಅವನೇ ಇಲ್ಲದ ಮೇಲೆ ಅದೆಂತಾ ದೀಪಾವಳಿ ಎಂದು ಚಂದ್ರನ ದಾರಿ ಕಾಯುತ್ತಾ ಕುಳಿತಳು.

ಚಂದ್ರ ದೀಪಾವಳಿಯ ಹಬ್ಬಕ್ಕೆ ಬರಲು ವಾರಕ್ಕೆ ಮುಂಚೆಯೇ ರೆಡಿಯಾಗಿದ್ದ. ಸಾಹೇಬರಿಗೆ ಬಂದ ಪತ್ರ ಅವನ ತಲೆಯ ಕೆಡಿಸಿತು. ಪತ್ರ ಬಿಚ್ಚಿದ ಸಾಹೇಬರು ನಗಲು ಶುರು ಮಾಡಿದರು. ಪಕ್ಕದಲ್ಲೇ ಕುಳಿತಿದ್ದ ಚಂದ್ರನಿಗೆ ''ಹೇ ಕೇಳೋ ಚಂದ್ರ, ನಾನು ದೊಡ್ಡ ಸಾಹೇಬನಾಗಿದ್ದಾಗ, ಜನ ನನಗೆ ರಾಜಮರ್ಯಾದೆ ಕೊಡುತ್ತಿದ್ದರು. ಒಂದು ಸಲ ದೇವಸ್ಥಾನದ ಉದ್ಘಾಟನೆಗೆ ಕರೆದರು. ಸಿಂಹಾಸನ ದಂತ ಕುರ್ಚಿಯ ಮೇಲೆ ಕೂರಿಸಿ ಹೂ ಸುರಿದರು. ನಾನು ಕಾರ್ಯಕ್ರಮ ಮುಗಿಸಿ ಬಂದುಬಿಟ್ಟೆ. ಆಮೇಲೆ ಅವರು ಇಡೀ ದೇವಸ್ಥಾನವನ್ನು ಗಂಜಳ ಮತ್ತು ಸಗಣಿಯಿಂದ ತೊಳೆದು ಶುದ್ಧಿ ಮಾಡಿಕೊಂಡರು.''

''ಏಕೆ ಬುದ್ಧಿ?''

''ನಾನು ಹೊಲೆಯ ಎಂದು ಕಣೊ.''

ಸಾಹೇಬರ ಈ ಮಾತು ಕೇಳಿ ಚಂದ್ರನಿಗೆ ಸಿಡಿಲು ಬಡಿದಂತಾಯಿತು. 'ಸಾಹೇಬರು ಹೊಲೆಯರೆ; ಅವರ ಮನೆಯಲ್ಲಿ ನಾನು?' ತನ್ನನ್ನು ತಾನೇ ನೋಡಿಕೊಂಡ. ಅವರುಟ್ಟ ಬಟ್ಟೆ, ಬಿಟ್ಟ ಊಟ, ಹಾಲು ಎಂಜಲು, ಮಡಿ ಮೈಲಿಗೆ, ಮನೆಯ ಸುಣ್ಣ ಬಣ್ಣ, ತೋರಣ, ಎದುರಿಗೆ ತನ್ನವ್ವ ಬಂದು ನಿಂತಂತಾಯಿತು. ನಿಂತು ಅದ್ದರಿಸಿದಂತಾಯ್ತು 'ನೀನು ಹೊಲಾರ ಮನೆ ಅನ್ನ ತಿಂದದಲ್ದೆ ನನಗೂ ತಿನಿಸ್ದಲ್ಲೊ. ಸಾಯೊ ಕಡೆಗಾಲದಲ್ಲಿ ಜಾತಿ ಕೆಡಸ್ದಲ್ಲೊ' ಎಂದಂತಾಯಿತು. ಊರ ಜನವೆಲ್ಲಾ ಸೇರಿಕೊಂಡು ಬಾಯಿಗೆ ಗಂಜಳ ಸುರಿದು ಮೈಗೆಲ್ಲಾ ಸಗಣಿ ಮೆತ್ತಿದಂತಾಗುತ್ತಿತ್ತು. ಜಾತಿ, ಕುಲ, ಮಡಿ, ಮೈಲಿಗೆ ಎಲ್ಲಾ ಮುತ್ತಿಕೊಂಡು ಹೊಟ್ಟೆಪಾಡು ಹಿಂದಾಯಿತು. ಚಂದ್ರ ಲಿಗಕ್ಕೆ ಬಂದು ಸಾಹೇಬರ ನೋಡಿದ. ಅವರು ಮೌನವಾಗಿದ್ದರು. ಚಂದ್ರ ಎದ್ದವನೆ ಹೊರಗೆ ಬಂದುಬಿಟ್ಟ. ಬೀದಿಯಲ್ಲಿ ಕುಳಿತು ಕಣ್ಣೀರಿಟ್ಟ 'ಈ ಪಟ್ಟಣದಲ್ಲಿ ನಾನು ಹೊಲೆಯನ ಮನೆಯ ಜೀತದಾಳು! ಊರಿಗೋದರೆ ನಾನು ಉತ್ತಮ ಜಾತಿಯವನಾಗುತ್ತೇನೆ ? ಹೋಗುವುದೇ ಸರಿ ನನ್ನ ಊರಿಗೆ ಹೋಗುವುದೇ ಸರಿ' ಎನಿಸಿತು. ತಕ್ಷಣ ಅವನೇ ನಗಲು ಶುರು ಮಾಡಿದ. 'ನನ್ನ ಈ ಕಪಟ ನಾಟಕವನ್ನು ನೋಡಿಯೋ ಏನೊ ಅಂದು ಡಾಕ್ಟರು ಹೀಗೆ ಹೇಳಿರಬೇಕು.'

''ಸಗಣಿ ಶ್ರೇಷ್ಠ ಎನ್ನುವ ಜನರಿರುವ ಈ ನಾಡಿನಲ್ಲಿ ಮನುಷ್ಯರಿಗೆ ಬೆಲೆ ಇಲ್ಲ. ಒಬ್ಬ ಹರಿಜನ ರಾಷ್ಟ್ರದ ಪ್ರಥಮ ಪ್ರಜೆಯಾದರೂ, ಅವನನ್ನು ಕೀಳುದೃಷ್ಟಿಯಿಂದ ನೋಡುವುದು ನಿಂತಿಲ್ಲ. ಅವನು ಮೆಟ್ಟಿದ ನೆಲವನ್ನು ಸಗಣಿಯಿಂದ ತೊಳೆದು ಮಡಿ ಮಾಡಿಕೊಳ್ಳುವುದು ನಿಂತಿಲ್ಲ. ಯೇಲು ಅದು ಯೇಲೆ. ಅದು ಮನುಷ್ಯರದಾದರೇನು, ಹಸುವಿನದಾದರೇನು, ಅದು ಆರೋಗ್ಯಕ್ಕೆ ಕೆಟ್ಟದೇ'' ಎಂದರು. ಈ ಮಾತು ಕೇಳಿ ಜನರೆಲ್ಲಾ ನಕ್ಕರು. ''ಅವನು ಆಗದದ್ದೆ ಅಂಗಂತನೆ, ಹೊಲೇರ್ನ ನಾವು ಮುಟ್ಟಸ್ಗಂಡರೆ ತೊಪ್ಪೆಯಾಕ ಕೈ ತೊಳ್ಕತೀವಿಯಲ್ಲ ಅದಕೆ ಅಂಗಂತನೆ. ಅದ್ಯಾಕೆ ಮಂತೆ ಈಗ ಅವನ ಬಾಯ್ಲಿ ಈ ಹೊಸ ಮಾತು. ಕಾಲದಿಂದ ನಾವು ಹಸಿನ ಗಂಜಳ ತೊಪ್ಪೆ ಎಲ್ಲಾನು ಔಷದಿ ಕಷಾಯಕ್ಕೆ ಬಳಸ್ತಾ ಇಲ್ವ ? ಮನೆ ಮಠ ತಾರ್ಸಲ್ವ ?'' ಎಂದು ಡಾಕ್ಟರನ್ನು ಗೇಲಿ ಮಾಡಿದೆವು.

ಸಟ್ಟಯ್ಯನ ತುಳಿದೇಬಿಟ್ಟವು. ಅವನು ಆ ಜಾತಿಯಲ್ಲಿ ಹುಟ್ಟಬಾರದಿತ್ತು ಅಂಥಾ ಕೆಂಪು ರಂಪಿನ ಮನುಷ್ಯ. ರವರವನೆ ಹೊಳೆಯುತ್ತಿದ್ದ ಅವನ ಕೆಂಪಿಗೆ ಬೆರಗಾಗದವರಿಲ್ಲ. 'ಕೆಂಪು ಅಂದರೇನಯ್ಯ, ಬೆಳ್ಳಗಲ್ಲ. ಬೆಳ್ಳಗೆ ಅಂದರೆ ರಕ್ತವಿಲ್ಲದೆ ಬಿಳಚಿಕೊಂಡತೆಯೂ ಅಲ್ಲ ?' ಹಾಲು ಕೆನೆ ಕಟ್ಟುವಂತೆ. ಕೆನೆ ತೆಗೆದರೆ ಒಳಗಿರುವ ಬೆಳ್ಳನೆಯ ಹಾಲಿನಂತೆ. ಸಟ್ಟಯ್ಯನ ರಕ್ತವೂ ಹಾಗೇ ಕೆನೆ ಕಟ್ಟಿ, ಅದು ಚರ್ಮವಾಗಿ ಅದನ್ನು ಸರಿಸಿದರೆ ಒಳಗೆಲ್ಲಾ ಕೆಂಪನೆಯ ರಕ್ತ ತುಂಬಿದಂತ ಕೆಂಪು.



ಸಟ್ಟಯ್ಯ ಹತ್ತನೇ ಕ್ಲಾಸು ಓದುತ್ತಿದ್ದ. ಕ್ಯಾಸ್ಟ್ ಸರ್ಟಿಫಿಕೇಟ್ ಮಾಡಿಸಲು ತಾಲ್ಲೂಕ ಆಫೀಸಿಗೆ ಹೋದ. ಇವನನ್ನು ನೋಡಿದ ಸಾಹೇಬರು ಇವನನ್ನು ಹೊಲೆಯ ಎಂದು ನಂಬದೆ ಹೋದರು. ''ಏನೊ ನಿನ್ನ ನೋಡಿದರೆ ಹೊಲೆಯನಂತೆ ಕಾಣಲ್ವಲ್ಲೊ; ನೀನು ಹರಿಜನ ಅನ್ನದ್ಕೆ ಯಾರಾದರು ಪಟೇಲರು ಛೇರ್ಮನ್ನರು ಬಂದು ಸಾಕ್ಷಿ ಹೇಳಬೇಕು. ಆಗ ಮಾಡಿಕೊಡುತ್ತೇನೆ'' ಎಂದು ಕಳಿಸಿಬಿಟ್ಟರು. ಸಟ್ಟಯ್ಯನ ಅಪ್ಪ ಚುಂಚ ಪಟೇಲರ ಹತ್ತಿರಹೋದ. ಈ ವಿಷಯ ತಿಳಿಸಿ ''ಸ್ವಲ್ಪ ಸಾಹೇಬರಿಗೆ ಹೇಳಿ ಸ್ವಾಮಿ'' ಎಂದ. ಈ ಮಾತ ಕೇಳುತ್ತಿದ್ದಂತೆ ಎಗರಾಡಿದ ಪಾಟೇಲರು ''ನೀನು ಹೊಲಿಯ ಅಂತ ನಾನು ಅಲ್ಲಿಗೆ ಬಂದು ಸಾಕ್ಷಿ ಹೇಳಬೇಕೊ? ನನ್ನ ಮನೇಲಿ ನೀನು ಜೀತ ಗೇಯದು ಅವನಿಗೆ ಗೊತ್ತಿಲ್ವ? ನನ್ನ ಮನೇಲಿ ಜೀತ ಗೈಯ್ಯಕ್ಕೆ ನಿನ್ನ ಮಗ ಏನೂ ಓದಬೇಕಾಗಿಲ್ಲ. ಅವನು ಓದಿ ಏನಾಗ್‌ಬೇಕಾಗದೆ'' ಎಂದು ಕಳಿಸಿಬಿಟ್ಟ. 'ಇದೇ ಒಂದು ನೆಪವಾಗಿ ಸಟ್ಟಯ್ಯ ಓದನ್ನೇ ಬಿಟ್ಟುಬಿಟ್ಟ. ನಮ್ಮ ಮನೆಯ ಜೀತದಾಳಾದ'.

'ಇನ್ನು ಆ ಮಾದೇವ ನನ್ನ ಜೊತೆ ಓದಬೇಕಾಗಿದ್ದ ಹುಡುಗ. ಅವನನ್ನು ಓದಿಸಬೇಕೆಂದು ಅವನ ಮನೆಯವರು ಪಟ್ಟಪಾಡು ಅಷ್ಟಿಷ್ಟಲ್ಲ. ಆದರೆ ಮಾದೇವನ ಆರೋಗ್ಯ ಸರಿ ಇರಲಿಲ್ಲ. ಅವನು ಬೇಸಿಗೆಯಲ್ಲಿ ಹೊರಗೆ ಬಂದರೆ, ಚಳಿಗಾಲದಲ್ಲಿ ಮನೆ ಸೇರುತ್ತಿದ್ದ. ಮಳೆಗಾಲದಲ್ಲಿ ಅವನು ಮನುಷ್ಯನೇ ಆಗುತ್ತಿರಲಿಲ್ಲ. ಡಾಕ್ಟರು ಅವನಿಗೆ ಮೊಟ್ಟೆ, ಮೀನು ಹಾಲು ಕೊಡಿ ಎನ್ನುತ್ತಿದ್ದರು. ಕೂಲಿಯವರು ಇವನ್ನೆಲ್ಲಾ ಅವನಿಗೆ ಹೇಗೆ ಕೊಟ್ಟಾರು. ಆದರೆ ಅವನ ಕೈಗೆಟುಕುತ್ತಿದ್ದುದು ಹಸುವಿನ ಹಾಲು ಮಾತ್ರ.'

ಅವರು ಜೀತ ಮಾಡುತ್ತಿದ್ದ ಹಟ್ಟಿಯಲ್ಲಿ ಬೇಕಾದಷ್ಟು ಹಸುಗಳು ಹಾಲು ಕರೆಯುತ್ತಿದ್ದವು. ಮಾದೇವನ ಅಪ್ಪ ಒದ್ದಾಡಿಕೊಂಡು ಮನೆಯ ಒಡತಿಗೆ ಮಗನ ಕಷ್ಟ ಹೇಳಿಕೊಂಡ. 'ನನ್ನ ಮಗನಿಗೆ ದಿನಾ ಅರ್ಧಪಾವು ಹಾಲು ಕೊಡಿ' ಎಂದ. ಆಗ ಆಯಮ್ಮನಿಗೆ ಎಲ್ಲಿಲ್ಲದ ಕೋಪ ಬಂತು. 'ನನ್ನ ಮನೆಯ ಜೀತದಾಳು ಹಾಲ ಕುಡಿಯದೆ ಬೆಳೆದ ಇವನಿಗೇ ನನ್ನನ್ನು ಹಾಲು ಕೇಳುವ ತಾಕತ್ತು ಬಂತಲ್ಲ!! ಇನ್ನೂ ಹಾಲು ಕುಡಿದು ಬೆಳೆಯುವ ಅವನ ಮಗ ಇನ್ನೇನು ಕೇಳಬಹುದು! ಮನೆಯ ಜೀತದಾಳು ಎದುರಾಕಿಕೊಳ್ಳುವುದು ಬೇಡ' ಎಂದು ನಯಸ್ಸಾಗಿ ಅವನಿಗೆ ಈ ಕಥೆಯ ಹೇಳಿದಳು.

''ನೋಡು ಮಗ ಹಿಂದೆ ನಮ್ಮ ಮನೆಯಲ್ಲಿ ತಿಳಿಯದೆ ನಿಮ್ಮವರಿಗೆ ಹಾಲು ಕೊಟ್ಟುಬಿಟ್ಟಿದ್ದರಂತೆ. ಆಗ ನಮ್ಮ ಮನೆಯ ಹಸು ರಕ್ತ ಕರೆಯಲು ಶುರು ಮಾಡಿತ್ತಂತೆ. ಆಗ ನಮ್ಮ ಮನೆಯವರಿಗೆ ಗಾಬರಿಯಾಯಿತು. ಏಕೆ, ಏನು ಎಂದು ತಿಳಿಯದೆ ಕಡೆಗೆ ನಿಮಗೆ ಹಾಲು ಕೊಟ್ಟರುವುದು ತಿಳಿಯಿತು. ತಕ್ಷಣ ನಿಮಗೆ ಹಾಲು ಕೊಡುವುದನ್ನು ನಿಲ್ಲಿಸಿದ ಮಾರನೆಗೇ ಹಸು ಹಾಲು ಕರೆಯಲು ಶುರು ಮಾಡಿತಂತೆ. ಹಾಗಾಗಿ ನಿಮಗೆ ಹಾಲು ಕೊಟ್ಟರೆ ಹಸುವಿಗೆ ತೊಂದರೆಯಾಗುತ್ತದೆ'' ಎಂದುಬಿಟ್ಟಳು. ಮಾದೇವನಿಗೆ ಮೀನು ಮೊಟ್ಟೆ ಇರಲಿ ಅವನಿಗೆ ಕುಡಿಯಲು ಚಟಾಕು ಹಾಲೂ ಸಿಗಲಿಲ್ಲ. ಆರೋಗ್ಯ ಹಾಳಾಗಿ ಅವನು ಓದಲೂ ಆಗಲಿಲ್ಲ. ಏನೊ ಸಿಕ್ಕಿದ್ದನ್ನು ತಿಂದು ಸಾಯಲೂ ಆಗದೆ, ಎಲ್ಲರಂತೆ ಇರಲೂ ಆಗದೆ ಬದುಕಿದ್ದಾನೆ. ನಾನು ಊರಿಗೆ ಹೋಗಿ ಮಾದೇವನನ್ನು ನೋಡಬೇಕು. ಅವನಿಗೆ ಇವೆಲ್ಲವನ್ನೂ ಹೇಳಬೇಕು ಎಂದು ಚಂದ್ರ ಊರಿಗೆ ಹೊರಟುಬಂದ.

ಊರಿಗೆ ಬಂದ ಚಂದ್ರ ಹೊಲೆಯರ ಕೇರಿಯತ್ತ ನಡೆದ. ಅವನ ಕೇರಿಯವರೆಲ್ಲಾ ನಿಂತು ಚಂದ್ರನ ನೋಡುತ್ತಿದ್ದರು. ಮಗ ಅತ್ತಕಡೆ ಹೋಗುವುದನ್ನು ಕಂಡು ರಾಮವ್ವ ಚಂದ್ರಾ ಎಂದು ಕೂಗಿದಳು. ಚಂದ್ರನಿಗೆ ಎದುರಿಗೇ ಕಂಡ ಮಾದೇವನ ತಬ್ಬಿಕೊಳ್ಳಬೇಕು ಎನಿಸಿತು. ಆದರೆ ಆಗಲಿಲ್ಲ. ಚಂದ್ರ ಮಾದೇವನ ಎದುರು ನಿಂತ. ''ಏನ್ಮಾಡಲಿ ಮಾದೇವ ದೂರದಲ್ಲಿ ಇದ್ರೆ ನಿನ್ನ ಹತ್ತಿರಕ್ಕೆ ಬರಬೇಕು ಅನ್ನಸ್ತದೆ. ಹತ್ತಿರಕ್ಕೆ ಬಂದರೆ ನಮ್ಮವರನ್ನೆಲ್ಲಾ ನೋಡಿ ದೂರನೇ ನಿಲ್ಲಬೇಕು ಅನ್ನಸ್ತದೆ. ಈ ಜಾತಿ ಬುಡಕ್ಕೆ ಆಗಲ್ಲ, ಒಂಥರಾ ಅದೇನೋ ಒಳೊಳಗೇ ಅನ್ನಸ್ತಾದೆ. ಎಂಗೆ ಅಂದರೆ; ನಿಮ್ಮನ್ನೇ ತಕೊ ನೀವು ಜಾತಿ ಬುಡ್ತೀವಿ ಅಂದ್ರೂವೆ ಜಲಗಾರರ ಮನೇಲಿ ನೀರ ಈಸ್ಕ ಕುಡದರ್ರಾ ? ಆಗಲ್ವಲ್ಲ ಅಂಗೇ ನನ್ನೂವೆ...?!''

ಬಸವರಾಜ ಕುಕ್ಕರಹಳ್ಳಿ
ಎಮ್. ಐ. ಜಿ. ೭೨, ಈ. ಅಂಡ್ ಎಫ್ ಬ್ಲಾಕ್
ರಾಮಕೃಷ್ಣನಗರ, ಮೈಸೂರು - ೫೭೦ ೦೨೩



ಡಾ। ಎನ್. ಎಸ್. ಲೀಲಾ

ಕೊಕ್ಕರೆ ಬೆಳ್ಳೂರಿಗೆ ಪ್ರತಿವರ್ಷ ಬರುವ ಕೊಕ್ಕರೆಗಳು

# ನಿಸರ್ಗ ಸ್ವರ್ಗಗಳ ನಾಶ ಅನಾವೃಷ್ಟಿಯ ಪಾಶ

ಮೈಸೂರು-ಬೆಂಗಳೂರು ನಡುವೆ ಕೊಕ್ಕರೆ ಬೆಳ್ಳೂರು ಇದೆ. ಬೆಳ್ಳೂರು ಒಂದು ಸಣ್ಣ ಗ್ರಾಮ. ಇಲ್ಲಿ ಅರಳಿ, ಹುಣಿಸೆ, ಜಾಲಿ ಮತ್ತು ಹೂವರಸಿ ಮರಗಳು ಮನೆಗಳಿಗೆ ಹೊಂದಿಕೊಂಡಂತೆಯೇ ಬೆಳೆದಿವೆ. ಈ ಮರಗಳ ಮೇಲೆ ರಂಗು ಕೊಕ್ಕರೆಗಳು (Painted Stark-Mycteria leucocephala) ಪೆಲಿಕನ್/ಹೆಜ್ಜಾರ್ಲೆ (Pelecanus Philippensis)ಗಳು ಅಲ್ಲಿನ ನಿವಾಸಿಗಳ ನಡುವೆಯೇ ಬೀಡು ಬಿಡುತ್ತವೆ. ಆದಕ್ಕೆಂದೇ ಈ ಗ್ರಾಮದ ಹೆಸರಿನ ಹಿಂದೆ ''ಕೊಕ್ಕರೆ'' ಪದ ಸೇರಿದೆ. ಈ ಗ್ರಾಮವು ಮಳೆ ಆಧಾರಿತವಾದ್ದರಿಂದ ಮಳೆಗಾಲದಲ್ಲಿ ಮಾತ್ರ ಬಿತ್ತನೆ ಸಾಧ್ಯ. ಆದ್ದರಿಂದ ಜೀವನೋಪಾಯಕ್ಕೆ ಕುರಿ, ಹಸುಗಳನ್ನು ಸಾಕುತ್ತಿದ್ದಾರೆ. ಇಲ್ಲಿನ ಮರಗಳು ಪಕ್ಷಿಗಳಿಗೆ ಆಶ್ರಯ, ಜಾನುವಾರುಗಳಿಗೆ ಆಹಾರ ಹಾಗೂ ಗ್ರಾಮಸ್ಥರಿಗೂ ಆಧಾರವಾಗಿವೆ. ರಾಜ್ಯದ ಅರಣ್ಯ ಇಲಾಖೆ, ಅನೇಕ ನೇಚರ್ ಕ್ಲಬ್‌ಗಳೂ, ಗ್ರಾಮಸ್ಥರ ನೆರವಿನಿಂದ ಈ ಪಕ್ಷಿಗಳ ಸ್ವರ್ಗವನ್ನು ಕಾಪಾಡುತ್ತಿರುವುದು ಪ್ರಶಂಸನೀಯ. ಹೀಗೆ ಮರ, ಪ್ರಾಣಿ, ಪಕ್ಷಿಗಳ ಒಡನಾಟ ಮಾನವನ ಅಸ್ತಿತ್ವಕ್ಕೆ ಅತಿ ಮುಖ್ಯವೆಂದು ಪರಿಗಣಿಸಿ ೨೧ನೇ ಶತಮಾನವನ್ನು ''ಜೀವವಿಜ್ಞಾನ ಯುಗ''ವೆಂದೇ ಕರೆಯಲಾಗಿದೆ. ಜೀವ ವೈವಿಧ್ಯದ ಯಥಾವತ್ತು ಸಂರಕ್ಷಣೆ ಮತ್ತು ಅದಕ್ಕಾಗಿ ಕಾರ್ಯತಂತ್ರಗಳನ್ನು ಸ್ಥಳೀಯ, ತಾಲ್ಲೂಕು, ಜಿಲ್ಲಾ, ರಾಜ್ಯ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಹಮ್ಮಿಕೊಳ್ಳಲಾಗಿದೆ. ಈ ನಿಟ್ಟಿನಲ್ಲಿನ ಯೋಜನೆಗಳ ಬಗೆಗೆ ಬೆಳಕು ಚೆಲ್ಲುವ ಉದ್ದೇಶವೇ ಈ ಲೇಖನದ್ದು.

ಮೊದಲಿಗೆ, ಜೀವ ವೈವಿಧ್ಯ ಎಂದರೇನು? ಎಂದು ಗುರುತಿಸೋಣ. ಆಡಿನಂತೆ ಆನೆಯಿಲ್ಲ, ಗುಲಾಬಿಯಂತೆ ಗುಲ್‌ಮೊಹರ್ ಇಲ್ಲ, ಆಡಿನ ಗಾತ್ರಕ್ಕೂ ಆನೆಯ ಗಾತ್ರಕ್ಕೂ ಅಜ-ಗಜಾಂತರ. ಮಲ್ಲಿಗೆಯ ಕಂಪು ಹೂವಿಗಾದರೆ, ಮರುಗದ ಸುವಾಸನೆ ಅದರ ಎಲೆಗೆ, ಸ್ಕಂಕ್ ಸೂಸುವುದು ದುರ್ಗಂಧ, ಕಸ್ತೂರಿ ಮೃಗಕ್ಕಿರುವುದು ಪರಿಮಳ ಗ್ರಂಥಿ – ಹೀಗೆ ಜೀವಿಗಳ ಗುಣ, ಲಕ್ಷಣಗಳನ್ನು ಪಟ್ಟಿ ಮಾಡುತ್ತಾ ಹೋದರೆ ಕೊನೆ ಮೊದಲಿಲ್ಲದೇ ಹನುಮಂತನ ಬಾಲದಂತೆ ಬೆಳೆಸಬಹುದು. ಜೀವಿಗಳಲ್ಲಿನ ರೂಪ, ಗುಣ, ಲಕ್ಷಣಗಳ ಹೋಲಿಕೆ-ವ್ಯತ್ಯಾಸಗಳನ್ನೇ ಜೀವಿ ವೈವಿಧ್ಯ ಎಂದು ವಿವರಿಸುವುದು. ಕೆಲವು ಜೀವಿಗಳು ಜಗತ್ತಿನೆಲ್ಲೆಡೆ ಹರಡಿರುವುದನ್ನು ಕಾಣಬಹುದು. ಮತ್ತೆ ಕೆಲವು ಜೀವಿಗಳು ಜಗತ್ತಿನ ಅಲ್ಲಲ್ಲಿ ಹರಡಿ ಅಲ್ಲಿನ ಭೌತಿಕ ಮತ್ತು ರಾಸಾಯನಿಕ ಪರಿಸರಕ್ಕೆ ಹೊಂದಾಣಿಕೆ ಮಾಡಿಕೊಂಡಿವೆ. ಇನ್ನೂ ಕೆಲವು ಜೀವಿಗಳು ನಿರ್ದಿಷ್ಟ ಆವಾಸಗಳಲ್ಲಿ ಮಾತ್ರ ಕಾಣಬರುತ್ತವೆ. ಆರ್ಕಟಿಕ್ ಪ್ರದೇಶದಲ್ಲಿರುವ ಹಿಮಕರಡಿಗಳನ್ನು ಆಫ್ರಿಕಾದ ಉಷ್ಣ ಕಾಡುಗಳಲ್ಲಿ ಅರಸಲಾದೀತೆ? – ಅಂದರೆ ಜೀವಿಪ್ರಭೇದಗಳು ತಮ್ಮತನವನ್ನು ಕೆಲವೊಂದು ಆವಾಸಗಳಿಗೆ ಸೀಮಿತಗೊಳಿಸಿಕೊಂಡು ಭೂ ವಿಕಾಸದ ಬಗೆಗೆ ಮಾಹಿತಿಗಳನ್ನು ಒದಗಿಸುವ ಜೀವಂತ ಸಾಕ್ಷಿಗಳಾಗಿವೆ. ಈ ಜೀವಿಗಳ ಜೀವನ, ಅಸ್ತಿತ್ವ, ಚಟುವಟಿಕೆಗಳೇ ಭೌತಿಕ, ರಾಸಾಯನಿಕ ಮತ್ತು ಜೈವಿಕ ಜಗತ್ತಿನ ಆಧಾರ. ಜಗತ್ತಿನ ಕೆಲವು ಪ್ರದೇಶಗಳು ಜೀವಿಪ್ರಭೇದಗಳ ಹೆಚ್ಚಳಿಕೆಯಿಂದ ಸಮೃದ್ಧವಾಗಿವೆ. ಇಂತಹವುಗಳನ್ನು ಬೃಹತ್ ಜೀವ ವೈವಿಧ್ಯ ಕ್ಷೇತ್ರ (ತಾಣ)ಗಳೆನ್ನಬಹುದು. ಭೂ ವಿಕಾಸದ ಹಾದಿಯಲ್ಲಿ ಜೀವಿಗಳು ಅಸ್ತಿತ್ವಕ್ಕೆ ಬಂದಿವೆ, ಅಳಿಸಿವೆ, ಹೇಳ ಹೆಸರಿಲ್ಲದಂತೆ ನಾಶವಾಗಿವೆ. ಇವೆಲ್ಲಾ ನಿಸರ್ಗ ನಿಯಮದಂತೆ ಅಥವಾ ಪ್ರಕೃತಿಯ ವಿಕೋಪಗಳಿಂದ ನಡೆಯುವ ಸಹಜ ಕ್ರಿಯೆ. ಆದರೆ ಹೋಮೋ ಸೆಪಿಯನ್ ಸೆಪಿಯನ್ ಎಂಬ ವೈಜ್ಞಾನಿಕ ಯುಗದ ಮಾನವನ ಚಟುವಟಿಕೆಗಳಿಂದ ಜೀವ ವಿಕಾಸದ ಹಾದಿಯೇ ಬದಲಾಗುತ್ತಿರುವುದು ಜೀವಿಗಳ ಭವಿಷ್ಯದ ಬಗೆಗೆ ಆತಂಕ ಮೂಡಿಸುವಂತಹದ್ದು. ಮಾನವನ ಪ್ರಗತಿಗೆ ಬಲಿಯಾದ ಮೊದಲ ಶ್ರೀಮಂತ ಜೈವಿಕ ವಲಯವೇ ಅರಣ್ಯಗಳು. ಅವು ಕೃಷಿ ಭೂಮಿಯಾಗಿ, ಎಸ್ಟೇಟ್‌ಗಳಾಗಿ ರೂಪಾಂತರಗೊಂಡಿವೆ. ಗಣಿಗಾರಿಕೆ ಪರಿಸರ ನಾಶಕ್ಕೆ ಎಡೆಮಾಡಿಕೊಟ್ಟಿದೆ. ಹೀಗಾಗಿ ಇಲ್ಲಿನ ಆಶ್ರಯ ಜೀವಿಗಳು ಸಹಜವಾಗಿಯೇ ಕಣ್ಮರೆಯಾಗುತ್ತಿವೆ. ಅರಣ್ಯಜೀವಿಗಳ ರೋದನದೊಂದಿಗೆ ನಾಡಿನ ಜೀವಿಗಳ ಕಥೆಯೂ ವ್ಯಥೆಯಾಗಿರುವ ಚಿತ್ರಣ ಬಿ. ಬಿ. ಬೋಪಯ್ಯನವರು ಹಸಿರು ಪಾರಿವಾಳದ ಉದಾಹರಣೆಯಿಂದ ನೀಡಿದ್ದಾರೆ. ೧೯೬೦-೭೦ರ ದಶಕದಲ್ಲಿ ಕೊಡಗು ಜಿಲ್ಲೆಯ ಮರವೊಂದರ ಮೇಲೆ ಕಾಣಬರುತ್ತಿದ್ದ ೨೦೦ಕ್ಕೂ ಹೆಚ್ಚಿನ ಹಸಿರು ಪಾರಿವಾಳಗಳು ೭೧-೮೦ರ ನಡುವೆ ಶೇ. ೫೦ರಷ್ಟು ಕಡಿಮೆಯಾಗಿ ೮೧-೯೦ರ ದಶಕದಂತ್ಯಕ್ಕೆ ಕೆಲವೇ ಜೋಡಿಗಳಾಗಿರುವುದು ಶೋಚನೀಯ.



ಹೆಜ್ಜಾರ್ಲೆ
*Pelecanus Philippensis*

ಮಾನವನೊಂದಿಗೆ ಹೊಂದಾಣಿಕೆ ಮಾಡಿಕೊಂಡು ಸಹಬಾಳ್ವೆ ನಡೆಸುತ್ತಿದ್ದ ಗುಬ್ಬಚ್ಚಿ (Passer domesticus)ಯ ಕತೆ ಹಸಿರು ಪಾರಿವಾಳಕ್ಕಿಂತ ಬೇರೆಯಾಗಿಲ್ಲ. ಬೆಂಗಳೂರು ಮತ್ತಿತರ ನಗರಗಳಲ್ಲಿ ಶೇಖರವಾಗುತ್ತಿರುವ ತಿಪ್ಪೆರಾಶಿಯಿಂದ ಗುಬ್ಬಚ್ಚಿಯ ಶತ್ರುವಾದ ಸ್ಕಾವೆಂಜರ್ ಕಾಗೆಗಳು ಹೆಚ್ಚಾಗಿ, ಗುಬ್ಬಿಗಳನ್ನು ನಗರದಿಂದ ಓಡಿಸಿವೆ. ಅವುಗಳು ಎಲ್ಲಿ ಕಣ್ಮರೆಯಾಗಿ ಹೋಗಿವೆ ಎಂಬ ಅಧ್ಯಯನ ನಡೆಸಬೇಕಾಗಿದೆ.

ಎಲ್ಲಾ ಜೀವಿಗಳಿಗೆ ಹೋಲಿಸಿದರೆ ಅತ್ಯಾಕರ್ಷಕವಾದ ಹಕ್ಕಿಗಳ ಅಂಕಿ-ಸಂಖ್ಯೆಗಳ ಬಗೆಗಿನ ಅಧ್ಯಯನ ಹೆಚ್ಚು ನಿಖರವಾಗಿ ತಿಳಿದಿರುವುದರ ಅರಿವಾಗುತ್ತದೆ.




**ಕೊಡಗು ಜಿಲ್ಲೆಯಲ್ಲಿ ಹಸಿರು ಪಾರಿವಾಳದ ವ್ಯಥೆಯ ಕಥೆ**
(ಆಧಾರ : B. B. Bopaiah, IIHR, in Bird Conservation : Strategies for the 90's and beyond)

ಇವುಗಳ ಸಂಖ್ಯೆ ಪ್ರಾದೇಶಿಕ ವೈವಿಧ್ಯದೊಂದಿಗೆ ಬೇರೆ ಬೇರೆಯಾಗಿ ತೋರುವುದನ್ನೂ ಕಾಣಬಹುದು. ಕರ್ನಾಟಕದ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕಿನಲ್ಲಿರುವ ಮಾಲಾ ಎಂಬ ಸಣ್ಣ ಗ್ರಾಮದಲ್ಲಿರುವ ಹಕ್ಕಿಗಳ ಪ್ರಭೇದಗಳನ್ನು ನಮ್ಮ ರಾಷ್ಟ್ರದ ಪ್ರಭೇದಗಳ ಸಂಖ್ಯೆಗೆ ಹೋಲಿಸಿದರೆ ಅತಿ ಹೆಚ್ಚಿನದೆಂದೇ ಹೇಳಬಹುದು. ಚ.ಕಿ.ಮೀ. ಲೆಕ್ಕದಲ್ಲಿ ಮಾಲಾಗ್ರಾಮ ಭಾರತದ ೬೦೦ನೇ ಒಂದು ಭಾಗವಾಗಿದ್ದು, ಅಲ್ಲಿ ಭಾರತದ ಹಕ್ಕಿಗಳ ಒಟ್ಟು ಪ್ರಭೇದಗಳ ಸಂಖ್ಯೆಯ ಶೇ. ೧೦ರಷ್ಟನ್ನು ಕಾಣಬರುವುದು. (ಪಟ್ಟಿ ನೋಡಿ). ಮಾಲಾ ಗ್ರಾಮವು ತೇವ ಕಾಡುಗಳು, ಕೃಷಿ, ಜಲ ಜೀವಾವಾಸಗಳನ್ನು ಹೊಂದಿದ್ದು ಪಕ್ಷಿ ವೈವಿಧ್ಯಗಳ ತೌರೂರಾಗಿದೆ. ಅಂತೆಯೇ ಕರಾವಳಿಯುದ್ದಕ್ಕೂ ಹಬ್ಬಿರುವ ಪಶ್ಚಿಮ ಘಟ್ಟಗಳಲ್ಲಿಯೂ ವೃಕ್ಷಗಳನ್ನು ಸಮೃದ್ಧವಾಗಿ ನೋಡಬಹುದು. ಗಿಡಮರಗಳಿಲ್ಲದ ಮೈದಾನ ಪ್ರದೇಶಗಳಲ್ಲಿ ಇಂತಹ ಸಮೃದ್ಧಿ ಕಾಣಸಿಗದು. ಜಗತ್ತಿನೆಲ್ಲೆಡೆ, ವಿಶೇಷವಾಗಿ ಉಷ್ಣವಲಯದ ಕಾಡುಗಳಲ್ಲಿ ಇಂತಹ ಜೀವಿ ಸಮೃದ್ಧ ತಾಣಗಳನ್ನು ಗುರುತಿಸಬಹುದು. ೧೯೮೮ರಲ್ಲಿ ಬ್ರಿಟಿಷ್ ಪರಿಸರ ತಜ್ಞ ನಾರ್ಮನ್ ಮೆಯರ್ಸ್ ಇಂತಹ ೧೮ ಸಮೃದ್ಧ ತಾಣಗಳನ್ನು ಗುರುತಿಸಿ ಅವನ್ನು "Hot spots" ಎಂದು ಕರೆದ. ೨೦೦೦ದ ಫೆಬ್ರವರಿ ನೇಚರ್ ಪತ್ರಿಕೆಯಲ್ಲಿ ಅಂತಹ ೨೫ ತಾಣಗಳನ್ನು ಗುರುತಿಸಿದ. ೧೯೯೮ರಲ್ಲಿ

ಪಟ್ಟಿ - 1

| ಸ್ಥಳ | ವಿಸ್ತೀರ್ಣ (ಚದರ ಕಿ.ಮೀ.) | ಪಕ್ಷಿ ಪ್ರಭೇದಗಳ ಸಂಖ್ಯೆ |
|---|---|---|
| ಮಾಲಾ ಗ್ರಾಮ | ೫೦ | ೧೨೦ |
| ಕಾರ್ಕಳ ತಾಲ್ಲೂಕು | ೧,೦೦೦ | ೨೦೦ |
| ಉಡುಪಿ ಜಿಲ್ಲೆ | ೧೦,೦೦೦ | ೩೬೦ |
| ಕರ್ನಾಟಕ ರಾಜ್ಯ | ೧,೯೨,೦೦೦ | ೪೦೦ |
| ಭಾರತ | ೩೦,೦೦,೦೦೦ | ೧,೧೭೬ |




**ಭಾರತದ ಪಕ್ಷಿ ಪ್ರಭೇದಗಳ ಸಂಖ್ಯೆಗೆ ಹೋಲಿಸಿದರೆ ರಾಜ್ಯದ ಒಂದು ಸಣ್ಣ ಗ್ರಾಮದಲ್ಲಿನ ಸಂಖ್ಯೆ ವೈವಿಧ್ಯ ದೃಷ್ಟಿಯಿಂದ ಪ್ರಮುಖ ತಾಣವಾಗಿದೆ.**

WW 7. ಜೀವ ವೈವಿಧ್ಯ Hot spotsಗಳ ಸಂರಕ್ಷಣೆಗಾಗಿ "Global zoo" ಎಂಬ ಯೋಜನೆಯೊಂದು ಸಿದ್ಧಪಡಿಸಿ ಭೂ, ಜಲವಾಸಗಳಲ್ಲಿನ ಪ್ರಮುಖ ಜೀವಾವಾಸಗಳ ರಕ್ಷಣೆಯನ್ನು ಜಾಗತಿಕ ಮಟ್ಟದಲ್ಲಿ ನಡೆಸುವ ಕಾರ್ಯಕ್ರಮಗಳನ್ನು ರೂಪಿಸಿದೆ.

ಭಾರತೀಯ ವಿಜ್ಞಾನ ಮಂದಿರದ ಪರಿಸರ ವಿಜ್ಞಾನ ಕೇಂದ್ರದ ಪ್ರೊ|| ಮಾಧವ್ ಗಾಡ್ಗೀಳ್‌ರಿಗೆ ೧೯೯೩ರಲ್ಲಿ Pew Foundation Fellow in Environment and Conservationನ ಆರ್ಥಿಕ ಸೌಲಭ್ಯ ಜೀವ ವೈವಿಧ್ಯ ಅಧ್ಯಯನಕ್ಕಾಗಿ ನೀಡಲಾಗಿತ್ತು. ಇದು ಭಾರಿ ಮೊತ್ತವೂ ಆಗಿ ೧,೫೦,೦೦೦ ಡಾಲರ್‌ಗಳಷ್ಟಾಗಿತ್ತು. ಈ ಮೊತ್ತವನ್ನು ೪ ವರ್ಷದ ಕಾರ್ಯಕ್ರಮಕ್ಕೆ ಬಳಸಬೇಕಾದ್ದರಿಂದ ಪ್ರೊ|| ಗಾಡ್ಗೀಳ್‌ರು ಸೂಕ್ತವಾದ ಕ್ರಿಯಾತಂತ್ರ ಬಳಸಿ ಕರ್ನಾಟಕ ರಾಜ್ಯದ ಜೀವ ವೈವಿಧ್ಯ ಶ್ರೀಮಂತಿಕೆ ತೋರಿಸುವ ಕಾರ್ಯ ನಡೆಸಿದ್ದಾರೆ. ಇವರ ಹೆಚ್ಚಿನ ಕಾರ್ಯ ಪಶ್ಚಿಮ ಘಟ್ಟಗಳಲ್ಲಿ ನಡೆದಿದ್ದು ಇಂದು ಇಡೀ ರಾಜ್ಯದಲ್ಲೇ ಜೀವಿ ವೈವಿಧ್ಯ ಸಮೃದ್ಧ ತಾಣಗಳನ್ನು ಪಟ್ಟಿ ಮಾಡಿಸಿದ್ದಾರೆ. ಈ ಕಾರ್ಯಾಚರಣೆಗಾಗಿ ೧೯೯೪ರ ಏಪ್ರಿಲ್ ೪ರಿಂದ ೭ನೇ ತಾರೀಖಿನವರೆಗೆ ಸುಮಾರು ೪೫ ಜೀವಶಾಸ್ತ್ರ ಅಧ್ಯಾಪಕರುಗಳನ್ನು ಮಹಾರಾಷ್ಟ್ರ, ಗೋವಾ, ಕರ್ನಾಟಕ, ತಮಿಳುನಾಡು ಹಾಗೂ ಕೇರಳದಿಂದ ಕರೆಸಿ Western Ghats Biodiversity Network (WGBN) ಎಂಬ ಜಾಲವನ್ನು ಆರಂಭಿಸಿದರು. ಶಾಲಾ-ಕಾಲೇಜು ಅಧ್ಯಾಪಕರು, NGOಗಳು, ವಿದ್ಯಾರ್ಥಿಗಳಿಂದ ಔಷಧೀಯ ಸಸ್ಯಗಳು, ಸಿಹಿನೀರ ಮೀನುಗಳು, ಪಕ್ಷಿಗಳು, ಸ್ತನಿ, ಸರೀಸೃಪ, ಉಭಯಜೀವಿ, ಚಿಟ್ಟೆ, ಮೃದ್ವಂಗಿ ಮುಂತಾದ ವಿಶೇಷ ಪ್ರಭೇದಗಳ ದೊಡ್ಡ ಪಟ್ಟಿಯೇ ಇಂದು ಲಭ್ಯವಾಗುವಂತಾಗಿದೆ.

ಜೀವ ಜಾತಿಗಳ ಜಾಗೃತಿ ಮತ್ತು ಸಂರಕ್ಷಣೆಯ ಕಾಳಜಿ ಮೂಡಿಸುವ ನಿಟ್ಟಿನಲ್ಲಿ ಅಕ್ಟೋಬರ್ ಮೊದಲ ವಾರ (ದಿನಾಂಕ ೧ರಿಂದ ೭ರವರೆಗೆ) ''ವನ್ಯಜೀವಿ ಸಪ್ತಾಹ'' ಹಾಗೂ ಅಕ್ಟೋಬರ್ ೩ರಂದು ''ವಿಶ್ವ ಜೀವಾವಾಸ ದಿನ'' ಮತ್ತು ಅಕ್ಟೋಬರ್ ೪ರಂದು ''ವಿಶ್ವ ಪ್ರಾಣಿ ಕಲ್ಯಾಣ ದಿನ'' ಎಂದು ಪ್ರತಿವರ್ಷ ಆಚರಿಸಲಾಗುತ್ತಿದೆ. ಈ ವರ್ಷದ ''ವನ್ಯಜೀವಿ ಸಪ್ತಾಹ''ದ ಮುನ್ನಾ ದಿನ ಎಂದರೆ ೨೯ನೇ ಸೆಪ್ಟೆಂಬರ್ ಬೆಂಗಳೂರಿನ ಅರಣ್ಯ ಭವನದಲ್ಲಿ ಅರಣ್ಯಾಧಿಕಾರಿಗಳ ಹಾಗೂ ಭಾ.ವಿ.ಸಂ.ಯ ಪರಿಸರ ವಿಜ್ಞಾನ ಕೇಂದ್ರ (CES)ದ ಜೀವ ವೈವಿಧ್ಯ ಕ್ರಿಯಾ ಯೋಜನಾ ತಂಡದ ತಜ್ಞರ ಸಭೆ ಸೇರಿತ್ತು. ಆ ಸಭೆಯಲ್ಲಿ ೨೦೦೩ರ ''ವನ್ಯಜೀವಿ ಸಪ್ತಾಹ''ವನ್ನು ''ಕರ್ನಾಟಕದ ಬಯೋಡೈವರ್ಸಿಟಿ ಹಾಟ್ ಸ್ಪಾಟ್'' ಬಗೆಗೆ ಅರಿವು ಮೂಡಿಸುವ ಕಾರ್ಯಕ್ರಮವಾಗಿ ಆಚರಿಸಬೇಕೆಂಬ ನಿಲುವನ್ನು ತೆಗೆದುಕೊಳ್ಳಲಾಯಿತು. ಈ ಸಭೆ ಪ್ರಧಾನ ಮುಖ್ಯ ಅರಣ್ಯಾಧಿಕಾರಿ ಡಾ|| ಎಸ್. ಎನ್. ರೈ ಮತ್ತು ಪ್ರೊ|| ಮಾಧವ್ ಗಾಡ್ಗೀಳ್‌ರ ಅಧ್ಯಕ್ಷತೆಯಲ್ಲಿ ನಡೆದು ಇದುವರೆವಿಗೂ ತಾಲ್ಲೂಕು ಮಟ್ಟದಲ್ಲಿ ಜೀವಿ ವೈವಿಧ್ಯ ಸಂರಕ್ಷಣೆಗಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗೆಗೆ ಚರ್ಚಿಸಲಾಯಿತು. ಶ್ರೀ ಎಸ್. ಕೆ. ರಾಮಲಿಂಗೇ ಗೌಡ, ಇಂದು ಬಳಕೆಯಲ್ಲಿರುವ "Hot spots"ಗಳ ಕನ್ನಡ ರೂಪದ ಬಗೆಗೆ ಬದಲಾವಣೆ ಸೂಕ್ತವೆಂದು

ಸರಾಸರಿ ೧೫-೨೦ ಮೀಟರ್ ಎತ್ತರದ ಎಲೆ ಉದುರುವ ಜಾತಿ ಮರವೊಂದರ ಅಂದಾಜು ಕಾರ್ಯಗಳು.

| | |
|---|---|
| ೧. ಒಟ್ಟು ಎಲೆಗಳ ಮೇಲ್ಮೈ | ೧೦೦೦ ಚ.ಮೀ. |
| ೨. ಒಟ್ಟಾರೆ ಸಾವಯವ ವಸ್ತು ಉತ್ಪಾದನೆ | ೪೦೦೦ ಕಿ.ಗ್ರಾಂ./ ವರ್ಷಕ್ಕೆ |
| ೩. ಒಟ್ಟು ಆಮ್ಲಜನಕ ಬಿಡುಗಡೆ | ೩ ಮಿಲಿಯನ್ ಲೀಟರ್/ವರ್ಷಕ್ಕೆ (೩೭೦ ಲೀಟರ್/ ಒಂದು ಗಂಟೆಗೆ) |
| ೪. ನೀರಿನ ಹೀರುವಿಕೆ | ೨೫೦೦ ಲೀಟರ್/ ವರ್ಷಕ್ಕೆ |
| ೫. ಧೂಳು ಮತ್ತಿತರ ಮಾಲಿನ್ಯದ ಸೋಸುವಿಕೆ | ೭೦೦೦ ಕಿ.ಗ್ರಾಂ./ ವರ್ಷಕ್ಕೆ |
| ೬. ಬೇರಿನ ರಾಶಿ | ೩೦೦ - ೫೦೦ ಕಿ.ಗ್ರಾಂ. |
| ೭. ನೀರಿನ ಹರಿವಿನ ತಡೆ ಬೇರಿನಿಂದ | ೭೦,೦೦೦ ಲೀ/ ವರ್ಷಕ್ಕೆ |

ಆಧಾರ : *Life Counts by Michael Gleich et. al.*

ಪ್ರಸ್ತಾಪಿಸಿದರು. ಯಾವುದೇ ಇತರ ವೈಜ್ಞಾನಿಕ ಪದಗಳಂತೆ "Hot spots" ಪದ ಕನ್ನಡ ಲೇಖಕರ ಲೇಖನಿಯಿಂದ ''ಸೂಕ್ಷ್ಮ ಪ್ರದೇಶ/ತಾಣ'', ''ಸಮೃದ್ಧ'', ''ಅಗ್ರ'', ''ಬಿಸಿ', ''ಭಂಡಾರ'', ''ಕಣಜ'' – ಹೀಗೆ ಬಹುರೂಪಿಯಾಗಿ ಬಳಸಲಾಗುತ್ತಿದೆ. ಅಲ್ಲದೇ ಈ ಸಮೃದ್ಧ ತಾಣಗಳನ್ನು ಅವುಗಳ ಇಂದಿನ ಸ್ಥಿತಿಗನುಗುಣವಾಗಿ "Hot spots of Hope" ಮತ್ತು "Hot spots of Despair" ಎಂದು ಪರಿಗಣಿಸಿ, ಮೊದಲನೆಯ ೧೦೬ ಮಾದರಿ ಮತ್ತು ಎರಡನೆಯ ಗುಂಪಿನ ೭೧ Hot spotsಗಳನ್ನು ಗುರುತಿಸಿದೆ. "Hot spots of Hope"ನಲ್ಲಿ ಸಮೃದ್ಧಿಯ ಜೀವ ವೈವಿಧ್ಯದೊಂದಿಗೆ ಅದನ್ನು ಉತ್ತಮವಾಗಿ ಸಂರಕ್ಷಿಸುವ ಆಶಾಭಾವನೆ ಇಟ್ಟುಕೊಳ್ಳಬಹುದಾಗಿದ್ದರೆ, "Hot spots of Despair" ಆಘಾತದ ಪರಾಕಾಷ್ಠೆ ಮುಟ್ಟಿರುವುದರಿಂದ ಬಹಳಷ್ಟು ಕಟ್ಟುನಿಟ್ಟಿನ ಕ್ರಮದಿಂದ ವೃದ್ಧಿಪಡಿಸಬೇಕಾಗುವುದು. ಈ ಪದಗಳ ಕನ್ನಡೀಕರಣದ ಪ್ರಸ್ತಾಪ ಶ್ರೀ ರಾಮಲಿಂಗೇಗೌಡರು ಎತ್ತಿದಾಗ, ನಾನು ಕೆಲವೊಂದು ಪದಗಳ ಸಮುಚ್ಚಯ ರಚಿಸಿ ಸಭೆಗೆ ಸೂಚಿಸಿದೆ. ನಿರ್ದಿಷ್ಟವಾದ ಬಳಕೆಯ ಬಗೆಗೆ ಯಾವ

ನಿರ್ಧಾರವನ್ನು ತೆಗೆದುಕೊಳ್ಳಲಾಗಲಿಲ್ಲ. ಆ ಪದಗಳನ್ನು ಇಲ್ಲಿಯೂ ಪ್ರಸ್ತಾಪಿಸಿದ್ದೇನೆ. ಓದುಗರು ಇದಕ್ಕೆ ಪ್ರತಿಕ್ರಿಯಿಸಿ ಸೂಕ್ತ ಬಳಕೆಯನ್ನು ಸೂಚಿಸಿದರೆ ಪರಿಷ್ಕೃತಗೊಳ್ಳುತ್ತಿರುವ ನವಕರ್ನಾಟಕದ ವಿಜ್ಞಾನ ಪದವಿವರಣ ಕೋಶದಲ್ಲಿ ಅಳವಡಿಸಿಕೊಳ್ಳಬಹುದು.




ಜಗತ್ತಿನ ಪ್ರಮುಖ ಅರಣ್ಯಗಳ ವಿಸ್ತೀರ್ಣ (ಮಿಲಿಯನ್ ಹೆಕ್ಟೇರುಗಳಲ್ಲಿ; ೧೯೯೫ರ ಅಂಕಿ-ಅಂಶ)




| | ಜಗತ್ತು | ಭಾರತ | ಕರ್ನಾಟಕ |
|---|---|---|---|
| ಉನ್ನತ ಸಸ್ಯಗಳು | ೨೪೮೪೨೯ | ೧೭೦೦೦ | ೪೦೦೦ |
| ಅಕಶೇರುಕಗಳು | ೧೧೭೩೦೦೦ | ೭೬೩೦೯ | ೨೨೦೦೦ |
| ಮೀನುಗಳು | ೧೮೯೧೦ | ೨೫೪೬ | ೮೦೦ |
| ಉಭಯಜೀವಿಗಳು | ೪೨೨೨ | ೨೦೬ | ೮೦ |
| ಸರೀಸೃಪಗಳು | ೬೪೫೮ | ೪೦೮ | ೧೬೦ |
| ಹಕ್ಕಿಗಳು | ೯೦೪೦ | ೧೩೦೦ | ೫೦೦ |
| ಸ್ತನಿಗಳು | ೪೬೨೯ | ೪೦೦ | ೧೨೦ |

ಜೀವ ವೈವಿಧ್ಯದ ಅಂದಾಜು ಸಂಖ್ಯೆಗಳು

**ಸಂಪದ್ಭರಿತ/ಸಂಪದ್ಯುಕ್ತ/ಸಮೃದ್ಧ ಜೀವ ವೈವಿಧ್ಯ ತಾಣಗಳು**
**ಅಥವಾ**
**ಜೀವ ವೈವಿಧ್ಯ ಶ್ರೀಮಂತ ಭಂಡಾರಗಳು (ಉಗ್ರಾಣ)**
**(Biodiversity Hot spots)**

| (Hot spot of Hope) | (Hot spot of Despair) |
|---|---|
| ಸುಕೃತಿ ಭಂಡಾರ | ವಿಕೃತಿ ಭಂಡಾರ |
| ಅಪೇಕ್ಷಾ ಭಂಡಾರ | ಅಲಕ್ಷ್ಯ ಭಂಡಾರ |
| ಪ್ರತೀಕ್ಷಾ ಭಂಡಾರ | ನಿರ್ಲಕ್ಷ್ಯ ಭಂಡಾರ |
| ಶುಕ್ಲ ಭಂಡಾರ | ಕೃಷ್ಣ ಭಂಡಾರ |
| ಸಂವರ್ಧನ ಭಂಡಾರ | ಸಂವೇದನಾ ಭಂಡಾರ |
| ಉತ್ಥಾನ ಭಂಡಾರ | ಉಪೇಕ್ಷಾ ಭಂಡಾರ |




ಈ ತಾಣಗಳು ಅರಣ್ಯ, ಕೃಷಿ, ರೆವಿನ್ಯೂ ಇಲಾಖೆ, ದೇವಸ್ಥಾನದ ಪಾರುಪತ್ಯ, ಖಾಸಗಿ – ಹೀಗೆ ಅನೇಕ ಆಡಳಿತ ಕ್ಷೇತ್ರಗಳಡಿ ಬರುವಂತಹದಾಗಿದೆ. ಹಾಗಾಗಿ ಅವುಗಳ ಸಂರಕ್ಷಣೆ ಒಂದು ವ್ಯವಸ್ಥೆಯಡಿ ಮಾಡುವುದು ತಾಂತ್ರಿಕ ದೃಷ್ಟಿಯಿಂದ ಕೆಲವೊಮ್ಮೆ ಕಷ್ಟಸಾಧ್ಯವಾಗುವಂತಹುದು. ಆದರೆ ವಿವಿಧ ಇಲಾಖೆಗಳ ಒಟ್ಟಾರೆ ನೆರವಿನಿಂದ ರಾಜಕೀಯ ಕ್ಕೊಳಪಡಿಸದೇ, ಸ್ಥಳೀಯ ಅಭಿವೃದ್ಧಿ ದೃಷ್ಟಿಯಿಂದ ಹಾಗೂ ಸಾಮುದಾಯಿಕ ಹಿತದೃಷ್ಟಿಯಿಂದ ಕಾರ್ಯತಂತ್ರ ರೂಪಿಸಿದಲ್ಲಿ ನಮ್ಮ ರಾಜ್ಯವು ಸಂಪನ್ಮೂಲ ಸಮೃದ್ಧಿಯ ಮಾದರಿಯಾಗಬಲ್ಲದು.

ಜೀವ ಜಗತ್ತಿನಲ್ಲಿ ಗಾತ್ರಕ್ಕೆ ಹೋಲಿಸಿದಾಗ ಅವುಗಳ ಸಂಖ್ಯೆಯಲ್ಲಿನ ವ್ಯತ್ಯಾಸ ಕಾಣಬಹುದು. ಭೂ ಜೀವಿಗಳಲ್ಲಿ ಅತಿ ಹೆಚ್ಚಿನ ಗಾತ್ರವಿರುವ ಸ್ತನಿಗಳ ಸಂಖ್ಯೆಗೆ ಹೋಲಿಸಿದರೆ ಅತಿ ಚಿಕ್ಕದಾಗಿರುವ ಕೀಟಗಳ ಸಂಖ್ಯೆ ಅಪಾರ. ಚಿತ್ರದಲ್ಲಿ ಸಂಖ್ಯೆಗೆ ತಕ್ಕಂತೆ ಆಯಾ ಗುಂಪುಗಳ ಗಾತ್ರವನ್ನು ನಿರೂಪಿಸಲಾಗಿದೆ. ಈ ಮಾಪನದಲ್ಲಿ ಸ್ತನಿಗಳ ಸಂಖ್ಯೆಗೆ ಹೋಲಿಸಿದರೆ ಕೀಟಗಳು ಪ್ರಭೇದ ಮತ್ತು ಜೀವರಾಶಿಯಲ್ಲಿ ಅತ್ಯುನ್ನತ ಮಟ್ಟದಲ್ಲಿರುವುದನ್ನು ಗಮನಿಸಬಹುದು. ಇದು ನಿಸರ್ಗ ನಿಯಮ. ಈ ನಿಯಮಕ್ಕೆ ಮಾನವ ಹೊರತಾಗಬೇಕೇ ?

'ಅರಣ್ಯನಾಶ' ನಾವು ಈಗ ಅನುಭವಿಸುತ್ತಿರುವ ಅನಾವೃಷ್ಟಿಯ ಸಂಕೇತ. ನಿತ್ಯ ಹರಿದ್ವರ್ಣದ ಕಾಡುಗಳು ಮಳೆಯನ್ನು ಉತ್ಪತ್ತಿ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ತೀರದ ಮಳೆಕಾಡುಗಳು ಒಳನಾಡಿನ ಒಣ ಪ್ರದೇಶಗಳಿಗೂ ಮಳೆ ಸುರಿಸಬಲ್ಲವು. ಜಗತ್ತಿನ ಶೇ. ೯೦ರಷ್ಟು ಅರಣ್ಯ ಈಗ ನಾಶವಾಗಿದೆ. ಮತ್ತೊಂದೆಡೆ ಜಾಗತಿಕ ಮಟ್ಟದಲ್ಲಿ ಕಾರ್ಬನ್-ಡೈ-ಆಕ್ಸೈಡ್‌ನ ವಿಸರ್ಜನಾ ಮಟ್ಟದ ದಾಖಲೆ ೧೯೯೬ರಲ್ಲಿ ೬.೫ ಬಿಲಿಯನ್ ಟನ್‌ಗಳಷ್ಟಿತ್ತು. ಈ ಪ್ರಮಾಣ ೧೯೯೦ರಲ್ಲಿನ ಶೇ. ೬.೪ರಷ್ಟು ಹೆಚ್ಚಳವಾಗಿದ್ದು ೧೯೯೫ನೇ ವರ್ಷದ ದಾಖಲೆಗೆ ಹೋಲಿಸಿದರೆ ಶೇ. ೨.೭ರಷ್ಟು ಅಧಿಕವಾಗಿರುವುದೆಂದು ಲಂಡನ್ನಿನಲ್ಲಿರುವ ವರ್ಲ್ಡ್ ಎನರ್ಜಿ ಕೌನ್ಸಿಲ್ (WEC) ದಾಖಲಿಸಿದೆ.

**ಉದಾಹರಣೆಗೆ** : ಕೀಟ ಪ್ರಪಂಚದಲ್ಲಿ ಪ್ರಭೇದ ಸಂಖ್ಯಾಬಲದಿಂದ ಎರಡನೆಯ ಸ್ಥಾನ ಪಡೆದಿರುವ ಚಿಟ್ಟೆ-ಪತಂಗಗಳ ಬಗೆಗೆ ಹೇಳಬಹುದಾದರೆ ಇವುಗಳ ಒಟ್ಟು ಪ್ರಭೇದಗಳ ಮೊತ್ತ ಸುಮಾರು ೧.೬೫ ಲಕ್ಷಗಳು. ಇವುಗಳಲ್ಲಿ ೧.೨೫ ಲಕ್ಷದ ಪತಂಗಗಳಿದ್ದರೆ, ಚಿಟ್ಟೆಗಳ ಪ್ರಭೇದಗಳ ಸಂಖ್ಯೆ ೩೫,೦೦೦. ಇವುಗಳಲ್ಲಿ ಭಾರತವು ೧೬೦೦ ಪ್ರಭೇದಗಳ ಚಿಟ್ಟೆಯನ್ನು ಹೊಂದಿದ್ದರೆ, ಕರ್ನಾಟಕದಲ್ಲಿಯೇ ೪೫೦-೪೭೦ ಪ್ರಭೇದಗಳ ಚಿಟ್ಟೆ-ಪತಂಗಗಳಿದ್ದು, ಪಶ್ಚಿಮ ಘಟ್ಟಗಳಲ್ಲಿ ಇವುಗಳ ಸಂಖ್ಯೆ ಅಧಿಕವಾಗಿರುವುದು ಕಂಡುಬಂದಿದೆ. ವೈವಿಧ್ಯಮಯ ಸಸ್ಯ ಪ್ರಭೇದಗಳಿರುವ ಬೆಂಗಳೂರು ನಗರದಲ್ಲಿಯೇ ಸುಮಾರು ೧೫೦ ಪ್ರಭೇದಗಳ ಚಿಟ್ಟೆಗಳನ್ನು ಗುರುತಿಸಲಾಗಿದೆ. ಬಣ್ಣ ಬಣ್ಣದ ಚಿಟ್ಟೆಗಳ ಹಾರಾಟ ಜೀವ ವೈವಿಧ್ಯ ದೃಷ್ಟಿಯಿಂದ ಹೇಗೆ ಪರಿಣಾಮಕಾರಿಯಾಗಬಲ್ಲದೆಂದು ವಿಮರ್ಶಿಸೋಣ. ಚಿಟ್ಟೆಯ ಲಾರ್ವ/ಮರಿಗಳು/ಕಂಬಳಿಹುಳ ಹೊಟ್ಟೆಬಾಕಗಳಾದ್ದರಿಂದ ಸಾಕಷ್ಟು ಬೆಳೆ ಹಾನಿ ಮಾಡುವುದೆಂದು ಅದೊಂದು ಹಾನಿಕಾರಕ ಜೀವಿಯೆಂದು ಪರಿಗಣಿಸಿ ಕೀಟನಾಶಕ ಬಳಸುವುದು ಸಾಮಾನ್ಯ. ಆದರೆ ಈ ಅವಸ್ಥೆಯಲ್ಲಿ ಅವು ಅನೇಕ ಇತರ ಜೀವಿಗಳಿಗೆ ಆಹಾರವಾಗಿವೆ. ಹಾಗಾಗಿ ಆಹಾರ ಸರಪಳಿಯ ಮುಖ್ಯ ಕೊಂಡಿಯೆನ್ನಬಹುದು. ಶತ್ರುಗಳಿಂದ ತಪ್ಪಿಸಿಕೊಂಡು ಪ್ರೌಢಾವಸ್ಥೆ ತಲುಪಿತೆಂದರೆ ತನ್ನ ಕೆಲವೇ ದಿನಗಳ ಅಸ್ತಿತ್ವದಲ್ಲಿ ಸಹಸ್ರಾರು ಸಸ್ಯಗಳಲ್ಲಿ ಪರಾಗಸ್ಪರ್ಶ ನಡೆಸಿ ತನ್ನ ಹಾಗೂ ತನ್ನನ್ನೇ ಅವಲಂಬಿಸಿರುವ ಸಸ್ಯಗಳ ಮುಂದಿನ ಪೀಳಿಗೆಗೆ ನಾಂದಿ ಹಾಕಬಲ್ಲವು. ಕುಡಿಕೆಯಂತೆ ಗೂಡುಕಟ್ಟುವ ಕಣಜ ತನ್ನ ಮರಿಗಳಿಗೆ ಆಹಾರ ಒದಗಿಸಲು ನಿರ್ದಿಷ್ಟ ಪ್ರಭೇದದ ಚಿಟ್ಟೆಯ ಕಂಬಳಿಹುಳುವನ್ನು ಗೂಡಿನಲ್ಲಿಟ್ಟು, ಮೊಟ್ಟೆಯಿಟ್ಟ ನಂತರ ಗೂಡಿನ ದ್ವಾರ ಮುಚ್ಚುತ್ತದೆ. ಚಿಟ್ಟೆಗಳ ನಾಶದಿಂದ ಅದರ ಮೇಲೆ ನಿರ್ಭರವಾಗಿರುವ ಕಣಜಗಳ ಸಂಖ್ಯೆಯೂ



ಮರವೊಂದರ ಆಶ್ರಯದಲ್ಲಿನ ಜೀವಿ ವೈವಿಧ್ಯ

























ಇಳಿಮುಖವಾಗುತ್ತಿರುವುದನ್ನು ಗಮನಿಸಲಾಗಿದೆ. ಕೆಲವು ವಿಧದ ಚಿಟ್ಟೆಗಳು ಅನೇಕ ಕಳೆ ಸಸ್ಯಗಳ ಮೇಲೆ ಮೊಟ್ಟೆಯಿಡುವುದರಿಂದ ಅವುಗಳ ಹತೋಟಿಯನ್ನು ಮಾಡಲು ಸಹಕರಿಸುತ್ತವೆ. ಹಕ್ಕಿ, ಹಲ್ಲಿ, ಕಪ್ಪೆಗಳಿಗಂತೂ ಚಿಟ್ಟೆ, ಪತಂಗಗಳು ಅತಿ ಪ್ರಿಯ ಭಕ್ಷ್ಯ. ಪಶ್ಚಿಮ ಘಟ್ಟಗಳಲ್ಲಿ ಕಾಣಬರುವ ಒಂದು ಪ್ರಭೇದದ ಚಿಟ್ಟೆಗೆ ಸರ್ಪಗಂಧಿ ಸಸ್ಯವೇ ಆಶ್ರಯದಾತ. ಈ ಸಸ್ಯದಲ್ಲಿರುವ reserpine ಎಂಬ ರಾಸಾಯನಿಕ ವಸ್ತು ಇದರ ಜೀವನ ಕ್ರಮಕ್ಕೆ ಅತಿಮುಖ್ಯ. ಸರ್ಪಗಂಧಿ ಔಷಧೀಯ ಸಸ್ಯವಾಗಿರುವುದರಿಂದ ಅದರ ಲೂಟಿ ಸಾಕಷ್ಟಾಗಿ ಈ ಪ್ರದೇಶದಲ್ಲಿ ಅದು ಅಪರೂಪದ ಸಸ್ಯವಾಗಿ ಪರಿಣಮಿಸಿದೆ. ಹೀಗಾಗಿ ಇದರ ಆಧಾರ ಚಿಟ್ಟೆಗೆ ಲಭ್ಯವಿಲ್ಲ. ಈ ಚಿಟ್ಟೆಯು ತನ್ನ ಅಸ್ತಿತ್ವಕ್ಕೆ ಬೇರೊಂದು ಸಸ್ಯವನ್ನು ಅವಲಂಬಿಸಬೇಕಾಗಿ reserpine ವಸ್ತುವನ್ನು ಸಂಶ್ಲೇಷಿಸುವ ಸಸ್ಯವನ್ನು ಆಯ್ದುಕೊಂಡಿದೆ. ಇದನ್ನು ವೀಕ್ಷಿಸಿದ ಕೆಲವು ವಿಜ್ಞಾನಿಗಳು ಚಿಟ್ಟೆಯ ಪತ್ತೆದಾರಿಕೆಯಲ್ಲಿ ಅದರ ಜಾಡಿನ ಮೊರೆ ಹೋಗಬಹುದೆಂದು ಆಶಿಸುತ್ತಿದ್ದಾರೆ. ಹೀಗೆ ಜೀವಿಗಳು ಆಯ್ದುಕೊಳ್ಳುವ ಪರ್ಯಾಯ ವ್ಯವಸ್ಥೆಗಳು ವೈಜ್ಞಾನಿಕ ಸೋಜಿಗಗಳನ್ನು ತೆರೆದಿಡಬಲ್ಲವು.

ಜಗತ್ತಿನ ಒಟ್ಟು ಭೂ ಭಾಗದ ಶೇ. ೧.೪ರಷ್ಟು ಎಂದರೆ ಸುಮಾರು ೨.೧ ಮಿಲಿಯನ್ ಚದರ ಕಿ.ಮೀ. ವಿಸ್ತೀರ್ಣದಲ್ಲಿ ಜೀವಿ ವೈವಿಧ್ಯ ಸಮೃದ್ಧ ತಾಣಗಳು ಹರಡಿವೆ. ಹಿಂದೆ ಈ ಪ್ರದೇಶವು ಸುಮಾರು ೧೭.೪ ಮಿಲಿಯನ್ ಚದರ ಕಿ.ಮೀ. ವಿಸ್ತೀರ್ಣದ್ದಾಗಿದ್ದು ಅದು ಭೂ ಭಾಗದ ಶೇ. ೧೧.೮ರಷ್ಟಾಗಿದ್ದಿತು. ಹಿಂದಿನ ಶೇ. ೮೮ ಭಾಗದ ಹಸಿರು ನಾಶವಾಗಿದೆ. ಈಗ ಉಳಿದಿರುವ ಸ್ವಲ್ಪ ಭಾಗವನ್ನಾದರೂ ವಿಶ್ವವು ಅಭಿವೃದ್ಧಿಪಡಿಸಿಕೊಳ್ಳದಿದ್ದಲ್ಲಿ ಹಾಹಾಕಾರದ ಕೂಗು, ಜನಸಂಖ್ಯೆಯ ಹೆಚ್ಚಳದಿಂದ ಯಾದವ ಕುಲ ನಾಶವಾದಂತೆ ಮನುಕುಲವೂ ನಾಶವಾದೀತು. ಈ ಗುರುತಿಸಿರುವ ಪ್ರದೇಶಗಳೆಲ್ಲವೂ ಹೆಚ್ಚಾಗಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿಯೇ ಹೆಚ್ಚಾಗಿದ್ದು ಅಪಾಯದ ಅಂಚಿನ ಭೀಕರತೆ ಕಾಣುತ್ತಿವೆ. ಇದಕ್ಕೆ ಮುಖ್ಯ ಕಾರಣ ಅವುಗಳ ರಕ್ಷಣೆಗೆ ಜಾಗತಿಕ ಮಟ್ಟದ ಧನ ಸಹಾಯದ ಕೊರತೆ. ವಿಶ್ವ ಧನಸಹಾಯದ ಸುಮಾರು ೬ ಬಿಲಿಯನ್ ಅಮೆರಿಕಾ ಡಾಲರುಗಳನ್ನು ಈಗ ಪ್ರತಿ ವರ್ಷ ವಿನಿಯೋಗಿಸಲಾಗುತ್ತಿದೆ. ಆದರೆ ಇದರ ಅಂದಾಜು ವೆಚ್ಚ ೨೭.೫ ಬಿಲಿಯನ್ ಡಾಲರುಗಳಷ್ಟು ವರ್ಷಕ್ಕೆ ಬೇಕಾಗುವುದೆಂದು ಊಹಿಸಲಾಗಿದೆ. ಈ ಧನ ಸಹಾಯದ ಒಟ್ಟು ಪಾಲಿನ ಪ್ರಮುಖ ಭಾಗ (ಅರ್ಧಕ್ಕೂ ಹೆಚ್ಚು) ಉತ್ತರ ಅಮೆರಿಕಾದ ಪಾಲು. ಬೇಕಾಗಿರುವ ಧನ ಸಹಾಯದ ಹಂಚಿಕೆ ಹೇಗಿರಬೇಕೆಂಬ ಚರ್ಚೆಯೂ ನಡೆಯುತ್ತಿದೆ.

**ಡಾ॥ ಎಸ್. ಎಸ್. ಲೀಲಾ**
೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್ಸ್, ೧೪-ಎ, ಅಡ್ಡಬೀದಿ
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

## ವಿಪತ್ತಿನ ಅಂಚಿನಲ್ಲಿರುವ ಕರ್ನಾಟಕದ ಜೀವಿಗಳು



**ಲೆಸ್ಸರ್ ಫ್ಲೋರಿಕನ್ಸ್**
(Sypheotides indica)

ಹುಲ್ಲಿನ ಮೈದಾನದ ಮಾಣಿಕ್ಯಗಳೆಂದೇ ಹೆಸರು ಮಾಡಿರುವ ಫ್ಲೋರಿಕನ್ಸ್‌ನ ಗಂಡು ಸಂತಾನಾಭಿವೃದ್ಧಿಯ ಕಾಲದಲ್ಲಿ ಗಮನ ಸೆಳೆಯುವಂತಹ ಪ್ರದರ್ಶನ ನೀಡುತ್ತದೆ.

ಅರಣ್ಯ ಸಂಪನ್ಮೂಲಗಳ ಮೇಲೆ ನಿರ್ಭರವಾಗಿರುವ ಇವು ಆರೋಗ್ಯಕರ ಅರಣ್ಯವಿದ್ದಲ್ಲಿ ಮಾತ್ರ ಬದುಕುಳಿಯಬಲ್ಲವು. ಭಾರತದ ವನ್ಯಜೀವಿ ಸಂಸ್ಥೆ ಮಧ್ಯಪ್ರದೇಶದಲ್ಲಿ ಇವುಗಳ ಸಂಶೋಧನೆಗೆ ಯೋಜನೆಗಳನ್ನು ಹಾಕಿಕೊಂಡು ಭವಿಷ್ಯತ್ತನ್ನು ರೂಪಿಸುವ ಪ್ರಯತ್ನ ನಡೆಸಿದೆ.



**ಸ್ಲಾತ್ ಕರಡಿ**
(Melursus ursinus)



ಕಾಡನ್ನು ಕಡಿದು, ವಿದ್ಯುತ್ ಬೇಲಿ ಹಾಕಿ, ದಂತಚೋರರ ಗುಂಡಿಗೆ ಬಲಿಯಾಗುತ್ತಿರುವ ಆನೆಗಳು ತಮ್ಮ ಆವಾಸದಲ್ಲಿ ನೆಲೆ ಕಾಣದಾದಾಗ ನಾಡಿಗೆ ನುಗ್ಗದೇ ಏನು ಮಾಡೀತು ? ಒಂದು ದಿಕ್ಕಿನಿಂದ ಮತ್ತೊಂದಕ್ಕೆ ಅಲೆದು ಗುಲ್ಲೆಬ್ಬಿಸಿದ ಆನೆಗಳ ಸ್ಥಿತಿಗತಿಗಳಿಗೆ ಯಾರು ಕಾರಣ ?

ಸಹಜೀವಿಯಾಗಿದ್ದು ಪ್ರತಿಯೊಬ್ಬ ಸದಸ್ಯನಿಗೂ ತನ್ನದೇ ಆದ ಶ್ರೇಣಿ ಇರುತ್ತದೆ. ಸಿಳ್ಳೆ ಹೊಡೆದು ಸಂದೇಶವನ್ನು ಕೊಡುವುದರಿಂದ ಈ ಹೆಸರು.



**ಸಿಳ್ಳೆ ನರಿಗಳು**
**(ಭಾರತದ ಕಾಡು ನಾಯಿ – Cuon alpinus)**



೧. ಸ್ತನಿಗಳು, ೨. ಉಭಯ ಜೀವಿಗಳು, ೩. ಬ್ಯಾಕ್ಟೀರಿಯಾ, ೪. ಸ್ಪಂಜುಗಳು, ೫. ಕಂಟಕ ಚರ್ಮಿಗಳು, ೬. ಸರೀಸೃಪಗಳು, ೭. ಕುಟುಕು ಕಣವಂತಗಳು, ೮. ಹಕ್ಕಿಗಳು, ೯. ವಲಯ ವಂತಗಳು, ೧೦. ದುಂಡು ಹುಳುಗಳು, ೧೧. ಚಪ್ಪಟೆ ಹುಳುಗಳು, ೧೨. ಮೀನುಗಳು, ೧೩. ಶೈವಲಗಳು, ೧೪. ಆದಿಮ ಜೀವಿಗಳು, ೧೫. ಶಿಲೀಂಧ್ರಗಳು, ೧೬. ಮೃದ್ವಂಗಿಗಳು, ೧೭. ಕೀಟಗಳನ್ನು ಹೊರತುಪಡಿಸಿ ಉಳಿದ ಸಂದಿಪದಿಗಳು, ೧೮. ಉನ್ನತ ಸಸ್ಯಗಳು, ೧೯. ಕೀಟಗಳು

**ವಸುಮತಿ ಉಡುಪ**

ಸತ್ಯಕ್ಕಾರೂ ಇದೊಂದು ನಡೆದ ಘಟನೆ. ಈ ಘಟನೆಯೇ ನನಗೆ ಹೀಗೊಂದು ಪುರಾಣ ಬರೆಯಲು ಪ್ರೇರೇಪಣೆ. ಹಳ್ಳಿಯ ಬಂಧುಗಳೊಬ್ಬರ ಮನೆಗೆ ಭೇಟಿ ಕೊಡಬೇಕಾದ ಪ್ರಸಂಗ ಒಮ್ಮೆ ಬಂತು. ಅಲ್ಲಿಗೆ ಹೋಗುವ ಮುನ್ನ ಭೇಟಿಯಾದ ಅದೇ ಊರಿನ ಕೆಲ ಹಿತೈಷಿಗಳು ಆ ಮನೆಯಲ್ಲಿ ಸಾಕಿರುವ ಒಂದು ನಾಯಿಯ ವಿಚಾರವಾಗಿ ಎಚ್ಚರಿಕೆ ಹೇಳಿದರು. ಅದೊಂದು ಕಂತ್ರಿ ನಾಯಿ, ಸರಪಳಿಯ ಬಂಧನವಿಲ್ಲದೆ ಹೊರಗಿನ ಪಾರುಪತ್ಯ ಮಾಡುತ್ತಾ ಮನೆಯ ಅಂಗಳದ ರಾಜ್ಯಭಾರ ವಹಿಸಿಕೊಂಡಿರುವ ಅದಕ್ಕೆ ತನ್ನ ದಂತಸಾಮರ್ಥ್ಯ ಪರೀಕ್ಷಿಸಿಕೊಳ್ಳಲು ಆಗೀಗ ಕೆಲವರ ಕಾಲಿಗೆ ಬಾಯಿ ಹಾಕುವುದು ರೂಢಿ. ಈ ಕುರಿತು ಮನೆಯವರಿಗೆ ಹೆಮ್ಮೆ. ಅಡಿಕೆ ಕೊಯ್ಲಿನ ಕಾಲದಲ್ಲಿ ಚಪ್ಪರದ ತಟ್ಟಿಯ ಮೇಲೆ ಒಣಗಿಸಿದ ಅಡಿಕೆಯ ಒಂದು ಹೋಳು ಕೂಡ ಕಳುವಾಗಲು ಈ ಬಹಾದ್ದೂರ ಬಿಡುವುದಿಲ್ಲವೆಂಬ ಜಂಭ. ಕಳ್ಳಕಾಕರಿಗೆ ಒಂದು ಹೆದರಿಕೆ ಇರಬೇಕು, ಸರಿ. ಆದರೆ ಆ ಮನೆಗೆ ಅನಿವಾರ್ಯವಾಗಿ ಹೋಗಬೇಕಾದ ಉಳಿದ ಬಡಪಾಯಿಗಳ ಗತಿ? ಹಗಲಲ್ಲಾದರೂ ಕೊರಳಿಗೆ ಸರಪಳಿ ತೊಡಿಸಿ ರಾತ್ರಿ ಸ್ವತಂತ್ರವಾಗಿ ಅಡ್ಡಾಡಲು ಬಿಟ್ಟರೇನಂತೆ? ಹೋಗಲಿ, ಕಾಲಕಾಲಕ್ಕೆ ಕೊಡಿಸಬೇಕಾದ ಇಂಜೆಕ್ಷನ್ ಇತ್ಯಾದಿ ಕೊಡಿಸಿ ನಾಯಿಯನ್ನು ಮುತುವರ್ಜಿಯಿಂದ ಸಾಕಿದ್ದಾರೆಯೇ ಎಂದರೆ ಅದೂ ಇಲ್ಲ. ಎಲ್ಲೋ ದಾರಿಯಲ್ಲಿ ಸಿಕ್ಕಿದ ಮರಿ ತಂದು ಸಾಕಿದ್ದಾರೆ. ಅದು ಬೆಳೆದು ದೊಡ್ಡದಾಗಿದೆ. ಅನ್ನ ಹಾಕಿದವರ ಮನೆ ಕಾಯುತ್ತಿದೆ. ಪಶುವೈದ್ಯ ಶಾಲೆ ಇಲ್ಲದ ಹಳ್ಳಿಯಲ್ಲಿ ಒಂದು ಕಂತ್ರಿ ನಾಯಿಯನ್ನು ಎಂಥಾ ಧೋರಣೆಯಿಂದ ತುತ್ತು ಅನ್ನ ಹಾಕಿ ಸಾಕುತ್ತಾರೋ ಅದೇ ಧೋರಣೆಯಿಂದ ಈ ನಾಯಿಯನ್ನೂ ಬೆಳೆಸಿದ್ದಾರೆ. ಈ ನಾಯಿಯ ಅಂಜಿಕೆಯಿಂದ ಜನ ಸಲೀಸಾಗಿ ಅವರಲ್ಲಿಗೆ ಹೋಗಲು ಹಿಂದೇಟು ಹೊಡೆಯುತ್ತಾರೆ. ಒಂದೊಮ್ಮೆ ಹೋಗಬೇಕಾದ ಪ್ರಸಂಗ ಬಂದರೆ ಉಣುಗೋಲಿನ ಹೊರಗೆ ನಿಂತು ಬೊಬ್ಬೆ ಹಾಕಿ ಮನೆಯವರನ್ನು ಕರೆದು ಅವರ ರಕ್ಷಣೆಯ ಧೈರ್ಯದಿಂದ ಅಂಗಳದೊಳಗೆ ಕಾಲಿಕ್ಕುತ್ತಾರೆ. ಈ ರಕ್ಷಣಾ ವ್ಯವಸ್ಥೆಯನ್ನೂ ಉಲ್ಲಂಘಿಸಿ ನಾಯಿ ಕೆಲವರಿಗೆ ಹಲ್ಲಿನ ರುಚಿ ತೋರಿಸಿದ್ದಿದೆ. ಇತ್ತೀಚೆಗೆ ಅಂದರೆ ಮೊನ್ನೆ ಮೊನ್ನೆ ಒಬ್ಬ ಸಂಭಾವನೆ ಭಟ್ಟರ ಮೀನಖಂಡವನ್ನು ಈ ನಾಯಿ ತರಿದುಹಾಕಿದೆ. ಇಷ್ಟೆಲ್ಲಾ ಸುದ್ದಿ ಸಂಗ್ರಹವಾಗುವಾಗ ನಾಯಿ ಸಾಕಿದ ಕೆಲ ಮನೆಗಳಿಗೆ ನಾನು ಹೋದಾಗಿನ ಚಿತ್ರಣ ಕಣ್ಣಮುಂದೆ ತನ್ನಷ್ಟಕ್ಕೆ ಸುಳಿದುಹೋಯ್ತು. ನಮ್ಮ ಹಿಂದೆ ಮುಂದೆ ಸುತ್ತಿ ಸುಳಿದಾಡುತ್ತಾ, ಹೊಸಬರ ಮೈ ವಾಸನೆಯನ್ನು ಆಘ್ರಾಣಿಸುತ್ತಾ, ಮನೆಯ ನಾಯಿ ನಮ್ಮ ಉಸಿರು ಕಟ್ಟುವಂತೆ ವರ್ತಿಸುವಾಗ ಮನೆಯವರು ಅತಿಥಿಗಳಿಗೆ ಧೈರ್ಯ ತುಂಬುವ ಪರಿ ಬಹುಶಃ ಎಲ್ಲಾ ಕಡೆ ಒಂದೇ ರೀತಿ ಇರಬಹುದು. ''ಏನೂ ಮಾಡಲ್ಲ ಅದು, ಕಚ್ಚೋದಂತೂ ಸುತರಾಂ ಇಲ್ಲ. ಹೆದ್ರಬೇಡಿ, ಬನ್ನಿ ಒಳಗೆ...''

ನಮ್ಮ ಪುಕ್ಕಲುತನದ ಕುರಿತು ಮನೆಯವರಿಗೆ ಚೂರೂ ಪಿಕೀರಿಲ್ಲ. ಅವರು ಸಾಕಿದ ಪ್ರಾಣಿ ಅವರಿಗೆ ಪಳಗಿರಬಹುದು, ಅವರಿಗೆ ಮುದ್ದಿರಬಹುದು. ಆದರೆ ನಮ್ಮ ಭಯ ಅವರು ಅರ್ಥಮಾಡಿಕೊಳ್ಳಬೇಡವೇ? ಕೆಲ ಸಹೃದಯಿಗಳು ಅರ್ಥ ಮಾಡಿಕೊಳ್ಳುತ್ತಾರೆ. ನಾಯಿಯನ್ನು ಬಂಧನದಲ್ಲಿರಿಸಿ ಬಂದು ಸಿಕ್ಕಿಕೊಂಡ ನಮ್ಮ ಉಸಿರು ಸಲೀಸಾಗಿ ಆಡುವಂತೆ ಮಾಡುವ ಕೃಪೆ ತೋರಿಸುತ್ತಾರೆ. ಆದರೆ ಈ ಸಹೃದಯತೆ ಎಲ್ಲರಿಂದಲೂ ಅಪೇಕ್ಷಿಸಲಾಗುವುದಿಲ್ಲ. ಕೆಲವರಿಗೆ ಮನೆ ಮಕ್ಕಳಂತೆ ಸಾಕಿದ ತಮ್ಮ ನಾಯಿಯ ಕುರಿತು ಅಪಾರ ವಿಶ್ವಾಸ. 'ಏನೂ ಮಾಡಲ್ಲ ಅದು' ಎನ್ನುವ ತಮ್ಮ ಮಾತಿಗೆ ಬದ್ಧರಾಗಿರುವಂತೆ ಅವರು ನಮ್ಮ ಅಂಜುಕುಳಿತನವನ್ನು ಉದಾಸೀನ ಮಾಡಿ ನಮ್ಮ ಧೈರ್ಯವನ್ನು ಪರೀಕ್ಷೆಗೊಡ್ಡುತ್ತಾರೆ. ಶುನಕ ಮಹಾಶಯನ ಉಪಸ್ಥಿತಿಯಲ್ಲಿ ಸದಾ ಸಂಶಯಗ್ರಸ್ತ ಪ್ರಾಣಿಯಾಗಿರುವ ಅದು ಆಗೀಗ ಭೂಸ್ಪರ್ಶ ಮಾಡಿರುವ ನಮ್ಮ ಪಾದಗಳಿಗೆ ತಣ್ಣನೆಯ ಒದ್ದೆ ಮೂತಿ ತಾಕಿಸುತ್ತಾ ನಮ್ಮಿಂದ ಚೀತ್ಕಾರ ಹೊರಡಿಸುವುದರ ನಡುವೆ ಲೋಕಾಭಿರಾಮ ನಡೆದು ಹೇಗೋ ಒಮ್ಮೆ ಯಾವ ಡ್ಯಾಮೇಜೂ ಆಗದೆ ಹೊರಬಂದೆವು ಅಂದರೆ ಹೊಸ ಜೀವ ಬಂದಂತೆ. ನಾಯಿಗೆ ಸರ್ವತಂತ್ರ ಸ್ವಾತಂತ್ರ್ಯ ಕೊಟ್ಟ ಕಡೆ ಜನ್ಮೇಪಿ ಕಾಲಿಡುವುದಿಲ್ಲವೆಂಬ ಶಪಥ ಮಾಡಿದವಳಿಗೆ ಇದೀಗ ಪೇಚಿನ ಸಂದರ್ಭ. ಅಪರೂಪಕ್ಕೆ ಊರಿಗೆ ಹೋದವರು ಆ ನೆಂಟರ ಮನೆಗೆ ಹಾಜರಿ ಹಾಕದೆ ಹೊರಟುಬಂದೆವೆಂದರೆ ಪುಕಾರು ತಪ್ಪಿದ್ದಲ್ಲ. ಹೋಗಲು ಜೀವ ಭಯ.

''ಈಗೆಲ್ಲಾ ಮೊದಲಿನ ಹಾಗೆ ಹೊಕ್ಕಳಿನ ಸುತ್ತಾ ಇಂಜೆಕ್ಷನ್ ತಗೋಬೇಕಾಗಿಲ್ವಂತೆ. ದಿನಾ ತಗೊಳ್ಳೋದೂ ಬೇಡ್ವಂತೆ....'' ಎಂದು ಜೊತೆಗಿದ್ದ ರಾಯರು ಹುರಿದುಂಬಿಸುವ ಮಾತಾಡಿದರು. ಇಂಜೆಕ್ಷನ್ನಿನ ಹೆದರಿಕೆ ಅಂತೇನಲ್ಲ. ಹೆದರಲು ಸಣ್ಣ ಮಗುವೂ ಅಲ್ಲ. ಆದರೆ ಸುಕಾಸುಮ್ಮನೆ ಒಂದು ನಾಯಿಯ ಹರಿತ ಹಲ್ಲಿಗೆ ಗುರಿಯಾಗುವುದರ ಕುರಿತು ನನ್ನಲ್ಲಿ ಶಿಬಿಯ ಔದಾರ್ಯ ಇಲ್ಲ. ಅಲ್ಲದೆ ನಿಜವಾದ ಕಷ್ಟಕ್ಕಿಂತಾ ಅದು ಬರಬಹುದೆನ್ನುವ ಕಲ್ಪನೆಯೇ ಹೆಚ್ಚು ಕಷ್ಟಕರವಾದದ್ದು ಎನ್ನುವ ಹೇಳಿಕೆ ಮಾತಿನಂತೆ ನಾಯಿಯೊಂದು ಕಚ್ಚಬಹುದಾದ ಭೀತಿಯೇ ಹೆಚ್ಚು ಕಂಗೆಡಿಸುವಂತಾದ್ದು. ಈ ನಾಯಿಗಳ ಮರ್ಜಿ ಯಾರಿಗೆ ಗೊತ್ತಿರುತ್ತದೆ? ನಮ್ಮ ದುರದೃಷ್ಟಕ್ಕೆ ಅವುಗಳ ಮೂಡು ಕೆಟ್ಟಿರುವಾಗಲೇ ನಮ್ಮಗಳ ಭೆಟ್ಟಿಯಾದರೆ? ಹೋಗುವುದೋ, ಹೋಗದೆ ಹಾಗೇ ಹಿಂದಿರುಗುವುದೋ ಎನ್ನುವ ಮೀನಾಮೇಷ ಮಾಡುವಷ್ಟು ವ್ಯವಧಾನ ರಾಯರು ಕೊಡುತ್ತಿಲ್ಲ. 'ಏನೀಗ?' ಎನ್ನುವ ಅವಸರ. ಈ ಸಾಕು ಪ್ರಾಣಿಗಳ ಕುರಿತು ನಮ್ಮಿಬ್ಬರಲ್ಲಿ ಮತಭೇದ ಉಂಟು. ಒಂದು ನಾಯಿಯನ್ನೋ, ಬೆಕ್ಕನ್ನೋ ಸಾಕಬೇಕೆಂದು, ಸಾಕಿ ಚಂದ ನೋಡಬೇಕೆಂದು, ರಾಯರಿಗೆ ಮಹದಾಶೆ. ಅವರು ಚಿಕ್ಕವರಿದ್ದಾಗ ಒಂದು ನಾಯಿ ಸಾಕಿದ್ದರಂತೆ. ಅದರ ಪರಾಕ್ರಮದ ಬಗ್ಗೆ ಇವತ್ತಿಗೂ ರಾಯರು ನೆನಸಿಕೊಂಡು ಮಾತಾಡುತ್ತಾರೆ. ಅವರ ಪ್ರಕಾರ ಇಂತಹ



ಪ್ರಾಣಿಗಳ ಕುರಿತು ಮಮಕಾರ ಭಾವನೆ ಇಲ್ಲದಿರುವುದೆಂದರೆ ಅದು ಮನುಷ್ಯತ್ವ ಅಲ್ಲ. 'ಒಂದು ಕರು, ಒಂದು ಮರಿ...' ಎಂದು ಅವರು ಶುರು ಹಚ್ಚಿದರೆ ನನ್ನ ಬಿ. ಪಿ. ಏರುತ್ತದೆ. ಇವೆಲ್ಲಾ ದೊಡ್ಡ ಅಂಗಳವಿರುವ ಹಳ್ಳಿ ಮನೆಗಳಿಗೆ ಶೋಭಿಸೀತೇ ಹೊರತು ಇಕ್ಕಟ್ಟಿನ ಪೇಟೆ ಮನೆಗಳಿಗಲ್ಲ ಎನ್ನುವುದು ನನ್ನ ನಿಲುವು. 'ದೊಡ್ಡದಾಗಿರಬೇಕಾದ್ದು ಮನೆಯಲ್ಲ, ಮನಸ್ಸು' ಎನ್ನುತ್ತಾರೆ ರಾಯರು. ನಮ್ಮ ಬೀದಿಯುದ್ದಕ್ಕೂ ಹತ್ತೆಂಟು ಮನೆಗಳಲ್ಲಿ ನಾಯಿ ಸಾಕಿರುವುದು ರಾಯರ ಕಣ್ಣು ಕುಕ್ಕುತ್ತದೆ. 'ಎಲ್ಲರೂ ನಿನ್ನ ಹಾಗಿರ್ತಾರಾ, ನೋಡು...' ಎಂದು ಅವರು ಕಣ್ಣೆದುರಿಗಿನ ಉದಾಹರಣೆ ತೋರಿಸುತ್ತಾರೆ. ಜನ ನಾಯಿಯನ್ನಾದರೂ ಸಾಕಲಿ, ನರಿಯನ್ನಾದರೂ ಸಾಕಲಿ, ಆ ಬಗ್ಗೆ ನನ್ನ ತಕರಾರಿಲ್ಲ. ಆದರೆ ಅವುಗಳ ಮಲಮೂತ್ರ ವಿಸರ್ಜನೆಗೆ ಇನ್ನೊಬ್ಬರ ಮನೆಯ ಎದುರುಭಾಗವನ್ನು ಉಪಯೋಗಿಸಿಕೊಳ್ಳುವುದರ ಕುರಿತು ನನ್ನ ತೀವ್ರ ವಿರೋಧವಿದೆ. ಪೇಟೆ ಮನೆ ಸರಿ, ಜಾಗ ಇಲ್ಲ ಸರಿ, ಆದರೆ ಈ ನಾಯಿಗಳಿಗೆ ತಮ್ಮ ತಮ್ಮ ಮನೆಗಳ ಎದುರು ಯಾಕೆ 'ಇಶ್ಶೀ' ಬರುವುದಿಲ್ಲ? ಇನ್ನೊಬ್ಬರ ಮನೆಯೆದುರಿನ ಲೈಟುಕಂಬದ ಬುಡವೇ ಯಾಕಾಗಬೇಕು ? ಕಲಿಸಿದ ಬುದ್ಧಿ ಅಲ್ಲದೆ ಮತ್ತೇನು ? ಕುತ್ತಿಗೆಯ ಸರಪಳಿಯನ್ನು ಜಗ್ಗಿ ಮುಂದೆಳೆಯುತ್ತಾ ಮನೆ ಯಾತನನ್ನು ಅಥವಾ ಆಕೆಯನ್ನು ವಾಕಿಂಗ್ ಕರೆದುಕೊಂಡು ಹೋಗುವ ದೈತ್ಯನಾಯಿಗಳನ್ನು ನಾನು ಗಮನಿಸಿದ್ದೇನೆ. ಹೀಗೆ ವಾಕಿಂಗ್‌ಗೆ ಎಳೆದೊಯ್ಯುವ ಅತ್ಯುತ್ಸಾಹದಲ್ಲಿ ಹಿಂದಿರುವ ಮಾಲೀಕರನ್ನು ಕಾಲು ಜಾರಿಸಿ ಬೀಳಿಸಿದ, ಕೈ ಮುರಿಸಿದ, ವಿಷಯಗಳನ್ನೂ ಕೇಳಿಬಲ್ಲೆ. ಕೆಲಹೊತ್ತು ಬಂಧಮುಕ್ತ ಮಾಡಿ ದೇಹಬಾಧೆ ತೀರಿಸಿಕೊಳ್ಳಲೆಂದು ಮನೆಯ ಹೊರಗೆ ಕಳಿಸಲ್ಪಟ್ಟ ಸಾಕುನಾಯಿಗಳು ಕಣ್ಣಿಗೆ ಕಂಡ ಬಿಡಾಡಿ ಹಂದಿಗಳನ್ನು ಓಡಿಸಿಕೊಂಡು ಹೋಗಿ ಗೌಜು ಎಬ್ಬಿಸುವುದು, ಹೆದರಿ ಓಡುವ ಮಕ್ಕಳನ್ನು ಹಿಂಬಾಲಿಸಿ ಕಚ್ಚುವುದು, ವಿಶೇಷದ ಸುದ್ದಿಗಳಲ್ಲ. ಇಂಥಾ ನಾಯಿಯಿಂದ ಕಚ್ಚಿಸಿಕೊಂಡ ಮಗುವಿನ ಮನೆಯವರಿಗೆ ನಾಯಿ ಸಾಕಿದವರ ಪುಕ್ಕಟೆ ಉಪದೇಶ, 'ಓಡಿದರೆ ಅದಕ್ಕೆ ಸಿಟ್ಟು ಬರುತ್ತೆ. ಓಡಬಾರದು, ಹಾಗೇ ನಿಂತುಬಿಡಬೇಕು..' ಇತ್ಯಾದಿ. ಓಡುವವರನ್ನು ನೋಡಿದರೆ ಸಿಟ್ಟಾಗುವ ಇವರ ಮುದ್ದಿನ ಪ್ರಾಣಿಗಳನ್ನು ಸಾರ್ವಜನಿಕ ಸ್ಥಳದಲ್ಲಿ ಯಾಕೆ ಸ್ವತಂತ್ರವಾಗಿ ಓಡಾಡಲು ಬಿಡುತ್ತಾರೋ ಯಾರು ಕೇಳಬೇಕು ? ಕೇಳಿದರೆ ಜಗಳ ತಪ್ಪಿದ್ದಲ್ಲ. ಒಂದು ನಾಯಿ ಸಾಕುವುದು ಅಂದರೆ ಮೇಲೆ ಹೇಳಿದ ಎಲ್ಲಾ ವಿಷಯಗಳನ್ನೂ ಗಮನಿಸಬೇಕು. ಸಭ್ಯ ನಾಗರಿಕರಿಗೆ ಇದೊಂದು ಸವಾಲು ಎಂದು ವಾದ ಹೂಡಿ ರಾಯರು ಬಾಯಿ ಮುಚ್ಚಿಸುವುದರಲ್ಲಿ ನಾನು ಯಶಸ್ವಿಯಾಗಿದ್ದೇನೆ. ಈ ವಿಷಯ ಇಲ್ಲಿಗೆ ಬಿಡೋಣ. ನಾವು ಬಂಧುಗಳ ಮನೆಗೆ ಹೋಗುವ ಕುರಿತು ತಲೆಕೆಡಿಸಿಕೊಂಡಿದ್ದರ ಕಡೆ ಬರೋಣ. ಕೊನೆಗೂ ಅವರಲ್ಲಿಗೆ ಹೋಗುವುದು ತೀರ್ಮಾನವಾಯ್ತು. ಹೋದೆವು, ಮೊದಲೇ ಮಾತು ಕೊಟ್ಟಿದ್ದಂತೆ ರಾಯರು ಉಣುಗೋಲಿನ ಲಕ್ಷ್ಮಣಗೆರೆಯ ಈಚೆ ನಿಂತು,

''ಹೋಯ್, ಯಾರಿದೀರಿ ಮನೇಲಿ ?'' ಎಂದು ಕೂಗು ಹಾಕಿದರು.

''ಯಾರೋ ಅದು, ಇಷ್ಟು ಹೊತ್ನಲ್ಲಿ?'' ಅಸಮಾಧಾನ ಸೂಚಿಸುವಂತೆ ಕರಿಯ ನಾಯಿಯೊಂದು ಜೋರಾಗಿ ಬೊಗಳುತ್ತಾ ಓಡೋಡಿ ಬಂದು ಉಣುಗೋಲಿನ ಒಳಬದಿಯಲ್ಲಿ ಬೊಬ್ಬಿಡುತ್ತಾ ನಿಂತುಕೊಂಡಿತು. ನಾನು ಆಗಲೇ ರಾಯರ ಬೆನ್ನಹಿಂದೆ ಅಡಗಿದ್ದೆ. 'ಹೋಯ್...' ಎಂದು ರಾಯರು ಮತ್ತೊಂದು ಕರೆಕೊಟ್ಟರು. ಮೊದಲು ಮನೆಯ ಯಜಮಾನ, ಹಿಂದಿನಿಂದ ಯಜಮಾಂತಿ, ದರ್ಶನ ಭಾಗ್ಯ ಕೊಟ್ಟರು. ''ಓಹೋಹೋಹೋಹೋ... ಅಪೂರ್ವದೋರು, ಬನ್ನಿ, ಬನ್ನಿ...'' ಎನ್ನುವ ಆದರದ ಸ್ವಾಗತ ಸಿಕ್ಕಿತು. ಅಂಗಳ ದಾಟಿ ಉಣುಗೋಲಿನವರೆಗೆ ಬಂದ ಅವರು ಉಣುಗೋಲು ತೆಗೆಯಲು ಕೈ ಇಕ್ಕುತ್ತಿದ್ದಂತೆ,

''ಮೊದಲು ನಾಯಿನ ಕಟ್ಹಾಕಿ'' ಎಂದು ವರಲಿದೆ. ಆಗಲೇ ಅದು ಹೊರಗೆ ಧಾವಿಸಿ ಬರಲು ಚಡಪಡಿಸುತ್ತಿದೆ. ಮನೆ ಮಂದಿಯ ಪರಿಚಯದವರು ನಾವೆನ್ನುವುದು ಕಣ್ಣೆದುರೇ ಸಾಬೀತಾಗುತ್ತಿದ್ದರೂ ಅದರ ಅಸಹನೆ ತಪ್ಪಿಲ್ಲ. ಬೊಗಳುವಿಕೆ ಮುಂದುವರಿದೇ ಇದೆ. ಅದನ್ನು ಕಟ್ಟಿಹಾಕಬೇಕೆಂಬ ನನ್ನ ವಿನಂತಿಗೆ ಯಥಾಪ್ರಕಾರ ನಾಯಿ ಮಾಲಿಕರ ಯಾವತ್ತಿನ ಧೋರಣೆಯ ಉತ್ತರ ಬಂತು.

''ಎಂತದೂ ಮಾಡಲ್ಲ ಅದು, ಹೆದ್ರಬೇಡಿ, ಬನ್ನಿ...''

''ಏನು ಮಾಡುತ್ತೋ, ಬಿಡುತ್ತೋ, ಕಟ್ಟಿಹಾಕ್ಬಿಡಿ. ಆಮೇಲೆ ನಾವು ಒಳಗೆ ಬರೋದು'' ರಾಯರು ಖಡಕ್ಕಾಗಿ ಹೇಳಿದರು. ಯಜಮಾನ ಯಜಮಾಂತಿಯ ಮುಖ ನೋಡಿದರು. ಶುನಕವನ್ನು ಕಟ್ಟಿಹಾಕಲು ಅಲ್ಲಿ ಒಂದು ವ್ಯವಸ್ಥೆ ಇದ್ದರೆ ತಾನೇ ? ಅದಕ್ಕೆ ಬೇಕಾದ ಸರಪಳಿ, ಹಗ್ಗ ಯಾವುದನ್ನೂ ಅವರು ಸಿದ್ಧವಾಗಿಟ್ಟಿಲ್ಲ. ಮನೆಯಲ್ಲಿ ಜಾನುವಾರುಗಳಿದ್ದರೂ ಆ ದಪ್ಪನೆಯ ಹಗ್ಗ ಅಥವಾ ಕಣ್ಣ ನಾಯಿಯ ಕೊರಳಿಗೆ ಸರಿ ಹೊಂದುವುದಿಲ್ಲ.

''ಬನ್ನಿ, ಪರ್ವಾಗಿಲ್ಲ, ನಾವಿದೀವಿ...'' ಯಜಮಾನ ಮೊದಲನೆಯ ಉಣುಗೋಲು ತೆಗೆದರು. ನಾಯಿ ನೆಗೆನೆಗೆದು ಹೊರಬರುವ ತನ್ನ ಉತ್ಕಟೇಚ್ಛೆಯನ್ನು ಪ್ರದರ್ಶಿಸತೊಡಗಿತು. ನನ್ನ ಕೈಕಾಲುಗಳು ಗದಗುಟ್ಟತೊಡಗಿದವು.

''ತೆಗೀಬೇಡಿ, ನಾಯಿ ಈಚೆಗೆ ಬರುತ್ತೆ. ಮೊದ್ಲು ಅದನ್ನ ಕಟ್ಟಿಹಾಕಿ. ಸುಮಾರು ಜನರಿಗೆ ಕಚ್ಚಿದೆಯಂತಲ್ಲ?'' ಕಟುವಾಗಿ ಆಕ್ಷೇಪಿಸಿದೆ. ಆಗ ಯಜಮಾಂತಿ ಆಡಿದ ಮಾತುಗಳು ಯಾವತ್ತೂ ಮರೆಯುವಂತಿಲ್ಲ. ನೆನಪಾದಾಗಲೆಲ್ಲ ಕಚಕುಳಿ ಕೊಟ್ಟಂತಾಗುತ್ತದೆ. ಆಕೆ ಹೇಳಿದರು,

''ಥೋ ಥೋ, ಬರೀ ಸುಳ್ಳೇಯಾ. ಎಲ್ರಿಗೂ ಕಚ್ಚಲ್ಲಪ್ಪ ಇದು. ತಿರುಕರು, ಒಂಥರಾ ಇರೋರು, ಹಿಂಗಿದ್ದೋರಿಗೆ ಮಾತ್ರ ಕಚ್ಚುತ್ತೆ ವಿನಾ ಸರಿಯಾಗಿದ್ದೋರಿಗೆ ಕಚ್ಚಲ್ಲ ಇದು...''

ಯಜಮಾಂತಿ ಅಮಾಯಕತೆಯಿಂದಲೇ ಈ ಮಾತಾಡಿರಬಹುದು. ಆದರೆ ಒಳಾರ್ಥ ಗಮನಿಸಿ. ನಾಯಿ ನಮಗೆ ಕಚ್ಚಿದರೆ 'ನಾವು ಒಂಥರಾ ಇದೀವಿ, ಎಲ್ಲಾ ನರ ಮನುಷ್ಯರ ಹಾಗಲ್ಲ' ಎನ್ನುವುದು ಸಾಬೀತಾದ ಹಾಗೆ. ಕಚ್ಚದಿದ್ದರೆ ನಾವು ಸಜ್ಜನರಂತೆ ಕಾಣುವ ಮನುಷ್ಯರು. ನಾಯಿಯ ದೃಷ್ಟಿಯಲ್ಲಿ ನಾವು ಹೇಗೆ ಕಾಣುತ್ತೇವೆ ಎನ್ನುವುದು ನಿರ್ಧಾರವಾಗಬೇಕಾದರೆ ನಾವು ಧೈರ್ಯ ಮಾಡಿ ಅದನ್ನು ಅವಗಣಿಸಿ ಮನೆಯಂಗಳಕ್ಕೆ ಅಡಿ ಇಡಬೇಕು. ಯಾವುದೋ ಯಃಕಶ್ಚಿತ್ ಕಂತ್ರಿನಾಯಿ ನಮ್ಮನ್ನು ಏನೆಂದು ತಿಳಿದುಕೊಂಡರೆ ನಮ್ಮ ಪ್ರತಿಷ್ಠೆ ಹೆಚ್ಚುವುದೇನು ಎನ್ನುವ ರೊಚ್ಚು ರಾಯರಿಗೂ ಬಂದಿರಬೇಕು.

''ಕಟ್ಟಿಹಾಕಿದ್ರೆ ಒಳಗೆ ಬರ್ತೀವಿ, ಇಲ್ಲದಿದ್ರೆ ಇಲ್ಲ...'' ಎಂದು ಮುಲಾಜು ಇಟ್ಟುಕೊಳ್ಳದೆ ಹೇಳಿದರು. ಕೊನೆಗೂ ನಾಯಿಗೆ ಹೊಂದಿಕೆಯಾಗುವ ದಪ್ಪದಾರದಂತಾದ್ದು ಸಿಕ್ಕಿ, ಅದರ ಒರಳಿಗೆ ಉರುಳು ಬೀಳುವವರೆಗೆ ನಾವು ಹಟ ಹಿಡಿದವರಂತೆ ಹೊರಗೇ ನಿಂತು ಮನೆಯವರಿಗೆ ಮುಜುಗರ ಹುಟ್ಟಿಸಬೇಕಾದ್ದು ಅನಿವಾರ್ಯ ಕರ್ಮವಾಯ್ತು.

ಹಳ್ಳಿಗಳ ಕಡೆ ಶುನಕ ಸಮೂಹದ ಕುರಿತಾಗಿ ಜನಜನಿತವಾಗಿರುವ ಕೆಲ ವದಂತಿಗಳು ಈ ಸಂದರ್ಭದಲ್ಲಿ ನೆನಪಾಗುತ್ತಿದ್ದು ಅದನ್ನು ನಿಮ್ಮೊಂದಿಗೆ ಹಂಚಿಕೊಳ್ಳಬೇಕೆನಿಸುತ್ತಿದೆ. ನಾವು ಚಿಕ್ಕವರಿದ್ದಾಗ ಎಡವಿಯೋ, ಕುಯ್ದೋ, ಕೈಕಾಲಿಗೆ ಏನಾದರೂ ಗಾಯವಾದರೆ ರಕ್ತದ ಹುಂಡು ಕೆಳಗೆ ಬೀಳದಂತೆ ಕಟ್ಟೆಚ್ಚರ ವಹಿಸಿ, ಹಾಗೊಮ್ಮೆ ಬಿದ್ದರೂ ಕ್ಷಣಾರ್ಧದಲ್ಲಿ ಅದನ್ನು ವರೆಸಿ ಚೊಕ್ಕ ಮಾಡಿ ಬಿಡುತ್ತಿದ್ದೆವು. ಕಾರಣ ನಾಯಿಗಳು ಮನುಷ್ಯರ ರಕ್ತವನ್ನು ನೆಕ್ಕಿದರೆ ಅವಕ್ಕೆ ಹುಚ್ಚು ಹಿಡಿಯುತ್ತದೆಯಂತೆ ಎನ್ನುವ ನಂಬಿಕೆ. ಹಳ್ಳಿ ಮನೆಗಳ ಅವಿಭಾಜ್ಯ ಅಂಗಗಳಂತಿದ್ದ ನಾಯಿಗಳು ಪ್ರತಿ ಮನೆಗಳಲ್ಲೂ ಒಂದೆರಡಾದರೂ ಇದ್ದೇ ಇರುತ್ತಿದ್ದುವು. ಅವುಗಳು ಅನ್ನ ಹಾಕಿ ಸಾಕಿದ ಮನೆಯನ್ನು ಬಿಟ್ಟು ಹೋಗುವುದಿಲ್ಲವೆಂಬ ಮಾತನ್ನು ಸುಳ್ಳು ಮಾಡುವಂತೆ ಕೆಲವೊಮ್ಮೆ ಹತ್ತಿರದ ಮತ್ಯಾರದೋ ಮನೆಯನ್ನು ಸೇರಿಕೊಂಡು ಸಾಕಿ ದೊಡ್ಡ ಮಾಡಿದವರ

## ಈ ಕವಿತೆ



ಜಿಡ್ಡು ಅದ್ದಿದ
ಮೊನೆಗೆ
ಹಲಸು ತೊಳೆ
ಆಗುವಂತೆ
ಒಲವು ತೀಡಿ ಸಾಣೆಯಿಟ್ಟ
ಹೊಳಹಿಗೆ
ಈ ಕವಿತೆ

ನಾಗರಾಜ ವಸ್ತಾರೆ
೭೧೨, ೧೪ನೇ ಮೇನ್, ೨೦ನೇ ಕ್ರಾಸ್
ಬನಶಂಕರಿ ೨ನೇ ಹಂತ, ಬೆಂಗಳೂರು - ೭೦

ಹೊಟ್ಟೆ ಉರಿಸುತ್ತಿದ್ದುವು. ಇವಕ್ಕೆ ಕಾರಣ ಆ ಮನೆಯ ಹೆಣ್ಣು ಶುನಕದ ಮೇಲಿನ ಕಡುಮೋಹ ಇರಬಹುದು ಅಥವಾ ಆ ಮನೆಯವರು ಇವುಗಳಿಗೆ ಹೆಚ್ಚು ಸಲಿಗೆ ಕೊಟ್ಟು, ಮುದ್ದು ಮಾಡಿ ಮನ ಗೆದ್ದಿರಬಹುದು. ಹೀಗೇನಾದರೂ ಆದಾಗ ತಮ್ಮ ಮನೆಯ ಕಾವಲು ಕಾಯಬೇಕಾದ ನಾಯಿ ಪರರ ಮನೆ ಸೇರಿ ಬಾಗಿಲು ಕಾಯುವಂತಾ ಸಂದರ್ಭದ ಸೂಚನೆ ಸಿಕ್ಕಿದಾಗ ನೆಲದ ಮೇಲೆ ಒಂದಿಷ್ಟು ಜಾಗಕ್ಕೆ ಹುಲ್ಲು ಹರಡಿ ಬೆಂಕಿ ಹಚ್ಚಿ ಸುಟ್ಟು, ಆ ಜಾಗದಲ್ಲಿ ನಾಯಿಗೆ ಅನ್ನದೊಡನೆ ಬೆಲ್ಲ ಕಲೆಸಿ ತಿನ್ನಲು ಹಾಕಿದರೆ ಮುಡ್ಸು ಅಥವಾ ಮೋಡಿ ಮಾಡಿದ ಹಾಗಾಗಿ ನಾಯಿ ಈ ಮನೆ ಬಿಟ್ಟು ಕದಲುವುದಿಲ್ಲ ಎನ್ನುವುದು ಮತ್ತೊಂದು ನಂಬಿಕೆ. ಕೆಲಸದ ಆಳು ಒಂದೇ ಮನೆಗೆ ಕಚ್ಚಿಕೊಂಡು ಹಲವಾರು ವರ್ಷಗಳಿಂದ ಅಲ್ಲಿ ಗೆಯ್ಯುತ್ತಿದ್ದರೆ, 'ಅವನಿಗೆ ಆ ಮನೇಲಿ ನೆಲಸುಟ್ಟು ಅನ್ನ ಹಾಕಿದಾರೆ' ಎಂದು ವ್ಯಂಗ್ಯವಾಡುವುದು ಮಾಮೂಲಿನ ವಿಷಯ. ಮಳೆಯಲ್ಲಿ ತೊಯ್ದು ಬಂದು ಹಬೆಯಾಡುವ ಮೈಯಿನ ಸಿನುಗು ವಾಸನೆಯ ನಾಯಿಗಳು ಬೆಚ್ಚನೆಯ ಆಸರೆ ಬಯಸಿ ಮನೆಯ ಮುಂಚೀಕಡೆಯ ಕುರ್ಚಿಯ ಮೇಲೆ ಕಾಲು ಇಳಿಬಿಟ್ಟುಕೊಂಡು ಕೂತಿರುವವರನ್ನು ಒತ್ತಿಕೊಂಡಂತೆ ನಿಲ್ಲುವುದು, ಮಲಗುವುದು, ನಿನ್ನೆ ಮೊನ್ನೆಯ ಸಂದರ್ಭಗಳಂತೆ ನೆನಪಿನಲ್ಲಿವೆ. ಕಾನಿಗೆ ಮೇಯಲು ಹೋದ ಜಾನುವಾರುಗಳು ಯಾವುದಾದರೊಂದು ಅವಘಡದಿಂದ ಸತ್ತರೆ ಸುತ್ತಮುತ್ತಲ ಊರುಗಳ ಶುನಕ ಸಮೂಹಗಳಿಗೆ ಭರ್ಜರಿ ಹಬ್ಬ. ಪುಳಿಚಾರು ಊಟ ಉಂಡು ಉಂಡು ನಾಲಿಗೆ ರುಚಿ ಕೆಟ್ಟುಹೋದ ನಮ್ಮಂತವರ ಮನೆ ನಾಯಿಗಳು ವಾರಗಟ್ಟಲೆ ಮನೆ ಕಡೆ ಮುಖ ಹಾಕುತ್ತಿರಲಿಲ್ಲ. ಅಜೀರ್ಣವಾಗಿ ಹೊಟ್ಟೆ ಬಿರಿಯುವಷ್ಟು ತಿಂದು ಅವಶೇಷಗಳೆಲ್ಲಾ ಮುಗಿದ ಮೇಲೆ ಮನೆಯ ನೆನಪು ಮಾಡಿಕೊಂಡು ಅವು ಬಂದವೆಂದರೆ ಅಷ್ಟು ದೂರದಲ್ಲಿರುವಾಗಲೇ ಕೊಳೆತ ಮಾಂಸ ತಿಂದುಬಂದ ಅವುಗಳಿಂದ ಗಬ್ಬುನಾತ. 'ಬಡಿಗೆ ತಗೊಳ್ರೋ, ಓಡಿಸ್ರೋ ಅವನ್ನ...' ಎಂದು ಎಲ್ಲರೂ ಬೈಯುವವರೇ. ಹಪ್ಪು ತಿಂದು ಹೊಟ್ಟೆಕೆಟ್ಟ ನಾಯಿಗಳು ಹುಲ್ಲು ತಿಂದು ವಾಂತಿ ಮಾಡಿಕೊಂಡು ಹೊಟ್ಟೆಯನ್ನು ಸರಿಮಾಡಿಕೊಳ್ಳುತ್ತವೆ ಎನ್ನುವುದು ಪ್ರತೀತಿ. ಮನೆ ನಾಯಿಗಳು ಆಟಕ್ಕೋ, ಸಿಟ್ಟಿಗೋ ಕಚ್ಚಿದುವೆಂದರೆ ಮದ್ದು ಮಾಡುವ ಪದ್ಧತಿ ಒಂದು ಕಾಲದಲ್ಲಿ ಇರಲೇಇಲ್ಲ. ಇನ್ನು ಇಂಜೆಕ್ಷನ್ ತೆಗೆದುಕೊಳ್ಳುವ ತಾಪತ್ರಯಕ್ಕೆ ಒಡ್ಡಿಕೊಳ್ಳುವುದು ದೂರದ ಮಾತು. ರೇಬಿಸ್ ಕುರಿತಾದ ಅಜ್ಞಾನ ಹಳ್ಳಿ ಜನರಲ್ಲಿ ಧಾರಾಳವಾಗಿತ್ತು. ಹೊರಚಾಚಿದ ನಾಲಿಗೆಯಿಂದ ಧಾರಾಕಾರ ಜೊಲ್ಲು ಸುರಿಸುತ್ತಾ ಓಡುವ ಹುಚ್ಚು ನಾಯಿಯನ್ನು ಯಾರೋ ಕಂಡದ್ದರ ಕುರಿತಾದ ವದಂತಿ ಆಗ ಈಗ ಹಬ್ಬುತ್ತಿದ್ದರೂ ಅದು ತಮ್ಮಲ್ಲಿನ ಸಾಕು ನಾಯಿಗೋ, ಜಾನುವಾರುಗಳಿಗೋ ಕಚ್ಚಿ ತನ್ಮೂಲಕ ಸ್ವಂತಕ್ಕೆ ಉಂಟಾಗಬಹುದಾದ ಅಪಾಯದ ಕುರಿತು ಜನ ತಲೆ ಹಾಳು ಮಾಡಿಕೊಳ್ಳುತ್ತಿರಲಿಲ್ಲ. ಮಾಧ್ಯಮಗಳ ಪ್ರಭಾವದಿಂದ ತಿಳುವಳಿಕೆ ಹೆಚ್ಚಿದಂತೆ ರೇಬಿಸ್ ಕುರಿತಾದ ಭಯ ಜನರಲ್ಲಿ ಜಾಗೃತವಾಗಿ ನಾಯಿಯಿಂದ ಕಡಿಸಿಕೊಂಡವರು ಇಂಜೆಕ್ಷನ್‌ನ ಮೊರೆ ಹೋಗತೊಡಗಿದ್ದು ಇತ್ತೀಚಿನ ವರ್ಷಗಳಲ್ಲಿ ಸಾಮಾನ್ಯ ಸಂಗತಿಯಾಗಿಬಿಟ್ಟವೆ.

'ಕಚ್ಚಿದ ನಾಯಿಯನ್ನು ಎಂಟೋ, ಹತ್ತೋ ದಿನ ಗಮನಿಸಿ. ನಾಯಿಗೆ ಏನೂ ಆಗದಿದ್ದರೆ ಭಯವಿಲ್ಲ' ಎನ್ನುವ ಹೇಳಿಕೆ ಇದ್ದರೂ ಬೀದಿ ನಾಯಿಗಳ ಹಿಂದೆ ಓಡಾಡಿಕೊಂಡಿರಲು ಸಾಧ್ಯವಿಲ್ಲವಷ್ಟೇ? ಸಾಕು ನಾಯಿಗಳಾದರೆ ಗಮನಿಸಬಹುದು. ಮುದ್ದಿಗೆ ಸಾಕಿರಲಿ, ಮನೆ ಕಾಯಲು ಸಾಕಿರಲಿ ಅಥವಾ ಶೋಕಿಗೆ ಸಾಕಿರಲಿ, ನಮ್ಮಿಂದ ಬೇರೆಯವರಿಗೆ ತೊಂದರೆಯಾಗದಂತೆ ಗಮನವಿಟ್ಟರಬೇಕಾದ್ದು ನಾಯಿ ಸಾಕಿದವರ ಕರ್ತವ್ಯ ಎಂದು ಸಾಕದೆ ಇರುವವರು ಧಾರಾಳವಾಗಿ ಹೇಳಬಹುದೇ ಹೊರತು ಅವರವರ ಕರ್ತವ್ಯ ಪ್ರಜ್ಞೆಯ ಕುರಿತು ಅವರವರಿಗೆ ಕಾಳಜಿ ಇರಬೇಕೆ ವಿನಾ ಇವೆಲ್ಲಾ ಬೇರೆಯವರು ತಿಳಿಸಿಕೊಡುವಂತಾದ್ದಲ್ಲ. ಪೋಸ್ಟ್‌ಮ್ಯಾನ್ ಕಾಗದ ಹಾಕಲು ಮನೆ ಬಾಗಿಲಿಗೆ ಹೋಗುವುದಕ್ಕೂ ಹಿಂಜರಿಯುವಂಥಾ ಪರಿಸ್ಥಿತಿ ಕೆಲವು ಕಡೆಗಳಲ್ಲಿ ಇರುತ್ತದೆ ಎಂದರೆ ಉತ್ಪ್ರೇಕ್ಷೆಯ ಮಾತಲ್ಲ. ಇವೆಲ್ಲಾ ಸಾಕಿದ ನಾಯಿಗಳ ಪುರಾಣವಾಯ್ತು. ಬೀದಿ ನಾಯಿಗಳ ವಿಷಯಕ್ಕೆ ಬಂದರೆ ಅವುಗಳ ಕಾಟ ಅತಿಯಾದಾಗ ನಗರಸಭೆಯವರು ವಿಷ ಇಕ್ಕಿ ಕೊಲ್ಲುವುದೋ, ಊರ ಹೊರಗೆ ವಾಹನದಲ್ಲಿ ತುಂಬಿಕೊಂಡು ಹೋಗಿ ಬಿಟ್ಟುಬರುವುದೋ, ಪರಿಹಾರೋಪಾಯಗಳಾಗಿದ್ದುವು. 'ನಿಮ್ಮ ನಿಮ್ಮ ಸಾಕುನಾಯಿಗಳನ್ನು ಬೀದಿಗೆ ಬಿಡಬೇಡಿ. ಬೀದಿ ನಾಯಿಗಳಿಗೆ ವಿಷ ಹಾಕಿ ಕೊಲ್ಲಲಾಗುತ್ತದೆ' ಎಂದು ಸಾರುತ್ತಿದ್ದ ಕಾಲ ಈಗ ಮುಗಿದುಹೋಗಿದೆ. ವಾಹನದಲ್ಲಿ ತುಂಬಿಕೊಂಡು ಹೋಗಿ ಬಿಟ್ಟುಬರುವುದು ಎಲ್ಲರ ಗಮನಕ್ಕೆ ಬರುವಂತೆ ರಾಜಾರೋಷವಾಗಿ ನಡೆಯದಿದ್ದರೂ ಊರ ಹೊರಗಿನ ಕೆಲ ಬಡಾವಣೆಗಳಲ್ಲಿ ನಾಯಿಗಳ ಸಂತತಿ ನೋಡಿದರೆ ಈ ಕ್ರಮ ಈಗಲೂ ಚಾಲ್ತಿಯಲ್ಲಿದೆಯೇ ಎನ್ನುವ ಅನುಮಾನ ಸಹಜವಾಗಿ ಹುಟ್ಟುತ್ತದೆ. ಬೆಂಗಳೂರಿನ ಹೊರವಲಯದಲ್ಲಿ ಎಕರೆಗಟ್ಟಲೆ ಪ್ರದೇಶದಲ್ಲಿ ಇಂತಹ ಬೀದಿ ನಾಯಿಗಳಿಗಾಗಿ ಒಂದು ನೆಲೆ ಸ್ಥಾಪಿಸುವ ಕುರಿತು ಕೇಳಿದ ಮೇಲೆ ಅವು ಅಂತಲ್ಲಿ ಸತ್ಪಜೆಗಳಂತೆ, ಕ್ಷಮಿಸಿ ಸತ್ ಶುನಕಗಳಂತೆ, ಹೊಂದಿಕೊಂಡು ಬಾಳುವುದರ ಕುರಿತು ನನಗೆ ಗೊಂದಲ ಮೂಡಿದೆ. ಅವುಗಳಲ್ಲಿ ಜಗಳ, ಕದನ, ಕಾದಾಟ, ಕಿತ್ತಾಟಗಳು ಸ್ವಭಾವ ಸಹಜವಾಗಿ ನಡೆಯುವುದಿಲ್ಲವೇ? ಹಾಗೆ ನಡೆಯುವುದಾದಲ್ಲಿ ಅಲ್ಲಿನ ವಾತಾವರಣ ಹೇಗಿರಬಹುದು? ಸಬಲರು ದುರ್ಬಲರನ್ನು ಮೆಟ್ಟಿ ಮುರಿದಾಗ, ಕಿತ್ತು ಹರಿದಾಗ, ಚಿಕಿತ್ಸೆ ನಡೆಸಲು ಎಷ್ಟು ಜನ ಪಶುವೈದ್ಯರು ದುಡಿಯಬೇಕಾಗಬಹುದು? ಅಥವಾ ಪ್ರತಿಯೊಂದಕ್ಕೂ ಪ್ರತ್ಯೇಕ ಪಂಜರದ ವ್ಯವಸ್ಥೆ ಉಂಟೇ? ಅಥವಾ ದಿನನಿತ್ಯ ನೋಡಿದ ಮುಖಗಳನ್ನೇ ನೋಡುತ್ತಾ, ನೋಡುತ್ತಾ ಪರಿಚಿತ ವಲಯದಲ್ಲಿ ಎಲ್ಲವೂ ಕೂಡಿ ಬಾಳುತ್ತಿವೆಯೇ? ಒಮ್ಮೆ ಅಲ್ಲಿಗೆ ಭೇಟಿ ಕೊಟ್ಟು ಪರಿಸ್ಥಿತಿಯನ್ನು ತಿಳಿಯದೆ ಈ ಬಗ್ಗೆ ಊಹಾಪೋಹಕ್ಕೊಳಪಡಿಸುವುದು ಸಜ್ಜನಿಕೆಯಲ್ಲವಾದ್ದರಿಂದ ಈ ಕುರಿತು ಮಾತಾಡಿದ್ದನ್ನು ಕ್ಷಮಿಸಿಬಿಡಿ. ನಾಯಿಗಳ ಸ್ವಭಾವದ ಕುರಿತು ನನಗಿರುವ ಅಲ್ಪಜ್ಞಾನದಿಂದ ಈ ರೀತಿ ತಲೆ ಕೆಡಿಸಿಕೊಂಡಿದ್ದೇನೆ ಅಷ್ಟೆ. ರಾತ್ರಿ ಇನ್ನೇನು ಸುಖವಾಗಿ ನಿದ್ದೆ ಹತ್ತಿತು ಅಂದುಕೊಳ್ಳುವಾಗ ಇವು ಪರಸ್ಪರ ಕುಶಲ ಸಂಭಾಷಣೆ ನಡೆಸತೊಡಗುವುದು ಯಾರ ಅನುಭವಕ್ಕೆ ಬಂದಿಲ್ಲ? ಒಂದು ಬಾಯಿ ತೆಗೆಯಿತು ಅಂದರೆ ಸಾಕು ಸುತ್ತಮುತ್ತಲ ಪ್ರತಿಯೊಂದಕ್ಕೂ ಹುರುಪು ಏರುತ್ತದೆ. ಒಂದರ ಬೊಗಳು ಕೇಳಿಸಿಕೊಂಡ ಮೇಲೂ ಮತ್ತೊಂದು ಬೊಗಳದಿದ್ದರೆ ನಾಯಿಜಾತಿಗೇ ಅವಮಾನ ಅಂದುಕೊಂಡಿರುವುವೇನೋ ಎನ್ನುವಂತೆ ಯಥಾನುಶಕ್ತಿ ಬೊಗಳಿ ಗಂಟಲು ಹರಿದುಕೊಳ್ಳುತ್ತವೆ. ಯಾರಿಗೆ ಗೊತ್ತು ಅವುಗಳ ಭಾಷೆಯಲ್ಲಿ ಅದೇನು ಸಂಭಾಷಣೆ ನಡೆದಿರುತ್ತದೆಯೋ? ನಮ್ಮಂತಹಾ ನರಮನುಷ್ಯರ ಕಣ್ಣಿಗೆ ಗೋಚರಿಸದ ಪ್ರೇತಾತ್ಮಗಳು ನಾಯಿಗಳ ಕಣ್ಣಿಗೆ ಕಾಣಿಸಿಕೊಳ್ಳುತ್ತವೆಯೆಂದೂ, ಈ ಕಾರಣದಿಂದ ಯಾವುದೋ ಒಂದು ದಿಕ್ಕನ್ನು ಗಮನಿಸಿ ನೋಡುತ್ತಾ ಅವು ಬೊಗಳುತ್ತವೆಯೆಂದೂ ಸರಿ ರಾತ್ರಿಯಲ್ಲಿ ಗಂಟಲ ನರ ಹರಿದುಕೊಳ್ಳುವ ನಾಯಿಗಳ ಕುರಿತು ಹಳ್ಳಿಗಳ ಕಡೆ ಹೇಳಿಕೆ



ಉಂಟು. ಪೇಟೆ ಮನೆಗಳಲ್ಲಾದರೆ ಸಹಜವಾಗಿ ಕಳ್ಳರ ಕುರಿತು ಗುಮಾನಿ ಶುರುವಾಗುತ್ತದೆ. ನಿದ್ದೆ ಬರದಿರುವವರು ಕಿಟಕಿ ಕಿಂಡಿಯಲ್ಲಿ ಒಳಗಿನ ಲೈಟು ಹಾಕಿಕೊಳ್ಳದೆ ಇಣುಕಿ ನೋಡುತ್ತಾ ಪತ್ತೇದಾರಿಕೆ ನಡೆಸಲು ಈ ಬೊಗಳಾಟ ಸ್ಫೂರ್ತಿಯಾಗಬಹುದು. ನೆರೆಮನೆಯ ನಾಯಿ ಇಡೀ ರಾತ್ರಿ ಬೊಗಳಿ ನಿದ್ದೆ ಕೆಡಿಸುವ ಕಾರಣದಿಂದ ಪರಸ್ಪರ ವೈರಿಗಳಾದವರೂ ಉಂಟು. ಒದರುವ ಬಾಯಿಗೆ ಕುಕ್ಕೆ ಕಟ್ಟುವುದಕ್ಕಾಗುತ್ತದೆಯೇ ಎನ್ನುವಾಗ ಒಂದು ಗಾದೆ ನೆನಪಾಗುತ್ತದೆ. 'ನಾಯಿ ಬಾಯಿಗೆ ಕೋಲು ಹೆಟ್ಟಿದ ಹಂಗೆ...' ಎನ್ನುವ ಗಾದೆ. ಮೊದಲೇ ವಿಪರೀತ ಮಾತಾಡುವವರನ್ನು ಕೆಣಕಿ ಕೆಣಕಿ ಮಾತನಾಡಿಸಿದರೆ ಹೇಗಾಗುತ್ತದೆ? ನಾಯಿ ಸಹಜವಾಗಿ ಬೊಗಳಿದರೆ ಗಮನ ಕೊಡದೆ ಇರುವವರು ಇರಬಹುದು, ಆದರೆ ಅದು ರಾಗವಾಗಿ ಊಳಿಟ್ಟರೆ? ಅದರಲ್ಲೂ ಆಕಾಶದ ಕಡೆ ತಲೆ ಎತ್ತಿ ಊಳಿಡತೊಡಗಿದರೆ, ಎಂತವರಿಗೂ ದುಶ್ಶಕುನದ ಸೂಚನೆ ಕಾಣತೊಡಗಿ ಎದೆ ನಡುಗುತ್ತದೆ. ಸಾಕುನಾಯಿ ಊಳಿಟ್ಟರೆ ಮನೆ ಮಂದಿ ಕಂಗಾಲಾಗುತ್ತಾರೆ. ಮನೆಯಲ್ಲಿ ಹಾಸಿಗೆ ಹಿಡಿದವರು ಇದ್ದರೆ ಈ ದಿಗಿಲು ನೂರ್ಮಡಿಸುತ್ತದೆ. ನಾಯಿಯ ಊಳು ಅಂದರೆ ಸಾವಿನ ಮುನ್ಸೂಚನೆ. ಜೀವ ಸೆಳೆದೊಯ್ಯಲು ಬಂದ ಯಮಧರ್ಮರಾಯನ ಭಂಟರನ್ನು ಕಂಡು ನಾಯಿ ಹೀಗೆ ಊಳಿಡುತ್ತದೆ ಎನ್ನುವುದು ಹೇಳಿಕೆ. ಬೀದಿ ನಾಯಿ ಊಳಿಟ್ಟರೆ ಅಥವಾ ಅತ್ತಂತೆ ದನಿ ತೆಗೆದರೆ ಯಾರೋ ಪ್ರಮುಖ ವ್ಯಕ್ತಿಗಳಿಗೆ ಕರೆ ಬಂದಿದೆ ಎನ್ನುವ ನಂಬುಗೆ. ಭೂಕಂಪ ಮುಂತಾದ ಸೃಷ್ಟಿ ವಿಕೋಪದ ಸಂದರ್ಭಗಳಲ್ಲಿ ನಾಯಿಗಳು ಹೀಗೆ ಊಳಿಡುತ್ತಾ ಅಸಹಜವಾಗಿ ವರ್ತಿಸುತ್ತಾ, ಗಮನ ಸೆಳೆಯುತ್ತವೆಯೆಂಬುದು ಸಾಬೀತಾಗಿರುವ ಸಂಗತಿ. ಕನ್ಯಾಮಾಸದಲ್ಲಿ ಬೀದಿನಾಯಿಗಳು ಓಡಾಡುವ ನಾಗರಿಕರಿಗೆ ಮುಜುಗರ ಉಂಟುಮಾಡುವುದು ಯಾರ ಗಮನಕ್ಕೆ ಬಂದಿಲ್ಲ? ಹೆಣ್ಣಿಗಾಗಿ ಭಯಂಕರ ಬೀದಿ ಕಾಳಗ, ಗೆದ್ದವರು ಯಾವ ನೈತಿಕತೆಯ ಮುಲಾಜೂ ಇಲ್ಲದೆ ಸಾರ್ವಜನಿಕವಾಗಿ ನಡೆಸುವ ರತಿಕೇಳಿ, 'ಅದ್ಯಾಕೆ ಹಾಗೆ?' ಎಂದು ಪಕ್ಕದಲ್ಲಿರುವ ಅಜ್ಞಾನಿ ಮಗು ಈ ಕ್ರೀಡೆಯನ್ನು ಬಿಟ್ಟ ಕಣ್ಣುಗಳಿಂದ ಗಮನಿಸುತ್ತಾ ಕೇಳಿದರೆ, 'ಭೂಮಿ ಬಾಯ್ಬಿಡಬಾರದೇ?' ಎನ್ನಿಸುವ ಪರಿಸ್ಥಿತಿ. ಈ ಸಮಾಗಮದ ಫಲಶ್ರುತಿಯಾಗಿ ಜನ್ಮ ತಳೆಯುವ ನಾಯಿಮರಿಗಳು ಬೆಳೆದು ದೊಡ್ಡವಾಗುವವರೆಗೆ ರಸ್ತೆಯಲ್ಲಿ ಓಡಾಡುವವರಿಗೆ ಅವುಗಳ ಕಾಟ ತಪ್ಪಿದ್ದಲ್ಲ. ತೊಡರು ಒಡರು ಹೆಜ್ಜೆ ಹಾಕುತ್ತಾ ಕಾಲಸಂದಿಯಲ್ಲಿ ನುಸಿದು ಹಿಂಬಾಲಿಸುವ ಮರಿಗಳು ಎಲ್ಲಿ ಕಾಲಿಗೆ ಬಾಯಿ ಹಾಕುತ್ತವೋ ಎನ್ನುವ ಹೆದರಿಕೆ ಹುಟ್ಟಿಸುತ್ತವೆ.

ನಾಯಿಯ ಬಗ್ಗೆ ಇರುವ ತದ್ವಿರುದ್ಧ ಹೇಳಿಕೆಗಳನ್ನು ನಿಮ್ಮೊಡನೆ ಈ ಸಂದರ್ಭದಲ್ಲಿ ಹಂಚಿಕೊಳ್ಳಬೇಕೆನಿಸುತ್ತಿದೆ. ನಾಯಿ ತಾನಾಗಿ ಮನೆಗೆ ಬಂದು ಸೇರಿಕೊಳ್ಳಬಾರದಂತೆ. ಅದು ಅಶುಭ. ಮೃತ್ಯುಸೂಚಕ. 'ಬೆಕ್ಕು ಬಂದು ಸೇರ್ಕೊಂಡ್ರೆ ಮದುವೆ ಮಾಡಿಸುತ್ತೆ, ನಾಯಿ ಬಂದು ಸೇರ್ಕೊಂಡ್ರೆ ಬೊಜ್ಜ ಮಾಡಿಸುತ್ತೆ' ಅನ್ನುವುದು ಹೇಳಿಕೆ. ತಮಾಷೆ ಅಂದರೆ ಮನೆಯಲ್ಲಿ ಸಾಕಿಕೊಂಡಿರುವ ನಾಯಿ, ಬೆಕ್ಕುಗಳ ಕುರಿತಾಗಿ ಜನ ವಿರುದ್ಧದ ಮಾತಾಡುತ್ತಾರೆ. ನಾಯಿ 'ಮನೆಯಲ್ಲಿ ಮತ್ತಷ್ಟು ಮಕ್ಕಳು ಹೆಚ್ಚಲಿ, ನೆಕ್ಕಲು ಮತ್ತಷ್ಟು ಎಂಜಲು ಬಾಳೆಲೆಗಳು ಸಿಕ್ಕಲಿ' ಎಂದು ಹಾರೈಸುತ್ತದೆಯಂತೆ. ಬೆಕ್ಕು, 'ಮನೆಯಲ್ಲಿ ಮಕ್ಕಳು ಸಾಯಲಿ, ಕುಡಿಯಲು ಹೆಚ್ಚಿಗೆ ಹಾಲು ಸಿಕ್ಕುತ್ತೆ', ಎಂದು ಹಪಗುಟ್ಟುತ್ತದೆಯಂತೆ. ಮಾತಾಡಲು ಬಾರದ ಪ್ರಾಣಿಗಳ ಮನಸ್ಸಿನಲ್ಲೇನಿದೆಯೆಂದು ಮನುಷ್ಯ ಇಷ್ಟು ನಿಖರವಾಗಿ ಕಂಡುಹಿಡಿಯಬಲ್ಲನಾಗಿದ್ದರೆ ಅವನನ್ನು ಹಿಡಿಯುವವರು ಯಾರಿದ್ದರು? ನಾಲಿಗೆ ಹೇಗೂ ತಿರುಗುತ್ತದೆ, ಅಲ್ಲವೇ? ಹೇಳಿಕೆ ಮಾತುಗಳು ಏನೇ ಇರಲಿ, ವಿವಿಧ ಜಾತಿಯ ನಾಯಿಗಳನ್ನು ಹೆಮ್ಮೆಯಿಂದ ಸಾಕಿಕೊಂಡು ಮಕ್ಕಳಿಗಿಂತಾ ಹೆಚ್ಚಾಗಿ ಅವುಗಳ ಪಾಲನೆ ಮಾಡುತ್ತಾ ಅವುಗಳಲ್ಲಿ ಜೀವ ಇಟ್ಟುಕೊಂಡವರು ಲೆಕ್ಕವಿಲ್ಲದಷ್ಟು ಮಂದಿ. ಶ್ವಾನ ಪ್ರದರ್ಶನಗಳು, ಬಹುಮಾನ ವಿಜೇತ ಶ್ವಾನಗಳೊಂದಿಗೆ ಪಾಲಕರು ಹಿಗ್ಗಿನಿಂದ ತೆಗೆಸಿಕೊಂಡ ಪಟಗಳು, ಪತ್ರಿಕೆಗಳಲ್ಲಿ, ದೂರದರ್ಶನಗಳಲ್ಲಿ ಪ್ರಸಾರವಾಗುತ್ತಿರುತ್ತವೆ. ಅವುಗಳ ಬಾಲ, ಕೂದಲು ಕತ್ತರಿಸಿ ಬಣ್ಣ ಬಳಿದು ತಮ್ಮ ತಮ್ಮ ಮನೋಸ್ಥಿತಿಗೆ ತಕ್ಕಂತೆ ಅವುಗಳ ಬಾಹ್ಯ ರೂಪುರೇಷೆಗಳನ್ನು ಬದಲಿಸುವುದು ಇವತ್ತಿನ ದಿನಗಳಲ್ಲಿ ಸಾಮಾನ್ಯದ ಸಂಗತಿ. ಚಳಿ ತಡೆಯಲೆಂದು ರಷ್ಯಾದಲ್ಲಿ ಅವುಗಳಿಗೆ ವಿಶೇಷ ರೀತಿಯ ಬೂಟು ಹೊಲಿಸಿ ಜೋಪಾನ ಮಾಡಿದ್ದರ ಕುರಿತು ಓದಿದ್ದೇನೆ. ಪೂರ್ವಜನ್ಮದ ಪುಣ್ಯ ವಿಶೇಷದಿಂದೆಂಬಂತೆ ಕೆಲ ನಾಯಿಗಳು ರಾಜೋಪಚಾರ ಪಡೆಯುತ್ತಾ ಸುಖದ ಸುಪ್ಪತ್ತಿಗೆಯಲ್ಲಿ ಲೋಲಾಡುತ್ತಿರುತ್ತವೆ. ಅವುಗಳಿಗಾಗಿಯೇ ವಿಶೇಷ ಆಹಾರ, ವಿಶೇಷ ವಿಹಾರ, ಪ್ರತ್ಯೇಕ ಪರಿಚಾರಕ, ಶುಶ್ರೂಷಕ, 'ನಾಯಿ ಜನ್ಮ' ಎಂದು ತಾತ್ಸಾರದ ಮಾತಾಡುವುದು ಎಷ್ಟು ತಪ್ಪು ಕಲ್ಪನೆ ಅನಿಸುವುದಿಲ್ಲವೇ? ತಮ್ಮ ಅಪಾರ ಆಸ್ತಿಯನ್ನು ತಮ್ಮ ಬಳಿಕ ತಮ್ಮ ಮುದ್ದಿನ ನಾಯಿಯ ಹೆಸರಿಗೆ ವಿಲ್ ಮಾಡಿಡುವ ಅತಿರೇಕದ ಶ್ವಾನಪ್ರಿಯರು ಪಾಶ್ಚಿಮಾತ್ಯರಲ್ಲಿದ್ದಾರೆ. ಅಮೇರಿಕೆಯಲ್ಲಿ ನಾಯಿಯೊಂದನ್ನೇ ಮನೆಯಲ್ಲಿ ಒಂಟಿಯಾಗಿ ಬಿಟ್ಟು ಹೋಗುವುದು ಅಪರಾಧ. ಒಂದೋ ಜೊತೆಗೆ ಅಥವಾ ರಕ್ಷಕರ ಸುಪರ್ದಿನಲ್ಲಿ, ಎರಡರಲ್ಲೊಂದು ಅನಿವಾರ್ಯ. ನಾಯಿಗಳ ದಂಡು ಸಾಕಿಕೊಂಡು ಅವುಗಳ ಸಹವಾಸದಲ್ಲಿ ತೃಪ್ತಿ ಕಂಡುಕೊಳ್ಳುವವರು ನಮ್ಮಲ್ಲಿ ಅನೇಕರಿದ್ದಾರೆ. ಮನುಷ್ಯರ ಸಹವಾಸಕ್ಕಿಂತಾ ಕೃತಜ್ಞತೆಗೆ ಮತ್ತೊಂದು ಹೆಸರು ಎಂದು ಗುರ್ತಿಸಿಕೊಂಡಿರುವ ನಾಯಿಗಳ ಸಹವಾಸ ಅವರಿಗೆ ಪ್ರಿಯವಾಗಿದ್ದರೆ ಅಚ್ಚರಿಯೇನಲ್ಲ. ಎಲ್ಲಾ ಅವರವರ ಮನೋಧರ್ಮಕ್ಕೆ ಸಂಬಂಧಪಟ್ಟಿದ್ದು. ಪೊಲೀಸ್ ಇಲಾಖೆಯ ಸುಪರ್ದಿನಲ್ಲಿರುವ ವಿಶೇಷ ತರಬೇತಿ ಪಡೆದ ಶ್ವಾನಗಳು ದರೋಡೆಕೋರರ, ಕೊಲೆಗಡುಕರ ಸುಳಿವು ಪತ್ತೆ ಹಚ್ಚುವಲ್ಲಿ ನೆರವಾಗುವುದು ಎಲ್ಲರೂ ಬಲ್ಲ ಸಂಗತಿ. ಅಡಗಿಸಿಟ್ಟ ಬಾಂಬುಗಳ ಪತ್ತೆ ಹಚ್ಚುವಿಕೆಯಲ್ಲೂ ಶ್ವಾನಗಳ ಸೇವೆ ಅನಿವಾರ್ಯ. ತೀಕ್ಷ್ಣ ಶಬ್ದಗ್ರಹಣ ಶಕ್ತಿ ವಾಸನಾಗ್ರಹಣ ಶಕ್ತಿಯ ನಾಯಿಗಳು ಬೇಟೆಯ ಮೋಜು, ಸ್ವಾತಂತ್ರ್ಯ ಇದ್ದ ಹಳೆಗಾಲದಲ್ಲಿ ಬೇಟೆಗಾರರ ಮತ್ತೊಂದು ಪ್ರಾಣದಂತಿರುತ್ತಿದ್ದುವು ಎನ್ನುವುದನ್ನು ಬೇಟೆಯ ವರ್ಣನೆ ಇರುವ ಪುಸ್ತಕಗಳು ಮನದಟ್ಟು ಮಾಡಿಕೊಡುತ್ತವೆ. ವ್ಯವಹಾರ ಜಗತ್ತಿನಲ್ಲಿ ಶ್ವಾನಗಳು ಚಲಾವಣೆಯಾಗುತ್ತಿರುವ ಕೊನೆಯದೊಂದು ಉದಾಹರಣೆಯೊಂದಿಗೆ ಶ್ವಾನಪುರಾಣ ಮುಗಿಸುತ್ತೇನೆ. ಉತ್ತಮ ತಳಿಯ ಒಂದು ಜೋಡಿ ಶ್ವಾನಗಳನ್ನು ಸಾಕಿಕೊಂಡು ಅವುಗಳಿಗೆ ಹುಟ್ಟುವ ಮರಿಗಳನ್ನು ಶ್ವಾನಪ್ರಿಯರಿಗೆ ಮಾರಿ ಹಣ ಎಣಿಸಿಕೊಳ್ಳುವ ದಂಧೆಯ ಕುರಿತು ಕೇಳಿದ್ದೀರಾ? ಎಲ್ಲಿಯವರೆಗೆ ಜಾತಿ ನಾಯಿಗಳಿಗೆ ಬೇಡಿಕೆ ಇರುತ್ತದೆಯೋ ಅಲ್ಲಿಯವರೆಗೆ ಈ ವ್ಯವಹಾರದಲ್ಲಿ ನಷ್ಟದ ಭಯವಿಲ್ಲ ಮತ್ತು ಶ್ವಾನಪ್ರಿಯರು ಇರುವವರೆಗೆ ಈ ಬೇಡಿಕೆ ಕುಗ್ಗುವುದೂ ಇಲ್ಲ.

**ವಸುಮತಿ ಉಡುಪ**
'ಗೌರಿ', ೪ನೇ ಕ್ರಾಸ್, ಗಾಂಧಿನಗರ 'ಎ' ಬ್ಲಾಕ್
ಶಿವಮೊಗ್ಗ - ೫೭೭ ೨೦೧

# ಕರ್ನಾಟಕದ ಸಾಂಸ್ಕೃತಿಕ ಕಿರು ಪತ್ರಿಕೆಗಳು

# ಒಂದು ನೋಟ

ಪಿ. ಚಂದ್ರಿಕಾ

**ಈ** ಪತ್ರಿಕೆಗಳಿಗೆ ಒಂದು ಕಛೇರಿಯಿಲ್ಲ, ವ್ಯವಸ್ಥಿತವಾದ ಸಿಬ್ಬಂದಿ ವರ್ಗವಿಲ್ಲ, ಸಾವಿರಾರು ರೂಪಾಯಿಗಳ ವ್ಯವಹಾರವಿಲ್ಲ. ಮನೆಯೇ ಕಛೇರಿ, ಒಬ್ಬರೋ ಇಬ್ಬರೋ ಸಂಪಾದಕರನ್ನು ಸೇರಿಕೊಂಡಂತೆ ಮನೆಯವರೇ ಆ ಪತ್ರಿಕೆಯ ಎಲ್ಲವನ್ನು ನೋಡಿಕೊಳ್ಳುತ್ತಾರೆ. ಲೇಖನ ಬರೆಯಲು ಕೇಳುವುದರಿಂದ ಹಿಡಿದು ಪತ್ರಿಕೆಯನ್ನು ಪ್ಯಾಕ್ ಮಾಡಿ, ಅಂಚೆ ಚೀಟಿ ಅಂಟಿಸಿ, ದಾರ ಕಟ್ಟಿ, ವಿಳಾಸ ಬರೆದು ಅಂಚೆ ಡಬ್ಬದಲ್ಲಿ ಹಾಕುವವರೆವಿಗೂ ಅದೆಂತಹ ಅದಮ್ಯತೆ! ಅದೆಂತಹ ಅನುಭವ, ಪ್ರತಿ ಸಂಚಿಕೆಯ ನಂತರ ಅದ್ಭುತವಾದ ನಿರಾಳತೆ.

ಇದು ಎಲ್ಲಾ ಸಾಂಸ್ಕೃತಿಕ ಕಿರು ಪತ್ರಿಕೆಗಳು ರೂಪು ಪಡೆಯುವುದರ ಹಿಂದಿರುವ ಅನುಭವಗಳಾಗಿವೆ. ಈ ಪತ್ರಿಕೆಗಳು ಪ್ರಸಾರದ ಸಂಖ್ಯೆಯಲ್ಲಿ ಕಡಿಮೆಯಿರಬಹುದು, ಅನಿಯತವಿರಬಹುದು, ಬಿಸಿಬಿಸಿ ಚರ್ಚೆಗಳಿಗೆ ಗ್ರಾಸವನ್ನೊದಗಿಸದಿರಬಹುದು. ಆದರೆ ಒಂದೊಂದು ಪುಟವೂ ಅನನ್ಯ ಸಾಕಾರ ರೂಪ. ನೂರಾರು ದಿನಗಳ ವರೆವಿಗೆ ಚರ್ಚೆಯನ್ನು, ಸಂವಾದವನ್ನು ಚಾಲ್ತಿಯಲ್ಲಿಡಬಲ್ಲ, ತಣ್ಣಗಿದ್ದುಕೊಂಡೇ ಮನಸ್ಸಿನ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನು ಹೊರತಂದು ಚರ್ಚೆಗೆ ಅನುವು ಮಾಡಿಕೊಡುತ್ತಾ ಸಾಂಸ್ಕೃತಿಕ ಚಹರೆಯನ್ನು ರೂಪಿಸುವಲ್ಲಿ ಈ ಪತ್ರಿಕೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಇಂತಹ ಪತ್ರಿಕೆಗಳು ಮೊದಲ ಸಂಚಿಕೆಯಿಂದ ಕೊನೆಯ ಸಂಚಿಕೆಯವರೆವಿಗೂ ತಮ್ಮ ವೈಯಕ್ತಿಕ ಸಂಗ್ರಹದಲ್ಲಿದೆ ಎನ್ನುವುದನ್ನು ಹೆಮ್ಮೆಯ ಸಂಗತಿಯಾಗಿಯೇ ಗಣಿಸಲಾಗುತ್ತಿದೆ. ಪ್ರತಿಯೊಬ್ಬ ಗಂಭೀರ ಓದುಗನೂ ಇಂತಹ ಪತ್ರಿಕೆಯ ಸಂಗ್ರಹಕ್ಕಾಗಿ ಹಂಬಲಿಸುವುದು ಬರಿಯ ಹೆಮ್ಮೆಯ ಕಾರಣಕ್ಕಾಗಿ ಅಲ್ಲ, ಅಂತಹದ್ದೊಂದು ಗಂಭೀರ ಸಾಂಸ್ಕೃತಿಕ ವಿಷಯವು ಅವರಲ್ಲಿ ಅಡಕವಾಗಿರುವುದಕ್ಕಾಗಿ.

ಬದಲಾಗುತ್ತಿರುವ ಕನ್ನಡದ ಪರಿಸರ ಮತ್ತು ಅದಕ್ಕೆ ಸ್ಪಂದಿಸುವ ವಿಶಿಷ್ಟ ಮನಃಸ್ಥಿತಿಯನ್ನು ರೂಪಿಸುವ ಕೆಲಸವನ್ನು ಕನ್ನಡದ ಸಾಂಸ್ಕೃತಿಕ ಕಿರು ಪತ್ರಿಕೆಗಳು ಮಾಡುತ್ತಲೇ ಬರುತ್ತಿವೆ. ಬದಲಾಗುವ ಅಲೆಗಳಿಗೆ ತಮ್ಮನ್ನು ತಾವು ಒಡ್ಡಿಕೊಳ್ಳುತ್ತ ಉಳಿದು ಬರುವ ಮತ್ತು ವೃತ್ತಿಪರತೆಯಲ್ಲಿ ಮತ್ತಷ್ಟು ಎತ್ತರವನ್ನು ಸಾಧಿಸುವ ಆಶಯವನ್ನು ಹೊಂದಿರುವ ವೃತ್ತಪತ್ರಿಕೆಗಳು ಮತ್ತು ಟ್ಯಾಬ್ಲೋಯ್ಡ್‌ಗಳಂತಲ್ಲದ ಸಾಂಸ್ಕೃತಿಕ ಕಿರು ಪತ್ರಿಕೆಗಳಿಗೆ ಭಿನ್ನವಾದ, ಗಟ್ಟಿಯಾದ ತಾತ್ವಿಕ ತಳಹದಿ ಮತ್ತು ಸ್ಪಷ್ಟ ನಿಲುವುಗಳೂ ಇವೆ.

ಆಧುನಿಕ ಕನ್ನಡ ಸಾಹಿತ್ಯದ ಜೊತೆ ಜೊತೆಗೇ ಬೆಳೆದು ಬಂದ ಈ ಪತ್ರಿಕೆಗಳು ಆಯಾಕಾಲದ ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳಿಗೆ ಮುಖ್ಯವಾಹಿನಿಯಾಗಿದ್ದವು. 'ಪ್ರಬುದ್ಧ ಕರ್ನಾಟಕ', 'ಜೀವನ'ದಂತಹ ಪತ್ರಿಕೆಗಳಲ್ಲಿ ಸಾಹಿತ್ಯ ಸಂಸ್ಕೃತಿಯ ಜೊತೆಗೆ ರಾಜಕೀಯ ವಿಚಾರ ವಿಮರ್ಶೆಯೂ ಇರುತ್ತಿತ್ತು. ನಂತರ ಕಾಲದಲ್ಲಿ ಹೊಸ ಚಳುವಳಿಗಳು, ಮುಖ್ಯ ತತ್ತ್ವವಾದಗಳು, ವಿಚಾರಧಾರೆಗಳು ಕನ್ನಡಕ್ಕೆ ಬಂದಂತೆಲ್ಲಾ ಅವುಗಳನ್ನು ಸಮರ್ಥಿಸುವ, ಬೆಳೆಸುವ ಮುಖ್ಯ ಭೂಮಿಕೆಯಾಗಿ ಈ ಪತ್ರಿಕೆಗಳು ಕೆಲಸ ಮಾಡಿದವು. ಯಾವತ್ತಿಗೂ ಸಾಹಿತ್ಯವನ್ನು ಸಂಸ್ಕೃತಿಯ ಬಹುದೊಡ್ಡ ಅಂಶವೆಂದೇ ಭಾವಿಸಲಾಗಿದೆ. ಸಾಹಿತ್ಯಕ ವಿಚಾರವನ್ನೇ ಪ್ರಧಾನವಾಗಿಸಿಕೊಂಡು ಈ ಬಗೆಯ ಪತ್ರಿಕೆಗಳು ರೂಪುಗೊಂಡವು.

ಈ ಹೊತ್ತು ಸಾಂಸ್ಕೃತಿಕ ಕಿರು ಪತ್ರಿಕೆಗಳು ಎಂದು ಮಾತನಾಡುವಾಗ ನಮ್ಮ ಮುಂದೆ ಮುಖ್ಯವಾಗಿ ಎರಡು ಮಾದರಿಗಳು ಕಾಣಸಿಕೊಳ್ಳುತ್ತಿವೆ.

**ಮೊದಲ ಮಾದರಿ**: ಸಾಹಿತ್ಯವನ್ನೇ ಕೇಂದ್ರವಾಗಿರಿಸಿಕೊಂಡು ಪ್ರಕಟವಾಗುತ್ತಿರುವುದು. ಈ ಬಗೆಯ ಪತ್ರಿಕೆಗಳು ಕಥೆ, ಕವನ, ವಿಮರ್ಶಾತ್ಮಕ, ವೈಚಾರಿಕ ಬರಹಗಳನ್ನು ಒಳಗೊಂಡ ಸಂಚಿಕೆಗಳಾಗಿರುತ್ತವೆ. ಅಲ್ಲೊಂದು ಇಲ್ಲೊಂದು ವಿಶೇಷ ಸಂಚಿಕೆಗಳ ರೂಪದಲ್ಲೋ, ರಾಜಕೀಯ, ಆರ್ಥಿಕತೆಗಳ ಪರಿಣಾಮ, ಸಾಮಾಜಿಕ ಸಮಸ್ಯೆಗಳ ಕುರಿತಂತೆ ಕೆಲವು ಲೇಖನಗಳನ್ನು ಪ್ರಕಟಪಡಿಸುತ್ತಿವೆ.

**ಎರಡನೆಯ ಮಾದರಿ**: ಹಿಂದೆ ಸಾಹಿತ್ಯ ಮತ್ತು ಇತರ ಜ್ಞಾನಶಿಸ್ತುಗಳನ್ನು ಬೇರೆ ಬೇರೆಯಾಗಿಯೇ ನೋಡಲಾಗುತ್ತಿತ್ತು. ಈಗ ಪರಿಸ್ಥಿತಿ ಬದಲಾಗಿದೆ. ಪತ್ರಿಕೆಗಳ ವೈಚಾರಿಕ ಆಕೃತಿ ಬದಲಾಗುತ್ತಿರುವುದಕ್ಕೆ ಮುಖ್ಯ ಕಾರಣ ಸಾಹಿತ್ಯ ಮತ್ತು ಇತರ ಮಾನವಿಕಗಳನ್ನು ಒಟ್ಟಿಗೆ ನೋಡುತ್ತಿರುವುದು. ಸಾಹಿತ್ಯ ಇತರ ಮಾನವಿಕಗಳನ್ನು ಒಂದು ಆಕರವನ್ನಾಗಿ ನೋಡುವಂತೆ ಇತರ ಮಾನವಿಕಗಳೂ ಸಾಹಿತ್ಯವನ್ನು ಒಂದು ಆಕರವಾಗಿ ನೋಡುತ್ತಿವೆ. ಅನುಭವ ಮತ್ತು ಅಭಿವ್ಯಕ್ತಿ, ಸಾಮಾಜಿಕ ಸಮಸ್ಯೆ/ಹೋರಾಟ, ವೈಜ್ಞಾನಿಕತೆ, ಶಾಸ್ತ್ರವಿಚಾರ, ಕಲಾಮಾಧ್ಯಮ ಎಲ್ಲವನ್ನು ಎರಡನೆಯ ಮಾದರಿ ಪತ್ರಿಕೆಗಳು ಗಂಭೀರ ಮತ್ತು ಸಮಾನವಾಗಿ ನೋಡುತ್ತಿವೆ. ಕನ್ನಡದಲ್ಲಿ ಬಹಳ ಹಿಂದೆಯೇ 'ಪುಸ್ತಕ ಪ್ರಪಂಚ'ದಂತಹ ಒಂದು ಮಾದರಿ ಇತ್ತಾದರೂ ಅಷ್ಟೇನೂ ಪರಿಚಿತ ಎನ್ನಿಸಿರಲಿಲ್ಲ. ಆದರೆ ಈಚೆಗೆ ಈ ಮಾದರಿ ಹೆಚ್ಚು ಪ್ರಸ್ತುತವೆನ್ನಿಸುತ್ತಿದೆ

# ಬದುಕಿನಲ್ಲಿ ಯಶಸ್ಸನ್ನು ಬಯಸುವ ಪ್ರತಿಯೊಬ್ಬರಿಗೂ ದಾರಿದೀಪವಾಗಬಲ್ಲ
# ಪುಸ್ತಕಗಳು



ಅಮೆರಿಕದ ಪ್ರಖ್ಯಾತ ಲೇಖಕ **ನೆಪೋಲಿಯನ್ ಹಿಲ್** ಅವರ

## ಸಿರಿತನಕ್ಕೆ ಹದಿಮೂರೇ ಹೆಜ್ಜೆ!

Think and Grow Rich

**ಬೆಲೆ : ರೂ. 95/-**

**ಕನ್ನಡಕ್ಕೆ : ಜಯಕೃಷ್ಣ ಟಿ. ಎನ್.**

ಐಶ್ವರ್ಯ ಸಿರಿವಂತಿಕೆ ಮಾತ್ರವಲ್ಲ, ಯಾವುದೇ ಬಗೆಯ ಸಿರಿವಂತಿಕೆ ಸಾಧಿಸಬೇಕಾದರೆ ಏನು ಮಾಡಬೇಕು, ಹೇಗೆ ಮಾಡಬೇಕು ? ನಿಮ್ಮ ಪ್ರಶ್ನೆಗೆ ಉತ್ತರ ನೀಡುತ್ತದೆ ಈ ಪುಸ್ತಕ.

ವಿಶ್ವವಿಖ್ಯಾತ ಲೇಖಕ **ಡೇಲ್ ಕಾರ್ನೆಗಿ** ಅವರ

## ಚಿಂತೆ ಬಿಡಿ; ಹೊಸ ಬದುಕು ಆರಂಭಿಸಿ !



How to Stop Worrying and Start Living

**ಬೆಲೆ : ರೂ. 125/-**

**ಕನ್ನಡಕ್ಕೆ : ಜಯಕೃಷ್ಣ ಟಿ. ಎನ್.**

ಚಿಂತೆಯೆಂಬುದು ಒಂದು ದುಶ್ಚಟ ! ಅದನ್ನು ತೊಲಗಿಸಿ ಬದುಕಿನಲ್ಲಿ ಸುಖ, ಶಾಂತಿ, ನೆಮ್ಮದಿ ಕಾಣಬೇಕಾದರೆ ಏನು ಮಾಡಬೇಕು? ನಮ್ಮ ಮನೋಭಾವ, ಕಾರ್ಯಶೈಲಿಗಳನ್ನು ಹೇಗೆ ಬದಲಾಯಿಸಿಕೊಳ್ಳಬೇಕು? - ಇಂಥ ಪ್ರಶ್ನೆಗಳಿಗೆಲ್ಲ ಉತ್ತರ ನೀಡುತ್ತದೆ ಈ ಪುಸ್ತಕ.



**ಡಾ|| ಪಟ್ಟಾಭಿರಾಮ್** ಅವರ

## ಜೀನಿಯಸ್ ನೀವು ಕೂಡ.....

**ಬೆಲೆ : ರೂ. 60/-**

**ಕನ್ನಡಕ್ಕೆ : ಎಂ. ಎಲ್. ರಾಘವೇಂದ್ರರಾವ್**

ಹುಟ್ಟಿನಿಂದಲೇ ಯಾರೂ ಜೀನಿಯಸ್ ಅಲ್ಲ. ಸ್ವಯಂಪ್ರೇರಣೆ, ಸಾಧನೆಯಿಂದ ಯಾರಾದರೂ ಜೀನಿಯಸ್ ಆಗಬಹುದು. ಅದು ಹೇಗೆಂಬುದನ್ನು ವಿವರಿಸುತ್ತದೆ ಈ ಪುಸ್ತಕ.

**ಡಾ|| ಪಟ್ಟಾಭಿರಾಮ್** ಅವರ

## ಗೆಲುವು ನಿಮ್ಮದೇ



**ಬೆಲೆ : ರೂ. 125/-**

**ಕನ್ನಡಕ್ಕೆ : ಎಂ. ಎಲ್. ರಾಘವೇಂದ್ರರಾವ್**

ಗೆಲುವು-ಯಶಸ್ಸು ಎಲ್ಲರ ಕನಸು. ಅದನ್ನು ನನಸಾಗಿಸಿ ಕೊಳ್ಳುವ ಹಾದಿಯಲ್ಲಿ ವ್ಯಕ್ತಿಗೆ ಯೋಜನೆ-ಗುರಿ-ನಿರ್ದೇಶನ ಅಗತ್ಯ... ಈ ನಿಟ್ಟಿನಲ್ಲಿ ಅಮೂಲ್ಯ ಸಲಹೆ-ಸೂಚನೆಗಳನ್ನು ನೀಡುತ್ತದೆ ಈ ಪುಸ್ತಕ.

ವಿಶ್ವವಿಖ್ಯಾತ ಲೇಖಕ **ಡೇಲ್ ಕಾರ್ನೆಗಿ** ಅವರ

## ಯಶಸ್ವಿ ಬದುಕಿಗೆ ರಾಜಮಾರ್ಗ



How to Win Friends & Influence People

**ಬೆಲೆ : ರೂ. 95/-**

**ಕನ್ನಡಕ್ಕೆ : ಜಯಕೃಷ್ಣ ಟಿ. ಎನ್.**

ನಮ್ಮ ದೈನಂದಿನ ಬದುಕಿನಲ್ಲಿ ನಮಗೆದುರಾಗುವ ಚಿತ್ರವಿಚಿತ್ರ ಜನರೊಂದಿಗೆ ವ್ಯವಹರಿಸುವುದೆಂದರೆ ಸುಲಭದ ಮಾತಲ್ಲ ! ನಿಜಕ್ಕೂ ಅದೊಂದು ಅದ್ಭುತ ಕಲೆಯೇ ಸರಿ ! ಆ ಕಲೆಯಲ್ಲಿ ಪರಿಣತನಾದವನು ಎಲ್ಲರ ಪ್ರೀತಿ - ಆದರ - ಅಭಿಮಾನಕ್ಕೆ ಪಾತ್ರನಾಗುತ್ತಾನೆ; ಪ್ರಚಂಡ ಯಶಸ್ಸು ಕಾಣುತ್ತಾನೆ. ಅಂಥ ಕಲೆಯನ್ನು ಸಿದ್ಧಿಸಿಕೊಳ್ಳುವುದು ಹೇಗೆ ಎಂಬುದನ್ನು ಸಾದ್ಯಂತವಾಗಿ ತಿಳಿಸಿಕೊಡುತ್ತದೆ ಈ ಪುಸ್ತಕ.



**ಟಿ. ಎಸ್. ರಾವ್** ಅವರ

## ಮೆಮೊರಿ ಪವರ್

**ಬೆಲೆ : ರೂ. 60/-**

**ಕನ್ನಡಕ್ಕೆ : ಎಂ. ಎಲ್. ರಾಘವೇಂದ್ರರಾವ್**

ಜ್ಞಾಪಕಶಕ್ತಿಯನ್ನು ಯಾವ ರೀತಿ ಅಭಿವೃದ್ಧಿಪಡಿಸಿ ಕೊಳ್ಳುವುದು ? ಜ್ಞಾಪಕಶಕ್ತಿಗೆ ಅಡೆತಡೆಗಳ್ಯಾವುವು ? ಅವುಗಳನ್ನು ಎದುರಿಸುವುದು ಹೇಗೆ ? ತಿಳಿಯಪಡಿಸುವ ಉಪಯುಕ್ತ ಪುಸ್ತಕ.

**ಡಾ|| ಜಗನ್ಮೋಹನ್** ಅವರ

## ಓ... ಮನುಷ್ಯ ! ಪ್ಲೀಸ್ ರಿಲ್ಯಾಕ್ಸ್



**ಬೆಲೆ : ರೂ. 60/-**

**ಕನ್ನಡಕ್ಕೆ : ಎಂ. ಎಲ್. ರಾಘವೇಂದ್ರರಾವ್**

ದೈನಂದಿನ ಜೀವನದಲ್ಲಿ ಸಾಮಾನ್ಯ ವ್ಯಕ್ತಿ ಅನುಭವಿಸುವ ಶಾರೀರಿಕ ಮಾನಸಿಕ ಒತ್ತಡಗಳಿಂದ ಉಪಶಮನ ಪಡೆಯುವ ದಾರಿಗಳು ಅನೇಕ. ಸಾಮಾನ್ಯ ವ್ಯಕ್ತಿಗಳನ್ನು ದೃಷ್ಟಿಯಲ್ಲಿಟ್ಟು ಕೊಂಡು ಬಹಳ ಅಮೂಲ್ಯವಾದ, ಶಾಸ್ತ್ರೀಯವಾದ, ಅತ್ಯಂತ ಸರಳವಾಗಿ ನಿರ್ವಹಿಸಬಹುದಾದ ಪ್ರಕ್ರಿಯೆಗಳನ್ನು ಇಲ್ಲಿ ವಿವರಿಸಲಾಗಿದೆ.

ಪ್ರಕಾಶಕರು



**ವಾಸನ್ ಪಬ್ಲಿಕೇಷನ್ಸ್**

25, ವಾಸನ್ ಟವರ್ಸ್, ಡಾ|| ಟಿ. ಸಿ. ಎಂ. ರಾಯನ್ ರಸ್ತೆ

ಬೆಂಗಳೂರು - 560 053 ದೂರವಾಣಿ : 080-6705679

ಈ ಪುಸ್ತಕಗಳು ಎಲ್ಲ ಪ್ರಮುಖ ಪುಸ್ತಕ ಮಾರಾಟಗಾರರಲ್ಲಿ ಹಾಗೂ ನವಕರ್ನಾಟಕ ಪ್ರಕಾಶನದ ಮಳಿಗೆ ಮತ್ತು ಪ್ರದರ್ಶನಗಳಲ್ಲಿ ಲಭ್ಯ.

ಮತ್ತು ಅರ್ಥವಂತಿಕೆಯನ್ನು ಪಡೆದುಕೊಳ್ಳುತ್ತಿದೆ. ಪ್ರತಿಯೊಂದು ಸಂಚಿಕೆಯಲ್ಲೂ ವಿಭಿನ್ನ ವಿಷಯ/ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡುವ, ತಾತ್ವಿಕತೆಯ ನಿರ್ದಿಷ್ಟತೆಗಿಂತ ವಿಷಯವೊಂದರ ಆಮೂಲಾಗ್ರ ಪರಿಶೀಲನೆಯ ಉದ್ದೇಶ ಈಗ ಹೆಚ್ಚು ಮುಖ್ಯವೆನ್ನಿಸಿದೆ.

ಮೊದಲ ಮಾದರಿಯ ಪತ್ರಿಕೆಗಳಿಗೆ ಈಗಾಗಲೇ ಹೇಳಿದಂತೆ ಒಂದು ಪರಂಪರೆ ಇದೆ. ಜೀವನ, ಪ್ರಬುದ್ಧ ಕರ್ನಾಟಕ, ಶೂದ್ರ, ಅಂಕಣ, ಸಂವಾದ, ಸಂಕ್ರಮಣ, ಸಂಕಲನ, ಅನ್ವೇಷಣೆ, ಸಂಚಯ ಹೀಗೆ ಹಲವಾರು ಪತ್ರಿಕೆಗಳು ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ಸಂಚಲನೆಯನ್ನು ತಂದಂತಹವು. ಪ್ರತಿಯೊಂದು ಸಂಚಿಕೆಯೂ ನಿರ್ದಿಷ್ಟವಾದ ಆಕೃತಿಯನ್ನು, ಉದ್ದೇಶವನ್ನು ಹೊಂದಿದಂತಹವು. ಆಯಾ ಕಾಲಘಟ್ಟದ ವಿಚಾರಗಳಿಗೆ ವೇದಿಕೆಯನ್ನು ಒದಗಿಸುತ್ತಲೇ ತಮ್ಮ ಪ್ರಯೋಗಶೀಲತೆಯನ್ನು ಮೆರೆದವು. ಕೃತಿಯೊಂದನ್ನು ಗಂಭೀರವಾಗಿ ನೋಡಲು ಯತ್ನಿಸುತ್ತಿದ್ದ ಈ ಪತ್ರಿಕೆಗಳು ಸಾಹಿತ್ಯವನ್ನು ನಮ್ಮ ಜೀವನದ ಬಹುಮುಖ್ಯ ಅಂಶವನ್ನಾಗಿ ನೋಡಿದವು. ಕೃತಿಯೊಂದರ/ಕವಿಯೊಬ್ಬನ ಬಗ್ಗೆ ದೀರ್ಘವಾದ ಚರ್ಚೆಯನ್ನು ಮಾಡುವುದರೊಂದಿಗೆ ಅದನ್ನು ಮುಂದುವರಿಸಲು ಯತ್ನಿಸಿದವು. ಚಳುವಳಿಯ ಹೊಸ ಚಿಂತನೆಯ ಸಮರ್ಥ ಬಿಂಬವನ್ನು ಆಯಾ ಕಾಲಘಟ್ಟದಲ್ಲಿ ಕಟ್ಟಿಕೊಡುತ್ತಾ ಬಂದಿರುವ ಈ ಪತ್ರಿಕೆಗಳು ಹೊಸ ಬರಹಗಾರರಿಗೆ/ವಿಚಾರಗಳಿಗೆ ಒಂದು ವೇದಿಕೆಯನ್ನೊದಗಿಸಿದವು. ಗಂಭೀರ ಬರಹಗಾರನೊಬ್ಬನಿಗೆ ಇಂತಹ ಪತ್ರಿಕೆಗಳಲ್ಲಿ ತನ್ನ ಕವನವೋ, ಕತೆಯೋ, ಲೇಖನವೋ ಪ್ರಕಟವಾಗುವುದು ಮುಖ್ಯವಾದ ಸಂಗತಿಯೇ ಆಗಿತ್ತು. ಅದರಲ್ಲಿ ಬರುವ ವಿಮರ್ಶೆಯಾಗಲಿ, ಲೇಖನವಾಗಲಿ ಅಷ್ಟೇ ಗಂಭೀರವೂ, ಗಹನವೂ ಆಗಿರುತ್ತಿದ್ದವು. ಬದಲಾಗುತ್ತಿರುವ ಓದುಗ ವಲಯದ ಅಭಿರುಚಿಯನ್ನು ರೂಪಿಸುವಲ್ಲಿ ಈ ಪತ್ರಿಕೆಗಳದ್ದು ಮಹತ್ವದ ಪಾತ್ರ. ಬರಹಗಾರರು ಹೆಚ್ಚಿದಂತೆಲ್ಲಾ ಬರವಣಿಗೆಯ ಸತ್ವಶೀಲತೆಯನ್ನು, ಗುಣಮಟ್ಟವನ್ನು ಕಾಯ್ದುಕೊಳ್ಳಬೇಕಾದ ಜವಾಬ್ದಾರಿ ಈ ಪತ್ರಿಕೆಗಳ ಮೇಲಿದೆ. ಕೆಲವು ಪತ್ರಿಕೆಗಳು ಸೋಲುವುದು ಇಲ್ಲಿಯೇ. ಹೊಸಬರಿಗೆ ಅವಕಾಶ ಕೊಡುವ ಆತುರದಲ್ಲಿ ಗುಣಮಟ್ಟವನ್ನು ಲೆಕ್ಕಿಸದೆ ಹೊಸಬರು ಬರೆದದ್ದೆಲ್ಲಾ ಪ್ರಕಟಿಸುವುದರಿಂದ ಗಂಭೀರ ಓದು ಮತ್ತು ಬರವಣಿಗೆಯೇ ಕಡಿಮೆಯಾಗುತ್ತಿದೆ. ಆದರೆ ಈ ನಿಟ್ಟಿನಲ್ಲೂ ತುಂಬಾ ಜವಾಬ್ದಾರಿಯಿಂದ ಕೆಲಸ ನಿರ್ವಹಿಸಿದ ಅನೇಕ ಉದಾಹರಣೆಗಳು ಇವೆ. ರುಜುವಾತು, ಮನ್ವಂತರ, ಶೂದ್ರ, ಸಂಕ್ರಮಣ, ಅಂಕಣ ಇತ್ಯಾದಿಗಳು ತಮ್ಮ ಕಾಲದ ಧ್ವನಿಗಳೇ ಆಗಿದ್ದು ಆಯಾ ಕಾಲಘಟ್ಟದ ಹೊಸ ಚಿಂತನೆ ಚಳುವಳಿಗಳಿಗೆ ತಾತ್ವಿಕವಾದ ಬುನಾದಿಯನ್ನು ಒದಗಿಸಿಕೊಟ್ಟಿದ್ದವೂ ಕೂಡಾ. ಲೇಖಕನೊಬ್ಬನ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದವು.

ಇದೇ ಪರಂಪರೆಯ ಮುಂದುವರಿದ ಭಾಗವಾಗಿ ಸಾಹಿತ್ಯವನ್ನು ಕೇಂದ್ರವಾಗಿಸಿಕೊಂಡು ಬರುತ್ತಿರುವ ಪತ್ರಿಕೆಗಳು ಕಾಣುತ್ತಿವೆ (ಆಲೋಚನೆ, ಅನಂತ, ಗಾಂಧಿ ಬಜಾರ್, ಸಂಚಯ, ಸಂಕಲನ ಮೊದಲಾದವು ಈ ನಿಟ್ಟಿನಲ್ಲಿ ಗಮನಿಸಲೇಬೇಕಾದ ಪತ್ರಿಕೆಗಳು.). ಈ ಪತ್ರಿಕೆಗಳಿಗೆ ಈಗಾಗಲೇ ಹೇಳಿದಂತೆ ಒಂದು ಸಿದ್ಧ ಮಾದರಿ ಇದ್ದು, ಸಮಕಾಲೀನ ಸಾಹಿತ್ಯದ ವಿವಿಧ ನೆಲೆಗಳಲ್ಲಿ ಸೃಜನಶೀಲವಾದ ಚಿಂತನೆಯ ಮುಖಗಳು ತೆರೆದಿಡುವುದು ಈ ಪತ್ರಿಕೆಗಳ ಮುಖ್ಯ ಉದ್ದೇಶ. ಸಂವೇದನಾಶೀಲವಾದ ಕಥೆ, ಕವನ, ವಿಮರ್ಶೆಗಳು ಭಾಗಶಃ ಇಲ್ಲಿನ ಮುಖ್ಯ ಅಂಶಗಳು. ಹಿಂದಿನ ಸಾಹಿತ್ಯ ಪತ್ರಿಕೆಗಳು ಬಹಳ ಮುಖ್ಯ ಅನ್ನಿಸುವುದು ಚಳುವಳಿಗಳೊಂದಿಗೆ ತತ್ತ್ವವಾದಗಳೊಂದಿಗೆ ನಿಕಟವಾದ ಸಂಪರ್ಕವನ್ನು ಏರ್ಪಡಿಸಿಕೊಂಡಿದ್ದರಿಂದ. ಈ ಹೊತ್ತು ಚಳುವಳಿಗಳು ಅಪ್ರಸ್ತುತವಾಗಿವೆ. ವೈಯಕ್ತಿಕ ನೆಲೆಯ ಹುಡುಕಾಟ ಮತ್ತು ಮೌಲ್ಯಗಳು ಮುಖ್ಯವಾಗುತ್ತಿವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಪತ್ರಿಕೆಗಳು ಹೊಸಕಾಲದ ಹೊಸತನಕ್ಕಾಗಿ ಹಂಬಲಿಸುತ್ತಿರುವುದರಿಂದಲೇ ಆಗೊಮ್ಮೆ ಈಗೊಮ್ಮೆ ವಿಶೇಷ ಸಂಚಿಕೆಗಳನ್ನು ಪ್ರಕಟಿಸುತ್ತಿವೆ. ಹೊಸ ಅರ್ಥಗಳ ಶೋಧಕ್ಕಾಗಿ ತುಡಿಯುತ್ತಿವೆ.

ವೃತ್ತ ಪತ್ರಿಕೆಗಳಲ್ಲಿ ಕಾವ್ಯ, ಕತೆ ಮತ್ತು ವಿಮರ್ಶೆಗಳಿಗೆ ಅದರದ್ದೇ ಆದ ನಿರ್ದಿಷ್ಟ ಸ್ವರೂಪವಿರುತ್ತದೆ. ಅಂತಹುದನ್ನು ಮಾತ್ರವೇ ಅವು ಪ್ರಕಟಿಸುತ್ತಾ ಬರುತ್ತಿವೆ. ಹೊಸ ಬಗೆಯ ಪ್ರಯೋಗಗಳಿಗೆ ಸಾಹಿತ್ಯ ಪತ್ರಿಕೆಗಳೇ ಸರಿಯಾದ್ದು ಎಂಬ ಭಾವನೆ ಈಗಲೂ

## ಮೊರ

ಕೇರುವ ಮೊರವಿದು, ಮೊರೆಯನು ಕೇಳದು
ಮರುಳುವುದೆಲ್ಲ ದವಸ-ಧಾನ್ಯ
ಕಾಲದುಮಿಲಿನಲಿ, ಕೊಯಿಲ ಕತೆಗಳಿವೆ
ನಿರರ್ಥಕ ವಿಹ್ವಲ, ವ್ಯಥೆಯ ರಾಶಿಧ್ಯಾನ

ಬೀಜ-ಬೇರು ಕತ್ತಲೆಯನುಣ್ಣದಲೇ
ಕೊಂಬೆಗೆ ಎಲ್ಲಿ ಬೆಳಕು-ಬಿಸಿಲು
ಮೊಳಕೆ-ಚಿಗುರು, ಹಸಿರೆಲೆಯ ಹಚ್ಚನೆಯು
ಬಾಗಿಲಕೆ, ಬಾಗಿ, ಮಾಗಿ, ತಳಿರು
ಇಡೀ ಹಗಲು ಬಿಡಿಗಾಳನ್ನೆಕ್ಕುತಲಿ, ಸಂಜೆ
ಮರಳಿ ಕೊಡುತಿಹವು ಹಕ್ಕಿ ಗುಟುಕು
ತೊನೆವ ತೆನೆಯನಗಲದಲೇ ಎಲ್ಲಿ
ತಾರೆಗಳ ನೀಲ ಸೀಮೆ ಎಟುಕು ?

ಒಂದೊಂದು ಮರಕೂ ಒಂದೊಂದು ಭಂಗಿ
ಅಂಗೀಕೃತ ಅನಂಗ ಸಾರ-ಸರಸ
ಪಕಳೆ ಬಾಡುವುದು, ಹಣ್ಣು ಕೊಳೆಯುವುದು
ಜೈವಿಕ ಜೀವ ಜಾಲ ವಿರಸ
ಸಮರಸವೇ ಜೀವನವು ವರಕವಿತ್ವದಡಿ



ತರು-ಮರಕೆ ತರ-ತಮದ ಬಾಳು-ಬದುಕು
ಮುಳ್ಳು ಬ್ಯಾಲೆಯಲೆ ಹಲೆ ಎತ್ತಿ ಕತ್ತಾಳೆ,
ಮೆದು ಹೊಲದ ಬದುವುಗುಂಟ ಬೇಕು

ಜೀವದ್ದಣ್ಣುವಿಕೆ, ಭಾವದುಣ್ಣುವಿಕೆ
ಬೆಂದಂತೆ ದ್ವಿದಳ ಬೇಳೆ-ಕಾಳು
ಕದನ ನೀಲೆಯಲೂ ಹದುಳವೆನುವರಕೆ
ನೀ ಮೆದುಳ ಮೀರಿ ಬಾಳು
ಬಾನು-ಬುವಿಯ ನಡು-ನಡುವೆ ತೂಗುವುದು
ಬಿಳಲ ಜೋಕಾಲಿ ಜೀವಗತಿಗೆ
ತೊಲೆ, ಕಂಬ, ನಂಬಿ ತಲೆಗೊಟ್ಟು ನಿಲ್ಲುವವು
ಗೆಲ್ಲುಗಳ ಗಹನ ಕಾಲಖತಿಗೆ

ಕೇರಿ, ಒನೆದು, ನೆನೆಯಿಟ್ಟು ತೊಳೆದು
ಬೀಸಿ, ರುಬ್ಬಿ, ರುಚಿಸಿ
ಸುಟ್ಟು-ಬೆಂದು, ಕಡುಕಷ್ಟ ನೊಂದು
ಲಟ್ಟಿಸುತ ಸ್ಪಷ್ಟ ಕೃತಿಯ ರಚಿಸಿ,
ಮುಗಿಲ ಮುತ್ತೈದೆಗುಡಿ ತುಂಬಿ, ಬಾಗಿನವ
ಎತ್ತಿಹುದು ಬುವಿಯ ಮೊರವು
ದಟ್ಟ ಕಾಡಿಗೆಗೆ ಪುಟ್ಟ ಕನ್ನಡಿಯ ಅಲುಕು,
ರಕ್ತ-ಕುಂಕುಮದ ಬೊಟ್ಟಿಗಿನ್ನೆಷ್ಟು ಹಸಿರ, ಹಣೆಯ,
ಹರಹು ?

ಆನಂದ ಝುಂಜರವಾಡ
'ಸ್ನೇಹದೀಪ', ಆನಂದನಗರ, ಮುಧೋಳ - ೫೮೭ ೩೧೩ ಬಾಗಲಕ

ಇದೆಯಾದರೂ ಈಚೆಗೆ ಬರೆಯುತ್ತಿರುವವರಲ್ಲಿ ಹೊಸ ಆಲೋಚನೆಗಳು, ಸಾಹಿತ್ಯದ ಹೊಸ ಪ್ರಯೋಗಗಳು ಕಡಿಮೆಯಾದಂತೆ ಕಾಣುತ್ತಿವೆ. ಇದೊಂದು ಬಗೆಯ ಸೃಜನಶೀಲ ಜಡತ್ವವೇ ಎಂಬ ಅನುಮಾನ ಹುಟ್ಟಿಸುವಷ್ಟು ಪ್ರಯೋಗಶೀಲತೆ ಇಲ್ಲವಾಗುತ್ತಿದೆ. ಇದು ಸಾಹಿತ್ಯ ಪತ್ರಿಕೆಗಳಿಗೆ ನೇರವಾಗಿ ಸಂಬಂಧಿಸಿದ್ದಲ್ಲದಿದ್ದರೂ ಇದರಿಂದಾಗಿ ಸಾಹಿತ್ಯ ಪತ್ರಿಕೆಗಳ ಶ್ರೀಮಂತಿಕೆಗೆ ಕೊರತೆಯುಂಟಾಗಿದೆ.

ವೃತ್ತ ಪತ್ರಿಕೆಗಳ ವಿಮರ್ಶೆಯಂತೆ ಕಿರು ಪತ್ರಿಕೆಗಳ ವಿಮರ್ಶೆಯೂ ವೈಯಕ್ತಿಕ ಅಭಿಪ್ರಾಯ, ಮೇಲು ಮೇಲಿನ ಓದಿನ ಪ್ರತಿಕ್ರಿಯೆಯ ಮಟ್ಟಕ್ಕೆ ನಿಂತುಬಿಟ್ಟಿದೆ. ಓದಿನ ಆಳ ಮತ್ತು ಗಹನತೆಗಳೆರಡರಲ್ಲೂ ನಮ್ಮನ್ನು ನಾವು ತೊಡಗಿಸಿಕೊಳ್ಳದ ಹೊರತು ಒಳ್ಳೆಯ ವಿಮರ್ಶೆ ಸಾಧ್ಯವೇ ಇಲ್ಲ. ಹೊಸ ನೆಲೆಗಳ ಶೋಧಕ್ಕೆ ಮನಸ್ಸನ್ನು ತೆರೆದು ತೋರಿದ ಸಾಹಿತ್ಯ ಪತ್ರಿಕೆಗಳ ಇತಿಹಾಸದಿಂದ ಕಲಿಯಬೇಕಿರುವುದು ಬಹಳಷ್ಟಿದೆ. ಬದುಕಿನ ಬಗೆಗಿನ ಬದ್ಧತೆ ಮತ್ತು ಕೃತಿಯೊಂದರ ಓದಿನ ಬಗೆಗಿನ ಬದ್ಧತೆ ಎರಡೂ ಈ ಹೊತ್ತಿಗೆ ಮುಖ್ಯವೇ.

* * *

ಓದುಗರು ಬದಲಾಗುತ್ತಿದ್ದಾರೆಯೇ? ಅಥವಾ ಬದಲಾಗುತ್ತಿರುವ ಪರಿಸ್ಥಿತಿಗೆ ಓದುಗ ಪ್ರತಿಕ್ರಿಯಿಸುತ್ತಿದ್ದಾನೆಯೆ ಎಂಬುದು ಕುತೂಹಲಕಾರಿ ಅಂಶ. ಈ ಹೊತ್ತು ಸಾಂಸ್ಕೃತಿಕ ಜ್ಞಾನಶಾಖೆಗಳನ್ನು ಪ್ರಧಾನವಾಗಿಸಿಕೊಂಡ ಎರಡನೇ ಮಾದರಿ ಪತ್ರಿಕೆಗಳು ಬಹುಮುಖ್ಯವಾಗಿದ್ದು, ಆ ಮೂಲಕ ಹೊಸತಿನ ಕಡೆಗೆ ಹಂಬಲ, ಸೆಳೆತ ಉಂಟಾಗುತ್ತಿದೆ. ತುಂಬಾ ಪ್ರಸ್ತುತವಾದ ವಿಷಯವೊಂದರ ಮೇಲೆ ಅನೇಕ ನೆಲೆಗಳ ಚಿಂತನೆಯನ್ನು ಒಂದು ಕಡೆ ಸೇರಿಸಿಕೊಡುವುದು ಈ ಪತ್ರಿಕೆಗಳ ಮುಖ್ಯ ಉದ್ದೇಶ. ಬಹುಮುಖ್ಯವಾದ ಸಾಂಸ್ಕೃತಿಕ ಸ್ತರವೊಂದನ್ನು ಎತ್ತಿ ತೋರುತ್ತ ಅದರ ಸೂಕ್ಷ್ಮ ಅಂಶಗಳನ್ನು ಶೋಧಿಸುವ ಮೂಲಕವೇ ಹೊಸಬಗೆಯ ಚರ್ಚೆಗೆ ವೇದಿಕೆಯನ್ನು ಸಾಧ್ಯವಾಗಿಸುವುದು ಈ ಪತ್ರಿಕೆಗಳಿಗೆ ಸಾಧ್ಯ. ಕಲಾತ್ಮಕ ಪ್ರಜ್ಞೆಯೇ ಪ್ರಧಾನವಾಗದೆ ಗಟ್ಟಿಯಾದ ತಾತ್ವಿಕ ತಳಹದಿ ಮತ್ತು ವೈಚಾರಿಕ ನೆಲೆಗಟ್ಟಿನ ಮೇಲೆ ಇವು ರೂಪುಗೊಳ್ಳುತ್ತಿವೆ.

ಕಥೆ, ಕಾದಂಬರಿ, ಕವಿತೆಗಳ ಓದಿಗಿಂತ ವೈಚಾರಿಕ, ತಾತ್ವಿಕ ಬರಹಗಳೆಡೆಗೆ ಈ ಹೊತ್ತಿನ ಓದುಗನ ತುಡಿತವಿದೆಯೆ ಎಂಬುದು ಯೋಚಿಸಲೇಬೇಕಾದ ವಿಚಾರ. ವೈಚಾರಿಕ ಪತ್ರಿಕೆಗಳಿಗೆ ಓದುಗ ಮತ್ತು ಲೇಖಕರು ಹೆಚ್ಚು ಪ್ರತಿಸ್ಪಂದಿಸುತ್ತಿರುವುದೇ ಸೃಜನಶೀಲ ಪಠ್ಯಗಳಿಗಿಂತ ವೈಚಾರಿಕ ಆಕರಗಳ ಆಕರ್ಷಣೆಗೆ ಒಳಗಾಗುತ್ತಿರುವುದನ್ನು ತೋರುತ್ತಿದೆ. ಜಾಗತೀಕರಣದ ಪರಿಣಾಮವಾದ ವ್ಯಾಪಾರ ನೀತಿಗಳು, ಇಂದು ನಮ್ಮ ಬದುಕಿನ ಕ್ರಮಗಳನ್ನೇ ಬದಲಾಯಿಸುತ್ತಿವೆ. ಆಯ್ಕೆಗಳ್ಯಾವುದೂ ನಮ್ಮದಲ್ಲ, ನಮ್ಮ ಮೇಲೆ ಹೇರಲ್ಪಟ್ಟಿರುವಂತಹದ್ದು ಎನ್ನುವ ಅರಿವು ನಮ್ಮಲ್ಲಿ ಜಾಗೃತವಾಗಿದೆ. ನಮ್ಮನ್ನು ನಾವು ರಕ್ಷಿಸಿಕೊಳ್ಳಬೇಕಾಗಿರುವ ಜರೂರಿನತ್ತ ನಮ್ಮ ತುಡಿತ ಹೆಚ್ಚಾಗುತ್ತಿದೆ. ಈ ಹೊತ್ತಿನಲ್ಲಿ ಸಾಂಸ್ಕೃತಿಕ ಅರ್ಥವಂತಿಕೆಗೆ ಬೇರೆ ನೆಲೆಗಳು ಗೋಚರವಾಗುತ್ತಿವೆ. ಚಿಂತನಶೀಲವಾದ ಓದಿನ ಮಗ್ಗುಲುಗಳು ಇಲ್ಲಿ ಮುಖ್ಯ. ಇಂತಹ ಪ್ರಯತ್ನವನ್ನು ಕನ್ನಡದಲ್ಲಿ 'ಕನ್ನಡ ಅಧ್ಯಯನ', 'ಮಹಿಳಾ ಅಧ್ಯಯನ', 'ಅಚಲ', 'ಮಾನಸ', 'ಅಭಿನವ', 'ಮುಕ್ತ ಸಮಾಜವಾದಿ ಮಾತುಕತೆ', 'ಮಾತುಕತೆ', ಕರ್ನಾಟಕಲೋಚನ', 'ಸಂವಾದ' ಮೊದಲಾದವು ಮಾಡುತ್ತಿವೆ.

ಇಂದು ಜ್ಞಾನದ ಕಲ್ಪನೆಯೇ ಬದಲಾಗುತ್ತಿದೆ. ಶುದ್ಧಜ್ಞಾನವೆನ್ನುವುದು ಒಂದು ಹುಸಿ ಕಲ್ಪನೆಯಾಗಿ ಕಾಣುತ್ತಿದೆ. ಏಕೆಂದರೆ ಎಲ್ಲದಕ್ಕೂ ಸಾಮಾಜಿಕ-ಆರ್ಥಿಕ ಸಂಬಂಧಗಳು ಮುಖ್ಯವಾಗುತ್ತಿವೆ. 'ಶುದ್ಧಜ್ಞಾನ' ಎನ್ನುವುದು ಪ್ರಯೋಗಾಲಯಗಳಲ್ಲಿ ಮಾತ್ರ ಸಾಧ್ಯ ಎನ್ನುವುದು ಸರ್ವವಿದಿತವಾದ ಅಂಶವಾಗಿದೆ. ನಾವು ಆಧುನಿಕರಾಗುತ್ತಿದ್ದೇವೆ. ನಮ್ಮ ಆಲೋಚನೆಗಳಲ್ಲೂ ಆಧುನಿಕತೆಯ ಛಾಳು ಎದ್ದು ಕಾಣುತ್ತಿದೆ. ಸಂಸ್ಕೃತಿಗೂ ಆಧುನಿಕತೆಗೂ ಇರುವ ದ್ವಂದ್ವ ತುಂಬಾ ಬೇರೆಯ ಬಗೆಯದ್ದು. ಪೂಜಾಚರಣೆಗಳನ್ನು ಸಂಪೂರ್ಣವಾಗಿ ವಿರೋಧಿಸಿ ಆ ಆಚರಣೆಯ ಅಂಗವಾದ ನೃತ್ಯಗಳನ್ನು ಮಾತ್ರ ಒಪ್ಪಿಕೊಳ್ಳುವಂತಹ ವಿಚಾರವಂತಿಕೆಯನ್ನು ಬೆಳೆಸಿಕೊಳ್ಳುತ್ತಿದ್ದೇವೆ. ಇದನ್ನೇ ಸಂಸ್ಕೃತಿ ಎಂತಲೂ ಕರೆದುಬಿಡುತ್ತೇವೆ. ಇಂತಹ ಸಂದರ್ಭದಲ್ಲಿ ಸಾಂಸ್ಕೃತಿಕ ಪತ್ರಿಕೆಗಳ ಜವಾಬ್ದಾರಿ ಎಂತಹದ್ದಿರಬೇಕು ಎಂಬ ಚರ್ಚೆಯೂ ಮುಖ್ಯವಾದ್ದೆ.

ಇಂತಹ ಸಾಂಸ್ಕೃತಿಕ ಕಿರು ಪತ್ರಿಕೆಗಳು ಸೃಜನಶೀಲತೆಯ ಅರ್ಥ ಪರಿಕಲ್ಪನೆಯನ್ನು ಬದಲಿಸುತ್ತಿವೆ. ಹೊಸಬಗೆಯ ಚಿಂತನೆ, ನೋಟಗಳ ಮೂಲಕ ಸೃಜನಶೀಲತೆಯ ವ್ಯಾಪ್ತಿ ಹೆಚ್ಚು ವಿಸ್ತೃತವಾಗುತ್ತಿದೆ. ವಿಷಯಗಳ ಮತ್ತು ಚಿಂತನೆಯಲ್ಲಿನ ವೈವಿಧ್ಯತೆಗಳು ವಿಶ್ವ ವರ್ತಮಾನದತ್ತ ಮುಖ ಮಾಡಿದಂತೆ ನಮ್ಮತನದ ಬಗ್ಗೆಯೂ ಚಿಂತಿಸುವಂತೆ ಮಾಡುತ್ತಿವೆ. ಮುಖ್ಯವಾಹಿನಿ ಪತ್ರಿಕೆಗಳಲ್ಲಿ ಪ್ರಕಟವಾಗದ ಲೇಖನಗಳು ಸಾಂಸ್ಕೃತಿಕ ಕಿರು ಪತ್ರಿಕೆಗಳಲ್ಲಿ ಪ್ರಕಟವಾಗುತ್ತವೆ ಎನ್ನುವ ನಿರ್ಧಾರಿತ ಮನಃಸ್ಥಿತಿಯನ್ನು ಈ ಪತ್ರಿಕೆಗಳು ಸ್ವಲ್ಪಮಟ್ಟಿಗೆ ಬದಲಿಸುತ್ತಿವೆ. ವಿಚಾರ ಶ್ರೀಮಂತಿಕೆ ಮತ್ತು ಚಿಂತನಾಪರತೆಯಿಂದಾಗಿ ಕನ್ನಡದ ಗಂಭೀರ ಬರಹಗಾರರನ್ನು ಇವು ಆಕರ್ಷಿಸುತ್ತಿವೆ. ಸಂಪಾದಕೀಯ ವರ್ಗದಲ್ಲೂ ಅಂತಹದ್ದೊಂದು ಬದ್ಧತೆ ಕಾಣುತ್ತಿದೆ. ಇದಕ್ಕಾಗಿಯೇ ಲೇಖನಗಳನ್ನು ಬರೆಸುವ ಮತ್ತು ಇಂತಹ ಪತ್ರಿಕೆಗಳಲ್ಲಿ ಮಾತ್ರವೇ ಬರೆಯುವವರ ಸಂಖ್ಯೆ ನಿಗದಿತವಾಗಿ ಇದ್ದೇ ಇದೆ.

ಇಂಗ್ಲಿಷ್‌ನ ಕಿರು ಪತ್ರಿಕೆಗಳ ಇತಿಹಾಸ ಬಹಳ ಉಜ್ವಲವಾಗಿಯೇ ಕಾಣುತ್ತದೆ. ಸಣ್ಣ ಪತ್ರಿಕೆಗಳಲ್ಲಿ ಬಂದಂತಹ ಲೇಖನಗಳನ್ನು ಮುಖ್ಯವಾಹಿನಿ ಪತ್ರಿಕೆಗಳು ಬಳಸಿಕೊಳ್ಳುತ್ತವೆ. ಅಲ್ಲಿ ಅಂತಹ ಪ್ರಭಾವಶಾಲಿ ಮಾಧ್ಯಮವಾಗಿ ಕಿರು ಪತ್ರಿಕೆಗಳು ಬೆಳೆದುನಿಂತಿವೆ. ಕನ್ನಡದ ಮಟ್ಟಿಗೂ ಇದು ಸಾಧ್ಯವಾಗುವುದಾದರೆ ನಿಜಕ್ಕೂ ಕಿರು ಪತ್ರಿಕೆಗಳ ಇತಿಹಾಸದಲ್ಲಿ ಅದೊಂದು ಮೈಲಿಗಲ್ಲಾಗುತ್ತದೆ.

ಈ ಬಗೆಯ ಸಂಚಿಕೆಗಳ ಮುಖ್ಯ ಮಿತಿ ಎಂದರೆ ವಿಚಾರಗಳನ್ನು ವಿಚಾರಗಳನ್ನಾಗೇ ಓದುಗನಿಗೆ ತಲುಪಿಸುವಲ್ಲಿ ಇರುವ ತೊಡಕು. ಬರವಣಿಗೆಯಲ್ಲಿನ ಲವಲವಿಕೆ ಇಲ್ಲದೇ ಹೋದರೆ ಎಂತಹ ಗಹನವಾದ ವಿಚಾರವಾದರೂ ಅದು ಓದುಗನನ್ನು ತಲುಪದೇ ಹೋಗಬಹುದು. ಅದೇ ಅಲ್ಲದೆ ಓದುಗನ ಮೇಲೆ ಬೌದ್ಧಿಕತೆಯ ಹೆಸರಿನಲ್ಲಿ ವಿಚಾರವಂತಿಕೆಯನ್ನು ಹೇರುತ್ತಾ ಹೋಗುವುದು. ಇಂತಹ ಅಪಾಯವನ್ನು ದಾಟುವ ನಿಟ್ಟಿನಲ್ಲಿ ಹೇಳುವುದನ್ನು ಸರಳವಾಗಿ, ನೇರವಾಗಿ ಹೇಳುವತ್ತ ಈ ಬಗೆಯ ಪತ್ರಿಕೆಗಳು ಕೆಲಸ ಸಾಧಿಸಬೇಕಾಗಿದೆ ಮತ್ತು ಇತಿಹಾಸದ ಸಂಚಲಿತ ಪ್ರಕ್ರಿಯೆಗೆ ಪ್ರತಿಕ್ರಿಯೆಯಾಗಿ ಹೆಚ್ಚು ಸಮಾಜಮುಖಿಯಾಗಬೇಕಾಗಿದೆ.

* * *

ಒಟ್ಟಾರೆ ಸಾಂಸ್ಕೃತಿಕ ಕಿರು ಪತ್ರಿಕೆಗಳ ಪ್ರಸ್ತುತತೆ ಮತ್ತು ನಿರಂತರತೆ ಇವುಗಳಲ್ಲಿ ಆಸಕ್ತಿ ಉಳಿದು ಬರುವಂತೆ ಮಾಡುತ್ತಿವೆ. ಉದ್ದಿಮೆಶೀಲ ಗುಣವಿಲ್ಲದಿರುವುದರಿಂದ ಇವುಗಳ ವಿಚಾರವಂತಿಕೆ ವೃತ್ತಪತ್ರಿಕೆಗಳಂತೆ ವಿಚಾರ ಸ್ವಾತಂತ್ರ್ಯದ ಜೊತೆ ಜೊತೆಗೇ ವೈರುಧ್ಯದ ಜಾಹಿರಾತುಗಳನ್ನು ನೀಡುವುದರ ಮೂಲಕ ಉಂಟಾಗಬಹುದಾದ ದ್ವಂದ್ವದಿಂದ ದೂರ ಉಳಿದಿದೆ. ಓದುಗರ ಸಂಖ್ಯೆಯನ್ನು ಹೆಚ್ಚಿಸಬೇಕು – ಅದಕ್ಕಾಗಿ ಬಹುಜನ ಬಯಸುವ ಸರಕನ್ನು ನೀಡಬೇಕು ಎನ್ನುವ ವ್ಯಾಪಾರೀ ನೀತಿಯಾಗಲೀ ಹಣ ಸಂಪಾದನೆಯ ಗುರಿಯಾಗಲೀ ಇಲ್ಲದಿರುವುದರಿಂದ ನಿಯಮಿತ ಓದುಗ ಸಂಖ್ಯೆಯನ್ನು ಗಮನದಲ್ಲಿರಿಸಿಕೊಂಡೇ ರೂಪಿಸುವ ಈ ಪತ್ರಿಕೆಗಳು ವಿಚಾರವಂತಿಕೆಯ ಪೊಳ್ಳುತನವನ್ನು ಮೀರುತ್ತವೆ. ಈ ಕಾರಣಕ್ಕಾಗಿಯೇ ಸದಾಕಾಲಕ್ಕೂ ಪ್ರಸ್ತುತವಾಗಿ ಇರುತ್ತವೆ. ತನಗಿರುವ ಸೀಮಿತ ಚಂದಾದಾರರ ಮಧ್ಯೆಯೂ ಜೀವಂತಿಕೆಯನ್ನು ಕಾಪಾಡುತ್ತದೆ.

ಈ ಕಿರು ಪತ್ರಿಕೆಗಳು ಜಾಗತೀಕರಣದ ಪ್ರವಾಹದಲ್ಲಿ ಕೊಚ್ಚಿಹೋಗುವಂತಹದ್ದಲ್ಲ ಅಥವಾ ಜಾಗತೀಕರಣದ ಬಿಸಿಯಲ್ಲಿ ತನ್ನ ಸ್ವರೂಪವನ್ನು ಬದಲಿಸಿಕೊಳ್ಳುವುದೂ ಇಲ್ಲ. ವಿಶ್ವವಿದ್ಯಮಾನಕ್ಕೆ ತನ್ನದೇ ವಿಶಿಷ್ಟ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾ ಉಳಿದುಬರುತ್ತಿದೆ. ಈ ನಿಟ್ಟಿನಲ್ಲಿ ಮುದ್ರಣ ತಂತ್ರಜ್ಞಾನವೂ ಹೆಚ್ಚು ಪ್ರಭಾವಿಸಿದಂತೆ ಕಾಣುತ್ತಿಲ್ಲ. ಈ ಬಗೆಯ ಪತ್ರಿಕೆಗಳ ತುರ್ತು ಮತ್ತು ಅಗತ್ಯಗಳು ಬೇರೆ ಬಗೆಯದ್ದೇ ಆದ್ದರಿಂದ ಪತ್ರಿಕೆಯ ಹೊರ ರೂಪದ ಕಡೆಗೆ ಹೆಚ್ಚು ಗಮನ ಕೊಟ್ಟಂತೆ ಕಾಣುವುದಿಲ್ಲ. ಈ ಪತ್ರಿಕೆಗಳ ಪ್ರಸಾರ ಸರ್ವಕಾಲಕ್ಕೂ ನಿಯಮಿತವೇ ಆಗಿರುವುದರಿಂದ ಮುದ್ರಣ ತಂತ್ರಜ್ಞಾನವನ್ನು ಆಕರ್ಷಣೆಯ ಅಂಶವನ್ನಾಗಿ ಬಳಸಿಕೊಳ್ಳುವಂತೆ ಒತ್ತಾಯಿಸುವುದೂ ಇಲ್ಲ. ಒಂದು ವಿನ್ಯಾಸದ ಮೂಲಕವೇ ಓದುಗರನ್ನು ತಲುಪುವ ಈ ಪತ್ರಿಕೆಗಳು ಅದರ ಬದಲಾವಣೆಗೆ ಹೆಚ್ಚು ತುಡಿಯುವುದಿಲ್ಲ. ಜೊತೆಗೆ ವ್ಯಾಪಾರೀಕರಣದ ಆಕರ್ಷಕ ಎನ್ನುವ ಪರಿಕಲ್ಪನೆ ಹೆಚ್ಚುಕಡಿಮೆ ಇಲ್ಲಿ ಇಲ್ಲವಾಗುತ್ತದೆ. ಭಾಗಶಃ ಒಬ್ಬ ಅಥವಾ ಕೆಲವೇ ವ್ಯಕ್ತಿಗಳ ಆಸಕ್ತಿಯ ವೈಯಕ್ತಿಕ ಪ್ರಯತ್ನದ ಫಲವಾಗಿ ಇಂತಹ ಪತ್ರಿಕೆಗಳು ವಾಣಿಜ್ಯೀಕರಣದ ಪರಿಧಿಯೊಳಗೆ ತಮ್ಮನ್ನು ತಾವು ಒಳಗುಮಾಡಿಕೊಳ್ಳದೆ ಉಳಿದುಬರುತ್ತಿವೆ. ಇರುವ ಮಿತಿಗಳೊಳಗೇ ಕನ್ನಡ ಸಂಸ್ಕೃತಿಯನ್ನು ವಿಶಿಷ್ಟ ರೀತಿಯಲ್ಲಿ ಬಿಂಬಿಸುತ್ತಾ ವಿಶ್ವ ವರ್ತಮಾನಕ್ಕೆ ಎದುರು ನಿಲ್ಲುತ್ತವೆ.

ಪಿ. ಚಂದ್ರಿಕಾ
೧೭/೧೮-೨. ಮೊದಲನೇ ಮುಖ್ಯರಸ್ತೆ, ಮಾರೇನಹಳ್ಳಿ, ಬೆಂಗಳೂರು - ೫೬೦ ೦೪೦

**ಪೂ**ಜಾರಿ ಮಾಂತಪ್ಪನ ಕನಸಿನಲ್ಲಿ ದೇವರು ಕಾಣಿಸಿಕೊಂಡು ಜೋರು ಮಾಡಿದನಂತೆ! 'ಊರಿನವರೆಲ್ಲ ಸೇರಿ ಗುಂಡಯ್ಯನ ಬೆಟ್ಟದಲ್ಲಿ ಯಗ್ನ ಮಾಡಬೇಕು; ಬೆಳದಿಂಗಳೂಟ ಮಾಡಿ ಆನಂದಿಸಬೇಕು' ಎಂದು ತಾಕೀತು ಮಾಡಿದನಂತೆ!

ಗೊಂದಲಪುರದಲ್ಲಿ ಮಿಂಚಿನ ಸಂಚಾರವಾದಂತಾಯಿತು. ಅವರು ಒಂದು ಕ್ಷಣ ಬರಗಾಲದ ಬವಣೆಯನ್ನು ಮರೆತು ಕುತೂಹಲದಿಂದ ಮೈನವಿರೇಳಿಸಿಕೊಂಡರು!

ಅವರು ಹಬ್ಬ ಹರಿದಿನ ಮಾಡುತ್ತಾರೆ. ಗುಂಡೇಶ್ವರನ ಜಾತ್ರೆ ಮಾಡಿ ನಾಲ್ಕೈದು ದಿನ ವಾಲಾಡಿದ್ದಾರೆ. ಅವರ ಜನ್ಮಕ್ಕೆ ಎಂದೂ ಯಗ್ನ ಮಾಡಿದವರಲ್ಲ! ಹಾಗಾಗಿ, ಯಗ್ನ ಅವರನ್ನು ಸ್ವಲ್ಪ ಗೊಂದಲದಲ್ಲಿ ಕೆಡವಿತು.

ಗುರುವಜ್ಜ ತುಂಬಾ ಹಳೇ ಮನುಷ್ಯ. ಊರ ಯಜಮಾನ. ಯಾಗ, ಯಗ್ನ ಕುರಿತು ಪುರಾಣ ಕತೆಗಳಲ್ಲಿ ಕೇಳಿ ತಿಳಿದಿದ್ದ. ಬಾಯಿತುಂಬ ತಂಬುಲ ತುಂಬಿಕೊಂಡು, ಯಗ್ನ ಮಾಡುವುದು ಊರಿನ ಒಳ್ಳೆಯದಕ್ಕೆ; ಯಗ್ನ-ಯಾಗ ರಾಮಾಣ್ಯ, ಮಾಬಾರ್ತ ಕಾಲ ದಿಂದಲೂ ಇತ್ತೆಂದು ಯಜಮಾನಿಕೆಯ ಗತ್ತಿನಿಂದ ಸುಳಿದವರ ಮುಂದೆಲ್ಲ ಬಿತ್ತರಿಸಿದ.

ಬೆಳದಿಂಗಳೂಟ ಸಹ ಅವರಿಗೆ ಹೊಸದೇ. ಮಾಂತಪ್ಪ ಊರಿನವರಿಗೆಲ್ಲ ಊಟ ಹಾಕಿಸುತ್ತಾನಂತೆ ಎಂದುಕೊಂಡು ಹುಮ್ಮಸ್ಸುಗೊಂಡರು. ಈ ಊಟ ಬೇರೆ ತರವಂತೆ, ಎಲ್ಲರೂ ಅವರವರ ಮನೆಯಿಂದಲೇ ಮುದ್ದೆ, ಬ್ವಾನ ತಂದು ತಿಂಗಳ ಬೆಳಕಿನಲ್ಲಿ ಉಣ್ಣಬೇಕಂತೆ – ಎಂಬ ವಿಷಯ ತಿಳಿದಾಗ ಅವರ ಉತ್ಸಾಹ ಕುಗ್ಗಿತು. ಆದರೆ ಸಿದ್ದಣ್ಣ (ಸಿದ್ದೇಶ್ವರಾನಂದಜಿ) ಪ್ರತಿಯೊಂದು ಮನೆಗೂ ಹೋಗಿ, ಈ ಬೆಳದಿಂಗಳೂಟದಿಂದ ಜನರಲ್ಲಿ, ಮುಖ್ಯವಾಗಿ ಗಂಡ-ಹೆಂಡಿರ ಮಧ್ಯೆ ಪ್ರೀತಿ ಹೆಚ್ಚಾಗುತ್ತದಂತೆ ಎಂದು ಪ್ರಚಾರ ಮಾಡಿದ್ದರಿಂದ, ಆಗಲಿ ಅದನ್ನೂ ನೋಡೇಬಿಡುವ ಎಂದುಕೊಂಡರು ಜನರು.

''ಯಗ್ನ ಮಾಡುದು ಅಂದ್ರೆ ಸುಮ್ನೆಯ? ಕರ್ಚು ಎಚ್ಚ ಯಾರ್ದು?'' ಎಂಬುದು ತಿಮ್ಮನ ಸಂದೇಹ.

''ಅದ್ಯಾಕ್ಲ, ನಮ್ ಈರಾಂಜ್ನಿ ಇಲ್ವ? ಎಂಗೂ ಇದಾನ್‌ಸೌದೆಲೇ ಅವ್ನೆ. ಎಲ್ಲಾ ಮಿನಿಸ್ಟ್ರ್‌ಗಳೂ ಗುರ್ತು'' – ಎಂದ ಗುರುವಜ್ಜ.

''ಈರಾಂಜ್ನಿ ಕೈಯಿಂದ ಕೊಡ್ತಾನಾ? ಇಂಗೆ ಅಳ್ಳೀಗಳಲ್ಲೆಲ್ಲ ಯಗ್ನ ಮಾಡಿಸಿದ್ರೆ ಸರ್ಕಾರ್ದೋರೆ ಅಣ ಕೊಡ್ತಾರಂತೆ!'' ಎಂದ ದುಂಬ.

''ಈ ಊರ್ನಲ್ಲಿ ಎಂತೆಂತಾ ಪುಣ್ಯಾತ್ಮರು, ಬದ್‌ಬದುಕ್ದೋರು ಇರುವಾಗ ದೇವ್ರ ಮಾಂತಪ್ಪನ್ನೇ ಉಡಿಕಂಡೋದ ಅಂದ್ರೆ ನಂಗ್ಯಾಕೋ ಅನುಮಾನ!'' ಎಂದು ಜವರಾಯಿ ಸಂಶಯದ ಬೀಜ ಬಿತ್ತಿದ.

ಹೀಗೆ ತಲೆಗೊಂದು ಮಾತಾಡುವುದನ್ನು ಕಂಡಾಗ ಯಜಮಾನ ಗುರುವಜ್ಜನಿಗೆ ಪಿತ್ತ ನೆತ್ತಿಗೇರುವುದುಂಟು. ಅಲ್ಲದೆ ಹಿಂದಿನ ಕಾಲದಲ್ಲಿ ಶೇಕದಾರರೋ, ಅಮಲ್ದಾರರೋ ಹಳ್ಳಿಗೆ ಬಂದಾಗ ಊರ ಪಟೇಲನನ್ನು ಕರೆಕಳಿಸುತ್ತಿದ್ದುದು, ಏನು ಕೇಳಬೇಕಿದ್ದರೂ ಆತನ ಮುಖಾಂತರ ಹೇಳಿಸುತ್ತಿದ್ದುದು ನೆನಪಿಗೆ ಬಂತು. ಜವರಾಯಿಯತ್ತ ಒಂದು ಬೆದರಿಕೆಯ ನೋಟಬೀರಿ, ''ಲೋ ಕಮಂಗಿ, ಗ್ಯಾನ ಎಂಗಿದದ್ಲ? ದೇವ್ರಿಗೂ ಒಂದು ರೂಲೀಸು ಇರ್ತದೆ. ಪೂಜಾರಿ ಮಾಂತಪ್ಪ ದೇವ್ರಿಗೆ ಬೇಕಾದೋನಲ್ವೆ? ದಿನಾ ದೇವ್ರ ಸೇವೆ ಮಾಡ್ತಾ ಇಲ್ವ? ಅದಿಕ್ಕೇ ಅವ್ನ ಮುಕಾಂತ್ರ ಏಳವ್ನೆ'' – ಎಂದು ಒಂದು ರೀತಿಯ ಸಮಜಾಯಿಸಿ ನೀಡಿದ.

''ದೇವ್ರ ಇನ್ನೇನೂ ಮಾತಾಡ್ಲಿಲ್ಲ ಅಂತ ಕಾಣ್ತದೆ!'' ಎಂದ ದುಂಬ.

ತರಲೆ ತಿಪ್ಪ: ''ಅಂಗಲ್ಲ ಕಣ್ರಲೇ! ಮಾಂತಪ್ಪನ್ಗೆ ಮಾಮೇರಿ ನಿದ್ದೆಯಂತೆ. ಇದ್ದಕ್ಕಿದ್ದಂಗೆ ಗಂಟೆ ಜಾಗ್ಟೆ ಬಾರಿಸ್ದಂಗೆ ಸದ್ದಾಯ್ತಂತೆ. ಕಣ್ ಬುಟ್ ನೋಡಿದ್ರೆ, ಸಿನಿಮ್ದಲ್ಲಿ ದೇವ್ರ ಪ್ರತ್ಯಕ್ಸ ಆಯ್ತಾನಲ್ಲ ಅಂಗೆ, ದೇವ್ರ ಗ್ವಾಡೆಯಿಂದ್ಲೆ ಒಡ್ಕಂಡು ಬಂದ್ ನಿತ್ಕಂಡ್ನಂತೆ! 'ದೇವ್ರ ದಿಂಡಿರ್ನೆಲ್ಲ ಮರ್ತು ಅಗ್ನ್ಯಾನ್ದಲ್ ಮುಳುಗ್ದಿದ್ದೀರಲ್ರೋ! ಇನ್ನಾದ್ರೂ ಎಚ್ಚರ್‌ಸ್ಕಳಿ. ನಾನೇಳ್ದಂಗೆ ಯಗ್ನ ಮಾಡಿ, ಬೆಳ್ದಿಂಗ್ಳೂಟ ಮಾಡಿದ್ರೋ ಸರಿ. ಇಲ್ದೆ ಇದ್ರೆ ಊರ್ನೆ ಎಕ್ಕ ಉಟ್ಟಿಸ್ತೀನಿ!' ಅಂತ ಕಣ್ಣ ಕೆಂಪಗ್ ಮಾಡ್ಕಂಡು, ಉಣ್ಸೆ ಚಬ್ಬೆ ಇರ್ಕಂಡು ಬಾರ್ಸಿದ್ನಂತೆ. ಮಾಂತಪ್ಪ ಗಡಗಡ ಅಂತ ನಡಗ್ತ ಎಚ್ರಾದ್ನಂತೆ. ಉಚ್ಚೆ ಉಯ್ಕಳ್ಳೋದೊಂದ್ ಬಾಕಿಯಂತೆ... !'' ಎಂದು, ಮಾಂತಪ್ಪನ ಕನಸಿನ ಪ್ರಕರಣಕ್ಕೆ ವಗ್ಗರಣೆ ಹಾಕಿದ. ಕೇಳುತ್ತಿದ್ದವರ ಮುಖದಲ್ಲಿ ಭಕ್ತಿ ಭಾವ ಸುಳಿದಾಡಿದರೂ, ಸ್ವತಃ ತಿಪ್ಪ ಒಳಗೊಳಗೇ ನಗುತ್ತಿದ್ದಂತಿತ್ತು!

ಮಾಂತಪ್ಪನಿಗೆ ಈ ಭಡಿ ಏಟು ಏನೇನೂ ಸಾಲದು ಎಂಬ ದನಿಯಲ್ಲಿ ''ಇನ್ನೂ ಚನ್ನಾಗ್ ಬಾರಿಸ್ಬೇಕಾಗಿತ್ತು!'' ಎಂದ ದುಂಬ.

''ನಂಗೆ ಇನ್ನೂ ಒಂದ್ ಅನ್ಮಾನ...'' ಎಂದು ಜವರಾಯಿ ಮತ್ತೆ ಪ್ರಾರಂಭಿಸಿದ. ''ಅವತ್ ರಾತ್ರಿ ಮಾಂತಪ್ಪ ಎಲ್ ಮಲ್ಗಿದ್ದ? ಸ್ವಂತ ಮನೇಲೋ, ತ್ವಾಟದ್ಲಲ್ಲಿರೋ ಬಂಗಾರಿ ಮನೇಲೋ?



ಆ ದೇವ್ರು ಅಲ್ಲಿಗೂ ಓಗವ್ನಲ್ಲ ಅವನ್ಗೆ ಒಂಚೂರೂ ಸಂಕೋಚ ಗಿಂಕೋಚ ಆಗ್ಲಿಲ್ವ!''

ಮಾತಿನ ಹಿಂದಿನ ಕುಹಕ ಎಲ್ಲರಿಗೂ ಒಮ್ಮೆಲೇ ಫಳ್ಳನೆ ಹೊಳೆದಂತಾಗಿ ಗೊಳ್ಳೆಂದು ನಕ್ಕರು!

ಗೊಂದಲಪುರದ ಜನರಿಗೆ ವಾಕ್ ಸ್ವಾತಂತ್ರ್ಯ, ಗುಂಪುಗೂಡಿ ಹರಟೆ ನಗುವ ಸ್ವಾತಂತ್ರ್ಯ, ಟೀಕಿಸುವ, ಬೈಯ್ಯುವ, ಅಣಕಿಸುವ, ದ್ವೇಷಿಸುವ ಸ್ವಾತಂತ್ರ್ಯಗಳು ಸಂವಿಧಾನದತ್ತವಾಗಿ ಬಂದಿದ್ದು, ಇವನ್ನು ಕಸಿದುಕೊಳ್ಳಲು ಯಾರೂ ಈವರೆಗೆ ಪ್ರಯತ್ನಿಸಿದ್ದಿಲ್ಲ. ಮಾಂತಪ್ಪನ ಕನಸಿಗೆ ಸಂಬಂಧಿಸಿದಂತೆ ಊರಿನವರು ಮೇಲಿನ ಎಲ್ಲ ಸ್ವಾತಂತ್ರ್ಯಗಳನ್ನೂ ಧಾರಾಳವಾಗಿ ಬಳಸಿಕೊಂಡರೆನ್ನಬಹುದು.

ಆದರೆ ಈ ವಿಷಯದಲ್ಲಿ ಕೆಲವರಿಗಾದರೂ ನಂಬಿಕೆ ಬರಲಿಲ್ಲ ಎಂಬುದು ನಿಜ. ಸಿದ್ದಣ್ಣನ ಹೆಂಡತಿ ಚೆಲುವಕ್ಕ, ಸಿದ್ದಣ್ಣನ ಮಕ್ಕಳು ನಂಬದಿರುವವರ ಲೆಕ್ಕದಲ್ಲಿ ಸೇರುತ್ತಾರೆ. ಎಷ್ಟು ಯುಗಗಳು ಕಳೆದರೂ ನಮ್ಮ ದೇವರಿಗೆ ಹೊಸ ಯಾವ ಉಪಾಯಗಳೂ ಹೊಳೆಯುವುದೇ ಇಲ್ಲವಲ್ಲ ಎಂದು ಚೆಲುವಕ್ಕ ಕನಿಕರಪಟ್ಟರೆ, ''ದೇವ್ರು ಹೊಸ ಟ್ರಿಕ್ ಏನೂ ಕಲೀಲೆ ಇಲ್ವಲ್ಲ!'' ಎಂದು ರಾಮು ಅವ್ವನ ಅಭಿಪ್ರಾಯಕ್ಕೆ ಮಣೆ ಹಾಕಿದಾಗ ಸಿದ್ದಣ್ಣನ ಬೆಲೂನಿಗೆ ಚುಚ್ಚಿದಂತಾಯಿತು.

* * *

ಯಗ್ನದ ಸಿದ್ಧತೆ ಭರದಿಂದ ನಡೆಯತೊಡಗಿತು. ಗುಂಡಯ್ಯನ ಬಂಡೆಯ ಮುಂದೆ ವಿಶಾಲವಾದ ಸ್ಥಳವಿತ್ತು, ಯಗ್ನಕ್ಕೆ, ಬೆಳದಿಂಗಳೂಟಕ್ಕೆ ಹೇಳಿ ಮಾಡಿಸಿದಂಥ ಸ್ಥಳ. ಇದನ್ನೆಲ್ಲ ಗಮನದಲ್ಲಿರಿಸಿಕೊಂಡೇ ದೇವರು ಆ ಸ್ಥಳವನ್ನು ಆಯ್ಕೆ ಮಾಡಿರಬೇಕು!

ಯಗ್ನದ ಉಸ್ತುವಾರಿ ಈರಾಂಜಣೆಯದು. ಆತ ಮೂರು ನಾಲ್ಕು ದಿನಗಳಿಗೊಮ್ಮೆ ಗುಲ್ಲೂರಿನಿಂದ ಬಂದು ಗೊಂದಲಪುರದವರೊಂದಿಗೆ ಬೆರೆಯತೊಡಗಿದ. 'ಏನ್ ತಾತಾ ಚಂದಾಗಿದ್ದೀಯಾ ? ಚಿಗವ್ವಾ ಮಗಳ ಅಳಿಯ ಚಂದಾಗವ್ರ ? ತಿಪ್ಪಣ್ಣಾ ನಿನ್ ಮಗ ಯಾವ್‌ಕ್ಲಾಸು ? ಮೇಸ್ಟ್ರು ಚಂದಾಗ್ ಪಾಠಾ ಮಾಡ್ತಾನಾ ?' – ಮುಂತಾಗಿ ಊರಿನವರ ವಿಷಯದಲ್ಲಿ ಆಸಕ್ತಿ ತೋರಿಸತೊಡಗಿದ.

ಗೊಂದಲಪುರದವರಂತೂ ಯಗ್ನ ಮತ್ತು ಬೆಳದಿಂಗಳೂಟದ ದಿನವನ್ನೇ ಕುತೂಹಲದಿಂದ, ಕಾತುರದಿಂದ ಕಾಯತೊಡಗಿದರು. ಗುಂಡೇಶ್ವರ ಜಾತ್ರೆ ನಡೆಸಿದಾಗ ಗೊಂದಲಪುರದವರು ಸುತ್ತ-ಮುತ್ತಲ ಗ್ರಾಮಗಳ ಜನರ ಕಣ್ಣಿನಲ್ಲಿ ಹತ್ತು ಮೆಟ್ಟಿಲು ಎತ್ತರಕ್ಕೇರಿದ್ದರು! ಈ ಯಗ್ನದ ನಂತರ ಗೊಂದಲಪುರ ಲೋಕಪ್ರಸಿದ್ಧಿಯಾಗುವುದರಲ್ಲಿ ಸಂಶಯವಿಲ್ಲ ಎಂದು ಕೆಲವು ಪ್ರಚಾರಪ್ರಿಯರು ಒಳಗೊಳಗೇ ಉಬ್ಬಿದುದೂ ಉಂಟು.

ಅಂತೂ ಯಗ್ನದ ದಿನ ಬಂದೇ ಬಂತು. ಯಗ್ನ ಮಾಡಲೆಂದೇ ಒಬ್ಬ ಕಾವಿ ಗುರು ಮತ್ತಿಬ್ಬರು ಪುರೋಯ್ತ ಬ್ರಾಮರು ಮತ್ತು ಒಂದು ಟೆಂಪೋ ತುಂಬಾ ಗುರುಗಳ ಶಿಷ್ಯ-ಶಿಷ್ಯೆಯರು (ಯುವಕರ ದಂಡು) ಬಂದಿಳಿದರು. ಬೆಳಗಿನಿಂದ ಇಡೀ ಊರು ಗುಂಡಯ್ಯನ ಬಂಡೆಯ ಆವರಣದಲ್ಲಿ ನೆರೆಯಿತು.

ಮಾಂತಪ್ಪನಿಗಂತೂ ತಲೆ ತುರಿಸಿಕೊಳ್ಳಲೂ ಬಿಡುವಿಲ್ಲ. ಪ್ರತಿಕ್ಷಣಕ್ಕೂ ಈರಾಂಜಣೆಯ ಸಲಹೆ ಕೇಳುತ್ತಿದ್ದ. ಎಲ್ಲಾ ವ್ಯವಸ್ಥಿತವಾಗಿ ನಡೆಯಬೇಕೆಂಬ ಕುತೂಹಲದಿಂದ ಅತ್ತಿತ್ತ ಓಡಾಡುತ್ತಿದ್ದ. ಮಾಂತಪ್ಪನ ಬಾಮೈದ ಜನರೇಟರ್ ದಡಗುಟ್ಟಿಸಿ, ಮೈಕ್ ಸೆಟ್ ಅಳವಡಿಸಿದ. ಆದರೆ ಬಂದಿದ್ದ ಗುರುಗಳು ಸಿನಿಮಾ ಹಾಡು ಕಿರಿಚಿಸಲು ಸಮ್ಮತಿಸಲಿಲ್ಲ. ದೇವರ ಭಾಷೆಯಲ್ಲಿ ಶ್ಲೋಕಗಳ ರೆಕಾರ್ಡ್ ಹಾಕಿಸಿದರು. ಊರಿನವರಿಗೆ ಪಿಚ್ಚೆನಿಸಿತು!

ಈ ಮಧ್ಯೆ, ಸಿದ್ದಣ್ಣ ಮತ್ತು ಈರಬದ್ರನ ಪ್ರಚಾರದಿಂದ ಬೆಳದಿಂಗಳೂಟದ ಬಗ್ಗೆ ಜನರಲ್ಲಿ, ಅದರಲ್ಲೂ ಹೆಂಗಸರಲ್ಲಿ ಆಸಕ್ತಿ ಹೆಚ್ಚಾಗತೊಡಗಿತು. ಬೆಳದಿಂಗಳ ಊಟದ ನಂತರವಾದರೂ ಗಂಡಂದಿರು ತಮ್ಮನ್ನು ಸರಿಯಾಗಿ ನಡೆಸಿಕೊಳ್ಳಬಹುದು ಎಂಬ ದೂರದಾಸೆಯೇ ಅವರ ಆಸಕ್ತಿಗೆ ಕಾರಣವಾಗಿತ್ತು.

ಗುಲ್ಲೂರಿನಿಂದ ಯಗ್ನ ಮಾಡಿಸಲೆಂದೇ ಬಂದಿದ್ದ ಕಾವಿ ಗುರುಗಳು ಹಾಸುಗಲ್ಲಿನ ಅಂಗಳದ ಒಂದು ಕಡೆ ಬೆಂಕಿ ಕೊಂಡ ನಿರ್ಮಿಸಿದರು. ಅವರ ಜೊತೆಯಲ್ಲಿ ಬಂದಿದ್ದ ಪುರೋಯ್ತರು, ಪೂಜಾರಿ ಮಾಂತಪ್ಪ, ಈರಾಂಜಣಿ, ಸಿದ್ದೇಶ್ವರಾನಂದಜಿ, ಈರಬದ್ರ, ಶಿಷ್ಯರ ಪಟಾಲಂ – ಮುಂತಾದವರು ಯಗ್ನ ಸುಸೂತ್ರವಾಗಿ ನಡೆಯಲು ಸಹಕರಿಸಿದರು. ಪುರೋಯ್ತರು ಪಠಿಸುತ್ತಿದ್ದ ಮಂತ್ರಗಳು ಗುಂಡಯ್ಯನ ಬೆಟ್ಟಗಳಲ್ಲಿ ಪ್ರತಿಧ್ವನಿಸಿದವು. ಮಕ್ಕಳ ಉತ್ಸಾಹವಂತೂ ಹೇಳತೀರದು. ಹಿರಿಯರ ಬೆದರಿಕೆಗಿರಲಿ, ಯಜಮಾನ ಗುರುವಜ್ಜನ ಕೋಲಿಗೂ ಅವು ಕೇರ್ ಮಾಡದೆ ಮತ್ತೆ ಮತ್ತೆ ಬೆಂಕಿ ಕೊಂಡದ ಸುತ್ತ ಮುಕುರತೊಡಗಿದವು.

ಕಾವಿ ಗುರುಗಳು ಅಲ್ಲಿ ಶೇಖರಿಸಿಟ್ಟಿದ್ದ ಗಂಧದ ಕೊರಡುಗಳು, ತುಪ್ಪ, ಎಳ್ಳು ಬೆಲ್ಲ, ಹಾಲು, ತೆಂಗಿನ ಕಾಯಿ, ಹೊಸ ಬಟ್ಟೆ ಇತ್ಯಾದಿ ಸಾಮಗ್ರಿಗಳನ್ನು ಬೆಂಕಿಗೆ ಆಹುತಿ ನೀಡುವುದನ್ನು ಮಕ್ಕಳಂತೆ ಎಲ್ಲರೂ ಬಿರುಗಣ್ಣು ತೆರೆದು ನೋಡುತ್ತಿದ್ದರು.

ಅನಂತರ ಕಾವಿ ಗುರುಗಳು ನಮ್ಮ ಶಾಸ್ತ್ರಗಳು, ಉಪನಿಷತ್ತು ಇತ್ಯಾದಿ ಗೊಂದಲಪುರದವರಿಗೆ ಅರ್ಥವಾಗದ ಏನೇನೋ ವಿಷಯಗಳನ್ನು ಹೇಳಿದರು. ಪುರಾತನರು ಕಷ್ಟ ಬಂದಾಗ ಯಜ್ಞ ಮಾಡುತ್ತಿದ್ದರೆಂದೂ, ಲೋಕದ ಸಂಕಟ ಪರಿಹಾರಕ್ಕೆ ಯಜ್ಞಕ್ಕಿಂತ ಮಿಗಿಲಾದದ್ದು ಬೇರೆ ಯಾವುದೂ ಇಲ್ಲವೆಂದೂ ಅಪ್ಪಣೆ ಕೊಡಿಸಿದರು. ಹಿಂದೆ ಪಂಚ ಜಡೆಮುನಿ ಎಂಬ ಮಹಾತ್ಮರು ಈ ಸ್ಥಳದಲ್ಲಿ ವಾಸವಾಗಿದ್ದುದಕ್ಕೆ ಬಂಡೋಪನಿಷತ್ತಿನಲ್ಲಿ ಆಧಾರವಿದೆಯೆಂದೂ, ಈಗ ಇಲ್ಲಿ ಒಂದು ದೇವಸ್ಥಾನ ಕಟ್ಟಬೇಕಾದ್ದು ಅತ್ಯಗತ್ಯ ತುರ್ತಿನ ಕೆಲಸವೆಂದೂ ಹೇಳಿದಾಗ ಮಾಂತಪ್ಪನ ಮೈಮೇಲೆ ದೇವರೇ ಬಂದಂತಾಯಿತು! ನೆರೆದಿದ್ದವರೆಲ್ಲರೂ ಜೈ ಜಡೆಮುನೀಶ್ವರಾ ಎಂದು ಜಯಘೋಷ ಮಾಡುವಂತೆ, ಶಿಷ್ಯಾ ಪಟಾಲಂ ಮತ್ತೆ ಮತ್ತೆ ಪ್ರೇರೇಪಿಸಿತು. ಗೊಂದಲಪುರದವರ ಮೈಯಲ್ಲಿ ಜಡೆಮುನೀಶ್ವರನ ಸಂಚಾರವಾದಂತಾಯಿತು. ಇನ್ನು ಮುಂದೆ ಪ್ರತಿವರ್ಷ ಈ ಸ್ಥಳದಲ್ಲಿ ಯಜ್ಞ ನಡೆಯಬೇಕೆಂದೂ ಅಪ್ಪಣೆ ಕೊಡಿಸಿದರು.

ಈ ಯಗ್ನವನ್ನು ವಿರೋಧಿಸಲು ಸಣ್ಣ ಗುಂಪೊಂದು ಸಜ್ಜಾಗಿದ್ದು, ಇದರಿಂದ ಪ್ರಕ್ಷುಬ್ಧ ಪರಿಸ್ಥಿತಿ ಉಂಟಾಗಬಹುದು ಎಂದು ಗೂಢಚಾರರು ಸರಕಾರದ ಕಿವಿ ಊದಿದರು. ಆವರೆಗೆ ಯಾವುದೇ ರೀತಿಯಲ್ಲಿ ಮುಖಕ್ಕೆ ಕೆಸರು ಬಳಿಸಿಕೊಳ್ಳದೆ ಸ್ವಚ್ಛ ಆಡಳಿತ ನಡೆಸಿದ್ದೇವೆಂದು ಕೊಚ್ಚಿಕೊಳ್ಳುತ್ತಿದ್ದ ಸರಕಾರ ಎಚ್ಚರಗೊಂಡು, ಸಾಕಷ್ಟು ಸಂಖ್ಯೆಯಲ್ಲಿ ಕ್ಷಿಪ್ರ ಪ್ರಹಾರ ದಳವನ್ನು ಗೊಂದಲಪುರಕ್ಕೆ ರವಾನಿಸಿತು. ಸರಕಾರದಷ್ಟೇ ದಕ್ಷ ಕೆಲಸಕ್ಕೆ ಹೆಸರಾದ ಪ್ರಹಾರ ದಳ, ಪ್ರತಿಯಗ್ನಕಾರರೆಂಬ ಸಂಶಯದಿಂದ ಗೊಂದಲಪುರದ ಹಲವರನ್ನು ದಸ್ತಗಿರಿ ಮಾಡಿತು.

ಗೊಂದಲಪುರದ ಜನರ ಪಾಲಿಗೆ ಈ ಯಗ್ನ ಗುಂಡೇಶ್ವರ ಜಾತ್ರೆಯಷ್ಟು ಮಜಾ ಅನ್ನಿಸಲಿಲ್ಲ. ಕಾವಿ ಗುರುಗಳು ಹೇಳುತ್ತಿದ್ದುದನ್ನು ಅವರು ಕಿವುಡರಂತೆ ಕಣ್ಣು ಮಿಟಕಿಸುತ್ತ ಕೇಳಿಸಿಕೊಂಡರು. ಕೆಲವರಂತೂ ಬಾಯ್ತೆರೆದು ಆಕಳಿಸಿದರು, ಮತ್ತೆ ಕೆಲವರಿಗೆ ಬೀಡಿಗಳ ನೆನಪಾಗಿ ಕ್ಷಿಪ್ರ ಪ್ರಹಾರ ದಳದವರ ಕಣ್ಣು ತಪ್ಪಿಸಿ ಮೆಲ್ಲನೆ ಎದ್ದು ಬಂಡೆಗಳ ಮರೆಗೆ ಹೋಗಿಬಂದರು.

ಮೂಡಲಲ್ಲಿ ತಿಂಗಳು ಮೂಡಿತು. ಎಲ್ಲರ ನೆನಪೂ ಬುತ್ತಿಯಲ್ಲಿದ್ದ ಮುದ್ದೆ ಬ್ಬಾನಗಳ ಕಡೆಗಿತ್ತು. ಬೆಳದಿಂಗಳೂಟ ಬೇಗನೇ ಪ್ರಾರಂಭವಾಗುವ ಸೂಚನೆ ಕಾಣದೆ ಹೊಟ್ಟೆಗಳು ಮತ್ತಷ್ಟು ತಾಳ ಹಾಕತೊಡಗಿದವು.

ಕಾವಿ ಗುರುಗಳು ಮತ್ತೆ ಮಂತ್ರ ಕೊರೆಯತೊಡಗಿದರು. ಈರಾಂಜಣಿಯ ಒಂಬತ್ತು ವರ್ಷದ ಮಗಳು ಸಂಸ್ಕೃತ ಶ್ಲೋಕ ಹೇಳಿ ಗುರುಗಳಿಂದ ಮೆಚ್ಚುಗೆ ಗಳಿಸಿದಾಗ ಗೊಂದಲಪುರದ ಎಲ್ಲರೂ ಪುಳಕಾಂಕಿತರಾದರು! ಅನಂತರ, ನಮ್ಮ ಪೂರ್ವಜರಾದ ಋಷಿ ಮುನಿಗಳ ಭಾಷೆ ಸಂಸ್ಕೃತವೇ ಆಗಿತ್ತು; ನಮ್ಮ ವೇದ, ಉಪನಿಷತ್ತುಗಳು, ಶ್ರುತಿ - ಸ್ಮೃತಿಗಳು ಸಂಸ್ಕೃತದಲ್ಲಿವೆ. ಹಾಗಾಗಿ ಎಲ್ಲರೂ ಸಂಸ್ಕೃತ ಕಲಿಯಬೇಕಾದ್ದು ಮುಖ್ಯ, ಅದೇ ಶ್ರೇಯಸ್ಕರ ಎಂದು ಅಪ್ಪಣೆ ಕೊಡಿಸಿದರು.

ಇನ್ನು ಬೆಳದಿಂಗಳೂಟದ ಮಹತ್ವ ಕುರಿತೂ ಕೊರೆಯಲು ಪ್ರಾರಂಭಿಸಿದರು. ಬೆಳದಿಂಗಳೂಟ ಒಗ್ಗಟ್ಟಿನ ಸಾಧನವೆಂದರು. ಪರಸ್ಪರ ಪ್ರೀತಿ, ಸೌಹಾರ್ದತೆ ಹೆಚ್ಚಲು ಎಲ್ಲರೂ ಕುಳಿತು ಭೇದ ಭಾವ ಮರೆತು ಬೆಳದಿಂಗಳೂಟ ಮಾಡುವುದಕ್ಕಿಂತ ಬೇರೆ ಉಪಾಯದ ಯಜ್ಞ ಇಲ್ಲ. ನಮ್ಮ ಪೂರ್ವಜರಾದ ಋಷಿ ಮುನಿಗಳೂ ಹೀಗೆ ಬೆಳದಿಂಗಳೂಟ ಮಾಡಿ ನೂರಾರು ವರ್ಷ ಸುಖವಾಗಿ ಬಾಳಿದರೆಂಬುದು ಶಾಸ್ತ್ರಗಳಿಂದ ತಿಳಿದುಬರುತ್ತದೆ. ಹಾಗಾಗಿ ನಾವು ಪೂರ್ವಜರಂತೆ ಬೆಳದಿಂಗಳೂಟ ರೂಢಿಸಿಕೊಳ್ಳಬೇಕು ಎಂದರು. ಎಲ್ಲರೂ ನಿಶ್ಶಬ್ದವಾಗಿ ಎದ್ದು, ಸಾಲಾಗಿ ನಿಂತು, ಒಂದು ಕಡೆ ಕೈತೊಳೆದುಕೊಂಡು ಮತ್ತೆ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಳ್ಳುವಂತೆ ಆಜ್ಞಾಪಿಸಿದರು. ಬುತ್ತಿಗಳನ್ನು ಬಿಚ್ಚಿದ ನಂತರ ಸಹ ಓಂ ಅನ್ನಪತೇ... ಎಂದು ಮಂತ್ರ ಹೇಳುತ್ತ, ಎಲ್ಲರೂ ಅದನ್ನು ಪುನರುಚ್ಚರಿಸುವಂತೆ ಆಜ್ಞಾಪಿಸಿದರು. ಇಂಥ ರೆಜಿಮೆಂಟೇಶನ್ ಗೊಂದಲಪುರದವರ ಪಾಲಿಗೆ ತೀರಾ ಹೊಸದು. ಅವರು ಒಂದು ರೀತಿಯ ಕಕ್ಕಾಬಿಕ್ಕಿಯ ಸ್ಥಿತಿಗೆ ತಲುಪಿದ್ದರು.

ಮುಂದೆ ನಡೆದದ್ದು ಯಡವಟ್ಟು. ಪ್ರಾಯಶಃ ಈ ಮಹಾನ್ ಭಾರತ ದೇಶದಲ್ಲಿ ನಡೆಯುವಂಥದ್ದೇ. ಬೆಳದಿಂಗಳೂಟಕ್ಕೆ ಒಣಮೀನು ಸಾರು ತರಬಾರದೆಂದು ಶಾಸ್ತ್ರಗಳಲ್ಲಿ ಹೇಳಿದೆಯೋ ಇಲ್ಲವೋ ಗೊತ್ತಿಲ್ಲ! ಮತ್ತೆ ಬೆಳದಿಂಗಳೂಟಕ್ಕೆ ಆಯಾ ಜಾತಿಗಳವರು ಒಂದೊಂದು ಕಡೆ ಕುಳಿತುಕೊಳ್ಳಬೇಕೆಂಬುದನ್ನು ಪ್ರಾಯಶಃ ವೇದಗಳಲ್ಲಿ ಹೇಳಿರಲಿಲ್ಲ!

ಒಟ್ಟಿನಲ್ಲಿ ಗೊಂದಲಪುರದಲ್ಲಿ ಯಗ್ನ ಯಾವುದೇ ವಿಘ್ನವಿಲ್ಲದೆ ನಡೆದರೂ ಬೆಳದಿಂಗಳೂಟ ಗೊಂದಲದಲ್ಲಿ ಮುಗಿಯಿತು. ಲಘುವಾದ ಗುದ್ದಾಟ ನಡೆಯಿತೆಂದೂ, ಗದ್ದಲದಲ್ಲಿ ಬುತ್ತಿಯಲ್ಲಿದ್ದ ಮುದ್ದೆಗಳು, ಬ್ಬಾನ ಜಜ್ಜಿಬಜ್ಜಿಯಾದವೆಂದೂ ಹೇಳುತ್ತಾರೆ. ಜೊತೆಗೆ ಹಲವರ ಮೂಗುಗಳೂ ಜಜ್ಜಿಹೋದವೆಂದು ತರಲೆ ತಿಪ್ಪ ಹೇಳುತ್ತಾನೆ.



ಗೊಂದಲಪುರದಲ್ಲಿ ಯಗ್ನ, ಬೆಳದಿಂಗಳೂಟ ನಿರ್ವಿಘ್ನವಾಗಿ ನಡೆಯಿತೆಂದು ಗುಲ್ಲೂರಿನ ಸರಕಾರಿ ವಠಾರಗಳು ಪತ್ರಿಕೆಗಳಿಗೆ ಸುದ್ದಿ ನೀಡಿ, ನೆಮ್ಮದಿಯ ನಿಟ್ಟುಸಿರುಬಿಟ್ಟವು.

ಬೀರಣ್ಣ
ಗೊಂದಲಪುರ

## ಒಳ್ಳೆಯ ಓದು



### ನೆಲದ ಕಣ್ಣು (ಲೇಖನಗಳು)

ಡಾ|| ಕಾ. ವೆಂ. ಶ್ರೀನಿವಾಸ ಮೂರ್ತಿ

ಪುಟ : ೨೮೦ ಬೆಲೆ : ರೂ. ೭೦

**ಸಿ.ವಿ.ಜಿ. ಪಬ್ಲಿಕೇಷನ್ಸ್**, ನಂ. ೭೦, ೨ನೇ ಮೈನ್, ಜಬ್ಬರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

ಸಾಹಿತ್ಯದ ಆಳವಾದ ಅಧ್ಯಯನದ ಫಲವಾಗಿ ಇಲ್ಲಿಯ ಸಾಹಿತ್ಯ ವಿಮರ್ಶೆ ಮತ್ತು ವೈಚಾರಿಕ ಬರಹಗಳು ರೂಪುಗೊಂಡಿವೆ. ಇತಿಹಾಸದ, ಸಂಸ್ಕೃತಿಯ ಗ್ರಹಿಕೆಯಲ್ಲಿ ಪ್ರಗತಿಪರ ಧೋರಣೆ ವ್ಯಕ್ತವಾಗಿದೆ. ಇದುವರೆಗಿನ ಸಾಹಿತ್ಯ ಇತಿಹಾಸವನ್ನು ಸೂಕ್ಷ್ಮವಾಗಿ ಗಮನಿಸುತ್ತ ಲೇಖಕರು ತಮ್ಮದೇ ನಿರ್ಭೀತ ವಿಚಾರಗಳನ್ನು ಹೇಳುತ್ತಲೇ ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳನ್ನೂ ಜೊತೆಯಲ್ಲೇ ಇಟ್ಟು ತೂಗಿ ನೋಡಿದ್ದಾರೆ. ಲೇಖನಗಳ ವ್ಯಾಪ್ತಿಯೂ ತುಂಬ ವಿಶಾಲ ವಾಗಿದ್ದು ಚಿಕ್ಕ ಚೊಕ್ಕ ಬರಹಗಳ ಮೂಲಕ ಪ್ರಸ್ತುತಪಡಿಸಲಾಗಿದೆ.



### ವ್ಯೂಹ ಮತ್ತು ಇತರ ಕತೆಗಳು

ಡಾ|| ಸಿ. ವಿ. ವತ್ಸಲಾದೇವಿ

ಪುಟ : ೧೦೪ ಬೆಲೆ : ರೂ. ೪೦

**ಅರಿವು ಪ್ರಕಾಶನ**, ೯೬೦, ೪ನೇ ಬಡಾವಣೆ, ೨ನೇ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ನಮ್ಮದು ಬಡಜನರೇ ತುಂಬಿರುವ ಶ್ರೀಮಂತ ದೇಶ! ಬಡತನ ಎಷ್ಟು ಕ್ರೂರವಾಗಿದೆ. ಒಂದು ಮುಷ್ಟಿ ಅನ್ನಕ್ಕಾಗಿ ಕೆಲ ಸಂಸಾರಗಳು ಅದೆಷ್ಟು ಬವಣೆ ಅನುಭವಿಸುತ್ತಿವೆಯೆಂದು ಇಲ್ಲಿನ ಕಥೆಗಳು ಹೇಳುತ್ತವೆ. ಸುತ್ತಮುತ್ತ ಕಣ್ಣು ಹಾಯಿಸುತ್ತಲೇ ತಮಗೆ ಗೋಚರಿಸುವ ಜನರ ವ್ಯವಹಾರಗಳನ್ನು ನಾಜೂಕಾದ ಕಥೆಗಳನ್ನಾಗಿ ಪರಿವರ್ತಿಸುವ ಚಾತುರ್ಯ ಮೆಚ್ಚುವಂಥದು. ಬಡವರ ಅಸಹಾಯ ಸ್ಥಿತಿಯೇ ಶ್ರೀಮಂತರ ಬಂಡವಾಳವಾಗಿರುವುದು ಕಥೆಗಳಲ್ಲಿ ಎದ್ದು ಕಾಣುವ ಅಂಶ. ಸಂಕಲನದ ಹೆಚ್ಚಿನ ಕಥೆಗಳು ಹೆಣ್ಣಿನ ಸುತ್ತ ಹೆಣೆಯಲ್ಪಟ್ಟಿವೆ.





### ಗೊಂಚಲು (ಕವನ ಸಂಕಲನ)

ಡಾ|| ಸುನೀತಿ ಉದ್ಯಾವರ

ಪುಟ : ೭೨ ಬೆಲೆ : ರೂ. ೪೦

**ಪ್ರಶಾಂತ ಪ್ರಕಾಶನ**, ಗೋರೆಗಾಂವ ಪಶ್ಚಿಮ, ಮುಂಬಯಿ - ೪೦೦ ೧೦೪

ಇಲ್ಲಿನ ಕವಿತೆಗಳು ಶ್ರೀಮತಿ ಸುನೀತಿಯವರ ಬಹುಮುಖ ಆಸಕ್ತಿಗಳನ್ನು ಬಿಂಬಿಸುತ್ತವೆ. ಎಲ್ಲ ದಿಕ್ಕುಗಳಲ್ಲೂ ಯೋಚಿಸುವ ಅವರ ಮನಸ್ಸಿನ ವಿವಿಧ ಭಾವನೆಗಳು ಇಲ್ಲಿ ವ್ಯಕ್ತವಾಗಿವೆ. ರಾಷ್ಟ್ರಪ್ರೇಮವೇ ಇರಲಿ, ವ್ಯಕ್ತಿ ಪರಿಚಯ ವಾಗಲಿ ಅಥವಾ ನಿಸರ್ಗದ ಒಂದು ಘಟನೆ - ಸೌಂದರ್ಯ ಯಾವುದೇ ಇರಲಿ ಅವೆಲ್ಲ ಹಾಡುಗಳಾಗಿ ಇಲ್ಲಿ ಸಂಕಲನಗೊಂಡಿವೆ. ಇತ್ತೀಚಿನ ಕವನಗಳಾದರೂ ನವೋದಯದ ಪ್ರಾಸಬದ್ಧ ಶೈಲಿಯನ್ನೇ ಉಳಿಸಿಕೊಂಡು ಅರ್ಥವಂತಿಕೆಯನ್ನೂ ಮೆರೆದಿವೆ. ಸಮಸ್ಯೆಯ - ಆತಂಕದ ಸುಳಿಯ ಮಧ್ಯೆ ಇರುವ ಜನತೆಯನ್ನೇ ಕಾವ್ಯದ ವಸ್ತುವನ್ನಾಗಿಸಿದ್ದಾರೆ.



### ಶರಣ ಬಂಡಾಯ (ಲೇಖನ ಸಂಕಲನ)

ಡಾ|| ಸರಜೂ ಕಾಟ್ಕರ್

ಪುಟ : ೧೦೦ ಬೆಲೆ : ರೂ. ೫೦

**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಕಾಯಕ ತತ್ವವನ್ನು ಬೋಧಿಸಿ ದಾಸೋಹ ಕಲ್ಪನೆಯನ್ನು ಪ್ರಚುರ ಪಡಿಸಿ ಧಾರ್ಮಿಕ ಗೊಡ್ಡು ಸಂಪ್ರದಾಯಗಳನ್ನು ವಿರೋಧಿಸಿ ಮೊದಲ ಬಂಡಾಯದ ದನಿಯೆತ್ತಿದವರು ಶರಣರು. ಹನ್ನೆರಡನೆಯ ಶತಮಾನದಲ್ಲಿ ಸಮಾಜದಲ್ಲೊಂದು ಕ್ರಾಂತಿಯನ್ನೇ ಮಾಡಿದ ಈ ಬುದ್ಧಿಜೀವಿಗಳು ಜನತೆಗೆ ನೀಡಿದ ಉತ್ತಮ ಕೊಡುಗೆಯೆಂದರೆ ವಚನ ಸಾಹಿತ್ಯವೆನ್ನಬಹುದು. ಬಸವಾದಿ ಶರಣರ ವಚನ ಸಾಹಿತ್ಯದಿಂದ ಕೆಲವು ವಿಚಾರಪೂರಿತ ವಚನಗಳನ್ನಾಯ್ದು ಈ ಕೃತಿಯಲ್ಲಿ ವಿಶ್ಲೇಷಿಸುತ್ತ ಅವರು ತಿಳಿಸಿದ ಆಚಾರ ವಿಚಾರಗಳು ಇಂದಿಗೂ ಪ್ರಸ್ತುತವೆಂದು ಮನಗಾಣಿಸುತ್ತಾರೆ.



### ಕೆರೆಗೆ ಹಾರವಾದ ಬಂದಮ್ಮನ ಇತಿಹಾಸ (ಪರಿಚಯ)

ಎಸ್. ಆರ್. ಗುರುನಾಥ್

ಪುಟ : ೪೮ ಬೆಲೆ : ರೂ. ೩೦

**ವಾಲ್ಮೀಕಿ ಸಾಹಿತ್ಯ ಸಂಪದ**, ಹರ್ತಿಕೋಟೆ - ೫೭೭ ೫೪೫

ಊರಿನ ಮುಖಂಡ ಕೆರೆ ಕಟ್ಟಿಸುವಾಗ ಕೆರೆ ಏರಿ ನಿಲ್ಲದಿದ್ದಲ್ಲಿ, ನೀರು ಬಾರದಿದ್ದಲ್ಲಿ ಕೆರೆಗೆ ಆಹುತಿಯಾಗಿ ನರಬಲಿ ಕೊಡುವ ಕ್ರೂರ ಸಂಪ್ರದಾಯದ ಬಗ್ಗೆ ಬೆಳಕು ಚೆಲ್ಲುವ ಒಂದು ನಡೆದ ಘಟನೆಯ ವಿವರ. ಇಂಥ ಘಟನೆಗಳು ನೇರವಾಗಿ ಇತಿಹಾಸ ದಲ್ಲಿ ದಾಖಲಾಗದೆ ದಂತಕಥೆಗಳಾಗಿಯೋ ಜಾನಪದ ಸಾಹಿತ್ಯದಲ್ಲಿ ಕಾಲ್ಪನಿಕವಾಗಿಯೋ ಸ್ಥಾನ ಪಡೆದು ತ್ಯಾಗ ಬಲಿದಾನಗಳನ್ನು ವೈಭವೀಕರಿಸುತ್ತವೆ. ಈ ಕ್ರೂರ ಸಂಪ್ರದಾಯದ ಹಿಂದೆ ಸತ್ಯವೊಂದು ಆಳದಲ್ಲೆಲ್ಲೋ ಇರುತ್ತದೆ. ಜಾನಪದ ಸಾಹಿತ್ಯದ ಗೀತೆ 'ಕೆರೆಗೆ ಹಾರ'ದಲ್ಲಿನ ಭಾಗೀರಥಿಯು ಇಲ್ಲಿ ಗುರುತಿಸಿದ ಬಂದಮ್ಮನೇ ಇರಬಹುದೆಂಬ ತರ್ಕಪೂರ್ಣ ಅಧ್ಯಯನ.



### ಫಲಸಂಚಯ (ಕವನ ಸಂಗ್ರಹ)

ರವೀಂದ್ರನಾಥ ಠಾಕೂರ್ ಅನು : ಜಿ. ರಾಮನಾಥ ಭಟ್

ಪುಟ : ೨೯೦ ಬೆಲೆ : ರೂ. ೧೩೫

**ಗೀತಾ ಬುಕ್ ಹೌಸ್**, ಕೆ. ಆರ್. ಸರ್ಕಲ್, ಮೈಸೂರು - ೫೭೦ ೦೦೧

ವಿಶ್ವದ ಅಗ್ರಮಾನ್ಯ ಕವಿಯೆಂದು ಮನ್ನಣೆ ಪಡೆದ ಬಂಗಾಲದ ಕವಿ ರವೀಂದ್ರನಾಥ ಠಾಕೂರರ ಇನ್ನೂರು ಕವನಗಳು ಹಾಗೂ ಮುನ್ನೂರಕ್ಕೂ ಮಿಕ್ಕಿದ ಹನಿಗವನಗಳನ್ನು ಕನ್ನಡದಲ್ಲಿ ಓದುವ ಸುವರ್ಣಾವಕಾಶ. ಶ್ರೇಷ್ಠ ಸಾಹಿತ್ಯವೊಂದರ ಶ್ರೇಷ್ಠ ಅನುವಾದವಾಗಿದ್ದು ಈ ಕೃತಿಯು ಠಾಕೂರರ ಅಸಾಮಾನ್ಯ ಪ್ರತಿಭೆ ಯನ್ನು ಪರಿಚಯಿಸುತ್ತದೆ. ಗೀತಾಂಜಲಿ ಮೂಲಕ ಈಗಾಗಲೇ ಇನ್ನೂರು ಕವನಗಳನ್ನು ಕನ್ನಡಕ್ಕೆ ಅನುವಾದಿಸಿದ ರಾಮನಾಥ ಭಟ್ ಅವರು ಮೂರನೆಯ ಮತ್ತೊಂದು ಕಂತು ಹೊರತರುವ ಸಾಹಸ ಮಾಡಲಿದ್ದಾರೆ. ಒಟ್ಟಿನಲ್ಲಿ ಠಾಕೂರರ ಗೀತೆಗಳ ರಸದೌತಣ!



### ಲೋಟಸ್ ಪಾಂಡ್ (ಕಾದಂಬರಿ)

ಕೆ. ತಾರಾಭಟ್

ಪುಟ : ೧೧೬ ಬೆಲೆ : ರೂ. ೫೦

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಬಳ್ಳಾರಿ - ೫೮೩ ೧೦೩

'ಲೋಟಸ್ ಪಾಂಡ್!' ನಮ್ಮ ತಾವರೆಯ ಕೊಳವನ್ನೂ ನಾವು ಹಾಗೆನ್ನಲಾರೆವು! ನಮಗೆ ವಿದೇಶಿ ಹೆಸರಿನಿಂದ ನಮ್ಮ ವಸ್ತುಗಳನ್ನು ಗುರುತಿಸಿಕೊಳ್ಳುವ ಬಯಕೆ. ಈ ನೆಲಕ್ಕೆ ಹೊಂದದ ತಳಿ, ನಮ್ಮ ಸಂಸ್ಕೃತಿಗೆ ಭಿನ್ನವಾದ ಯಾವೊಂದು ಸಹಾ ನಮ್ಮಲ್ಲಿ ಗಟ್ಟಿಯಾಗಿ ಬೇರು ಬಿಡಲಾರದೆಂಬ ಕಟುಸತ್ಯವನ್ನು ಈ ಕಾದಂಬರಿ ಧ್ವನಿಸುತ್ತದೆ. ಕೊಳ್ಳುಬಾಕ ಸಂಸ್ಕೃತಿಯತ್ತ ಒಲವನ್ನು ಬೆಳೆಸಿಕೊಳ್ಳುತ್ತಿರುವ ಶ್ರೀಮಂತ ವರ್ಗದ ಜನರಿಗೆ ಇಲ್ಲಿನ ಪಾತ್ರಗಳು ಅನ್ವಯಿಸುತ್ತವೆ. ಕೃತ್ರಿಮತೆ - ಥಳುಕಿನ ಬದುಕಿನ ಒಂದು ಅನಾವರಣ.



### ಪೇಯಿಂಗ್ ಗೆಸ್ಟ್ (ನಾಟಕ)

ರೂಪಾಂತರ : ಡಿ. ಎಸ್. ಚೌಗಲೆ

ಪುಟ : ೯೨ ಬೆಲೆ : ರೂ. ೭೫

**ಸೂರ್ಯ ಪ್ರಕಾಶನ**, ಮಲ್ಲಾಡಿಹಳ್ಳಿ - ೫೭೭ ೫೩೧, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

ಹೊಸಹೊಸ ಪ್ರಯೋಗಗಳನ್ನು ಬಯಸುವ ಕನ್ನಡ ರಂಗಭೂಮಿಗೆ ಇದು ಮರಾಠಿ ಅನುವಾದಿತ ನಾಟಕ. ಈಗಾಗಲೇ ರಂಗದಲ್ಲಿ ಪ್ರದರ್ಶನಗೊಂಡು ಜನಪ್ರಿಯತೆ ಗಳಿಸಿದೆ. ಕಥಾವಸ್ತು ತುಂಬ ಸರಳವಾದರೂ ನಾಟಕದ ನಿರೂಪಣೆ ಮತ್ತು ಸಂಭಾಷಣೆಯ ದೃಷ್ಟಿಯಿಂದ ತೀರಾ ಹೊಸತನವನ್ನು ಮೈಗೂಡಿಸಿಕೊಂಡಿದೆ. ಮುಗ್ಧ ಮನುಷ್ಯನ ಸಹಜ ಆಕಾಂಕ್ಷೆ ಮಹತ್ವಾಕಾಂಕ್ಷೆಯಾಗಿ ಪರಿವರ್ತಿತಗೊಂಡಾಗ ಮಾನವೀಯ ಮೌಲ್ಯಗಳು ಕುಸಿಯುವುದನ್ನು ನಾಟಕವು ಹೇಳುತ್ತದೆ. ಸೊಗಸಾದ ಅನುವಾದ ಚೌಗಲೆ ಅವರದ್ದು.

— ಇಂದಿರಾ ಕುಮಾರಿ

# ಹುಲ್ಲು-ಹಸಿರು
# ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಸ್ಥಿತಿಗತಿ

**ಡಿ. ವಿ. ಪ್ರಹ್ಲಾದ್**



ವಿದ್ಯಾವರ್ಧಕ ಸಂಘ, ಧಾರವಾಡ

**ಈ** ಲೇಖನವು ಪೂರ್ಣಗೊಳ್ಳುವ ಹೊತ್ತಿಗೆ ಮೂಡಬಿದರೆಯಲ್ಲಿ ನಡೆಯಲಿರುವ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಆಯ್ಕೆ ತನ್ನೆಲ್ಲಾ ವಾದ ವಿವಾದಗಳ ಮಧ್ಯದಲ್ಲಿ ಮುಕ್ತಾಯಕಂಡಿದೆ. ಕಡೆಗೂ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಅನ್ನುವುದು ನಾಡಿಗೆ ಸೇವೆ ಸಲ್ಲಿಸಿದ ಲೇಖಕನಿಗೆ ಸಿಗುವ ಗೌರವವಾಗದೆ ಲಾಬಿಗ್ರಸ್ತರ ಅಟ್ಟಹಾಸಕ್ಕೆ ಗುಂಪುಗಾರಿಕೆಯ ಪ್ರಾಬಲ್ಯಕ್ಕೆ ಬಲಿಯಾಗಿದೆ.

ನಮ್ಮ ಸಾಮಾಜಿಕ ಹಾಗೂ ಸಾಂದರ್ಭಿಕ ಅಗತ್ಯಗಳಿಗೆ ತಕ್ಕಹಾಗೆ ಕೆಲವು ನಿರ್ದಿಷ್ಟ ಉದ್ದೇಶಗಳನ್ನು ಹೊತ್ತ ಸಾಂಸ್ಕೃತಿಕ ಸಂಸ್ಥೆಗಳು ಆಯಾ ಕಾಲಕ್ಕೆ ರೂಪುಗೊಂಡವು, ಬೆಳೆದವು ಹಾಗೂ ನಿಂತವು. ಸ್ವಾತಂತ್ರ್ಯಾನಂತರದ ಸಮಾಜವಾದೀ ಸಿದ್ಧಾಂತದ ನೆಲೆಯಲ್ಲಿ ರೂಪುಗೊಂಡ ನಮ್ಮ ಸರ್ಕಾರದ ಧೋರಣೆಗಳಲ್ಲಿ ಈ ರೀತಿಯ ಸಾಂಸ್ಕೃತಿಕ ಚಟುವಟಿಕೆಗಳನ್ನು ಪೋಷಿಸುವ ಬೆಳೆಯಿಸುವ ಜವಾಬ್ದಾರಿಯನ್ನು ಸರ್ಕಾರವೇ ಹೊತ್ತು ಅದನ್ನೊಂದು ನಿರಂತರವಾದ ಕ್ರಿಯೆಯಾಗಿ ನಡೆಸಿಕೊಂಡು ಬಂದಿದೆ. ನಮ್ಮ ಎಲ್ಲ ಸಾಂಸ್ಕೃತಿಕ ಸಂಸ್ಥೆಗಳ ಜೊತೆಗೂ ಸರ್ಕಾರ ಗೌರವದಿಂದ ಪೋಷಕ ಭಾವದಿಂದಲೇ ನಡೆದುಕೊಂಡು ಬಂದಿದೆ.

ನಮ್ಮ ಮುಖ್ಯವಾದ ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳ ಅವಲೋಕನ ಈ ಲೇಖನದ ಉದ್ದೇಶ.

ನಮ್ಮ ರಾಜ್ಯದ ಅತ್ಯಂತ ಹಿರಿಯ ಸಾಂಸ್ಕೃತಿಕ ಸಂಸ್ಥೆ ಧಾರವಾಡದ ವಿದ್ಯಾವರ್ಧಕ ಸಂಘ. ೧೮೮೭ರಲ್ಲಿ ರ. ಹ. ದೇಶಪಾಂಡೆಯವರಿಗೆ ಮುಂಬೈ ಪ್ರಾಂತ್ಯದಲ್ಲಿ ಕನ್ನಡ ಭಾಷೆಯ ಉಳಿವು ಹಾಗೂ ಅದರ ಆಗಿನ ದೀನಸ್ಥಿತಿಯನ್ನು ದೂರ ಮಾಡುವುದಕ್ಕೆ ಒಂದು ಸಂಘವನ್ನು ಸ್ಥಾಪಿಸುವ ವಿಚಾರ ರೂಪುಗೊಂಡು ೧೮೯೦ರಿಂದ ವಿದ್ಯಾವರ್ಧಕ ಸಂಘವು ಸ್ಥಾಪಿತಗೊಂಡು ಬೆಳೆದುನಿಂತಿದೆ. ಆ ಕಾಲದ ಕನ್ನಡದ ಬಗೆಗಿನ ಅಭಿಮಾನ ಮತ್ತು ಕರ್ನಾಟಕತ್ವದ ಪ್ರತಿಪಾದನೆಯನ್ನು ವಿದ್ಯಾವರ್ಧಕ ಸಂಘವು ಯಶಸ್ವಿಯಾಗಿಯೇ ನಡೆಯಿಸಿತು. ಅದರ ಭಾಗವಾಗಿ ಪ್ರಕಟಗೊಂಡ 'ವಾಗ್ಭೂಷಣ' ಪತ್ರಿಕೆಯು ಆ ಕಾಲದ ಅನೇಕ ಹಿರಿಯ ಲೇಖಕರ ವೇದಿಕೆಯೂ ಆಗಿತ್ತು. ಮೊತ್ತ ಮೊದಲ ಬಾರಿಗೆ ಕರ್ನಾಟಕದ ಏಕೀಕರಣದ ಕಹಳೆ ಮೊಳಗಿದ್ದೂ ಇಲ್ಲಿಂದಲೇ.

ಧಾರವಾಡಕ್ಕೆ ಭೂಷಣಪ್ರಾಯವಾಗಿರುವ ಈ ಸಂಸ್ಥೆ ಈಗಾಗಲೇ ಇರುವ ತನ್ನ ದತ್ತಿನಿಧಿಗಳು ಮತ್ತು ಇತರ ಕೆಲವು ನಿಶ್ಚಿತ ಕಾರ್ಯಕ್ರಮಗಳನ್ನು ಹೊರತುಪಡಿಸಿ, ಇವತ್ತಿನ ನಮ್ಮ ಭಾಷಿಕ-ಸಾಂಸ್ಕೃತಿಕ ಅಗತ್ಯಗಳಿಗೆ ಸ್ಪಂದಿಸುವ ಯಾವುದೇ ಕೆಲಸದಲ್ಲೂ ತೊಡಗಿಲ್ಲ. ಇವತ್ತು ವಿದ್ಯಾವರ್ಧಕ ಸಂಘದ ಪದಾಧಿಕಾರ ಪ್ರತಿಷ್ಠೆಯ ವಿಚಾರವಾಗಿ ಅದರ ಹಿಂದಿರುವ ಸ್ಪರ್ಧೆಗಳು, ಲಾಬಿಗಳು, ಹಣಾಹಣಿ, ಯಾವ ರಾಜಕೀಯ ಪಕ್ಷಗಳ ಹಣಾಹಣಿಗೂ ಸಮವಾಗಿದೆ.

೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತಿಗೆ ''ಕನ್ನಡ ಭಾಷೆಯನ್ನು ಪರಿಷ್ಕಾರಪಡಿಸಿ, ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸಿ ಭಾಷೆಯೂ ಸಾಹಿತ್ಯವೂ ಇಂದಿನ ಜನಜೀವನಕ್ಕೆ ನಾನಾ ವ್ಯವಹಾರಗಳಿಗೆ ಉಪಯೋಗಕರವಾಗುವಂತೆಯೂ ಮಾಡುವುದು ಈ ಸಂಸ್ಥೆಯ ಉದ್ದೇಶವಾಗಿರಬೇಕೆಂಬುದು ಅದರ ಮೂಲ ಸ್ಥಾಪಕರ ತಾತ್ಪರ್ಯ. ಅದರಲ್ಲಿ ರಾಜಕೀಯ ಕೈವಾಡವೂ ಜಾತಿಮತಗಳ ಸ್ಪರ್ಶವೂ ಕಕ್ಷಿ ಪಕ್ಷಗಳ ವೈಷಮ್ಯಗಳೂ ಇರಬಾರದೆಂದು ಅವರ ನಿರೀಕ್ಷೆಯಾಗಿತ್ತು. ಆ ಕಾಲದಲ್ಲಿ ಇಂಥಾ ಒಂದು ಬಿರುಕುಗಳ ಸೂಚನೆಯೂ ಇರಲಿಲ್ಲ'' ಎಂದು ಡಿ.ವಿ.ಜಿ.ಯವರು ತಮ್ಮ ಜ್ಞಾಪಕ ಚಿತ್ರಶಾಲೆಯಲ್ಲಿ ಪರಿಷತ್ತಿನ ಸ್ಥಿತಿಗತಿಗಳ ಬಗ್ಗೆ ಚರ್ಚಿಸುತ್ತಾರೆ. ಅವರು ಇದನ್ನ ಬರೆಯುವ ಕಾಲಕ್ಕಾಗಲೇ ಪರಿಷತ್ತಿನ ಗೋಡೆಗಳಲ್ಲಿ ಬಿರುಕುಗಳನ್ನು ಗುರುತಿಸಿದ್ದಾರೆ.

ಸಾಹಿತ್ಯ ಪರಿಷತ್ತು ಬರೇ ಸಾಹಿತ್ಯ ಕೇಂದ್ರಿತ ಚಟುವಟಿಕೆಗಳ ಕೇಂದ್ರ ಆಗಬೇಕೆನ್ನುವುದು ಕೆಲವರ ಅಭಿಪ್ರಾಯವಾದರೆ, ಇದು ಒಟ್ಟಾರೆಯಾಗಿ ಕನ್ನಡ ನಾಡಿನ ಹೆಮ್ಮೆಯಾಗಬೇಕು ಎನ್ನುವುದು ಮತ್ತೆ ಕೆಲವರ ಅನಿಸಿಕೆ. ಪರಿಷತ್ತು ಇವೆರಡೂ ಆಗದೆ ಜಾತೀಯತೆ, ಪರಸ್ಪರ ಸ್ಪರ್ಧೆಯ ಆವತ್ತಿನ ಪರಂಪರೆಯನ್ನು ಇವತ್ತಿಗೂ ಮುಂದುವರಿಸಿದೆ ನಿಜ, ಸಾಮಾಜಿಕ ಜೀವನದ ಎಲ್ಲ ಒಳಿತು ಕೆಡಕುಗಳೂ ಉಳಿದ ಸಂಸ್ಥೆಗಳಲ್ಲೂ ಕಾಣಬರುವುದು ಅಸಹಜವೂ ಅಲ್ಲ.

ಪರಿಷತ್ತು ವರ್ಷಕ್ಕೊಮ್ಮೆ ನಡೆಯಿಸುವ ಸಾಹಿತ್ಯ ಸಮ್ಮೇಳನವೆಂಬ ರಾಜಕೀಯ ಪ್ರಹಸನ ಬಿಟ್ಟರೆ ಉಳಿದ ಯಾವುದೇ ರೀತಿಯ ಇವತ್ತಿಗೆ ಸಂಗತವಾಗಬಲ್ಲಂಥ ಗುರಿ ಉದ್ದೇಶಗಳು ಪರಿಷತ್ತಿನ ಎದುರಿಗಿಲ್ಲ. ಪರಿಷತ್ತು ಪ್ರಕಟಿಸುತ್ತಿರುವ ಪ್ರಕಟಣೆಗಳ ಗುಣಮಟ್ಟ ಅತಿ ಕಳಪೆಯಾದದ್ದು ಒಂದುಕಡೆಗಾದರೆ, ನಿಘಂಟು ಕಾರ್ಯಕ್ಕೆ ತೊಡಕು ನೂರಾಎಂಟು. ಪರಿಷತ್ತಿನ ಪುಸ್ತಕಗಳನ್ನು ಪ್ರತೀ ವರ್ಷ ಅರ್ಧ ಬೆಲೆಗೆ ಕೊಟ್ಟರೂ ಖರ್ಚಾಗದ ಗುಣಮಟ್ಟದವು. ಇದೆಲ್ಲದರ ಜೊತೆಗೆ ಇವತ್ತಿನ ಜನಜೀವನಕ್ಕೆ ಹತ್ತಿರವಾಗಬಲ್ಲ ಮಾಧ್ಯಮಗಳಾಗಲೀ ಅಥವಾ ಅಂಥಾ ಹೊಸ ಆಲೋಚನೆಗಳಾಗಲೀ ಪರಿಷತ್ತಿನ ಹೊಣೆ ಹೊತ್ತವರಿಗೆ ಗೋಚರಿಸುತ್ತಿಲ್ಲ. ಪ್ರತೀ ವರ್ಷವೂ ನಡೆಯುವ ಸಮ್ಮೇಳನಕ್ಕೆ ಆಯಾ ಸ್ಥಳೀಯ ರಾಜಕಾರಣಿಗಳ ಧನಾಢ್ಯರ ಬೆಂಬಲವಿಲ್ಲದೆ ಅಷ್ಟೊಂದು ದೊಡ್ಡಮಟ್ಟದ ಸಮ್ಮೇಳನ ಸಂಘಟಿಸಲು ಅಸಾಧ್ಯ. ಹಾಗಾಗಿ ಪರಿಷತ್ತು ರಾಜಕಾರಣಿಗಳನ್ನು ಓಲೈಸಲೇಬೇಕು. ಸರ್ಕಾರದಿಂದಲೇ ಹಣ ಪಡೆದು ಅದರ ಕಾರ್ಯ ನೀತಿಗಳನ್ನು ವಿಮರ್ಶಾತ್ಮಕವಾಗಿ ನೋಡಬಲ್ಲ ನೈತಿಕ ಶಕ್ತಿ ಪರಿಷತ್ತಿಗೆ ಯಾವತ್ತೂ ಇರಲಿಲ್ಲ. ಅದರ ಪರಂಪರೆಯಲ್ಲೇ ಪ್ರಭುತ್ವದ ಗಾಢವಾದ ಭಕ್ತಿ ಶ್ರದ್ಧೆಗಳು ತುಂಬಿಕೊಂಡಿವೆ. ಇದು ಪರಿಷತ್ತಿನ ಹುಟ್ಟಿನ ಹಿನ್ನೆಲೆ, ನಡೆದುಬಂದ ದಾರಿ ಗಮನಿಸಿದರೆ ಗೋಚರಿಸುತ್ತದೆ.

ಕೆ. ವಿ. ಸುಬ್ಬಣ್ಣ ಅವರ ಈ ಕೆಲ ಮಾತುಗಳನ್ನ ಗಮನಿಸಿ : ... ನಿಜವಾಗಿ ಪರಿಷತ್ತಿಗೆ ಯಾವಾಗ ರೋಗ ಬಡಿಯಿತು ? ಬೆಳ್ಳಾವೆ ಅವರಿಗಿಂತಲೂ ಹೆಚ್ಚು ಅಸಾಹಿತಿಗಳಾದವರು ಇಲ್ಲಿ ಪ್ರವೇಶಿಸಿದಾಗ ಅಲ್ಲ, ಸರ್ಕಾರದ ಸುಲಭ ಹಣ ಇಲ್ಲಿ ನಿಯಂತ್ರಣವಿಲ್ಲದೆ ಹರಿಯತೊಡಗಿದಾಗ ಕ್ರಮೇಣ ಪರಿಷತ್ತು ಹಣದ ಕೇಂದ್ರವಾಯಿತು. ಅಸಾಹಿತಿಗಳನ್ನು ಆಕರ್ಷಿಸಿತು. ಅಷ್ಟೇ ಅಲ್ಲ ದುರ್ಬಲ ಸಾಹಿತಿಗಳನ್ನು ಸೋಲಿಸಿ ಭ್ರಷ್ಟರನ್ನಾಗಿಸಿತು (ಕಸಾಪ ಕ್ಯಾನ್ಸರಿಗೆ ಲಂಘನ ಮದ್ದು ಲೇಖನದಿಂದ).

ಬಹಳಷ್ಟು ಸಲ ಪರಿಷತ್ತಿನ ವಿರುದ್ಧವಾಗಿ ಧ್ವನಿ ಎದ್ದರೂ ಪ್ರತಿಭಟನೆಗಳು ನಡೆದರೂ ಉಳಿದದ್ದು ಪರಿಷತ್ತು ಮಾತ್ರ. ಪ್ರಭುತ್ವಕ್ಕೆ ಹತ್ತಿರವಾದ ಪರಿಷತ್ತಿನಿಂದ ಬಂಡಾಯ ಸಾಹಿತಿಗಳು ಒಂದು ನಿರ್ದಿಷ್ಟ ವಿರೋಧ ಮತ್ತು ದೂರಗಳನ್ನು ಆ ಚಳವಳಿಯ ಆರಂಭಿಕ ದಿವಸಗಳಲ್ಲಿ ಕಾಯ್ದುಕೊಂಡರೂ ಈಗ ಅದೇ ಲೇಖಕರು ಪರಿಷತ್ತಿನ ಪದಾಧಿಕಾರಕ್ಕೆ ಹೋರಾಟ ಸ್ಪರ್ಧೆಯಲ್ಲಿ ತೊಡಗಿರುವುದು ಇತಿಹಾಸದ ವ್ಯಂಗ್ಯ. ಉಳಿದಂತೆ ಸಮ್ಮೇಳನಕ್ಕೆ ಪರ್ಯಾಯವಾಗಿ ನಡೆದ ಜಾಗೃತ ಸಾಹಿತ್ಯ ಸಮ್ಮೇಳನವೂ ಆರಂಭ ಶೂರತ್ವವಾಗಿ ಮುಗಿಯಿತು. ಅದಕ್ಕೊಂದು ನಿಶ್ಚಿತ ರೂಪು ದಕ್ಕಲೇ ಇಲ್ಲ. ಪ್ರತಿಸಲವೂ ಪರಿಷತ್ತು ತನ್ನ ಬೇರು ಕಾಂಡಗಳನ್ನ ಭದ್ರವಾಗಿಸಿಕೊಳ್ಳುತ್ತಿದೆ. ಸಮಸ್ತ ಕನ್ನಡಿಗರ ಧ್ವನಿಯಾಗಬಲ್ಲ ಪ್ರಭುತ್ವವನ್ನ ಟೀಕಿಸಬಲ್ಲ ನೈತಿಕ ಸ್ಥೈರ್ಯವುಳ್ಳ ಸಂಸ್ಥೆ ಕನ್ನಡಕ್ಕೆ ಯಾವತ್ತಿನಿಂದಲೋ ಬೇಕಾಗಿದೆ. ದುರ್ದೈವ ಹಾಗೆ ಆಗಿಲ್ಲ. ಕನ್ನಡಿಗರ ಜನಜೀವನಕ್ಕೂ ಪರಿಷತ್ತಿನ ಉದ್ದೇಶ ಆಚರಣೆಗಳಿಗೂ ಇರುವ ಗೋಡೆ ಅಗಾಧವಾಗಿದೆ.

ಇಡೀ ದೇಶದಲ್ಲಿ ಕಲೆ-ಸಂಸ್ಕೃತಿ ಕುರಿತಾಗಿ ಇಷ್ಟೊಂದು ಅಂಗಸಂಸ್ಥೆಗಳನ್ನ, ಅಕಾಡೆಮಿ-ಪ್ರಾಧಿಕಾರಗಳನ್ನ ಹೊಂದಿರುವ ರಾಜ್ಯ ಕರ್ನಾಟಕವೊಂದೇ ಇರಬೇಕು. ಸಂಸ್ಕೃತಿ ಇಲಾಖೆಯನ್ನೂ ಒಳಗೊಂಡು ಎಲ್ಲ ಅಕಾಡೆಮಿ ಪ್ರಾಧಿಕಾರಗಳೂ ಸೇರಿಕೊಂಡು ಸ್ಪರ್ಧೆಗೆ ಬಿದ್ದವರ ಹಾಗೆ ರಾಶಿಗಟ್ಟಲೆ ಪುಸ್ತಕಗಳನ್ನು ಪ್ರಕಟಿಸುವ ಕೆಲಸ ನಡೆಯುತ್ತಿದೆ. ಪ್ರತಿ

ಅಕಾಡೆಮಿಯು ತನ್ನ ಮಿತಿಯೊಳಗೆ ಪ್ರಶಸ್ತಿಗಳನ್ನ ಕೊಡುವುದು ಮತ್ತು ಕೆಲವು ನಿಶ್ಚಿತ ಕಾರ್ಯಕ್ರಮಗಳನ್ನು ನಡೆಸುವುದಕ್ಕಷ್ಟೇ ಮಿತಗೊಂಡಿವೆ.

ಇವುಗಳ ಸದಸ್ಯತ್ವಕ್ಕೆ ಅಧಿಕಾರಕ್ಕೆ ನಡೆಯುವ ಪೈಪೋಟಿ ಮತ್ತು ಅವುಗಳನ್ನ ಆರಿಸುವ ಕುರುಡು ಮಾನದಂಡಗಳನ್ನ ಗಮನಿಸಿದರೆ ಇವುಗಳ ಸಾರ್ಥಕತೆ ಅರ್ಥವಾದೀತು. ಜಾತಿ ಪ್ರಾತಿನಿಧ್ಯ, ಜಿಲ್ಲಾವಾರು ಪ್ರಾತಿನಿಧ್ಯ, ಮಂತ್ರಿ-ರಾಜಕಾರಣಿಗಳ ಒತ್ತಾಯ ಇವೆಲ್ಲಾ ಸೇರಿ ಅನೇಕ ಅಕಾಡೆಮಿಗಳು ಸರ್ಕಾರಿ ಶೈಲಿಯ ಉದಾಹರಣೆಗಳಾಗಿವೆ. ಇವುಗಳಿಗಿರುವ ಸೀಮಿತ ಸಂಪನ್ಮೂಲದಲ್ಲಿ ಜೊತೆಗೆ ಸರ್ಕಾರಿ ನಿಯಮಗಳ ಅಡಿಯಲ್ಲಿ ಪ್ರಶಸ್ತಿ-ಪುಸ್ತಕ ಇವೆರಡನ್ನ ಬಿಟ್ಟರೆ ಮತ್ತ್ಯಾವುದೇ ಅರ್ಥಪೂರ್ಣ ಕೆಲಸ ಅಸಾಧ್ಯ. ಯಾವ ಕಲೆ-ಸಾಹಿತ್ಯ ಇವುಗಳಿಂದ ಬೆಳೆದೀತು! ಬೆಳೆಯುವವರು ಏನಿದ್ದರೂ ಸರ್ಕಾರಿ ಸಾಹಿತಿಗಳು, ಕಲಾವಿದರು. ಆದರೂ ಇವುಗಳಲ್ಲಿ ಅರ್ಥಪೂರ್ಣವಾದ ಕೆಲಸಗಳು ನಡೆದಿಲ್ಲ ಎನ್ನುವ ಸಾರಾಸಗಟು ಅಭಿಪ್ರಾಯಕ್ಕೆ ತಲುಪಲಾಗುವುದಿಲ್ಲ. ಅಂಥವು ನಡೆಯುವುದು ಅದರ ಸಾರಥ್ಯ ಜವಾಬ್ದಾರಿ ಹೊತ್ತ ಕೆಲವರ ಪರಿಶ್ರಮ ಪ್ರತಿಭೆಗಳ ಕಾರಣದಿಂದ.

ಹಣ ಸಾಲದು - ಸಿಗುವ ಅನುದಾನ ಕಮ್ಮಿ ಎನ್ನುವುದು ಬಹುಪಾಲು ಎಲ್ಲಾ ಅಕಾಡೆಮಿಗಳ ಹುಯಿಲು. ಆದರೆ ಯಾವ ಸಂಸ್ಥೆಯೂ ಬೇರೆಯ ರೀತಿಯಲ್ಲಿ (ನ್ಯಾಯವಾದ) ಸಂಪನ್ಮೂಲದ ಕ್ರೋಡೀಕರಣದ ದಿಕ್ಕಿನಲ್ಲಿ ಆಲೋಚಿಸಿ ಪ್ರಯತ್ನಿಸಲು ಸಾಧ್ಯವಾಗಿಲ್ಲ. ತಾನು ಪೋಷಿಸುವ ದಿಕ್ಕು ತೋರುವ ಸರ್ಕಾರಿ ಅಹಂಕಾರ ಅಕಾಡೆಮಿಗಳ ನಿಲುವಿನಲ್ಲಿರುವ ತನಕ ಈಗಿರುವ ಅದೇ ಗಾಣ ಸುತ್ತುವ ಯಾಂತ್ರಿಕ ಸ್ವರೂಪವನ್ನ ಬಿಟ್ಟು ಬೇರೆ ಯಾವುದೇ ಹೊಸ ರೀತಿಯ ರಚನಾತ್ಮಕ ಕ್ರಿಯಾತ್ಮಕ ಕಾರ್ಯ ಕಷ್ಟವೆ.

ಈ ಎಲ್ಲಾ ಸಾಂಸ್ಕೃತಿಕ ಸಂಸ್ಥೆಗಳೂ ಸಮಕಾಲೀನ ಅಗತ್ಯಗಳಿಗೆ ಸ್ಪಂದಿಸಬೇಕಾದ ಅಗತ್ಯ ಯಾವತ್ತಿಗಿಂತಲೂ ಈಗ ಹೆಚ್ಚಾಗಿದೆ. ನಮ್ಮ ಶಿಕ್ಷಣ ವ್ಯವಸ್ಥೆಯಂತೂ ಎಲ್ಲರನ್ನೂ ಹಣ ದುಡಿಯುವ ಯಂತ್ರಗಳನ್ನಾಗಿಸುವಲ್ಲಿ ನಿರ್ದೇಶಿಸುತ್ತಿರುವ ವೈರುಧ್ಯಮಯ ಸನ್ನಿವೇಶದಲ್ಲಿ ಯುವಜನಾಂಗದೊಂದಿಗೆ ಸಂಪರ್ಕ ಸಂವಹನ ಸಾಧ್ಯವಾಗಬೇಕು. ಸಾಹಿತಿಗಳನ್ನ ಕಲಾವಿದರನ್ನ ರೂಪಿಸಲಿಕ್ಕೆ ಸಾಧ್ಯ ಆಗದಿದ್ದರೂ ಅದರ ಅಭಿರುಚಿಯನ್ನ ಖಂಡಿತವಾಗಿಯೂ ಬೆಳೆಸಬಹುದು.

ಪ್ರಜಾಪ್ರಭುತ್ವದ ಕಾರ್ಯಸ್ವರೂಪವುಳ್ಳ ಈ ಸಂಸ್ಥೆಗಳಿಗೆ ಇರುವ ಮಿತಿಗಳನ್ನ, ಕಾರ್ಯವಿಧಾನಕ್ಕೆ ಇರುವ ಇರಬೇಕಾದ ನೀತಿ ನಿಯಮಗಳನ್ನ – ಒಪ್ಪಿಕೊಳ್ಳುತ್ತಲೇ ಅವುಗಳನ್ನ ಗೌರವಿಸುತ್ತಲೇ ನಾವು ಅವುಗಳ ಅರ್ಥಪೂರ್ಣತೆಯನ್ನ ನಿರೀಕ್ಷಿಸಬೇಕಾಗುತ್ತದೆ. ಅವುಗಳು ಶ್ರೇಷ್ಠವಾದವು, ಪವಿತ್ರವಾದವು ಅಥವಾ ಹಾಗಿರಬೇಕು ಎನ್ನುವ ಹುಸಿ ನಿರೀಕ್ಷೆಗಳನ್ನ ಬದಿಗಿಟ್ಟು ಇವುಗಳ ಕಾರ್ಯ ಸಾಧ್ಯತೆ ಹಾಗೂ ಮಿತಿಗಳನ್ನ ಗುರುತಿಸಬೇಕು. ಸರ್ಕಾರದ ಹಣ-ಅಧಿಕಾರದಿಂದ ಸಂಸ್ಕೃತಿ ಬೆಳೆಯುವುದು ಸುಳ್ಳು.

ಹಾಗಿದ್ದರೆ ಈ ಸಂಸ್ಥೆಗಳ ಮಿತಿಯನ್ನೂ ಮೀರಿ ಕನ್ನಡ ಸಂಸ್ಕೃತಿ ಜೀವಂತಗೊಂಡಿರುವ ಅನೇಕ ಸರ್ಕಾರೇತರ ಮತ್ತು ಸಂಸ್ಥೆಯ ಸ್ವರೂಪ ಪಡೆಯದ ಚಟುವಟಿಕೆಗಳು ಹುಲ್ಲು ಹಸಿರಾಗಿ ಜೀವಂತವಾಗಿದೆ. ಇಂಥವು ನಮ್ಮ ಸರ್ಕಾರಿ ಸಾಂಸ್ಕೃತಿಕ ಗದ್ದಲಕ್ಕೆ ಪರ್ಯಾಯವಾಗಿ ಅವು ರೂಪಿಸುತ್ತಿರುವ ಕಿರು ಸಂಸ್ಕೃತಿಯನ್ನ ಗಮನಿಸಬಹುದು.

ಇಂಥವುಗಳ ವರ್ಗೀಕರಣದಲ್ಲಿ ಕೆಲವು ಕಾಲೇಜು ಕನ್ನಡ ಸಂಘಗಳು, ಖಾಸಗಿ ಸಂಘ ಸಂಸ್ಥೆಗಳು, ಕಿರುಸಾಹಿತ್ಯ ಪತ್ರಿಕೆಗಳು, ಚರ್ಚಾಕೂಟಗಳು, ಕಲಾಶಾಲೆಗಳು, ಸಂಗೀತದ ಆಸಕ್ತರ ಸಭೆ ಸಂಸ್ಥೆಗಳು ರಾಜ್ಯದ ಉದ್ದಗಲಕ್ಕೂ ನೂರಾರಿವೆ. ಇವುಗಳಲ್ಲಿ ಅನೇಕ ಚಟುವಟಿಕೆಗಳು ಅಲ್ಪಾಯುಷಿ, ಏಕವ್ಯಕ್ತಿ ಅಥವಾ ಕೆಲವು ಆಸಕ್ತರ ಶ್ರಮದ ಫಲಗಳು. ಹಾಗಾಗಿಯೂ ಅವು ಸಾಂಸ್ಕೃತಿಕವಾಗಿ ಮಹತ್ವವುಳ್ಳದ್ದಾಗಿವೆ. ಜೊತೆಗೆ ಇಲ್ಲಿ ಜೀವಂತಿಕೆ ಇದೆ.

ಕಾಲೇಜು ಕನ್ನಡ ಸಂಘಗಳದ್ದು ಒಂದು ಪರಂಪರೆಯೇ ನಮ್ಮಲ್ಲಿದೆ. ಎ. ಆರ್. ಕೃಷ್ಣಶಾಸ್ತ್ರಿ ಮತ್ತು ಜಿ. ಪಿ. ರಾಜರತ್ನಂ ಅವರುಗಳು ಬೆಳೆಸಿ ಪೋಷಿಸಿದ 'ಸೆಂಟ್ರಲ್ ಕಾಲೇಜು ಕನ್ನಡ ಸಂಘ' ಅನೇಕ ಇವತ್ತಿನ ಹಿರಿಯ ಲೇಖಕರನ್ನ ರೂಪಿಸಿದೆ, ಬೆಳೆಸಿದೆ. ಅಂಥದ್ದೇ ಮತ್ತೊಂದು ಉದಾಹರಣೆ ಕ್ರೈಸ್ಟ್ ಕಾಲೇಜು ಕನ್ನಡ ಸಂಘದ್ದು. ಯಾವ ಅಕಾಡೆಮಿಗಳೂ ಪ್ರಕಟಿಸಲಾರದಷ್ಟು ಬೆಳೆಸಲಾರದಷ್ಟು ಉತ್ತಮ ಗುಣಮಟ್ಟದ ಸಾಹಿತ್ಯ ಮತ್ತು ಅಭಿರುಚಿಯನ್ನ ಬಿತ್ತಿ ಬೆಳೆದಿದೆ. ನೂರಾರು ಪುಸ್ತಕಗಳ ಜೊತೆಗೆ ಬರೆಯಬಲ್ಲ ಎಳೆಯ ಬೆರಳುಗಳನ್ನ ಕ್ರೈಸ್ಟ್ ಕಾಲೇಜು ಗುರುತಿಸಿ ಪೋಷಿಸಿದೆ. ಏಕವ್ಯಕ್ತಿ ಪರಿಶ್ರಮದ ಮಿತಿಯ ಹಾಗೆ ಶ್ರೀನಿವಾಸರಾಜು ಅವರ ನಿವೃತ್ತಿಯ ನಂತರ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ತನ್ನ ಹಳೆಯ ಹೆಸರು ವರ್ಚಸ್ಸು ಹೊತ್ತಿದ್ದರೂ ಜೀವಂತಿಕೆ ಚಟುವಟಿಕೆಗಳಿಲ್ಲದೆ ಸೊರಗಿಹೋಗಿದೆ. ಈಗ ಅದು ಕೊಟ್ಟ ಕೊಡುಗೆ ಮಾತ್ರ ನೆನಪಾಗಿ ಉಳಿದಿದೆ.

ಉಳಿದ ಹಾಗೆ ಅನೇಕ ವೃತ್ತಿನಿರತ ಪ್ರಕಟಣಾ ಸಂಸ್ಥೆಗಳು ತಮ್ಮ ಕೆಲಸಗಳನ್ನ ನಿರಂತರವಾಗಿ ನಡೆಯಿಸಿಕೊಂಡು ಬರುತ್ತಿವೆ. ಅತೀ ಹಳೆಯ ಈ ಶತಮಾನದ ಆರಂಭದ ಇತಿಹಾಸ ಪ್ರಸಿದ್ಧ 'ಗೆಳೆಯರ ಗುಂಪಿ'ನ ಟಿಸಿಲಾಗಿ ಚಿಗುರಿದ ಮನೋಹರ ಗ್ರಂಥಮಾಲೆ ನಮ್ಮ ನವ್ಯ ಸಾಹಿತ್ಯ ಹಾಗೂ ನವೋದಯದ ಬಹುಮುಖ್ಯ ಲೇಖಕರ ಪ್ರಧಾನ ಪ್ರಕಟಣೆಯ ಸಂಸ್ಥೆಯಾಗಿ ಬೆಳೆದುನಿಂತಿದೆ. ಮನೋಹರ ಗ್ರಂಥಮಾಲೆಗೆ ವಯಸ್ಸಾಗಿದೆ. ಅದರ ಪ್ರಕಟಣೆ ಮತ್ತು ಚಟುವಟಿಕೆಗಳಲ್ಲಿರುವ ಜೀವಂತಿಕೆ ಇಳಿಮುಖವಾಗಿದೆ. ಸಹಜವಾಗಿ, ಹೊಸ ರಕ್ತ, ಹೊಸ ಆಲೋಚನೆಗಳು ಇದಕ್ಕೆ ಅಗತ್ಯವಾಗಿ ಬೇಕಿದೆ.

'ನಮ್ಮ ಪಾಡಿಗೆ ನಾವು ಕೆಲಸ ಮಾಡುತ್ತಿರೋಣ' ಎನ್ನುವ ಕೆ. ವಿ. ಸುಬ್ಬಣ್ಣನವರ ಮಾತು ಅವರ ಎಲ್ಲಾ ಚಟುವಟಿಕೆಗಳಿಗೂ ಅನ್ವಯಿಸುತ್ತದೆ. ಹೆಗ್ಗೋಡಿನ ಸಾಂಸ್ಕೃತಿಕ ಚಟುವಟಿಕೆಗಳ ಅಂಗವಾಗಿ ಅದರ ನಾಟಕ ಶಾಲೆಯ ಜೊತೆಗೆ ಅಲ್ಲಿನ 'ಅಕ್ಷರ ಪ್ರಕಾಶನ' ನಮ್ಮ ನಾಡಿನ ಬಹುಮುಖ್ಯವಾದ ಸಂಸ್ಥೆಯಾಗಿದೆ. ನವ್ಯ ತಲೆಮಾರಿನ ಅನೇಕ ಮುಖ್ಯ ಲೇಖಕರನ್ನ ಪ್ರಕಟಿಸಿ ಬೆಳೆಸಿದ್ದು 'ಅಕ್ಷರ ಪ್ರಕಾಶನ.' ಆ ಕಾಲಕ್ಕೆ ಸಾಕ್ಷಿಯಂಥಾ ಒಂದು ಗಂಭೀರವಾದ ಸಾಹಿತ್ಯ ಪತ್ರಿಕೆ ಆ ಮೂಲಕ ರೂಪಿಸಿದ ಒಂದು ಪರಂಪರೆ ಬಹಳ ಮಹತ್ವವಾದದ್ದು. ಇವತ್ತಿಗೂ ಅಲ್ಲಿನ ಸಂಸ್ಕೃತಿ ಶಿಬಿರ, ಅಕ್ಷರ ಚಿಂತನಮಾಲೆ ಮುಂತಾದವು ಹೆಚ್ಚು ಜೀವಂತಿಕೆಯುಳ್ಳ ಕ್ರಿಯಾತ್ಮಕ ಚಟುವಟಿಕೆಗಳು, ನಮ್ಮ ಯಾವ ವಿಶ್ವವಿದ್ಯಾಲಯಗಳೂ ದೊಡ್ಡ ಪ್ರಮಾಣದ ಜನಗಳನ್ನ ಬುದ್ಧಿವಂತಿಕೆಯನ್ನ ಹಣ ಹೆಸರುಗಳನ್ನ ಹೊತ್ತು ಮಾಡಲು ಸಾಧ್ಯವಾಗದಿದ್ದ ಚಟುವಟಿಕೆಗಳು.

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಹಂಪಿ ವಿಶ್ವವಿದ್ಯಾಲಯವೊಂದೇ ಈಗ ಸುಮಾರು ಹತ್ತು ಕಿರು ಪತ್ರಿಕೆಗಳನ್ನ ಪ್ರಕಟಿಸುತ್ತಿರುವ ಏಕೈಕ ವಿಶ್ವವಿದ್ಯಾಲಯ. ಉಳಿದವು ಗತಕಾಲದ ಇತಿಹಾಸ ಹೇಳುವವು ಅಥವಾ ಒಣಕಲು ಜೊಳ್ಳು ಮುದ್ರಿಸುವಂಥವು. ಕನ್ನಡದ ಕಿರು ಸಾಹಿತ್ಯ ಪತ್ರಿಕೆಗಳೂ ತಮ್ಮ ಕೊಡುಗೆಯನ್ನ ನಿರಂತರವಾಗಿ ತಮ್ಮ ಎಲ್ಲಾ ಮಿತಿಗಳ ಮಧ್ಯದಲ್ಲಿ ಕೊಡುತ್ತಲೇ ಬಂದಿವೆ. ಸಂಕ್ರಮಣ, ರುಜುವಾತು, ಸಾಕ್ಷಿಗಳದ್ದು ಒಂದು ತಲೆಮಾರಾದರೆ, ಎರಡನೆಯದ್ದು ಶೂದ್ರ, ಅಂಕಣ ಮುಂತಾದವು. ಉಳಿದ ಹಾಗೆ ಅನ್ವೇಷಣೆ, ಸಂವಾದ, ಸಂಚಯ, ಅಚಲ, ಅಭಿನವ ಹೀಗೆ ಇವುಗಳೆಲ್ಲವೂ ಒಬ್ಬಿಬ್ಬರ ಶ್ರಮದ ಫಲಗಳಾದರೂ ಅವುಗಳು ಒಂದು ಸಾಂಸ್ಕೃತಿಕ ನಿರಂತರತೆಯನ್ನು ಕಾಪಾಡಿಕೊಂಡು ಬರುತ್ತಿವೆ.

ಕಾಲ ಬದಲಾದಂತೆ ನಿಂತ ನೀರಾಗಿರುವುದಕ್ಕೆ ಯಾವುದಕ್ಕೂ ಅಸಾಧ್ಯ. ನಮ್ಮ ಜನಜೀವನದ ಸವಾಲುಗಳಿಗೆ ತಕ್ಕ ಹಾಗೆ ಅವುಗಳನ್ನ ಅರ್ಥೈಸಿಕೊಂಡು ಸ್ಪಂದಿಸಿ ಪ್ರಸ್ತುತವಾಗಬೇಕಾದ ಜವಾಬ್ದಾರಿ ನಮ್ಮ ಎಲ್ಲಾ ಸಾಂಸ್ಕೃತಿಕ ಚಟುವಟಿಕೆ-ಸಂಸ್ಥೆಗಳ ಮೇಲಿದೆ.

**ಡಿ. ವಿ. ಪ್ರಹ್ಲಾದ್**
ನಂ. ೧೦೦, ೨ನೇ ಮೇನ್, ೬ನೇ ಬ್ಲಾಕ್, ೩ನೇ ಹಂತ, ಬನಶಂಕರಿ, ಬೆಂಗಳೂರು - ೫೬೦ ೦೮೫

# ಜಾಗತೀಕರಣ ಮತ್ತು ಜಾನಪದಗಳ ಬಹುಮುಖಿ ಸಂಬಂಧಗಳು



ಎ. ಚಂದ್ರಶೇಖರ ನಂಗಲಿ

'ಜಾನಪದ' ಎಂಬುದು ಸಮಗ್ರ ಜೀವನಶೈಲಿಗೆ ಅನ್ವಯಿಸುವ ಪರಿಭಾಷೆ. ಇದನ್ನು ಇಡಿಯಾಗಿ ಗ್ರಹಿಸದೆ, ವಿಭಜಿಸುತ್ತಾ ಅಥವಾ ಕಂಪಾರ್ಟ್‌ಮೆಂಟಲೀಕರಿಸಿ ನೋಡುವುದು ವೈಯಕ್ತಿಕ ಹಿತಾಸಕ್ತಿಯಾಗುತ್ತದೆ. ಜಾನಪದದ ಅಖಂಡ ಸ್ವರೂಪವನ್ನು ಒಂದು ಮಾತಿನಲ್ಲಿ ಹೇಳುವುದಾದರೆ, ಕೃಷಿ ಪದ್ಧತಿಗಳು, ಆಹಾರ ಕ್ರಮಗಳು, ವೈದ್ಯಕೀಯಗಳು, ವೈವಿಧ್ಯಮಯ ದುಡಿಮೆಗಳು, ಕಲೆ ಮತ್ತು ಕ್ರೀಡೆಗಳು, ನಂಬಿಕೆ ಮತ್ತು ಆಚರಣೆಗಳು, ಸಸ್ಯ ಮತ್ತು ಪ್ರಾಣಿ ಪರಿಸರಗಳು, ಭೂಮಿ ಮತ್ತು ವಿಶ್ವರಚನೆಗಳು (= ಇಲ್ಲಿರುವ ಬಹುವಚನ ಪ್ರತ್ಯಯ ಗಮನಾರ್ಹ) – ಇವೆಲ್ಲವುಗಳನ್ನು ಒಳಗೊಂಡ ಜನಸಮುದಾಯಗಳ ನಡೆ ಮತ್ತು ನುಡಿಗಳೇ ಜಾನಪದ ಎನ್ನಬಹುದು. ಜಾನಪದದ ಈ ಸುವಿಶಾಲ ಅರ್ಥವ್ಯಾಪ್ತಿಯನ್ನು ಮರೆತು, ಅದನ್ನು ಸಾಹಿತ್ಯಕ್ಕಷ್ಟೆ ಸೀಮಿತಗೊಳಿಸಿ, ಸೋಬಾನೆ ಪದಗಳು, ಗರತಿಯ ಹಾಡುಗಳು, ಬೀದಿವರಿಯೆ ಬೀರನ ಕತೆಗಳು, ಗೊರವರ ದುಂಡುಚಿಯೆಂಬ ಭಾವನೆಯಲ್ಲಿರುವುದು ಸರಿಯಲ್ಲ.

ಜಾಗತೀಕರಣ ಮತ್ತು ಜಾನಪದಗಳ ಬಹುಮುಖಿ ಸಂಬಂಧಗಳನ್ನು ತಿಳಿಯಬೇಕಾದರೆ, ಅಮೆರಿಕಾ ಮತ್ತು ಕರ್ನಾಟಕ ಭಾರತ, ಇಂಗ್ಲಿಷ್ ಮತ್ತು ಕನ್ನಡ – ಎಂಬ ನೆಲೆಗಳನ್ನೊಳಗೊಂಡಂತೆ ಒಟ್ಟಾಗಿ ಗ್ರಹಿಸಬೇಕಾಗುತ್ತದೆ. ಜಾಗತೀಕರಣ ಮತ್ತು ಜಾನಪದಗಳು ಜೀವನಶೈಲಿಯ ಪ್ರಶ್ನೆಯಾಗಿದ್ದರೆ, ಅಮೆರಿಕಾ ಮತ್ತು ಕರ್ನಾಟಕ ಭಾರತಗಳು ದೇಶದ ಪ್ರಶ್ನೆಯಾಗಿದೆ. ಇಂಗ್ಲಿಷ್ ಮತ್ತು ಕನ್ನಡ ಎಂದಾಗ ಭಾಷೆಯ ಪ್ರಶ್ನೆ ಎದುರಾಗುತ್ತದೆ. ಅಂದರೆ, ೧. ಜೀವನಶೈಲಿ ೨. ದೇಶ ಮತ್ತು ೩. ಭಾಷೆಗಳನ್ನು ಅಖಂಡವಾಗಿಯೇ ಚಿಂತಿಸಬೇಕಾಗಿದೆ.

'ಚಿಂತನೆ' ಎಂದಾಗ ನನಗೆ ಲೋಹಿಯಾ ಅವರ ಸುಪ್ರಸಿದ್ಧ ಲೇಖನ 'ರಾಮ ಕೃಷ್ಣ ಶಿವ' ನೆನಪಾಗುತ್ತದೆ. ಈ ಲೇಖನದಲ್ಲಿ ಲೋಹಿಯಾ ಅವರು ಪುರಾಣ - ಇತಿಹಾಸ - ವರ್ತಮಾನಗಳನ್ನು ಒಂದೇ ಬಿಂದುವಿನಲ್ಲಿ ಸಂಧಿಸಿ ನೋಡುವ ಅಪೂರ್ವತೇಜದ ಒಳನೋಟಗಳನ್ನು ನೀಡಿದ್ದಾರೆ. ಈ ಬಗೆಯ ಲೋಹಿಯಾ ಮಾದರಿ ನನ್ನ ಮಟ್ಟಿಗೆ ಅನುಕರಣೀಯವಾಗಿ ಕಂಡಿದೆ. ಜಾಗತೀಕರಣ ಮತ್ತು ಜಾನಪದಗಳ ಬಹುಮುಖಿ ಸಂಬಂಧಗಳನ್ನು ಬಿಂಬಿಸಬಲ್ಲ ಮೂರು ಬಗೆಯ ಮುಖಾಮುಖಿಗಳನ್ನು ಲೋಹಿಯಾ ಮಾದರಿಯಲ್ಲೆ ಮನಗಾಣಿಸಲು ಮುಂದೆ ಯತ್ನಿಸಿದ್ದೇನೆ. ಈ ಮೂರು ದಾರಿಗಳೊಂದಿಗೆ ಇನ್ನೂ ಹಲವು ದಾರಿಗಳನ್ನು ಸಹೃದಯರು ಕಂಡುಕೊಳ್ಳುವಂತಾಗಲೆಂಬ ಹಾರೈಕೆ ನನ್ನಲ್ಲಿದೆ.

**೧. ಕ್ಲುತ್ಯೆಮೇಸ್ತ್ರ – ಕಸಾಂದ್ರ ಮುಖಾಮುಖಿ**

ಈಸ್ಕಿಲಸ್ ಮಹಾಕವಿಯ 'ಅಗಮೆಮ್ನೋನ್' ನಾಟಕದಿಂದ ಈ ಮುಖಾಮುಖಿಯನ್ನು ರೂಪಿಸಲಾಗಿದೆ. ಜಾಗತೀಕರಣ ಮತ್ತು ಜಾನಪದಗಳ ಹಲವು ಬಗೆಯ ಮುಖಾಮುಖಿಗಳಲ್ಲಿ ಇದೊಂದು ಮಾತ್ರ! ಈ ದೃಷ್ಟಿಯಿಂದ ನೋಡಿದರೆ ಜಾಗತೀಕರಣ ಮತ್ತು ಜಾನಪದಗಳು ನಿಶ್ಚಿತವಾಗಿಯೂ ವಿರುದ್ಧ ಧ್ರುವಗಳು. ಜಾಗತೀಕರಣವೆಂಬುದು ಕ್ಲುತ್ಯೆಮೇಸ್ತ್ರ ಯೋಜಿಸಿದ ಒಂದು ಮಹಾಯಜ್ಞ. ಇದಕ್ಕೆ ಬಲಿಪಶುವಾಗುವ ಕಸಾಂದ್ರಳಂತೆ ಜಾನಪದದ ಅಸ್ತಿತ್ವವಿದೆ.



ಸರಕು ಸಂಸ್ಕೃತಿಯ ಜಾಗತೀಕರಣವು ಮೂಲತಃ ವಾಣಿಜ್ಯ ದೃಷ್ಟಿಯ ವಿಶ್ವಗ್ರಾಮದ ಪರಿಭಾಷೆ. ಸಮುದಾಯ ಸಂಸ್ಕೃತಿಯ ಜಾನಪದವು ಮೂಲತಃ ಸಾಂಸ್ಕೃತಿಕ ದೃಷ್ಟಿಯ ಸ್ಥಳೀಯ ಭೂಗೋಳದ ಪರಿಭಾಷೆ. ವಿಶ್ವಗ್ರಾಮ ಮತ್ತು ಸ್ಥಳೀಯ ಭೂಗೋಳಗಳು ೨೧ನೇ ಶತಮಾನದಲ್ಲಿ ನಾವೆಲ್ಲ ಎದುರಿಸಲೇಬೇಕಾದ ಬಹುದೊಡ್ಡ ವೈರುಧ್ಯಗಳಾಗಿವೆ.

ಇಪ್ಪತ್ತನೇ ಶತಮಾನದಲ್ಲಿ ಕೊನೆಗೊಂಡ ವಸಾಹತೀಕರಣವು ಇಪ್ಪತ್ತೊಂದನೇ ಶತಮಾನಕ್ಕೆ ಕೊಟ್ಟಿರುವ ಕೊಡುಗೆಯೇ ಜಾಗತೀಕರಣ. ವಸಾಹತೀಕರಣ ಮತ್ತು ಜಾಗತೀಕರಣಗಳನ್ನು ಅಕ್ಕ-ತಂಗಿಯರೆಂದೇ ಪರಿಗಣಿಸಬೇಕು. ಮೊದಲು ಹುಟ್ಟಿದ ಕಿವಿಗಳಿಗಿಂತ ನಂತರ ಮೂಡಿದ ಕೊಂಬುಗಳು ಗಟ್ಟಿಯಾಗಿ, ಮೊನಚಾಗಿರುತ್ತವೆಯೆಂಬ ಗಾದೆಯಂತೆ ವಸಾಹತೀಕರಣಕ್ಕಿಂತಲೂ ಜಾಗತೀಕರಣವು ಹೆಚ್ಚು ಆಕ್ರಮಣಕಾರಿಯಾಗಿದೆ. ಇದನ್ನು ಕ್ಲುತ್ಯೆಮೇಸ್ತ್ರ-ಕಸಾಂದ್ರ ಮುಖಾಮುಖಿಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಕ್ಲುತ್ಯೆಮೇಸ್ತ್ರಳನ್ನು ಅಮೆರಿಕಾ ಎಂದು ಕಲ್ಪಿಸಿಕೊಂಡರೆ, ಕಸಾಂದ್ರಳನ್ನು ಮೂರನೇ ಜಗತ್ತಿನ ದೇಶಗಳೆಂದು ಕಲ್ಪಿಸಿಕೊಳ್ಳಬೇಕು. ಆಗ ಕಸಾಂದ್ರಳಿಗೆ ಸುಸ್ವಾಗತ ಕೋರುವ ಕ್ಲುತ್ಯೆಮೇಸ್ತ್ರ ಕುತಂತ್ರಗಳೊಂದಿಗೆ, ಪ್ರಧಾನ ಸಂಸ್ಕೃತಿ ಮತ್ತು ಅಧೀನ ಸಂಸ್ಕೃತಿಗಳ ಮುಖಾಮುಖಿಯ ದರ್ಶನವಾಗುತ್ತದೆ. ಕ. ವೆಂ. ರಾಘವಾಚಾರ್ ಅನುವಾದಿಸಿದ 'ಅಗಮೆಮ್ನೋನ್' ನಾಟಕದಿಂದಾಯ್ದ ಈ ಸಂವಾದ ಭಾಗವನ್ನು ಗಮನಿಸಿ :

**ಕ್ಲುತ್ಯೆಮೇಸ್ತ್ರ** : ನೀನೂ ಒಳಗೆ ನಡೆ. ಕಸಾಂದ್ರಳಿಗೆ ನಾನು ಹೇಳುತ್ತಿರುವುದು. ಸ್ಯೂಸ್ ದೇವ ಕೃಪೆದೋರಿ ಈ ಮನೆಗೆ ತಂದು ಸೇರಿಸಿದ್ದಾನೆ – ಗೃಹಸಂಪದಭಿಮಾನ ದೇವನ ಆ ವೇದಿಕೆಯ ಬಳಿಯ ಅರ್ಘ್ಯಪಾತ್ರೆಯ ನೀರಿಗೆ ಮಿಕ್ಕ ಹಲವು ತೊತ್ತುಗಳ ಸಾಲಲ್ಲಿ ನಿಂತು ಸಮಭಾಗಿಯಾಗಲು. ಇಳಿದು ಬಾ ರಥದಿಂದ. ಬಿಂಕ ಬಿಡು. ಅಲ್ಕ್‌ಮೇನೆಯ ಮಗನೂ ಮಾರಾಟವಾಗಿ ತೊತ್ತುಗೂಳುಂಡೂ ಸಹಿಸಿಕೊಂಡನೆಂದು ಹೇಳುತ್ತಾರೆ. ಅಂಥ ವಿಧಿ ಒಬ್ಬರ ಪಾಲಿಗೆ ಅನಿವಾರ್ಯವಾಗಿ ಬಂದದ್ದೆ ಆದರೆ, ಪ್ರಾಚೀನ ಸಂಪತ್ತಿನೊಡೆಯರ ಮನೆಯನ್ನು ಸೇರುವ ಭಾಗ್ಯ ದೊಡ್ಡದು. ಅನಿರೀಕ್ಷಿತ ಭಾಗ್ಯರಾಶಿ ಪಡೆದವರು ತಮ್ಮ ತೊತ್ತುಗಳ ವಿಷಯದಲ್ಲಿ ಯಾವಾಗಲೂ ಕ್ರೂರಿಗಳಾಗಿ ಅತಿವರ್ತಿಸುತ್ತಾರೆ. ನಾವಾದರೋ ನಿನ್ನನ್ನು ಪದ್ಧತಿಗೆ ಅನುಸಾರವಾಗಿ ನಡೆಸಿಕೊಳ್ಳುತ್ತೇವೆ.

**ಹಿರಿಯ** : ನಿನಗೆ ಅವಳು ಸ್ಪಷ್ಟನುಡಿ ನುಡಿದದ್ದು; ನಿನಗಾಗಿ ತಡೆದು ನಿಂತಿದ್ದಾಳೆ. ವಿಧಿ ಬೀಸಿದ ಬಲೆಯಲ್ಲಿ ನೀನು ಸಿಕ್ಕಿಕೊಂಡಿರುವುದರಿಂದ ಹೇಳಿದಂತೆ ಕೇಳೀಯೆ, ಕೇಳುವುದಿದ್ದರೆ; ಇಲ್ಲ, ಕೇಳದಿದ್ದರೂ ಇದ್ದೀಯೆ.

**ಕ್ಲುತ್ಯೆಮೇಸ್ತ್ರ**: ಅವಳು ಆಡುವ ಭಾಷೆ ಹಕ್ಕಿಯ ಗಿಜಿಗಿಜಿಯಂತೆ ಅಜ್ಞಾತ ಬರ್ಬರ ಭಾಷೆಯಾಗಿರದಿದ್ದರೆ, ನಾನು ಆಡುವ ಮಾತು ಅವಳ ತಿಳುವಳಿಕೆಗೆ ಬಂದೀತು.

**ಹಿರಿಯ** : ಅವಳ ಹಿಂದೆ ಹೋಗು. ಈಗಿನ ಪರಿಸ್ಥಿತಿಯಲ್ಲಿ ಅತ್ಯುತ್ತಮವಾದ್ದನ್ನೇ ಹೇಳುತ್ತಿದ್ದಾಳೆ. ರಥ ಬಿಟ್ಟು ಇಳಿದು ಬಂದು ಹೇಳಿದಂತೆ ಕೇಳು.

**ಕ್ಲುತ್ಯೆಮೇಸ್ತ್ರ** : ಹೀಗೆ ಬಾಗಿಲಾಚೆ ಕಾಲಹರಣ ಮಾಡಲು ನನಗೆ ಬಿಡುವಿಲ್ಲ, ಬರಲಿದ್ದ ಸಂತೋಷವನ್ನು ನಿರೀಕ್ಷಿಸಿರಲಿಲ್ಲವಾದ್ದರಿಂದ, ನಡುವಂಗಣದಲ್ಲಿ ಯಜ್ಞ ಕುಂಡದ ಅಗ್ನಿಯ ಆಹುತಿಗೆ ಆಗಲೆ ಬಲಿಪಶುಗಳು ಸಿದ್ಧವಾಗಿವೆ. ನೀನು ಇದರಲ್ಲಿ ಭಾಗವಹಿಸುವವಳಾಗಿದ್ದರೆ, ಕಾಲಹರಣ ಮಾಡಬೇಡ. ಭಾಷೆ ತಿಳಿಯದೆ ಮಾತು ಗ್ರಹಿಸದಿದ್ದರೆ ಭಾಷೆಗೆ ಬದಲು ನಿನ್ನ ಬರ್ಬರ ಕೈಗಳಿಂದ ಸನ್ನೆ ಮಾಡು.

**ಹಿರಿಯ** : ಸ್ಪಷ್ಟ ದ್ವಿಭಾಷಿಯೊಬ್ಬ ಈ ವಿದೇಶೀಯಳಿಗೆ ಬೇಕಾಗಿರುವಂತೆ ತೋರುತ್ತದೆ. ಹೊಸದಾಗಿ ಹಿಡಿದ ವನ್ಯಮೃಗದಂತೆ ಇದ್ದಾಳೆ ಈಗ ಇವಳು.

**ಕ್ಲುತ್ಯೆಮೇಸ್ತ್ರ** : ನಿಜವಾಗಿ ಇವಳಿಗೆ ಹುಚ್ಚು ಹಿಡಿದಿದೆ. ತನ್ನ ವಿಪರೀತ ಮನಸ್ಸಿಗೆ ಕಿವಿಗೊಡುತ್ತಿದ್ದಾಳೆ. ಹೊಸದಾಗಿ ಸೆರೆಹಿಡಿದ ತನ್ನ ಪಟ್ಟಣವನ್ನು ಬಿಟ್ಟು ಇಲ್ಲಿಗೆ ಬಂದಿದ್ದಾಳೆ. ಆದರೂ ತನ್ನ ಪ್ರಾಣವನ್ನೆಲ್ಲಾ ನೆತ್ತರ ರೂಪದಲ್ಲಿ ನೊರೆಗರೆದ ಹೊರತು ಇವಳು ಕಡಿವಾಣಕ್ಕೆ

ಬಗ್ಗಲರಿಯಳು. ಇನ್ನು ಹೆಚ್ಚು ಮಾತು ಹಾಳುಮಾಡಿ ಅವಮರ್ಯಾದೆ ಮಾಡಿಸಿಕೊಳ್ಳಲಾರೆ. (ಕುಲ್ತೈಮೇಸ್ತ್ರ ಹೋಗುವಳು)

**ಹಿರಿಯ** : ನಾನಂತೂ ಇವಳಿಗಾಗಿ ಮರುಗುತ್ತೇನೆ; ಮುನಿಯುವುದಿಲ್ಲ ಬಾ, ಓ ನಿರ್ಭಾಗ್ಯೆ ! ವಾಹನ ಬಿಟ್ಟುಬಾ. ವಿಧಿಯ ಹೊಸ ನೊಗವನ್ನು ಮನಸಾರ ಹೊತ್ತುಕೊ.

(ಕಸಾಂದ್ರ ರಥದಿಂದ ಇಳಿದು ಅಪೊಲ್ಲೋನ್ ವಿಗ್ರಹ ನೋಡುತ್ತಾಳೆ)

**ಕಸಾಂದ್ರ** : ಅಯ್ಯೋ ದೇವರೆ ! ಅಪೊಲ್ಲೋನ್ ! ಓ ಅಪೊಲ್ಲೋನ್ !

ಮೇಲಿನ ಧ್ವನಿಪೂರ್ಣ ಸಂವಾದದಲ್ಲಿ ಕಸಾಂದ್ರಳ ಆರ್ತಮೊರೆ, ಕುಲ್ತೈಮೇಸ್ತ್ರಳ ಧೂರ್ತ ನಡೆ ಸುಸ್ಪಷ್ಟವಾಗಿದೆ. ಮೇಳದ ಹಿರಿಯನ ಮಾತುಗಳು ನಮ್ಮನ್ನಾಳುವ ಹಿರಿಯರ ಮಾರ್ಗಸೂಚಿ ಮತ್ತು ಸಹಾನುಭೂತಿಗಳನ್ನೇ ಹೋಲುತ್ತವೆ.

ಆಲ್ವಿನ್ ಟಾಫ್ಲರ್ ವಿರಚಿತ ''ಥರ್ಡ್ ವೇವ್'' ಕೃತಿಯಲ್ಲಿ ಪ್ರತಿಪಾದಿಸಿರುವಂತೆ ಮನುಕುಲದ ದಿಕ್ಕು ಬದಲಿಸಿದ ಎರಡನೇ ಅಲೆ : ಕೈಗಾರಿಕೀಕರಣ. ಇದರ ಫಲಶ್ರುತಿಯೇ ವಸಾಹತೀಕರಣ ಮತ್ತು ನಗರೀಕರಣಗಳು. ಕೈಗಾರಿಕೀಕರಣದ ತೀವ್ರತೆಯಿಂದ ಮೊದಲಬಾರಿಗೆ ಅರಣ್ಯವೈವಿಧ್ಯ ನಾಶವಾಯಿತು. ಇದೊಂದು ವಾಸ್ತವ. ಆಲ್ವಿನ್ ಟಾಫ್ಲರ್ ಹೇಳಿದ ಮೂರನೇ ಅಲೆಯೇ 'ಜಾಗತೀಕರಣ !' ಇದರ ಫಲಶ್ರುತಿಯೇ ವಿಶ್ವ ವಸಾಹತೀಕರಣ ಮತ್ತು ಸ್ವೈರೀಕರಣಗಳು. ಜಾಗತೀಕರಣದ ತೀವ್ರತೆಯಿಂದ ಜಾನಪದ ವೈವಿಧ್ಯಕ್ಕೆ ಹಾನಿಯಿದೆ. ಕೈಗಾರಿಕೀಕರಣ ಮತ್ತು ಜಾಗತೀಕರಣಗಳೆರಡೂ ಕಬಂಧ ಬಾಹುಗಳುಳ್ಳ ನುಂಗಣ್ಣಗಳು !

ಜಾಗತೀಕರಣವೆಂದರೆ ಅಮೆರಿಕನ್ ಭಾಷೆ ಮತ್ತು ಅಮೆರಿಕನ್ ಜೀವನಶೈಲಿಯನ್ನು ಜಾಗತಿಕಗೊಳಿಸುವುದು ಎಂದರ್ಥ. ಜಾಗತಿಕ ಏಕರೂಪಿ ಸಂಸ್ಕೃತಿಯ ಅಬ್ಬರವನ್ನಿಲ್ಲಿ ಮನಗಾಣಬೇಕು. ಜಾನಪದ ಸಂಸ್ಕೃತಿಯ ಭಾಗವಾಗಿರುವ ಪ್ರತಿಯೊಂದು ವಸ್ತು ವಿಷಯಗಳನ್ನು ಜಾಗತೀಕರಣವು ಸರಕೀಕರಣಗೊಳಿಸಿಬಿಡುತ್ತದೆ. ಇದಕ್ಕೆ ಸ್ಥಳೀಯ ಪ್ರಭುತ್ವಗಳ ಬೆಂಬಲವೂ ಇರುತ್ತದೆ. ಉದಾಹರಣೆಗೆ, ೧. ಜಾನಪದ ಸಂಸ್ಕೃತಿಯ ಭಾಗವಾಗಿರುವ ಕನ್ನಡಗಳ ಎದುರಿನಲ್ಲಿ ಕಾನ್ವೆಂಟ್ ಇಂಗ್ಲಿಷ್ ಅತಿ ಲಾಭದಾಯಕ ಸರಕಾಗಿ ಕಾಣುತ್ತದೆ. ೨. ನೆಲ-ಜಲ-ಅನುಭವಗಳಿಂದಾಗಿ ಒಂದೊಂದು ಮನೆಯಲ್ಲೂ ವೈವಿಧ್ಯ ಮಯವಾಗಿರುವ ನಿಂಬೆಯ ಹಣ್ಣಿನ ಪಾನಕಗಳ ಎದುರಿನಲ್ಲಿ ಕೋಕಾ ಕೋಲಾ ಸುಪ್ರತಿಷ್ಠೆಯ ಸರಕಾಗಿದೆ. ೩. ಧರಣಿಮಂಡಲ ಮಧ್ಯದೊಳಗೆ, ಮೆರೆವ ಕರ್ನಾಟಕ ದೇಶದ ಗೊಲ್ಲಗೌಡರ ಕೊಳಲುಗಳ ಎದುರಿನಲ್ಲಿ ಸಮ್ಮೋಹಕ ಮಾಯಾಜಾಲದ ಪಾಪ್-ರ್‍ಯಾಪ್ ಸಂಗೀತಗಳು ಅತಿ ಲಾಭ ತರುವಂಥ ಸರಕುಗಳಾಗಿವೆ. ಇಲ್ಲೆಲ್ಲ 'ಏಕತ್ವ'ದ ಹರಿಕಾರನಾದ ಜಾಗತೀಕರಣವು 'ಬಹುತ್ವ'ವೇ ಉಸಿರಾಗಿರುವ ಜಾನಪದವನ್ನು ಬಲಿ ಹಾಕುವ ಬಗೆಗಳನ್ನು ಗುರುತಿಸಬಹುದು. ಬುಡಕಟ್ಟುಗಳ ಸಹಜ ಜ್ಞಾನ ಮತ್ತು ಜಾನಪದ ಬುದ್ಧಿಮತ್ತೆಯನ್ನು ಸ್ವಾಧೀನಪಡಿಸಿಕೊಂಡು ಉದ್ಯಮವನ್ನಾಗಿ ಪರಿವರ್ತಿಸಿ ಕೊಳ್ಳುವುದು ಗಿಡಮೂಲಿಕೆಗಳ ಪೇಟೆಂಟ್ ವಿಷಯದಲ್ಲಿ ಮನವರಿಕೆಯಾಗಿರುವ ಸಂಗತಿಯಾಗಿದೆ.

ಜಾಗತೀಕರಣ ಮಾರ್ಗದ ಜೀವನಶೈಲಿಯ ಆಕ್ರಮಣಗಳಿಂದಾಗಿ ಸಾಮಾನ್ಯವಾದ ಖಾಯಿಲೆ ಮತ್ತು ಸಹಜವಾದ ಹೆರಿಗೆಗಳು ಕೂಡ ಹೈಟೆಕ್ ಆಸ್ಪತ್ರೆಗಳು, ನರ್ಸಿಂಗ್ ಹೋಮ್‌ಗಳಲ್ಲಿ ಲಾಭದಾಯಕ ಉದ್ಯಮಗಳಾಗಿಬಿಟ್ಟಿವೆ. ಉದಾಹರಣೆಗೆ, ೧. ಜಾಂಡೀಸ್ ಅಥವಾ ಕಾಮಾಲೆ ರೋಗಕ್ಕೆ ಗ್ರಾಮೀಣರಲ್ಲಿ ಕಿರುನೆಲ್ಲಿ ಅಥವಾ ನೆಲನೆಲ್ಲಿ ಸೊಪ್ಪು ರಾಮಬಾಣವಾಗಿದ್ದು ಪರಿಣಾಮಕಾರಿಯಾದ ನಿಸರ್ಗ ಚಿಕಿತ್ಸೆಯಾಗಿದೆ. ಜಾಂಡೀಸ್ ನಿವಾರಣೆಗಾಗಿ ಮಹಾನಗರಗಳಲ್ಲಿರುವ ಹೈಟೆಕ್ ಆಸ್ಪತ್ರೆಗಳು ಹಲವು ಸಾವಿರ ಗಳನ್ನು ಕಿತ್ತುಕೊಳ್ಳುವ ದುಬಾರಿ ಚಿಕಿತ್ಸೆ ನೀಡುತ್ತವೆ. ಸಹಜೀವಿ ಸಂಕುಲಗಳ ಮಸಣ ವಾಗಿರುವ ಮಹಾನಗರಗಳ ಹಾದಿ-ಬೀದಿಗಳಲ್ಲಿ ಕಿರುನೆಲ್ಲಿ, ಒಂದೆಲಗ, ಸುಗಂಧಿ, ಮಂಗರವಳ್ಳಿ ಮುಂತಾದ ಗಿಡಮೂಲಿಕೆಗಳನ್ನು ಕಾಣಲು ಸಾಧ್ಯವೇನು ? ಇದರ ಪರಿಣಾಮವಾಗಿ ಹಿತ್ತಿಲುಗಳನ್ನು ಕಳೆದುಕೊಂಡಿರುವ ಮಹಾನಗರಗಳು ಬಗೆಬಗೆಯ ಬಜಾರುಗಳನ್ನು ಭವ್ಯವಾಗಿ ನಿರ್ಮಾಣ ಮಾಡಿಕೊಂಡಿವೆ. ೨. ಹೆಣ್ಣಿಗೆ ತಾಯ್ತನದ ಪಟ್ಟ ನೀಡುವ ಸಹಜವಾದ ಹೆರಿಗೆ ಕೂಡ ಮಹಾನಗರಗಳಲ್ಲಿರುವ ಹೈಟೆಕ್ ಆಸ್ಪತ್ರೆಗಳಲ್ಲಿ ತೋರಿ ಉಂಬ ಲಾಭವಾಗಿದೆ. ಕೇವಲ ಮೂರು ನಾಲ್ಕು ದಿನಗಳ ವಾಸ್ತವ್ಯಕ್ಕಾಗಿ ಐದು ಸಾವಿರ ರೂಗಳಿಂದ ಹತ್ತು ಸಾವಿರಕ್ಕೂ ಮೇಲ್ಪಟ್ಟು ವಸೂಲು ಮಾಡುವುದಿಲ್ಲಿ ಸಾಮಾನ್ಯವಾಗಿದೆ. ಆದರೆ, ಎಲೆ-ಅಡಕೆ-ದಕ್ಷಿಣೆ ತೆಗೆದುಕೊಂಡು ನೂರಾರು ಹೆರಿಗೆ ಮಾಡಿರುವ ಗ್ರಾಮೀಣ ಮತ್ತು ಬುಡಕಟ್ಟು ಮಹಿಳೆಯರನ್ನು ನೆನೆದರೆ ಹೈಟೆಕ್ ಜ್ಞಾನದ ಟೊಳ್ಳುತನ ಅರಿವಾಗದೆ ಇರದು !

ಜಾಗತೀಕರಣ ಹೆಚ್ಚು ಆಕ್ರಮಣಕಾರಿ ಎಂದು ಹೇಳಿದೆ. ಇದನ್ನು ಸ್ಥಳೀಯ ನಿಸರ್ಗದ ಉದಾಹರಣೆಯ ಮೂಲಕ ವಿವರಿಸುತ್ತೇನೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಸುಣ್ಣಕಲ್ಲಿನ ಗುಡ್ಡಗಳಿವೆ. ಈ ಗುಡ್ಡಗಳಲ್ಲಿ ಮೊದಲಿಗೆ ಗುಹೆಗಳು ನಂತರ ತೊಂಗಲುಗಳು ನಿರ್ಮಾಣಗೊಂಡಿವೆ. ಉದಾ : ಕವಳಾ ಗುಹೆಗಳು, ಉಳವಿಯ ಗುಹಾ ಸಾಲುಗಳು.

ವಾತಾವರಣದಲ್ಲಿರುವ ಇಂಗಾಲದ ಡೈಆಕ್ಸೈಡ್ ಜೊತೆಗೂಡಿ ಸುಣ್ಣಕಲ್ಲಿನ ಗುಡ್ಡಗಳಲ್ಲಿ ಇಂಗುವ ಮಳೆನೀರು, ನೈಸರ್ಗಿಕವಾದ ರಾಸಾಯನಿಕ ಕ್ರಿಯೆ ನಡೆಸುತ್ತಾ ಶಿಲಾಸ್ತರಗಳನ್ನು ಸರಂಧ್ರಗೊಳಿಸುತ್ತಾ ಮಣ್ಣಿನ ಪದರುಗಳನ್ನು ಕುಸಿಯುವಂತೆ ಮಾಡಿ ಗಿರಿಗರ್ಭದೊಳಗೆ ಗುಹೆಗಳನ್ನು ನಿರ್ಮಾಣ ಮಾಡುತ್ತದೆ. ಇದನ್ನು 'ಶಿಥಿಲೀಕರಣ' ಎನ್ನುತ್ತಾರೆ. ನಂತರ, ಅದೇ ಶಿಲಾಸ್ತರಗಳ ಸರಂಧ್ರಗಳಿಂದ ಜಿನುಗುವ ಜಲದಲ್ಲಿ ಕ್ಯಾಲ್ಸಿಯಂ ಕಾರ್ಬೊನೇಟ್ ಇರುವುದರಿಂದ ಗುಹಾ ಚಾವಣಿಯಲ್ಲಿ ತೂಗು ತೊಂಗಲುಗಳು ಮತ್ತು ಗುಹಾ ತಳದಲ್ಲಿ ನೆಲ ತೊಂಗಲುಗಳು ರೂಪುಗೊಳ್ಳುತ್ತವೆ. ಇದನ್ನು 'ಘನೀಕರಣ' ಎನ್ನುತ್ತಾರೆ.

ಮಳೆನೀರಿನ ಆಗಮನದಿಂದ ಸಂಭವಿಸಿದ ಈ ಶಿಥಿಲೀಕರಣ ಮತ್ತು ಘನೀಕರಣದ ಪ್ರಕ್ರಿಯೆಗಳನ್ನೇ ಜಾಗತೀಕರಣದ ನೆಲೆಯಲ್ಲೂ ಮನಗಾಣಬಹುದು. ಬಗೆಬಗೆಯ ತಂತ್ರಜ್ಞಾನ ಮತ್ತು ಒಪ್ಪಂದಗಳ ಮೂಲಕ ಭಾರತಕ್ಕೆ ಆಗಮಿಸಿರುವ ಜಾಗತೀಕರಣವು ಇಲ್ಲಿನ ನೆಲದ ಸಂಸ್ಕೃತಿಗಳೊಂದಿಗೆ ಮುಖಾಮುಖಿ ನಡೆಸುತ್ತಾ ಆಕ್ರಮಣಕಾರಿಯಾದ ಪಾತ್ರ ನಿರ್ವಹಣೆ ಮಾಡುತ್ತಿದೆ.

**೨. ರಾವಣ-ಹನುಮ ಮುಖಾಮುಖಿ**

ಜಾಗತೀಕರಣ ಮತ್ತು ಜಾನಪದಗಳ ಬಹುಮುಖಿ ಸಂಬಂಧಗಳನ್ನು ಬಿಂಬಿಸಬಲ್ಲ ಎರಡನೆಯ ಮುಖಾಮುಖಿಯಿದು. ಈ ನೆಲೆಯಲ್ಲಿ ಜಾಗತೀಕರಣವು ದಶಕಂಠ ರಾವಣಾಸುರನಂತೆ ಅಟ್ಟಹಾಸದಿಂದ ಮೆರೆಯುವಂತಹುದು. ಇದು 'ಜಾನಪದ ಹನುಮ'ನನ್ನು ಸ್ವಾಗತಿಸುವುದಿರಲಿ, ತನ್ನ ಒಡ್ಡೋಲಗದಲ್ಲಿ ಆಸನವನ್ನು ಕೂಡ ಕೊಡುವುದಿಲ್ಲ. ಆದರೆ, ಜಾಗತೀಕರಣದ ಎದುರು ಜಾನಪದಕ್ಕಿರುವ ಸ್ವಶಕ್ತಿ ಬೆರಗು ಹುಟ್ಟಿಸುವಂತಹುದು. ಹನುಮನಂತೆ ಬಾಲಸುರುಳಿಯ ಸಿಂಹಾಸನ ರಚಿಸಿಕೊಂಡು, ರಾವಣನೆದುರು ಅತಿ ಎತ್ತರದಲ್ಲಿ ಕಾಲ ಮೇಲೆ ಕಾಲು ಹಾಕಿ ಕುಳಿತುಕೊಳ್ಳುವ ತಾಕತ್ತು ಜಾನಪದಕ್ಕಿದೆ.

ವಸಾಹತೀಕರಣಕ್ಕೆ ಒಳಗಾಗುತ್ತಿದ್ದಂತೆಯೇ, ನಿರ್‌ವಸಾಹತೀಕರಣಕ್ಕೂ ಗಮನ ಕೊಟ್ಟಂತೆ ನಾವಿಂದು ಜಾಗತೀಕರಣಕ್ಕೆ ಒಳಗಾಗುತ್ತಲೇ ನಿರ್‌ಜಾಗತೀಕರಣದ ಬಗ್ಗೆಯೂ ಆಲೋಚಿಸಿ ಕಾರ್ಯತತ್ಪರರಾಗಬೇಕು. ಸಂಖ್ಯಾಬಲವನ್ನು ಲೆಕ್ಕಿಸದೆ, ವ್ಯಕ್ತಿಮಟ್ಟದಿಂದ ಹಿಡಿದು ರಾಷ್ಟ್ರಮಟ್ಟದವರೆಗೆ ನಿರ್‌ಜಾಗತೀಕರಣವನ್ನು ಅಳವಡಿಸಿಕೊಳ್ಳುವ ಬಗೆಗಳನ್ನು ಶೋಧಿಸಬೇಕು.

ವಿಶ್ವ ಗ್ರಾಮವನ್ನು ಕನ್ನಡಿಯ ಗಂಟು ಎಂದು ಭಾವಿಸುವವರು ತಮ್ಮನ್ನು ಸ್ಥಳೀಯ ಭೂಗೋಳದೊಂದಿಗೆ ಗುರುತಿಸಿಕೊಳ್ಳುತ್ತಾರೆ. ಕನ್ನಡ ಸಂಸ್ಕೃತಿಯ ಪರಂಪರೆಯಲ್ಲಿ ಇದಕ್ಕೆ ಸಮೃದ್ಧ ಉದಾಹರಣೆಗಳಿವೆ. ಆಧುನಿಕ ಸಂದರ್ಭದಲ್ಲಿ ಕುವೆಂಪು-ಬೇಂದ್ರೆ-ಕಾರಂತ ಸಾಹಿತ್ಯವನ್ನು ಸ್ಥಳೀಯ ಭೂಗೋಳದ ಜೊತೆಗಿಟ್ಟೇ ಅರ್ಥಮಾಡಿಕೊಳ್ಳಬೇಕಾಗಿದೆ. ಜಾನಪದ ಸಾಹಿತ್ಯವಂತೂ ಸ್ಥಳೀಯ ಭೂಗೋಳವನ್ನು ಬಿಟ್ಟು ಮೇಲೇಳುವುದೇ ಇಲ್ಲವೆನ್ನಬಹುದು.

ಭಾಷೆಯ ಅವಸಾನವು ಅಂತಿಮವಾಗಿ ಸಂಸ್ಕೃತಿಯ ಅವಸಾನವೆಂಬುದನ್ನು ಮನಗಂಡರೆ, ಜಾಗತೀಕರಣದ ಪ್ರಕ್ರಿಯೆಯಿಂದ ಪ್ರಕಟಗೊಳ್ಳುವ ಸಾಂಸ್ಕೃತಿಕವಾದ ಶಿಥಿಲೀಕರಣ ಮತ್ತು ಸಾಂಸ್ಕೃತಿಕವಾದ ಘನೀಕರಣಗಳ ಸ್ವರೂಪದರ್ಶನವಾಗುತ್ತದೆ. ಜಾಗತೀಕರಣವು ನೆರೆ ಬಂದ ನದಿಯಿದ್ದಂತೆ ! ಈ ನದಿಯ ಸೆಳವಿಗೆ ಸಿಕ್ಕಿ, ಕನ್ನಡ ಜಾನಪದವು ಕೊಚ್ಚಿಕೊಂಡು ಹೋಗುವ ಕಸಕಡ್ಡಿಯಾಗದೆ, ಎದುರೀಜುವ 'ಹತ್ತು ಮೀನು'ಗಳಾಗಬೇಕು. ಇಂಥ ಸಂಕಲ್ಪಶಕ್ತಿ ಜನಮನದಿಂದ, ಜನಪದ ನೆಲೆಯಿಂದ ಮೂಡಿಬರಬೇಕು. ಜನಭಾಗಿತ್ವವಿಲ್ಲದೆ ಯಾವ ಚಳುವಳಿಯೂ ಯಶಸ್ವಿಯಾಗಲಾರದು ! ಇದನ್ನೇ ನಾನು 'ಘನೀಕರಣ' ಎಂದು ಕರೆಯಲು ಇಚ್ಛಿಸುತ್ತೇನೆ. ಆಧುನಿಕತೆಯ ಆಕ್ರಮಣದಿಂದ ಕರ್ನಾಟಕ ಭಾರತದಲ್ಲಿ ನಿರ್ಮಾಣಗೊಂಡಿರುವ ಗುಹಾ ಸರಣಿಗಳಲ್ಲಿ ಜಾನಪದ ತೊಂಗಲುಗಳು ರೂಪುಗೊಳ್ಳಬೇಕು. ಇಂಥ ಘನೀಕರಣದಿಂದ ಕನ್ನಡ ಸಂಸ್ಕೃತಿಯು ತನ್ನ ಕೀಳರಿಮೆಯನ್ನು ನಿವಾರಿಸಿಕೊಳ್ಳಬೇಕು. ಸ್ಥಳೀಯ ಭೂಗೋಳ ದಲ್ಲಿದ್ದುಕೊಂಡೇ ವಿಶ್ವರೂಪದರ್ಶನ ಸಾಧ್ಯವಾಗಬೇಕು; ವಿಶ್ವಗ್ರಾಮದ ಪ್ರಜೆಗಳು ಸ್ಥಳೀಯ ದರ್ಶನದ ಕಾಣ್ಕೆಗಾಗಿ ಯತ್ನಿಸಬೇಕು. ಉದಾ :

೧. **ಅರಿಶಿನ** : ಸ್ಥಳೀಯ ಭೂಗೋಳದಲ್ಲಿದು ಜೀವನದ ಅವಿಭಾಜ್ಯ ಅಂಗವಾಗಿದೆ. ಆದರೆ ವಿಶ್ವಗ್ರಾಮದಲ್ಲಿ ಅರಿಶಿನವು ಕೇವಲ ಔಷಧಿ ಅಥವಾ ಸಂಶೋಧನೆಯ ವಸ್ತು. ಇದನ್ನು ಭಾರತೀಯ ವಿಜ್ಞಾನಿಗಳು ಸಾಬೀತುಗೊಳಿಸಿದ್ದರಿಂದ ಅರಿಶಿನದ ಪೇಟೆಂಟ್ ರದ್ದಾಯಿತು. ಇದು ಜಾನಪದಕ್ಕೆ ಸಿಕ್ಕ ವಿಜಯವೇ ಆಗಿದೆ.

೨. **ಯಕ್ಷಗಾನ** : ದುಡಿಮೆ-ಬಿಡುವುಗಳ ಸಾಂಗತ್ಯದಲ್ಲಿ ಪ್ರಕಟಗೊಳ್ಳುವ ಯಕ್ಷಗಾನವು ಸ್ಥಳೀಯ ಭೂಗೋಳದಲ್ಲಿ ಬದುಕಿನ ಬಿಂಬವೇ ಆಗಿದೆ. ವಿಶ್ವ ಗ್ರಾಮಕ್ಕೆ ಯಕ್ಷಗಾನವನ್ನು ಕೊಂಡೊಯ್ದ ಕಾರಂತರು ಇದನ್ನೊಂದು ಕಾಣ್ಕೆಯಾಗಿ ಮೆರೆಸಿದ್ದಾರೆ. ಕಾರಂತರ ಪ್ರಯೋಗಗಳಲ್ಲಿ ಯಕ್ಷಗಾನದ ಜಾಗತೀಕರಣವನ್ನು ಗುರುತಿಸಬಹುದು. ಯಕ್ಷಗಾನಕ್ಕೆ ವಾಚಿಕವೇ ಬಂಡವಾಳ! ಆದರೆ, ನ್ಯೂಯಾರ್ಕ್ ಮುಂತಾದ ಕಡೆ ಪ್ರದರ್ಶನಗೊಳ್ಳುವ ಯಕ್ಷಗಾನದಲ್ಲಿ ವಾಚಿಕವನ್ನು ಯಾರು ಕೇಳಬೇಕು? ಆದ್ದರಿಂದಲೇ, ಕಾರಂತರು ಮಾತನ್ನು ಕಡಿತಗೊಳಿಸಿದ ಅಥವಾ ಮಾತಿಲ್ಲದ ಯಕ್ಷಗಾನದ ಪ್ರಯೋಗಗಳನ್ನು ನಡೆಸಿದ್ದಾರೆ. ಯಕ್ಷಗಾನದ ಪ್ರಾದೇಶಿಕ ವ್ಯಾಪ್ತಿ ಸೀಮಿತವಾಗಿರುವುದೇ ಅದರ ಶಕ್ತಿಯುತವಾದ ಆಯಾಮವಾಗಿದೆ ಎಂಬುದನ್ನಿಲ್ಲಿ ಗಮನಿಸಬೇಕಾಗಿದೆ.

೩. **ವಚನ ಸಾಹಿತ್ಯ** : ಸ್ಥಳೀಯ ಭೂಗೋಳದಲ್ಲಿದು ಕನ್ನಡ ಸಂಸ್ಕೃತಿಯ ಹೆಡೆಮಣಿ! ವಿಶ್ವಗ್ರಾಮಕ್ಕೆ ಇದನ್ನು ಪರಿಚಯಿಸಿದ ಎ. ಕೆ. ರಾಮಾನುಜನ್ ವಚನ ಸಾಹಿತ್ಯವನ್ನು ಒಂದು ವಿಶಿಷ್ಟ ಕಾಣ್ಕೆಯಾಗಿಸಿದ್ದಾರೆ. ಆದರೆ, ಅರಿಶಿನವಾಗಲಿ, ಯಕ್ಷಗಾನವಾಗಲಿ, ವಚನ ಸಾಹಿತ್ಯ ಅಥವಾ ಜಾನಪದ ಸಾಹಿತ್ಯವಾಗಲಿ ಸರಕಾಗಬಾರದು. ಜಾಗತೀಕರಣದ ಕಪ್ಪು ನೆರಳು ಸರಕೀಕರಣ ಎಂಬುದನ್ನು ಮರೆಯುವಂತಿಲ್ಲ.

ಮನುಷ್ಯನ ಆಂತರಿಕ ವಿಕಾಸವೆನ್ನಬಹುದಾದ ಸೌಂದರ್ಯಪ್ರಜ್ಞೆ ಮತ್ತು ಆಧ್ಯಾತ್ಮಿಕ ಪ್ರಜ್ಞೆಗಳನ್ನು ಕೂಡ ಜಾಗತೀಕರಣವು 'ಸರಕೀಕರಣ'ಗೊಳಿಸುವುದರ ಮೂಲಕ ಅವುಗಳನ್ನು ಬಾಹ್ಯ ವಿಲಾಸವನ್ನಾಗಿ ಪರಿವರ್ತಿಸುತ್ತಿದೆ. ಈ ಮಾತಿಗೆ ನಿದರ್ಶನವಾಗಿ ಜಾಗತಿಕ ಸೌಂದರ್ಯ ಸ್ಪರ್ಧೆಗಳು, ಬ್ಯೂಟಿಪಾರ್ಲರ್‌ಗಳು, ಜಾಹಿರಾತುಗಳ ಮಾಯಾಬಜಾರ್ ಜೊತೆಗೆ ಹೈಟೆಕ್ ಕಟ್ಟಡಗಳು ಮತ್ತು ಗಗನಚುಂಬಿ ವಾಸ್ತುಶಿಲ್ಪಗಳನ್ನು ಉದಾಹರಿಸಬಹುದು. ಅಧ್ಯಾತ್ಮವನ್ನು ಕೂಡ ವಿಶ್ವಗ್ರಾಮದಲ್ಲಿ ಬಿಕರಿಗಿಟ್ಟಿರುವುದನ್ನು ಜಾಗತಿಕ ಸಂಘ-ಸಂಸ್ಥೆಗಳಲ್ಲಿ ಮನಗಾಣಬಹುದು. ಹೀಗಾಗಿ, ಜಗತ್ತಿನೆಲ್ಲೆಡೆ 'ಸೌಂದರ್ಯ ವಿಕಾರ' ಮತ್ತು 'ಅಧ್ಯಾತ್ಮ ವಿಕಾರ'ಗಳು ವಿಜೃಂಭಿಸುತ್ತಿವೆ. ಇದರ ಇನ್ನೊಂದು ಮುಖದಂತೆ ಸ್ಥಳೀಯವಾಗಿ ಹೆಚ್ಚುತ್ತಿರುವ ಭೋಗವಾದ ಮತ್ತು ಕೋಮುವಾದಗಳು ಹಾದರ ಮತ್ತು ನೆತ್ತರ ಹೊಳೆಯನ್ನೇ ಹರಿಸುತ್ತಿವೆ. ಹೆಣ್ಣು-ನಿಸರ್ಗ-ಧರ್ಮ-ಕಾಯಕ ಎಂಬ ಮಾತುಗಳೆಲ್ಲ ಅರ್ಥ ಕಳೆದುಕೊಂಡು ''ಉತ್ತಮ ಸರಕಿದು ಅತಿ ಲಾಭ ತರುವಂಥ'' – ಎಂಬಂತಾಗಿದೆ.

ಕಪಟ ವೇಷದಿಂದ ರಾವಣನು ಸೀತಾಪಹರಣ ಮಾಡಿದಂತೆಯೇ, ಜಾಗತೀಕರಣವು ಸತ್ಯಾಪಹರಣ ಮಾಡಿ ಮೆರೆಯುತ್ತಿದೆ. ಇದರಿಂದ ಹತಾಶರಾಗದೆ 'ಜಾನಪದ ಹನುಮ'ನ ಮೂಲಕ ನಾವಿಂದು ಸತ್ಯಾನ್ವೇಷಣೆಗೆ ತೊಡಗಿಕೊಳ್ಳಬೇಕಾಗಿದೆ. ಇದು ಬದ್ಧತೆ ಮತ್ತು ದೃಢಸಂಕಲ್ಪಗಳಿಂದ ಆಗಬೇಕಾದ ಕೆಲಸ. ಇದುವರೆಗೆ,

೧. ಕುಲ್ತೈಮೇಸ್ತ್ರ-ಕಸಾಂದ್ರ ಮತ್ತು ೨. ರಾವಣ-ಹನುಮರ ಮುಖಾಮುಖಿಯ ಮೂಲಕ ಶಿಥಿಲೀಕರಣ ಮತ್ತು ಘನೀಕರಣಗಳನ್ನು ವಿವರಿಸಲಾಗಿದೆ. ಸಂಸ್ಕೃತಿಗಳ ಮುಖಾಮುಖಿಯಲ್ಲಿ ಈಗ ಮೂರನೆಯದಾದ ಜೀರ್ಣೀಕರಣ ಪ್ರಕ್ರಿಯೆಯನ್ನು ಗಮನಿಸೋಣ.

**೩. ವಾತಾಪಿ-ಅಗಸ್ತ್ಯ ಮುಖಾಮುಖಿ**

ವಾತಾಪಿ-ಇಲ್ವಲ ರಕ್ಕಸರು. ಋಷಿಗಳನ್ನು ಕೊಲ್ಲಲು ಇವರಿಬ್ಬರು ಅತಿಥಿ ಸತ್ಕಾರದ ಕುಟಿಲೋಪಾಯವೊಂದನ್ನು ಕಂಡುಕೊಂಡಿದ್ದರು. ವಾತಾಪಿಯನ್ನು ಮೇಕೆಯನ್ನಾಗಿ ಪರಿವರ್ತಿಸಿ, ಬಲಿ ಕೊಟ್ಟು ಔತಣ ಮಾಡಿ ಋಷಿಗಳಿಗೆ ತಿನ್ನಿಸಿದ ನಂತರ ಇಲ್ವಲನು ''ವಾತಾಪಿ! ಹೊರಗೆ ಬಾ'' – ಎಂದು ಕರೆಯುತ್ತಿದ್ದನು. ಕೂಡಲೇ ಋಷಿಗಳ ಹೊಟ್ಟೆ ಭೇದಿಸಿಕೊಂಡು ವಾತಾಪಿ ಹೊರಬರುತ್ತಿದ್ದನು. ಮಾಂಸ ತಿಂದ ಋಷಿಗಳು ಹೊಟ್ಟೆಯೊಡೆದು ಸತ್ತು ಜೀಳುತ್ತಿದ್ದರು. ಒಮ್ಮೆ ಅಗಸ್ತ್ಯ ಋಷಿಯು ಇವರ ಆತಿಥ್ಯ ಸ್ವೀಕರಿಸಿ, ಇಲ್ವಲನು ಕರೆಯುವುದಕ್ಕೆ ಮುಂಚೆಯೇ ''ವಾತಾಪಿ! ಜೀರ್ಣೋ ಭವ'' – ಎಂದು ಅಭಿಮಂತ್ರಿಸಿ ವಾತಾಪಿಯನ್ನು ತನ್ನಲ್ಲಿ ಜೀರ್ಣಮಾಡಿಕೊಂಡುಬಿಟ್ಟನು.

ಕನ್ನಡ ಜನಪದರ ಜೀರ್ಣಶಕ್ತಿಯು ಅಗಸ್ತ್ಯನಂತೆ ಅಸಾಧಾರಣವಾಗಿದೆ : ಸಂಸ್ಕೃತ –

ಪರ್ಷೋ ಅರಾಬಿಕ್-ಇಂಗ್ಲಿಷ್ ಭಾಷೆಗಳನ್ನು ಕನ್ನಡ ಜನಪದರು ಚೆನ್ನಾಗಿ ಜೀರ್ಣಿಸಿಕೊಂಡಿದ್ದಾರೆ. 'ಜನಪದ ಕನ್ನಡ'ದಲ್ಲಿ ಇಂಗ್ಲಿಷ್ ಪದಗಳ ಸಮೃದ್ಧ ಬಳಕೆಯಿದ್ದು, ಅವೆಲ್ಲ ಕನ್ನಡ ಜಾಯಮಾನಕ್ಕೆ ಹೊಂದಿಕೊಂಡು ಕನ್ನಡೀಕರಣ ಗೊಂಡುಬಿಟ್ಟಿವೆ. ಆದರೆ, ಶಿಕ್ಷಣ ಮತ್ತು ಆಡಳಿತ ಕನ್ನಡದಲ್ಲಿ ಇಂದಿಗೂ ಜನಪದ ಕನ್ನಡ ಅಂಗೀಕಾರಗೊಂಡಿಲ್ಲ. ಆರಕ್ಷಕ, ಚಾಲಕ, ನಿರ್ವಾಹಕ, ಪ್ರಯಾಣಿಕ, ವೈದ್ಯ, ಅಭಿಯಂತರ, ಆಕಾಶವಾಣಿ, ದೂರದರ್ಶನ, ಗಣಕಯಂತ್ರ ಮುಂತಾದ ಮೃತಪದಗಳೇ ಚಾಲ್ತಿಯಲ್ಲಿವೆ. ಆಳುವವರ ನೀತಿಯ 'ಮೃತಪದ ಕನ್ನಡ' ಮತ್ತು ಮತ ನೀಡುವ ಪ್ರಜೆಗಳ 'ಜನಪದ ಕನ್ನಡ' – ಎಂಬ ವಿರುದ್ಧ ಧ್ರುವಗಳೇರ್ಪಟ್ಟು ಕನ್ನಡದ ಅಭಿವೃದ್ಧಿಯು ಹೆದ್ದಾರಿಯಲ್ಲಿ ಕೆಟ್ಟು ನಿಂತಿರುವ ಟ್ರಕ್ಕಾಗಿದೆ.

'ಜನಪದ ಕನ್ನಡ'ಕ್ಕಿರುವ ಜೀರ್ಣಶಕ್ತಿಯ ಪ್ರಕ್ರಿಯೆಯನ್ನೆ ಸಂಸ್ಕೃತಿಯ ಎಲ್ಲ ನೆಲೆಗಳಿಗೆ ಅನ್ವಯಿಸಿಕೊಳ್ಳಬೇಕು. ಇದರಲ್ಲಿ ಸ್ವೀಕರಣ-ಪರಿಷ್ಕರಣ-ಸ್ಥಿತ್ಯಂತರ ಮುಂತಾದವುಗಳೆಲ್ಲವೂ ಅಡಕವಾಗಿರುತ್ತದೆ. ವಸಾಹತೀಕರಣವನ್ನು ಕುವೆಂಪು ಅವರು ನೆಗೆಟಿವ್ ಮತ್ತು ಪಾಸಿಟಿವ್ ಎರಡೂ ನೆಲೆಗಳಲ್ಲಿ ಕಂಡಿರುವಂತೆಯೇ ನಾವಿಂದು ಜಾಗತೀಕರಣವನ್ನು ಎರಡೂ ನೆಲೆಗಳಲ್ಲಿ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಜಾಗತೀಕರಣದ ಹುಂಬ ಪುರಸ್ಕಾರ ಅಥವಾ ಹುಂಬ ತಿರಸ್ಕಾರ ಇವೆರಡೂ ಅಪಾಯಕಾರಿ ಮತ್ತು ನಮ್ಮನ್ನು ಸತ್ಯ ವಿಮುಖರನ್ನಾಗಿ ಮಾಡುತ್ತವೆ.

ಅಮೆರಿಕಾ-ಬ್ರಿಟನ್‌ಗಳು ವಾತಾಪಿ-ಇಲ್ವಲರಿದ್ದಂತೆ! ನಾನಾ ಕಪಟ ತಂತ್ರಗಳು ಮತ್ತು ಯುದ್ಧಗಳ ಮೂಲಕ ಭಯೋತ್ಪಾದಕರಾಗಿ ಎಲ್ಲ ದೇಶಗಳನ್ನು ಪೀಡಿಸುತ್ತಿದ್ದಾರೆ. ಇಂಥ ಸಂದರ್ಭದಲ್ಲಿ ಅಗಸ್ತ್ಯನಾರು – ಎಂಬ ಪ್ರಶ್ನೆ ಬೆಕ್ಕಿಗೆ ಗಂಟೆ ಕಟ್ಟುವವರಾರು, ಎಂಬ ಪ್ರಶ್ನೆಯಷ್ಟೆ ಕ್ಲಿಷ್ಟವಾಗಿದೆ. ಮುಳ್ಳನ್ನು ಮುಳ್ಳಿನಿಂದ, ವಜ್ರವನ್ನು ವಜ್ರದಿಂದ ಭೇದಿಸುವಂತೆಯೇ ಕನ್ನಡವು ಜಾಗತೀಕರಣದ ಲಾಭಗಳನ್ನು ಪಡೆಯುತ್ತಾ, ಅತ್ಯಾಧುನಿಕಗೊಳ್ಳಬೇಕಾಗಿದೆ. ಈ ದೃಷ್ಟಿಯಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಆಡಳಿತಗಳಲ್ಲಿ ಸೈಬರೀಕರಣವನ್ನು ನಾವೆಲ್ಲ ಸ್ವಾಗತಿಸಬೇಕಾಗಿದೆ. ಕನ್ನಡವೆಂದೂ ಸ್ಥಾವರವಾಗದೆ, ಸದಾ ಜಂಗಮವಾಗುತ್ತಾ ಕ್ರಿಯಾಶೀಲವಾಗಿರಬೇಕು.

ಕಂಪ್ಯೂಟರ್‌ಗೆ ಕನ್ನಡದ ಮಾತನ್ನು ಕೇಳಿಸಿದರೆ ಅಥವಾ ಕೈಬರೆಹವನ್ನು ಫೀಡ್ ಮಾಡಿದರೆ, ಅದು ಸ್ವಯಂಚಾಲನೆಯಿಂದ ತಂತಾನೆ ಲಿಪಿ ಜೋಡಿಸಿಕೊಂಡು ಕಂಪ್ಯೂಟರ್ ಪ್ರತಿಯಾಗಿ ಮೂಡಿಬರಬೇಕು. ಇಂಥ ತಂತ್ರಜ್ಞಾನಗಳೆಲ್ಲ ಕನ್ನಡದ್ದಾಗಬೇಕು. ಈಗ ಮೊಬೈಲುಗಳಲ್ಲಿರುವ ಎಸ್.ಎಂ.ಎಸ್. ಮುಂತಾದ ಸೇವೆಗಳು ಕನ್ನಡದಲ್ಲೂ ಲಭ್ಯವಾಗಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ ವಾತಾಪಿಯನ್ನು ಅಗಸ್ತ್ಯರು ತಿಂದು ಜೀರ್ಣಿಸಿಕೊಂಡಂತೆ, ಜಾಗತೀಕರಣವನ್ನು ಕನ್ನಡವು ಜೀರ್ಣಿಸಿಕೊಳ್ಳಬೇಕು.

ಇದುವರೆಗೆ ವಿವರಿಸಿದ ಮೂರು ಬಗೆಯ ಮುಖಾಮುಖಿಗಳಿಂದ ತಿಳಿಯಬೇಕಾದ ವಿಚಾರವೆಂದರೆ, ಜಾಗತೀಕರಣವು ಏಕಕಾಲಕ್ಕೆ ಕುಲ್ತೈಮೇಸ್ತ್ರ-ದಶಕಂಠ ರಾವಣ-ವಾತಾಪಿಯಾಗಿ ಜಗತ್ತಿನೆಲ್ಲೆಡೆ ಅವತರಿಸಬಹುದು. ಇದಕ್ಕನುಗುಣವಾಗಿ ಜಾನಪದವು ಕೂಡ, ಏಕಕಾಲಕ್ಕೆ ಕಸಾಂದ್ರ-ಹನುಮ-ಅಗಸ್ತ್ಯನಾಗಿ ತನ್ನ ಪಾಲಿನ ಕರ್ತವ್ಯ ನಿರ್ವಹಿಸಬೇಕಾಗಿದೆ. ಅಂದರೆ ಬದುಕಿನ ಅಗ್ನಿ ದಿವ್ಯದಲ್ಲಿ ಜಾನಪದವು ಅಲ್ಲಲ್ಲಿ ಬಲಿಯಾಗುತ್ತಲೂ ಇರುತ್ತದೆ; ಸವಾಲೆಸೆಯುತ್ತಲೂ ಇರುತ್ತದೆ; ಜೀರ್ಣಿಸಿಕೊಳ್ಳುತ್ತಲೂ ಇರುತ್ತದೆ. ಕನ್ನಡದ 'ಮಾತು' ಮತ್ತು 'ಬರೆಹ'ಗಳು ಪಡೆದುಕೊಳ್ಳುತ್ತಿರುವ ಸ್ಥಿತ್ಯಂತರಗಳನ್ನು ಗಮನಿಸಿದರೆ ಈ ಸಂಗತಿಯು ಸ್ಪಷ್ಟವಾಗುತ್ತದೆ.



ಬದುಕಿನ ಅನ್ವಯಿಕ ನೆಲೆಯಲ್ಲಿ ಜಾಗತೀಕರಣ ಮಾರ್ಗ ಮತ್ತು ಜಾನಪದ ಮಾರ್ಗಗಳು ಪರಸ್ಪರ ವಿರುದ್ಧ ಧ್ರುವಗಳಾಗಿವೆ. ಬದುಕಿನ ಚತುರ್ಮುಖಗಳಾದ ೧. ನಿಸರ್ಗ ಸಂಪತ್ತಿನ ಬಳಕೆ, ೨. ಉತ್ಪಾದನಾ ವಿಧಾನಗಳು, ೩. ಜೀವನ ಶೈಲಿ, ೪. ಮೇಲು ರಚನೆಗಳಲ್ಲಿ ಇದು ಸುಸ್ಪಷ್ಟವಾಗಿದೆ :




ಬದುಕಿನ ಚತುರ್ಮುಖಗಳನ್ನು ಲಕ್ಷಿಸಿದರೆ, ಜಾಗತೀಕರಣ ಮಾರ್ಗವು ಅಂತಿಮವಾಗಿ ಶೋಕಸ್ತಂಭವನ್ನು ಆಧರಿಸಿದ್ದರೆ, ಜಾನಪದ ಮಾರ್ಗವು ಅಶೋಕಸ್ತಂಭವನ್ನು ಅಪ್ಪಿಕೊಂಡಿರುವುದು ಗಮನಾರ್ಹವಾಗಿದೆ.

ಜಾಗತೀಕರಣ ಮಾರ್ಗವು 'ಸಿದ್ಧ ವೈಚಾರಿಕತೆ' ಮತ್ತು 'ಪ್ರಧಾನ ವೈಚಾರಿಕತೆ'ಯ ಹರಿಕಾರನಾಗಿದೆ. ಜಾನಪದ ಮಾರ್ಗವು ಸಿದ್ಧ ವೈಚಾರಿಕತೆ ಮತ್ತು ಪ್ರಧಾನ ವೈಚಾರಿಕತೆಗಳ ಮಹಾವಿರೋಧಿಯಾಗಿದೆ. ಒಂದು ಉದ್ದೇಶ ಸಾಧನೆಯ ನಿರ್ದಿಷ್ಟ ಆಲೋಚನೆ ಅಥವಾ ಕ್ರಿಯೆಗಳ ಮೊತ್ತವೇ 'ರ್‍ಯಾಷನೇಲ್' ಎನಿಸಿಕೊಳ್ಳುತ್ತದೆ. ಜಾನಪದ ಮಾರ್ಗವು ಇಂಥ ಎಲ್ಲ ರ್‍ಯಾಷನೇಲ್‌ಗಳನ್ನು ತೂರಿಬಿಡುತ್ತದೆ. ಏಕೆಂದರೆ, ಜಾನಪದ ಮಾರ್ಗವು ಜೀವನಾನುಭವಗಳ ಮಥನದಿಂದ ಮೂಡುವಂತಹುದು. ಬದುಕಿನ ಶೋಧನೆ ಇಲ್ಲಿ ಮುಖ್ಯ! ಜಾನಪದ ಮಾರ್ಗವು 'ಜೀವನ ವೈಚಾರಿಕತೆ'ಯನ್ನು ಬಿಂಬಿಸುವ ವಿವೇಕ! ಆದ್ದರಿಂದಲೇ, ಜಾಗತೀಕರಣವು ಅಲ್ಲಾವುದ್ದೀನನ ಅದ್ಭುತದೀಪದಂತೆ ಹೊರಗಿನ ವಿಲಾಸ. ಜಾನಪದವು ಮಿಂಚು ಹುಳುಗಳ ತಂಪು ದೀಪದಂತೆ ಒಳಗಿನ ವಿಕಾಸ.

ಕೊನೆಯದಾಗಿ, ಲೋಹಿಯಾ ಗುರುತಿಸಿದ ನಾಲ್ಕು ಕಂಬಗಳ ರಾಷ್ಟ್ರವೆಂಬ ಪರಿಕಲ್ಪನೆಯಲ್ಲಿ ೧. ಹಳ್ಳಿ ೨. ಜಿಲ್ಲೆ ೩. ಪ್ರಾಂತ ೪. ಕೇಂದ್ರಗಳೆಂಬ ನಾಲ್ಕು ತಲೆಗಳಿವೆ. ಇದಕ್ಕನುಗುಣವಾಗಿ ಗ್ರಾಮ ಪಂಚಾಯತ್, ಜಿಲ್ಲಾ ಪಂಚಾಯತ್, ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಗಳೆಂಬ ನಾಲ್ಕು ತಲೆಗಳ ಆಡಳಿತ ವ್ಯವಸ್ಥೆ ನಮ್ಮಲ್ಲಿದೆ. ಈಗ ಇದಕ್ಕೆ 'ಜಾಗತೀಕರಣ'ವೆಂಬ ಐದನೇ ತಲೆಯು ನಾಲ್ಕು ತಲೆಗಳ ಮೇಲೇರಿ ಕುಳಿತಿದೆ. ತಾನೇ ಸೃಷ್ಟಿಯ ಸಾರ್ವಭೌಮ ಮತ್ತು ಅಪರಬ್ರಹ್ಮನೆಂಬ ಈ ಅಹಂಕಾರದ ಐದನೇ ತಲೆಯನ್ನು ಶಿವನಂತೆ ಕಿತ್ತುಹಾಕಬೇಕು. ಬ್ರಹ್ಮ ಕಪಾಲವನ್ನು ಕೈಯಲ್ಲಿಟ್ಟುಕೊಂಡು ಜಾನಪದ ಭಿಕ್ಷೆ ಎತ್ತುತ್ತಾ ಲೋಕ ಸಂಚಾರಿಗಳಾಗುವ ಜವಾಬ್ದಾರಿ ಕರ್ನಾಟಕ ಹೃದಯ ಶಿವರುಗಳಿಗಿದೆ :

ಭಕ್ತಿ ಇಲ್ಲದ ಬಡವ ನಾನಯ್ಯ
ಕಕ್ಕಯ್ಯನ ಮನೆಯಲು ಬೇಡಿದೆ
ದಾಸಯ್ಯನ ಮನೆಯಲು ಬೇಡಿದೆ
ಚೆನ್ನಯ್ಯನ ಮನೆಯಲು ಬೇಡಿದೆ
ಎಲ್ಲ ಪುರಾತರು ನೆರೆದು
ಭಕ್ತಿ ಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು
ಕೂಡಲ ಸಂಗಮದೇವ.

*ದಿನಾಂಕ ೯.೧೧.೨೦೦೩ರಂದು ಚಿಕ್ಕಜಾಜೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತು, ಹೊಳಲ್ಕೆರೆ ತಾಲ್ಲೂಕು ಮೂರನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಂಡಿಸಿದ ವಿಚಾರಗೋಷ್ಠಿ ಭಾಷಣವನ್ನಾಧರಿಸಿದ ಲೇಖನ.*


ಎ. ಚಂದ್ರಶೇಖರ ನಂಗಲಿ
೩.೨೮೪, ಪಿ.ಸಿ.ಬಡಾವಣೆ, ಕೋಲಾರ - ೫೬೩ ೧೦೧




# ಕಾಶ್ಮೀರದ ಸ್ಥಿತಿಗತಿಗಳು ಅಂದು - ಇಂದು
# ಅಮರನಾಥ ಯಾತ್ರೆಯ ಹಿನ್ನೆಲೆಯಲ್ಲಿ

*ಲೆಫ್ಟಿನೆಂಟ್ ಜನರಲ್ ಎನ್. ಎಸ್. ನರಹರಿಯವರು 'ಹೊಸತು' ಓದುಗರಿಗೆ ಈಗಾಗಲೆ ಪರಿಚಿತರು. ೨೦೦೨ರ ವಿಶೇಷ ಸಂಚಿಕೆಯಲ್ಲಿ ಇವರೊಡನೆಯ ಸಂದರ್ಶನವನ್ನು ಪ್ರಕಟಿಸಿದ್ದೆವು. ಕಾಶ್ಮೀರದ ಸಾಮಾಜಿಕ, ರಾಜಕೀಯ ಮತ್ತು ಮಿಲಿಟರಿ ಪರಿಸ್ಥಿತಿಯನ್ನು ಯಾತ್ರಿಕರಾಗಿ ವೀಕ್ಷಿಸಿದ್ದಾರೆ. ದಂಡನಾಯಕರಾಗಿ, ಹಲವಾರು ವರ್ಷ ಸೇವೆ ಸಲ್ಲಿಸಿ, ಸ್ವಂತ ಅನುಭವ ಇರುವ ಜನರಲ್ ಅವರು ಇತ್ತೀಚೆಗೆ ತಾನೆ ಅಮರನಾಥ ಯಾತ್ರೆಗೆ ಹೋಗಿದ್ದರು. ಆ ಸಂದರ್ಭದಲ್ಲಿ ಅವರು ಸೂಕ್ಷ್ಮವಾಗಿ ಗಮನಿಸಿದ ಪ್ರಸ್ತುತ ಪರಿಸ್ಥಿತಿಯ ಒಳನೋಟ ಈ ಲೇಖನ. ಇದು ಪ್ರಕಟವಾಗುವ ವೇಳೆಗೆ ಎರಡೂ ರಾಷ್ಟ್ರಗಳ ನಡುವಿನ ಸಂಬಂಧ ಮತ್ತಷ್ಟು ವರ್ಧಿಸುವ ಸೂಚನೆಗಳಿದ್ದು ಈ ಲೇಖನ ಆ ಬಗೆಗಿನ ಮುನ್ಸೂಚನೆಯಂತಿದೆ.*

**ಎನ್. ಎಸ್. ನರಹರಿ**

ಭಾರತ ಹಾಗೂ ಪಾಕಿಸ್ತಾನ ನಡುವಿನ ಅನೇಕ ವಿವಾದಗಳಲ್ಲಿ ಜಮ್ಮು - ಕಾಶ್ಮೀರದ ಸಮಸ್ಯೆಯು ಪ್ರಮುಖವಾದುದು. ಈ ಬಿಕ್ಕಟ್ಟಿನಿಂದಾಗಿ ಅಸಂಖ್ಯಾತ ಮುಗ್ಧಜೀವಿಗಳು ಪ್ರಾಣ ತೆತ್ತುದೂ ಅಲ್ಲದೆ ಎರಡೂ ದೇಶಗಳ ಆರ್ಥಿಕ ಮತ್ತು ಭದ್ರತಾ ವ್ಯವಸ್ಥೆಗೆ ಭಾರಿ ಪೆಟ್ಟು ಬಿದ್ದಿದೆ. ಪಾಕಿಸ್ತಾನಕ್ಕೆ ಜಮ್ಮು - ಕಾಶ್ಮೀರ ಪ್ರದೇಶವು ತುಂಬ ಆಯಕಟ್ಟಿನ ಪ್ರದೇಶವಾಗಿದ್ದು, ಅದು ಆ ರಾಷ್ಟ್ರಕ್ಕೆ ಉತ್ತರದ ಕಡೆಯಿಂದ ಭದ್ರತಾ ದೃಷ್ಟಿಯಲ್ಲಿ ಮಹತ್ವದ್ದೂ ಕೂಡ. ಭಾರತದ ವಿಭಜನೆಗೂ, ಪಾಕಿಸ್ತಾನ ರಾಷ್ಟ್ರ ನಿರ್ಮಾಣದುದ್ದಕ್ಕೂ ಪ್ರಮುಖ ಕಾರಣವಾದ ಪಾಕಿಸ್ತಾನದ ಸಂಸ್ಥಾಪಕ, ರಾಷ್ಟ್ರಪತಿ ಜಿನ್ನಾ ರೂಪಿಸಿದ ದ್ವಿರಾಷ್ಟ್ರ ನೀತಿಯ ಪ್ರತಿಪಾದನೆಗೆ ಜಮ್ಮು - ಕಾಶ್ಮೀರದ ಸ್ವಾಧೀನವು ಪುಷ್ಟಿ ನೀಡುತ್ತದೆ. ತನ್ನ ಹಿತಾಸಕ್ತಿಗೆ ವಿರೋಧವಿದ್ದರೂ ಭಾರತವು ಈ ನೀತಿಯನ್ನು ಅಂದಿನ ದಿನಗಳಲ್ಲಿ ಆಗಲೇ ತೀರ್ಮಾನವಾಗಿಬಿಟ್ಟದ್ದೆಂದು ಮನಸ್ಸಿಲ್ಲದಿದ್ದರೂ ಒಪ್ಪಲೇಬೇಕಾಗಿ ಬಂದದ್ದು ಒಂದು ಐತಿಹಾಸಿಕ ಸತ್ಯ. ಮಹಾರಾಜ ಹರಿಸಿಂಗ್ ಸಹಿ ಮಾಡಿರುವ ಅಕ್ಟೋಬರ್ ೧೯೪೭ರ ''ಭಾರತಕ್ಕೆ ಸೇರ್ಪಡೆ'' ಕಡತದಂತೆ ಜಮ್ಮು - ಕಾಶ್ಮೀರ ಪ್ರದೇಶವು ಭಾರತದ ಅವಿಭಾಜ್ಯ ಅಂಗವೆಂದು ೧೯೪೭ರ ಸ್ವಾತಂತ್ರ್ಯ ಕಾಯ್ದೆಯಡಿ ಗೊತ್ತುಪಡಿಸುತ್ತದೆ. ಇದನ್ನು ಜಮ್ಮು - ಕಾಶ್ಮೀರದ ಸಂವಿಧಾನ ಮಂಡಳಿಯು ೧೯೫೭ರಲ್ಲಿ ಊರ್ಜಿತಗೊಳಿಸಿದೆ. ಕಾರ್ಗಿಲ್ ಯುದ್ಧವೂ ಸೇರಿದಂತೆ ಪಾಕಿಸ್ತಾನ-ಭಾರತಗಳ ಮಧ್ಯೆ ನಾಲ್ಕುಬಾರಿ (೧೯೪೭, ೧೯೬೫, ೧೯೭೧ ಮತ್ತು ೨೦೦೧) ಯುದ್ಧಗಳು ಸಂಭವಿಸಿವೆ. ಈ ಎಲ್ಲ ಸಂದರ್ಭಗಳಲ್ಲೂ ಮೊದಲಿಗೆ ಜೆಹಾದಿಗಳು, ಹಾಗೂ ಶಸ್ತ್ರಾಸ್ತ್ರ ತರಪೇತಿ ಪಡೆದವರು ಆಕ್ರಮಣಕಾರಿಗಳಾಗಿ ಮುನ್ನುಗ್ಗುವುದು ; ಅವರ ಬೆನ್ನಿಗೇ ಮಿಲಿಟರಿ ಸೇವಾನಿರತ ಸೈನಿಕರು ಒಳನುಸುಳಿ ಬೆಂಬಲ ನೀಡುವ ಸಂಚು ಹೂಡಿ ಪಾಕಿಸ್ತಾನವು ಯುದ್ಧವನ್ನು ಸಾರಿತು. ೧೯೪೭ರ ಯುದ್ಧದಲ್ಲಿ ಸಂಯುಕ್ತರಾಷ್ಟ್ರಸಂಸ್ಥೆ ಪ್ರಾಯೋಜಿತ ಯುದ್ಧ ವಿರಾಮವನ್ನು ಘೋಷಿಸುವ ಮೊದಲೇ ಪಾಕಿಸ್ತಾನ ಜಮ್ಮು - ಕಾಶ್ಮೀರದ ಮೂರನೆ ಒಂದರಷ್ಟು ಭಾಗವನ್ನು ಈ ಸಂಚಿನ ಮೂಲಕ ಆಕ್ರಮಿಸಿಕೊಂಡದ್ದನ್ನು ಹೊರತುಪಡಿಸಿದರೆ, ತದನಂತರ ಇದೇ ತಂತ್ರವನ್ನು ಪುನಃಪುನಃ ಪ್ರಯೋಗಿಸಿದರೂ, ಅವರು ಮುಂದೆ ಎಂದೂ ಸಫಲರಾಗಿಲ್ಲ. ಈಗ ವಿವಾದವು ಕಗ್ಗಂಟಾಗಿಯೇ ಉಳಿದಿದೆ.

೧೯೮೦ರ ದಶಕದ ಕೊನೆಯ ಭಾಗದಲ್ಲಿ ಜಮ್ಮು - ಕಾಶ್ಮೀರದ ರಾಜಕೀಯ ಹಾಗೂ ಮಿಲಿಟರಿ ಕಾರ್ಯಾಚರಣೆಗಳ ಒಟ್ಟಾರೆ ಚಿತ್ರದಲ್ಲಿ ಸಾಕಷ್ಟು ಮಾರ್ಪಾಡುಗಳಾದವು. ಸೋವಿಯತ್ ಒಕ್ಕೂಟದ ಬೆಂಬಲ ಪಡೆದ ಅಫ್ಘನ್ ಕಮ್ಯುನಿಸ್ಟರನ್ನು ಹೊಡೆದೋಡಿಸಲು ತಾಲಿಬಾನ್ ಮುಜಾಹಿದ್ದೀನರಿಗೆ ಅಮೆರಿಕ ಹಾಗೂ ಪಾಕಿಸ್ತಾನಗಳ ಕುಮ್ಮಕ್ಕಿನಿಂದಾಗಿ ಸಾಧ್ಯವಾಯಿತು. ಈ ಮುಜಾಹಿದ್ದೀನರು ಇನ್ನೂ ಹೆಚ್ಚು ಜೆಹಾದ್‌ಗಳನ್ನು ಕೈಗೊಳ್ಳಲು ಸಮರ್ಥರಿದ್ದರು. ತರಬೇತು ಪಡೆದ ಶಸ್ತ್ರಸುಸಜ್ಜಿತರೂ, ಪ್ರಚೋದಿತರೂ ಆಗಿದ್ದ ಮುಜಾಹಿದ್ದೀನ್ ಪಡೆಗಳನ್ನು ಬಳಸಿಕೊಂಡು, ಜಮ್ಮು - ಕಾಶ್ಮೀರ ಪ್ರದೇಶವನ್ನು ಕಪಟ ಸಮರದ

ನೆಪದಲ್ಲಿ ಸ್ವಾಧೀನಪಡಿಸಿಕೊಳ್ಳುವ ದೂರದೃಷ್ಟಿಯಿಂದ 'ಆಪರೇಷನ್ ಟೋಪಾಜ್' ಎಂಬ ದೀರ್ಘಕಾಲದ ಯೋಜನೆಯನ್ನು ರೂಪಿಸಿದ್ದು ಪಾಕಿಸ್ತಾನದ ಅಧ್ಯಕ್ಷ ಜನರಲ್ ಜಿಯಾ. ಮೊದಲು ಜಮ್ಮು - ಕಾಶ್ಮೀರದ ವ್ಯವಸ್ಥಿತ ರಾಜ್ಯ ಹಾಗೂ ರಾಜಕೀಯ ಸಂಸ್ಥೆಗಳನ್ನು ನಿರ್ನಾಮಗೊಳಿಸಿ, ನಂತರ ಕಾಶ್ಮೀರಿ ಮುಸ್ಲಿಮರು ಮತ್ತು ಕಾಶ್ಮೀರಿ ಪಂಡಿತರ ನಡುವಣ ಪಾರಂಪರಿಕ ಕೋಮುಸೌಹಾರ್ದಕ್ಕೆ ಕೊಳ್ಳಿ ಇಡುವುದು ಈ ಯೋಜನೆಯ ದುರುದ್ದೇಶ. ಅಲ್ಲದೆ ಈ ಪ್ರಕ್ರಿಯೆಯಿಂದಾಗಿ ಸ್ಥಳೀಯ ಜನರಲ್ಲಿ ಉಂಟಾಗುವ ವೈಮನಸ್ಯದ ಪ್ರಯೋಜನ ಪಡೆದು, ಅದೇ ಕಾಲದಲ್ಲಿ ಪಂಜಾಬಿನಲ್ಲಿ ಪ್ರತ್ಯೇಕತಾವಾದಿ ಗಲಭೆಗಳನ್ನು ಹುಟ್ಟುಹಾಕುವುದರ ಮೂಲಕ ಇಂತಹ ಘರ್ಷಣೆಗಳ ವ್ಯಾಪ್ತಿಯನ್ನು ವಿಸ್ತರಿಸಿ ಸೂಕ್ತ ಸಂದರ್ಭದಲ್ಲಿ ತನ್ನ ಮಾಮೂಲಿ ಸಶಸ್ತ್ರ ಪಡೆಗಳನ್ನು ಕಾರ್ಯಾಚರಣೆಗಿಳಿಸುವುದು – ಇವು ಈ ಯೋಜನೆಯ ಸಾರಾಂಶ.

ಮೊದಲ ೪-೫ ವರ್ಷಗಳವರೆಗೆ ಈ ಎಲ್ಲ ಪ್ರಯತ್ನಗಳಲ್ಲೂ ಸ್ವಲ್ಪ ಯಶಸ್ಸು ಗಳಿಸಿತಾದರೂ ಭಾರತದ ರಕ್ಷಣಾ ಪಡೆಗಳ ನಿಷ್ಠೆ ಹಾಗೂ ಕ್ರಿಯಾಶೀಲತೆಗಳಿಂದಾಗಿ ಪರಿಸ್ಥಿತಿ ಹತೋಟಿ ಮೀರಲಿಲ್ಲ. ಪಂಜಾಬಿನಲ್ಲಿ ರಕ್ಷಣಾಪಡೆಗಳ ಜಂಟೀ ಕಾರ್ಯಾಚರಣೆಗಳು, ಸರ್ಕಾರದ ರಾಜಕೀಯ ಪರಿಜ್ಞಾನ ಮತ್ತು ಈ ಪಿತೂರಿಗೆ ಅಲ್ಲಿನ ಜನರ ಅಸಡ್ಡೆ, ಇವುಗಳಿಂದಾಗಿ ಅಲ್ಲಿನ ಭಯೋತ್ಪಾದಕ ಚಟುವಟಿಕೆಗಳಿಗೆ ಭಾರಿ ಹಿನ್ನಡೆಯುಂಟಾಗಿ ಪರಿಸ್ಥಿತಿ ತಿಳಿಯಾಯಿತು.

ನಾನು ಜಮ್ಮು - ಕಾಶ್ಮೀರಕ್ಕೆ ೧೯೯೩ರಲ್ಲಿ ಭೇಟಿ ನೀಡಿದಾಗ ಭಯೋತ್ಪಾದನಾ ಕುಕೃತ್ಯಗಳ ಅಟ್ಟಹಾಸ ಮೇರೆ ಮೀರಿತ್ತು. ಕಾಶ್ಮೀರದಲ್ಲಿ ಮುಸ್ಲಿಮರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಅಲ್ಲಿನ ಚರಾರ್-ಎ-ಶರೀಫ್ ಪವಿತ್ರ ಮಂದಿರದೊಳಗೆ ನುಸುಳಿದ ಭಯೋತ್ಪಾದಕರನ್ನು ಆಗಷ್ಟೆ ಹೊರ ಗಟ್ಟಲಾಗಿತ್ತು. ಶ್ರೀನಗರ ಮತ್ತು ಸುತ್ತಮುತ್ತಲ ಪ್ರದೇಶಗಳನ್ನು ಯುದ್ಧಪೀಡಿತ ಪ್ರದೇಶಗಳೆಂದು ಘೋಷಿಸಿ ಅಲ್ಲಿನ ರಕ್ಷಣಾ ವ್ಯವಸ್ಥೆಯನ್ನು ಬಲಪಡಿಸಲಾಗಿತ್ತು. ಅಲ್ಲಿನ ಮುಗ್ಧ ಜನರಿಗೆ ಭಯದ ನೆರಳಿನಲ್ಲಿ ಉಸಿರಾಡುವಂತಾಗಿತ್ತು. ಬಜಾರುಗಳೆಲ್ಲ ನಿರ್ಜನವಾಗಿದ್ದವು. ಶ್ರೀನಗರದ ಕೇಂದ್ರ ಭಾಗದಲ್ಲಿರುವ ದಾಲ್ ಸರೋವರ ಪ್ರದೇಶದೆಲ್ಲೆಡೆ ಸ್ಮಶಾನ ಮೌನ. ಕಾಶ್ಮೀರ ಕಣಿವೆಯ ಜನರ ಜೀವನಾಡಿ ಎನಿಸಿದ್ದ ಕರಕುಶಲ ಕೈಗಾರಿಕೆ ಮತ್ತು ಪ್ರವಾಸೋದ್ಯಮಗಳು ಸ್ಥಗಿತಗೊಂಡಿದ್ದವು. ಅಲ್ಲಿನ ಪರಿಸ್ಥಿತಿಯ ಕುರಿತು ಹೆಚ್ಚು ತಿಳಿಯುವ ಸಲುವಾಗಿ ಹಲವಾರು ಸೇನಾಧಿಕಾರಿಗಳನ್ನು, ಸರ್ಕಾರಿ ಅಧಿಕಾರಿಗಳನ್ನು ಸಂಧಿಸಿದೆ. ಜನರಲ್ಲಿ ಸಹಜವಾಗಿ ಹತಾಶಭಾವನೆ ಉಂಟಾಗಿದ್ದರೂ ಪರಿಸ್ಥಿತಿ ತಿಳಿಯಾಗಬಹುದೆಂಬ ಆತ್ಮವಿಶ್ವಾಸ ಅವರಲ್ಲಿತ್ತು. ಅಲ್ಲಿನ ಮಿಲಿಟರಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ಕೆಲವು ಭಯೋತ್ಪಾದಕರನ್ನು ಸಂದರ್ಶಿಸಿದೆ. ಅವರಲ್ಲಿ ಹೆಚ್ಚಿನವರು ಪಾಕಿಸ್ತಾನಿಗಳೇ. ಮಸೀದಿಗಳನ್ನು ಧ್ವಂಸ ಮಾಡುವುದನ್ನೇ ಮುಂದಿಟ್ಟುಕೊಂಡು ಇಸ್ಲಾಂ ಧರ್ಮಕ್ಕೆ ಯಾವುದೋ ಗಂಡಾಂತರ ಕಾದಿದೆ ಎಂಬುದಾಗಿ ಉಗ್ರಗಾಮಿ ಸಂಘಟನೆಗಳು ಇಲ್ಲಸಲ್ಲದ್ದನ್ನೆಲ್ಲಾ ತಮ್ಮ ತಲೆಗೆ ತುಂಬಿದ್ದರೆಂದೂ, ಅಲ್ಲಿನ ಕೆಲವು ಮಸೀದಿಗಳನ್ನು ಉಗ್ರಗಾಮಿಗಳೇ ಸುಟ್ಟುಹಾಕಿದ್ದರೆಂದೂ ತಮ್ಮವರೇ ತಮಗೆ ದಾರಿ ತಪ್ಪಿಸಿದ್ದರೆಂದೂ ಪಶ್ಚಾತ್ತಾಪಪಟ್ಟರು. ಆದರೆ ಅದು ಎಷ್ಟು ಪ್ರಾಮಾಣಿಕವೋ ನಾನರಿಯೆ.

ಜಮ್ಮುವಿನಲ್ಲಿ ಕಾಶ್ಮೀರಿ ಪಂಡಿತರಿಗೆಂದು ನಿರ್ಮಿಸಲಾಗಿದ್ದ ಕೆಲವು ನಿರಾಶ್ರಿತ ಶಿಬಿರಗಳಿಗೆ ಭೇಟಿಕೊಟ್ಟೆ. ನಿರಾಶ್ರಿತರ ದುರವಸ್ಥೆಯನ್ನು ಕಂಡು ಅತೀವ ಸಂಕಟವಾಯಿತು. ಅವರಿಗೆ ಒದಗಿಸಲಾಗಿದ್ದ ಪರಿಹಾರ ಕಾರ್ಯಗಳು ಎಳ್ಳಷ್ಟೂ ಸಮರ್ಪಕವಾಗಿರಲಿಲ್ಲ. ಮಹಿಳೆಯರ ಪಾಡಂತೂ ಇನ್ನೂ ಚಿಂತಾಜನಕ. ಇವರೆಲ್ಲ, ಕಾಶ್ಮೀರ ಕಣಿವೆಯಲ್ಲಿ ಮನೆ, ಜಮೀನು ಇದ್ದಂಥವರು, ಇಲ್ಲವೇ ಸಣ್ಣಪುಟ್ಟ ಉದ್ಯೋಗಿಗಳು. ಆ ಜನ ಅದೇ ಪ್ರದೇಶಕ್ಕೆ ಸೇರಿದವರಾಗಿ, ತಮ್ಮದೇ ಸರ್ಕಾರದ ಕೃಪೆಯಲ್ಲಿದ್ದುಕೊಂಡು, ಸ್ವಂತ ಸ್ಥಳದಲ್ಲೇ ನೌಕರಿಗಾಗಿ ಅಲೆದಾಡಿ ಕಂಗಾಲಾಗಿದ್ದರು. ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಇವರಿಗೆ ಅಷ್ಟಿಷ್ಟು ನಿತ್ಯಾವಶ್ಯಕ ಸಾಮಗ್ರಿಗಳನ್ನು ಹಂಚಿದ್ದನ್ನು ಬಿಟ್ಟರೆ ಆರ್ಥಿಕವಾಗಂತೂ ಅವುತ್ತ ಪರಿಹಾರ ಅಷ್ಟಕ್ಕಷ್ಟೆ. ಬಹುಶಃ ಇವರೆಲ್ಲರನ್ನೂ ಮತ್ತೆ ಕಣಿವೆಗೆ ಹಿಂದಿರುಗುವಂತೆ ಮನವೊಲಿಸುವ ಉದ್ದೇಶದಿಂದಲೇ ಆ ನಿಟ್ಟಿನಲ್ಲಿ ಆಡಳಿತ ವರ್ಗ ಸಂಪೂರ್ಣ ನಿರ್ಲಕ್ಷ್ಯಕ್ಕೊಳಗಾಗಿದ್ದಿತೆಂದು ನನಗೆ ಹಲವು ಬಾರಿ ಅನ್ನಿಸಿದ್ದುಂಟು.

ಈಗಿನ ರಾಜ್ಯ ಸರ್ಕಾರ, ಕಾಶ್ಮೀರಿ ಪಂಡಿತ ಸಮುದಾಯವು ಕಣಿವೆಯ ಸುರಕ್ಷಿತ ಸ್ಥಳಗಳಿಗೆ ಹೋಗಿ ನೆಲೆಸುವಂತೆ ಮನವೊಲಿಸಲು ಸಾಕಷ್ಟು ಶ್ರಮಿಸುತ್ತಿದೆ. ಅದೇ ಸಮಯದಲ್ಲಿ ಅಲ್ಲಿನ ಮುಸ್ಲಿಂ ಹಾಗೂ ಪಂಡಿತ ಸಮುದಾಯದವರಿಬ್ಬರ ಸೌಹಾರ್ದತೆಗಾಗಿ ಪ್ರಯತ್ನಿಸುತ್ತಿದೆ. ಸಹಬಾಳ್ವೆಯ ಉದಾತ್ತ ಮೌಲ್ಯಕ್ಕಿಂತ ಮನುಷ್ಯನ ಸ್ವಾರ್ಥ ಲಾಲಸೆ ಹಲವೊಮ್ಮೆ ಮೇಲುಗೈ ಸಾಧಿಸಿಬಿಡುತ್ತದೆ. ಈಗಲಾದರೂ ಕಾಶ್ಮೀರ ಮತ್ತೊಂದು ನಿರಾಶ್ರಿತರ ಶಿಬಿರವನ್ನು ಹುಟ್ಟುಹಾಕುವಂತಾಗದೆ ಕಾಶ್ಮೀರದ ಜನತೆ ಹಾಗೂ ಸರ್ಕಾರ ಈಗ ಕೈಗೆತ್ತಿಕೊಂಡಿರುವ ಯೋಜನೆಗಳು ಸಾಕಾರಗೊಳ್ಳಲಿ ಎಂದು ಹಾರೈಸೋಣ.

**ಕಾಶ್ಮೀರ ಕಣಿವೆ – ಇಂದು**

ಹತ್ತು ವರ್ಷಗಳ ನಂತರ ಮತ್ತೊಮ್ಮೆ ೨೦೦೩ ಜುಲೈನಲ್ಲಿ ನಾವು ಅಮರನಾಥ ಯಾತ್ರೆಗೆ ಹೋಗಿದ್ದೆವು. ಜಮ್ಮು - ಕಾಶ್ಮೀರದ ಈಚಿನ, ಅಂದರೆ ಮುಫ್ತಿ ಸರ್ಕಾರ ಅಧಿಕಾರಕ್ಕೆ ಬಂದ ನಂತರದ ಪರಿಸ್ಥಿತಿಯ ಒಂದು ಒಳನೋಟ ದೊರಕುವ ನಿಟ್ಟಿನಲ್ಲಿ ಈ ಯಾತ್ರೆ ನಮಗೆ ಅವಕಾಶ ಕಲ್ಪಿಸಿಕೊಟ್ಟಿತು.

ಅಮರನಾಥ ಗುಹಾಲಯವು ಜಂಸ್ಕಾರ್ ಶ್ರೇಣಿಯ ಆಗ್ನೇಯ ದಿಕ್ಕಿಗಿರುವ ಇಳಿಜಾರು ಪ್ರದೇಶದಲ್ಲಿ ೩,೦೦೦ ಅಡಿಗಳಷ್ಟು ಎತ್ತರದಲ್ಲಿ ನೆಲೆಸಿದೆ. ಗುಹೆಯಲ್ಲಿನ ಶಿವಲಿಂಗವು ರೂಪುಗೊಳ್ಳುವುದು ಹಿಮ ಕರಗುವ ಸಮಯದಲ್ಲಿ, ಬಂಡೆಗಳಲ್ಲಿನ ಬಿರುಕುಗಳಿಂದ ಜಿನುಗುವ ಹಿಮದಿಂದ. ದೇವಾಲಯಕ್ಕೆ ನಾವು ಭೇಟಿ ಇತ್ತಾಗ ಇನ್ನೂ ಜುಲೈ ತಿಂಗಳ ಮೊದಲ ದಿನಗಳು. ಅಲ್ಲಿ ಕಂಡದ್ದು ಎತ್ತರಕ್ಕೆ ಭವ್ಯವಾಗಿ ನಿಂತಿದ್ದ ೭-೮ ಅಡಿಗಳ ಶಿವಲಿಂಗ. ಯಾತ್ರಿಗಳು ಲಿಂಗಕ್ಕೆ ಬೆಳಗುವ ಆರತಿ ಮತ್ತು ಅಲ್ಲಿನ ಹವಾಮಾನದ ಶಾಖದ ಏರುಪೇರುಗಳಿಂದಾಗಿ ಕ್ರಮೇಣ ಅದು ಕರಗಿ ನಂತರದ ನಾಲ್ಕು ವಾರಗಳ ಅವಧಿಯಲ್ಲಿ ಚಿಕ್ಕದಾಗುತ್ತಾ ಹೋಗುತ್ತದೆ.

ಜಮ್ಮು - ಕಾಶ್ಮೀರ ರಾಜ್ಯ ಸರ್ಕಾರವು ಯಾತ್ರಾರ್ಥಿಗಳಿಗೆಂದು ವ್ಯವಸ್ಥೆ ಮಾಡಿರುವ ಮಾರ್ಗವು ಪಹಲ್‌ಗಾಂವ್‌ನಿಂದ ಪ್ರಾರಂಭವಾಗುತ್ತದೆ. ಅಮರನಾಥ್‌ನಲ್ಲಿ ರಾತ್ರಿ ಕಳೆಯಲು ವಸತಿಗೃಹಗಳು ಅಥವಾ ತಂಗುದಾಣಗಳ ವ್ಯವಸ್ಥೆಯೇನೂ ಇಲ್ಲ. ಆದರೆ ಆ ಮಾರ್ಗದಲ್ಲಿ ರಾಜ್ಯ ಸರ್ಕಾರವು ನಿರ್ಮಿಸಿರುವ ಎರಡು ತಂಗುದಾಣಗಳಿವೆ. ಎರಡು ದಿನ ರಾತ್ರಿ ಪ್ರಯಾಣಕ್ಕೆ ಸರಿಹೋಗುವಂತೆ ಆಯೋಜಿಸಿರುವ ಈ ತಂಗುದಾಣಗಳಲ್ಲಿ ಸೀಮಿತ ಸೌಕರ್ಯವಷ್ಟೇ ಲಭ್ಯ. ಅಮರನಾಥ್ ತಲುಪಲು ಬೇರೊಂದು ಮಾರ್ಗವಿದೆ. ಜೋಷಿಜಿಲ ಕಣಿವೆ ಮತ್ತು ದೂಮೆಲ್ ಗ್ರಾಮವನ್ನು ಹಾದುಹೋಗುವ ಈ ದಾರಿ ಪ್ರಾರಂಭವಾಗುವುದು ಬಲ್ತಾಳ್‌ನಿಂದ. ಈ ದಾರಿಯಲ್ಲಿ ತಂಗಲು ಯಾವುದೇ ವ್ಯವಸ್ಥೆ ಇಲ್ಲವಾದ್ದರಿಂದ ಯಾತ್ರಿಗಳು ಸಂಜೆಗೆ ಮುಂಚಿತವಾಗಿಯೇ ಅಮರನಾಥ್‌ನಿಂದ ವಾಪಸ್ಸು ಹೊರಟುಬಿಡಬೇಕಾಗುತ್ತದೆ. ಸಾಮಾನ್ಯವಾಗಿ ಭದ್ರತಾ ಸಿಬ್ಬಂದಿ ಮತ್ತು ಸರ್ಕಾರಿ ಅಧಿಕಾರಿಗಳು ಮಾತ್ರ ಈ ದಾರಿಯನ್ನು ಬಳಸುತ್ತಾರೆ. ಏರುಪೇರಿನ ಭೂಪ್ರದೇಶ ಮತ್ತು ಯಾತ್ರಾರ್ಥಿಗಳ ಅಧಿಕ ಸಂಖ್ಯೆಯಿಂದಾಗಿ ಎಲ್ಲ ರೀತಿಯ ಭದ್ರತೆ ಒದಗಿಸುವುದು ಇಲ್ಲಿನ ರಕ್ಷಣಾ ಸಿಬ್ಬಂದಿಗೆ ಸುಲಭವೇನಲ್ಲ. ಸೈನ್ಯದಳದ ದಕ್ಷ ಕಾರ್ಯಾಚರಣೆಯಿಂದಾಗಿ ಈ ವರ್ಷ ಅಷ್ಟಾಗಿ ಯಾವುದೇ ಅಹಿತಕರ ಘಟನೆಯೂ ಸಂಭವಿಸಿಲ್ಲ. ಆದರೂ, ಜಮ್ಮು ಪ್ರಾಂತ್ಯದಲ್ಲಿರುವ ವೈಷ್ಣೋದೇವಿಯ ದರ್ಶನಕ್ಕೆಂದು ಹೊರಟ ಯಾತ್ರಾರ್ಥಿಗಳ ಮೇಲೆ ಉಗ್ರಗಾಮಿಗಳು ದಾಳಿ ನಡೆಸಿದ್ದನ್ನು ಮರೆಯಲಾಗದು.

ಅಮರನಾಥ್ ಮಾತ್ರವಲ್ಲದೆ ವಿಶಾಲವಾದ ಜುಮ್ಮ ಮಸೀದಿ ಮತ್ತು ಮುಸ್ಲಿಮರ ಧರ್ಮಗುರು ಪೈಗಂಬರನ ತಲೆಗೂದಲನ್ನು ಸುರಕ್ಷಿತವಾಗಿಟ್ಟಿರುವ ಹಜರತ್ ದೇಗುಲಕ್ಕೂ ಹೋಗಿದ್ದೆವು. ವೆರಿನಾಗ್, ಅನಂತ್‌ನಾಗ್, ಶ್ರೀನಗರದ ಒಳನಾಡಿನಲ್ಲಿರುವ ಮೊಘಲ್ ಗಾರ್ಡನ್ಸ್‌ಗಳನ್ನೂ ಸಂದರ್ಶಿಸಿದೆವು. ದಾಲ್ ಸರೋವರಕ್ಕಂತೂ ಕಳೆದ ಹತ್ತು

ವರ್ಷಗಳಲ್ಲಿ ಎಂದೂ ಕಾಣದ ವೈಭವಯುತ ಅಲಂಕಾರ ಮಾಡಲಾಗಿತ್ತು. ಅಂದು, ರಾತ್ರಿಯಾಗಿದ್ದರೂ ಜನಸಮೂಹ ನೆರೆದಿತ್ತು. ಹೀಗೆ ನಾವು ರಾಜ್ಯದ ಹಲವಾರು ಸ್ಥಳಗಳ ಪರ್ಯಟನೆ ಮಾಡಿದೆವು. ಇಲ್ಲಿನ ಕೆಲವು ಪ್ರದೇಶಗಳು ಉಗ್ರಗಾಮಿಗಳಿಗೆ ಹಾಗೂ ಪ್ರತ್ಯೇಕತಾವಾದಿಗಳಿಗೆ ಭದ್ರ ನೆಲೆಗಳಾಗಿವೆ. ಆದರೂ, ಭೇಟಿ ನೀಡಿದ ಸ್ಥಳಗಳಲ್ಲೆಲ್ಲ ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ಕಂಡೆವು. ಸ್ಥಳೀಯರು, ಪ್ರವಾಸಿಗಳು ಪರಿವಾರ ಸಮೇತರಾಗಿ, ನಿರ್ಭೀತರಾಗಿ ವಿಹರಿಸುತ್ತಿದ್ದರು. ಅಲ್ಲೆಲ್ಲೂ ಆತಂಕದ ವಾತಾವರಣವಿರಲಿಲ್ಲ. ನನ್ನಲ್ಲಿ ಅಚ್ಚರಿ ಹಾಗೂ ಸಂತಸವನ್ನು ಒಮ್ಮೆಲೇ ಉಂಟುಮಾಡಿದ ಹಿತಾನುಭವವದು. ಅಲ್ಲಿನ ಆಡಳಿತ ವರ್ಗ ತೆಗೆದುಕೊಂಡ ಸೂಕ್ತ ಮುನ್ನೆಚ್ಚರಿಕೆ ಕ್ರಮದಿಂದಾಗಿ ಅಲ್ಲಲ್ಲಿ ಸೇನಾದಳ ತನ್ನ ನೆಲಗೂಡುಗಳನ್ನು ಅಗೆದಿಟ್ಟುಕೊಂಡು ಪಹರೆ ಕಾಯುತ್ತಿತ್ತು. ಕಾರ್ಗಿಲ್ ಸಮರದ ನಂತರ ಪ್ರಧಾನಿ ಅಟಲಬಿಹಾರಿ ವಾಜಪೇಯಿ ಅವರು ಮುಂದಿಟ್ಟ ಹೊಸ ಶಾಂತಿ ಉಪಕ್ರಮಗಳೂ ಸೇರಿದಂತೆ ಜರುಗಿದ ಇತರ ವಿದ್ಯಮಾನಗಳಿಂದಾಗಿ, ತಿಳಿಗೊಂಡ ರಾಜಕೀಯ ವಾತಾವರಣದಿಂದಾಗಿ, ಅಲ್ಲಿಯ ಜನರು ತಮ್ಮ ಭವಿಷ್ಯದ ಬಗ್ಗೆ ಹೊಸ ಭರವಸೆಗಳನ್ನು ಹೊಂದಿದ್ದರೆಂಬ ಅರಿವು ನಮಗಾದದ್ದು ಈ ಯಾತ್ರೆಯಿಂದಾಗಿ.

ಇಲ್ಲಿನ ರಾಜ್ಯ ಸರ್ಕಾರವು ತನ್ನ ಸತತ ಪ್ರಯತ್ನಗಳಿಂದಾಗಿ ಅನೇಕ ರಾಷ್ಟ್ರಮಟ್ಟದ ಸಮ್ಮೇಳನಗಳನ್ನು ಸ್ಥಳೀಯವಾಗಿಯೇ ಹಮ್ಮಿಕೊಳ್ಳುವುದರಲ್ಲಿ ಯಶಸ್ವಿಯಾಗಿದೆ. ರಾಜ್ಯದ ಮುಖ್ಯಮಂತ್ರಿ ಹೆಚ್ಚಿನ ಉದ್ಯೋಗಗಳನ್ನು ಸೃಷ್ಟಿಸುವ ನಿಟ್ಟಿನಲ್ಲಿ ಸಕ್ರಿಯರಾಗಿ ಹೊರ ರಾಜ್ಯದ ಉದ್ದಿಮೆದಾರರನ್ನು ತಮ್ಮ ರಾಜ್ಯಕ್ಕೆ ಬಂದು ಬಂಡವಾಳ ಹೂಡುವಂತೆ ಉತ್ತೇಜನ ನೀಡುತ್ತಿದ್ದಾರೆ. ಇದಲ್ಲದೆ ಕಾಶ್ಮೀರಿ ಪಂಡಿತ ಸಮುದಾಯವನ್ನು ಪುನಃ ರಾಜ್ಯಕ್ಕೆ ಬರಮಾಡಿಕೊಳ್ಳುವ ತಮ್ಮ ಯೋಜನೆಯತ್ತ ದಿಟ್ಟ ಹೆಜ್ಜೆ ಇಟ್ಟಿದ್ದಾರೆ. ಇವೆಲ್ಲವೂ ಕಾಶ್ಮೀರದ ಜನತೆಗೆ ಭರವಸೆ ಮೂಡಿಸುವ ಉಪಕ್ರಮಗಳಾಗಿವೆ.

ಇಷ್ಟಾದರೂ ಅಲ್ಲಿನ ಆಂತರಿಕ ಪರಿಸ್ಥಿತಿ ಎಲ್ಲ ರೀತಿಯಲ್ಲೂ ಸುಧಾರಿಸಿದೆ ಎಂದೇನಲ್ಲ. ಪಾಕಿಸ್ತಾನಿ ಬೆಂಬಲಿತ ಭಯೋತ್ಪಾದಕರ ಗುಂಪುಗಳಲ್ಲಿ ಕಾರ್ಯನಿರತರಾಗಿರುವವರು ಬಹಳಷ್ಟು ಜನ ಕಾಶ್ಮೀರೇತರರೇ. ಭಾರತದ ಭದ್ರತಾ ಪಡೆಗಳು ತಮ್ಮ ಮೇಲೆ ಎಸಗಿದ್ದ ದಮನಕಾರಿ ಕೃತ್ಯಗಳು ಮತ್ತು ಸಾವುನೋವುಗಳನ್ನು ಲೆಕ್ಕಿಸದೆ ಭಯೋತ್ಪಾದಕರು ಯುದ್ಧ ನಿಯಂತ್ರಣಾ ರೇಖೆ ಮತ್ತು ಅಂತರರಾಷ್ಟ್ರೀಯ ಗಡಿಯನ್ನು ದಾಟಿ ಒಳನುಗ್ಗಲು ಪುನರ್ ಸಂಘಟಿತರಾಗುತ್ತಿದ್ದಾರೆ. ಉಗ್ರಗಾಮಿಗಳ ಆತಂಕಕಾರಿ ಚಟುವಟಿಕೆಗಳು ಈಗಾಗಲೇ ತೀವ್ರಗೊಂಡಿರುವ ಜಮ್ಮು-ಕಾಶ್ಮೀರದಲ್ಲಿ ಆಂತರಿಕ ಭದ್ರತೆಯ ದುರಸ್ತಿ ಕಾರ್ಯವು ಅತ್ಯಂತ ಕಠಿಣವಾದ್ದು; ಆಗಿಂದಾಗ್ಗೆ ರಕ್ಷಣಾ ಸಿಬ್ಬಂದಿ ಸಾಮಾನ್ಯ ನಾಗರಿಕರನ್ನೂ ಕಡು ತನಿಖೆಗೆ ಗುರಿಪಡಿಸಬೇಕಾಗುತ್ತದೆ. ಜನತೆಯ ಮಧ್ಯೆಯೇ ಇದ್ದುಕೊಂಡು ಕಾರ್ಯಾಚರಣೆ ನಡೆಸುವ ದೇಶದ್ರೋಹಿಗಳನ್ನು ಗುರುತಿಸುವುದು ಕಷ್ಟವೇ.

ಭಾರತ ಹಾಗೂ ಪಾಕಿಸ್ತಾನದ ನಡುವೆ ಏರ್ಪಡಿಸಲಾಗಿದ್ದ ಪರಸ್ಪರ ಮಾತುಕತೆ, ಇದೀಗ ಜರುಗುತ್ತಿರುವ 'ಜನರಿಂದ ಜನರಿಗೆ' ಎಂಬ ಹೆಸರಿನ ಸಂಪರ್ಕ ಪ್ರಕ್ರಿಯೆಯು ಹಾಗೂ ವ್ಯಾಪಾರೀ ಸಂಬಂಧಗಳ ಸುಧಾರಣೆ – ಇವುಗಳು ಜಮ್ಮು-ಕಾಶ್ಮೀರದ ಪರಿಸ್ಥಿತಿಯನ್ನು ಸುಧಾರಿಸುವ ನಿಟ್ಟಿನಲ್ಲಿ ಫಲದಾಯಕವಾಗಬಹುದು ಎಂಬುದು ನನ್ನ ನಿರೀಕ್ಷೆ. ಆದರೆ ಉಭಯ ಪಕ್ಷಗಳ ಕಟ್ಟಾ ಬಿಗಿ ನೀತಿಯಿಂದಾಗಿ ಈ ಪ್ರಕ್ರಿಯೆಯು ಕಷ್ಟಕರವೇನೋ ಹೌದು. ರಾಜ್ಯದ ಆಂತರಿಕ ಪರಿಸ್ಥಿತಿಯ ಮತ್ತಷ್ಟು ಸುಧಾರಣೆ ಈಗ ನಡೆಯುತ್ತಿರುವ ಉಪಶಮನ ಕಾರ್ಯಗಳೊಂದಿಗೆ ರಾಜ್ಯ ಸರ್ಕಾರಕ್ಕೆ ಇನ್ನೂ ಹೆಚ್ಚು ಅಧಿಕಾರ ನೀಡುವುದರಿಂದ ಸಾಧ್ಯವಾಗಬಹುದು. ಜಮ್ಮು-ಕಾಶ್ಮೀರದಲ್ಲಿ ಸಂವಿಧಾನ ೩೭೦ ವಿಧಿಯನ್ನು ರದ್ದುಗೊಳಿಸಬೇಕೆಂಬುದು ಭಾರತೀಯ ಜನತಾ ಪಕ್ಷ ಮತ್ತು ಆರೆಸ್ಸೆಸ್‌ನ ಒತ್ತಾಯ. ಕಾಶ್ಮೀರ ಕಣಿವೆಯ ಆಜಾದಿ ಕರೆ ಜನರ ಭಾವಸಂಬಂಧಿ ವಿವಾದ ಎಂಬುದನ್ನು ನಾವು ಮೊದಲು ಮನಗಾಣಬೇಕಿದೆ. ಈ ವಿವಾದವನ್ನು ನ್ಯಾಯವಾಗಿ ಸರಿದೂಗಿಸಿದಂತಾಗುವುದು ಆ ರಾಜ್ಯಕ್ಕೆ ಹೆಚ್ಚು ಅಧಿಕಾರ ವಹಿಸಿಕೊಟ್ಟಾಗ ಮಾತ್ರ. ಸೇನಾ ಪಡೆಯು ಹಮ್ಮಿಕೊಂಡಿರುವ 'ಸದ್ಭಾವನಾ' ಯೋಜನೆಯು ಅಲ್ಲಿನ ಗ್ರಾಮೀಣ ಪ್ರದೇಶಗಳಿಗೆ ಅಗತ್ಯವಾಗಿರುವ ದೃಢ ಆಂತರಿಕ ವ್ಯವಸ್ಥೆಯೊಂದನ್ನು ಒದಗಿಸುವುದಲ್ಲದೆ ಅಲ್ಲಿನ ಜನಮನವನ್ನು ತಮ್ಮೆಡೆಗೆ ಒಲಿಸಿಕೊಳ್ಳುವ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ. ರಾಜಕೀಯ ಇಚ್ಛೆ, ಆರ್ಥಿಕ ಸುಧಾರಣೆ, ಔದ್ಯೋಗಿಕ ವಿಕಾಸಕ್ಕೆ ಆದ್ಯತೆ ಹಾಗೂ ಪ್ರಾಮಾಣಿಕ ಆಳ್ವಿಕೆ – ಇವುಗಳಿಂದ ಮಾತ್ರ ಜಮ್ಮು-ಕಾಶ್ಮೀರದಲ್ಲಿರುವ ಭಾರತ ವಿರೋಧಿ ಅಲೆಯನ್ನು ತಡೆಗಟ್ಟಬಹುದಾಗಿದೆ.


**ಲೆಫ್ಟಿನೆಂಟ್ ಜನರಲ್ ಎನ್. ಎಸ್. ನರಹರಿ**
ನಂ. ೨೮, ೬ನೇ ಅಡ್ಡರಸ್ತೆ, ಹಚಿನ್‌ಸನ್ ರಸ್ತೆ, ಸೆಂಟ್ ಥಾಮಸ್ ಟೌನ್
ಬೆಂಗಳೂರು - ೫೬೦ ೦೮೪

ಕನ್ನಡಕ್ಕೆ : **ಸೂರಜ್ ಎಸ್.**
ನಂ. ೨೪, ೧ನೇ ಕ್ರಾಸ್, ಕೆನರಾ ಬ್ಯಾಂಕ್ ಕಾಲೋನಿ, ಜಯನಗರ ಪೂರ್ವ
ಬೆಂಗಳೂರು - ೫೬೦ ೦೧೧


# ಒಳ ಬರುವ ಕರೆ



ನಡುರಾತ್ರಿಯಲ್ಲಿ ಕದ ತಟ್ಟಿದರೆ
ಬಾಗಿಲು ತೆರೆಯುವುದಿಲ್ಲ
ಯಾರನ್ನೂ ನಂಬಲಾಗದು

ಬಸ್ಸಲ್ಲಿ ರಾತ್ರಿ ನಿದ್ದೆ ಹೋಗುವುದಿಲ್ಲ
ಪಕ್ಕದವನು ಪಾಕೀಟು ಕದ್ದಾನು

ಹಾಸ್ಯದ ಪಟಾಕಿ ಹಚ್ಚುವ
ಗೆಳೆಯನ ಮಾತಿಗೆ ನಗುವುದೇ ಇಲ್ಲ
ಆತ ಹಣ ಕೇಳಬಹುದು

ಕೂಟಗಳಲ್ಲಿ ನಗುತ್ತ ಕೈ ಕುಲುಕುವಾಗಲೂ
ಮೈ ಮರೆಯುವುದಿಲ್ಲ
ಹುತ್ತದಲ್ಲಿ ಹಾವಿರಬಹುದು

ಮನೆಯವರಿಗೆ ಅಪರಿಚಿತರೆದುರು ನಗಬೇಡಿ ಎಂದಿರುವೆ
ಈಗ
ಪರಿಚಿತರಿಗೂ ಅವರು ಕದ ತೆರೆಯುವುದಿಲ್ಲ

ಗೆಳೆಯರು ಚಾಕಲೇಟ್ ಕೊಟ್ಟರೂ
'ಬೇಡ' ಎನ್ನಲು ಕಲಿಸಿರುವೆ ಮಕ್ಕಳಿಗೆ
ಸಿಹಿಗೆ ವಿಷ ಸವರಿರಬಹುದು

ಹೃದಯಕ್ಕೆ ಹತ್ತಿರ ಮೊಬೈಲ್ ಫೋನ್ ಇಟ್ಟಿರುವೆ
ಆದರೆ
ಒಳಬರುವ ಕರೆಗಳನ್ನು ನಿಷೇಧಿಸಿರುವೆ


**ಚಿಂತಾಮಣಿ ಕೊಡ್ಲೆಕೆರೆ**
೩-೨-೨, ಡಬ್ಲ್ಯೂಎಂಎಸ್ ಕಾಂಪೌಂಡ್, ೯ನೇ ಮುಖ್ಯರಸ್ತೆ, ೪೭ನೇ ಕ್ರಾಸ್
ಜಯನಗರ ೫ನೇ ಬ್ಲಾಕ್, ಬೆಂಗಳೂರು - ೫೬೦ ೦೪೧

# ಆರ್ಥಿಕ ನೀತಿಗಳನ್ನು ಬದಲಾಯಿಸದಿದ್ದರೆ ಬಡತನ ನಿವಾರಣೆ ಅಸಾಧ್ಯ

**ಕೆ. ಎಸ್. ಕೃಷ್ಣಸ್ವಾಮಿ**

**ಭಾ**ರತದ ವಿದೇಶೀ ವಿನಿಮಯ ಪರಿಸ್ಥಿತಿ ೧೯೯೦ರ ದಶಕದ ಮೊದಲಲ್ಲಿ ಉತ್ಕಟಾವಸ್ಥೆ ತಲುಪಿದಾಗ ಆಗಿನ ಕೇಂದ್ರ ಸರ್ಕಾರದ ನೀತಿ ನಿಯಮಗಳಲ್ಲಿ ಮಹತ್ತರ ಬದಲಾವಣೆಗಳಾದವು. ಅದುವರೆಗೂ ಅನುಸರಿಸುತ್ತಿದ್ದ ಯೋಜನಾಪದ್ಧತಿಯ ಬದಲು ಖಾಸಗೀಕರಣ, ಉದಾರೀಕರಣ, ಮತ್ತು ಜಾಗತೀಕರಣಗಳ ಅಂಗವಾಗಿ ಅನೇಕ ಆರ್ಥಿಕ ಸುಧಾರಣೆಗಳು ಜಾರಿಗೆ ಬಂದವು. ತುರ್ತಾಗಿ ಬೇಕಾಗಿದ್ದ ವಿದೇಶೀ ವಿನಿಮಯವನ್ನು ಸಾಲವಾಗಿ ಪಡೆಯಲು ವಿಶ್ವಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣಕಾಸು ನಿಧಿಗಳನ್ನು ಸಂಪರ್ಕಿಸಿದಾಗ ಅವರು ವಿಧಿಸಿದ ಷರತ್ತುಗಳಿಗೆ ಸರ್ಕಾರ ಸಮ್ಮತಿಸಬೇಕಾಯಿತು. ದೇಶದಲ್ಲೂ ಖಾಸಗೀ ಸಂಸ್ಥೆಗಳಲ್ಲದೆ ಕೆಲವು ರಾಜಕೀಯ ಪಕ್ಷಗಳೂ, ಪ್ರಮುಖ ಆರ್ಥಿಕ ಸಲಹೆಗಾರರೂ ಸುಧಾರಣೆಗಳನ್ನು ಬೆಂಬಲಿಸಿದ್ದರು. ಅಲ್ಲಿಂದೀಚೆಗೆ ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ ರೂಪಾಯಿಯ ಅಪಮೌಲ್ಯ, ಸರ್ಕಾರಗಳ ಯೋಜನಾ ವೆಚ್ಚದಲ್ಲಿ ತೀವ್ರವಾದ ಕಡಿತ, ಆಮದು ರಫ್ತು ನೀತಿಗಳಲ್ಲಿ ಬದಲಾವಣೆ, ಖಾಸಗೀ ಉದ್ಯಮಗಳಿಗೆ ತೆರಿಗೆ ಮತ್ತು ಸಾಲದ ಬಡ್ಡಿಗಳಲ್ಲಿ ರಿಯಾಯಿತಿ, ವಿದೇಶೀ ಬಂಡವಾಳದ ಹೂಡಿಕೆಗೆ ಅನುಕೂಲಗಳು – ಮುಂತಾದವುಗಳ ವ್ಯಾಪ್ತಿ ವಿಸ್ತರಿಸಿದೆ. ಈ ಬದಲಾವಣೆಗಳಿಂದ ಪ್ರಗತಿಪರ ಆರ್ಥಿಕ ವ್ಯವಸ್ಥೆ, ವಿಜ್ಞಾನ ಮತ್ತು ತಂತ್ರಜ್ಞಾನಗಳ ಅಳವಡಿಕೆ, ಉದ್ಯೋಗಾವಕಾಶಗಳ ವಿಸ್ತರಣೆ, ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಪ್ರಮುಖಪಾತ್ರ ಇತ್ಯಾದಿಗಳನ್ನು ಸಾಧಿಸಿ ದೇಶದ ಬಡತನ ಮತ್ತು ಇತರ ಸಂಕಷ್ಟಗಳನ್ನು ತ್ವರಿತಗತಿಯಲ್ಲಿ ನಿವಾರಿಸುವ ಆಶಯಗಳನ್ನು ಜನತೆಯ ಮುಂದೆ ಇಡಲಾಗಿತ್ತು. ಈ ಹಿನ್ನೆಲೆಯಲ್ಲಿ ಏನನ್ನು ಸಾಧಿಸಲಾಗಿದೆ ಎಂದು ಪರಿಶೀಲಿಸಿದರೆ ನಿರಾಶೆ ಮಾತ್ರವಲ್ಲ, ದೇಶ ಯಾವ ದಿಕ್ಕಿನಲ್ಲಿ ನಡೆದಿದೆ ಎಂದು ಆತಂಕಪಡುವ ಸ್ಥಿತಿ ತಲುಪಿದ್ದೇವೆ.

ಆರ್ಥಿಕ ಅಥವಾ ಸಾಮಾಜಿಕ ಪ್ರಗತಿಯನ್ನು ಮಾಪನ ಮಾಡಲು ಅನೇಕ ಸೂಚ್ಯಂಕಗಳನ್ನು ಉಪಯೋಗಿಸಬಹುದು. ಇವುಗಳಲ್ಲಿ ಪ್ರಮುಖವಾದುವೆಂದರೆ : ಜನತೆಯ ಸರಾಸರಿ ಆದಾಯ, ಸಾಕ್ಷರತೆ ಅಥವಾ ವಿದ್ಯಾಭ್ಯಾಸದ ಮಟ್ಟ, ಆಯುರ್ನಿರೀಕ್ಷೆ ಮತ್ತು ಆರೋಗ್ಯ ಸೌಲಭ್ಯಗಳು, ನಿರುದ್ಯೋಗದ ನಿವಾರಣೆ ಮುಂತಾದವುಗಳು. ಇವಲ್ಲದೆ ಜನಜೀವನದಲ್ಲಿನ ಅಸಮಾನತೆಯ ಪ್ರಮಾಣ, ದೇಶದ ಸಮಗ್ರ ಉಳಿತಾಯ ಮತ್ತು ಹೂಡಿಕೆ, ಸಂಪನ್ಮೂಲಗಳ ಅಭಿವೃದ್ಧಿ, ವಿದೇಶೀ ಮಾರುಕಟ್ಟೆಗಳಲ್ಲಿ ಗಳಿಸಿರುವ ಶಕ್ತಿ, ಪರಿಸರ ಸಂರಕ್ಷಣೆ ಇವನ್ನೂ ಗಣನೆಗೆ ತಂದುಕೊಳ್ಳಬಹುದು. ಎಲ್ಲಕ್ಕಿಂತ ಹೆಚ್ಚಾಗಿ ಬಡತನ ಮತ್ತು ನಿರುದ್ಯೋಗ ನಿವಾರಣೆಯಲ್ಲಿ ಸುಧಾರಣಾ ನೀತಿ ಎಷ್ಟರ ಮಟ್ಟಿಗೆ ಫಲಕಾರಿಯಾಗಿದೆ ಎನ್ನುವುದು ಅತಿಮುಖ್ಯ. ಇವೆರಡರಲ್ಲಿ ಪ್ರಗತಿಯಾದರೆ ಉಳಿದ ಸೂಚ್ಯಂಕಗಳೂ ಏರುವ ಸಂಭವವಿರುತ್ತದೆ. ಇವೆರಡಕ್ಕೂ ನಿಕಟ ಸಂಬಂಧವಿದ್ದರೂ, ಅವನ್ನು ಪ್ರತ್ಯೇಕವಾಗಿ ಪರಿಗಣಿಸಿ ಕಳೆದ ದಶಕದಲ್ಲಿ ಭಾರತ ಸಾಧಿಸಿರುವುದು ಏನೆಂಬುದನ್ನು ಪರೀಕ್ಷಿಸಬಹುದು.

ಬಡತನ ಅಳೆಯಲು ಸಾಧಾರಣವಾಗಿ ಉಪಯೋಗಿಸುವ ವಿಧಾನ 'ಬಡತನದ ರೇಖೆ'ಗಿಂತ ಕೆಳಗಿರುವ ಜನಸಂಖ್ಯೆಯ ಪ್ರಮಾಣ. ಈ ಸೂಚಿಯನ್ನು ನಿರ್ಧರಿಸುವಾಗ ಬಡತನದ ರೇಖೆಯನ್ನು ಹೇಗೆ ಅಥವಾ ಎಲ್ಲಿ ಎಳೆಯಬೇಕೆಂಬ ಪ್ರಶ್ನೆ ಬರುತ್ತದೆ. ವಿಶ್ವಬ್ಯಾಂಕ್ ಪ್ರತಿ ದೇಶದಲ್ಲಿ ದಿನವೊಂದಕ್ಕೆ ಒಂದು ಅಥವಾ ಎರಡು ಅಮೆರಿಕ ಡಾಲರ್‌ಗಳಿಗಿಂತ ಕಡಿಮೆ ಆದಾಯವಿರುವವರನ್ನು ಬಡವರೆಂದು ಗುರುತಿಸಿ, ಆ ದೇಶದ ಜನಸಂಖ್ಯೆಯಲ್ಲಿ ಅವರ ಅಂಶವನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಭಾರತದ ಪದ್ಧತಿ ಬೇರೆ. ಕೆಲವು ದಶಕಗಳ ಹಿಂದೆ ಪುಣೆಯ ಗೋಖಲೆ ಆರ್ಥಿಕ ಸಂಸ್ಥೆಯ ಪ್ರೊ|| ದಾಂಡೇಕರ್ ಮತ್ತು ನೀಲಕಂಠ ರಥ್ ಅವರು ಒಬ್ಬ ವ್ಯಕ್ತಿಗೆ ಪ್ರತಿದಿನ ಒಂದು ಕನಿಷ್ಠಮಟ್ಟ ಕ್ಯಾಲರಿಗಳನ್ನು ಒದಗಿಸುವ ಆಹಾರವನ್ನು ಕೊಳ್ಳಲು ತಗಲುವ ಖರ್ಚಿನ ಆಧಾರದ ಮೇಲೆ ಬಡತನದ ರೇಖೆ ಎಳೆಯಲು ಪ್ರಯತ್ನಿಸಿದ್ದರು. ಜನರು ಸೇವಿಸುವ ಆಹಾರಗಳ ವೈವಿಧ್ಯತೆ, ಬೆಲೆ ಮತ್ತು ಪ್ರಮಾಣಗಳು ಎಲ್ಲಾ ಸ್ಥಳಗಳಲ್ಲೂ ಮತ್ತು ಎಲ್ಲಾ ಕಾಲಗಳಲ್ಲೂ ಒಂದೇ ರೀತಿ ಇರುವುದಿಲ್ಲ. ಇಂತಹ ವ್ಯತ್ಯಾಸಗಳನ್ನು ಗಮನದಲ್ಲಿಟ್ಟುಕೊಂಡು ಯೋಜನಾ ಆಯೋಗವು ೧೯೯೩ರಲ್ಲಿ ರಚಿಸಿದ್ದ ತಜ್ಞರ ಸಮಿತಿಯೊಂದು ಬಡತನದ ಪ್ರಮಾಣದಲ್ಲಿ ವರ್ಷದಿಂದ ವರ್ಷಕ್ಕೆ ಆಗುವ ಮಾರ್ಪಾಡನ್ನು ಗುರುತಿಸುವ ವಿಧಾನ ಸೂಚಿಸಿದೆ. ಇದನ್ನು ಅನುಸರಿಸಿ ಆಹಾರದ ಜೊತೆ ಕೆಲವು ಅತ್ಯವಶ್ಯಕ ಉಪಯೋಗಗಳಿಗೆ ಪ್ರತಿ ವರ್ಷ (ಅಥವಾ ತಿಂಗಳು, ವಾರ ಇತ್ಯಾದಿ) ಕುಟುಂಬವೊಂದಕ್ಕೆ ತಗಲುವ ಕನಿಷ್ಠಮಟ್ಟ ಖರ್ಚಿನ ಆಧಾರದ ಮೇಲೆ ಬಡತನದ ರೇಖೆ ಎಳೆಯುವುದು ಈಗ ರೂಢಿಯಾಗಿದೆ. ಈ ಮಾಪನಕ್ಕೆ ಬೇಕಾದ ಅಂಕಿ-ಅಂಶಗಳು ಭಾರತ ಸರ್ಕಾರ ದೇಶಾದ್ಯಂತ ನಡೆಸುವ ಮಾದರಿ ಸರ್ವೇಕ್ಷಣದಿಂದ ದೊರೆಯುತ್ತವೆ. ಇಲ್ಲಿ ಉಪಯೋಗಿಸಿರುವ ಸೂಚ್ಯಂಕಗಳೆಲ್ಲಾ ಈ ಆಧಾರದ ಮೇಲೆ.

ಮಾರುಕಟ್ಟೆ ನೀತಿಯನ್ನು ಅವಲಂಬಿಸಿ ಕೇಂದ್ರ ಸರ್ಕಾರ ಜಾರಿಗೆ ತಂದ ಸುಧಾರಣೆಗಳಿಂದ ೧೯೯೦ರ ದಶಕದಲ್ಲಿ ಬಡತನದ ಪ್ರಮಾಣ ಗಣನೀಯವಾಗಿ ಕಡಿಮೆಯಾಗುವ ಬದಲು ಹೆಚ್ಚೇ ಆಗಿರಬಹುದೆಂದು ಯೋಜನಾ ಆಯೋಗದ ಸದಸ್ಯರಾದ ಡಾ|| ಎಸ್. ಪಿ. ಗುಪ್ತ ಅವರು ವಾದಿಸಿದ್ದಾರೆ. ಅವರ ಅಭಿಪ್ರಾಯದಲ್ಲಿ ಬಡತನದ ರೇಖೆಗಿಂತ ಕೆಳಗಿದ್ದ ಜನಸಂಖ್ಯೆಯ ಪ್ರಮಾಣ ೧೯೮೩.ರಲ್ಲಿದ್ದ ಶೇ. ೪೫ರಿಂದ ೧೯೯೦-೯೧ರ ವೇಳೆಗೆ ಶೇ. ೩೭ಕ್ಕೂ ೧೯೯೩-೯೪ರಲ್ಲಿ ಶೇ. ೩೬ಕ್ಕೂ, ಇಳಿದಿತ್ತು; ಆದರೆ ೧೯೯೮ರ ಸಮಯದಲ್ಲಿ ಅದು ಪುನಃ ಶೇಕಡ ೩೯ಕ್ಕಿಂತ ಹೆಚ್ಚಾಗಿತ್ತು. ಇದೇ ಕಾಲಾವಧಿಯಲ್ಲಿ (ಅಂದರೆ ೧೯೯೩-೯೪ರಿಂದ ೧೯೯೮ರವರೆಗೆ) ಪೂರ್ಣಕಾಲ ಉದ್ಯೋಗದಲ್ಲಿದ್ದವರ ಸಂಖ್ಯೆ ೩೭.೪ ಕೋಟಿಯಿಂದ ೩೭.೧ ಕೋಟಿಗೆ ಇಳಿದಿತ್ತೆಂದು ಡಾ|| ಗುಪ್ತ ಹೇಳುತ್ತಾರೆ. ಒಟ್ಟಾರೆ ಅವರ ವಾದ ಸುಧಾರಣೆಗಳಿಂದ ಬಡತನದಲ್ಲಿ ಇಳಿಕೆ ಬದಲು ಏರಿಕೆಯೇ ಕಂಡುಬರುತ್ತೆಂದು.





ಡಾ|| ಗುಪ್ತರವರು ಈ ನಿಲುವಿಗೆ ಬಂದಿರುವುದು ರಾಷ್ಟ್ರೀಯ ಮಾದರಿ ಸರ್ವೇಕ್ಷಣ (ಎನ್‌ಎಸ್‌ಎಸ್) ಕೂಡಿಸಿರುವ ಕುಟುಂಬಗಳ ಖರ್ಚಿನ ಅಂಕಿ-ಅಂಶಗಳ ಆಧಾರದ ಮೇಲೆ. ಈ ಮೂಲವನ್ನೇ ಉಪಯೋಗಿಸಿ ಇತರರು ಬೇರೆ ತೀರ್ಮಾನಕ್ಕೆ ಬರುತ್ತಾರೆ. ದೆಹಲಿ ವಿಶ್ವವಿದ್ಯಾಲಯದ ಪ್ರೊಫೆಸರುಗಳಾದ ಕೆ. ಸುಂದರಂ ಮತ್ತು ಎಸ್. ಡಿ. ತೆಂಡೂಲ್ಕರ್‌ರವರು ಸರ್ವೇಕ್ಷಣದ ಅಂಕಿ ಅಂಶಗಳನ್ನು ಪರಿಷ್ಕರಿಸಿ, ಜೊತೆಗೆ ಎನ್‌ಎಸ್‌ಎಸ್ ನಡೆಸಿರುವ ಕುಟುಂಬಗಳ ಉದ್ಯೋಗದ ಪರಿಶೀಲನೆಯನ್ನೂ ಗಣನೆಗೆ ತೆಗೆದುಕೊಂಡು ಬಡತನದ ಪ್ರಮಾಣ ೧೯೯೯-೨೦೦೦ದಲ್ಲಿ ಶೇ. ೨೮-೨೯ಕ್ಕೆ ಇಳಿದಿತ್ತೆಂದೂ ಸುಧಾರಣೆಗಳು ರಾಷ್ಟ್ರದ ಬಡತನದ ಪ್ರಮಾಣವನ್ನು ಕಡಿಮೆ ಮಾಡುವಲ್ಲಿ ಸಾಕಷ್ಟು

ಫಲಪ್ರದವಾಗಿವೆಯೆಂದೂ ವಾದಿಸಿದ್ದಾರೆ. ಮಾದರಿ ಸರ್ವೇಕ್ಷಣದ ಬದಲು ಕೇಂದ್ರೀಯ ಸಂಖ್ಯಾ ಸಂಸ್ಥೆ ಶೇಖರಿಸುವ ರಾಷ್ಟ್ರೀಯ ಉತ್ಪನ್ನ ಮತ್ತು ಖರ್ಚಿನ ಆಧಾರದ ಮೇಲೆ ಮಾಡುವ ಮಾಪನಗಳು ಇವಕ್ಕಿಂತ ಭಿನ್ನವಾಗಿರುತ್ತವೆ. ಹೇಗಾದರೂ ೧೯೮೩ರಿಂದ ಈಚೆಗೆ ದೇಶದ ಬಡತನದ ಪ್ರಮಾಣ ಇಳಿದಿದೆಯೆಂದು ಭಾವಿಸಿದರೂ ೨೧ನೇ ಶತಮಾನದ ಮೊದಲಲ್ಲಿ ಬಡತನದ ಪ್ರಮಾಣ ಜನಸಂಖ್ಯೆಯ ಶೇಕಡ ೩೦ಕ್ಕಿಂತ ಕಡಿಮೆಯಾಗಿದೆಯೆಂದು ಹೇಳಲಾಗುವುದಿಲ್ಲ. ಅಂದರೆ ಬಡವರ ಸಂಖ್ಯೆ – ಅಥವಾ ಬಡತನದ ರೇಖೆಗಿಂತ ಕೆಳಗೆ ಇರುವವರ ಸಂಖ್ಯೆ – ೩೦ ಕೋಟಿಗಿಂತ ಕಡಿಮೆಯಿಲ್ಲ. ಇವರಲ್ಲಿ ಹೆಚ್ಚು ಮಂದಿ ಗ್ರಾಮೀಣ ಪ್ರದೇಶಗಳಲ್ಲಿರುತ್ತಾರೆ; ಮತ್ತು ಬಹುಜನ ಬಡತನ ರೇಖೆಗಿಂತ ತುಂಬಾ ಕೆಳಗೆ ಇರುವವರು. ರಾಷ್ಟ್ರೀಯ ಮಾಪನಗಳ ಬದಲಾಗಿ ವಿಶ್ವಬ್ಯಾಂಕ್ ಉಪಯೋಗಿಸುವ ಅಂತರರಾಷ್ಟ್ರೀಯ ಮಾಪನ (ದಿನಕ್ಕೆ $ ೧ ಕ್ಕಿಂತ ಕಡಿಮೆ ಆದಾಯವಿರುವವರು) ಗಮನಿಸಿದರೆ ಈ ಸಂಖ್ಯೆ ಇನ್ನೂ ಹೆಚ್ಚುತ್ತದೆ. ಉದಾಹರಣೆಗಾಗಿ ವಿಶ್ವಬ್ಯಾಂಕ್ ಲೆಕ್ಕದ ಪ್ರಕಾರ ಭಾರತದಲ್ಲಿ ೧೯೯೭ರಲ್ಲಿ ಜನಸಂಖ್ಯೆಯ ಶೇ. ೪೪ರಷ್ಟು ಮಂದಿ – ಅಥವಾ ಸುಮಾರು ೪೨ ಕೋಟಿ – ಬಡತನದ ರೇಖೆಗಿಂತ ಕೆಳಗಿದ್ದರು. ಅಲ್ಲಿಂದೀಚೆಗೆ ಈ ಪ್ರಮಾಣ ಕಡಿಮೆಯಾಗಿದೆಯೆಂದು ಎಣಿಸಿದರೂ ಬಡವರ ಸಂಖ್ಯೆ ೩೦ ಕೋಟಿಗಿಂತ ಕೆಳಗಿರುವುದು ಅಸಂಭವ.

ದೇಶದಲ್ಲಿ ಬಡತನ ಇಳಿಮುಖವಾಗಲು ಎರಡು ದಿಸೆಗಳಲ್ಲಿ ಪ್ರಗತಿ ಅತ್ಯವಶ್ಯಕ. ಮೊದಲನೆಯದಾಗಿ ಉದ್ಯೋಗಾವಕಾಶಗಳು ಹೆಚ್ಚಾಗಬೇಕು ಮತ್ತು ಕಾರ್ಮಿಕರ ಉತ್ಪಾದನಾ ಸಾಮರ್ಥ್ಯ ಬೆಳೆಯಬೇಕು. ಎರಡನೆಯದಾಗಿ ದೇಶದ ಸಮಗ್ರ ಹೂಡಿಕೆ (gross domestic investment) ತಕ್ಕಂತೆ ಮುಂದುವರೆಯಬೇಕು. ಇವುಗಳೊಡನೆ ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಪ್ರಗತಿಯಾಗಿ ಕಾರ್ಮಿಕರು ತಮ್ಮ ಕುಶಲತೆ, ತಿಳುವಳಿಕೆಗಳನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಾಕಷ್ಟು ಸೌಕರ್ಯಗಳುಂಟಾಗಬೇಕು. ೧೯೯೦ರಿಂದ ಈಚೆಗೆ ಆದ ಸುಧಾರಣೆಗಳು ಹಿಂದಿನ ದಶಕಗಳಿಗಿಂತ ಹೆಚ್ಚಾಗಿ ಈ ಅನುಕೂಲಗಳನ್ನು ಒದಗಿಸಿವೆಯೆ ?

ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ ಸಮಗ್ರ ರಾಷ್ಟ್ರೀಯ ಉತ್ಪನ್ನ ಬೆಳೆಯುವುದರಲ್ಲಿ ಅಂತಹ ಮುನ್ನಡೆಯೇನೂ ಕಂಡುಬಂದಿಲ್ಲ. ೧೯೮೦ರ ದಶಕದಲ್ಲಿ ಈ ಏರಿಕೆಯ ಸರಾಸರಿ ವಾರ್ಷಿಕ ದರ ಶೇ. ೫ರಷ್ಟಿತ್ತು. ೧೯೯೦ರ ದಶಕದಲ್ಲೂ ಈ ದರ ಸುಮಾರು ಶೇ. ೫ ಅಥವಾ ಶೇ. ೫.೫ ಆಗುತ್ತದೆ. ಪ್ರತಿ ವರ್ಷ ಈ ಸರಾಸರಿಗಿಂತ ಹೆಚ್ಚು ಅಥವಾ ಕಡಿಮೆಯಾಗುವುದು ವ್ಯವಸಾಯದ ಏರಿಕೆ ಅಥವಾ ಇಳಿಕೆಯ ಪ್ರಕಾರ. ಈ ಕ್ಷೇತ್ರದ ಉತ್ಪನ್ನದಲ್ಲಿ ವರ್ಷದಿಂದ ವರ್ಷಕ್ಕೆ ಆಗುವ ಬದಲಾವಣೆಗಳು ದೇಶದ ಮಳೆಯ ಪ್ರಮಾಣದ ಆಧಾರದ ಮೇಲೆ. ಆದರೆ ದಶಕದಿಂದ ದಶಕಕ್ಕೆ ರಾಷ್ಟ್ರೀಯ ಉತ್ಪನ್ನದಲ್ಲಿ ವ್ಯವಸಾಯ ಕ್ಷೇತ್ರದ ಕೊಡುಗೆಯ ಅಂಶ ಕಡಿಮೆಯಾಗುತ್ತಿದೆ. ಇದು ೧೯೮೦-೮೧ರವರೆಗೆ ಶೇ. ೪೦ರಷ್ಟಿದ್ದುದು ೨೦೦೦-೨೦೦೧ರ ವೇಳೆಗೆ ಕ್ರಮೇಣ ಶೇ. ೨೪ಕ್ಕೆ ಇಳಿದಿತ್ತು. ಇದರ ಬದಲಾಗಿ ಸೇವಾಕ್ಷೇತ್ರದ ಕೊಡುಗೆ ಶೇ. ೪೩ರಿಂದ ೨೦೦೦-೨೦೦೧ರಲ್ಲಿ ಶೇ. ೫೪ಕ್ಕೆ ಏರಿತ್ತು. ಹಾಗೆಯೇ ಗಣಿಗಾರಿಕೆ ಮತ್ತು ಕೈಗಾರಿಕಾ ಕ್ಷೇತ್ರದ ಉತ್ಪನ್ನ ಸ್ವಲ್ಪ ಪ್ರಮಾಣದಲ್ಲಿ – ಅಂದರೆ ಶೇಕಡ ೧೮ರಿಂದ ಶೇಕಡ ೨೨ಕ್ಕೆ – ಹೆಚ್ಚಾಗಿದೆ. ಈ ವ್ಯತ್ಯಾಸಗಳಿಗೆ ಅನೇಕ ಕಾರಣಗಳಿವೆ. ಆದರೆ ಇಲ್ಲಿ ನಾವು ಗಮನಿಸಬೇಕಾದ ವಿಷಯ ಆರ್ಥಿಕ ನೀತಿಯ ಬದಲಾವಣೆಗಳಿಂದ ಉದ್ಯೋಗಾವಕಾಶಗಳಲ್ಲಿ ಉಂಟಾಗುತ್ತಿರುವ ವ್ಯತ್ಯಾಸಗಳು. ಸೇವಾಕ್ಷೇತ್ರದ ವ್ಯಾಪ್ತಿಯಲ್ಲಿ ನಿರ್ಮಾಣ, ವ್ಯಾಪಾರ, ಸಾಗಾಣಿಕೆ, ಬ್ಯಾಂಕ್ ಮತ್ತು ವಿಮೆ, ಹೋಟೆಲುಗಳು, ಸಮಾಜ ಸೇವಾಕಾರ್ಯ ಮುಂತಾದವುಗಳೆಲ್ಲಾ ಸೇರಿವೆ. ವ್ಯವಸಾಯ ಮತ್ತು ಕೈಗಾರಿಕಾ ಕ್ಷೇತ್ರಗಳಿಗಿಂತ ಸೇವಾಕ್ಷೇತ್ರದಲ್ಲಿ ಉದ್ಯೋಗಾವಕಾಶಗಳು ಹೆಚ್ಚಾಗುವ ಸಂಭವವಿದೆ. ಏಕೆಂದರೆ ವಿಜ್ಞಾನ ಮತ್ತು ತಂತ್ರಜ್ಞಾನಗಳ ಅಳವಡಿಕೆ ಹೆಚ್ಚಿದಂತೆಲ್ಲಾ ವ್ಯವಸಾಯ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಹೂಡಿಕೆ ಮತ್ತು ಉತ್ಪನ್ನಗಳ ಸರಿಸಮವಾಗಿ ಉದ್ಯೋಗಾವಕಾಶಗಳು ಹೆಚ್ಚುವುದಿಲ್ಲ, ಕಡಿಮೆ ಆಗಬಹುದು. ಜನಸಂಖ್ಯೆಗೆ ಅನುಗುಣವಾಗಿ ಕಾರ್ಮಿಕರ ಸಂಖ್ಯೆ ವೃದ್ಧಿಯಾಗುತ್ತಿರುವಾಗ ಹೊಸ ಅವಕಾಶಗಳು ದೊರಕುವುದು ಹೆಚ್ಚು ಹೆಚ್ಚಾಗಿ ಸೇವಾಕ್ಷೇತ್ರದಲ್ಲಿ ಮಾತ್ರ. ಮುಂದುವರೆದ ದೇಶಗಳೆಲ್ಲೆಲ್ಲಾ ಇರುವುದು ಇದೇ

ಪರಿಸ್ಥಿತಿ ; ನಮ್ಮ ದೇಶವೂ ಅದೇ ದಿಕ್ಕಿನಲ್ಲಿ ಹೋಗುತ್ತಿದೆ.

ಈ ಬದಲಾವಣೆಗಳು ದೇಶದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗಳ ಮೇಲೆ ಸಾಕಷ್ಟು ಪರಿಣಾಮ ಬೀರಿವೆ. ಕೈಗಾರಿಕೆ ಮತ್ತು ಸೇವಾಕ್ಷೇತ್ರಗಳ ಬೆಳವಣಿಗೆ ನಗರ ಪ್ರದೇಶಗಳ ಜನಸಂಖ್ಯೆ ಮತ್ತು ಸಂಪತ್ತನ್ನು ಹೆಚ್ಚಿಸಿದೆ. ಜೊತೆಗೆ ಗ್ರಾಹಕರು ಬೇಡುವ ಸರಕುಗಳ ವೈವಿಧ್ಯ, ಅವುಗಳ ಮಾರಾಟದ ವ್ಯವಸ್ಥೆ, ಮಾಧ್ಯಮಗಳ ಉಪಯೋಗ ಇತ್ಯಾದಿಗಳು ಹೊಸ ಹೊಸ ಮಾದರಿಗಳನ್ನು ಅನುಸರಿಸುತ್ತಿವೆ. ಕ್ರಮೇಣ ನಗರ ಪ್ರದೇಶಗಳಿಗೂ, ಗ್ರಾಮೀಣ ಪ್ರದೇಶಗಳಿಗೂ ಸರಾಸರಿ ಆದಾಯ, ಉಪಯೋಗಿಸುವ ಪದಾರ್ಥಗಳು, ಅನುಸರಿಸುವ ವ್ಯವಹಾರಗಳು ಮುಂತಾದವುಗಳಲ್ಲಿ ವ್ಯತ್ಯಾಸ ಹೆಚ್ಚುತ್ತಿದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಿಗಿಂತ ನಗರ ಪ್ರದೇಶಗಳಲ್ಲಿ ಉದ್ಯೋಗಾವಕಾಶಗಳು ತ್ವರಿತಗತಿಯಲ್ಲಿ ಬೆಳೆಯುತ್ತಿರುವುದಲ್ಲದೆ ಹೆಚ್ಚು ಲಾಭದಾಯಕವಾಗಿ ಇರುತ್ತವೆಂದು ಭಾವಿಸಿ ಹಳ್ಳಿಗಳಿಂದ ಪಟ್ಟಣಗಳಿಗೆ ಬಂದು ನೆಲೆಸುವವರ ಸಂಖ್ಯೆ ಜಾಸ್ತಿಯಾಗುತ್ತಿದೆ. ಹೀಗೆ ವಲಸೆ ಬರುವ ಕಾರ್ಮಿಕರಲ್ಲಿ ಬಹಳಷ್ಟು ಮಂದಿ ಅವಿದ್ಯಾವಂತರು, ಕುಶಲತೆ ಇಲ್ಲದವರು ಮತ್ತು ಕಚೇರಿ, ಕಾರ್ಖಾನೆಗಳ ಉದ್ಯೋಗಗಳಿಗೆ ಬೇಕಾಗುವ ಕನಿಷ್ಠ ಅರ್ಹತೆ ಪಡೆಯದವರು. ಹೀಗಾಗಿ ಅವರಿಗೆ ದೊರಕುವ ಉದ್ಯೋಗಗಳು ಶ್ರಮದಾಯಕವಲ್ಲದೆ ದೀರ್ಘಕಾಲ ನಡೆಯುವಂತಹುವಲ್ಲ. ಕೂಲಿ ಕೆಲಸ ಬಿಟ್ಟರೆ ಅವರಿಗೆ ಉಳಿದಿರುವ ವೃತ್ತಿ ಸಣ್ಣಪುಟ್ಟ ವ್ಯಾಪಾರದಲ್ಲಿ ತೊಡಗುವುದು, ಆಟೋರಿಕ್ಷಾ ಇತ್ಯಾದಿಗಳ ಚಾಲನೆ ಮುಂತಾದವುಗಳು. ಆದರೆ ಇಂತಹ ಸ್ವ-ಉದ್ಯೋಗಗಳನ್ನು ನಡೆಸಲು ಬಂಡವಾಳವಿದ್ದವರಿಗೆ ಅಥವಾ ಸಾಲ ಸೌಲಭ್ಯಗಳನ್ನು ಹೊಂದಿರುವವರಿಗೆ ಮಾತ್ರ ಸಾಧ್ಯ. ಒಟ್ಟಿನಲ್ಲಿ ಹಳ್ಳಿಗಳಿಂದ ವಲಸೆ ಬಂದು ನಗರಗಳ ಕೊಳಚೆ ಪ್ರದೇಶಗಳಲ್ಲಿ ತುಂಬಿರುವ ಬಹಳ ಮಂದಿ ಕೆಲಸವಿದ್ದರೂ ಬಡತನದ ರೇಖೆಗಿಂತ ಮೇಲಿರುವವರಲ್ಲ. ಅವಿದ್ಯಾವಂತರು ಮತ್ತು ಕುಶಲಕರ್ಮಿಗಳಲ್ಲದ ಶ್ರಮಜೀವಿಗಳು ಗ್ರಾಮೀಣ ಪ್ರದೇಶಗಳಿಂದ ಹೊರಬಂದರೂ ಅವರ ಆರ್ಥಿಕ ಸ್ಥಿತಿ ಅಂತಹ ಸುಧಾರಿಸಿರುವುದೇನೂ ಕಾಣುವುದಿಲ್ಲ. ನಗರಗಳಲ್ಲಿರುವ ಬಡವರ ಸಂಖ್ಯೆಗೆ ಸೇರುವವರೇ ಹೆಚ್ಚು.

ನಗರ ಪ್ರದೇಶಗಳ ಜನಸಂಖ್ಯೆಯ ಅಂಶ ಹೆಚ್ಚುತ್ತಾ ಇದ್ದರೂ ದೇಶದ ಮುಕ್ಕಾಲು ಭಾಗ ಜನರಿರುವುದು ಈಗಲೂ ಗ್ರಾಮಗಳಲ್ಲೇ. ಅವರ ಜೀವನಮಟ್ಟ ಏರಬೇಕಾದರೆ ವ್ಯವಸಾಯವಲ್ಲದೆ ಇತರ ಗ್ರಾಮೀಣ ಉದ್ಯೋಗಗಳೂ ಅಭಿವೃದ್ಧಿ ಹೊಂದಿ ಅವುಗಳಲ್ಲಿ ತೊಡಗಿರುವ ಕಾರ್ಮಿಕರ ಉತ್ಪಾದನಾ ಸಾಮರ್ಥ್ಯ ಬೆಳೆಯಬೇಕು. ಜೊತೆಗೆ ಮಾರುಕಟ್ಟೆಗಳಲ್ಲಿ ಅವರಿಗೆ ದೊರಕುವ ಬೆಲೆಗಳು ಲಾಭದಾಯಕವಾಗಿರಬೇಕು. ಆದರೆ ಈಗಾಗುತ್ತಿರುವ ಬದಲಾವಣೆಗಳೆಲ್ಲಾ ಇದಕ್ಕೆ ವ್ಯತಿರಿಕ್ತವಾಗಿವೆ. ಕೃಷಿಕ್ಷೇತ್ರದಲ್ಲಿ ಹೊಸತರಹ ತಳಿಗಳು, ಹೂವು-ಹಣ್ಣು-ತರಕಾರಿಗಳ ವ್ಯವಸಾಯ, ನೀರಾವರಿ ವ್ಯವಸ್ಥೆ, ಗೊಬ್ಬರ ಮತ್ತು ಕೀಟನಾಶಕಗಳ ಉಪಯೋಗ – ಮುಂತಾದವುಗಳಿಗೆ ಆಗುವ ಖರ್ಚನ್ನು ಭರಿಸಲು ಸಣ್ಣಪುಟ್ಟ ರೈತರುಗಳಿಗೆ ಕಷ್ಟ. ಹೆಚ್ಚು ಬಂಡವಾಳ ಹೂಡಿ, ನೂತನ ತಂತ್ರಜ್ಞಾನಗಳನ್ನು ಅಳವಡಿಸುವುದು ಸಾಕಷ್ಟು ಜಮೀನು ಮತ್ತು ಹಣವಿರುವವರಿಗೆ ಮಾತ್ರ ಸಾಧ್ಯ. ಹೀಗಾಗಿ ಕ್ರಮೇಣ ಸಣ್ಣಪುಟ್ಟ ರೈತರು ತಮ್ಮ ಜಮೀನುಗಳನ್ನು ಪರಭಾರೆ ಮಾಡಿ ಕಾರ್ಮಿಕ ವರ್ಗಕ್ಕೆ ಸೇರುತ್ತಿದ್ದಾರೆ. ಅಂತೆಯೇ ಗ್ರಾಮೀಣ ಕ್ಷೇತ್ರದಲ್ಲಿದ್ದ ಗುಡಿ ಕೈಗಾರಿಕೆಗಳೂ, ಸಣ್ಣ ಉದ್ಯೋಗಗಳೂ ಕ್ಷೀಣಿಸಿ ಅವುಗಳಲ್ಲಿ ಕೆಲಸ ಮಾಡುತ್ತಿದ್ದ ಬಹಳ ಮಂದಿ ನಿರುದ್ಯೋಗಿಗಳಾಗುತ್ತಿದ್ದಾರೆ. ಮೇಲೆ ಹೇಳಿದಂತೆ ಅನೇಕರು ಕೆಲಸಕ್ಕಾಗಿ ನಗರ ಪ್ರದೇಶಗಳಿಗೆ ಹೋಗಿ ನೆಲೆಸಿದ್ದಾರೆ; ಇಷ್ಟಾದರೂ ಗ್ರಾಮೀಣ ಪ್ರದೇಶದಲ್ಲೇ ಉಳಿದಿರುವವರ ಸಂಖ್ಯೆ ಅಲ್ಲಿ ದೊರಕುವ ಉದ್ಯೋಗಾವಕಾಶಗಳಿಗಿಂತ ಬಹಳ ಪಟ್ಟು ಮೇಲಾಗಿದೆ. ಹಳ್ಳಿಗಳು ಮತ್ತು ಸಣ್ಣಪುಟ್ಟ ಊರುಗಳಲ್ಲಿ ಸಣ್ಣ ಕೈಗಾರಿಕೆಗಳ ಸ್ಥಾಪನೆಯಾದರೂ ಅವುಗಳ ತಂತ್ರಜ್ಞಾನ ಹೊಸ ರೀತಿಯದಾಗಿರುವುದರಿಂದ ಸೂಕ್ತ ಪರಿಣತಿ ಇಲ್ಲದವರ ನಿರುದ್ಯೋಗಕ್ಕೆ ಪರಿಹಾರವಿರುವುದಿಲ್ಲ. ಅದೇ ರೀತಿ ವ್ಯವಸಾಯ ಕ್ಷೇತ್ರದಲ್ಲಿ ಕಂಡುಬರುತ್ತಿರುವ ಬದಲಾವಣೆಗಳಿಂದ ತಾಂತ್ರಿಕ ಸಿಬ್ಬಂದಿಯ ಅವಶ್ಯಕತೆ ಬೆಳೆಯುತ್ತಿದೆ. ಹೀಗಾಗಿ ದೇಶದ ಸಮಗ್ರ ದೃಷ್ಟಿಯಿಂದ ಕಾರ್ಮಿಕ ವರ್ಗದಲ್ಲಿ ಕುಶಲಕರ್ಮಿಗಳಿಗೆ ಬೇಡಿಕೆ ಬೆಳೆಯುತ್ತಿರುವ ಹಾಗೆ ಅವಿದ್ಯಾವಂತರು ಮತ್ತು ತಾಂತ್ರಿಕ ತರಬೇತಿ ಇಲ್ಲದವರಿಗೆ ಬೆಳೆಯುತ್ತಿಲ್ಲ. ಇಂತಹವರು ಬಹಳವಾಗಿ ನಿರುದ್ಯೋಗಿಗಳಾಗಿ ಅಥವಾ ತಾತ್ಕಾಲಿಕ ಕೂಲಿ ಕೆಲಸಗಾರರಾಗಿ, ಬಡತನದ ರೇಖೆಯನ್ನು ದಾಟಲು ಅಸಮರ್ಥರಾಗಿರುತ್ತಾರೆ.

ಈ ಸ್ಥಿತಿಗೆ ಪರಿಹಾರ ದೊರೆಯಬೇಕಾದರೆ ಮೊದಲು ಜನತೆಯ ವಿದ್ಯಾಭ್ಯಾಸದ ಮಟ್ಟ ಹೆಚ್ಚಾಗಿ, ಕನಿಷ್ಠಪಕ್ಷ ಹೈಸ್ಕೂಲಿನವರೆಗೆ ಓದಲು ಎಲ್ಲರಿಗೂ ಸಾಧ್ಯವಾಗಬೇಕು. ಅದರೊಡನೆ ತಾಂತ್ರಿಕ ವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆಯುವ ಅವಕಾಶ ಓದಲು ಆಸಕ್ತಿಯುಳ್ಳ ಕಡು ಬಡವರಿಗೂ ದೊರಕುವಂತಿರಬೇಕು. ಆದರೆ ಉಚ್ಚ ಶಿಕ್ಷಣ ಮತ್ತು ತಾಂತ್ರಿಕ ತರಬೇತಿ ನೀಡುವ ಸಂಸ್ಥೆಗಳ ಸಂಖ್ಯೆ ಸಾಕಷ್ಟು ಇಲ್ಲ. ಮೇಲಾಗಿ ಅವುಗಳ ಪ್ರವೇಶ ಮತ್ತು ಶಿಕ್ಷಣಕ್ಕೆ ತಗಲುವ ವೆಚ್ಚ ಯಾವ ಮಟ್ಟ ತಲುಪಿದೆಯೆಂದರೆ ಗಣನೀಯ ಆದಾಯವಿರುವ ಕುಟುಂಬಗಳಿಗೂ ಅವನ್ನು ಹೊಂದಿಸಲಾಗುತ್ತಿಲ್ಲ. ಈಚೀಚೆಗೆ ಖಾಸಗೀ ವಲಯದಲ್ಲಿ ಸ್ಥಾಪಿತವಾಗುತ್ತಿರುವ ತಾಂತ್ರಿಕ ಮಹಾವಿದ್ಯಾಲಯಗಳಲ್ಲಿ ವಿದ್ಯಾದಾನಕ್ಕಿಂತ ಲಾಭ ಗಳಿಸುವ ಆಸಕ್ತಿಯೇ ಮುಂದಾಗಿದೆ. ದೇಶದ ಸರ್ವೋಚ್ಚ ನ್ಯಾಯಾಲಯ ನೀಡಿರುವ ಹೊಸ ತೀರ್ಪಿನಂತೆ ಇಂತಹ ಖಾಸಗೀ ಸಂಸ್ಥೆಗಳಲ್ಲಿ ಶೇ. ೫೦ರಷ್ಟು ಸ್ಥಳಗಳ ವಿಲೇವಾರಿ ಅವುಗಳ ನಿರ್ವಾಹಕರ ಅಧೀನದಲ್ಲಿರುವುದರಿಂದ ಅವು ದೊರಕುವುದು ಸಾಮರ್ಥ್ಯಕ್ಕಿಂತ ಸಂಪತ್ತು ಅಥವಾ ಸಂಬಂಧಗಳ ಆಧಾರದ ಮೇಲೆ. ಇದರ ಪರಿಣಾಮ ಉನ್ನತ ಶಿಕ್ಷಣ ಪಡೆಯುವ ಅವಕಾಶ ಬಹುಮಟ್ಟಿಗೆ ಸಮಾಜದಲ್ಲಿ ಆಗಲೇ ಉನ್ನತ ಶ್ರೇಣಿಯಲ್ಲಿರುವವರ ಮಕ್ಕಳಿಗೆ ಲಭಿಸುತ್ತದೆಯೇ ಹೊರತು ಬಡವರ – ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿರುವ ಬಡವರ – ಮಕ್ಕಳಿಗೆ ದೊರಕುತ್ತಿಲ್ಲ. ಬಡಸಂಸಾರಗಳಲ್ಲಿ ಹುಟ್ಟಿದ ಬಾಲಕ ಬಾಲಕಿಯರು ಮುಂದೆ ಕಾರ್ಮಿಕ ವರ್ಗಕ್ಕೆ ಸೇರುವಾಗ ಅಶಿಕ್ಷಿತರ ದರ್ಜೆಗೆ ಸೇರುತ್ತಾರೆಯೇ ಹೊರತು ತಂತ್ರಜ್ಞಾನ ವಿಶಾರದರಾಗುವುದಿಲ್ಲ. ದೇಶದಲ್ಲಿ ತಾಂತ್ರಿಕ ತರಬೇತಿ ಹೊಂದಿರುವ ಕುಶಲಕರ್ಮಿಗಳಿಗೂ ಅವಿದ್ಯಾವಂತ ಕೆಲಸಗಾರರಿಗೂ ಇರುವ ಅಂತರ ಕಡಿಮೆ ಆಗುತ್ತಿಲ್ಲ, ಹೆಚ್ಚಾಗುತ್ತಿದೆ. ಈ ಸ್ಥಿತಿ ಬದಲಾಯಿಸದ ಹೊರತು ನಿರುದ್ಯೋಗ ನಿವಾರಣೆ ಮತ್ತು ಉತ್ಪಾದನಾ ಸಾಮರ್ಥ್ಯದ ಏರಿಕೆ ಅಸಾಧ್ಯ. ಮುಖ್ಯವಾಗಿ ಸಾಮಾನ್ಯ ಮತ್ತು ವಿಶೇಷ ರೀತಿಯ ವಿದ್ಯಾಭ್ಯಾಸಕ್ಕೆ ದೇಶದ ಎಲ್ಲಾ ಬಾಲಕ ಬಾಲಕಿಯರಿಗೂ ಮುಕ್ತ ಅವಕಾಶ ದೊರಕುವಂತಾಗಬೇಕು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಜನತೆಯ ವಿದ್ಯಾರ್ಜನೆ ಮತ್ತು ಆರೋಗ್ಯ ರಕ್ಷಣೆಗೆ ಅನುಕೂಲಗಳನ್ನು ಕಲ್ಪಿಸಲು ಎಲ್ಲಕ್ಕಿಂತ ಹೆಚ್ಚು ಆದ್ಯತೆ ನೀಡಬೇಕಾಗಿದೆ. ಶಾಲಾ ಕಾಲೇಜುಗಳನ್ನು ಬೃಹತ್ ಪ್ರಮಾಣದಲ್ಲಿ ಸ್ಥಾಪಿಸುವುದಲ್ಲದೆ ವಿದ್ಯಾರ್ಥಿಗಳು ಸಲ್ಲಿಸಬೇಕಾದ ಶುಲ್ಕಗಳ ಮಟ್ಟ, ಉಪಾಧ್ಯಾಯರ ನೇಮಕ, ಪರೀಕ್ಷಾ ಪದ್ಧತಿ, ಗ್ರಂಥಾಲಯಗಳು, ಸಂಶೋಧನೆಗಳು ವಿಜ್ಞಾನ ಮತ್ತು ತಂತ್ರಜ್ಞಾನಗಳು ಮುಂದುವರಿದಂತೆ ಬದಲಾಯಿಸಬೇಕು. ಈ ಸೌಕರ್ಯಗಳನ್ನು ಒದಗಿಸಲು ಖಾಸಗೀ ಕಂಪೆನಿಗಳು ಮತ್ತು ನಾಗರಿಕ ಸಂಸ್ಥೆಗಳು ಸ್ವಲ್ಪ ಸಹಾಯ ಮಾಡಬಹುದು. ಆದರೆ ಸೂಕ್ತ ಪ್ರಮಾಣದಲ್ಲಿ ವಿದ್ಯಾವಕಾಶಗಳನ್ನು ಕಲ್ಪಿಸಿ, ಕಾಲಕ್ಕೆ ತಕ್ಕಂತೆ ಅವನ್ನು ಸುಧಾರಿಸುವ ಜವಾಬ್ದಾರಿ ಸರ್ಕಾರಗಳಿಗೆ ಸೇರಿದ್ದು. ಬಜೆಟ್ ಕೊರತೆಯನ್ನು ನೀಗಿಸುವ ಉದ್ದೇಶವನ್ನು

> **ಬಡತನ ಅಳೆಯಲು ಸಾಧಾರಣವಾಗಿ ಉಪಯೋಗಿಸುವ ವಿಧಾನ 'ಬಡತನದ ರೇಖೆ' ಗಿಂತ ಕೆಳಗಿರುವ ಜನಸಂಖ್ಯೆಯ ಪ್ರಮಾಣ. ಈ ಸೂಚಿಯನ್ನು ನಿರ್ಧರಿಸುವಾಗ ಬಡತನದ ರೇಖೆಯನ್ನು ಹೇಗೆ ಅಥವಾ ಎಲ್ಲಿ ಎಳೆಯಬೇಕೆಂಬ ಪ್ರಶ್ನೆ ಬರುತ್ತದೆ. ವಿಶ್ವಬ್ಯಾಂಕ್ ಪ್ರತಿ ದೇಶದಲ್ಲಿ ದಿನವೊಂದಕ್ಕೆ ಒಂದು ಅಥವಾ ಎರಡು ಅಮೆರಿಕ ಡಾಲರ್‌ಗಳಿಗಿಂತ ಕಡಿಮೆ ಆದಾಯವಿರುವವರನ್ನು ಬಡವರೆಂದು ಗುರುತಿಸಿ, ಆ ದೇಶದ ಜನಸಂಖ್ಯೆಯಲ್ಲಿ ಅವರ ಅಂಶವನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಭಾರತದ ಪದ್ಧತಿ ಬೇರೆ.**

ಮುಖ್ಯವಾಗಿಟ್ಟುಕೊಂಡಿರುವ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವಿದ್ಯಾಭ್ಯಾಸ, ಆರೋಗ್ಯ ಇತ್ಯಾದಿ ಸಮಾಜ ಸೇವಾ ಕಾರ್ಯಗಳಿಗೆ ಬೇಕಾಗುವ ಸಂಪನ್ಮೂಲಗಳನ್ನು ಒದಗಿಸುತ್ತಿಲ್ಲ. ಇದರಿಂದ ವಿಶ್ವವಿದ್ಯಾಲಯ ಮತ್ತು ತಾಂತ್ರಿಕ ವಿದ್ಯಾಸಂಸ್ಥೆಗಳಲ್ಲಿ ಶಿಕ್ಷಣ ಪಡೆಯುವ ಅವಕಾಶ ಕಾರ್ಮಿಕ ವರ್ಗಕ್ಕೆ ಸೇರುತ್ತಿರುವ ಯುವಕ-ಯುವತಿಯರಿಗೆ ಲಭ್ಯವಿಲ್ಲದಾಗಿದೆ. ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿರುವವರು ತಮ್ಮ ಕುಶಲತೆಯನ್ನು ಬೆಳೆಸಿಕೊಂಡು ಹೆಚ್ಚು ಹೆಚ್ಚಾಗಿ ಸಂಪಾದಿಸಿ ಬಡತನದ ರೇಖೆಯಿಂದ ಮೇಲೆ ಬರುವ ಅವಕಾಶದಿಂದ ವಂಚಿತರಾಗುತ್ತಿದ್ದಾರೆ.

ಒಟ್ಟಿನಲ್ಲಿ ಬಡತನ ನಿವಾರಣೆ ತೀವ್ರವಾಗಿ ಆಗಬೇಕಾದರೆ ಸರ್ಕಾರಗಳ ರೀತಿನೀತಿಗಳಲ್ಲಿ ಸಾಕಷ್ಟು ಬದಲಾವಣೆ ಅಗತ್ಯ. ತಂತ್ರಜ್ಞಾನದ ಮುನ್ನಡೆಗೆ ಅನುಗುಣವಾದ ವಿದ್ಯಾರ್ಜನೆಗೆ ಸಾರ್ವತ್ರಿಕ ಅನುಕೂಲಗಳನ್ನು ಒದಗಿಸುವುದಲ್ಲದೆ ದೇಶದ ಎಲ್ಲೆಡೆ ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಯೋಜನೆಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಮ್ಮಿಕೊಳ್ಳಬೇಕು. ಉದಾರೀಕರಣ ಮತ್ತು ಜಾಗತೀಕರಣದ ನೀತಿಗಳಿಂದ ಇದು ಸಾಧ್ಯವಾಗುವುದಿಲ್ಲ. ಖಾಸಗೀ ಸಂಸ್ಥೆಗಳು ತಮ್ಮ ತಾಂತ್ರಿಕ ವಿಧಾನಗಳನ್ನು ಬದಲಿಸಿ ಹೂಡಿಕೆಯನ್ನು ಮೇಲೆ ಏರಿಸಿದಂತೆ ತಮ್ಮ ಕಚೇರಿ ಕಾರ್ಯಾಲಯಗಳಲ್ಲಿ ಕೆಲಸ ಮಾಡುವವರ ಸಂಖ್ಯೆ ಕಡಿಮೆ ಮಾಡಿ ಹೆಚ್ಚು ಲಾಭ ಗಳಿಸುವ ಉಪಾಯವನ್ನು ನೋಡುತ್ತಾರೆಯೇ ಹೊರತು ಹೊಸ ಉದ್ಯೋಗಗಳನ್ನು ಒದಗಿಸುವ ಮಾರ್ಗವನ್ನಲ್ಲ. ನೂತನ ತಂತ್ರಜ್ಞಾನಗಳ ಅಳವಡಿಕೆ, ಕಾರ್ಮಿಕರ ಉತ್ಪಾದನೆ, ಕಾರ್ಯತತ್ಪರತೆ, ಸಂಸ್ಥೆಯ ಏಳಿಗೆ ಮುಂತಾದವುಗಳನ್ನು ಸರ್ಕಾರೀ ಉದ್ಯಮಗಳು ಕಡೆಗಣಿಸಬೇಕೆಂದಲ್ಲ. ಅವನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಕೈಗೆತ್ತಿಕೊಳ್ಳುವ ಯೋಜನೆಗಳಿಂದ ಕಾರ್ಮಿಕರಿಗೆ ದೊರಕುವ ಹುದ್ದೆಗಳನ್ನೂ ವರಮಾನವನ್ನೂ ಸಾಧ್ಯವಾದಷ್ಟು ಮೇಲೇರಿಸುವ ಪ್ರಯತ್ನ ಮಾಡಬೇಕು.

ಇದನ್ನು ಸಾಧಿಸಬೇಕಾದರೆ ಸರ್ಕಾರಿ ಕ್ಷೇತ್ರದಲ್ಲಿ ವಿದ್ಯಾಭ್ಯಾಸ, ಆರೋಗ್ಯ ರಕ್ಷಣೆ ಇತ್ಯಾದಿ ಸಮಾಜ ಸೇವಾ ಕಾರ್ಯಗಳಿಗೆ ಹೆಚ್ಚು ಹೆಚ್ಚಾಗಿ ಸಂಪನ್ಮೂಲಗಳನ್ನು ಒದಗಿಸುವುದಲ್ಲದೆ ಉತ್ಪಾದನಾ ವಲಯಗಳಲ್ಲಿ ಹೂಡಿಕೆಯ ಪ್ರಮಾಣವನ್ನು ತ್ವರಿತಗತಿಯಲ್ಲಿ ಏರಿಸಬೇಕು. ಆದರೆ ಬಜೆಟ್ ಖೋತಾ ಕಡಿಮೆ ಮಾಡುವ ನೆಪದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮೂಲಭೂತ ಸೌಕರ್ಯಗಳು, ನೀರಾವರಿ, ರಸ್ತೆ ಮತ್ತು ರೈಲು ನಿರ್ಮಾಣ, ಬಂದರುಗಳು, ಕೈಗಾರಿಕೆ ಮುಂತಾದ ಯೋಜನೆಗಳಲ್ಲಿ ಹೂಡಿಕೆಯನ್ನು ವಿಪರೀತ ಇಳಿಸಿ ಆ ಜವಾಬ್ದಾರಿಯನ್ನು ಖಾಸಗೀ ಸಂಸ್ಥೆಗಳಿಗೆ ಒಪ್ಪಿಸುವ ಮಾರ್ಗ ಅನುಸರಿಸುತ್ತಿವೆ. ಇದರ ಫಲವಾಗಿ ರಾಷ್ಟ್ರ ಮಟ್ಟದ ಒಟ್ಟಾರೆ ಹೂಡಿಕೆಯೇ ಕ್ಷೀಣಿಸಿದೆ. ಸಮಗ್ರ ರಾಷ್ಟ್ರೀಯ ಹೂಡಿಕೆ ೧೯೯೦-೯೧ರಲ್ಲಿ ರಾಷ್ಟ್ರೀಯ ಉತ್ಪನ್ನ (GDP)ದ ಶೇ. ೨೬.೩ ಮತ್ತು ಸರ್ಕಾರೀ ಕ್ಷೇತ್ರದ ಹೂಡಿಕೆ ರಾಷ್ಟ್ರೀಯ ಉತ್ಪನ್ನದ ಶೇ. ೯.೩ರಷ್ಟಿದ್ದವು. ಅವೆರಡೂ ಕ್ರಮವಾಗಿ ಶೇ. ೨೩.೭ ಮತ್ತು ಶೇ. ೬.೩ಕ್ಕೆ

## ನೊಗ



ಹೋರಾಡಲಿ ಯಾರೊಂದಿಗೆ?
ಕಣ್ಣಿಗೆ ಕಾಣದ್ದು, ಕೈಗೆ ಸಿಗದ್ದು
ಆಕಾರವಂತೂ ಇಲ್ಲವೇ ಇಲ್ಲ
ಛದ್ಮ ವೇಷಧಾರಿ!
ಪಾತಾಳದಾಳಕ್ಕೆ ಬೇರುಬಿಟ್ಟ ಬದುಕ,
ಬಟ್ಟ ಬಯಲಲ್ಲಿ ಕಿತ್ತು ಬೆತ್ತಲೆ ನಿಲಿಸಿ
ಕಾಣದ ಚಡಿಯೇಟಿನ ಗ್ಯಾರಂಟೀ ಹೊಡೆತ
ಎಷ್ಟೆಲ್ಲ ಏನೆಲ್ಲ ಅನಾಹುತ!
ಸುರಿಯದ ಮಳೆ, ಉರಿಯುವ ಬಿಸಿಲು
ನೊಂದ ಬೆಂದ ನನ್ನಪ್ಪ,
ಮಳೆ-ಬೆಳೆಗಳ ಗಂಟ ಬಿಚ್ಚಿ
ಓದುತ್ತಿದ್ದಾನೆ ಪುರಾಣ.......
'ತೆಂಗಿನ ಬೆಳೆಗೆ ನುಸಿ ಪೀಡೆ,
ಬೆಂಕಿ ರೋಗದಿಂದ ಸುಟ್ಟ ತೆಂಗಿಗೆ,
ಹಳ್ಳೆ ಹಿಡಿದ ಅಡಿಕೆಯ ಸಮಾಧಾನ.
ಕಲ್ಲು ಹೊಲದ ರಾಗಿ ದೇವರಿಗೇ ಪ್ರೀತಿ'.
ಬಿದ್ದಿರಬಹುದೇ ಜೈವಿಕ ಬಾಂಬ್
ಬಂದದ್ದು ಒಂದೇ ಮಳೆ
ಬಿತ್ತಿದ ರಾಗಿ ಮೇಲೇಳಲಿಲ್ಲ
ಹಗೇವಿನಲ್ಲಿ ಮುಗ್ಗುವಾಸನೆ
ಹೊಲಕ್ಕೆ ಚೆಲ್ಲಿದ ಸರಕಾರಿ ಗೊಬ್ಬರ
ಬಂಜೆಯಾದ ಭೂಮಿ ತಾಯಿ
ಈ ಕಥೆಯ ಬೀಜ ಹುಟ್ಟಿದ್ದೆಲ್ಲಿ?
ಆಕಾಶವಂತೂ ನಿರಪರಾಧಿ!

'ವಿಷ ಕುಡಿದ ನೆರೆಮನೆಯ ರೈತ ಗಗ್ಗರಿ
(ಮತ್ತವನ ಹೆಂಡತಿ)
ಸೆರೆಯಷ್ಟೂ ಇಲ್ಲದ ಉಪ್ಪು, ಮೆಣಸು.
ಸಾಲ-ಸೋಲ ಬಹಳ ಆಗಿತ್ತು ಪಾಪ!
(ಬೀಜ-ಗೊಬ್ಬರ, ಕೊಟ್ಟಿದ್ದರಂತಲ್ಲ!)
ಯಾರಿಗೆ ಬೇಕು ಇಂಥ ಅನುಕಂಪ?

ಇದ್ದ ಒಬ್ಬಳೇ ಮಗಳು
ಮನೆಗೆಲಸಕ್ಕೆಂದು ನಗರಕ್ಕೆ ಹೋದವಳು
ಬರಲಿಲ್ಲ ಎಷ್ಟೊ ರಾತ್ರಿ... ಮಾತು ಮೂಕ!
ನೆರೆಮನೆಯಿಂದ ಇಣುಕಿತೇ ಭೂತ
ಆಕೆ ನೆರೆದದ್ದು ಸುದ್ದಿಯಾಯಿತೇ ಪತ್ರಿಕೆಯಲ್ಲಿ?
ಸೂತಕದ ಮನೆಗೆ ಹೊರಟ ಜಂಬೂ ಸವಾರಿ
ನಾಮ ಫಲಕದಲ್ಲಿ
'ಭಾರತದ ಬೆನ್ನೆಲುಬು ರೈತ'
ಮಣ್ಣು ಮಾಡುವವರಿಲ್ಲದ ಮನೆ
ಸರಕಾರ ನೀಡುತ್ತಿದೆ ಒಂದು ಲಕ್ಷ
ದಾನಿಗಳು ದೊಡ್ಡವರು!

ಹಂತ ಹಂತವಾಗಿ ಹದವಾಗಿ ತಟ್ಟಿ
ಮೃದುವಾಗಿ ಮುಟ್ಟಿ
ಇಂಚಿಂಚೇ ನುಂಗುತ್ತಿದೆ ಭೂತ
ಇಂದು ರೈತ, ನಾಳೆ?
ಚಲಿಸುತ್ತಿದೆ ಕಾಲ
ಚಕ್ರದ ಆವರ್ತ
ಪುರಾಣಕ್ಕೆಂದೂ ಕೊನೆಯಿಲ್ಲ
ಅಪ್ಪ ಓದುತ್ತಲೇ ಇದ್ದಾನೆ
ಚರಿತ್ರೆ – ಪುರಾಣ
ದಾರಿ ಕಳೆದುಕೊಂಡು ನಿಂತಿರುವೆ
ಅನಾಥೆ

ಡಾ|| ಶ್ರೀಮತಿ ಗಂಗಾ ಸ್ವಾಮಿ
'ಪ್ರಕೃತಿ', ನಂ. ೫೦೪, ಸೆಕ್ಟರ್-೩, ಶಿವಬಸವನಗರ, ಬೆಳಗಾವಿ - ೧೦

ಇಳಿದವು. ಅದೇ ಅಂತರದಲ್ಲಿ ಖಾಸಗೀ ಕ್ಷೇತ್ರದ ಹೂಡಿಕೆ ರಾಷ್ಟ್ರೀಯ ಉತ್ಪನ್ನದ ಶೇ. ೧೪.೭ರಿಂದ ಶೇ. ೧೬.೧ರಷ್ಟಾಗಿತ್ತು. ಆದರೆ ಈ ಹೆಚ್ಚಳದ ಬಹುಭಾಗ ಕೈಗಾರಿಕಾವಲಯದಲ್ಲಿ ರಫ್ತು ಮತ್ತು ಹಣವಂತ ಗ್ರಾಹಕರು ಬೇಡುವ ಸುಖಸಾಧನೆಗಳ ತಯಾರಿಕೆಗೆ ಮೀಸಲಾಗಿ ಜನಸಾಮಾನ್ಯರ ಅವಶ್ಯಕತೆಗಳಿಗೆ ದೊರಕಲಿಲ್ಲ. ಹಾಗೆಯೇ ಮೂಲಭೂತ ಸೌಕರ್ಯಗಳಲ್ಲಿ ಖಾಸಗಿಯವರ ಹೂಡಿಕೆ ಗಣನೀಯ ಪ್ರಮಾಣದಲ್ಲಿ ಕಂಡುಬರಲಿಲ್ಲ. ಒಟ್ಟಿನಲ್ಲಿ ಸರ್ಕಾರಗಳು ೧೯೯೦ರ ದಶಕದಲ್ಲಿ ಪ್ರಾರಂಭಿಸಿ ಈಗ ಅನುಸರಿಸುತ್ತಿರುವ ಕಾರ್ಯಕ್ರಮಗಳಿಂದ ಉದ್ಯೋಗಗಳು ಜನಸಂಖ್ಯೆಗೆ ಅನುಗುಣವಾಗಿ ಹೆಚ್ಚಿ ಕಾರ್ಮಿಕರ ವರಮಾನ ವೃದ್ಧಿಯಾಗುತ್ತಿರುವ ಸೂಚನೆಗಳಿಲ್ಲ. ಬದಲಾಗಿ ಕಾರ್ಮಿಕರಿಗೆ ಅನ್ವಯಿಸುವ ಮಸೂದೆಗಳನ್ನು ಮಾರ್ಪಡಿಸಿ ಕಂಪೆನಿಗಳ ವ್ಯವಸ್ಥಾಪಕರಿಗೆ ಅನುಕೂಲ ಮಾಡಲು ಯೋಚಿಸಿದ್ದಾರೆ.

**ಬಡತನ ನಿವಾರಣೆ ತೀವ್ರವಾಗಿ ಆಗಬೇಕಾದರೆ ಸರ್ಕಾರಗಳ ರೀತಿನೀತಿಗಳಲ್ಲಿ ಸಾಕಷ್ಟು ಬದಲಾವಣೆ ಅಗತ್ಯ. ತಂತ್ರಜ್ಞಾನದ ಮುನ್ನಡೆಗೆ ಅನುಗುಣವಾದ ವಿದ್ಯಾರ್ಜನೆಗೆ ಸಾರ್ವತ್ರಿಕ ಅನುಕೂಲಗಳನ್ನು ಒದಗಿಸುವುದಲ್ಲದೆ ದೇಶದ ಎಲ್ಲೆಡೆ ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಯೋಜನೆಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಮ್ಮಿಕೊಳ್ಳಬೇಕು. ಉದಾರೀಕರಣ ಮತ್ತು ಜಾಗತೀಕರಣದ ನೀತಿಗಳಿಂದ ಇದು ಸಾಧ್ಯವಾಗುವುದಿಲ್ಲ.**

ಪ್ರಧಾನಿ ವಾಜಪೇಯಿಯವರು ಹಾಲಿ ನಡೆಯುತ್ತಿರುವ ಪಂಚವಾರ್ಷಿಕ ಯೋಜನೆ ರಾಷ್ಟ್ರೀಯ ಉತ್ಪನ್ನವನ್ನು ಸರಾಸರಿ ಶೇ. ೮ರಷ್ಟಕ್ಕೆ ಹೆಚ್ಚಿಸಿ ಪ್ರತಿವರ್ಷ ಒಂದು ಕೋಟಿ ಹೊಸ ಉದ್ಯೋಗಗಳನ್ನು ಉಂಟುಮಾಡುವಂತಾಗಬೇಕೆಂದು ಯೋಜನಾ ಆಯೋಗಕ್ಕೆ ಆದೇಶಿಸಿದ್ದಾರೆ. ಕೇಂದ್ರ ಸರ್ಕಾರ ಈ ಗುರಿ ಸಾಧಿಸಬೇಕಾದರೆ ತನ್ನ ಆರ್ಥಿಕ ನೀತಿಯನ್ನು ಮೂಲಭೂತವಾಗಿ ಬದಲಾಯಿಸಬೇಕು. ಖಾಸಗೀಕರಣ ಮತ್ತು ಜಾಗತೀಕರಣಗಳನ್ನು ವಿಸ್ತರಿಸುವುದರಿಂದ ಇದಾಗುವುದಿಲ್ಲ. ಆ ದಿಕ್ಕಿನಲ್ಲೇ ಮುಂದುವರೆದರೆ ಬಂಡವಾಳಗಾರರು, ಸ್ಥಿತಿವಂತರು, ಉಚ್ಚ ದರ್ಜೆಯ ಉದ್ಯೋಗಸ್ಥರು ಮತ್ತು ಭೂಮಾಲೀಕರಿಗೆ ಉಪಯೋಗವಾಗುವುದೇ ಹೊರತು ಸಾಮಾನ್ಯ ಜನಕ್ಕಲ್ಲ. ರಾಷ್ಟ್ರದ ಸಂಪನ್ಮೂಲಗಳು ಅತ್ಯವಶ್ಯಕ ವಸ್ತುಗಳು ಮತ್ತು ಸಮಾಜ ಕಲ್ಯಾಣ ಸೇವೆಗಳನ್ನು ಒದಗಿಸುವುದಕ್ಕಿಂತ ಅನವಶ್ಯಕ ಸುಖಸಾಧನಗಳ ಖರ್ಚಿಗೆ ಬಳಕೆಯಾಗುತ್ತಿವೆ. ಇಂತಹ ಖರ್ಚು ಉದ್ಯಮಿಗಳಿಗೆ ಲಾಭದಾಯಕವಾಗುತ್ತಿರುವುದರಿಂದ ಖಾಸಗೀ ಸಂಸ್ಥೆಗಳ ಹೂಡಿಕೆ ಆ ದಿಸೆಯಲ್ಲಿ ಬೆಳೆಯುತ್ತಿದೆ. ಅಲ್ಲದೆ ಲಾಭದ ಗುರಿಯಿರುವ ಸಂಸ್ಥೆಗಳು ಹೂಡಿಕೆಗೆ ತಕ್ಕಂತೆ ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಬದಲು ತಮ್ಮಲ್ಲಿ ಕೆಲಸ ಮಾಡುವವರ ಸಂಖ್ಯೆಯನ್ನು ಕಡಿಮೆ ಮಾಡುವ ಅವಕಾಶಗಳನ್ನು ನೋಡುತ್ತವೆ. ಖಾಸಗೀವಲಯ ಮತ್ತು ವಿದೇಶೀ ಬಂಡವಾಳಗಾರರಿಗೆ ಕೊಡುವ ರಿಯಾಯಿತಿಗಳನ್ನು ವಿಸ್ತರಿಸುವುದರ ಮೂಲಕ ರಾಷ್ಟ್ರದ ಸಮಗ್ರ ಹೂಡಿಕೆ ವರ್ಧಿಸುವುದಿಲ್ಲ. ಇದು ನಿಗದಿತ ಪ್ರಕಾರ ಆಗಬೇಕಾದರೆ ಸರ್ಕಾರೀ ಕ್ಷೇತ್ರದ ಉಳಿತಾಯ, ಹೂಡಿಕೆಗಳು ತೀವ್ರವಾಗಿ ಮೇಲೇರಬೇಕು. ಅಲ್ಲದೆ ಬಜೆಟ್ ಮತ್ತು ಸರ್ಕಾರಿ ಉದ್ಯಮಗಳ ಖರ್ಚುವೆಚ್ಚಗಳಲ್ಲಿ ಸಮಾಜೋದ್ಧಾರಕ ಸೇವೆಗಳಿಗೆ ಆದ್ಯತೆ ಕೊಟ್ಟು ಅವುಗಳ ವಿತರಣೆಯಲ್ಲಿ ಬಡತನ ನಿವಾರಣೆಯ ಉದ್ದೇಶ ಸ್ಪಷ್ಟವಾಗಿರುವಂತೆ ತಿದ್ದಲು ಹಿಂಜರಿಯಬಾರದು. ಹಾಗೆಯೇ ತೆರಿಗೆ ಮತ್ತು ಬಡ್ಡಿದರಗಳನ್ನು ಸರ್ಕಾರದ ಆದಾಯ ಮತ್ತು ಸಾರ್ವಜನಿಕರ ಉಳಿತಾಯಗಳಿಗೆ ಅನುಕೂಲವಾಗುವಂತೆ ವ್ಯವಸ್ಥೆ ಮಾಡುವುದು ಅಗತ್ಯ. ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಉದ್ಯೋಗ ಕಲ್ಪಿಸಬೇಕಾಗಿರುವುದರಿಂದ ಸ್ಥಳೀಯ ಉದ್ಯಮಗಳು ಮತ್ತು ವಿಕೇಂದ್ರೀಕೃತ ಯೋಜನೆಗಳಿಗೆ ಪ್ರಾಧಾನ್ಯವಿರುವುದು ಒಳ್ಳೆಯದು. ಬಜೆಟ್ ಖೋತಾ ಕಡಿಮೆ ಮಾಡುವುದರ ಮೇಲೆ ಎಲ್ಲಾ ನೀತಿಗಳೂ ಕೇಂದ್ರೀಕೃತವಾಗಬಾರದು. ಈಗಿರುವ ವಿದೇಶೀ ವಿನಿಮಯ ಮತ್ತು ಆಹಾರ ಸಾಮಗ್ರಿಗಳ ಸಂಗ್ರಹವನ್ನು ದೇಶದಲ್ಲಾಗಬೇಕಾದ ಅತ್ಯವಶ್ಯಕ ಖರ್ಚುಗಳಿಗೆ ಉಪಯೋಗಿಸಲು ಸರ್ಕಾರ ಹಿಂಜರಿಯಬೇಕಾಗಿಲ್ಲ. ಹಣದುಬ್ಬರ ಕಡಿಮೆಯಾಗಿರುವಾಗ ಸರ್ಕಾರಗಳು ಅಂತರರಾಷ್ಟ್ರೀಯ ಸಂಸ್ಥೆಗಳ ಒತ್ತಡಕ್ಕೆ ಮಣಿದು ತಮ್ಮ ವೆಚ್ಚದ ಮೊತ್ತವನ್ನು ಇಳಿಸುವುದರಲ್ಲೇ ನಿರತರಾಗಿರುವುದು ಸೂಕ್ತವಲ್ಲ. ಅಂತೆಯೇ ತೆರಿಗೆ ಇತ್ಯಾದಿಗಳನ್ನು ಹೆಚ್ಚಾಗಿ ಶೇಖರಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹೂಡಿಕೆಯ ಪ್ರಮಾಣವನ್ನು ಪಂಚವಾರ್ಷಿಕ ಯೋಜನೆಗೆ ತಕ್ಕಂತೆ ಏರಿಸಬೇಕು.

ಮುಖ್ಯವಾಗಿ ಸರ್ಕಾರಗಳನ್ನು ನಡೆಸುವ ಜವಾಬ್ದಾರಿ ವಹಿಸಿಕೊಂಡಿರುವ ರಾಜಕೀಯ ಪಕ್ಷಗಳು ಮತ್ತು ಅಧಿಕಾರಿಗಳು ತಮ್ಮ ಮನೋಭಾವ ಮತ್ತು ತತ್ತ್ವಗಳನ್ನು ಬಂಡವಾಳಶಾಹಿ ಕಡೆಯಿಂದ ಸಮಾಜವಾದದ ಕಡೆಗೆ ತಿರುಗಿಸಬೇಕು. ಅಂದರೆ ಮಾರುಕಟ್ಟೆಗಳನ್ನು ಕಡೆಗಣಿಸಬೇಕೆಂದಲ್ಲ. ಅವುಗಳ ಉಪಯೋಗವನ್ನು ಸಮಾಜದ ಒಟ್ಟು ಉನ್ನತಿಗೆ ಅನುಕೂಲವಾಗುವಂತಹ ಸೂಕ್ತ ನಿಯಂತ್ರಣಗಳಿಗೆ ಒಳಪಡಿಸಿ ಸರ್ಕಾರೀ ಮತ್ತು ಖಾಸಗೀವಲಯಗಳು ಪರಸ್ಪರ ಸಹಾಯಕವಾಗುವಂತಿದ್ದರೆ ಉತ್ತಮ. ಗಿರಾಕಿ ಹಿತರಕ್ಷಣೆಯನ್ನೇ ತೃಪ್ತಿಪಡಿಸುವ ಮುಕ್ತ ಮಾರುಕಟ್ಟೆ ನೀತಿಯನ್ನು ಈಚೀಚೆಗೆ ಅನೇಕ ದೇಶಗಳು ಒಪ್ಪಿಕೊಳ್ಳುತ್ತಿಲ್ಲ. ವಿಶ್ವಬ್ಯಾಂಕ್ ಕೂಡ ತನ್ನ 'ವಿಶ್ವ ಅಭಿವೃದ್ಧಿ ವರದಿ' (World Development Report 2004)ಯಲ್ಲಿ ಎಲ್ಲಾ ಸಮಸ್ಯೆಗಳಿಗೂ ಖಾಸಗೀಕರಣ ಮತ್ತು ಜಾಗತೀಕರಣಗಳಿಂದ ಪರಿಹಾರ ದೊರೆಯುವುದೆಂದು ಎಣಿಸುವುದು ಸರಿಯಲ್ಲವೆಂದು ಅಭಿಪ್ರಾಯಪಟ್ಟಿದೆ. ಬಡತನ ಕಡಿಮೆಯಾಗಬೇಕಾದರೆ ಸರ್ಕಾರ ಅದನ್ನೇ ಗುರಿಯಾಗಿಟ್ಟುಕೊಂಡಿರುವ ವಿಶೇಷ ಕಾರ್ಯಕ್ರಮಗಳನ್ನು ಅನುಸರಿಸಬೇಕೆಂದು ವರದಿ ತಿಳಿಸುತ್ತದೆ. ಅಮೆರಿಕ ಮುಂತಾದ ಪಾಶ್ಚಾತ್ಯ ರಾಷ್ಟ್ರಗಳ ಪದ್ಧತಿಯನ್ನೂ ರೀತಿನೀತಿಗಳನ್ನೂ ವಿವೇಚನೆಯಿಲ್ಲದೆ ಅನುಸರಿಸುವುದರಿಂದ ನಮ್ಮಲ್ಲಿರುವ ಬಡತನ, ನಿರುದ್ಯೋಗ, ಅನಕ್ಷರತೆ, ಅನಾರೋಗ್ಯಗಳು ನಿವಾರಣೆಯಾಗುವುದಿಲ್ಲ. ಇವನ್ನು ಬಗೆಹರಿಸಬೇಕಾದರೆ ಸರ್ಕಾರದ ಸಿದ್ಧಾಂತ ಮತ್ತು ಆಡಳಿತ ಪದ್ಧತಿಗಳನ್ನು ಮಾರ್ಪಡಿಸಿ ಪಂಚವಾರ್ಷಿಕ ಯೋಜನೆಗಳ ವ್ಯಾಪ್ತಿಯನ್ನು ವಿಸ್ತರಿಸುವುದಲ್ಲದೆ ಜನತೆಯ ಆಶೆ ಆಕಾಂಕ್ಷೆ ಗಳಿಗೆ ಅವು ಹೇಗೆ ಸ್ಪಂದಿಸುತ್ತವೆಯೆಂದು ಗಮನಿಸಬೇಕು. ಪ್ರಪಂಚದ ಎಲ್ಲೆಡೆ ಬಡತನ ಮತ್ತು ಅಸಮಾನತೆಗಳನ್ನು ಕಡಿಮೆ ಮಾಡಲು ಸರ್ಕಾರಗಳು ಆರ್ಥಿಕ ಚಟುವಟಿಕೆಗಳಲ್ಲಿ ಆಳವಾಗಿ ತೊಡಗಬೇಕೆಂಬುದು ಸ್ಪಷ್ಟವಾಗುತ್ತಿದೆ. ಇಂತಹ ಸನ್ನಿವೇಶದಲ್ಲಿ ಬಡತನ, ನಿರುದ್ಯೋಗಗಳ ನಿವಾರಣೆಯನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು, ನಮ್ಮ ಸಾಮಾಜಿಕ ಮೌಲ್ಯಗಳಿಗೆ ಧಕ್ಕೆಯಾಗದಂತೆ ಕಾರ್ಯಕ್ರಮಗಳನ್ನು ರೂಪಿಸುವುದು ಕೇಂದ್ರ ಮತ್ತು ರಾಜ್ಯಸರ್ಕಾರಗಳ ಆದ್ಯ ಕರ್ತವ್ಯ.

ಡಾ॥ ಕೆ. ಎಸ್. ಕೃಷ್ಣಸ್ವಾಮಿ
[illegible] ಆದರ್ಶ ಗಾರ್ಡನ್ಸ್, ೪೭ನೇ ಕ್ರಾಸ್, ಜಯನಗರ ೮ನೇ ಬ್ಲಾಕ್, ಬೆಂಗಳೂರು - ೫೬೦ ೦೮೨

**ಭಾ**ರತೀಯ ಪರಂಪರೆಯಲ್ಲಿಯಾಗಲಿ ಪಾಶ್ಚಾತ್ಯ ಪರಂಪರೆಯಲ್ಲಿಯಾಗಲಿ ಕಲೆ ಎಂಬುದನ್ನು ಇಂದಿನ ವಿಶಿಷ್ಟ, ಸೀಮಿತ ಅರ್ಥದಲ್ಲಿ ಪರಿಗಣಿಸುತ್ತಿರಲಿಲ್ಲ. ಅಮರಕೋಶದಲ್ಲಿ ಶಿಲ್ಪ ಮುಂತಾದ ಕುಶಲ ವಿದ್ಯೆಗಳನ್ನು ಕಲೆ ಎಂದು ಹೆಸರಿಸಿದೆ. ಮನುಷ್ಯನ ಬದುಕಿಗೆ ಉಪಯುಕ್ತವಾಗುವ ಹಾಗೇ ಬದುಕಿಗೆ ಚೆಲುವನ್ನು ಸಂತೋಷವನ್ನು ತಂದುಕೊಡುವ ಎಲ್ಲ ಸಾಧನಗಳನ್ನೂ, ವಿಷಯಗಳನ್ನೂ ನಮ್ಮ ಪ್ರಾಚೀನರು ಕಲೆ ಎಂದು ಭಾವಿಸಿದ್ದರು. ಆದ್ದರಿಂದಲೇ ಸಂಗೀತ, ನೃತ್ಯ, ಚಿತ್ರ, ಶಿಲ್ಪಗಳಂತೆ ಪುಷ್ಪಾಲಂಕಾರ, ರಂಗವಲ್ಲಿ, ಯಕ್ಷಿಣಿ, ಆಭರಣ ತಯಾರಿಕೆ, ಪರಿಮಳ ದ್ರವ್ಯ ಸಿದ್ಧಪಡಿಸುವಿಕೆ, ಬಗೆಬಗೆಯ ಅಲಂಕಾರಗಳು, ಕೊನೆಗೆ ಶಯನ ರಚನೆಯನ್ನೂ ಅರವತ್ತನಾಲ್ಕು ಕಲೆಗಳಲ್ಲಿ ಸೇರಿಸಿದರು. ಕಾಮಸೂತ್ರದ ವ್ಯಾಖ್ಯಾನಕಾರ ಐನೂರ ಹನ್ನೆರಡು ಕಲೆಗಳಿವೆ ಎಂದಿದ್ದಾನೆ. ಪಾಶ್ಚಾತ್ಯರಲ್ಲೂ ಹೀಗೆಯೇ ವಿಶಾಲವಾದ ಅರ್ಥವಿತ್ತು. ಲ್ಯಾಟಿನ್ ಭಾಷೆಯ ಆರ್ಸ್ ಶಬ್ದಕ್ಕೆ ಕೌಶಲ, ಕುಶಲವಿದ್ಯೆ, ಕ್ರ್ಯಾಫ್ಟ್ ಎಂಬ ಅರ್ಥವಿತ್ತು. ಮರಗೆಲಸ, ಶಸ್ತ್ರವಿದ್ಯೆಗಳೂ ಕುಶಲವಿದ್ಯೆಯಾಗಿದ್ದುವು, ಕಾವ್ಯವೂ ಅವುಗಳಲ್ಲಿ ಒಂದು ಎಂಬುದಾಗಿತ್ತು. ಮಧ್ಯಕಾಲದಲ್ಲಿ ಆರ್ಸ್ ಎಂದರೆ ಶಾಸ್ತ್ರ ವಿದ್ಯೆ ಎಂಬ ಅರ್ಥವೂ ಸೇರಿಕೊಂಡಿತು. ಯೂರೋಪಿನಲ್ಲಿ ಹದಿನೆಂಟನೆಯ ಶತಮಾನದಲ್ಲಿ ಲಲಿತಕಲೆ ಫೈನ್ ಆರ್ಟ್ಸ್, ಉಪಯುಕ್ತ ಕಲೆ ಯೂಸ್‌ಫುಲ್ ಆರ್ಟ್ಸ್ ಎಂಬ ಭೇದಕಲ್ಪನೆ ರೂಢಿಗೆ ಬಂದಿತು.

ಪ್ರೊ|| ಎಂ. ಎಚ್. ಕೃಷ್ಣಯ್ಯ

ಇಲ್ಲಿ ಫೈನ್ ಎಂದರೆ ಸೌಂದರ್ಯ ಸಂಬಂಧಿತ, ಸುಂದರ ಎಂಬರ್ಥ. ಹತ್ತೊಂಬತ್ತನೇ ಶತಮಾನದಲ್ಲಿ ಫೈನ್ ಎಂಬುದೂ ಬಿಟ್ಟುಹೋಗಿ ಆರ್ಟ್ ಮಾತ್ರ ಉಳಿಯಿತು. ಲಲಿತಕಲೆಗಳಿಗೆ ಆ ಹೆಸರು. ಸಾಹಿತ್ಯ, ಸಂಗೀತ, ಚಿತ್ರ,. ಶಿಲ್ಪ, ನೃತ್ಯ, ರಂಗಭೂಮಿ ಕಲೆಗಳು ಶುದ್ಧ ಕಲೆಯ ವರ್ಗಕ್ಕೆ ಸೇರಿದುವು. ಉಳಿದಂತೆ ಅಲಂಕಾರ, ಉಪಯುಕ್ತ ಕಲೆಗಳು ಕುಶಲಕಲೆ ಎನಿಸಿಕೊಂಡವು.

ಇಪ್ಪತ್ತನೆಯ ಶತಮಾನದ ಕೊನೆಯ ದಶಕದವರೆಗೆ ತಾತ್ತ್ವಿಕ ಸೌಂದರ್ಯ ಮೀಮಾಂಸೆಯಲ್ಲಿ ಜನಪ್ರಿಯ ಕಲೆಗಳ ಬಗ್ಗೆ ಗಂಭಿರ ಚರ್ಚೆಯಾಗಲಿಲ್ಲ. ಈಗ ಶುದ್ಧ ಕಲೆ-ಕುಶಲ ಕಲೆ, ಉನ್ನತ ಕಲೆ-ನಿಮ್ನ ಅಥವಾ ಕೆಳದರ್ಜೆಯ ಕಲೆ, ಮುಂಚೂಣಿ ಕಲೆ-ಜನಪ್ರಿಯ ಕಲೆ, ಶ್ರೇಷ್ಠ ಕಲೆ-ಕೆಟ್ಟ ಕಲೆ, ಜನಪ್ರಿಯ ಕಲೆಯಲ್ಲೂ ಜನಪದ ಕಲೆ-ಸಮೂಹ ಕಲೆ ಮುಂತಾದ ಭೇದಗಳ, ವರ್ಗೀಕರಣದ ಚರ್ಚೆ ಸೌಂದರ್ಯ ಮೀಮಾಂಸೆಯ ಭಾಗವಾಗಿ ಸೇರಿದೆ. ಇಲ್ಲಿ ಹಲವು ಸಂದೇಹಗಳು ಸಹಜವಾಗಿ ಉಂಟಾಗುತ್ತವೆ. ಈ ವೈರುಧ್ಯಗಳು ಯಾವ ದೃಷ್ಟಿಯಿಂದ ? ಕೆಲವದರ ಬಗ್ಗೆ ವಿರೋಧಿಸುವವರು ಏನನ್ನು ವಿರೋಧಿಸುತ್ತಿದ್ದಾರೆ ? ಕಲಾರೂಪಗಳ ಬಗೆಗೆ ? (ಕಾವ್ಯ ಮತ್ತು ವಿಡಿಯೊ ಕ್ರೀಡೆ). ಅಥವಾ ಯಾವುದೇ ಕಲೆಯಲ್ಲಿನ ಪ್ರಕಾರಗಳಿಗೆ ಸಂಬಂಧಿಸಿದ್ದೆ ? (ನವ್ಯ ಸಾಹಿತ್ಯ ಮತ್ತು ರಮ್ಯ ಕಾದಂಬರಿ). ಇಲ್ಲವೆ, ಕೃತಿಗಳ ತೌಲನಿಕ ದೃಷ್ಟಿಯೆ ? (ಕಾನೂರು ಹೆಗ್ಗಡಿತಿ ಒಂದು ಶ್ರೇಷ್ಠ ಕೃತಿ, ಆದರೆ ಯಾವುದೇ ಒಂದು ಪತ್ತೇದಾರಿ ಕಾದಂಬರಿ ಕೀಳು ಕೃತಿ). ಇಲ್ಲಿ ವಿಭಿನ್ನ ದೃಷ್ಟಿಗಳನ್ನು ಸಮೀಕರಿಸಿ ಗೊಂದಲ ಸೃಷ್ಟಿಸಿದಂತೆ ಕಾಣುತ್ತದೆ. ಹಾಗೇ ಅಭಿರುಚಿಯನ್ನು ವರ್ಗಗಳೊಡನೆ ಸಮೀಕರಿಸುವ ಪ್ರಯತ್ನವೂ ಕಾಣಬರುತ್ತದೆ. ಹರ್ಬರ್ಟ್ ಗಾನ್ಸ್ ಎಂಬಾತ ಅಭಿರುಚಿ ಭೇದವು ಸಾಮಾಜಿಕ - ಆರ್ಥಿಕ ಮತ್ತು ಸೌಂದರ್ಯ ಮೌಲ್ಯಗಳ ಸಂಯೋಜನೆಯನ್ನು ಆಧರಿಸಿದೆ ಎನ್ನುತ್ತಾನೆ. ಹಾಗೇ ಸಂಸ್ಕೃತಿಯನ್ನೂ ಉನ್ನತ, ಮಧ್ಯ, ಕೆಳ, ಅರೆ ಜನಪದ ಇತ್ಯಾದಿಯಾಗಿ ವಿಂಗಡಿಸುತ್ತಾನೆ. ಈ ಭೇದಕಲ್ಪನೆ ಒಪ್ಪುವಂಥದಲ್ಲ. ಏಕೆಂದರೆ ಸಂಸ್ಕೃತಿಯಲ್ಲಿ ಮೇಲು - ಕೀಳು ಎಂಬುದಿಲ್ಲ. ನಾಗರಿಕತೆಯಲ್ಲಿ ಮುಂದುವರೆದ, ಹಿಂದುಳಿದ ಎಂದು ಹೇಳಬಹುದಷ್ಟೆ.

ಜನಪ್ರಿಯ ಕಲೆಗಳ ಬಗ್ಗೆ ವಾಲ್ಟರ್ ಬೆಂಜಾಮಿನ್‌ರಂತಹ ಮಾರ್ಕ್ಸಿಸ್ಟ್ ಚಿಂತಕರು, ತಾತ್ತ್ವಿಕ ಚಿಂತಕರಾದ ಥಿಯೊಡೋರ್ ಅಡೊರ್ನೊ, ಮ್ಯಾಕ್ಸ್ ಹಾರ್ಕೀಮರ್, ಕಲಾಚಿಂತಕರಾದ ಆರ್. ಜಿ. ಕಾಲಿಂಗ್‌ವುಡ್, ಗ್ರೀನ್‌ಬರ್ಗ್ ಮೊದಲಾದವರು ಬಹುವಾಗಿ ಚರ್ಚಿಸಿದ್ದಾರೆ. ಅವರೆಲ್ಲರ ಗಮನ ಸೆಳೆದಿರುವುದು ಜನಪದ ಕಲೆಗಳಲ್ಲ, ಸಾಂಪ್ರದಾಯಿಕ ಕಲೆಗಳಲ್ಲ; ಹದಿನೆಂಟನೇ ಶತಮಾನದಿಂದೀಚೆಗೆ ಸಮೂಹ ಸಮಾಜವನ್ನೇ ಉದ್ದೇಶವಾಗುಳ್ಳ ಹೊಸ ಮಾಧ್ಯಮಗಳು, ಯಾಂತ್ರಿಕ ಉತ್ಪಾದನೆಗಳು, ಛಾಯಾಚಿತ್ರ, ಕ್ಯಾಲೆಂಡರ್ ಮುಂತಾದ ಮುದ್ರಿತ ಚಿತ್ರಗಳು, ಚಲನಚಿತ್ರ, ರೇಡಿಯೊ, ಟಿ.ವಿ., ಧ್ವನಿಮುದ್ರಣಗಳು, ಗಣಕಗಳು, ಅಂತರ್ಜಾಲ, ಡಿಜಿಟಲ್ ಮುದ್ರಣ ಇತ್ಯಾದಿ. ಮುಖ್ಯವಾಗಿ ತಾಂತ್ರಿಕ ಬೆಳವಣಿಗೆ ಮತ್ತು ತತ್ಪರಿಣಾಮವಾದ ಸಾಮಾಜಿಕ ಬದಲಾವಣೆಗಳು ಕಾರಣ. ಪಾರಂಪರಿಕವಾಗಿ ಬಂದ ಜನಪದ ಕಲೆ, ಸಾಂಪ್ರದಾಯಿಕ ಶೈಲೀಕೃತ ಕಲೆಗಳು ಕಲೆಯ ಮೌಲ್ಯ ಉಳ್ಳವು ಎನಿಸಿಕೊಂಡಿವೆ. ಹೊಸ ಕಲಾ ರೂಪಗಳು, ಮಾಧ್ಯಮಗಳು ಕೆಳದರ್ಜೆಯ ಕಲೆ ಎಂದು ಟೀಕೆಗೆ ಒಳಗಾಗಿವೆ. ನೋಯೆಲ್ ಕ್ಯಾರಲ್ (೧೯೯೮) ಪ್ರಕಾರ ಈ ಸೈದ್ಧಾಂತಿಕ ಚರ್ಚೆಗಳು ಜನಪ್ರಿಯ ಕಲೆಗೆ ಸಂಬಂಧಿಸಿದುವಲ್ಲ, ಸಮೂಹ ಕಲೆಗಳ ಬಗ್ಗೆ ನಡೆದಿರುವಂಥವು. ಆತನ ದೃಷ್ಟಿಯಲ್ಲಿ ಸಮೂಹ ಕಲೆಯೆಂದರೆ ಸಗಟು ಉತ್ಪಾದನೆ ಮತ್ತು ಅಧಿಕ ಪ್ರಮಾಣದಲ್ಲಿ ವಿತರಣೆ ಮಾಡುವ ಕಲೆ. ಅದು ಜನಪ್ರಿಯ ಕಲೆಯ ಒಂದು ವರ್ಗ, ಜಾತಿ ; ಜನಸಾಮಾನ್ಯ ಕಲೆ ಅಥವಾ ಬಹುಜನರು ಇಷ್ಟಪಡುವ ಕಲೆ. ಇತಿಹಾಸದುದ್ದಕ್ಕೂ ಜನಪ್ರಿಯ ಕಲೆಗಳಿದ್ದುವು. ತತ್ತ್ವಜ್ಞಾನಿಗಳು, ಸೌಂದರ್ಯ ಮೀಮಾಂಸಕರು ವಿವರಿಸಿರುವ ಕಲೆ ಮತ್ತು ಸೌಂದರ್ಯ ಲಕ್ಷಣಗಳಿಗಿಂತ ಭಿನ್ನವಾದ ದೃಷ್ಟಿಯ ಪರಿಕಲ್ಪನೆಗಳಿದ್ದುವು. ಅದನ್ನು ಕ್ವೆಂಟಿನ್ ಬೆಲ್ 'ಸಾಮಾಜಿಕ ಸೌಂದರ್ಯ' ಎಂದಿದ್ದಾನೆ ; ಒಂದು ಸಮಾಜ ಯಾವುದನ್ನು ಸುಂದರ ಎಂದು

# ಜನಪ್ರಿಯ ಕಲೆ







ಬಹುವಾಗಿ ಭಾವಿಸುತ್ತದೋ ಅದು. ಅದೊಂದು ಬಗೆಯ ಸೌಂದರ್ಯ ಜಾಗೃತಿ. ಕಾಲದಿಂದ ಕಾಲಕ್ಕೆ, ಸಮಾಜದಿಂದ ಸಮಾಜಕ್ಕೆ ಬೇರೆ ಬೇರೆಯಾಗಿರಬಹುದು. ವೈಯಕ್ತಿಕ ಭಾವನೆಗಳು ಭಿನ್ನವಾಗಿದ್ದರೂ ಒಂದು ಅಭಿರುಚಿ ಸಾಮೂಹಿಕವಾಗಿ ಇರುವಂಥದು. ಆದರೆ ಆ ಬಗೆಯ ಸಾಂಪ್ರದಾಯಿಕ ಜನಪ್ರಿಯ ಕಲೆಯನ್ನು ಇಲ್ಲಿ ಚರ್ಚೆಗೊಳಪಡಿಸಿಲ್ಲ. ಕಳೆದೆರಡು ಶತಮಾನಗಳಲ್ಲಿ ಔದ್ಯಮಿಕ ಸಮಾಜಗಳಲ್ಲಿ ಬೆಳೆದುಬಂದ ಕಲೆ, ವಿಶಿಷ್ಟ ಸಮೂಹ ಲಕ್ಷಣದ ಕಲೆಯಾಗಿ ಟೀಕೆಗೆ ಒಳಗಾಗಿದೆ.

ಯೂರೋಪಿನಲ್ಲಿ ಕಲೆ ಮತ್ತು ಸೌಂದರ್ಯಗಳ ಚರ್ಚೆ ತತ್ತ್ವಶಾಸ್ತ್ರದ ಭಾಗವಾಗಿ ಬೆಳೆದು ಬಂದಿತು. ದೇಕಾರ್ತ್, ಹ್ಯೂಂ, ಕ್ಯಾಂಟ್ ಮೊದಲಾದ ತತ್ತ್ವಜ್ಞಾನಿಗಳ ಚಿಂತನೆಗಳು ಕಳೆದೆರಡು ಶತಮಾನಗಳ ಉದ್ದಕ್ಕೂ ಪ್ರಭಾವ ಬೀರಿದುವು. ಕ್ಯಾಂಟ್‌ನ ನಂತರ ನೈಜ ಕಲೆಯನ್ನು ಅದರ ಸೌಂದರ್ಯ ಗುಣಗಳಿಗಾಗಿಯೇ ಆಸ್ವಾದಿಸಬೇಕೆಂಬ ಭಾವನೆ ಬೆಳೆಯಿತು. ಆತ ಕಲೆಯ ಆಸ್ವಾದನೆ – ಡಿಸಿನ್ಟೆರೆಸ್ಟೆಡ್‌ನೆಸ್ – ಸ್ವಾರ್ಥರಹಿತ ಅಥವಾ ಅನಾಸಕ್ತ ಪರಿಭಾವನೆಯಿಂದ ಮಾತ್ರ ಸಾಧ್ಯ ಎಂದ. ಆಗ ಕಲಾನುಭವ. ಇದು ಭಾರತೀಯರಿಗೆ ಹೊಸತೇನೂ ಅಲ್ಲ. ನಮ್ಮ ಕಾವ್ಯ ಮೀಮಾಂಸೆಯಲ್ಲೂ ಈ ಚರ್ಚೆ ನಡೆಯಿತು. ಮಮ್ಮಟ ತನ್ನ ಕಾವ್ಯಪ್ರಕಾಶದಲ್ಲಿ ಕಾವ್ಯದಿಂದಾಗುವ ಪ್ರಯೋಜನಗಳನ್ನು ಹೇಳುತ್ತ, ''ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ...'' ಎಂಬಲ್ಲಿ, ಯಶಸ್ಸು, ಅರ್ಥಲಾಭ, ವ್ಯವಹಾರ ಅಥವಾ ಲೋಕಜ್ಞಾನ, ಅಮಂಗಳ ನಾಶಗಳ ಜೊತೆಗೆ ''ಸದ್ಯಃ ಪರ ನಿರ್ವೃತಯೇ'' ಎಂದೂ ಸೇರಿಸಿದ್ದಾನೆ. ಕಲಾಸ್ವಾದನೆಯ ಕಾಲದಲ್ಲಿ ಲೌಕಿಕ ಭಾವನೆಗಳನ್ನು, ವೈಯಕ್ತಿಕ ಭಾವನೆಗಳನ್ನು ದೂರೀಕರಿಸುವುದರಿಂದ ರಸಾನುಭವ, ಆನಂದ ಉಂಟಾಗುತ್ತದೆ ಎಂದಿದ್ದಾನೆ. ಅದು ಕಲೆಯ ಪರಿಭಾವನೆಯ ರೀತಿ. ಕ್ಯಾಂಟ್ ಕಲೆಯನ್ನು ಸ್ವಾಯತ್ತ ವಾದುದು ಎಂದ. ಒಂದು ಉದ್ದೇಶ, ಪ್ರಯೋಜನ, ಗುರಿಗೆ ಸಾಧನವಲ್ಲ. ಅದರಲ್ಲೂ ನೈತಿಕ ಅಥವಾ ಮತೀಯ ಉದ್ದೇಶಗಳಿಗೆ ಕಲೆ ಸಾಧನವಾಗಬಾರದು. ನೈಜ ಕಲಾರಚನೆ ಎಂಬುದು ವ್ಯಕ್ತಿ ಪ್ರತಿಭೆಯ ಮತ್ತು ಬೌದ್ಧಿಕ ಶಕ್ತಿಗಳ ಫಲ ಎಂದ. ಹೆಗೆಲ್ ಸಹ ಕಲೆ ವ್ಯಕ್ತಿ ಪ್ರತಿಭೆಯ ಸೃಷ್ಟಿ, ಉತ್ತಮ ಅಭಿರುಚಿಯಿದ್ದಲ್ಲಿ ಕಲೆಯನ್ನು ಗ್ರಹಿಸಲು, ಆಸ್ವಾದಿಸಲು ಎಂಬ ಭಾವನೆಯೂ ಇದರಿಂದ ಬೆಳೆಯಿತು. ಜನಪ್ರಿಯ ಕಲೆಗಳ ಹಿನ್ನೆಲೆಯಲ್ಲಿ ಇವು ಬಹುಮುಖ್ಯ ಅಂಶಗಳಾದುವು. ಯಾವುದೇ ಉದ್ದೇಶಕ್ಕೆ ಸಾಧಕವಾದ ಜನಪ್ರಿಯ ಕಲೆಗಳನ್ನು ಕಲೆಯೆನ್ನಲು ಕಲಾವಿಮರ್ಶಕರು ನಿರಾಕರಿಸಿದರು. ಉಪದೇಶಿಸುವ, ಮಾಹಿತಿ ನೀಡುವ, ಜನ ಬಯಸುವ, ನೋಡಿ ಮನರಂಜನೆ ಪಡೆಯುವ, ಅಥವಾ ಜನರ ಮನವೊಲಿಸುವ ಉದ್ದೇಶವುಳ್ಳ ಕಲೆಗಳನ್ನು ನೈಜ ಕಲೆಗಳಲ್ಲ, ಶುದ್ಧ ಕಲೆಗಳಲ್ಲ ಎನ್ನಲಾಯಿತು. ಒಟ್ಟಿನಲ್ಲಿ ಇವು ಮಾರುಕಟ್ಟೆಯ ಬೇಡಿಕೆಗೆ ಉತ್ಪಾದಿತವಾದ ಕಲೆಗಳು. ಕಳಪೆ ಮಟ್ಟದವು. ಇವನ್ನೇ ಕೆಳದರ್ಜೆ ಕಲೆ, ಜನಪ್ರಿಯ ಕಲೆ, ಸಮೂಹ ಕಲೆ, ಮನರಂಜನೆ ಕಲೆ ಮುಂತಾದ ಹೆಸರುಗಳಿಂದ ಕರೆದರು. ಒಟ್ಟಿನಲ್ಲಿ ಇವು ಮಾರಾಟದ ಸರಕುಗಳಂತೆ, ನೈಜ ಕಲೆಯಲ್ಲ, ಕೀಳುಮಟ್ಟದ್ದು ಎಂಬ ಭಾವನೆ ಉಂಟಾಗಿದೆ.



ರಾಫೇಲ್ ಅವರ ಕಲಾಕೃತಿ

'ಮನರಂಜನೆ ಕಲೆ' ಶಬ್ದ ಬಳಸಿದವನು ಆರ್. ಜಿ. ಕಾಲಿಂಗ್‌ವುಡ್ (೧೯೩೮). ಪ್ರಿನ್ಸಿಪಲ್ಸ್ ಆಫ್ ಆರ್ಟ್ ಗ್ರಂಥದಲ್ಲಿ ಶುದ್ಧ ಕಲೆ ಮತ್ತು ಕುಶಲಕಲೆಗಳ ಬಗ್ಗೆ ವಿಸ್ತಾರವಾಗಿ ಚರ್ಚಿಸಿದ್ದಾನೆ. ಇದು ಉಪಯುಕ್ತ ಕಲೆ. ಅದಕ್ಕೆ ಆಂತರಿಕವಾದ ಒಂದು ಮೌಲ್ಯವಿಲ್ಲ. ಉದ್ದೇಶಿತ ಗುರಿಯನ್ನು ಗಮನದಲ್ಲಿರಿಸಿ ಸೃಷ್ಟಿಯಾಗುವಂತಹುದು. ಅಲ್ಲಿ ಕೌಶಲವೇ ಪ್ರಧಾನ. ಇಂಜಿನಿಯರಿಂಗ್ ಕುಶಲತೆಯಂತೆ, ಪೂರ್ವ ನಿರ್ಧಾರಿತ, ಪೂರ್ವಯೋಜಿತ. ಒಂದು ಮಾದರಿಯ ಅನುಕರಣೆ, ನಿರ್ದಿಷ್ಟ ಪರಿಣಾಮ ಉಂಟುಮಾಡುವ, ಭಾವ ಉತ್ತೇಜಿಸುವ ಉದ್ದೇಶ ಉಳ್ಳದ್ದು. ಇವೆಲ್ಲ ಬಹುವಾಗಿ ಖುಷಿ, ಸಂತೋಷ ಕೊಡುವಂಥವು. ಪತ್ತೇದಾರಿ ಕಾದಂಬರಿಯೂ ಈ ಬಗೆಯದೆ; ಕುತೂಹಲ, ಭಯ ಮೂಡಿಸುವಂಥವು. ಲೌಕಿಕ ಮೌಲ್ಯ, ಲೌಕಿಕ ಭಾವಗಳನ್ನು ಉಳ್ಳವು. ಹೀಗಾಗಿ ಇವೆಲ್ಲ ಸಮುದಾಯದ ಅಗತ್ಯಕ್ಕೆ ಸಿದ್ಧವಾದುವು. ಕಾಲಿಂಗ್‌ವುಡ್ ಹೇಳುವಂತೆ ಕುಶಲಕಲೆಗಳು ಪೂರ್ವಯೋಜಿತವಾದರೂ, ಕೌಶಲ ಪ್ರಧಾನವಾದರೂ ಕಲೆಯಿಂದ ಹೊರತಾದುವಲ್ಲ. ವಿನ್ಯಾಸ, ಅಭಿರಚನೆ, ಅಲಂಕಾರಗಳೂ ಕಲೆಯ ಭಾಗವೇ, ಕಲೆಯೇ. ಯಾವುದೇ ಒಂದು ರೂಪದ – ಫಾರ್ಮ್ – ಕಲ್ಪನೆ ಸೃಜನಶೀಲತೆಯಿಲ್ಲದೆ ಸಾಧ್ಯವಿಲ್ಲ. ಅಲಂಕಾರ ಮತ್ತು ವಿನ್ಯಾಸಗಳ ನಿಸರ್ಗದ ವಸ್ತು, ನೋಟಗಳ ಅಮೂರ್ತೀಕರಣಗೊಂಡ ರೂಪಗಳು, ಹಾಗೆ ಕಲ್ಪಿಸುವಲ್ಲಿಯೇ ಪ್ರತಿಭಾ ಕಾರ್ಯವಿದೆ. ಅವು ನೇರವಾಗಿ ಅನುಭೂತಿ ಸಂವೇದನೆಗಳಿಗೆ ಆಕಾರ-ರೂಪ-ಬಣ್ಣ ಕೊಡುತ್ತವೆ. ಅವುಗಳಿಗೆ ಒಂದು ಚಲನೆ, ಚೈತನ್ಯ ಇರುತ್ತದೆ. ಚಲಿಸುತ್ತ ಬೆಳೆಯುತ್ತವೆ. ಅದರಿಂದ ಸಮತೋಲ, ಲಯವೂ ಸಾಧಿತವಾಗುತ್ತದೆ. ಮೂಲ ಮಾದರಿಯನ್ನು ರಚಿಸಿದಾತ ಸೃಜನಶೀಲ ಕಲಾವಿದನೇ. ಅನಂತರ ಅದನ್ನು ಅನುಕರಣ ಮಾಡುವವರದು ಕೌಶಲ; ಅದು ಕುಶಲ ಕಲೆ ಮಾತ್ರ. ಆದ್ದರಿಂದ ಜನಪ್ರಿಯ ಕಲೆ ಅಥವಾ ಸಮೂಹ ಕಲೆಗಳ ಬಗ್ಗೆ ವಿವೇಚಿಸುವಲ್ಲಿ ಮೇಲಿನ ಅಂಶಗಳೂ ಗಮನಾರ್ಹ. ಮುಖ್ಯ ಪ್ರಶ್ನೆಯೆಂದರೆ, ಸೌಂದರ್ಯ ಶಾಸ್ತ್ರೀಯ ದೃಷ್ಟಿಯಲ್ಲಿ, ಜನಪ್ರಿಯ ಕಲೆಗೆ ಕಲಾತ್ಮಕ ಸ್ಥಾನಮಾನ ಪಡೆಯುವ ಅರ್ಹತೆ ಉಂಟೇ, ಮತ್ತು ನೈಜ ಕಲೆಯ ಗುಣಮೌಲ್ಯಗಳಿವೆಯೇ ಎಂಬುದು; ಅಥವಾ ಆಂತರಿಕವಾಗಿ, ಅಗತ್ಯವಾದ ಸೌಂದರ್ಯ ದೃಷ್ಟಿಯಿಂದ ವಿಫಲವಾಗಿದೆಯೆ ಎಂಬುದು. ಇಲ್ಲಿ ಸ್ವಾರಸ್ಯವೆಂದರೆ ಜನಪ್ರಿಯ ಕಲೆಗಳ ಬಗ್ಗೆ ಸಹಾನುಭೂತಿಯುಳ್ಳವರು ಜನಪ್ರಿಯ ಕಲೆ ಶಬ್ದ ಬಳಸುತ್ತಾರೆ, ವಿರೋಧಿಗಳು ಅದನ್ನು ಸಮೂಹ ಕಲೆಯೆಂದು, ರುಚಿ ಭೇದವಿಲ್ಲದ ಗುಂಪಿನ ಕೀಳುರುಚಿಯ ಕಲೆಯೆಂದು, ತಿರಸ್ಕರಿಸುತ್ತಾರೆ.

ನೊವಿಟ್ಜ್ (೧೯೯೨) ಎಂಬಾತ ಜನಪ್ರಿಯ ಕಲೆ ಮತ್ತು ಉನ್ನತ ಕಲೆಗಳ ನಡುವೆ ಯಾವುದೇ ಮೂಲಭೂತ ಸೌಂದರ್ಯಾತ್ಮಕ ವ್ಯತ್ಯಾಸವಿಲ್ಲ ಎನ್ನುತ್ತಾನೆ. ರೂಪಸಂಬಂಧಿತ ಅಥವಾ ಭಾವಾತ್ಮಕವಾದ ಯಾವುದೇ ಲಕ್ಷಣಗಳ ವ್ಯತ್ಯಾಸವಿಲ್ಲ. ಆದ್ದರಿಂದ ಈ ಭೇದ ಕಲ್ಪನೆಯೇ ಕೃತಕ, ರಾಜಕೀಯ ಕಾರಣಗಳಿಂದಾದ ಸಾಮಾಜಿಕ ಸೃಷ್ಟಿ ಎಂಬುದು ಆತನ ಅಭಿಪ್ರಾಯ. ಉನ್ನತ ಕಲೆ ರಾಜಕೀಯ, ಸಾಮಾಜಿಕ, ನೈತಿಕ ವಿಚಾರಗಳಿಂದ ದೂರವಿರುವಂತಹುದಾದ ಕಾರಣ ಸ್ವೀಕರಣಯೋಗ್ಯ ಎಂದಿದ್ದಾನೆ. ಕಲೆಯು ರೂಪ ಮತ್ತು ವಿಷಯಗಳಿಗಿಂತ ಹೆಚ್ಚಿನದನ್ನು ಹೊಂದಿರುತ್ತದೆ. ಅದರಲ್ಲಿರುವ ಸಾಮಾಜಿಕ ಮತ್ತು – ಅಥವಾ ರಾಜಕೀಯ ಆಸಕ್ತಿಗಳು ಉತ್ತೇಜನಕಾರಿಯೇ, ಇಲ್ಲವೆ ದಮನಕಾರಿಯೇ ಎಂಬುದನ್ನೂ ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಅವೂ ಸಹ ಕಲಾಗ್ರಹಿಕೆಯ, ಆಸ್ವಾದನೆಯ ಭಾಗವೇ ಆಗುತ್ತವೆ. ಕಥನ ವಿಧಾನ, ಪ್ರತಿಪಾದನೆ, ಅಭಿವ್ಯಕ್ತಿ, ಏಕತೆ ಮುಂತಾದ ಸೌಂದರ್ಯ ದೃಷ್ಟಿಯ ಮುಖ್ಯ ಗುಣಲಕ್ಷಣಗಳು ಎರಡು ಬಗೆಯ ಕಲೆಗಳಿಗೂ ಅಗತ್ಯ. ಆದರೆ ಉನ್ನತ ಕಲೆಯಲ್ಲಿ ಸಂದೇಶವೆಂಬುದು ಸಂರಚನೆಯ ಆಂತರಿಕ ಭಾಗವಾಗಿರುತ್ತದೆ.

ಇದಕ್ಕೂ ಮೊದಲು ವಾಲ್ಟರ್ ಬೆಂಜಾಮಿನ್ (ಪ್ರಬಂಧ ೧೯೩೬, ಗ್ರಂಥ ೧೯೬೮) ಒಂದು ಮುಖ್ಯ ವಿಷಯ ಪ್ರಸ್ತಾಪಿಸಿದ್ದಾನೆ, ಚರ್ಚಿಸಿದ್ದಾನೆ. ಸಗಟು ಉತ್ಪಾದನೆಯ ಪರಿಣಾಮ ಕಲೆಯ ಮೇಲಾಗುತ್ತದೆ. ಮೂಲ ಕಲಾಕೃತಿಗೆ ಕಾಲ-ದೇಶಬದ್ಧ, ಪರಂಪರೆಯ ಒಂದು ಪ್ರಭಾಮಂಡಲ (aura) ಇರುತ್ತದೆ. ಆ ಪ್ರಭಾಮಂಡಲವನ್ನು ಅಳಿಸಿಹಾಕಿದರೆ ಅದರ ವೈಶಿಷ್ಟ್ಯ ನಾಶವಾಗುತ್ತದೆ. ಅದರ ಅಪೂರ್ವತೆಗೂ ಧಕ್ಕೆಯುಂಟಾಗುತ್ತದೆ. ತೈಲ ವರ್ಣಚಿತ್ರ-ಛಾಯಾಚಿತ್ರ, ನಾಟಕ-ಸಿನೆಮಾ ಇತ್ಯಾದಿ. ಕಲಾಕೃತಿಯೊಂದಿಗಿನ, ನಟನೊಂದಿಗಿನ, ನೇರ ಸಂಪರ್ಕ ಪ್ರತಿ ತೆಗೆದ ಛಾಯಾಚಿತ್ರಗಳಿಗಾಗಲೀ ಸಿನೆಮಾಗಳಿಗಾಗಲಿ ಇರುವುದಿಲ್ಲ. ಅಂತರ ನಿರ್ಮಿಸುತ್ತದೆ ಎನ್ನುತ್ತಾನೆ. ಪೂರ್ಣವಾಗಿ ಆತನ ವಾದವನ್ನು ಒಪ್ಪುವಂತಿಲ್ಲ. ಇಂದು ಡಿಜಿಟಲ್ ಯುಗದಲ್ಲಿದ್ದೇವೆ. ನಾವು ಮನೆಯಲ್ಲಿ ಕುಳಿತೇ ಜಗತ್ತಿನ ಕಲಾಗ್ಯಾಲರಿಗಳನ್ನು, ಮ್ಯೂಸಿಯಂಗಳನ್ನು ಸಂದರ್ಶಿಸಬಹುದು, ಕಲಾಕೃತಿಗಳನ್ನು ನೋಡಬಹುದು – ವೆಬ್‌ಸೈಟ್, ಸಿ.ಡಿ.ರೋಮ್‌ಗಳ ಮೂಲಕ. ಕಲಾಕೃತಿಗಳನ್ನು ಬಹುಸೂಕ್ಷ್ಮವಾಗಿ, ವಿವರಗಳನ್ನೂ, ವಿವಿಧ ಕೋನಗಳಿಂದ ನೋಡಬಹುದು. ನವ್ಯೋತ್ತರ ಕಾಲದಲ್ಲಿ ವಿಡಿಯೊ, ಅಡಕಬಿಲ್ಲೆ, ಅಂತರ್ಜಾಲ, ಜಾಹಿರಾತು, ಮುದ್ರಿತ ಅಂಚೆಕಾರ್ಡು, ಪೋಸ್ಟರುಗಳಿಂದಾಗಿ ಕಲೆಯ ಅನುಭವಗಳಲ್ಲಿ ಮೂಲಭೂತ ಬದಲಾವಣೆಗಳಾಗಿವೆ. ಆದರೆ ಇಂದಿಗೂ ಜನ ಕಲಾಗ್ಯಾಲರಿಗೆ ಹೋಗಿ ಮೂಲಕೃತಿ

ನೋಡಲು ಹಾಲುಗಟ್ಟುತ್ತಾರೆ. ಈಗಲೂ ಸಂಗೀತ ಕಛೇರಿಗಳಿಗೆ ಹಿಂದಿನಂತೆಯೇ ಜನರು ಆಕರ್ಷಿತರಾಗುತ್ತಾರೆ. ಇಲ್ಲಿ ಪ್ರಶ್ನೆ ವಾಣಿಜ್ಯೀಕರಣಕ್ಕೆ ಸಂಬಂಧಿಸಿದೆ. ಕಲಾತ್ಮಕ ಸಿನೆಮಾಗಳು ವಾಣಿಜ್ಯ ಫಾರ್ಮುಲಾ ಚಿತ್ರಗಳಿಗಿಂತ ಭಿನ್ನವಾದುವೆ. ಛಾಯಾಚಿತ್ರ ಸಹ ಕಲಾಕೃತಿಯಾಗಬಲ್ಲುದು, ಸೃಜನಶೀಲವಾದಾಗ. ಡಿಜಿಟೈಜ಼ೇಷನ್‌ನಿಂದ ಮ್ಯಾಟ್ರಿಕ್ಸ್‌ನಂತಹ ಸಿನೆಮಾಗಳಲ್ಲಿ ದೃಶ್ಯವಾಸ್ತವತೆಗಳ ಭ್ರಮಾಸೃಷ್ಟಿ ಹೆಚ್ಚಿದೆ. ಅವುಗಳಲ್ಲಿನ ಹೋರಾಟ, ಅನ್ಯಲೋಕ ನಾಶ, ನಾಯಕರ ಸಾಹಸ ಯಾವ ಸಂದೇಶ ಸಾರುತ್ತವೆ, ಯಾವ ರಾಜಕೀಯ ಪರಿಣಾಮ ಬೀರುತ್ತವೆ? ಇವುಗಳನ್ನು ಯಾರು ನಿರ್ಮಿಸುತ್ತಾರೆ, ಬಳಸುತ್ತಾರೆ, ನಿಯಂತ್ರಿಸುತ್ತಾರೆ ಎಂಬ ಕಡೆ ಗಮನ ಹರಿಸಲಿಲ್ಲ. ಬೃಹತ್ ಸಂಸ್ಥೆಗಳು ಲಾಭಗಳಿಕೆಯ ದೃಷ್ಟಿಯಿಂದ ಫಾರ್ಮುಲಾ ಕಸರತ್ತುಗಳ ಚಿತ್ರ ನಿರ್ಮಿಸುತ್ತಿವೆ. ಇವೂ ಸಹ ಪಿಜ್ಜಾ, ಕೆ.ಸಿ., ಕೋಲಾಗಳಂತೆ ಭೋಗಸರಕುಗಳು. ಟಿ.ವಿ. ನೋಡಲು ಏಕಾಗ್ರತೆ ಬೇಕಿಲ್ಲ, ಬೌದ್ಧಿಕತೆಯ (ಚಿಂತನೆಯ) ಅಗತ್ಯವಿಲ್ಲ – ಎನ್ನುತ್ತಾನೆ. ಬಂಡವಾಳಶಾಹಿ, ಅಧಿಕಾರ ಶಾಹಿಗಳು ಜನಸಮೂಹಕ್ಕೆ ಅವರ ಸ್ವಾತಂತ್ರ್ಯ, ಹಕ್ಕುಗಳನ್ನು ಇವುಗಳ ಮೂಲಕ ನೀಡುವ ಉದ್ದೇಶವನ್ನೇನೂ ಹೊಂದಿಲ್ಲ, ಅವರ ಭಾವೋದ್ರೇಕಗಳು ವ್ಯಕ್ತವಾಗಲು ಅವಕಾಶ ಕಲ್ಪಿಸುತ್ತವೆ; ಕಲೆ, ಸೌಂದರ್ಯ ವಿಷಯಗಳಲ್ಲಿನ ರಾಜಕೀಯ ಹುನ್ನಾರ ಯುದ್ಧದಲ್ಲಿ ಪರ್ಯವಸಾನವಾಗುತ್ತದೆ ಎಂಬುದು ಆತನ ಅಭಿಪ್ರಾಯ. ಇಷ್ಟಾದರೂ, ಆತ ಮಾರ್ಕ್ಸಿಸ್ಟ್ ಭೌತವಾದದ ಇತಿಹಾಸ ಪರಿಕಲ್ಪನೆಯಿಂದ ಪ್ರಭಾವಿತನಾಗಿ ಹೊಸ ಕಲಾರೂಪಗಳನ್ನು ಸ್ವಾಗತಿಸುತ್ತಾನೆ. ಆದರೆ ಅಡೊರ್ನೊ ಸಮೂಹ ಮಾಧ್ಯಮ ತಂತ್ರಗಳಿಂದ ರೂಪಗೊಂಡ ಕಲೆಗಳನ್ನು ಕುರಿತು 'ಕಲ್ಚರ್ ಇಂಡಸ್ಟ್ರಿ' ಸಂಸ್ಕೃತಿ ಉದ್ಯಮ ಎಂಬ ಶಬ್ದವನ್ನೇ ರೂಪಿಸಿ ಬಳಸಿದ್ದಾನೆ. ಸೌಂದರ್ಯ ಮೀಮಾಂಸೆ ಗ್ರಂಥದಲ್ಲಿ ಡಿ-ಏಸ್ಥೆಟೈಜ಼ೇಷನ್, ಅಸೌಂದರ್ಯೀಕರಣ ಶಬ್ದ ಸಹ ಸೃಷ್ಟಿಸಿದ್ದಾನೆ. ಕಲೆಯ ಗುಣಮೌಲ್ಯದ ನಾಶ ಎಂಬರ್ಥದಲ್ಲಿ.

ಜನಪ್ರಿಯ/ಸಮೂಹ ಕಲೆಗಳನ್ನು ನಕಾರಾತ್ಮಕ ಗುಣಮೌಲ್ಯವುಳ್ಳದ್ದು, ಕೆಳಮಟ್ಟದ ಅಭಿರುಚಿಗೆ ಸಂಬಂಧಿಸಿದ್ದು, ಆಲೋಚನೆ ಚಿಂತನೆ ವಿವೇಚನೆಗೆ ಎಡೆಗೊಡದ ನಿಷ್ಕ್ರಿಯ ಸ್ಪಂದನೆಗೆ ಸಂಬಂಧಿಸಿದ್ದು ಎಂದು ಸಂಪೂರ್ಣವಾಗಿ ತಿರಸ್ಕರಿಸುವವರಿರುವಂತೆ ಸ್ವಾಗತಿಸುವವರೂ ಇದ್ದಾರೆ. ಮ್ಯಾಕ್‌ಲುಹಾನ್ (೧೯೬೪) ಮಾಧ್ಯಮವೇ ಕಲೆಯ ಭಾಷೆ ಎನ್ನುತ್ತಾನೆ. ರೇಡಿಯೊ, ಟಿ.ವಿ., ಗಣಕಗಳಿಂದ 'ಜಾಗತಿಕ ಹಳ್ಳಿ' ಸೃಷ್ಟಿಯಾಗುತ್ತಿದೆ, ಎನ್ನುತ್ತಾನೆ. ಕೃತಿಯ ವಿಷಯಕ್ಕಿಂತ ಮಾಧ್ಯಮದ ಸಂರಚನೆ ಮುಖ್ಯ. ಹೊಸ ಮಾಧ್ಯಮಗಳಿಂದ ಸಂಪರ್ಕ ಹೆಚ್ಚುತ್ತದೆ, ಹೊಸ ಅಂತರರಾಷ್ಟ್ರೀಯ ಸಮುದಾಯ ಸಾಧ್ಯವಾಗುತ್ತದೆ, ಅದು ರಾಜಕೀಯ ಸೀಮಾರೇಖೆಗಳನ್ನು ದಾಟದ್ದಾಗುತ್ತದೆ, ಎನ್ನುತ್ತಾನೆ. ಆತನ ಒತ್ತು ಟಿ.ವಿ. ಕಡೆ, ಅವುಗಳನ್ನು ನಿಯಂತ್ರಿಸುತ್ತಿರುವವರು ಯಾರು ಎಂಬ ಬಗ್ಗೆ ಅಲ್ಲ. ಅವು ನಮ್ಮ ವೇದನಾನುಭವಗಳನ್ನು ಬದಲಿಸುತ್ತವೆ; ನಾವು ಕಳೆದುಕೊಂಡಿರುವ 'ಪ್ರಾದಿಮ' ಮಾನವಶಕ್ತಿಗಳನ್ನು ಮತ್ತೆ ಗಳಿಸುವಂತೆ ಮಾಡುತ್ತವೆ; ಸಮುದಾಯದ ಮೌಖಿಕ ಪರಂಪರೆಗೆ ಮತ್ತೆ ಹಿಂದಿರುಗುತ್ತೇವೆ; ನಮ್ಮ ಆಲೋಚನಾ ವಿಧಾನವನ್ನು ರೇಖಾತ್ಮಕತೆಯಿಂದ ಮೊಸಾಯಿಕ್ ವಿಧಾನಕ್ಕೆ ಬದಲಾಯಿಸುತ್ತವೆ ಎಂಬುದು ಆತನ ವಾದ. ವಿದ್ಯುನ್ಮಾನ ನಮ್ಮಲ್ಲಿ ಬಹು ಆಯಾಮದ ಕಾಲ-ದೇಶಗಳತ್ತ ಅಭಿಮುಖಿಯಾಗಿಸುತ್ತದೆ ಎನ್ನುತ್ತಾನೆ. ವಾಸ್ತವವಾಗಿ ಅಶ್ಲೀಲತೆಯ ಅಂಚಿನಲ್ಲಿ ಸರಿದಾಡುವ, ಕೆಲವು ಚಾನಲ್‌ಗಳ ಕ್ಷಣಿಕ ದೃಶ್ಯ ಸಂಯೋಜನೆಗಳು (ಎಂ.ಟಿ.ವಿ. ಇತ್ಯಾದಿ), ವಾಣಿಜ್ಯ ಜಾಹಿರಾತುಗಳು ಪರಿಣಾಮದ ಬಗ್ಗೆ ಭಯ ಮೂಡಿಸುತ್ತವೆ. ಏಕೆಂದರೆ ಅವು ಜಗತ್ತನ್ನು ಅಮೆರಿಕೆಯ ಉಪನಗರಗಳು, ವ್ಯಾಪಾರ ಕೇಂದ್ರಗಳಂತೆ ಮೆಕ್‌ಡೊನಲ್ಡ್ ಮಳಿಗೆಗಳ ಸಂದಣಿ ಸೃಷ್ಟಿಸುತ್ತವೆ, ಬದುಕು-ಸಂಸ್ಕೃತಿಗಳ ವೈವಿಧ್ಯ ಮಹತ್ವವನ್ನು ನಾಶಮಾಡಿ ಏಕರೂಪತೆಯನ್ನು ಸೃಷ್ಟಿಸುತ್ತವೆ. ಅದು ಒಂದು ಅತಿರೇಕ ಎಂಬುದು ನಿಜ. ಎಲ್ಲಾ ಜನಪ್ರಿಯ ಕಲೆಗಳೂ ನಕಾರಾತ್ಮಕವಾದುವೇ ಎಂಬುದೂ ಪರಿಶೀಲನಾರ್ಹ.

ಜನಪ್ರಿಯ ಕಲೆಗಳ ಬಗೆಗಿನ ಆರೋಪಣೆಗಳೆಲ್ಲ ಸೌಂದರ್ಯ ಮೀಮಾಂಸೆಯ ತಾತ್ತ್ವಿಕ ಚಿಂತನೆಗಳ ಹಿನ್ನೆಲೆಯಲ್ಲಿ ಬಂದುವಾಗಿವೆ. ಅವುಗಳ ವಿವೇಚನೆಯೂ ನಡೆದಿದೆ. ಕೆಲವು ಆರೋಪಗಳನ್ನು ಪರಿಶೀಲಿಸಬಹುದು. ಬಹುಪ್ರತಿ ತೆಗೆಯುವುದು ಜನಪ್ರಿಯ ಕಲೆಯ ಒಂದು ಲಕ್ಷಣವಷ್ಟೆ. ಮುದ್ರಣ ಅಥವಾ ಎರಕಗಳು ಅಸಂಖ್ಯವಾದ ಕಾರಣ ಮೂಲ ಕಲಾಕೃತಿಯೊಂದಕ್ಕೆ ಇರುವ ಸಾಂದರ್ಭಿಕ ಮೌಲ್ಯ ಇರುವುದಿಲ್ಲ ಎಂಬುದು ನಿಜ. ಅದರಲ್ಲೂ ಮುಖ್ಯವಾಗಿ ಸಗಟು ಉತ್ಪಾದನೆ, ಸಗಟು ವಿತರಣೆ ಒಬ್ಬ ವ್ಯಕ್ತಿಯ ಪ್ರತಿಭಾ ಸೃಷ್ಟಿಯಾಗಿರದೆ ಹಲವರ ನೆರವು, ಯಂತ್ರ-ತಂತ್ರಗಳ ಬಳಕೆಯಿಂದ ಸೃಷ್ಟಿಯಾಗುವಂತಹುದು. ನಾವು ಓಲೆಗರಿ, ಪ್ಯಾಪಿರೈಗಳಿಂದ ಮುದ್ರಿತ ಪುಸ್ತಕದವರೆಗೆ ಬಂದಿದ್ದೇವೆ. ಅದರಿಂದ ಓದುಗರ ಸಂಖ್ಯೆ ಹೆಚ್ಚಿತು, ಓದುವ ಅವಕಾಶ ಹೆಚ್ಚಿತು. ಮೂಲ ಲೇಖಕ ಮುಖ್ಯ, ಅನಂತರದ ಮುದ್ರಣ ಪ್ರಕ್ರಿಯೆಗಳಲ್ಲ. ನೃತ್ಯ ರಂಗನಾಟಕಗಳಲ್ಲಿ ಸೂತ್ರಧಾರ, ನಿರ್ದೇಶಕನಿದ್ದೂ ಹಲವರ ಸಹಕಾರ ಅಗತ್ಯವಲ್ಲವೆ? ನಾಟಕವನ್ನು ವಾಸ್ತವವಾಗಿ ಸಂಪೂರ್ಣ ರಂಗಭೂಮಿ ಎನ್ನುವುದಿಲ್ಲವೆ? ಸಿಂಫೊನಿ ಸಂಗೀತದಲ್ಲಿ, ಸಂಗೀತ ಕಛೇರಿಗಳಲ್ಲಿ ವಾದ್ಯಗಾರರ ನೆರವು ಬೇಕಲ್ಲವೆ? ಸಗಟು ಉತ್ಪಾದನೆಯ ಬೊಂಬೆಗಳು, ಅಲಂಕಾರ ವಸ್ತುಗಳದು ಬೇರೆಯೇ ದೃಷ್ಟಿ. ಆದರೆ ಧ್ವನಿ ಮುದ್ರಣ, ವೀಡಿಯೊ ಮುದ್ರಣಗಳಲ್ಲಿ, ನೇರ ಸಂಪರ್ಕ ಸಾಧ್ಯವಿಲ್ಲ. ಸಿನೆಮಾದ 'ಕಲೆ' ನಟ ನಿರ್ದೇಶಕರಷ್ಟೆ ಮಾಂಟೇಜ್ ಸಂಬಂಧವುಳ್ಳದ್ದು, ಅದು ಮಾಧ್ಯಮದ ಒಂದು ಭಾಗವೆ.



*ಹಡಪದ್ ಅವರ ಕಲಾಕೃತಿ*

ನೈಜ ರಸಾನುಭವ ಜನಪ್ರಿಯ ಕಲೆಯಿಂದ ಸಾಧ್ಯವಿಲ್ಲ; ಅದು ಕೃತಕ, ಪಲಾಯನವಾದಿ ಎಂಬ ಆಕ್ಷೇಪಣೆ ಇದೆ. ಇವುಗಳಿಂದ ಒದಗುವ ಸಂತೋಷ ಏಕತಾನತೆಗೆ ತಿರುಗಿ ಬೇಸರ, ಚಿಟ್ಟು ಹಿಡಿಸಿದಾಗ ಜನ ಟಿ.ವಿ. ಚಾನಲ್ ಬದಲಿಸುತ್ತಾರೆ; ಇದಕ್ಕೆ ಕಾರಣ ಸ್ವತಂತ್ರವಾಗಿ ಆಲೋಚಿಸಲು ಅವಕಾಶವಿಲ್ಲದಿರುವುದು, ಎನ್ನುತ್ತಾನೆ ಅಡೊರ್ನೊ. ಅದು ಇನ್ನೊಂದು ಸಮಸ್ಯೆ, ಆರೋಪ. ಸಾಮಾನ್ಯ ಜನರಿಗೆ ತೀವ್ರ ಅನುಭವ ಸಾಧ್ಯ. ಭಾವೋದ್ರೇಕವನ್ನೇ ಅಲೌಕಿಕ ರಸ, ಕಲಾನುಭವ ಎಂದು ಭ್ರಮಿಸುವ ಸಾಧ್ಯತೆ ಇದೆ. ಟಿ.ವಿ. ಧಾರಾವಾಹಿ, ವಾಣಿಜ್ಯ ಸಿನೆಮಾಗಳು ಕನಸಿನ ಪ್ರಪಂಚ ಸೃಷ್ಟಿಸಿ, ವಾಸ್ತವತೆಯ ಭ್ರಮೆ ಮೂಡಿಸುವುದರಿಂದ ದುಷ್ಪರಿಣಾಮಗಳು ಆಗುವುದನ್ನು ಗಮನಿಸಬಹುದು. ಆಳವಿಲ್ಲದ ಮೇಲುಮೇಲಿನ ತಿಳಿಗೊಳಿಸಿದ ಸರಳೀಕರಿಸಿದ ವಿಚಾರಗಳ ಪ್ರತಿಪಾದನೆಯಿಂದಾಗಿ ಬದುಕಿನ ನಿಜವಾದ ಸಮಸ್ಯೆಗಳನ್ನು ಗಂಭೀರವಾಗಿ ಚಿಂತಿಸುವುದಿಲ್ಲ. ಜನರಿಗೆ ಬೇಕಾದುದನ್ನು ನೀಡುತ್ತ ಕೃತಕ ತೃಪ್ತಿಯಲ್ಲಿಡುತ್ತವೆ ಎಂಬುದು ನಿಜ. ಸಂಕೀರ್ಣತೆ, ಸೂಕ್ಷ್ಮತೆ, ಅರ್ಥಸ್ತರಗಳಿಗೆ ಇಲ್ಲಿ ಅವಕಾಶವಿಲ್ಲ. ಇದಕ್ಕೆ ಕಾರಣ ಬಹು ಜನರನ್ನು ತಲುಪುವ, ತಾಗುವ ಗುರಿ ಹೊಂದಿರುವುದು. ಸಾಹಿತ್ಯದಲ್ಲೂ ಪಲ್ಪ್ ಲಿಟರೇಚರ್ ಕಳಪೆ ಸಾಹಿತ್ಯ ಉಂಟಲ್ಲವೇ? ಒಟ್ಟಿಗೆ ಇಂಥವನ್ನು ಬೆಡಗಿನ ಕಲೆ, ಥಳಕು ಕಲೆ ಎನ್ನುವುದೂ ಉಂಟು. ಆದರೆ ಜನ ದಡ್ಡರೇನಲ್ಲ, ವ್ಯತ್ಯಾಸ ತಿಳಿಯುವ ಸಾಮರ್ಥ್ಯವಿಲ್ಲದವರಲ್ಲ. ಅವರಿಗೆ ಅದು ಬೇಕಿದೆ, ಎಟುಕದ್ದನ್ನು ನಕಲಿಯಾದರೂ ಪಡೆವ ತೃಪ್ತಿಯಿಂದಾಗಿ ಇಂಥ ಸರಕು ಕಲೆಗಳಿಗೆ ಮುಗಿಬೀಳುತ್ತಾರೆ. ಆದರೆ ಒಂದು ಎಚ್ಚರಿಕೆಯೂ ಅಗತ್ಯ. ನಾವು ಕಾಣುವ ವಾದ್ಯಗೋಷ್ಠಿ ಮುಂತಾದುವು ಅಬ್ಬರದ ಧಬಾಧಬಿ ಸಂಗೀತವೇ. ಆದರೆ ಎಲ್ಲವೂ ಹಾಗಲ್ಲ. ಇಲ್ಲಿ ನೈಜ ಸುಗಮ ಸಂಗೀತ ಸೇರಿಸಬೇಕಿಲ್ಲ. ಹಾಗೇ ಕೆಲವು ಬಗೆಯ ಪಾಪ್ ಸಂಗೀತದಲ್ಲೂ ಲಯ ವ್ಯತ್ಯಯಗಳು, ತಾಂತ್ರಿಕ ಸೂಕ್ಷ್ಮ ಪರಿಣಾಮಗಳು ಇರುತ್ತವೆ. ಅವುಗಳದೇ ಸಂರಚನೆಯ ಚೌಕಟ್ಟು ಇರುತ್ತದೆ. ಸಾರಾಸಗಟಾಗಿ ತಿರಸ್ಕರಿಸಬೇಕೇ, ಯೋಚಿಸುವುದು ಅಗತ್ಯ.

ನೈಜಕಲೆ ಸೃಜನಶೀಲವಾದದ್ದು, ಜನಪ್ರಿಯ ಕಲೆಯಲ್ಲಿ ಸೃಜನಶೀಲತೆ ಇರುವುದಿಲ್ಲ ಎಂಬ ಆಕ್ಷೇಪಣೆ ಇದೆ. ಈ ಆಕ್ಷೇಪಣೆಯಲ್ಲಿ ಹಲವು ಅಂಶಗಳಿವೆ. ತಾಂತ್ರಿಕ ಉತ್ಪಾದನೆಯಿಂದ ಸರಾಸರಿ ಪ್ರಮಾಣೀಕರಣವಾಗುತ್ತದೆ, ಸೃಜನಶೀಲತೆಗೆ ಧಕ್ಕೆಯುಂಟಾಗುತ್ತದೆ, ಎಂದರೆ ವ್ಯಕ್ತಿ ಪ್ರತಿಭೆಯ ಅಭಿವ್ಯಕ್ತಿಗೆ ಮಿತಿಯೊದಗುತ್ತದೆ ಎಂಬ ವಿಚಾರ. ಇದು ಸಾಮೂಹಿಕ ಉತ್ಪಾದನೆ, ಒಬ್ಬರಿಗಿಂತ ಹೆಚ್ಚು ಜನರ ನಿರ್ಧಾರ ಇದಕ್ಕೆ ಕಾರಣ ಎಂಬುದು. ಈ ವಾದದ ಮೂಲ ರೊಮ್ಯಾಂಟಿಕ್ ದೃಷ್ಟಿಯಲ್ಲಿದೆ. ನಿಜ, ಅಸ್ಪಷ್ಟ ಭಾವಸ್ಥಿತಿಯಿಂದ ರಚನೆಗೆ ತೊಡಗುವ ಕವಿ, ಕಲಾವಿದ ರಚನೆಯ ಹಂತಗಳಲ್ಲಿ ಭಾವ

ಮತ್ತು ಚಿಂತನೆಗಳನ್ನು ಆವಿಷ್ಕಾರ ಮಾಡಿಕೊಳ್ಳುತ್ತ, ಹುಡುಕುತ್ತ, ಸ್ಫುಟಗೊಳಿಸಿ ಕೊಳ್ಳುತ್ತ ಹೋಗುತ್ತಾನೆ. ಕಲಾಕೃತಿ ಅಂತಿಮ ಸಮಗ್ರರೂಪ ತಳೆದಾಗಲೇ ಸ್ಪಷ್ಟತೆ. ಅವನಿಗೂ ಬೆರಗಾಗಬಹುದು. ಕಲೆಯ ರಚನಾ ಪ್ರಕ್ರಿಯೆ ಒಂದು ಬಗೆಯ ಅನ್ವೇಷಣೆ, ಹುಡುಕಾಟವೆ. ಇದೊಂದು ದೃಷ್ಟಿ ಮಾತ್ರ. ಆದರೆ ಇದಕ್ಕೆ ವಿರುದ್ಧವಾದುದೂ ಇದೆ. ಮೂಲತಃ ಎಲ್ಲ ಕಲೆಗಳೂ ವಿಧಿಯಾಚರಣೆಯ ಭಾಗ ವಾಗಿದ್ದುವು; ಜಾನಪದ ಸಾಂಪ್ರದಾಯಕ ಕತೆಗಳ ಮೂಲದಲ್ಲಿ ಸಮುದಾಯದ, ಸಾಮೂಹಿಕ ಆಯಾಮವೂ ಇದೆ. ದೇವಾಲಯಗಳು ಏಕವ್ಯಕ್ತಿ ನಿರ್ಮಾಣವಲ್ಲ, ಅವುಗಳಲ್ಲಿನ ಶಿಲ್ಪಗಳು ಗಿಲ್ಡ್, ಶ್ರೇಣಿ, ಕುಟುಂಬ ಸದಸ್ಯರಿಂದ ರಚಿತವಾದುವು. ಭಿತ್ತಿ ಚಿತ್ರಗಳಲ್ಲಿ, ಚಿಕಣಿ ಚಿತ್ರಗಳಲ್ಲಿ ಮುಖ್ಯ ಆಕೃತಿಗಳ ಕಲಾವಿದರು ಹಿರಿಯರು, ಗುರುಗಳಾದರೆ ಇತರ ಅಲಂಕಾರಿಕ ರಚನೆಗಳು ಬೇರೆಯವರವು. ಹಾಗೇ ಮೌಖಿಕ ಸಾಹಿತ್ಯ ಪರಂಪರೆ ಏಕವ್ಯಕ್ತಿ ಕೃತವೇ? ಆದ್ದರಿಂದ ವೈಯಕ್ತಿಕ, ಸಾಮೂಹಿಕ ಎಂಬುವು ಕಲೆಯ ಪ್ರಕಾರಗಳನ್ನು ಆಧರಿಸಿದ ಭಿನ್ನದೃಷ್ಟಿಗಳಾಗುತ್ತವೆ. ಇಲ್ಲಿನ ಇನ್ನೊಂದು ಪ್ರಶ್ನೆ, ಜನಪ್ರಿಯ ಎಂಬುದು. ಬಹು-ಜನ-ಪ್ರಿಯ ಎಂಬುದು ಬೇರೆ ಗುಂಪಿಗೆ ಇಷ್ಟವಾಗುವುದು ಎಂಬುದು ಬೇರೆ. ಗದುಗಿನ ಭಾರತ, ಮಂಕುತಿಮ್ಮನ ಕಗ್ಗ, ಕಾರಂತ, ಭೈರಪ್ಪನವರ ಕೃತಿಗಳೂ ಜನಪ್ರಿಯವೆ. ಯಕ್ಷಗಾನವನ್ನು ಸಾವಿರಾರು ಜನ ನೋಡುತ್ತಾರೆ. ಮಂಟೇಸ್ವಾಮಿ ಕಥಾ ಪ್ರಸಂಗವನ್ನು ಒಟ್ಟಿಗೆ ಹತ್ತು ಸಾವಿರ ಜನ ವೀಕ್ಷಿಸಿದ ದೃಷ್ಟಾಂತವಿದೆ. ಆದರೆ ಪತ್ತೇದಾರಿ, ರೋಮಾಂಚಕ, ಹಾರರ್ ಕಥೆ ಕಾದಂಬರಿಗಳು, ಬಾಂಡ್, ಹ್ಯಾರಿ ಪಾಟರ್ ಸಾಹಸಗಳು ಗುಂಪಿನ ಮಾದಕತೆಗೆ ಸಂಬಂಧಿಸಿದುವು, ಪರಿಣಾಮದಲ್ಲಿ ಚಟಗಳಂತೆ ಹಾನಿಕರ. ಇಲ್ಲಿ ಇನ್ನೂ ಒಳ ಸೂಕ್ಷ್ಮವಿದೆ. ಒಂದು ಸಮುದಾಯಕ್ಕೆ, ಒಂದು ಗುಂಪಿಗೆ ಇಷ್ಟವಾದದ್ದು ಬೇರೊಂದು ಸಮುದಾಯದ ಅಭಿರುಚಿಗೆ ಹೊಂದದಿರಬಹುದು. ಭಾರತದಂತಹ ದೇಶದಲ್ಲಿ ಸಂಸ್ಕೃತಿ ವೈವಿಧ್ಯವಿದೆ, ಆದರೂ ಕೆಲವು ವಿಷಯಗಳಲ್ಲಿ ಅಭಿರುಚಿ ಸಾಮ್ಯತೆಯೂ ಇದೆ. ಜನಪ್ರಿಯ ಶಬ್ದಾರ್ಥವನ್ನು ಸರಿಯಾಗಿ ಗ್ರಹಿಸಬೇಕಿದೆ.



ಕಾಂಡಿನ್‌ಸ್ಕೀ ಅವರ ಕಲಾಕೃತಿ

ಜನಪ್ರಿಯ ಕಲೆ ಒಪ್ಪಿತ, ಸಿದ್ಧ ಮಾದರಿಗಳಿಗೆ ಅನುಗುಣವಾಗಿರುತ್ತದೆ. ಎಂದರೆ ಫಾರ್ಮುಲಾ ಆಧಾರಿತ. ನೈಜ ಕಲೆ ಪರಿಕಲ್ಪನೆ ಉದ್ದೇಶಗಳಲ್ಲಿ ಮೌಲಿಕವಾದುದು ಎಂಬ ಭೇದ ಕಲ್ಪನೆ. ವಾಣಿಜ್ಯ ದೃಷ್ಟಿ, ಲಾಭಬಡುಕತನ ಗುರಿಯಾಗಿರುವಾಗ ಅದಕ್ಕೆ ಅನುಗುಣವಾದ ರೂಪ ಪಡೆಯುತ್ತದೆ, ಕಲೆ. ಉದ್ದೇಶಪೂರ್ವಕವಾದ ಸಂರಚನೆಯ ಆಯ್ಕೆಗಳಿರುತ್ತವೆ. ನಿರೂಪಣಾ ವಿಧಾನ, ಸಂಕೇತ, ಸನ್ನಿವೇಶ, ಸಂವಿಧಾನಗಳೆಲ್ಲ ಉದ್ದೇಶಿತ ಪರಿಣಾಮಕ್ಕೆ ತಕ್ಕಂತೆ ಇರುತ್ತವೆ. ಬಹುಸಂಖ್ಯಾತ ಪ್ರೇಕ್ಷಕರ ಮನಮುಟ್ಟುವ ಉದ್ದೇಶ. ಅಭಿರುಚಿ, ಬೌದ್ಧಿಕತೆ, ಸೂಕ್ಷ್ಮತೆಗಳನ್ನು ಕೆಳಹಂತದವರೆಗೂ ಇಳಿಸಲಾಗುತ್ತದೆ. ಕ್ಯಾಲೆಂಡರ್ ಕೃಷ್ಣ, ಶಿವರಿಗೂ ಸೃಜನಶೀಲ ಕಲಾರಚನೆಯ ಆಕೃತಿ ಗಳಿಗೂ ವ್ಯತ್ಯಾಸವಿರುತ್ತದೆ. ಕ್ಯಾಲೆಂಡರ್ ಆಕೃತಿಗಳಿಗೆ ಮೋಹಕತೆ, ಆಕರ್ಷಣೆ ಮುಖ್ಯ; ಅಶ್ಲೀಲವಾದರೂ ಚಿಂತೆಯಿಲ್ಲ, ಸತ್ವಾಭಿವ್ಯಕ್ತಿ ಮುಖ್ಯವಾಗುವುದಿಲ್ಲ. ಇಂದು ಸಿನೆಮಾಗಳಲ್ಲಿ ರೋಚಕ ದೃಶ್ಯಗಳಿದ್ದೇ ತೀರಬೇಕಿದೆ, ಬಾಕ್ಸ್ ಆಫೀಸ್ ಯಶಸ್ಸಿಗೆ. ದ್ವೀಪ, ಮೌನಿ, ಅರ್ಥ, ತಾಯಿ ಸಾಹೇಬಗಳು ಸಾರ್ವಜನಿಕ ಚಲನಚಿತ್ರ ಮಂದಿರಗಳಲ್ಲಿ ಪ್ರದರ್ಶಿತವಾಗುವುದೇ ಇಲ್ಲ. ಅವು ಫಾರ್ಮುಲಾ ಬಗ್ಗೆ ತಲೆಕೆಡಿಸಿಕೊಳ್ಳದ, ಭಾಗದ ಕಲಾಕೃತಿಗಳು.

ಕಲೆಯ ಸ್ವಾಯತ್ತತೆಯ ಪ್ರಶ್ನೆ ಬಹಳ ಚರ್ಚೆಗೆ ಒಳಗಾಗಿದೆ. ಜನಪ್ರಿಯ ಕಲೆಗೆ ಸ್ವಾಯತ್ತತೆ ಇಲ್ಲ ಎಂಬುದನ್ನು ಅಡೋರ್ನೊ ಸೇರಿದಂತೆ ಹಲವು ವಿಮರ್ಶಕರು ಹೇಳಿದ್ದಾರೆ. ಎಂದರೆ ಕಲೆಯೇ, ಕಲೆಯ ಆಸ್ವಾದನೆಯೇ ಪರಿಭಾವನೆಯೇ ಗುರಿಯಾಗಿ ಉಳ್ಳದ್ದಲ್ಲ ಎಂಬ ವಿಚಾರ. ಜನರ ಅಗತ್ಯಗಳನ್ನು, ಇಷ್ಟ, ಆಸೆಗಳನ್ನು ಪೂರೈಸುವ ರಂಜನೆಯನ್ನೇ ಗುರಿಯಾಗುಳ್ಳದ್ದು ಜನಪ್ರಿಯ ಕಲೆ. ಕ್ಯಾಂಟ್ ಹೇಳುವ ಅನಾಸಕ್ತಿ ಲಕ್ಷಣದ ಪ್ರಭಾವ. ಹಾಗೆಂದಾಗ, ಶುದ್ಧ ಕಲೆ ಸೌಂದರ್ಯ ಪ್ರಜ್ಞೆ ಇತ್ಯಾದಿ ಜೀವನ ವಿರೋಧಿಯೆ, ವಾಸ್ತವ ವಿರೋಧಿಯೆ ಎಂಬ ಪ್ರಶ್ನೆ ಏಳುತ್ತದೆ. ಇದನ್ನು ಒಪ್ಪಬಹುದೆ? ಕಲೆ ಮತ್ತು ಜೀವನ ಅವಿನಾಭಾಗವಾದುವು, ಅವಿಭಾಜ್ಯ ವಾದುವು ಎಂಬ ಚಿಂತನೆ ಆಧುನಿಕ ಪೂರ್ವಕಾಲದ ಭಾರತ ಮತ್ತು ಪೌರ್ವಾತ್ಯ ದೇಶಗಳಲ್ಲೂ, ಪಾಶ್ಚಾತ್ಯರಲ್ಲೂ ಇತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ 'ಕಲೆಗಾಗಿ ಕಲೆ' ವಾದ ಬಂದನಂತರ ಕಲೆಗೆ ಬದುಕಿನೊಡನಿದ್ದ ಪಾರಂಪರಿಕ ಸಂಬಂಧ ಕಳಚಿತು. ಇಂದು ನವ್ಯೋತ್ತರ ಕಾಲದ ಬೆಳವಣಿಗೆಗಳು ಇಂತಹ ಮಡಿವಂತಿಕೆಯ ಆದರ್ಶಗಳನ್ನು ವಿಘಟಿಸಿವೆ. ಸೌಂದರ್ಯ ಪ್ರಜ್ಞೆ ಎಂಬುದು ಬದುಕಿನ ಎಲ್ಲ ಕ್ಷೇತ್ರಗಳನ್ನೂ ವ್ಯಾಪಿಸುತ್ತಿದೆ.

ಮೇಲೆ ಕಲೆಯ ಆಸ್ವಾದನೆಯ ವಿಷಯ ಪ್ರಸ್ತಾಪಿಸಿದೆ. ಜನಪ್ರಿಯ ಕಲೆಗಳಲ್ಲಿ ಪ್ರೇಕ್ಷಕ ನಿಷ್ಕ್ರಿಯನಾಗಿರುತ್ತಾನೆ, ನೈಜಕಲೆಯಂತೆ ಸಕ್ರಿಯವಾಗಿ ಭಾಗವಹಿಸುವುದಿಲ್ಲ ಎನ್ನಲಾಗಿದೆ. ಇದು ಪರಿಭಾವನೆಗೆ ಸಂಬಂಧಿಸಿದೆ. ಕಲೆಯ ಗುರಿ ಸಮಾಜದ ಬಗ್ಗೆ ವಿಮರ್ಶಾತ್ಮಕ ದೃಷ್ಟಿಯನ್ನು ಮೂಡಿಸುವುದಾಗಿದೆ. ಆ ಮಟ್ಟಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ ವಾಸ್ತವಗಳಿಂದ ಮುಕ್ತಗೊಳಿಸುವುದಾಗಿದೆ ಎನ್ನುತ್ತಾನೆ, ಅಡೋರ್ನೊ. ಬಹುಶಃ ಆತನ ಇಂಗಿತ ವಾಣಿಜ್ಯ ಒತ್ತಡಗಳಿಂದ ಮುಕ್ತವಾಗಿರುವುದು. ಜನಪ್ರಿಯ/ಸಮೂಹ ಕಲೆಗಳ ಮೂಲೋದ್ದೇಶವೇ ವಾಣಿಜ್ಯ ದೃಷ್ಟಿಯಾಗಿರುವುದರಿಂದ ಪರಿಭಾವನೆಯಲ್ಲಿನ ಶೈಥಿಲ್ಯ ಸಹಜವೆನ್ನಬೇಕಾಗುತ್ತದೆ. ಪರಿಭಾವನೆಗೆ ಇನ್ನೊಂದು ಅಂಶ ರೂಪಕ್ಕೆ ಸಂಬಂಧಿಸಿದ್ದು. ಒಂದು ರೂಪ, ಫಾರ್ಮ್ ಇಲ್ಲ ಎನ್ನುವಲ್ಲಿ ಏಕತೆ ಇಲ್ಲ, ರೂಪ ಸಂಕೀರ್ಣತೆ ಎಂದೇ ಅರ್ಥ. ಇದು ಸರಳೀಕರಣವೆ. ಅರ್ಥಸ್ತರಗಳ ಸಂಕೀರ್ಣತೆ, ಭಾಗಗಳ ಪರಸ್ಪರ ಸಂಬಂಧ, ಅವುಗಳೊಂದೊಂದರ ಸಮಗ್ರ ರೂಪದೊಂದಿಗಿನ ಸಂಬಂಧ ಇತ್ಯಾದಿ. ಬೂರ್ದೋ ಎಂಬಾತ ಜನಪ್ರಿಯ ಕಲೆ ತನ್ನ ರೂಪವನ್ನು ವಿಷಯ ಮತ್ತು ಕಾರ್ಯೋದ್ದೇಶಕ್ಕೆ ಅಧೀನವಾಗಿಸಿಕೊಳ್ಳುತ್ತದೆ ಎನ್ನುತ್ತಾನೆ. ಸರಳೀಕರಣದಿಂದಾಗಿ ರೂಪ ಸಂಕೀರ್ಣತೆ ಸಾಧ್ಯವಿಲ್ಲ. ಆದರೆ ಸಾಮಾನ್ಯರು ಸಂಕೀರ್ಣತೆಯನ್ನು ಮೆಚ್ಚಲಾರರು, ಗ್ರಹಿಸಲಾರರು ಎನ್ನುವಂತಿಲ್ಲ. ಉಲ್ಲೇಖ, ಹೋಲಿಕೆಗಳನ್ನು ಗುರುತಿಸಬಲ್ಲರು. ಲಾಭದ ಮೇಲಿನ ಕಣ್ಣು, ಅಂತಹ ಪ್ರಯೋಗಗಳಿಗೆ ಅಡ್ಡಿಯಾಗುತ್ತದೆ.

ಜನಪ್ರಿಯ ಕಲೆ ಜನಸಮೂಹದ ಆಸೆ, ಆಕಾಂಕ್ಷೆ, ಪ್ರಶ್ನಿಸಲಾಗದ ನಂಬಿಕೆ, ಒಲವು, ನಿರೀಕ್ಷೆಗಳನ್ನು ಪೂರೈಸುವಂತಹುದು. ಅವುಗಳ ಆಸ್ವಾದನೆಯ ಸಮಕಾಲೀನ ವಿದ್ಯುನ್ಮಾನ ಯುಗದ ದೃಷ್ಟಿ ಮತ್ತು ಪ್ರವೃತ್ತಿಗಳು ವಿಭಿನ್ನವಾಗಿವೆ. ಕಲೆ ಮತ್ತು ಸೌಂದರ್ಯಗಳ ಬಗ್ಗೆಯೇ, ಕಲೆಯ ಆಸ್ವಾದನೆ ಬಗೆಗೇ ಹೊಸನೋಟದಿಂದ ವಿವೇಚಿಸಲು ಪ್ರೇರಿಸುತ್ತಿವೆ. ಸೌಂದರ್ಯ ಮೀಮಾಂಸೆಯ ತಾತ್ತ್ವಿಕ ಚರ್ಚೆಗಳೂ ಪಲ್ಲಟಗೊಳ್ಳತೊಡಗಿವೆ, ಇವು ಎತ್ತುವ ಪ್ರಶ್ನೆಗಳಿಂದಾಗಿ. ರಿಚರ್ಡ್ ಷುಸ್ಟರ್‌ಮನ್ (೧೯೯೨) ಆ ಪರಿಕಲ್ಪನೆಗಳೆಲ್ಲ ಹಳೆಯವು, ಮಿಥ್ಯವಾದುವು; ಅವು ಜನಪ್ರಿಯ ಸೌಂದರ್ಯ ದೃಷ್ಟಿಯನ್ನು ಪರಿಗಣಿಸುವುದಿಲ್ಲ, ಅವು ಪೂರ್ಣ ನಕಾರಾತ್ಮಕವಾದುವಲ್ಲ ಎನ್ನುತ್ತಾನೆ. ನಿಜ, ಅವು ಕಾಲ, ಸಮಾಜ ಬದ್ಧ, ಮೇಲು ಮೇಲಿನದೇ ಆದರೂ ಅವರಿಗೆ ಹಿಡಿಸುವ ನಂಬಿಕೆ ಮೌಲ್ಯಗಳನ್ನು ಪ್ರತಿಪಾದಿಸುತ್ತಲೇ ಒಂದು ಅನನ್ಯತೆಯನ್ನು, ಐಡೆಂಟಿಟಿಯನ್ನು ಸೃಷ್ಟಿಸುತ್ತವೆ ಎಂಬುದು ಆತನ ಅಭಿಪ್ರಾಯ. ಯಾರ ಐಡೆಂಟಿಟಿ? 'ಜಾಗತಿಕ ಹಳ್ಳಿ'ಯಾಗಿಸುವ ತೀವ್ರಗತಿಯಲ್ಲಿ ಸಾಗುತ್ತಿರುವಾಗ ಯಾವ ಬಗೆಯ ಅನನ್ಯತೆ ಸಾಧ್ಯ? ವಾಣಿಜ್ಯ ಸಾಮ್ರಾಟರದೆ? ಈ ನಡುವೆ ಆಗುತ್ತಿರುವ ದುಷ್ಪರಿಣಾಮಗಳಿಗೆ ಏನು ಉತ್ತರ, ಪರಿಹಾರ? ನಿರಂತರ ಜನರ ಮುಗ್ಧತೆಯ ಶೋಷಣೆಯಾಗಲು ಬಿಡಬೇಕೆ ಎಂಬುದನ್ನೂ ಸಮೂಹ ಕಲೆಗಳ ಹಿನ್ನೆಲೆಯಲ್ಲಿ ಯೋಚಿಸಬೇಕಿದೆ.

ಪ್ರೊ|| ಎಂ. ಎಚ್. ಕೃಷ್ಣಯ್ಯ
ನಂ. ೧೮೨, ೧ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

# ಸಾಂಸ್ಕೃತಿಕ ಬಂಗಾಲದ ಅಂತರಾತ್ಮಗಳು

**ಬಾ**ವುಲ-ಎಂಬುದು ಬಂಗಾಳಿ ಬದುಕಿನ ಸುಷುಪ್ತಾವಸ್ಥೆಯಲ್ಲಿನ ಜಾಗೃತ ಚೈತನ್ಯ. ಸಾಂಸ್ಕೃತಿಕ ಬಂಗಾಳದ ಶಾಲ್ಮಲ ಅದು. ಸರಿ ಸುಮಾರು ಸಾವಿರ ವರುಷಗಳ ಇತಿಹಾಸದಡಿಯಲ್ಲಿ ಎಂದೋ ಒಮ್ಮೆ ರಭಸವಾಗಿ ಹರಿದು ಮಂದಗಮನೆಯಾಗಿ, ಕ್ರಮೇಣ ಗುಪ್ತಗಾಮಿನಿಯಾದ ದರ್ಶನ ಧಾರೆ. ಹಿಂದೂ ಅಲ್ಲದ, ಬೌದ್ಧ ಅಲ್ಲದ, ಇಸ್ಲಾಂ ಅಲ್ಲದ... ಆದರೆ ಏಕಕಾಲಕ್ಕೆ ಈ ಮೂರೂ ಧರ್ಮಗಳ ಸಾರವನ್ನೆಲ್ಲ ಮನುಷ್ಯತ್ವದ ಲಾಳಿಕೆ-ಜರಡಿಯಲ್ಲಿ ಸೋಸಿ ಕೆಸರನ್ನು ತೆಗೆದು ಭಾರತೀಯ ಬದುಕಿಗೆ ಅಮೃತಮತಿಯನ್ನಿತ್ತ ಅನುಭೂತಿ.

ಬಾವುಲ ಪದದ ಜಾತಕ ಜಾಲಾಡಲೆಂದು ಭಾಷಾಶಾಸ್ತ್ರದ ನೀರಿಗಿಳಿದರೆ ಎರಡು ದಡಗಳ ಸ್ಪರ್ಶ ಏಕಕಾಲಕ್ಕೆ. ಅದು, ಸಂಸ್ಕೃತ ಮೂಲದ 'ಬಾತುಲ್' ಎಂಬುದೊಂದಾದರೆ, ಅರೇಬಿಕ್ ಮೂಲದ 'ಔಲ್' ಎಂಬುದೊಂದು. ಬಾತುಲ್ ಎಂದರೆ ಹುಚ್ಚಾ ಎಂತಲೂ, ಔಲ್ (ಔಲಿಯಾ=ಸಂತ) ಎಂದರೆ ಅಸಹನೆ ಎಂತಲೂ ಅರ್ಥೈಸುತ್ತವೆ ಈ ಭಾಷೆಗಳು. ಹಾಗೆ ಕರೆಯಿಸಿಕೊಂಡ ಬಾವುಲರು ಈ ಹುಚ್ಚುತನ ಮತ್ತು ಅಸಹನೆಗಳಂತಹ ಸ್ಥಿತಿಗಳ ಮೂಲಕ ಹಿಂದೂ-ಮುಸ್ಲಿಂ ಕರ್ಮಠತನವನ್ನು ಮತ್ತು ಅಹಂಗಳನ್ನು ತಿರಸ್ಕರಿಸಿದವರು.

೧೯೫೦ರಿಂದ ೧೨೦೨ರ ಅವಧಿಯ ಬಂಗಾಳಿ ಭಾಷಿಕ ಸಮುದಾಯಗಳ ಒಳಸ್ತರಗಳಲ್ಲಿ 'ಸೂಫಿ' ಪ್ರಭಾವ ವ್ಯಾಪಿಸಿಕೊಂಡಿತು. ಇದರ ಪರಿಣಾಮ ಎಂಬಂತೆ ನಂತರದ ಇಸ್ಲಾಮಿಕ್ ದೊರೆಗಳ ಆಡಳಿತಾವಧಿಯ ಕಲೆ ಮತ್ತು ಸಾಹಿತ್ಯಗಳ ಆಶಯ-ಆಕೃತಿಗಳಲ್ಲಿ ನಿಚ್ಚಳ ಹೊಸತನ ಕಾಣಿಸಿಕೊಂಡಿತು. ಗಿಯಾಸುದ್ದೀನ್, ಆಜಂಷಹಾ ಮತ್ತು ಬಂಗಾಳದ ನವಾಬರ ಆಸ್ಥಾನಗಳು ಪರ್ಶಿಯಾದ ಕವಿಗಳಿಗೆ ಆಶ್ರಯ ನೀಡಿದವು. ಹಾಫೀಜ್ ಅವರಲ್ಲೊಬ್ಬ ಸುಪ್ರಸಿದ್ಧ ಕವಿ. ಬಹುಶಃ ಅವು ಘಜಲ್‌ಗಳ ಆರಂಭದ ದಿನಗಳಾಗಿರಬೇಕು, ಅದು ೧೩೭೯ರ ಆಸುಪಾಸಿನಲ್ಲಿ. ಹೀಗೆ ಪರ್ಶಿಯನ್ ಕವಿಗಳು ಅರಮನೆಗಳ ಜಾಡುಹಿಡಿದು ಆಸ್ಥಾನ ಸುಖ ಗಿಟ್ಟಿಸಿಕೊಳ್ಳುತ್ತಿದ್ದ ಹೊತ್ತಿನಲ್ಲೆ ಸೂಫಿಗಳು ಆ-ಸ್ಥಾನದತ್ತ ತಲೆಹಾಕಿಯೂ ಮಲಗದೇ ಜನಮನಗಳಲ್ಲಿ ಮೈ ಮರೆತರು. ಹಾಗೆಂದೇ ಜನಪರರೂ ಜನಪ್ರಿಯರೂ ಆದರು. ಹಿಂದುವಲ್ಲದ, ಮುಸ್ಲಿಂ ಅಲ್ಲದ ಆದರೆ ಹಿಂದೂ ಮುಸ್ಲಿಂ ಜನಪದರಿಬ್ಬರಿಗೂ ತಮ್ಮವರೇ ಎಂದೆನಿಸಿದ ಸಾಂಸ್ಕೃತಿಕ ಸಂದರ್ಭ 'ಸತ್ಯಪೀರ್'ರಂತಹವರನ್ನು ರೂಪುಗೊಳಿಸಿತು. ಈ 'ಸ್ವರೂಪ'ವೇ ಬಂಗಾಳಿ ಸಮಾಜವನ್ನು ಒಳ ಬದಲಾವಣೆಗೊಳಪಡಿಸಿತು.

ಇದರ ಪರಿಣಾಮ ಸಾಮಾನ್ಯವಾದುದೇನಾಗಿರಲಿಲ್ಲ. ಈ ತನಕ ಬಂಗಾಳದ ಸಾಂಸ್ಕೃತಿಕ ನೆಲಪದರುಗಳಲ್ಲಿ ಬೇರುಬಿಟ್ಟಿದ್ದ ತಾಂತ್ರಿಕರದೊಂದಿಗೆ ಮುಖಾಮುಖಿಯಾಗ ಬೇಕಾಯ್ತು. ಸೂಫಿಗಳ 'ಏಕತಾನ ಗೀತೆ'ಗಳೇ ಅವರ ದರ್ಶನವನ್ನು ಜನಸಮೂಹದತ್ತ ಕೊಂಡೊಯ್ಯುವ ದಾರಿ ಸೃಷ್ಟಿಸಿದವು.

ಬಾವುಲರ ಬಗ್ಗೆ ಯೋಚಿಸುತ್ತಿದ್ದಂತೆಯೇ ಸೂಫಿಗಳು ಆವರಿಸಿಕೊಂಡುಬಿಡುತ್ತಾರೆ. ಬಾವುಲರು ಅರ್ಥವಾಗಬೇಕಾದರೆ ಆ ಮುಂಚಿನ ಸೂಫಿಗಳ ಪರಿಚಯವೂ ಇರಬೇಕು.




ಗಾಂಧೀಜಿಯ ರಾಮರಾಜ್ಯ!

**ಅಚಿನ್ ಪಂಖಿ**

ದೇವರು ಗಂಡು, ಭಕ್ತ ಹೆಣ್ಣು, ದೈವ ಮತ್ತು ಭಕ್ತನ ಸಂಬಂಧ ಪತಿ ಪತ್ನಿ ಸಂಬಂಧ, ಅವಿಭಜಿತ-ಅಂತರ್ಗತವೆಂದೇ ಪ್ರತಿಪಾದಿಸಿದ ಬಾವುಲರು ವೈವಾಹಿಕ ಬದುಕನ್ನು ಒಪ್ಪಿಕೊಂಡು ಭವಸುಖವನ್ನು ಅನುಭವಿಸಿ ಸಂಸಾರವೂ ಸಾಧನೆಯ ಒಂದು ಅಂಗವೆಂದೇ ನಂಬಿದರು. ಪ್ರತಿ ಬಾವುಲನಲ್ಲಿ 'ಅಚಿನ್ ಪಂಖಿ' ಎಂಬ ಅಮೂರ್ತ 'ಜ್ಞಾನ ಪಕ್ಷಿ' ಜೀವಿತದ ಪ್ರತಿ ಕ್ಷಣದಲ್ಲೂ ರೆಕ್ಕೆ ಬಿಚ್ಚಿ ಹಾರುತ್ತಿತ್ತು. ಈ ಅಚಿನ್ ಪಂಖಿ (ಪ್ರೇಮ ಭಾವ-ಭಕ್ತಿಭಾವ)ಯನ್ನು ಆವಾಹಿಸಿಕೊಂಡು ಹೊರಗನ್ನು ಕಾಣಿಸಿದರು. (ಮನುಷ್ಯನೇ ಅಂತಿಮ, ಇದರಾಚೆ ಇನ್ನೇನಿಲ್ಲ ವಿಶ್ವದಲ್ಲಿರುವುದೆಲ್ಲಾ ವ್ಯಕ್ತಿಯೊಳಗಿದೆ ಎಂದ ಚಂಡಿದಾಸ, ವಿದ್ಯಾಪತಿ ಇವರುಗಳು ಬಹುತೇಕ ತಾಂತ್ರಿಕರೇ ಆಗಿದ್ದರು. ಜ್ಞಾನವೆಂಬುದು ದೇವರಿಂದಲ್ಲ ಗುರುವಿನಿಂದ ಎಂದೇ ನಂಬಿದ್ದರು)

ಆನಂದದ ಕಲ್ಪನೆಯನ್ನು (ನಿರಾಕಾರ ಬ್ರಹ್ಮ) ತೈತ್ತಿರೀಯ ಉಪನಿಷತ್‌ನಿಂದ ಪಡೆದ ಬಾವುಲರು ಬುದ್ಧನ 'ಸಹಜಿಯೋ'ದ ಪ್ರೇರಣೆಗೂ ಒಳಗಾದರು. ವೇದದೊಂದಿಗೆ ನಂಟಿಟ್ಟುಕೊಂಡೇ ವೇದಾಚರಣೆಯನ್ನು ವಿರೋಧಿಸಿದರು. ತಾಂತ್ರಿಕರ (ತಂತ್ರದ) ನಿಗೂಢ ಆಚರಣೆಗಳನ್ನು ತಳ್ಳಿಹಾಕಿದರು. ಸಾಂಖ್ಯ, ಪಾತಂಜಲ, ಬೌದ್ಧ, ಅದ್ವೈತ, ವೇದಾಂತಗಳಲ್ಲಿನ 'ಬೇಕಾದ್ದನ್ನು' ಪಡೆದು ಭಾಗಶಃ ನಿರಾಕರಿಸಿದರು. ಹೀಗೆ ಬಾವುಲರು ತಾಂತ್ರಿಕ, ಬೌದ್ಧ, ವೈದಿಕ ಹಾಗೂ ಇಸ್ಲಾಮಿಕ್ ಜ್ಞಾನ ಶಿಸ್ತುಗಳೊಂದಿಗೆ ಕೊಡು-ಕೊಳೆಯನ್ನು ನಡೆಸಿದರು. ಹಾಗೆಂದೇ ಇವರು ಮುಸಲ್ಮಾನರಾಗಲಿ, ಹಿಂದೂಗಳಾಗಲಿ ಆಗಲಿಲ್ಲ. ಒಂದು ರೀತಿಯಲ್ಲಿ ಇಸ್ಲಾಂ ಮತ್ತು ವೈದಿಕ ಬಂಡಾಯಗಾರರ ಸಂಘವಾಯಿತು 'ಬಾವುಲ'. ಆರಂಭದ ದಿನಗಳಲ್ಲಿ 'ವೈಷ್ಣವ ಬಾವುಲ, ಬೌದ್ಧ ಬಾವುಲ, ತಾಂತ್ರಿಕ ಬಾವುಲ, ಮತ್ತು ಫಕೀರ ಬಾವುಲ'ರೆಂದು ಗುರುಮೂಲದಿಂದ ಬಾವುಲರು ಗುರುತಿಸಿಕೊಂಡರು.

ಬಾವುಲರ 'ಮಾಧ್ಯಮ'ವೆಂದರೆ ಹಾಡು ಮತ್ತು ನೃತ್ಯಗಳು. ಇವರು ತಮ್ಮ ತತ್ವಗಳನ್ನೇ ಗೀತೆಯನ್ನಾಗಿಸಿದರು. ಹಾಡುತ್ತಾ ಮೈಮರೆತು ಕುಣಿಯುವುದು ಬಾವುಲರ ಸಾಮಾನ್ಯ ಲಕ್ಷಣವಾಗಿತ್ತು. ಇದರ ಅತೀವ ಪ್ರಭಾವದಿಂದಾಗಿ ಬಾವುಲ ಗೀತೆಗಳ 'ಧುನ್' ಬಂಗಾಳದ ಸಾಂಸ್ಕೃತಿಕ ಅಸ್ತಿತ್ವದ ಧಾತುವಾಯಿತು. ಅದು ಜನಪದೀಯವೇ ಆಗಿತ್ತು. ಅಂತೆಯೇ ಬಾವುಲರ ಈ 'ಧುನ್'ನಿಂದ ಪ್ರಭಾವಿತರಾದ ರವೀಂದ್ರರು ಹೊಸ ಸಂಗೀತ ಪ್ರಕಾರವೊಂದರ (ರಬೀಂದ್ರ ಸಂಗೀತ) ಸೃಷ್ಟಿಕರ್ತರಾದರು. ಇವರ ಮೇಲೆ ಬಾವುಲರ ಪ್ರಭಾವ ಹೆಚ್ಚಿನದು. ಬಾವುಲರಂತೆಯೇ ವೇಷ ಹಾಕಿದರು, ಬಾವುಲರಾಗಿಯೇ ಕುಣಿದರು, ಹಾಡಿದರು. ಪರಮಹಂಸರಂತೂ 'ನಾನೂ ಬಾವುಲ'ನೆಂದು ಕರೆದುಕೊಂಡರು. ಹೀಗೆ ಚೈತನ್ಯ, ಚಂಡಿದಾಸ, ವಿದ್ಯಾಪತಿ ಇವರಿಂದ ಹಾದು ರವೀಂದ್ರರು ಪರಮಹಂಸರನ್ನೂ ಒಳಗೊಂಡ 'ಬಾವುಲ ಪ್ರಜ್ಞೆ' ಬಂಗಾಳದ ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಸ್ತರಗಳಾಳದಲ್ಲಿ ಸೇರಿಕೊಳ್ಳುವಂತಾಯಿತು.

ತಾಂತ್ರಿಕ ಪಂಥದ ಕೇಂದ್ರವಾದ (ಚಕ್ರೇಶ್ವರ-ತಾರಾಪೀಠ) ಬಂಗಾಳಿ ಸಮಾಜ ಒಂದೆಡೆ ವೈದಿಕವೂ ಇನ್ನೊಂದೆಡೆ ಆರ್ಯೇತರ ಆದಿವಾಸಿ ಸಮುದಾಯಗಳಾದ ಕೋಲ, ಮುಂಡ, ದ್ರಾವಿಡ, ಟಿಬೇಟಿಯನ್ ಮೂಲದ ಮಂಗೋಲಿಯನ್ ಕಿರುಗಾಲುವೆಗಳ ಮೂಲಕ ಹರಿದುಬಂದ ಜೀವನ ಧರ್ಮವೂ ಒಂದರೊಳಗೊಂದು ಬೆರೆತು ಸಮ್ಮಿಶ್ರ ಸಂಸ್ಕೃತಿಯ ಸ್ವರೂಪ ಪಡೆಯಿತು ಎನಿಸುತ್ತದೆ. ಗೋರಖನಾಥ, ಮಚ್ಚೇಂದ್ರನಾಥ, ಮತ್ತು ಸೂಫಿಗಳ ನಡುವಿನ ಕೊಡು-ಕೊಳೆ ಸಂಬಂಧದಿಂದಾಗಿ ಈ ಭಾಗದ 'ಇಸ್ಲಾಮೀತನ' ಕೂಡ ತಿಳಿಯಾಯಿತು. ಬಾಂಗ್ಲಾ (ದೇಶ)ದಲ್ಲಿ ಈಗಲೂ ಢಾಕಾ ದೇವಿಯೇ ಪ್ರಮುಖ ಆರಾಧ್ಯ ದೇವತೆ ಎಂಬುದು ಗಮನಾರ್ಹ. ಸೂಫಿಗಳ ಪ್ರಥಮ ಪಠ್ಯ ಪ್ರಕಟವಾದದ್ದೂ ಬಂಗಾಳಿ ಭಾಷೆಯಲ್ಲಿಯೇ. ಬಂಗಾಳಿ ಸಮಾಜ ಬಾಬಾ-ಫರೀದನ ಹಾಡುಗಳೊಂದಿಗೂ ಗುರುಗ್ರಂಥ ಸಾಹೇಬ್‌ನ ಪ್ರಭಾವದಿಂದಲೂ ಹೊರತಾದುದಲ್ಲ.

ಇಂತಹ 'ಬಹುಸಂಸ್ಕೃತಿಗಳ ನೆಲೆಯೇ ''ರಾಮಕೃಷ್ಣಾಶ್ರಮ'' ಕೂಡ ಹಿಂದೂವಲ್ಲ ಎಂಬ ಕೋರ್ಟ್ ತೀರ್ಪಿಗೆ ಎಲ್ಲೋ ಪ್ರೇರಣೆ ನೀಡಿರಬಹುದು ಎಂದೇ ಅನಿಸುತ್ತದೆ.

ಬಿ. ಪೀರ್‌ಬಾಷ
ಪತ್ರಕರ್ತ, ಪಿಂಜಾರ ಓಣಿ, ಹೂವಿನಹಡಗಲಿ, ಬಳ್ಳಾರಿ ಜಿಲ್ಲೆ - ೫೮೩ ೨೧೯

# ದಯವಿಟ್ಟು ಗಮನಿಸಿ

(ಆಸ್ಟ್ರೇಲಿಯಾದ ಕವಿ ಪೀಟರ್ ಪೋರ್ಟರ್‌ನ ಈ ಕವನ ೨೧ನೆಯ ಶತಮಾನದ ಅಣು ಅಸ್ತ್ರಗಳ ಸಮರ ಹೇಗಿರಬಹುದು ಮತ್ತು ಅದು ಹೇಗೆ ಮಾನವ ಸಹಜವಾದ ಪ್ರೀತಿ-ವಾತ್ಸಲ್ಯಗಳನ್ನು ಬದಿಗೆ ತಳ್ಳಿ, ಮೊದಲೇ ಸ್ವಾರ್ಥಿಗಳಾಗಿರುವ ಮನುಷ್ಯರನ್ನು, ತೀರಾ ಸ್ವಾರ್ಥಿಗಳನ್ನಾಗಿ ಮಾಡುತ್ತದೆಂಬುದನ್ನು, ಅತಿ ಸಾಧಾರಣ, ಪದ, ವಾಕ್ಯಗಳಲ್ಲಿ ಹಾಸ್ಯವೆನ್ನುವಷ್ಟು ತೀವ್ರವಾದ ಕಟು ವ್ಯಂಗ್ಯದ ಮೂಲಕ, ಆಘಾತಗೊಳಿಸುವಂತೆ ಅಭಿವ್ಯಕ್ತಿಸುತ್ತದೆ.)



ಕನಿಷ್ಠ ಒಂದು ಸಾವಿರ ಮೆಗಾಟನ್‌ಗಳ
ಅಣು ಕ್ಷಿಪಣಿಯೊಂದು, ಗುರಿಯಿಟ್ಟು,
ನೇರ ನಮ್ಮ ಮುಖ್ಯ ನಗರಿಗಳಿಗೆ,
ಶತ್ರುಗಳಿಂದ ಹಾರಿಸಲ್ಪಟ್ಟಿದೆಯೆಂದು,
ಈಗ ತಾನೇ ''ಪೋಲಾರ್ ಡ್ಯೂ''* ಎಚ್ಚರಿಸಿದೆ.

ಈ ನಿವೇದನೆ ಮಾಡಲು
ಬೇಕು ನಿಮಿಷಗಳು ಎರಡೂ ಕಾಲು
ಆದ್ದರಿಂದ ನಿಮಗಿನ್ನೂ ನಿಮಿಷಗಳು
ಉಳಿದಿಹುವು ಎಂಟೂ ಕಾಲು
ನಾಗರಿಕ ರಕ್ಷಣಾ ನಿಯಮ – ಭಾಗ ಅಣು ಆಕ್ರಮಣ –
ಇದರಲ್ಲಿ ಪ್ರಕಟಿಸಿರುವ ರಕ್ಷಣಾ ಅಗತ್ಯಗಳ ಹೊಂದಿಸಿಕೊಳ್ಳಲು

ವಿಶೇಷವಾಗಿ ಸಂಕ್ಷಿಪ್ತಗೊಂಡ ಪ್ರಾರ್ಥನೆಯೊಂದು
ಈ ನಿವೇದನೆಯ ಅಂತ್ಯದಲ್ಲಿ
ಪ್ರಸಾರ ಮಾಡಲ್ಪಡುವುದು –
ಪ್ರಾಟೆಸ್ಟೆಂಟರ ಮತ್ತು ಯಹೂದಿಗಳ ಪ್ರಾರ್ಥನೆಗಳು
ಒಟ್ಟಿಗೇ ಪ್ರಾರಂಭವಾಗುವುವು
ರಕ್ಷಣಾ ನಿಯಮದಲ್ಲಿರುವ
ಸೂಚನೆಗಳಿಗನುಸಾರ
ಕೂಡಲೇ ಆಯ್ದುಕೊಳ್ಳಿ ನಿಮ್ಮ ತರಂಗಾಂತರ.

ಹೆಚ್ಚು ಪ್ರೀತಿಸಿದ್ದ ನಿಮ್ಮ ಮುದ್ದು ಪ್ರಾಣಿಗಳನ್ನು
ಒಯ್ಯಬೇಡಿ ನಿಮ್ಮ ರಕ್ಷಣಾ ತಾಣಕ್ಕೆ – ಸ್ವಚ್ಛ ಗಾಳಿಯನ್ನು
ಅವು ಹೆಚ್ಚು ಬಳಸಿಬಿಡುವುವು. ಬಿಟ್ಟುಬಿಡಿ ಮುದುಕರನ್ನು
ಮತ್ತು ಹಾಸಿಗೆ ಹಿಡಿದವರನ್ನು, ಅವರಿಗೆ ಮಾಡಲಾರಿರಿ ನೀವು ಏನನ್ನೂ
ಎಲ್ಲರೂ ರಕ್ಷಣಾ ತಾಣದೊಳಬಂದ ಮೇಲೆ
ನೆನಪಿಡಿ, ಒಳ ಮಾಳಿಗೆಯ ಗುಂಡಿ ಒತ್ತುವುದನ್ನು, ಜೋಡಿಸಿರಿ
ವಿಕಿರಣಾಕರ್ಷಕ ತಂತುವನು, ಅಣು ವಿಕಿರಣ ಮಾಪಕವ ಚಾಲಿಸಿರಿ

ಈಗ ನಿಮ್ಮ ದೂರದರ್ಶನವ ಆರಿಸಿರಿ
ಪ್ರಾರ್ಥನೆಗಳು ಮುಗಿದೊಡನೆ ನಿಮ್ಮ ರೇಡಿಯೋಗಳನು ಆರಿಸಿರಿ.
ಅದೇ ಸಮಯದಲಿ, ನಿಮ್ಮ ಕುಟುಂಬದ ಪ್ರತಿಸದಸ್ಯರ ಕಿವಿಗಳಲಿ
ಭದ್ರಪಡಿಸಿರಿ, ಆಸ್ಫೋಟ ಶಬ್ದನಿರೋಧಕ ಪ್ಲಗ್‌ಗಳನು, ತೆಗೆದುಕೊಳ್ಳಿ ಜೊತೆಯಲಿ
ನಿಮ್ಮ ಜೀವದ್ರವ್ಯದ ಸೀಸೆಗಳನು, ನಿಮ್ಮ ಮಕ್ಕಳಿಗೆ ಕೊಡಿ
ನಾಗರಿಕ ರಕ್ಷಣೆ - ಹಸಿರು ಡಬ್ಬಿಯಲಿರುವ, 'ಒಂದು', 'ಎರಡು' ಗುರುತುಳ್ಳ ಮಾತ್ರೆಗಳನು
ನಂತರ ಅವರನ್ನು ಮಲಗಿಸಿ. ತೆರೆಯಬೇಡಿ ಒಳಗಿನ ಗಾಳಿ ಕೀಲಿಯನು
ಅಣುವಿಕಿರಣ ಸಂಪೂರ್ಣ ಸ್ವಚ್ಛವಾಗಿದೆಯೆಂದು ತೋರಿಸುವ ತನಕ
ಇದಕ್ಕೂ ಮೊದಲೇ ಏನಾದರೂ ನಿಮ್ಮ ಆಮ್ಲಜನಕ
ಮುಗಿದರೆ ಅಥವಾ ನಿಮ್ಮ ಕುಟುಂಬದ ಸದಸ್ಯರೇನಾದರೂ
ತೀವ್ರವಾಗಿ ಘಾಸಿಗೊಂಡರೆ, ಕೊಡಿ ಅವರಿಗೆ
'ವ್ಯಾಲಿ ಬರ್ಗ್' ಎಂದು ಗುರುತುಳ್ಳ ಗುಳಿಗೆಗಳ
(ಕೆಂಪು ಲಕೋಟೆಯಲ್ಲಿ, ಸಂಖ್ಯೆ ೧ ಉಳಿವಿನ ಕೈಪೆಟ್ಟಿಗೆ)
ನೋವಿರದ ಸಾವಿಗಾಗಿ. (ಕ್ಯಾಥೋಲಿಕರು
ಅವರ ಪಾದರಿಗಳಿಂದ ನಿರ್ದೇಶಿಸಲ್ಪಡುವರು
ಇಂಥದೊಂದು ಸನ್ನಿವೇಶದಲಿ ಏನು ಮಾಡಬೇಕೆಂಬುದನು)

ಈ ಪ್ರಕಟಣೆ ಮುಗಿಯುತ್ತಿದೆ. ನಮ್ಮ ಅಧ್ಯಕ್ಷರು
ಈಗಾಗಲೇ ಆಣತಿ ಇತ್ತಿದ್ದಾರೆ,
ಅತಿ ತೀವ್ರ ಪ್ರತೀಕಾರಕ್ಕಾಗಿ, ಇದಾಗುವುದು
ನಿರ್ಣಾಯಕ, ನಮ್ಮಲ್ಲಿ ಕೆಲವರು ಸಾಯಬಹುದು.
ನೆನಪಿಡಿ, ಅಂಕಿ ಅಂಶಗಳ
ಅದು ನೀವಾಗದಿರಬಹುದು.
ಪೂರ್ಣ ಪ್ರಮಾಣದಲಿ ಹಾರಾಡುತ್ತಿವೆ ಎಲ್ಲ ಧ್ವಜಗಳು
ಸರ್ಕಾರಿ ಕಟ್ಟಡಗಳ ಮೇಲೆ ಸೂರ್ಯ ಪ್ರಕಾಶಿಸುತ್ತಿದ್ದಾನೆ.
ನಾವೆಲ್ಲ ದೇವರ ಕೈಗಳಲ್ಲಿದ್ದೇವೆ
ಆದೇನಾಗುವುದೋ, ಅದು ಆಗುವುದು ಅವನ ಇಚ್ಛೆಯಂತೆ
ಈಗಿನ್ನು ನಡೆಯಿರಿ, ಬೇಗ ನಿಮ್ಮ ರಕ್ಷಣಾ ತಾಣಕ್ಕೆ.

---

ಮೂಲ : ಪೀಟರ್ ಪೋರ್ಟರ್ ಅನುವಾದ : ಎಲ್. ವಿ. ಶಾಂತಕುಮಾರಿ
ನಂ. ೧೫೮, 'ರಾಮರಕ್ಷ' ೪ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ
ಪೂರ್ಣಪ್ರಜ್ಞ ಲೇ ಔಟ್, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

* ಪೋಲಾರ್ ಡ್ಯೂ : ಒಂದು ಸುದ್ದಿ ಮೂಲ



ಕಣ್ತುಂಬಾ ತುಂಬಿಕೊಂಡೆ. ಮಾರನೇ ದಿನವೇ, ಅಂದರೆ ೧.೧೨.೦೩ ಈ ಸಂದರ್ಶನಕ್ಕಾಗಿ ಮನ್ನಾ ಡೇ ಆಹ್ವಾನಿಸಿದರು.

ಮನ್ನಾ ಡೇಯ ಭೇಟಿ ಎಂದರೆ ಒಂದು ಯುಗದ ಜೊತೆ ಭೇಟಿ ಎಂದೇ ತಿಳಿಯಬೇಕು. ಭಾರತೀಯ ಚಿತ್ರರಂಗದ ಅತಿರಥ ಮಹಾರಥರಾದ – ಅನಿಲ್ ಬಿಸ್ವಾಸ್, ಸಲಿಲ್, ಬರ್ಮನ್, ರೋಷನ್, ರಫಿ, ಆರ್. ಡಿ. ಬರ್ಮನ್, ನೌಷಾದ್, ಸಾಹಿರ್, ಶೈಲೇಂದ್ರ, ಹಸರತ್, ತಲತ್, ರಫಿ, ಕಿಶೋರ್, ಲತಾ, ಆಶಾ, ಗೀತಾ, ರಾಜಕಪೂರ್, ದಿಲೀಪ್, ದೇವಾನಂದ ಮುಂತಾದವರ ಜೊತೆ ಪುನರ್ ಸಾಂಗತ್ಯವೆಂದು ಭಾವಿಸಬೇಕು. ಇಡೀ ಬಂಗಾಲಿ ಚಿತ್ರ ಪರಂಪರೆಯಲ್ಲದೇ ಭಾರತದ ನಾನಾ ಭಾಷೆಗಳಲ್ಲಿ ಹಾಡಿದ 'ಕಿನ್ನರ ಕಂಠದ ಕೋಗಿಲೆ'ಯ ಸಹವಾಸವೆಂದು ಅರಿಯಬೇಕು.

ಮನ್ನಾ ಡೇ – ನನ್ನ ಟೀನ್ ಏಜ್ ಕ್ರೇಜ್. ನನ್ನ – ಅವರ ೧೯೬೫ರ ಭೇಟಿ ಆ 'ಹುಚ್ಚಿನಲ್ಲಿ' ನಡೆದದ್ದು. ಇವತ್ತಿಗೂ ಈತ ನನ್ನ ಕ್ರೇಜ್ ಆಗಿ ಉಳಿದಿದ್ದಾನೆ! ಸುಮಾರು ನಲವತ್ತು ವರ್ಷ ದೀರ್ಘ ನಿರೀಕ್ಷೆ ತವಕಗಳ ನಂತರ ಮತ್ತೆ ಅದೇ 'ಭಾವನೆ'ಗಳೊಂದಿಗೆ ಅವರ ಮನೆಯ ಬಾಗಿಲಲ್ಲಿ ನಿಂತಿದ್ದೆ. ಈ ಬಾರಿ ಗೆಳೆಯ ಟಿ. ವಿ. ಎಂ. ಜೊತೆಗಿದ್ದ. ಕದ ತೆರೆದಾಗ ಎದುರಲ್ಲಿ ನನ್ನ ಹೀರೋ! In flesh and blood! ಈತ ೮೫ ವರ್ಷಗಳಾದರೂ ಮುದುಕ ಅಂದೇನೂ ಅನ್ನಿಸಲಿಲ್ಲ. ಮಾಗಿದ ಮನ್ನಾ ಡೇ! ಅಷ್ಟೇ. Ripeness is all.

ನಾವಿಬ್ಬರೂ ಕಾಲೇಜುಗಳ ಪ್ರಾಚಾರ್ಯರು, ಇಂಗ್ಲಿಷ್ ಎಂ.ಎ. ಮಾಡಿದವರು ಎಂದು ತಿಳಿದ ಬಳಿಕ ಮನ್ನಾ ಡೇ ದೇಶದ ಇಂದಿನ ಶಿಕ್ಷಣ ವ್ಯವಸ್ಥೆ ಕುರಿತು ಮಾತಿಗಾರಂಭಿಸಿದರು. ತಮ್ಮ ಕಾಲದ ಕಾಲೇಜು ಶಿಕ್ಷಣ, ಇಂದಿನ ಶಿಕ್ಷಣ, ಬೆಂಗಳೂರಿಗೆ ಶಿಕ್ಷಣಕ್ಕಾಗಿ ಧಾವಿಸುತ್ತಿರುವ ಬಂಗಾಲೀ ವಿದ್ಯಾರ್ಥಿ ಸಮೂಹ, ಶಿಕ್ಷಣದ ವ್ಯಾಪಾರೀಕರಣ, ಟ್ಯೂಷನ್

# ಮನ್ನಾ ಡೇ ಕಿನ್ನರ ಕಂಠದ ಕೋಗಿಲೆ

**ಮು**ಹೂರ್ತ ಎಂದು ಇದಕ್ಕೇ ಹೇಳಬೇಕು. ಇದಕ್ಕೇ ಹೇಳಬೇಕು! ಇಲ್ಲವಾದರೆ ೧೯೬೫ರಲ್ಲಿ ನಡೆದ ಮಿಲನ 'ಡಿಟ್ಟೋ' ಮರುಕಳಿಸಿದ್ದಕ್ಕೆ ವಿವರಣೆ ಹೇಗೆ ಕೊಡಲಿ? ೩೦ನೇ ನವೆಂಬರ್ ೨೦೦೩. ಮನ್ನಾ ಡೇ ಕಾರ್ಯಕ್ರಮಕ್ಕೆ ಬರಲು ಗೆಳೆಯ ಪ್ರೊ|| ಟಿ. ವೆಂಕಟೇಶಮೂರ್ತಿ ತಿಳಿಸಿದ. ಬೆಂಗಳೂರಿನಲ್ಲಿ ಈತನನ್ನ ಎಲ್ಲರೂ ಟಿ. ವಿ. ಎಂ. ಎಂದೇ ಗುರ್ತಿಸುತ್ತಾರೆ. ಈ ಮನ್ನಾ ಡೇಗಾಗಿ ನಾವಿಬ್ಬರೂ ಕಾಲಾಂತರದಿಂದ ಕಾಯುತ್ತಾ ಕುಳಿತವರು!

ಪ್ರೇಮಕ್ಕೆ 'ಕೌನ್ ಆಯಾ'/ವಿರಹಕ್ಕೆ 'ಪಿಯಾ ಬಿನಾ ಸೂನಾರೆ'/ ಸಂಗಾತಿಗೆ 'ಘುಲ್ಘೊಂಕಿ ಫಟಾ ಲೇಕೆ'/ಭಕ್ತಿಗೆ 'ಭಯ ಭಂಜನ'/ವಿರಕ್ತಿಗೆ 'ಕಸ್ಮೆ ವಾದೇ'/ ದೇಶಕ್ಕೆ 'ಏ ಮೇರೆ ಪ್ಯಾರೇ ವತನ್'/ಕೀಟಲೆಗೆ 'ಫುಲ್ ಗೇಂದವಾ'/ ವ್ಯಥೆಗೆ 'ಸುರ್ ನಾ ಸಜೇ'/ಖುಷಿಗೆ 'ಲಾಗಾ ಚುನರಿ ಮೇ ದಾಗ್'/ಸಂಕಟಕ್ಕೆ 'ಪೂಛೋ ನ ಕೈಸೆ'/ಬೆಳಿಗ್ಗೆ 'ಘನಶ್ಯಾಮ ಸುಂದರ'/ಸಂಜೆಗೆ 'ಶ್ಯಾಮ್ ಢಲೇ ಜಮುನಾ ಕಿನಾರೆ'/ ರಾತ್ರಿಗೆ 'ಏ ರಾತ್ ಭೀಗಿ ಭೀಗಿ'/. ದಿನವಿಡೀ ಮನ್ನಾ ಡೇ! ಇಂಥಾ ಮನ್ನಾ ಡೇಯ ಪ್ರತ್ಯಕ್ಷ ಕಾರ್ಯಕ್ರಮ! ಹೆಂಡತಿ ಮಕ್ಕಳು ಗೆಳೆಯರು – ಸಕುಟುಂಬ ಸಪರಿವಾರ – ಗೊತ್ತಾದ ಮುಹೂರ್ತಕ್ಕೆ ಹಾಜರ್. ಅಂದಹಾಗೆ 'ಮ್ಯೂಸಿಕ್ ಸರ್ಕಲ್' ಬೆಂಗಳೂರು. ಇವರಿಗೊಂದು ಹೃತ್ಪೂರ್ವಕ ಥ್ಯಾಂಕ್ಸ್!

ಸಂಜೆ ೭.೩೦ರಿಂದ ರಾತ್ರಿ ೧೧.೩೦ರವರೆಗೆ ೮೫ ವರ್ಷದ ಮನ್ನಾ ಡೇ ಹಾಡಿದ್ದೇ ಹಾಡಿದ್ದು. ಕೊನೆಗೆ 'ಚಲತ್ ಮುಸಾಫಿರ್' ಹಾಡಿಗೆ ಇಡೀ ಆಡಿಟೋರಿಯಮ್ ತಾಳ ಹಾಕಿ ಡ್ಯಾನ್ಸ್ ಮಾಡಿತು! ನಂತರ ಬಂದವರೆಲ್ಲ ನಿಧಾನವಾಗಿ ಕತ್ತಲಲ್ಲಿ ಕರಗಿ ಮಾಯವಾದರು. ನಂತರ ನಾನು ಈ ಅದ್ಭುತ ಗಾಯಕನ ಕಾಲ್ಮುಟ್ಟಿ, ಕೈಕುಲುಕಿ, ಹಾವಳಿ ಇತ್ಯಾದಿಗಳ ಬಗ್ಗೆ ಗಂಭೀರವಾಗಿ ಚರ್ಚಿಸಿದರು. ಅದರಲ್ಲೂ ಜೊತೆಗೆ ಪ್ರೊ|| ಟಿ. ವಿ. ಎಂ. ಥರದವರು ಇದ್ದರೆ ಮುಗಿಯಿತು! ಒಬ್ಬ ಹಿನ್ನೆಲೆ ಗಾಯಕನ ಇಂಥಾ ಸಾಮಾಜಿಕ ಕಾಳಜಿಗಳು ಮೆಚ್ಚಿಕೊಳ್ಳುವಂಥವೇ ಆದರೂ ನನಗೆ ಬೇಕಾಗಿದ್ದ ವಿಷಯವೇ ಬೇರೆ. ಅಮೂಲ್ಯ ಕ್ಷಣಗಳು ಜಾರಿಹೋಗುತ್ತವೆಯೇನೋ ಅಂತ ಅನ್ನಿಸುತ್ತಿರುವಾಗಲೇ....

**ಮನ್ನಾ ಡೇ** : ಅಂದಹಾಗೆ ನೀವು ನನ್ನ interviewಗಾಗಿ ಬಂದಿದ್ದೀರಿ. ನಾನೊಬ್ಬನೇ ಮಾತಾಡ್ತಾ ಇದೀನಿ...

ವಿಜಯ ವಾಮನ : Interview ಒಂದು ನೆಪ ಸರ್! ನೀವು ಮಾತೇ ಆಡದೆ ಮೌನವಾಗಿದ್ರೂ ನಮಗೆ ಸಂತೋಷ. (ನಗು) ನಿಮ್ಮ ಜೊತೆ ಕೆಲವು ಕ್ಷಣಗಳು ಸಾಕು.

**ಡೇ** : (ನಗುತ್ತಾ) ಅದ್ಸರಿ. ಆದ್ರೆ ನಾನೊಬ್ಬನೇ ಮಾತಾಡೋದು ಚೆನ್ನಾಗಿರಲ್ಲ...

**ಟಿ. ವಿ. ಎಂ.** : ಇಲ್ಲ ಇಲ್ಲ. ನೀವು ಹೀಗೇ ಮಾತಾಡ್ತಾ ಇರಿ. ಅದು ತಂತಾನೇ ಒಂದು ರೂಪ ಪಡಕೊಳತ್ತೆ...

ವಿ. ವಾ. : ನಿಜವಾಗಿಯೂ ಸರ್. ನಾವೆಲ್ಲ ನಿಮ್ಮ ಹಾಡುಗಳನ್ನ ಹಾಡ್ತಾನೇ... ಈವರೆಗೂ ಬದುಕುತ್ತಾ ಬಂದಿದೀವಿ. ನಮ್ಮ ಶಾಲಾ ದಿನಗಳಲ್ಲಿ, ಕಾಲೇಜು ದಿನಗಳಲ್ಲಿ, ಇಂಟರ್ ಕೊಲಿಜಿಯೇಟ್ ಸ್ಪರ್ಧೆಗಳಲ್ಲಿ, ಸಂತೋಷ ಕೂಟಗಳಲ್ಲಿ, ಕಾಲೇಜ್ ಡೇಗಳಲ್ಲಿ, ಹುಡುಗಿಯರ ಮನವೊಲಿಸಿಕೊಳ್ಳಕ್ಕೆ... ಎಲ್ಲಕ್ಕೂ ನಿಮ್ಮ ಹಾಡುಗಳನ್ನೇ ಹೇಳ್ತಾ ಇದ್ವಿ.

**ಡೇ** : (ನಗುತ್ತಾ) ನೋಡಿ. ನಾನೀಗ old man. ೮೫ ವರ್ಷ.

ವಿ. ವಾ. : ನೀವು ಹುಟ್ಟಿದ್ದು....

**ವಿಜಯ ವಾಮನ**

**ಡೇ** : ಕಲ್ಕತ್ತಾ. ೧ನೇ ಮೇ ೧೯೨೦.

ವಿ. ವಾ. : ಅಂದ್ರೆ... May Day ?

**ಡೇ** : ಹೌದು. ಒಂದು Joke ಇದೆ... ಅದಕ್ಕೂ ಮುಂಚೆ... ಇನ್ನೊಂದು ವಿಷಯ. ನಾನು ನನ್ನ ಬದುಕಿನ ಉತ್ತಮ ದಿನಗಳನ್ನ ಕಳೆದಿದ್ದು ಬಾಂಬೇಲಿ. ಏನು ಚೂರು-ಪಾರು ಸಾಧನೆ ಅಂತೀರೋ ಅದು ಸಾಧ್ಯವಾಗಿದ್ದು ಅಲ್ಲೇ. ೧೯೪೩ರಲ್ಲಿ ನಾನು ಬಾಂಬೆಗೆ ಬಂದೆ. ಚಿಕ್ಕಪ್ಪನ ಜೊತೆ. ನನ್ನ ಚಿಕ್ಕಪ್ಪನ ಹೆಸರು ಕೇಳಿರಬೇಕು ನೀವು, ಕೆ. ಸಿ.ಡೇ. 1st May ಮಹಾರಾಷ್ಟ್ರ ಡೇ ಕೂಡ. ಅದೇ Joke ಮಹಾರಾಷ್ಟ್ರ ಡೇ, ಮೇ ಡೇ. ಮತ್ತೆ ಮನ್ನಾ ಡೇ!

ವಿ. ವಾ. : ಸರ್... ಕೆ. ಸಿ. ಡೇ. ಅವರ ಬಗ್ಗೆ ಸ್ವಲ್ಪ ಹೇಳ್ತೀರಾ...

**ಡೇ** : ಆತ ನನ್ನ ಚಿಕ್ಕಪ್ಪ. ಅವರು ಮೂರು ಜನ ಅಣ್ಣ ತಮ್ಮಂದಿರು. ದೊಡ್ಡವರು ನನ್ನ ತಂದೆ – ಪೂರ್ಣಚಂದ್ರ ಡೇ, ಎರಡನೇವರು ಹೇಮಚಂದ್ರ ಡೇ... ಎಲೆಕ್ಟ್ರಿಕಲ್ ಎಂಜಿನಿಯರ್. ಕೊನೆಯವರೇ ಕೆ. ಸಿ. ಡೇ. ಹದಿಮೂರನೇ ವಯಸ್ಸಿನಲ್ಲಿ ಕಣ್ಣು ಕಳೆದುಕೊಂಡುಬಿಟ್ರು. ನಮ್ಮದು ಒಂದು ದೊಡ್ಡ ಅವಿಭಕ್ತ ಕುಟುಂಬ. ನಾರ್ತ್ ಕಲ್ಕತ್ತೆಯಲ್ಲಿ ನಮ್ಮ ಬಂಗ್ಲೆ ಇತ್ತು. ವಿವೇಕಾನಂದ, ಠಾಗೂರ್ ಎಲ್ಲ ಅಲ್ಲಿಯವರೇ. ನಾನು ಹುಟ್ಟಿದ್ದೂ ಅಲ್ಲೇ. ಚಿಕ್ಕಪ್ಪ ಸಂಗೀತ ಕಲಿತದ್ದು ಬಂಗಾಲದ ಸುಪ್ರಸಿದ್ಧ ಸುರ್‌ಬಹಾರ್ ವಾದಕ ಹರೇಂದ್ರನಾಥ ಶೀಲ್ ಬಳಿ. ಅವರು ದೊಡ್ಡ ಶ್ರೀಮಂತ. ಜಮೀನುದಾರ. ಈ ಕುರುಡು ಹುಡುಗನ ಮೇಲೆ ತುಂಬ ಮಮತೆ... ಅಥವಾ ಕರುಣೆಯೋ! ಆಗ ದೇಶದ ಎಲ್ಲ ಕಡೆಗಳಿಂದ ಖ್ಯಾತ ಸಂಗೀತ ವಿದ್ವಾಂಸರು ಶೀಲ್

ಮನೆಗೆ ಬರ್‍ತಾ ಇದ್ರು. ಒಳ್ಳೇ ಕಲಾವಿದ ಹಾಗೂ ಕಲಾ ಪ್ರೇಕ್ಷಕ. ಇಂಥಾ ಮನುಷ್ಯ ಒಬ್ಬ ಕುರುಡ ಹುಡುಗನಿಗಾಗಿ ಕುದುರೆ ಸಾರೋಟು ಕಳಿಸ್ತಾ ಇದ್ರು! ಹೀಗೆ ೫-೬ ವರ್ಷಗಳ ಸತತ ಪರಿಶ್ರಮದಿಂದ ಚಿಕ್ಕಪ್ಪ ಅಪ್ರತಿಮ ಗಾಯಕನಾಗಿ ಹೋದ. ಕೇವಲ ೧೮ನೇ ವಯಸ್ಸಿಗೆ ಬಂಗಾಲದ ಮನೆಮಾತಾಗಿ ಹೋದ.

ವಿ. ವಾ. : ನಮಗೆ ಕೆ. ಸಿ. ಡೇ. 'ವಿದ್ಯಾಪತಿ' ಅನ್ನುವ ಚಿತ್ರದಿಂದ ಗೊತ್ತು... ''ಮನ ಕೀ ಆಂಖೆ ಖೋಲ ಬಾಬಾ.''

**ಡೇ :** Yes. ಅಷ್ಟೇ ಅಲ್ಲ, ಅನೇಕ ರಂಗಗೀತೆಗಳು, ಬಂಗಾಲಿ ಕವಿತೆಗಳನ್ನೆಲ್ಲ ಹಾಡಿದ್ದಾರೆ. ನಾನೂ ಆತನ ಆ ಹಾಡುಗಳನ್ನ ಹೇಳಿ ಕೆಸೆಟ್ ಮಾಡಿದ್ದೇನೆ.

ವಿ. ವಾ. : ಕೆ. ಸಿ. ಡೇ. ಆಗ ಹೇಳಿದ ಹಾಡುಗಳು preserve ಆಗಿವೆಯಾ... ಯಾವುದಾದರೂ ಆರ್ಖೈವ್‌ನಲ್ಲಿ...

**ಡೇ :** ಆರ್ಖೈವ್ ಯಾಕೆ? ಆ ಹಾಡುಗಳು ಬಂಗಾಲದಲ್ಲಿ ಎಲ್ಲರಿಗೂ ಗೊತ್ತು. ಜನಪ್ರಿಯವಾಗಿವೆ. ಆತ ಕುರುಡನಾಗಿದ್ದರೂ... Sixth sense ಇತ್ತು ಅಂತ ನನಗನ್ನಿಸತ್ತೆ.... ಇಂಗ್ಲಿಷ್ ಚೆನ್ನಾಗಿ ಬರ್‍ತಾ ಇತ್ತು.

**ಟಿ. ವಿ. ಎಂ. :** ಎಲ್ಲೀವರೆಗೆ ಓದಿದ್ದರು ಅವರು?

**ಡೇ :** ಎಂಟನೇ ಕ್ಲಾಸ್‌ವರೆಗೂ ಅಂತನ್ನಿಸತ್ತೆ. ಆದರೆ ಬಂಗಾಲೀ ಸಂಗೀತದಲ್ಲಿ ಅವನೊಬ್ಬ path finder. ಗಾಯಕ ಮಾತ್ರ ಅಲ್ಲ... ಮಹಾಪಂಡಿತ... ಆಳವಾದ ಅಧ್ಯಯನ ಕೂಡ ಇತ್ತು. ಆಗ ಎಲ್ಲಾ ಕಡೆ ಕೇವಲ ಶಾಸ್ತ್ರೀಯ ಸಂಗೀತ ಮಾತ್ರ ಇತ್ತು. Puristಗಳ ಕಾಲ ಅದು. ಸುಗಮ ಸಂಗೀತ ಅನ್ನೋದು ಇನ್ನೂ ಪ್ರಾರಂಭವೇ ಆಗಿರಲಿಲ್ಲ. Light Classical ಅಂತಾರಲ್ಲ. ಚಿಕ್ಕಪ್ಪನಿಂದಲೇ ಬಂಗಾಲದಲ್ಲಿ ಸುಗಮ ಸಂಗೀತ ಪ್ರಾರಂಭವಾಗಿದ್ದು. ಬಹಳ ಒಳ್ಳೆ ಗೀತೆಗಳು ಅವನಿಗೆ ಸಿಕ್ಕವು. ಬೇಗ ಜನಪ್ರಿಯವಾದವು. ಒಳ್ಳೊಳ್ಳೆ ರಾಗಗಳನ್ನಳವಡಿಸಿ ಅಮೋಘವಾಗಿ ಹಾಡ್ತಾ ಇದ್ದ. ಇದರಿಂದಾಗಿಯೇ ಶಾಸ್ತ್ರೀಯ ಸಂಗೀತ ಜನಸಾಮಾನ್ಯರನ್ನೂ ತಲುಪುವ ಹಾಗಾಯ್ತು.

ವಿ. ವಾ. : ರವೀಂದ್ರ ಸಂಗೀತ, ನಜ್ರುಲ್ ಗೀತೆಗಳನ್ನೂ ಹಾಡ್ತಾ ಇದ್ದರಾ?

**ಡೇ :** ಇಲ್ಲ, ಆಗಿನ್ನೂ ರವೀಂದ್ರ ಸಂಗೀತ ಬಂದಿರಲಿಲ್ಲ. ಚಿಕ್ಕಪ್ಪನ ಹಾಡುಗಳು ಜಯಭೇರಿ ಹೊಡೀತಾ ಇದ್ವು. ನಾನು ಭಾಳಾ ಚಿಕ್ಕವನು ಆಗ.

**ಟಿ. ವಿ. ಎಂ. :** ಕೆ. ಸಿ. ಡೇಯವರ ವಯಸ್ಸು?

**ಡೇ :** ೨೮-೩೦ ಇರಬೇಕು. ರವೀಂದ್ರ ಸಾಹಿತ್ಯ, ನಜ್ರುಲ್ ಸಾಹಿತ್ಯ ಇತ್ತು. ಸಂಗೀತವಾಗಿರಲಿಲ್ಲ. ಅತುಲ್ ಪ್ರಸಾದ್ ಅನ್ನುವವರ ಗೀತೆಗಳನ್ನ ಚಿಕ್ಕಪ್ಪ ಹಾಡ್ತಾ ಇದ್ದ.

ವಿ. ವಾ. : ರವೀಂದ್ರ ಸಂಗೀತ ಅನ್ನೋದು ಯಾವಾಗ ಬಂದಿದ್ದು?

**ಡೇ :** ಪಂಕಜ್ ಮಲ್ಲಿಕ್ ಅವುಗಳಿಗೆ ರಾಗ ಹಾಕಿ... ಜನಪ್ರಿಯಗೊಳಿಸಿದ್ದು. Wonderful singer. ನನ್ನ ಕಾಲೇಜು ದಿನಗಳಲ್ಲಿ ಆತ ನಮಗೆ ಮೋಡಿ ಮಾಡಿಬಿಟ್ಟಿದ್ದ... ಓಹ್... Wonderful.

**ಟಿ. ವಿ. ಎಂ. :** ನೀವು ಯಾವ ಕಾಲೇಜಿನಲ್ಲಿ ಓದಿದ್ದು?

**ಡೇ :** ಸ್ಕಾಟಿಷ್ ಚರ್ಚ್ ಕಾಲೇಜ್. ಸ್ಕೂಲು ಕೂಡಾ ಅಲ್ಲೇ. ಮನೆಗೆ ತುಂಬ ಹತ್ತಿರ ಇತ್ತು.

ವಿ. ವಾ. : ನಮ್ಮ ಕಾಲೇಜು ದಿನಗಳಲ್ಲಿ ನಾವೆಲ್ಲ ನಿಮ್ಮ ಹಾಡುಗಳನ್ನ ಹಾಡ್ತಾ ಇದ್ವಿ. ನೀವು ಪಂಕಜ್ ಹಾಡುಗಳನ್ನ...

**ಡೇ :** ಇಲ್ಲ ಇಲ್ಲ, ನಾನು ಚಿಕ್ಕಪ್ಪನ ಹಾಡುಗಳನ್ನ ಹೇಳ್ತಾ ಇದ್ದೆ. ಸೈಗಾಲ್ ಹಾಡುಗಳನ್ನ... ಮತ್ತೆ ಬರ್ಮನ್ ಹಾಡುಗಳನ್ನ.

ವಿ. ವಾ. : ಬರ್ಮನ್!?

**ಡೇ :** Yes ಬರ್ಮನ್. ಆತ ನನ್ನ ಹೀರೊ. ಚಿಕ್ಕಪ್ಪನ ಹತ್ತಿರ ಸಂಗೀತ ಕಲಿಯಕ್ಕೆ ಬರ್‍ತಾ ಇದ್ರು. ಚಿಕ್ಕಪ್ಪನ ಶಿಷ್ಯ ಆತ. ಅವರು ಹಾಡು ಕಲೀತಾ ಇರಬೇಕಾದ್ರೆ ನಾನೂ ಪಕ್ಕದಲ್ಲೇ ಕೂತು ಕೊಳ್ತಾ ಇದ್ದೆ. ತುಂಬ special ಮನುಷ್ಯ. ಕೆಂಪು ಕೆಂಪಗೆ... ತೆಳ್ಳಗೆ... ಎತ್ತರಕ್ಕಿದ್ದ ಸುಂದರಾಂಗ! ಚೈನಾಮನ್. ಅವರನ್ನ ಕಂಡ್ರೆ ಸಿಕ್ಕಾಪಟ್ಟೆ ಇಷ್ಟ ಆಗ್ತಿತ್ತು. ಆತನ ಹಾಡು ಗಾರಿಕೆಯೂ ಒಂದು ಥರಾ... ವಿಚಿತ್ರ... ಮೂಗಿಂದ... ಎಳೆದೂ... ಎಳೆದೂ.. ಅವರ 'ಧೀರೆ ಸೆ ಜಾನಾ' ಕೇಳಿದೀರಲ್ಲ? ಜಾನಪದ ಶೈಲಿ. ನನ್ನ ಕಾಲೇಜು ದಿನಗಳಲ್ಲಿ... ಬಿ.ಎ. ಮಾಡ್ತಾ ಇದ್ದಾಗ... ಅವರ ಥರಾನೇ ಹಾಡ್ತಾ ಇದ್ದೆ ಕಾಪಿ ಮಾಡ್ತಾ ಇದ್ದೆ!... ಎಂಥಾ ಅತಿರೇಕಕ್ಕೆ ಹೋಯ್ತು ಅಂದ್ರೆ ಚಿಕ್ಕಪ್ಪ ನನಗೆ ಗದರಿಸಿ... ನನ್ನನ್ನ ಸರಿಯಾದ ಸಮಯದಲ್ಲಿ ತಿದ್ದಿದರು. ತುಂಬ ಚಿಕ್ಕವನು. ಏನೂ ಗೊತ್ತಾಗ್ತಾ ಇರ್‍ಲಿಲ್ಲ. ಚಿಕ್ಕಪ್ಪ ಒಬ್ಬ Great Teacher. ಬೆಳಿಗ್ಗೆ ಏಳರಿಂದಲೇ ನಮ್ಮ 'ರಿಯಾಜ್' ಪ್ರಾರಂಭವಾಗ್ತಾ ಇತ್ತು... Oh... Those were the days !!

ವಿ. ವಾ. : ನೀವೆಲ್ಲ ಯಾವ ಘರಾನಾಗೆ ಸೇರಿದವರು?

**ಡೇ :** ಘರಾನಾ ಅಂತ ಯಾವುದೂ ಇಲ್ಲ. ಚಿಕ್ಕಪ್ಪನಿಗೆ ಎಲ್ಲ ರೀತಿಯ



ವಿಜಯ ವಾಮನ ಮತ್ತು ಮನ್ನಾ ಡೇ

ಹಾಡುಗಾರಿಕೆಯೂ ಗೊತ್ತಿತ್ತು. ಮೂಲತಃ ಅವರು ದ್ರುಪದ್ ಗಾಯಕರು. ಧಮಾರ್, ಠುಮ್ರಿ, ಟಪ್ಪಾ, ಕಜರಿ, ಗಜ಼ಲ್, ಭಜನ್, ಕೀರ್ತನ್ ಎಲ್ಲ ಹೇಳ್ತಿದ್ದರು. ನನಗೆ ಅವರ ಹಾಗೆ ಆಗ್ಬೇಕೂಂತ ತುಂಬ ಆಸೆ ಇತ್ತು. ಜೀನಿಯಸ್. ನೀವು ಅವರ ಹಾಡುಗಳನ್ನ ಕೇಳಿಲ್ಲ. ಎಂಥಾ ಕಂಠಸಿರಿ! ಮನಮೋಹಕ! ಆತ ಯಾರಿಂದ ಬೇಕಾದ್ರೂ ಉತ್ತಮ ಅಂಶಗಳನ್ನ ಕಲಿತು ತನ್ನದನ್ನಾಗಿಸಿಕೊಳ್ಳುತ್ತಿದ್ದ. ಇಂಥದ್ದೇ ಘರಾನಾ ಅಂತ ಇಲ್ಲ. ಬಂಗಾಲಕ್ಕೆ ದೇಶದ ಹಲವಾರು ಕಡೆಗಳಿಂದ ಗಾಯಕರು ಬರುತ್ತಿದ್ದರು. ತುಂಬ ಒಳ್ಳೆಯ ದಿನಗಳು.

ವಿ. ವಾ. : ಭಾರತದ ವಿಭಜನೆಯ ದಿನಗಳು. ೧೯೪೨ರಿಂದಲೇ ಪ್ರಕ್ಷುಬ್ಧವಾಗಿತ್ತಲ್ಲ? ಅದರಲ್ಲೂ ಕಲ್ಕತ್ತೆಯಲ್ಲಿ! ನಿಮಗೆ ಅದರ ಬಿಸಿ ತಟ್ಟಲೇ ಇಲ್ಲವೇ? ನೀವೆಲ್ಲ ಹೇಗೆ...

**ಡೇ :** No. No... ನಮಗದು ಗೊತ್ತಾಗಲೇ ಇಲ್ಲ! ನನ್ನ ಕೇಳಿದರೆ ನಮ್ಮಂಥವರಿಗೆ ಅದು ಯಾವ ರೀತಿಯಲ್ಲೂ ತಟ್ಟಲೇ ಇಲ್ಲ ಅವತ್ತಲ್ಲ... ಇವತ್ತೂ ಕೂಡ ಅದು ಕೇವಲ ರಾಜಕಾರಣಿಗಳನ್ನ ಮಾತ್ರ ಕಾಡುವ ವಿಚಾರ... ಅಲ್ಲವಾ?

**ಟಿ. ವಿ. ಎಂ. :** ಹಾಗಲ್ಲ... ಬಂಗಾಲದಲ್ಲಿ ಹಿಂದೂ-ಮುಸ್ಲಿಮ್ ಘರ್ಷಣೆ...

**ಡೇ :** ಓಹ್... ಅದು ಯಾವಾಗ ಇರ್‍ಲಿಲ್ಲ? ಯಾವಾಗ್ಲೂ ಇದ್ದಿದ್ದೇ. ಕೆಲವು ಸರಿ ಪೂರ್ವದಲ್ಲಿ ಇನ್ನು ಕೆಲವು ಬಾರಿ ಪಶ್ಚಿಮ... ದಕ್ಷಿಣ-ಉತ್ತರ... ಆದರೆ ನಾವಿದ್ದ ಕಡೆ ಇದ್ಯಾವುದೂ ಇರ್‍ಲಿಲ್ಲ. ಶಾಂತಿಯಿಂದ ಇದ್ವಿ. ಬೇಕಾದಷ್ಟು ಮುಸಲ್ಮಾನರು ಇದ್ದರು. ಯಾರಿಗೂ ಅಂಥಾ ಯೋಚನೆಗಳೇ ಬರ್‍ತಾ ಇರ್‍ಲಿಲ್ಲ. ಇವೆಲ್ಲ ಈ hardlinerಗಳು ಬಂದು ಆಗಿದ್ದು.

ಈ ಇಮಾಮರು, ಮುಲ್ಲಾಗಳು, ಸಾಧುಗಳು... ಇವರಿಂದ. ಇಂಥಾ ಸಂಗತಿಗಳು ನನಗೆ ಗೊತ್ತೇ ಇಲ್ಲ. ಮನೆಗೆ ನೂರಾರು ಜನ ಉಸ್ತಾದರು, ನವಾಜ್‌ಗಳು ಬರ್‍ತಿದ್ರು. ಹಾಡು ಹರಟೆ ಊಟ ಇತ್ಯಾದಿಗಳೆಲ್ಲ ಜೊತೆ ಜೊತೆಯಾಗೇ ನಡೀತಾ ಇತ್ತು. ನಾವು ಬೇರೆ ಬೇರೆ ಅಂತ ಯಾರಿಗೂ ಅನ್ನಿಸಿರಲಿಲ್ಲ. ನನಗೆ ಚೆನ್ನಾಗಿ ನೆನಪಿದೆ. ಉಸ್ತಾದ್ ರಫೀಕ್ ಖಾನ್ ಸಾಹೇಬರು ನೇರವಾಗಿ ಅಡುಗೆ ಮನೆಗೇ ಬಂದು ನಮ್ಮಮ್ಮನ ಹತ್ತಿರ ಹಾಯಾಗಿ ಮಾತಾಡ್ತಾ ಕೂರುತ್ತಿದ್ದರು. ಮುಸಲ್ಮಾನರ functionಗಳಿಗೆ ನಾವೆಲ್ಲ ಹೋಗ್ತಾ ಇದ್ವಲ್ಲ....

ವಿ. ವಾ. : ಸಾಮಾನ್ಯವಾಗಿ ಎಲ್ಲ ಬಂಗಾಲೀ ಕಲಾವಿದರು ಒಂದಲ್ಲ ಒಂದು ರೀತಿ IPTA ಮೂವ್‌ಮೆಂಟ್‌ನಲ್ಲಿದ್ರು... ನೀವು?

**ಡೇ :** ಇಲ್ಲ ನನಗೆ ಅದರಲ್ಲಿ ಆಸಕ್ತಿ ಇರ್‍ಲಿಲ್ಲ. ನನಗೆ... ಅದು ಸ್ವಲ್ಪ ಬೂಟಾಟಿಕೆ ಅಂತ ಅನ್ನಿಸ್ತು. ಅವರ್‍ಯಾರೂ ನಮ್ಮ ಥರಾ ಯೋಚನೆ ಮಾಡ್ತಾ ಇರ್‍ಲಿಲ್ಲ. ನಮ್ಮ ದಿನ ನಿತ್ಯದ, ಸಾಮಾನ್ಯ ಅನಿಸಿಕೆಗಳ್ಯಾವುದೂ ಅವರಿಗೆ ಬೇಕಾಗಿರ್‍ಲಿಲ್ಲ. ಈಗ ನಾವೂ-ನೀವೂ ಆರಾಮಾಗಿ ಸಹಜವಾಗಿ ಕೂತು ಮಾತಾಡ್ತಾ ಇಲ್ಲವಾ? ಹಾಗೆ ಇರ್‍ಲಿಲ್ಲ. ಅವರೆಲ್ಲ ಕಮ್ಯೂನಿಸ್ಟರು. ಕಮ್ಯೂನಿಸಮ್ ಬಗ್ಗೆ ಮಾತಾಡ್ತಾ ಇದ್ರು. ಈ ಸಲಿಲ್ ಚೌದರಿ ಥರದವರೆಲ್ಲ ಇದ್ರು. ನಿಜವಾಗಿ ಅವರ್‍ಯಾರೂ ಕಮ್ಯೂನಿಸ್ಟ್ ಆಗಿರಲಿಲ್ಲ. ಎಲ್ಲ opportunistಗಳು! ಏನಾದ್ರೂ ಅವರೆಲ್ಲ? ಎಲ್ಲಿ ಈಗ? ಎಲ್ಲಿ ಹೋಯ್ತು IPTA? ಸಲಿಲ್ ಅಷ್ಟೆಲ್ಲ ಕಮ್ಯುನಿಸಂ ಬಗ್ಗೆ ಮಾತಾಡ್ತ ಇದ್ದ. Film landಗೆ ಬಂದು ಜೇಬು ಭರ್ತಿಯಾದ ಕೂಡ್ಲೆ ಕಮ್ಯೂನಿಸಮ್ ಮಾಯ ಆಗೋಯ್ತು!

ವಿ. ವಾ : ರಿತ್ವಿಕ್ ಘಟಕ್‌ಗೂ ಹೀಗೇ ಆಯ್ತು ಅಂತೀರಾ?

**ಡೇ :** ರಿತ್ವಿಕ್ ಘಟಕ್? Drunkard No. 1! ಆದರೆ ಮಹಾಮೇಧಾವಿ. ಅದರ ಬಗ್ಗೆ ಅನುಮಾನ ಇಲ್ಲ. ನನಗೆ ಅಂಥವರ ಬಗ್ಗೆ ಆದರವೇನೂ ಇಲ್ಲ. ತುಂಬ Eccentric



*ಟಿ.ವಿ.ಎಂ. ಮತ್ತು ಮನ್ನಾ ಡೇ*

fellow. ತನ್ನ ಬಿಟ್ರೆ ಬೇರೆ ಯಾರೂ ಇಲ್ಲ ಅಂತ ಅಂದ್ಕೊಂಡಿದ್ದ. ಇವತ್ತೆಲ್ಲ ಎಷ್ಟು ಚಿತ್ರ ಇದೆ ಅವರದ್ದು? ಯಾರಿಗೆ ತಿಳೀತಿತ್ತು? ತಲೆ-ಬುಡ ಅರ್ಥವಾಗ್ತಿರ್‍ಲಿಲ್ಲ! ನನಗೆ ಇಂಥದ್ರಲ್ಲಿ ನಂಬಿಕೇನೂ ಇಲ್ಲ. ನಾನೊಬ್ಬ ತೀರಾ ಪ್ರಾಕ್ಟಿಕಲ್ ವ್ಯಕ್ತಿ. ನೆಲಕ್ಕೆ ಹತ್ತಿರದವನು. ನಾನೊಬ್ಬ ಹಾಡುಗಾರ, yes. ಸಹಜವಾಗಿ ಕನಸುಗಾರನೂ ಹೌದು. ಆದರೆ ಪಕ್ಕಾ practical.

**ಟಿ. ವಿ. ಎಂ.** : ಮೃಣಾಲ ಸೇನ್...

**ಡೇ** : Now ಮೃಣಾಲ ಸೇನ್. ಅವರ ಚಿತ್ರಗಳನ್ನ ನೋಡಿದೀರಾ ? ಎಷ್ಟು ಚಿತ್ರಗಳು ನೋಡಿದೀರಿ ? ಎಷ್ಟು ಇಷ್ಟ ಆಗಿವೆ ?

**ಟಿ. ವಿ. ಎಂ.** : ಒಂದು.... ಮೂರ್‍ನಾಕು.

**ಡೇ** : All good ?

**ಟಿ. ವಿ. ಎಂ.** : ಹಾಗೇನೂ ಹೇಳ್ತಿಲ್ಲ... But.

**ಡೇ** : ನೋಡಿ. ನನ್ನ ಕೇಳಿದ್ರೆ... ನಾನು ರಾಜಕಪೂರ್‌ನ ತುಂಬ ಮೆಚ್ಚಿಕೊಳ್ತೀನಿ. After all ಚಿತ್ರ ತೆಗೆಯೋದು ಏನಕ್ಕೆ? ನಿಮ್ಮ ಫಿಲಾಸಫಿ ಪಾಠ ಮಾಡಕ್ಕಾ? ಜನಗಳಿಗೆ ಮನರಂಜನೆ ನೀಡಕ್ಕೆ, ಅಲ್ಲವಾ ? ರಾಜಕಪೂರ್ ಮನರಂಜನೆ ನೀಡ್ತಾ ಏನಾದರೊಂದು 'message'ನ್ನೂ ನೀಡ್ತಾ ಇದ್ರು. ನಮಗೆ ಬೇಕಾಗಿದ್ದು ಇಷ್ಟೇ. ಆದರೆ ಅವರೆಲ್ಲ... ಮೃಣಾಲ ಸೇನ್.. ಇವರು... ತಮಗೇನು ಬೇಕು ಅದನ್ನ ಚಿತ್ರಗಳಲ್ಲಿ ತುರುಕ್ತಾ ಇದ್ರು. ಅದೇನು ಅಂತ ನನಗಂತೂ ಬಗೆಹರೀಲಿಲ್ಲ! ಯಾವುದೋ ಒಂದು ಚಿತ್ರ ಚೆನ್ನಾಗಿತ್ತು. ಆತನೇ ಹೇಳ್ತಾರೆ, ''ಚಿತ್ರಗಳು flop ಆದರೂ ಜನ ನನ್ನನ್ನು ಗೌರವಿಸ್ತಾರೆ.'' ಬಹಳ ಹೆಮ್ಮೆಯಿಂದಲೇ ಹೀಗೆ ಹೇಳಿಕೊಳ್ತಾರೆ. ಅವರ ಚಿತ್ರಗಳಲ್ಲಿ ಹಾಡುಗಳಿರ್‍ತಾ ಇರ್‍ಲಿಲ್ಲ. ಆಗ ಬಂಗಾಲದಲ್ಲಿ ನನ್ನ ಜಮಾನ! ರಿಲೀಸ್ ಆದ ಪ್ರತಿಯೊಂದು ಚಿತ್ರದಲ್ಲೂ ನನ್ನ ಹಾಡುಗಳಿದ್ವು. ಮನ್ನಾ ಡೇ ಹಾಡು ಹಾಕ್ಕೊಂಡು ಚಿತ್ರ ತೆಗೀರಿ flop ಆಗಲ್ಲ ಅಂತ ನಿರ್ಮಾಪಕರು ಅವರಿಗೆ ಹೇಳಿದರಂತೆ. ಕಡೆಗೆ ಆತ ಬಂದು ನನಗೆ ಎರಡು ಹಾಡು ಹೇಳಿ ಅಂತ ಕೇಳಿದರು. ನಾನು ಒಬ್ಬ professional singer ಒಪ್ಪಿಕೊಂಡೆ. ಆದರೆ ಆ ಚಿತ್ರದ ಸಂಗೀತ ನಿರ್ದೇಶಕ ಬಾಂಬೆ ಚಿತ್ರರಂಗದಲ್ಲಿ ಕೋರಸ್ ಸಿಂಗರ್ ಆಗಿದ್ದವರು! ಕೊನೆಗೆ ಏನೇನೋ ಆಗಿ ಹಾಡು ಹೇಳಿದೆ ಅನ್ನಿ. ಚಿತ್ರದ ಹೆಸರು 'ಕೋರಸ್' ಅಂತ! ಆಗ ನಾನು ಬಾಂಬೇಲಿದ್ದೆ. ಆ ಚಿತ್ರ ಯಾವಾಗ ರಿಲೀಸ್ ಆಯ್ತು, ಯಾವಾಗ ಕಿತ್ತುಕೊಂಡು ಹೋಯ್ತು ಗೊತ್ತೇ ಆಗ್ಲಿಲ್ಲ. ಎರಡು ವಾರಾನೂ ಓಡಲಿಲ್ಲವಂತೆ !

**ವಿ. ವಾ.** : ಸ್ವಲ್ಪ 'ಸಂಗೀತ'ಕ್ಕೆ ಹಿಂತಿರುಗೋಣ... ಈ ಬಂಗಾಲೀ ಭಾಷೆಯೇ ಭಾಳಾ ವಿಶಿಷ್ಟವಾದದ್ದು ಅಂತ ಅನ್ನಿಸತ್ತೆ ಸರ್. Very musical. ಹಾಗಿರೋದರಿಂದಲೇ ಬಂಗಾಲೀ ಗೀತೆಗಳಿಗೂ ಏನಾದ್ರೂ ವಿಶೇಷವಾದ sweetness ಇದೆಯಾ ಅಂತ ?

**ಡೇ** : ಬಂಗಾಲೀ ಭಾಷೆ sweet. ಒಪ್ತೀನಿ. ಆದರೆ ನನ್ನ ನಂಬಿಕೇನೇ ಬೇರೆ. ಯಾವುದೇ ಭಾಷೆಯೂ ತನ್ನ pure formನಲ್ಲಿ sweet ಆಗೇ ಇರತ್ತೆ ಅಂತ ಅನ್ನಿಸತ್ತೆ. ನಿಮ್ಮ ಕನ್ನಡ ಸಹ ಅಷ್ಟೇ. ತಮಿಳು ಹೊರತುಪಡಿಸಿ ಭಾರತದ ಎಲ್ಲ ಭಾಷೆಗಳಲ್ಲೂ ನಾನು ಹಾಡಿದ್ದೀನಿ. ಎಲ್ಲವೂ beautiful ಆಗಿವೆ. ತುಳು, ನೇಪಾಲಿಯಲ್ಲೂ ಹಾಡಿದ್ದೀನಿ.



**ಟಿ. ವಿ. ಎಂ.** : ೧೯೯೨ರಲ್ಲಿ ನಾನು ಕಲ್ಕತ್ತೆಗೆ ಹೋಗಿದ್ದೆ. ಬೆಂಗಾಲ್ ಮ್ಯೂಸಿಕ್ ಅಕಾಡೆಮಿಯಲ್ಲಿ ಅಮರ ಪಾಲ್ ಅಂತ ಒಬ್ಬರನ್ನ ಭೇಟಿ ಮಾಡಿದ್ದೆ.

**ಡೇ** : ಆತ ಬಹಳ ಒಳ್ಳೆ ಜಾನಪದ ಹಾಡುಗಾರ. ಅದ್ಭುತವಾದ ಕಂಠ ಆತನದು.

**ಟಿ. ವಿ. ಎಂ.** : ನನಗಾಗಿ ಅವರು ಒಂದು ಹಾಡೂ ಹೇಳಿದರು. ಆಗ ಅಕಾಡೆಮೀಲಿ ಸಲಿಲ್ ಚೌಧರಿನೂ ಇದ್ದರು. ಅಮರ ಪಾಲ್ ನನಗೆ ಅವರನ್ನ ಪರಿಚಯ ಮಾಡಿಸಿದರು. ಅವರ ಜೊತೆ 'ಚೆಮ್ಮೀನ್' ಚಿತ್ರದ ಬಗ್ಗೆ ಮಾತಾಡ್ತಾ 'ಮಾನಸ ಮೈನೆವೆರು' ಹಾಡನ್ನ ಜೇಸುದಾಸ್ ಹೇಳದೇ ಮನ್ನಾ ಡೇ ಯಾಕೆ ಹಾಡಿದರು ಅಂತ ಕೇಳ್ದೆ. ತುಂಬ ಆಶ್ಚರ್ಯಕರ ಸಂಗತಿಯೊಂದು ತಿಳೀತು. ಜೇಸುದಾಸ್ ಅವರೇ ಆ ಹಾಡನ್ನ ನೀವು ಹೇಳಬೇಕೂಂತ ಇಷ್ಟಪಟ್ಟರಂತೆ. ಮಲಯಾಳಿ ಹಾಡನ್ನ ಬಂಗಾಲಿಯೊಬ್ಬ ಹಾಡಬೇಕೂಂದರೆ...

**ಡೇ** : ಅದು ಆಗಿದ್ದು ಹೀಗೆ. ರಾಮು ಕರಿಯತ್ ಚೆಮ್ಮೀನ್ ಡೈರೆಕ್ಟರ್. ಅವರೇ ಬಂದು ಆ ಹಾಡನ್ನ ಹೇಳಬೇಕೂಂತ ಕೇಳಿಕೊಂಡರು. 'ಜೇಸುದಾಸರಂಥಾ ಶ್ರೇಷ್ಠ ಗಾಯಕ ಇದ್ದೂ ನಾನೇಕೆ' ಅಂತ ತಕರಾರು ತೆಗೆದೆ. 'ಹಾಡಿನಲ್ಲಿ... ಸ್ವಲ್ಪ... something special ಇದೆ ಮನ್ನಾ ಡೇ ಆಗ್ಬೇಕು' ಅಂತ ದುಂಬಾಲು ಬಿದ್ದರು.

**ವಿ. ವಾ.** : It's a great song !

**ಡೇ** : Yes. Great song. ಸಲಿಲ್ ರಾಗ ಹಾಕಿದ್ರಲ್ಲಿ ಸ್ವಲ್ಪ Western music ಅಂಶಗಳಿದ್ವು. ಧ್ವನಿಯ ಮೇಲೆ ಬಹಳ ಸೂಕ್ಷ್ಮದ ನಿಯಂತ್ರಣ ಬೇಕಾಗಿತ್ತು. ನನಗೆ Western songs ಹಾಡಿ ಅಭ್ಯಾಸ ಇತ್ತು. ಸಲಿಲ್‌ಗೆ ಗೊತ್ತಿತ್ತು ಇದು. ಆದರೆ ಮಲಯಾಳಿ ಭಾಷೆ ಭಾಳಾ ಕಾಟ ಕೊಡ್ತು. 'ವೆರು.... ನುಳ್ಳಿ' ಅದೆಲ್ಲ ಹೇಗೆ ಹೇಳೋದು ? ಪುಣ್ಯವಶಾತ್ ನನ್ನ ಹೆಂಡತಿ ಮಲಯಾಳಿ.

**ವಿ. ವಾ.** : ನಿನ್ನೆ ರಾತ್ರಿ ನೀವು ಅದನ್ನ ಹೇಳಲೇ ಇಲ್ಲವಲ್ಲ.

**ಡೇ** : ನೀವ್ಯಾರೂ ಕೇಳಲಿಲ್ಲ!

**ವಿ. ವಾ.** : (ನಗು) ಇಲ್ಲ ಇಲ್ಲ, ನಾನು... ಇಂಥಾ ಒಂದು ಗಳಿಗೆಗಾಗಿ ಕಾಯ್ತಾ ಇದ್ದೆ.

(ಆ ಹಾಡಿನ ವಿಶೇಷತೆ, ಸೂಕ್ಷ್ಮತೆಗಳನ್ನ ವಿವರಿಸುತ್ತಾ ಈ ಮಹಾನ್ ಗಾಯಕ ಅದ್ಭುತವಾದ ಹಾಡನ್ನ ನಮಗಾಗಿ... ಕೇವಲ ನಮಗಾಗಿ ಹಾಡಿದರು !)

**ವಿ. ವಾ.** : Thank you very much, sir.

**ಟಿ. ವಿ. ಎಂ.** : ನಮ್ಮ ಗೆಳೆಯರ ಸಂಗೀತ ಕೂಟದಲ್ಲೆಲ್ಲ ಸಾಮಾನ್ಯವಾಗಿ ಈ ಹಾಡಿನಿಂದಲೇ ಮುಗಿಸುತ್ತೇವೆ. ಇದು ನಮ್ಮ National Anthem. Believe it. (ನಗು.)

**ಡೇ** : ನನ್ನ ಹೆಂಡತಿ ಹೇಳಿಕೊಡದೇ ಇದ್ದರೆ... ನನಗೂ ಬರ್‍ತಾ ಇರ್‍ಲಿಲ್ಲ. ಸಲಿಲ್‌ಗೂ ಮಲಯಾಳಿ ಗೊತ್ತಿಲ್ಲ. ಬಾಂಬೇಲಿ ನನ್ನ ಮನೇಲಿ ಈ ಹಾಡು OK ಆದಾಗ ನನ್ನ ಎರಡು ಹೆಣ್ಣು ಮಕ್ಕಳು – ಆಗ ಸಣ್ಣವರು... ಭಾಳಾ ಕಿಲಾಡಿಗಳು... ಏನೆಂದರು ಗೊತ್ತಾ? 'ಡ್ಯಾಡಿ... Rubbish... ಇದೇನು ಮಲಯಾಳೀನಾ ? ಒಳ್ಳೆ ಬಂಗಾಲೀ ಹಾಡಿದ್ದ ಹಾಗೆ ಇದೆ.' ಆಮೇಲೆ ನನ್ನ ಹೆಂಡತಿ ಅದನ್ನ ಪೂರ್ತಿ ತಿದ್ದಿ ಹೇಳಿಕೊಟ್ಟಿದ್ದು!

**ವಿ. ವಾ.** : ನಮಗೆ ಬಂಗಾಲೀ ಸಂಗೀತ ನಿರ್ದೇಶಕರ ಬಗ್ಗೆ ಸ್ವಲ್ಪ ಹೇಳಿ.

**ಡೇ** : ತುಂಬ ಉತ್ತಮ ನಿರ್ದೇಶಕರಿದ್ದರು. ಆರ್. ಸಿ. ಬೋರಾಲ್... ಶ್ರೇಷ್ಠ ನಿರ್ದೇಶಕ. ಹಾಗೇ ನನ್ನ ಚಿಕ್ಕಪ್ಪ. ಅನುಪಮ್ ಘಟಕ್, ಸುಧೀರ್ ದಾಸ್‌ಗುಪ್ತಾ, ನಚೀಕೇತ ಘೋಷ್, ಸಲಿಲ್, ಅಭಿಜಿತ್ ಬ್ಯಾನರ್ಜಿ...

**ವಿ. ವಾ.** : ತಿಮಿರ್ ಭರನ್ ?

**ಡೇ** : ತಿಮಿರ್ ಭರನ್ ಸಂಗೀತ ನಿರ್ದೇಶಕ ಅಲ್ಲ, ಭಾಳಾ great ವಾದ್ಯಗೋಷ್ಠಿ ಸಂಯೋಜಕ. ಈಗ ಅವರ್‍ಯಾರೂ ಇಲ್ಲ. ಈಗ ಬಂಗಾಲಿಗಳೆಲ್ಲ ಹಿಂದಿ ಕಾಪಿ ಹೊಡೀತಾರೆ. ಕೇವಲ ಬಂಗಾಲಿಗಳಲ್ಲ, ಎಲ್ಲ ಕಡೆ ಹಿಂದಿ ಧಾಟಿಗಳೇ !

**ವಿ. ವಾ.** : ನೀವೂ ಹಿಂದಿ ಹಾಡು ಹೇಳಿದ್ದೀರಿ...

**ಡೇ** : Yes... ೨೫೦೦ ಹಿಂದಿ ಹಾಡುಗಳು. ಆದರೆ ಅದಕ್ಕಿಂತ ಜಾಸ್ತಿ ಬಂಗಾಲಿ ಹಾಡುಗಳು. ವಿಚಿತ್ರ ಗೊತ್ತಾ? ಬಂಗಾಲೀ ಹಾಡುಗಳನ್ನ ಹೇಳೋದೇ ಇಲ್ಲವಲ್ಲ ಅಂತ ನಮ್ಮಮ್ಮ ತುಂಬ ಪೇಚಾಡ್ತಾ ಇದ್ದರು. ನಾನು ಹಿಂದಿ ಚಿತ್ರರಂಗದಲ್ಲಿ ಹೆಸರು ಮಾಡಿದ ಮೇಲೆ ಬಂಗಾಲಿ ಚಿತ್ರರಂಗಕ್ಕೆ ಬಂದಿದ್ದು! ನಮ್ಮಮ್ಮ ನನ್ನನ್ನ 'ಮನ್ನಾ' ಅಂತಿದ್ದರು... Pet name.

**ವಿ. ವಾ** : 'ಮನ್ನಾ' ಅಂದ್ರೆ ?

**ಡೇ** : 'ಮನ್ನಾ'.. ಇಂಗ್ಲಿಷ್ ಪದ... ಅಮೃತ ಅಂತ. ನನ್ನ ಹೆಸರು ಪ್ರಭೋದ ಚಂದ್ರ ಡೇ.

**ವಿ. ವಾ** : ನೀವು ಬಾಂಬೇಗೆ ಬಂದಾಗ ಹಿಂದಿ ಚಿತ್ರರಂಗದ ಘಟಾನುಘಟಿಗಳು – ರಫಿ, ತಲತ್, ಹೇಮಂತ್ ಎಲ್ಲ ಇದ್ದರು.

**ಡೇ** : No. No... ಅವರ್ಯಾರೂ ಇರ್ಲಿಲ್ಲ! ಅವರೆಲ್ಲರಿಗಿಂತ ಸೀನಿಯರ್ ನಾನು! ನಾನು ೧೯೪೪ರಲ್ಲಿ ಮೊದಲು ಹಾಡಿದ್ದು 'ರಾಮರಾಜ್ಯ' ಅಂತ ಚಿತ್ರ.

**ವಿ. ವಾ** : "ಬೀನಾ ಮಧುರ ಮಧುರ ಕುಚ್ ಬೋಲ್ ?"

**ಡೇ** : Yes. ಶೋಭನಾ ಸಮರ್ಥ... ಅಂದ್ರೆ ನೂತನ್ ತಾಯಿ ಅದರ ನಾಯಕಿ. ಅದರಲ್ಲಿ male singer ನಾನು. ಸುಪ್ರಸಿದ್ಧ 'ತ್ಯಾಗಮಯಿ ತೂ ಗಯೀ, ತೇರಿ ಅಮರ ಭಾವನ ಅಮರ ರಹೀ' 'ಹಮ್ ಕಥಾ ಸುನಾತೇ ಹೈ' ಇತ್ಯಾದಿ ಹಾಡುಗಳನ್ನು ನಾನು ಹಾಡಿದ್ದು. ಆಗಿನ ಕಾಲದಲ್ಲಿ ಹಿನ್ನೆಲೆಗಾಯಕರ ಹೆಸರನ್ನೇ ಹಾಕ್ತಾ ಇರ್ಲಿಲ್ಲ! ೧೯೪೪ರಲ್ಲಿ ರಫಿ ನನ್ನ ಹಾಡಿನಲ್ಲಿ ಕೋರಸ್ ಸಿಂಗರ್ ಆಗಿದ್ದವರು. ತಲತ್, ಹೇಮಂತ್... ಎಲ್ಲ ನಂತರದಲ್ಲಿ ಬಂದವರು.

**ಟಿ. ವಿ. ಎಂ.** : ಮುಖೇಶ್ ?

**ಡೇ** : ಮುಖೇಶ್... ನಾನು ಸ್ವಲ್ಪ ಒಂದೇ ಕಾಲದವರು. ಒಟ್ಟಿಗೇ ಬಂದವರು. ೪೩ರಲ್ಲಿ ನಾನು ಬಾಂಬೇಗೆ ಬಂದಿದ್ದು Music Director ಆಗಬೇಕೂಂತ. ಸಂಗೀತ ಕಲೀಬೇಕೂಂತ. ಆಗ ಬಾಂಬೆಗೆ ದೇಶದ ಹಲವೆಡೆಗಳಿಂದ ಸಂಗೀತಕಾರರು ಬರ್‍ತಾ ಇದ್ರು. ದಕ್ಷಿಣದವರು ಕಡಿಮೆ. Real cosmopolitan ವಾತಾವರಣ ಇತ್ತು.

**ವಿ. ವಾ.** : ಮಂಗೇಶ್ಕರ್ ಸೋದರಿಯರು ?

**ಡೇ** : ಅವರೂ ನನ್ನ ನಂತರ ಬಂದವರು.

**ವಿ. ವಾ.** : ಹಾಗಾದ್ರೆ... ನೀವು... ನೂರ್‌ಜಹಾನ್... ಸುರೈಯ್ಯಾ....

**ಡೇ** : ನೂರ್‌ಜಹಾನ್ ಆವಾಗ ಶ್ಯಾಮಸುಂದರ್, ಸಜ್ಜಾದ್ ಅವರ ನಿರ್ದೇಶನದಲ್ಲಿ ಹಾಡ್ತಾ ಇದ್ರು. Great singer ! what a voice ! ಒಂದು ರೀತಿ ಆಕೆ ಲತಾಳ ಗುರು ಅನ್ನಬಹುದು.

**ಟಿ. ವಿ. ಎಂ.** : ಸಜ್ಜಾದ ಹುಸೇನ್ ಬಗ್ಗೆ ನಿಮ್ಮ ಅಭಿಪ್ರಾಯ ?

**ಡೇ** : Great man. ಆದರೆ ಆತ ಯಾವಾಗಲೂ ಒಳಗೇ ಹಾಡಿಕೊಂಡು ಇದ್ದವ. ಎಲ್ಲಿ ಯಾರು ತನ್ನ tune ಕದ್ದು ಬಿಡ್ತಾರೋ ಅಂತ ಹೆದರಿ ಚಡಪಡಿಸ್ತಾ ಇದ್ದ. ಒಳ್ಳೇ ಮ್ಯಾಂಡಲೀನ್ ವಾದಕ.

**ಟಿ. ವಿ. ಎಂ.** : ೭೩-೭೪ರಲ್ಲಿರಬೇಕು. ಆತ ಬೆಂಗಳೂರಿಗೆ ಬಂದಿದ್ದ. ಬೆಂಗಳೂರಿನ ಟೌನ್‌ಹಾಲಿನಲ್ಲಿ ಪ್ರೋಗ್ರಾಂ ಇತ್ತು. ನಮ್ಮ ಪಿ. ಬಿ. ಶ್ರೀನಿವಾಸ ಅವರ ಬಗ್ಗೆ ಒಂದು ಕವಿತೆ ಬರೆದು ಹಂಚಿದ್ದು ನೆನಪಿದೆ ನನಗೆ.

**ವಿ. ವಾ.** : ನಮ್ಮ ಚಿತ್ರರಂಗದ ಮಹಾನ್ ಗಾಯಕರು – ಅವರ ಪೈಕಿ ನೀವೂ ಒಬ್ಬರು. ಅವರಿಗೆ ನಿಮ್ಮನ್ನು ಹೋಲಿಸಿಕೊಂಡಾಗ ನಿಮ್ಮ 'ಮನ್ನಾ ಡೇತನ' ಯಾವುದು ಅಂತ ಅನ್ನಿಸತ್ತೆ?

**ಡೇ** : ಅವರೆಲ್ಲರಿಗಿಂತ ನಾನು ಭಿನ್ನ. ನನಗೆ ಹಿಂದೂಸ್ಥಾನಿ ಗಾಯನದ ಸೂಕ್ಷ್ಮಗಳೆಲ್ಲ ಗೊತ್ತಿತ್ತು. ಅಲ್ಲದೇ ಅವೆಲ್ಲವನ್ನೂ ಅತೀ ಕಡಿಮೆ ಅವಧಿಯಲ್ಲಿ ನಾನು ಹೊರಗೆಡಹಬಲ್ಲೆ. ವಿಲಂಬಿತ, ದ್ರುತ, ತರಾನಾ. ಇವೆಲ್ಲಕ್ಕೂ ಒಬ್ಬ ಸಂಗೀತಕಾರ ೧½ - ೨ ಗಂಟೆ ತೆಗೆದುಕೊಳ್ತಾನೆ. ಅಲ್ಲವಾ ? ಎಷ್ಟು ಜನಕ್ಕೆ ಅದನ್ನೆಲ್ಲ ಪೂರ್ತಿಯಾಗಿ ಅನುಭವಿಸಕ್ಕೆ ಆಗತ್ತೆ? ನಾವು 'ರಿಯಾಜ್' ಅಂತ ಮಾಡೋದನ್ನೆಲ್ಲ ಕೇಳುಗನ ಮೇಲ್ಯಾಕೆ ಪ್ರಯೋಗಿಸಬೇಕು ? ಏನಂತೀರಿ ? ಕೇಳುಗನಿಗೆ ರುಚಿಸುವಂತೆ ಹೇಳಕ್ಕೆ ಆಗಲ್ಲವಾ ? ಈ puristಗಳ ಹಠಮಾರಿತನ ನನಗಿಷ್ಟವಾಗಲ್ಲ. (ವಿವರಿಸಲು ಮನ್ನಾ ಡೇ ಹಾಡಿ ತೋರಿಸಿದರು.)

ಹಿನ್ನೆಲೆ ಗಾಯಕನಿಗಿರುವ ಎಲ್ಲ ತಂತ್ರಜ್ಞಾನಗಳನ್ನು ಉಪಯೋಗಿಸಿಕೊಂಡು ಶಾಸ್ತ್ರೀಯ ಸಂಗೀತವನ್ನು ಚೆನ್ನಾಗಿ ಹಾಡಲು ಪ್ರಯತ್ನಿಸಿದೆ. ಬಹಳ ಜನಕ್ಕೆ ಇಷ್ಟವಾಯ್ತು. ಬಡೇ ಗುಲಾಮ ಅಲಿಖಾನ್ ಸಾಹೇಬರು ಮೆಚ್ಚಿಕೊಂಡು "ಅರೇ ಭೈ ತುಮ್ ತೋ ತೀನ್ ತೀನ್ ಮಿನಿಟ್ ಮೇ ಕಮಾಲ್ ಕರತೇ ಹೋ" ಅಂತ ಹೊಗಳಿದರು. ಅವರ ಬಳಿ ಕಲಿಯಲು ಹೋಗಿದ್ದೆ ನಾನು. ನನಗೆ ಅವರ ಶೈಲಿಯ ಹಾಡುಗಾರಿಕೆ ಇಷ್ಟ. ಎಂಥಾ ಅಸಾಧಾರಣ ಗಾಯಕ ! Genius. ಕೇಳುಗರಿಗೆ ಜಾದೂ ಮಾಡಿಬಿಡುತ್ತಾ ಇದ್ರು. Oh, Great !

**ವಿ. ವಾ.** : ನಿಮ್ಮ ಪ್ರತಿಭೆಯನ್ನು ಅನಿಲ್ ಬಿಸ್ವಾಸ್, ನೌಷಾದ್, ರೋಷನ್, ಮದನ್ ಮೋಹನ್ ಮುಂತಾದವರೆಲ್ಲ ಚೆನ್ನಾಗಿ ದುಡಿಸಿಕೊಂಡರು... ಅವಕಾಶ ನೀಡಿದರು.

**ಡೇ** : ನೌಷಾದ್ ಅಲ್ಲ, ಅನಿಲ್ ಬಿಸ್ವಾಸ್ ಹೌದು. ಆತ ಒಬ್ಬ ಮಹಾನ್ ನಿರ್ದೇಶಕ. ಅನೇಕ ಗಾಯಕರನ್ನು ಸೃಷ್ಟಿಸಿದಾತ. ಕೇವಲ ಗೀತೆಗಳನ್ನಲ್ಲ, ಲತಾ ಅವರಿಂದ ಹೇರಳವಾಗಿ ಕಲಿತುಕೊಂಡಳು.

**ವಿ. ವಾ.** : ಅವರದೊಂದು... amazing song... ಲತಾ ಜೊತೆಗೆ ನೀವು ಹೇಳಿದ್ದೀರಿ. 'ಪೀ ಬಿನಾ ಸೂನಾರಿ.'

ಡೇ : 'ಹಮ್‌ದರ್ದ್' ಚಿತ್ರದ್ದು ನೀವು ಹೇಳಿದ್ದು ರೆಕಾರ್ಡಿನ ಎರಡನೇ ಭಾಗ. ಮೊದಲು 'ರಿತು ಆಯಿ ರಿತು ಜಾಯೇ ಸಖೀರಿ' – ನಂತರ 'ಬರಖಾ ರಿತು ಬೈರಿ ಹಮಾರ್' – ಆಮೇಲೆ 'ಪೀ ಬಿನಾ ಸೂನಾರಿ' – ಕೊನೆಯಲ್ಲಿ 'ಆಯಿ ಮಧು ರಿತು ಬಸಂತ ಬಹಾರ್.' ರಾಗಮಾಲ. ಬಹಳ ಸುಂದರವಾದ ಗೀತೆ. (ಹಾಡು ಹೇಳಿದರು. ಇದೊಂದು ಮರೆಯಲಾಗದ ಅನುಭವ.) ನಿನ್ನೆ ನನಗೆ ಕೆಮ್ಮಿನ ತೊಂದರೆ ಇತ್ತು, ಅಲ್ಲದೇ ಅರ್ಚನಾ ಉಡುಪ ಅವರಿಗೆ ಇದು ಗೊತ್ತಿರಲಿಲ್ಲ.

ಟಿ. ವಿ. ಎಂ. : ನಿನ್ನೆ ನಿಮ್ಮದು marathon ಕಾರ್ಯಕ್ರಮ. ನಿಮಗೆ ಇನ್ನೂ ಹಾಡಿ ಅಂತ ಪೀಡಿಸಕ್ಕೆ ಮನಸ್ಸು ಬರಲಿಲ್ಲ.

ಡೇ : ಛೇ ಛೇ..... ಹಾಗೇನೂ ಇಲ್ಲ. ಅಮೆರಿಕದಲ್ಲಿ..... ನನ್ನ ಇತ್ತೀಚಿನ ಕಾರ್ಯಕ್ರಮದಲ್ಲಿ ಹೀಗೆ ಆಯ್ತು. Full House ನಾನೇ ಮನ್ನಾ ಡೇ... ನನಗೆ ೮೦ ವರ್ಷ ಅಂದರೆ ಯಾರೂ ನಂಬಕ್ಕೆ ತಯಾರಿಲ್ಲ! ನಾನು ಹೇಳಿದೆ. I am an old man. Eighty plus. ಅದಿರಲಿ ; ನೀವು ನನ್ನ ಹಾಡುಗಳನ್ನ ಕೇಳಕ್ಕೆ ತಯಾರಿದೀರಾ ? ಕಾರ್ಯಕ್ರಮದ ನಂತರ ಬಹಳ ಖುಷಿಪಟ್ಟರು. ನಾನೇನು ಒಂದೈದಾರು ಹಾಡು ಹೇಳಬಹುದು ಅಷ್ಟೇ ಅಂತ ತಿಳಿದುಕೊಂಡಿದ್ದರು.

ವಿ. ವಾ. : ನಿನ್ನೆ ನಾವೂ ಹಾಗೇ ಅಂದುಕೊಂಡಿದ್ವು... But...

ಡೇ : ಇಲ್ಲ. ಕೆಲವು ಬಾರಿ ನನಗೆ ಹಾಡ್ತಾ ಹಾಡ್ತಾ ಕಂಠ ಸರಿಯಾಗಿ ಹೊಂದಿಕೊಂಡು... ಹಾಡುವ ಉಮೇದು ಹೆಚ್ಚಾಗ್ತಾ ಹೋಗುತ್ತೆ. New Jersey ಲಿ ಹೀಗೇ ಆಯ್ತು. I love singing.

ಟಿ. ವಿ. ಎಂ. : ನಮ್ಮಲ್ಲಿ ಬಹಳ ಜನ ವಯಸ್ಸಾದವರಿಗೆ ಹಾಗೆ ೨-೩ ಗಂಟೆ ಸುಮ್ಮನೆ ಕೂತುಕೊಳ್ಳೋಕೂ ಆಗಲ್ಲ! (ನಗು)

ಡೇ : Oh... I love singing and I love singing. ಸರಿಯಾದ ಕೇಳುಗರು ಸಿಕ್ರೆ ರಾತ್ರಿ ಇಡೀ ಹಾಡ್ತೀನಿ. ನೀವು ನನ್ನ ಬಂಗಾಲೀ ಹಾಡುಗಳನ್ನು ಕೇಳಬೇಕು. ಅದರ ಕಾವ್ಯದ ಅರ್ಥವನ್ನೆಲ್ಲ ವಿವರಿಸ್ತಾ ಹಾಡಕ್ಕೆ ನನಗೆ ತುಂಬ ಇಷ್ಟ.

ವಿ. ವಾ. : ಸರ್, ಇನ್ನೊಂದು ಬಾರಿ... ಕೇವಲ ನಿಮ್ಮ ಬಂಗಾಲೀ ಗೀತೆಗಳಿಗಾಗೇ ಬರ್ತೀವಿ. ನಿಮ್ಮ ಭೇಟಿ ಇಷ್ಟೊಂದು ಸರಾಗ ಅಂತ ತಿಳಿದಿರಲಿಲ್ಲ. ಪದೇ ಪದೇ ಬಂದ್ರೆ ನೀವೇನೂ ತಪ್ಪು ತಿಳಿಯಲ್ಲ ಅಲ್ಲವೇ ?

ಡೇ : ಇಲ್ಲ ಖಂಡಿತ ಇಲ್ಲ ... ನೀವು ನಿಜವಾಗಿ ರವೀಂದ್ರ ಗೀತೆಗಳನ್ನು ಕೇಳಬೇಕು. ತುಂಬ ವಿಶಿಷ್ಟವಾದ ರಚನೆಗಳು. ಅವುಗಳ ಕಾವ್ಯಗುಣ ಬೇರೆ ಯಾವುದಕ್ಕೂ ಇಲ್ಲ. ಅದಕ್ಕಿಂತ ಉತ್ತಮವಾದದ್ದು ನಾನು ಕಂಡೇ ಇಲ್ಲ!

ವಿ. ವಾ. : ದಯವಿಟ್ಟು "ದಿನೇರ್ ಶೇಷೇ....." ಹಾಡ್ತೀರಾ ?

ಡೇ : ಓ... ದಿನೇರ್ ಶೇಷೇ ? ತುಂಬ ಸುಂದರವಾದ ಹಾಡು (ಹಾಡುತ್ತಾ) What a song ! What a beautiful song ! ಇದನ್ನು ಮೊದಲು ಹಾಡಿದ್ದು ಪಂಕಜ್ ಮಲ್ಲಿಕ್. ಆಮೇಲೆ ಹೇಮಂತ್ ಹೇಳಿದರು. ನಾನು ಅವರಿಗೆ ಹಾಡಬೇಡ ಅಂತ ಹೇಳಿದ್ದೆ. ಪಂಕಜ್ ನಂತರ ಬೇರೆ ಯಾರೂ ಆ ಹಾಡು ಹೇಳಬಾರದು! ರವೀಂದ್ರ ಸಂಗೀತ ಮನೆ ಮಾತಾಗಿದ್ದೇ ಪಂಕಜ್ ಇಂದ. ನನಗೆ ನೆನಪಿದೆ. ನನ್ನ Intermediate ದಿನಗಳು ಪಂಕಜ್ ಹಾಡ್ತಾ ಇದ್ರೆ... ...ಓಹ್ ...ಅವರ 'ದಿನ್‌ಗೂಲಿ ಮೋರ್ ಶೋನಾರ್ ಕಾಂಚಾಯ್' ಕೇಳಬೇಕು. ಅದಕ್ಕಿಂತ ಉತ್ತಮ 'ಲಿರಿಕ್ಸ್' ಇಲ್ಲವೇ ಇಲ್ಲ! ಗಾಯಕನಾಗಿ ನನ್ನ ಅನುಭವದಿಂದ ಹೇಳ್ತಾ ಇದೀನಿ. ರವೀಂದ್ರ ಗೀತೆಗಳ ಕಾವ್ಯಮಯತೆ, ಲಯ, ಛಂದಸ್ಸು, ಪ್ರಾಸ, ಗೇಯತೆ.... ಅಮೋಘ... ಅಮೋಘ. ನಾನು ಸಾವಿರಾರು ಹಿಂದಿ ಹಾಡುಗಳನ್ನು ಹೇಳಿದೀನಿ. ಆದರೆ ನಿರಾತಂಕವಾಗಿ, ನಿರಾಯಾಸವಾಗಿ ತೊಡಕೇ ಇಲ್ದೇ ರವೀಂದ್ರ ಗೀತೆಗಳನ್ನು ಹಾಡಬಹುದು. It's a wonderful experience. ಆತನಿಗೆ ಸಂಗೀತವೂ ಎಷ್ಟೊಂದು ಗೊತ್ತಿತ್ತು!

ವಿ. ವಾ. : ನೀವು ಸೈಗಾಲನನ್ನೂ ಮೆಚ್ಚಿಕೊಳ್ತೀರಿ.... ಪಂಕಜ್‌ನನ್ನು ಇಷ್ಟ ಪಡ್ತೀರಿ. ಯಾರು ಚೆನ್ನ ?

ಡೇ : Certainly ಸೈಗಾಲ್ ! Remarkably beautiful voice ! ಪಂಕಜ್‌ಗೆ ಸೈಗಾಲರ ಕಂಠದ ಕುಸುರಿ ಕೆಲಸ ಗೊತ್ತಿರಲಿಲ್ಲ. ಅದಕ್ಕೇ ಪಂಕಜ್ ಕೂಡಾ ಸೈಗಾಲರಿಂದ ಹಾಡಿಸ್ತಾ ಇದ್ದಿದ್ದು. ಸೈಗಾಲರ ಜೊತೆ ಹೋಲಿಸಿದರೆ ಪಂಜಕ್ ಸ್ವಲ್ಪ ಒರಟು ("ಮದ್ ಭರೀ......" ಹಾಡಿ ತೋರಿಸಿದರು.)

ವಿ. ವಾ. : ಕನ್ನಡದಲ್ಲಿ 'ಕುಹು ಕುಹು ಎನ್ನುತ ಹಾಡುವ' ಅನ್ನೋ ಹಾಡು ಹೇಳಿದ್ದೀರಲ್ಲ... ಅದೇ ಚಿತ್ರದಲ್ಲಿ... ದಕ್ಷಿಣದವರಾದ ಮೋತಿ ಅಂತ... ನಿಮ್ಮ ಥರಾನೇ ಹಾಡ್ತಾ ಇದ್ರು. "ಗಾನ ನಾಟ್ಯ ರಸಧಾರೆ"... ಗೊತ್ತಾ ?

ಡೇ : ಹೌದಾ ? ನನಗೆ ಗೊತ್ತಿಲ್ಲ.

ವಿ. ವಾ. : ಸರ್ 'ಹರಿಯಾಲ ಸಾವನ್ ಢೋಲ್...' ಬಗ್ಗೆ ಸ್ವಲ್ಪ ಹೇಳ್ತೀರಾ ?

ದೇ : (ಹಾಡುತ್ತಾ) ಸಲಿಲ್ ಇಂಥಾ ಜಾನಪದ ಧಾಟಿಗಳನ್ನೆಲ್ಲ ಚೆನ್ನಾಗಿ ಉಪಯೋಗಿಸಿಕೊಂಡ. ಅದು ಅವನ ಸ್ವಂತದ್ದೇನೂ ಅಲ್ಲ. ಬಿಹಾರಿ Folk song.

ವಿ. ವಾ. : ಆ 'ಬಿಛುವಾ' ಗೀತೆ ?

ದೇ : ದಯ್ಯಾರೇ... ದಯ್ಯಾರೇ.... ಅದೂ Great. ಹಿಮಾಚಲ ಪ್ರದೇಶದ Folk.

ವಿ. ವಾ. : ಭೀಮಸೇನ್ ಜೋಷಿ ಜೊತೆ "ಕೇತಕೀ ಗುಲಾಬ್" ಹೇಳಿದ್ದೀರಿ.....

ದೇ : That was a beautiful experience. ಎಂಥಾ ಮಹಾನ್ ಗಾಯಕನ ಜೊತೆ ಹಾಡಿ 'ಗೆಲ್ಲ' ಬೇಕಾಗಿತ್ತು ನಾನು ! Life - time experience. ತುಂಬ ಟೆನ್ಷನ್ ಇತ್ತು. ನನ್ನ ಹೆಂಡತಿ "ನೀನು ಹೀರೋಗೆ ಹಾಡು ಹೇಳ್ತಾ ಇದೀಯ.... ನೀನೇ ಗೆಲ್ತೀಯ" ಅಂತೆಲ್ಲ ಪುಸಲಾಯಿಸಿದಳು. ಸ್ಕ್ರಿಪ್ಟ್ ಕೂಡ ಹಾಗೇ ಇತ್ತು. ಕೊನೆಗೆ ನಾನೇ ಗೆದ್ದೆ! (ನಗು)

ವಿ. ವಾ. : 'ಬಸಂತ ಬಹಾರ್' ಕನ್ನಡದ ಕತೆ. 'ಹಂಸಗೀತೆ' ಅಂತ... ಗೊತ್ತಾ? ನಿಮ್ಮ ಹಾಡುಗಳಿಂದಲೇ ಅದೊಂದು ಮರೆಯಲಾಗದ ಚಿತ್ರವಾಗಿ ಉಳಿದಿದೆ.

ದೇ : ಗೊತ್ತಾ ನಿಮಗೆ ? ಆ ಹಾಡುಗಳನ್ನೆಲ್ಲ ರಫಿ ಹಾಡ ಬೇಕಾಗಿತ್ತು. ಅಷ್ಟೊತ್ತಿಗೆ ಆಗಲೇ "ತಡಪತ್ ಹರಿ ದರುಶನ್" ರಫಿ ಹೇಳಿದ್ರು. ಬೈಜುಬಾವ್ರಾ ಮೊದಲು ರಿಲೀಸ್ ಆಯ್ತು. ಎರಡೂ ಚಿತ್ರಗಳಲ್ಲಿ ಭರತ್ ಭೂಷಣ್ ಹೀರೋ. 'ಬಸಂತ್ ಬಹಾರ್'ಗೆ ಭರತ್‌ಭೂಷಣ್ ಅಣ್ಣ... ಶಶಿಭೂಷಣ್... ಅಂತ... ನಿರ್ಮಾಪಕರು. ಅವರು ಹಾಡುಗಳನ್ನ ರಫೀನೇ ಹಾಡ ಬೇಕೂಂತ ಹಠ ಹಿಡಿದರು. ಆಗ ಅದೊಂದು ದೊಡ್ಡ controversy. ಆದರೆ... ಸಂಗೀತ ನಿರ್ದೇಶಕ ಶಂಕರ್ (ಜೈಕಿಷನ್ ಜೋಡಿ) ಪಟ್ಟುಹಿಡಿದು ಹಾಡುಗಳನ್ನು ನನ್ನಿಂದ ಹಾಡಿಸಿದರು.

ಟಿ. ವಿ. ಎಂ. : ನಿಮ್ಮ 'ಮಧುಶಾಲಾ' ಹಾಡು ತುಂಬ ಚೆನ್ನಾಗಿದೆ. ಅಪರೂಪ. ಕೇಳಕ್ಕೇ ಸಿಗಲ್ಲ....

ದೇ : ನಿನ್ನೆ ಹಾಡಿದೆನಲ್ಲ? ಆದರೆ 'ಮಧುಶಾಲಾ'ಗೆ ತುಂಬ selected ಕೇಳುಗರು ಬೇಕು. ಕಾವ್ಯದ ಅರ್ಥವಲ್ಲದೇ ಸಂಗೀತದ ಸೂಕ್ಷ್ಮಗಳೂ ತಿಳಿದಿರಬೇಕು. ತಿಳಿಯುವ ಹಾಗೆ ಹಾಡಬೇಕು.

ವಿ. ವಾ. : ಹಿಂದಿ ನಿಮ್ಮ ಮಾತೃಭಾಷೆ ಅಲ್ಲ. ಆದರೂ....

ದೇ : ಮಾತೃಭಾಷೆ ಅಲ್ಲ. ಸಹಜವಾಗಿ ಬಂದಿದ್ದು. ಬಾಲ್ಯದಲ್ಲಿ ನಮ್ಮ ಮನೆಗೆ ಉಸ್ತಾದರು, ಪಂಡಿತರು ಬರ್ತಾ ಇದ್ರಲ್ಲ? ಭಾಷೆಯನ್ನ ತರಗತಿಗಳಲ್ಲಿ ಕಲಿಯುವುದಕ್ಕಿಂತ ಹೀಗೆ ಸಹಜವಾಗಿ... ಮಾತಾಡ್ತಾ ಮಾತಾಡ್ತಾ ಕಲೀಬೇಕು.

ವಿ. ವಾ. : "ಏಕ್ ದಿನ್ ಬಿರ್ ಗಯಾ" Great song. "ದೂರ್ ಕಾ ರಾಹಿ" ಚಿತ್ರದ್ದು. ಕಿಶೋರ್ ಸ್ವತಃ ತಾನೇ ಗಾಯಕನಾಗಿದ್ದೂ ನಿಮ್ಮಿಂದ ಇದನ್ನ ಹೇಳಿಸಿದ್ದಾರಲ್ಲ.... Please ಹಾಡಿ.

ದೇ : That's a beautiful song..

ವಿ. ವಾ. : Lovely song. ಅಪರೂಪದ ಹಾಡು.

ದೇ : I love that song. ವಿಚಿತ್ರ ಗೊತ್ತಾ? ಚಿತ್ರದಲ್ಲಿ ಆ ಹಾಡು ಇಲ್ಲವೇ ಇಲ್ಲ! ಕಿಶೋರ್‌ಗೆ ಇಂಥ ಕೆಲವು ತಾಪತ್ರಯಗಳಿದ್ವು. ಒಂಥರಾ inferiority complex. ಕತೆಗೆ ತೀರಾ ಅಗತ್ಯವಾಗಿತ್ತು ಆ ಹಾಡು. ಬೇಕಾದಷ್ಟು ಹಣ ಖರ್ಚು ಮಾಡಿದ್ದ. ಅದು ಅವನದ್ದೇ ಚಿತ್ರ. ಆದರೆ ಕೊನೆಯಲ್ಲಿ ಆ ಹಾಡು ಕಿತ್ತಾಕೇ ಬಿಟ್ಟ!

ವಿ. ವಾ. : ನಿನ್ನೆ ನೀವು ನನ್ನ ಮೂರು ಫೇವರಿಟ್ ಹಾಡುಗಳು... ತೂ ಚುಪೀ ಹೈ ಕಹಾ/ಹಸನೇ ಕಿ ಚಾಹ್‌ನೇ/ಫಿರ್ ಕಹಿ ಕೋಯಿ ದೀಪ್ ಜಲೇ.... ಹಾಡಲೇ ಇಲ್ಲ.

ದೇ : (ನಗುತ್ತಾ) ಅರೈ ಬೈ.... ನೀವು ಕೇಳಲಿಲ್ಲ.. ನಾನು ಹಾಡಲಿಲ್ಲ.

ವಿ. ವಾ. : ಇಲ್ಲ ನಾನು ಮತ್ತೆ ಬರ್ತೀನಿ. ನೀವು ಹಾಡ್ಬೇಕು.

ಟಿ. ವಿ. ಎಂ. : ನಿಜವಾಗಿ ಸರ್. ಕಳೆದ ಒಂದು ವರ್ಷದಿಂದ ನಿಮ್ಮನ್ನ track ಮಾಡಕ್ಕೆ ಪ್ರಯತ್ನಿಸ್ತಾ ಇದೀವಿ.

ದೇ : ನೋಡಿ. ತಿಂಗಳಿಗೆ ಎರಡು ಬಾರಿ ನಾನು ಕಲ್ಕತ್ತಾಗೆ ಹೋಗಬೇಕು. ವರ್ಷಕ್ಕೊಮ್ಮೆ ಅಮೆರಿಕಾಗೆ. ಅಲ್ಲಿ ನನ್ನ ಮಗಳಿದ್ದಾಳೆ. ನಾನು ಬೆಂಗಳೂರಲ್ಲೇ ಇದ್ದಾಗ ನೀವು ಯಾವಾಗ ಬೇಕಾದ್ರೂ ಬರಬಹುದು.

ವಿ. ವಾ. : ಈ ಪ್ರಶ್ನೆ ಕೇಳದೇ ಇದ್ದರೆ..... ಮನಸ್ಸಿಗೆ ಸಮಾಧಾನ ಇಲ್ಲ. ಲತಾ... ಮತ್ತು ಆಶಾ ಬಗ್ಗೆ...

ದೇ : Most versatile singers. ಅವರಿಬ್ಬರೂ ಎಂಥ ಹಾಡನ್ನ ಬೇಕಾದ್ರೂ ಸುಲಲಿತವಾಗಿ ಹಾಡಿಬಿಡ್ತಾರೆ. ಅವತ್ತಿಂದ ಇವತ್ತಿನವರೆಗೂ... ಯಾರಿಗೂ ಅವರನ್ನ ಮೀರಕ್ಕೆ ಆಗಿಲ್ಲವಲ್ಲ! Totally invincible ! ಆಶಾ terrific singer. What a terrific singer ! ಲತಾಗಿಂತ ಹೆಚ್ಚು talented.... ಆದರೆ ಲತಾ ? ಓಹ್.... ಆಕೆಯ ಹಳೆಯ ಹಾಡುಗಳನ್ನ ಕೇಳಬೇಕು ನೀವು. ಮತ್ತೆ ಎಂಥ ಕಠಿಣ ಪರಿಸ್ಥಿತಿಯಲ್ಲಿ ಬಂದವಳು ಆಕೆ. ಅವರಪ್ಪ ಒಬ್ಬ ನಾಟ್ಯ ಸಂಗೀತ ಹೇಳ್ತಿದ್ದವರು ಅಷ್ಟೇ. ಆಮೇಲೆ ಅಮನ್ ಅಲೀ ಖಾನರ ಬಳಿ ಸ್ವಲ್ಪ ಕಲಿತಳು. ಮಿಕ್ಕಿದ್ದೆಲ್ಲ ಸ್ವಂತ ಸಾಧನೆ. ಆಕೆಯ ಹಾಡುಗಳನ್ನ ಅನೇಕ ಬಾರಿ ಕೇಳಿದೀನಿ. ನಾನೂ ಒಬ್ಬ ಹಿನ್ನೆಲೆ ಗಾಯಕನಾಗಿರುವುದರಿಂದ ಗೊತ್ತು. My God. ಆಕೆ 'ಉಸಿರಾಡು'ವುದೇ ಒಂದು ಸೊಗಸು! ಅಚ್ಚರಿ! ಕೆಲವು ಕಡೆಯ ಆಕೆಯ 'ಹರ್ಕತ್'ಗಳನ್ನ ಕೇಳಬೇಕು! ಎಂಥಾ ಸರಾಗ! ನಿರರ್ಗಳ! ಬೇರೆ ಯಾರಿಗೂ ಅವಳೆತ್ತರಕ್ಕೆ ಏರಲು ಸಾಧ್ಯವಾಗಿಲ್ಲ. ಆಶಾ ಉತ್ತಮ ಹಾಡುಗಾರ್ತಿಯಾದರೂ ಲತಾಳ ಸಾಧನೆಯ ಅರ್ಧದಷ್ಟೂ ತಲುಪಲಾಗಿಲ್ಲ.

ವಿ. ವಾ. : ಓ. ಪಿ. ನಯ್ಯಾರ್ ನೆನಪಾಗ್ತಾ ಇದಾರೆ... ನೀವ್ಯಾಕೆ....

ದೇ : ಆತ ಮಹಾನ್ ರಫೀ ಭಕ್ತ! ಪಂಜಾಬಿ ಧಾಟಿಗಳಿಗೆ ಅವರ ಜೋಡಿ ಸರಿಯಾಗಿತ್ತು. ಸ್ವಲ್ಪ frank ಆಗಿ ಹೇಳ್ತೀನಿ... ನಯ್ಯಾರ್, ನೌಷಾದ್ ಅವರಿಗೆಲ್ಲ ರಫೀನೇ ಆಗಬೇಕಾಗಿತ್ತು.

ವಿ. ವಾ. : ಕೆಲವು ಯುಗಳ ಗೀತೆಗಳು ನೆನಪಾಗ್ತಾ ಇವೆ. "ಜುಲ್ಫೋಂಕಿ ಘಟಾ ಲೇಕರ್/ಕಿನಾರೇ ಕಿನಾರೇ/ದೇಖತೋ ಗಗನ ಝೂಮೇ/ತುಮ್ ಗಗನಕೀ ಚಂದ್ರಮಾ/ನ ಜಾನೇ ಕಹಾ ಹಂ ಥೇ/ನಾತೋ ಕಾರವಾ ಕೀ/ಘನ ಶ್ಯಾಮ ಸುಂದರ... ಇದನ್ನ ಕನ್ನಡದಲ್ಲಿ ಹಾಡಿದ್ದೀರಿ.

ದೇ : ಹಿಂದಿ, ಬಂಗಾಲೀಗಳಲ್ಲೂ ಹಾಡಿದ್ದೀನಿ ಲತಾ ಜೊತೆ.

ವಿ. ವಾ. : ಅದು ಪಂಡಿತ್ ನಗರ್‌ಕರ್ ಅಲ್ಲವಾ ?

ದೇ : ನಗರ್‌ಕರ್ ಮರಾಠಿಯಲ್ಲಿ ಹಾಡಿದ್ದು. ಹಿಂದಿ 'ಅಮರ ಭೂಪಾಳಿ'ಯಲ್ಲಿ ನಾನು ಹಾಡಿರೋದು. Incidentally ಇದು ಬಂಗಾಲಿಯಲ್ಲಿ ನಾನು ಹೇಳಿದ ಮೊದಲ ಹಾಡು ! (ಬಂಗಾಲಿ 'ಘನಶ್ಯಾಮ ಸುಂದರ' ಹಾಡಿನೊಂದಿಗೆ ನಮ್ಮ ಮಾತು-ಕತೆ ಮುಗಿಯಿತು... ...ಅಥವಾ ಪ್ರಾರಂಭವಾಯ್ತು!?)

---

ವಿಜಯ ವಾಮನ
'ಗುಲ್‌ಮೊಹರ್', ನಂ. ೧, ಕೆ.ಎಚ್.ಬಿ. ಕಾಲೋನಿ, ಗಾಂಧಿನಗರ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

---

## ನೇಪಥ್ಯಕ್ಕೆ ಸರಿದ ಬಿ. ಎನ್. ನಾಣಿ

*ನಿಧನ : ೪.೧೨.೨೦೦೩*

### ನಮ್ಮ ನಮನ



ಯಾವತ್ತಿಗೂ ನಮ್ಮಲ್ಲಿ ರಂಗಭೂಮಿ ಚಟುವಟಿಕೆಯ ಅವಿಭಾಜ್ಯವಾಗಿಯೇ ಬೆಳೆದು ಬಂದ ಪ್ರಸಾಧನ ಕಲೆ ಆಧುನಿಕತೆ, ಹೊಸ ಆಯಾಮ, ಹೊಸ ಬಣ್ಣಗಳಿಂದ ತನ್ನ ಸ್ವಂತಿಕೆಯನ್ನು ಮೆರೆದದ್ದು ೬೦-೭೦ರ ದಶಕಗಳಲ್ಲಿ. ಬಿ. ಎನ್. ನಾಣಿ ಇದರ ರೂವಾರಿ. ನಿರ್ದೇಶನ, ನಟನೆ, ರಂಗಸಜ್ಜಿಕೆಗಳಲ್ಲಿಯೂ ನಾಣಿ ಎತ್ತಿದ ಕೈ. ೧೯೫೬ರಲ್ಲಿ ಮುಂಬೈನಲ್ಲಿ ಜರುಗಿದ ವಿಶ್ವರಂಗಭೂಮಿ ಸಮ್ಮೇಳನದಲ್ಲಿ ಭಾಗವಹಿಸಿದ ನಾಣಿ ಅನಂತರ ಹೆಜ್ಜೆ ಇಟ್ಟದ್ದು ಲಂಡನ್ನಿನತ್ತ, ಅಲ್ಲಿ ಪ್ರಸಾಧನ ಕಲೆಯಲ್ಲಿ ಉನ್ನತ ಮಟ್ಟದ ತರಬೇತಿ, ಅನುಭವ. ರಾಷ್ಟ್ರೀಯ ನಾಟಕ ಶಾಲೆ ಮತ್ತು ಸುಚಿತ್ರ ಫಿಲಂ ಸೊಸೈಟಿಯ ಹುಟ್ಟಿಗೆ ನಾಣಿಯ ಕೊಡುಗೆ ಗಮನಾರ್ಹ. ಅಬಚೂರಿನ ಪೋಸ್ಟ್ ಆಫೀಸು, ಸಂಸ್ಕಾರದಂತಹ ಶ್ರೇಷ್ಠ ಚಿತ್ರಗಳಲ್ಲಿನ ನಾಣಿಯ ಅಭಿನಯ ಅವಿಸ್ಮರಣೀಯ. ಈ ಅಪರೂಪದ ಕಲಾವಿದ, ಒಡನಾಡಿಗಳಿಗೆ ತನ್ನ ಕಡೆಯ ದಿನಗಳವರೆಗೂ ಉತ್ಸಾಹದ ಚಿಲುಮೆಯಾಗಿದ್ದರು. ತುಂಟುನಗೆ, ಚೇಷ್ಟೆಯ ಕಣ್ಣುಗಳು ನಾಣಿಯ ಟ್ರೇಡ್ ಮಾರ್ಕ್. ಅವರ ನಿರ್ಗಮನದಿಂದ ರಂಗಭೂಮಿ ಇದೀಗ ಮಸುಕಾಗಿದೆ. ನಾಟಕ ಬದುಕಿಗೇ ತಮ್ಮನ್ನು ಸಮರ್ಪಿಸಿಕೊಂಡಿರುವ ಪತ್ನಿ ಭಾರ್ಗವಿ ನಾರಾಯಣ್ ಮತ್ತು ಕುಟುಂಬದ ಸದಸ್ಯರು, ಸಹ ಕಲಾವಿದರು ರಂಗಕಲೆಗೆ ಇನ್ನೂ ಹೆಚ್ಚಿನ ಉತ್ಸಾಹದಿಂದ ಆ ಕೆಲಸವನ್ನು ಮುಂದುವರಿಸಬೇಕಾಗಿದೆ.

ಸಾವಿನ ನಂತರ ತನ್ನ ಶರೀರವನ್ನೇ ಆಸ್ಪತ್ರೆಗೆ ಒಪ್ಪಿಸಿಬಿಡಬೇಕೆಂಬ ಆತನ ಸದಿಚ್ಛೆ ಅನುಕರಣೀಯ.

ಪರದೆಯ ಹಿಂದೆ ಮುಂದೆ ಸುಮಾರು ನಾಲ್ಕು ದಶಕಗಳ ಕಾಲ ದುಡಿದ ಬಿ. ಎನ್. ನಾಣಿ ಈಗ ಬಹುದೂರದ ನೇಪಥ್ಯಕ್ಕೆ ಸರಿದುಹೋಗಿದ್ದಾರೆ.

ಹೆಚ್ಚು ಹೇಳಿ ಆ ಸಾರ್ಥಕ ಸಹಜ ಬದುಕಿಗೆ ಮೇಕಪ್ ಬೇರೆ ಬೇಕೆ ?

■ ಎಸ್. ಸುರೇಂದ್ರ

# ಆಧುನಿಕ ಮನಸ್ಸಿನ ಹಿರಿಯ ಸ್ತ್ರೀವಾದಿ

# ದೇವಕಿ ಜೈನ್



*"ಭಾರತದಲ್ಲಿ ಮಹಿಳೆಯರ ಪಾತ್ರಗಳನ್ನು ಕುರಿತಂತೆ ಚರ್ಚಿಸಲು ಸಿದ್ಧಾಂತವೊಂದರ ಅಗತ್ಯವಿದೆ. ಚಿಂತನಾಕ್ರಮದಲ್ಲಿ ಉದ್ದೇಶಪೂರ್ವಕವಾದ ಅಂತಹ ಪ್ರಯತ್ನವಿಲ್ಲದಿದ್ದರೆ, ಪರ್ಯಾಯ ಮಾರ್ಗಗಳನ್ನು ಎಚ್ಚರಿಕೆಯಿಂದ ಆಯ್ಕೆ ಮಾಡಿಕೊಳ್ಳದಿದ್ದರೆ, ಭವಿಷ್ಯದ ಬಗ್ಗೆ ಪರ್ಯಾಯ ದೃಷ್ಟಿಯೊಂದನ್ನು ಬೆಳೆಸಿಕೊಳ್ಳದಿದ್ದರೆ ಅವರ ಗತಚರಿತ್ರೆಯು ಅಳಿಸಿಹೋಗುತ್ತದೆ; ಭವಿಷ್ಯವು ಅನಿಶ್ಚಯವಾಗುತ್ತದೆ."* ೧೯೭೪ರಲ್ಲಿ ಪ್ರಕಟವಾದ Indian Women ಪುಸ್ತಕದ ಮುನ್ನುಡಿಯಲ್ಲಿ ದೇವಕಿ ಜೈನ್ ಈ ಮಾತುಗಳನ್ನು ಬರೆಯುತ್ತಾರೆ.

ಹೀಗೆ ಮೂರು ದಶಕಗಳ ಹಿಂದೆಯೇ ಭಾರತದಲ್ಲಿ ಮಹಿಳಾ ಅಧ್ಯಯನ ಮತ್ತು ಸ್ತ್ರೀವಾದಿ ಚಳುವಳಿಯು ಅಂಕುರಿಸುತ್ತಿದ್ದ ಸಂದರ್ಭದಲ್ಲಿ ಅದಕ್ಕೊಂದು ಸೈದ್ಧಾಂತಿಕ ಸ್ವರೂಪದ ಅಗತ್ಯತೆಯನ್ನು ಪ್ರತಿಪಾದಿಸಿದ ಆರಂಭದ ಸ್ತ್ರೀವಾದಿ ಚಿಂತಕಿಯರಲ್ಲಿ ಅರ್ಥಶಾಸ್ತ್ರಜ್ಞೆ ಡಾ॥ ದೇವಕಿ ಜೈನ್ ಪ್ರಮುಖರು. ಹುಟ್ಟಿ ಬೆಳೆದದ್ದು ಬೆಂಗಳೂರಿನಲ್ಲಾದರೂ ಅಧ್ಯಯನ, ಉದ್ಯೋಗಕ್ಕೆಂದು ಐವತ್ತು ವರ್ಷಗಳ ಹಿಂದೆಯೇ ದೂರದ ದೆಹಲಿಗೆ, ಇಂಗ್ಲೆಂಡ್, ದಕ್ಷಿಣ ಆಫ್ರಿಕಾಕ್ಕೆ ಹೋಗಿ ವಾಸಿಸುತ್ತಾ ಕನ್ನಡಿಗರಿಗೆ ದೂರವೇ ಆದ ದೇವಕಿ ಜೈನ್, ಅವರ ಪುಸ್ತಕ, ಲೇಖನ, ವಿಚಾರಗಳಿಂದ ಮಾತ್ರ ನಮಗೆ ಪರಿಚಿತರಾಗಿದ್ದವರು. ೧೯೭೪ರಲ್ಲಿ ಇವರು ಸಂಪಾದಿಸಿದ Indian Womenನಿಂದ ಹಿಡಿದು ನಂತರದ ನಿಯತಕಾಲಿಕಗಳಲ್ಲಿ ಪ್ರಕಟವಾಗುತ್ತಿದ್ದ ಅವರ ಹಲವಾರು ಲೇಖನಗಳನ್ನು ಓದುತ್ತಿದ್ದ ನನಗೆ ಅವರನ್ನು ಮುಖತಃ ಭೇಟಿಯಾಗುವ, ಅವರ ಮಾತು ಕೇಳುವ ಅವಕಾಶ ಒಮ್ಮೆಯೂ ದೊರಕಿರಲಿಲ್ಲ. ಅಕೆಡಮಿಕ್ ವಲಯದಲ್ಲಿ ಹೆಸರಾಗಿದ್ದ ಇವರು ದಂತಗೋಪುರದಲ್ಲಿ ಕೂತು ಮಹಿಳೆಯರ ಬಡತನ, ಅಸಹಾಯಕತೆ, ಅವರಿಗಾಗುವ

**ಡಾ॥ ಎನ್. ಗಾಯತ್ರಿ**

ಭಾರತದ ಮಹಿಳಾ ಚಳುವಳಿ ಮತ್ತು ಮಹಿಳಾ ಅಧ್ಯಯನದಲ್ಲಿ ದೇವಕಿ ಜೈನ್ ಒಂದು ಪ್ರಮುಖ ಹೆಸರು. ಬಹುಮುಖ್ಯ ಅಭಿವೃದ್ಧಿ ಅರ್ಥಶಾಸ್ತ್ರಜ್ಞೆಯಾದ ದೇವಕಿ ಜೈನ್ ೧೯೯೩ರಿಂದ ೧೯೯೯ರವರೆಗೆ ಕರ್ನಾಟಕ ಸರ್ಕಾರದ ಯೋಜನಾ ಸಮಿತಿಯ ಅಧ್ಯಕ್ಷೆಯಾಗಿದ್ದರು. ರಾಷ್ಟ್ರೀಯ ಮಟ್ಟದ ಹಲವಾರು ಯೋಜನೆಗಳನ್ನು ರೂಪಿಸುವ ಸಲಹಾ ಮಂಡಳಿಯ ಸದಸ್ಯೆಯಾಗಿ ಕಾರ್ಯ ನಿರ್ವಹಿಸಿದ್ದಾರೆ. ವಿಶ್ವ ಸಂಸ್ಥೆಯ ಜಾಗತಿಕ ಸಮ್ಮೇಳನದಲ್ಲಿ ಭಾರತ ಸರ್ಕಾರವು ಮಂಡಿಸುವ ದಸ್ತಾವೇಜು ಕರಡು ನೀತಿಯನ್ನು ರಚಿಸುವ ಕೆಲಸವನ್ನು ಹಲವಾರು ಬಾರಿ ದೇವಕಿ ಜೈನ್ ಮಾಡಿದ್ದಾರೆ. ಮೆಕ್ಸಿಕೋ, ನೈರೋಬಿ, ಕೈರೋ ಮತ್ತು ಬೀಜಿಂಗ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಮಹಿಳಾ ಸಮ್ಮೇಳನಗಳಲ್ಲಿ ಭಾಗವಹಿಸಿರುವ ದೇವಕಿ ಜೈನ್ ಸರಕಾರದ ಪರವಾಗಿ ಸಲಹೆಯ ಕರಡು ಪ್ರತಿಯನ್ನು ಸಿದ್ಧಗೊಳಿಸುವ ಕಾರ್ಯ ಮಾಡಿದವರು.

ಮಾನವ ಸಂಪನ್ಮೂಲ ಇಲಾಖೆ, ಗ್ರಾಮೀಣ ಅಭಿವೃದ್ಧಿ ಇಲಾಖೆ, ಕಾರ್ಮಿಕರ ಇಲಾಖೆ, ಕೇಂದ್ರ ಯೋಜನಾ ಇಲಾಖೆ, ವಿಶ್ವವಿದ್ಯಾಲಯ ಧನ ಸಹಾಯ ಆಯೋಗ, ರಾಷ್ಟ್ರೀಯ ಮಹಿಳಾ ಆಯೋಗಗಳ ಸಲಹಾ ಸದಸ್ಯೆಯಾಗಿ ಕೆಲಸ ಮಾಡಿದ್ದಾರೆ. 'ಕಾಳಿ' ಸ್ತ್ರೀವಾದಿ ಸಂಶೋಧನಾ ಸಂಸ್ಥೆ ಹಾಗೂ ಭಾರತೀಯ ಮಹಿಳಾ ಅಧ್ಯಯನ ಸಂಘ (IAWS)ದ ಸ್ಥಾಪಕ ಸದಸ್ಯೆಯೂ ಹೌದು. ವಿಶ್ವಸಂಸ್ಥೆಯ ಅಂಗಸಂಸ್ಥೆಗಳಾದ ಯೂನಿಫೆಮ್, ಯುನೆಸ್ಕೊ, ಯುನಿಸೆಫ್, ಐ.ಎಲ್.ಓ, ಡಬ್ಲ್ಯು.ಎಚ್.ಓ. – ಮುಂತಾದ ಸಂಸ್ಥೆಗಳ ಸಲಹಾ ಸದಸ್ಯೆಯಾಗಿ ಕೆಲಸ ಮಾಡಿದ್ದಾರೆ.

ಗಾಂಧಿ ತತ್ವಗಳಿಂದ ಪ್ರೇರಿತರಾದ ದೇವಕಿ ಜೈನ್‌ರವರ ಅಕೆಡಮಿಕ್ ಸಂಶೋಧನೆ ಮತ್ತು ಪ್ರತಿಪಾದನೆಯು ಅವರು ರಚಿಸಿರುವ ಮಹಿಳೆ, ಧರ್ಮ, ವಿಶ್ವಶಾಂತಿ, ಆರ್ಥಿಕ ಅಭಿವೃದ್ಧಿಯನ್ನು ಕುರಿತ ಹಲವಾರು ಪುಸ್ತಕಗಳಲ್ಲಿ ನಮಗೆ ಲಭ್ಯವಾಗುತ್ತದೆ. ಡರ್ಬನ್ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪ್ರಶಸ್ತಿಯಿಂದ ಸನ್ಮಾನಿತರಾದ ದೇವಕಿ ಜೈನ್ ಹಾರ್ವರ್ಡ್ ವಿಶ್ವವಿದ್ಯಾಲಯದ ಸಂಶೋಧಕ ಪ್ರಾಧ್ಯಾಪಕರಾಗಿ, ಬಾಸ್ಟನ್ ವಿಶ್ವವಿದ್ಯಾಲಯದ ಫುಲ್‌ಬ್ರೈಟ್ ಸ್ಕಾಲರ್ ಆಗಿ ಕಾರ್ಯ ನಿರ್ವಹಿಸಿದ್ದಾರೆ. ನೊಬೆಲ್ ಪ್ರಶಸ್ತಿ ಪಡೆದ ಪ್ರೊ॥ ಗುನ್ನಾರ್ ಮಿರ್ಡಲ್‌ರವರ "The Asian Drama" ಕೃತಿಯ ರಚನೆಯ ಸಂದರ್ಭದಲ್ಲಿ ಅವರ ಸಹಾಯಕರಾಗಿ ಕಾರ್ಯ ನಿರ್ವಹಿಸಿದ್ದಾರೆ.

ಅನ್ಯಾಯ, ದೌರ್ಜನ್ಯಗಳನ್ನು ಕುರಿತಂತೆ ಚಿಂತಿಸಿ ಬರೆಯಬಲ್ಲ ಸಮಾಜ ವಿಜ್ಞಾನಿ ಮಾತ್ರ ಎಂದುಕೊಂಡಿದ್ದ ನನಗೆ ಅವರ ಮತ್ತೊಂದು ಮುಖ ಪರಿಚಯವಾದದ್ದು ಇತ್ತೀಚೆಗೆ. ಇರಾಕ್ ಮೇಲಿನ ಯುದ್ಧ ಪ್ರತಿಭಟಿಸಿ ಸಾರ್ವಜನಿಕ ಸಭೆಗಳಲ್ಲಿ, ಶಾಂತಿ ಸೌಹಾರ್ದ ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿವ ಈ ಎಪ್ಪತ್ತರ ಹರೆಯದ ಚೈತನ್ಯಶಾಲಿಯನ್ನು ಕಂಡಾಗ ಆಶ್ಚರ್ಯವಾಯಿತು. ಅಷ್ಟೇ ಅಲ್ಲ, ಸಂತೋಷವೂ ಆಯಿತು. 'ಹೊಸತು' ಪತ್ರಿಕೆಗೆ ದೇವಕಿ ಜೈನ್‌ರವರನ್ನು ಸಂದರ್ಶಿಸಬೇಕೆಂದುಕೊಂಡಿದ್ದ ನನಗೆ ಬಿಡುವಿಲ್ಲದ ಅವರ ಕಾರ್ಯಕ್ರಮಗಳಲ್ಲಿ ಅವರನ್ನು ಭೇಟಿಯಾಗುವುದು ಒಂದು ಸಾಹಸವೇ ಆಯಿತು. ಆದರೆ ಕೊನೆಗೂ ಬಿಡುವು ಮಾಡಿಕೊಂಡು ಸಂದರ್ಶನ ಕೊಟ್ಟ ಈ ಶಾಂತಚಿತ್ತೆಯೊಂದಿಗೆ ಸುದೀರ್ಘವಾದ ಹರಟೆ ಹೊಡೆದದ್ದು ಒಂದು ಮರೆಯಲಾಗದ ಅನುಭವ.

**ಹೊಸತು** : ನೀವು ಕನ್ನಡ ನೆಲದಲ್ಲಿ ಹುಟ್ಟಿ ಬೆಳೆದು ದೂರದ ದೆಹಲಿಯಲ್ಲಿ ನೆಲೆಸುವುದಕ್ಕೆ ಕಾರಣ ಏನು ?

**ದೇವಕಿ** : ನಾನು ಇಲ್ಲಿ ಬೆಂಗಳೂರಿನಲ್ಲಿ ಹುಟ್ಟಿ ಬೆಳೆದು ಮೌಂಟ್ ಕಾರ್ಮೆಲ್‌ನಲ್ಲಿ ಪದವಿ ಪಡೆದವಳು. ನಂತರ ಹೆಚ್ಚಿನ ಶಿಕ್ಷಣಕ್ಕಾಗಿ ಆಕ್ಸ್‌ಫರ್ಡ್‌ಗೆ ಹೋದೆ. ಅರ್ಥಶಾಸ್ತ್ರದ ವಿದ್ಯಾರ್ಥಿನಿ. ಆಕ್ಸ್‌ಫರ್ಡ್‌ನಿಂದ ಬಂದ ನಂತರ ದೆಹಲಿಯ ಮಿರಾಂಡ ಕಾಲೇಜಿನಲ್ಲಿ ಅರ್ಥಶಾಸ್ತ್ರ ಉಪನ್ಯಾಸಕಿಯಾಗಿ ಕೆಲಸ ಮಾಡಿದೆ. ಅಲ್ಲಿ ನಳಿನಿ ಸಿಂಗ್, ಇಂದಿರಾ ರಾಜರಾಂರವರೆಲ್ಲ ನನ್ನ ವಿದ್ಯಾರ್ಥಿಗಳಾಗಿದ್ದವರು.

**ಹೊಸತು** : ನೀವು ಎಲ್. ಸಿ. ಜೈನ್‌ರವರನ್ನು ಭೇಟಿಯಾದದ್ದು, ಮದುವೆಯಾದದ್ದು ಹೇಗೆ ?

**ದೇವಕಿ** : (ನಗುತ್ತಾ) ಓ. ಅದೊಂದು ದೊಡ್ಡ ಕತೆ. ಅವರು ನಾನು ಕೆಲಸ ಮಾಡುತ್ತಿದ್ದ ಆಫೀಸಿನಲ್ಲಿ ಬಾಸ್ ಆಗಿದ್ದರು. ಆಗ ಇಂಡಿಯನ್ ಕೋ-ಆಪರೇಟಿವ್ ಯೂನಿಯನ್ ಅಂತ ಒಂದು ಸಂಸ್ಥೆ ಇತ್ತು. ಎಲ್. ಸಿ. ಜೈನ್‌ರವರು ಅದರ ಪ್ರಧಾನ ಕಾರ್ಯದರ್ಶಿ ಮತ್ತು ಮೊದಲ ಮ್ಯಾನೇಜರ್ ಆಗಿದ್ದರು. ಕಮಲಾದೇವಿ ಚಟ್ಟೋಪಾಧ್ಯಾಯ ಅದರ ಛೇರ್‌ಪರ್ಸನ್ ಆಗಿದ್ದರು. ಪಂಡಿತ್ ನೆಹರು ಅದರ ಪೋಷಕರಾಗಿದ್ದರು. ೧೯೪೮ರ ಸುಮಾರಿನಲ್ಲಿ ಆರಂಭವಾದ ಈ ಸಂಸ್ಥೆ ಮುಖ್ಯವಾಗಿ ನಿರಾಶ್ರಿತರಿಗೆ ಪುನರ್ವಸತಿ ಕಲ್ಪಿಸುವ ಯೋಜನೆಯನ್ನು ಹಾಕಿಕೊಂಡಿತ್ತು. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ನಿರಾಶ್ರಿತರ ಪುನರ್ವಸತಿ ದೇಶದ ಮುಂದಿದ್ದ ಮುಖ್ಯ ಸವಾಲಾಗಿತ್ತು. ಆಗ ಇವರೆಲ್ಲಾ ಯುವಕರು, ದೇಶ ಕಟ್ಟುವ ಕೆಲಸದಲ್ಲಿ ಎಲ್ಲರೂ ತನ್ಮಯತೆಯಿಂದ ಕೆಲಸ ಮಾಡುತ್ತಿದ್ದರು. ನಾನು ಬ್ರಿಟನ್ನಿನಿಂದ ಹಿಂತಿರುಗಿ ಬಂದ ಮೇಲೆ ದೆಹಲಿಯಲ್ಲಿ ಇಂಡಿಯನ್ ಕೋ-ಆಪರೇಟಿವ್ ಯೂನಿಯನ್‌ನಲ್ಲಿ ರಿಸರ್ಚ್ ಅಸಿಸ್ಟೆಂಟಾಗಿ ಕೆಲಸ ಮಾಡುತ್ತಿದ್ದೆ. ದೆಹಲಿಯ ಸುತ್ತಮುತ್ತಲ ಗ್ರಾಮೀಣ ಪ್ರದೇಶಗಳಲ್ಲಿ ಸಹಕಾರಿ ಕ್ರೆಡಿಟ್ ಕುರಿತು ಸಂಶೋಧನೆ ಮಾಡುತ್ತಿದ್ದೆ. ಆಗ ಎಲ್. ಸಿ. ಜೈನ್‌ರವರು ನನ್ನ ಬಾಸ್ ಆಗಿದ್ದರು. ಅವರನ್ನು ಮೆಚ್ಚಿ, ಪ್ರೀತಿಸಿ ಮದುವೆಯಾದೆ. ನಾನು ಸಂಪ್ರದಾಯಸ್ಥ ಐಯ್ಯಂಗಾರ್ ಕುಟುಂಬದವಳು. ಅವರು ವೈಶ್ಯ ಜೈನ್. ಹೀಗಾಗಿ ಆ ಕಾಲಕ್ಕೆ ನಮ್ಮದು ಕ್ರಾಂತಿಕಾರಿ ವಿವಾಹ. ಆರಂಭದ ದಿನಗಳಲ್ಲಿ ಎರಡೂ ಕಡೆಯವರ ಬೆಂಬಲವಿಲ್ಲದೆ ಎರಡು ಚಿಕ್ಕ ಮಕ್ಕಳನ್ನು ಸಾಕುವುದು ನನಗೆ ಕಷ್ಟವೇ ಆಯಿತು. ಆಗ ಕಾಲೇಜಿನ ಕೆಲಸಕ್ಕೆ ರಾಜೀನಾಮೆ ಕೊಟ್ಟೆ.





**ಹೊಸತು** : ಕಳೆದ ಹಲವಾರು ತಿಂಗಳುಗಳಿಂದ ಕರ್ನಾಟಕದಲ್ಲಿ 'ಮಹಿಳಾ ವಿಶ್ವವಿದ್ಯಾಲಯ' ಒಂದು ಸುದ್ದಿಯ ವಿಷಯವಾಗಿದೆ. ಈ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ನಿಮ್ಮಿಂದ ಏನಾದರೂ ಸಲಹೆಗಳನ್ನು ಪಡೆದಿತ್ತೇ ?

**ದೇವಕಿ** : ಇಲ್ಲ, ಖಂಡಿತ ಇಲ್ಲ. ಇಲ್ಲಿ ಸಮಸ್ಯೆ ಎಂದರೆ ನಾನು ಬೆಂಗಳೂರಿಗೆ ಹೊಸಬಳು. ನಾನು ಬೆಂಗಳೂರಿನಲ್ಲೇ ಹುಟ್ಟಿ ಬೆಳೆದರೂ ೧೯೫೬ರಿಂದ ನಾನು ಈ ಊರಲ್ಲಿರಲಿಲ್ಲ. ಬಹಳ ಕಾಲ ಹೊರಗೇ ಇದ್ದುಬಿಟ್ಟೆ. ಈಗ ಬಂದು ಮೂರು ನಾಲ್ಕು ವರ್ಷಗಳಾಗಿವೆ. ಆದರೂ ಕರ್ನಾಟಕ ಸರ್ಕಾರದ ರಾಜ್ಯ ಯೋಜನಾ ಆಯೋಗದಲ್ಲಿ ಹತ್ತು ವರ್ಷ ಸದಸ್ಯಳಾಗಿ ಕೆಲಸ ಮಾಡಿದ್ದೀನಿ. ಈ ಸಂದರ್ಭದಲ್ಲಿ ಒಂದು ವಿಷಯ ಹೇಳಬೇಕಾದದ್ದಿದೆ. ಕರ್ನಾಟಕದಲ್ಲಿ ಮಹಿಳಾ ವಿಶ್ವವಿದ್ಯಾಲಯವು ಆರಂಭವಾಗುವ ಸುದ್ದಿಯನ್ನು ಪತ್ರಿಕೆಯಲ್ಲಿ ಓದಿದೆ. ಆ ವಿಶ್ವವಿದ್ಯಾಲಯದಲ್ಲಿ ಪಠ್ಯವಾಗಿ ಫ್ಯಾಷನ್ ಡಿಸೈನಿಂಗ್, ಹೋಂ ಸೈನ್ಸ್, ಬ್ಯೂಟಿಷಿಯನ್ ಕೋರ್ಸುಗಳನ್ನು ಕಲಿಸಲಾಗುತ್ತದೆ, ಎಂಬ ಸುದ್ದಿಯೂ ಇದರೊಂದಿಗಿತ್ತು. ಇದನ್ನು ನೋಡಿದ ತಕ್ಷಣ ನನಗೆ ಶಾಕ್ ಆಯಿತು. ಈ ವಿಷಯಗಳನ್ನು ಕಲಿಯಬಾರದೆಂತಲ್ಲ. ಆದರೆ ಮಹಿಳೆ ಅಂದ ತಕ್ಷಣ ಈ ವಿಷಯಗಳನ್ನು ಮಾತ್ರ ಅವಳಿಗೆ ಏಕೆ ಅಂಟಿಸಬೇಕು ? ಇದನ್ನು ನೋಡಿದ ತಕ್ಷಣ ನಾನು ಯುಜಿಸಿ ಮಾಜಿ ಅಧ್ಯಕ್ಷೆ ಅರ್ಮೇತಿ ದೇಸಾಯಿಗೆ ಒಂದು ಪತ್ರ ಬರೆದೆ. ಅವರು ಕರ್ನಾಟಕದ ವಿದ್ಯಾಭ್ಯಾಸದ ಟಾಸ್ಕ್‌ಫೋರ್ಸಿನಲ್ಲಿ ಸದಸ್ಯೆಯಾಗಿದ್ದಾರೆ. ಪ್ರತಿ ತಿಂಗಳು ಇಲ್ಲಿಗೆ ಬರುತ್ತಿರುತ್ತಾರೆ. ೨೦೦೩ರಲ್ಲಿ ಮಹಿಳಾ ವಿಶ್ವವಿದ್ಯಾಲಯ ಆರಂಭಿಸುತ್ತಿದ್ದೀರಿ, ಹೆಂಗಸರ ಸ್ಟೀರಿಯೋಟೈಪ್ ಪಾತ್ರಗಳನ್ನು ಮತ್ತೆ ಮತ್ತೆ ಪುನರ್‌ಸ್ಥಾಪಿಸುವಂತೆ ಯಾಕೆ ಪಠ್ಯವನ್ನು ತಯಾರಿಸಬೇಕು, ಎಂದು ಕೋಪದಿಂದ ಬರೆದಿದ್ದೆ. ನಾನು ಅರ್ಮೇತಿಯವರಿಗೆ ಬರೆದ ಕಾಗದದ ಪ್ರತಿಯನ್ನು ಕರ್ನಾಟಕದ ವಿದ್ಯಾಸಚಿವರಿಗೂ ಕೊಟ್ಟಿದ್ದೆ. ನನ್ನ ಕಾಗದ ತಲುಪಿದ ನಂತರ ಅರ್ಮೇತಿ ದೇಸಾಯಿ ಮುಖ್ಯಮಂತ್ರಿಗಳಿಗೆ, ವಿದ್ಯಾ ಸಚಿವರಿಗೆ ಮತ್ತು ಯುಜಿಸಿ ಛೇರ್‌ಪರ್ಸನ್‌ಗೆ ಅತ್ಯಂತ ಖಾರವಾಗಿ ಪತ್ರ ಬರೆದರು. ಈ ಎಲ್ಲಾ ಘಟನೆ ನಡೆದ ನಂತರ ಈಗ ಅವರು ಪಠ್ಯಕ್ರಮ ಬದಲಾಯಿಸಿ ವಿಸ್ತರಿಸಿದ್ದಾರೆ. ಅದೇ ನನಗೆ ಸಂತೋಷದ ವಿಷಯ. ಹಾಗೆಯೇ ಮುಸ್ಲಿಂ ಮಹಿಳೆಯೊಬ್ಬರನ್ನು ಉಪಕುಲಪತಿಯನ್ನಾಗಿ ಮಾಡಿರುವುದೂ ಅತ್ಯಂತ ಸ್ವಾಗತಾರ್ಹವಾದ ಕ್ರಮ.

**ಹೊಸತು** : ನೀವು ಕಳೆದ ಇಪ್ಪತ್ತು ವರ್ಷಗಳಲ್ಲಿ ನಡೆದ ಎಲ್ಲ ಅಂತರರಾಷ್ಟ್ರೀಯ ಮಹಿಳಾ ಸಮ್ಮೇಳನಗಳಲ್ಲಿ ಭಾಗವಹಿಸಿದ್ದೀರಿ. ೧೯೭೫ರ ಮೆಕ್ಸಿಕೋ ಸಮ್ಮೇಳನದಿಂದ ಹಿಡಿದು ೧೯೯೫ರ ಬೀಜಿಂಗ್ ಸಮ್ಮೇಳನದ ದೀರ್ಘವ್ಯಾಪ್ತಿಯಲ್ಲಿ ಮಹಿಳಾ ಪ್ರಶ್ನೆ ಪಡೆದ ಮಹತ್ವ ಮತ್ತು ಆ ಅವಧಿಯಲ್ಲಿ ಮಹಿಳಾ ಚಳುವಳಿ ಪಡೆದುಕೊಂಡ ಸ್ವರೂಪದಲ್ಲಿ ಬೆಳವಣಿಗೆಯಾಗಿದೆಯೆಂದು ನಿಮಗೆ ಅನಿಸುತ್ತದೆಯೇ ? ಒಟ್ಟಾರೆಯಾಗಿ ಇಂತಹ ಸಮ್ಮೇಳನಗಳು ಫಲಪ್ರದವೇ ?

**ದೇವಕಿ** : ಒಂದರ್ಥದಲ್ಲಿ ಇಂತಹ ಸಮ್ಮೇಳನಗಳು ಒಂದು ರೀತಿಯ 'ಶೋ' ಅನಿಸಬಹುದು. ಕೆಳಸ್ತರದ ಮಹಿಳೆಯರ ಸಮಸ್ಯೆಗಳ ದೃಷ್ಟಿಯಿಂದ ಇದು ನಿಜ ಕೂಡ. ಇಂತಹ ಸಮ್ಮೇಳನಗಳಿಂದ ಕಣ್ಣಿಗೆ ಕಾಣುವಂತಹ ಪರಿಣಾಮವಾಗಲೀ, ಲಾಭವಾಗಲೀ ಸಿಕ್ಕಿಲ್ಲದಿರಬಹುದು. ಭಾರತದಲ್ಲೇ ನೋಡಿ. ಹೆಣ್ಣು ಮಕ್ಕಳ ಸಮಸ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಬಡತನ, ವೇಶ್ಯಾಗಾರಿಕೆ, ದೌರ್ಜನ್ಯಗಳು ಹೆಚ್ಚು ಹೆಚ್ಚು ಕಂಡುಬರುತ್ತಿವೆ. ಇಂತಹವರ ದೃಷ್ಟಿಯಿಂದ ಅಂತರರಾಷ್ಟ್ರೀಯ ಸಭೆಗಳು ಒಂದು ದೊಡ್ಡ ಜಾತ್ರೆ, ಏನೂ ಪ್ರಯೋಜನವಿಲ್ಲದವು ಎಂದೆನಿಸಬಹುದು. ಆಗ ಅವರು ಈ ಇಪ್ಪತ್ತು ವರ್ಷಗಳಲ್ಲಿ ಏನು

ಮಾಡಿದ್ದೀರಿ, ಎಂದು ಕೇಳಬಹುದು. ಈ ಎಲ್ಲ ಅಂಶಗಳನ್ನು ವಾದಕ್ಕಾಗಿ ಒಪ್ಪಿಕೊಂಡರೂ ಅಂತರ ರಾಷ್ಟ್ರೀಯ ಸಮ್ಮೇಳನಗಳ ಧನಾತ್ಮಕ ಪರಿಣಾಮವನ್ನು ನಾನು ಮೂರು ಸ್ತರಗಳಲ್ಲಿ ಗುರುತಿಸಲು ಬಯಸುತ್ತೇನೆ. ಇಂತಹ ಸಮ್ಮೇಳನಗಳಿಂದ ಅಂತರರಾಷ್ಟ್ರೀಯ ಮಹಿಳಾ ಚಳುವಳಿ ಬೆಳೆಯುತ್ತಿದೆ. ಇಂತಹ ಸಮ್ಮೇಳನಗಳಿಗೆ ಮುಂಚೆ ಒಂದು ಹತ್ತು, ಹದಿನೈದು ಎನ್.ಜಿ.ಓ.ಗಳಿದ್ದಿರ ಬಹುದು. ಆದರೆ ೧೯೭೫ರ ಮೆಕ್ಸಿಕೊ ಸಮ್ಮೇಳನದಲ್ಲಿ ಸುಮಾರು ೮೦೦೦ ಮಹಿಳೆಯರು ಭಾಗವಹಿಸಿದ್ದರು. ಇಳಾ ಭಟ್‌ರವರನ್ನು ನಾನು ಅಲ್ಲೇ ನೋಡಿದ್ದು. ಬಡ ಮಹಿಳೆಯರನ್ನು ಸಂಘಟಿಸಿ ದುಡಿಯುತ್ತಿದ್ದ ಬೇರೆ ಮಹಿಳೆಯರನ್ನು ಅವರು ಅಲ್ಲಿ ಭೇಟಿಯಾದರು. ಇದು ಒಂದು ರೀತಿಯಲ್ಲಿ ಮಹಿಳಾ ಪ್ರಶ್ನೆಯನ್ನು, ಚಳುವಳಿಯನ್ನು ಅಂತರರಾಷ್ಟ್ರೀಯಗೊಳಿಸುವ ಕಾರ್ಯತಂತ್ರವೂ ಹೌದು.

ಈ ವಿಶ್ವ ಸಮ್ಮೇಳನಗಳಿಗೆ ಮುಂಚೆ ವಿಶ್ವಸಂಸ್ಥೆಯು ಮಹಿಳೆಯರ ಹಕ್ಕುಗಳಿಗೆ ಅಷ್ಟೊಂದು ಒತ್ತು ಕೊಟ್ಟಿದ್ದಿಲ್ಲ. ಮತದಾನದ ಹಕ್ಕುಗಳು, ಸಮಾನವೇತನ, ಗೃಹಕೃತ್ಯಕ್ಕೆ ಮಾನ್ಯತೆ – ಇಂತಹ ಬೇಡಿಕೆಗಳು ವಿಶ್ವ ಸಮ್ಮೇಳನಗಳಲ್ಲಿ ಮಹತ್ವ ಪಡೆದವು. ಇದರಲ್ಲಿ ಮತ್ತೊಂದು ಮುಖ್ಯ ಸಂಗತಿಯೆಂದರೆ ವಿಶ್ವ ಸಮ್ಮೇಳನಗಳಲ್ಲಿ ಭಾಗವಹಿಸುವ ಹಲವಾರು ದೇಶಗಳು ವಿಶ್ವಸಂಸ್ಥೆಯ ನಿರ್ಣಯಗಳಿಗೆ ಸಹಿ ಮಾಡಿ ಬಂದಿರುತ್ತಾರೆ. ಅತ್ಯಂತ ಕಟ್ಟಾ ಸಂಪ್ರದಾಯವಾದಿ ರಾಷ್ಟ್ರಗಳಾದ ಯೆಮೆನ್, ಇರಾನ್, ಟರ್ಕಿ, ಮೊರಾಕೋನಂತಹ ದೇಶಗಳಲ್ಲಿ ಅಲ್ಲಿನ ಮಹಿಳೆಯರು ಅವರ ಸರ್ಕಾರಗಳ ವಿರುದ್ಧ ಹೋರಾಟ ಮಾಡುವಾಗ ಅಂತರರಾಷ್ಟ್ರೀಯ ವೇದಿಕೆಯಲ್ಲಿ ಒಪ್ಪಿ ಸಹಿ ಮಾಡಿದ್ದನ್ನು ಅವರಿಗೆ ಜ್ಞಾಪಿಸುತ್ತಾ ಅದಕ್ಕಾಗಿ ಒತ್ತಾಯಿಸುತ್ತಾರೆ.

ಒಟ್ಟಿನಲ್ಲಿ ವಿಶ್ವ ಸಮ್ಮೇಳನಗಳಿಂದ ನೇರವಾದ, ಕಣ್ಣಿಗೆ ಕಾಣುವಂತಹ ತತ್‌ಕ್ಷಣದ ಬದಲಾವಣೆ ಕಾಣದಿದ್ದರೂ ಅಂತರರಾಷ್ಟ್ರೀಯ ನೆಲೆಯಲ್ಲಿ ಮಹಿಳಾ ಹಕ್ಕುಗಳು, ಸಮಸ್ಯೆಗಳು ಗುರುತಿಸಲ್ಪಡುವುದು ಒಂದು ಮುಖ್ಯವಾದ ಸಂಗತಿ.

**ಹೊಸತು** : ಇವತ್ತು ಮಹಿಳಾ ಚಳುವಳಿಯನ್ನು ಕುರಿತಂತೆ ಅದು ಮೇಲ್ವರ್ಗದ, ಮೇಲುಜಾತಿಯವರಿಗೆ ಸೀಮಿತವಾದ ಚಳುವಳಿ, ನಗರ ಕೇಂದ್ರಿತವಾದ ಚಳುವಳಿ ಎನ್ನುವ ಮಾತು ಕೇಳಿಬರುತ್ತಿದೆ. ಇದರ ಬಗ್ಗೆ ನಿಮಗೆ ಏನನ್ನಿಸುತ್ತದೆ ?

**ದೇವಕಿ** : ಇಲ್ಲಿ ನಾವು ಯಾವುದನ್ನು ಮಹಿಳಾ ಚಳುವಳಿ ಎಂದು ಕರೆಯುತ್ತೇವೆ, 'ಮಹಿಳಾ ಚಳುವಳಿ'ಯ ವ್ಯಾಖ್ಯಾನ ಯಾವುದು ಎನ್ನುವುದರ ಮೇಲೆ ಈ ಪ್ರಶ್ನೆಗೆ ಉತ್ತರ ಕೊಡಬಹುದು. ದೆಹಲಿಯಲ್ಲಿ ನಡೆಯುವ ಚಳುವಳಿಗಳನ್ನು, ಮಹಿಳಾ ಅಧ್ಯಯನ ಕೇಂದ್ರದ ಚಟುವಟಿಕೆಗಳನ್ನು ಮಾತ್ರ ಮಹಿಳಾ ಚಳುವಳಿ ಎಂದು ನೀವು ಕರೆಯುವುದಾದರೆ, ಆಗ ನೀವು ಹೇಳಿದ್ದು ಅದಕ್ಕೆ ಅನ್ವಯಿಸಬಹುದು. ಆದರೆ ನನ್ನ ದೃಷ್ಟಿಯಲ್ಲಿನ ಮಹಿಳಾ ಚಳುವಳಿಯೇ ಬೇರೆ. ಇಳಾ ಭಟ್‌ರವರ ಸೇವಾ ಕ್ರೆಡಿಟ್, ಮದ್ಯಪಾನದ ವಿರೋಧದ ಚಳುವಳಿಗಳು, ಆಸ್ಸಾಮಿನಲ್ಲಿ ನಡೆಯುತ್ತಿರುವ ಭೂಮಿಯ ಹಕ್ಕಿನ ಒಡೆತನದ ಚಳುವಳಿಗಳು, – ಇವೆಲ್ಲವೂ ನನ್ನ ದೃಷ್ಟಿಯಲ್ಲಿ ಮಹಿಳಾ ಚಳುವಳಿಗಳೇ. ಇಳಾ ಭಟ್‌ರವರು ಹಾದಿಬದಿಯಲ್ಲಿರುವವರನ್ನು ಸಂಘಟಿಸುತ್ತಿರಬಹುದು, ವಿಮೋಚನಾದವರು ವಧು ದಹನದ ವಿರುದ್ಧ ಹೋರಾಡುತ್ತಿರಬಹುದು, ಹಾಗೆಯೇ ಲಕ್ಷ್ಮಿ ಮೆನನ್ ೨೦೦೦ದ ವೇಳೆಗೆ ಸಂಪೂರ್ಣ ಮಹಿಳಾ ಸಾಕ್ಷರತೆ ಸಾಧಿಸಬೇಕೆಂಬ ಕನಸು ಕಂಡವರು – ಇವರೆಲ್ಲರೂ ಒಂದು ರೀತಿಯಲ್ಲಿ ಪಟ್ಟಣದವರೇ ಆದರೂ ಸಮಾಜದ ಕೆಳಸ್ತರದ ಜನರ ಬದುಕಿನ ಬವಣೆಯ ನಿವಾರಣೆಗಾಗಿ ಹೋರಾಡುವವರು. ಹಾಗಿರುವಾಗ ಮಹಿಳಾ ಚಳುವಳಿಯನ್ನು ಕೇವಲ ಮೇಲ್‌ಸ್ತರದ, ನಗರ ಪ್ರದೇಶಕ್ಕೆ ಸೀಮಿತವಾದ ಚಳುವಳಿ ಎಂದು ಕರೆಯುವುದು ಎಷ್ಟು ಸಾಧುವಾದದ್ದು? ನಾನು ಮತ್ತು ವೀಣಾ ಮಜುಂದಾರ್ ಯಾವಾಗಲೂ ಮಾತಾಡಿಕೊಳ್ಳುತ್ತಿರುತ್ತೇವೆ, ಪ್ರಜ್ಞಾಪೂರ್ವಕವಾಗಿಯೋ ಅಥವಾ ಅಪ್ರಜ್ಞಾಪೂರ್ವಕವಾಗಿಯೋ ನಮ್ಮೆಲ್ಲರ ಹೋರಾಟ ಬವಣೆಗೊಳಗಾದವರ ಪರವಾಗಿ ಹಾಗೂ ಅವಕಾಶ ವಂಚಿತರ ಪರವಾಗಿಯೇ ಇರುತ್ತದೆ. ಆದರೆ ಇವತ್ತು ನಾವೆಲ್ಲ ಗಮನಿಸಬೇಕಾದ್ದು ಅಂದರೆ, ಮಹಿಳಾ ಚಳುವಳಿ ಕೆಳ ಹಂತದಲ್ಲಿ ಜೀವಂತವಾಗಿದೆ, ಮೇಲ್‌ಸ್ತರದಲ್ಲಿ ಒಣಗಿಹೋಗಿದೆ. ನಾನು ಅಂತರರಾಷ್ಟ್ರೀಯ ಸಭೆಗಳಿಗೆ ಹೋದಾಗ ಅಲ್ಲಿನ ಯುನೈಟೆಡ್ ನೇಷನ್ಸ್, ಯೂನಿಸೆಫ್‌ನಲ್ಲಿ ಕೆಲಸ ಮಾಡುವ ಗೆಳತಿಯರು ಹೇಳುವುದುಂಟು : ಇವತ್ತಿನ ಯುವಪೀಳಿಗೆಗೆ ಮಹಿಳಾ ಚಳುವಳಿಯಲ್ಲಿ ಏನೂ ಆಸಕ್ತಿಯಿಲ್ಲ. ಏಕೆಂದರೆ ಅವರಿಗೆ ಎಲ್ಲ ಹಕ್ಕುಗಳು, ಸ್ವಾತಂತ್ರ್ಯವು ಹರಿವಾಣದಲ್ಲಿಟ್ಟು ಕೊಟ್ಟಂತಾಗಿದೆ, ಎಂದೆಲ್ಲ ಹೇಳುತ್ತಾರೆ. ಆಗ ಅವರಿಗೆ ನಾನು ಹೇಳುತ್ತೇನೆ : ನಿಮ್ಮ ಮಕ್ಕಳನ್ನು ನೀವು ಆಕ್ಸ್‌ಫರ್ಡ್, ಹಾರ್ವರ್ಡ್ ವಿಶ್ವವಿದ್ಯಾಲಯಕ್ಕೆ ಕಳಿಸೋದ್ರಿಂದ ಈ ಮಾತು ಹೇಳಬಹುದು. ಆದರೆ ಭಾರತದಲ್ಲಿನ ಸ್ಥಿತಿಯೇ ಬೇರೆ. ಮಧುರೈನ ದಲಿತ ಹುಡುಗಿಯರು ತಾವು ಶಾಲೆಗೆ, ಕಾಲೇಜಿಗೆ ಹೋಗುವ ಹಕ್ಕಿಗಾಗಿ ಹೋರಾಡಬೇಕಾಗುತ್ತೆ. ಆ್ಯಸಿಡ್ ಸಿಡಿಸಿಕೊಂಡ ಮುಸ್ಲಿಂ ಮಹಿಳೆಯು ತನಗಾದ ಅನ್ಯಾಯಕ್ಕಾಗಿ ಹೋರಾಡಬೇಕಾಗುತ್ತೆ. ಆದ್ದರಿಂದ ಯಾರಿಗೆ ಅನ್ಯಾಯವಾಗಿದೆಯೋ, ಯಾರು ಅವಕಾಶ ವಂಚಿತರೋ ಅವರು



ಮಹಿಳಾ ಚಳುವಳಿಯ ನೇತೃತ್ವ ವಹಿಸುತ್ತಾರೆ; ಚಳುವಳಿಯನ್ನು ಮುಂದಕ್ಕೆ ಒಯ್ಯುತ್ತಾರೆ. ಮಹಿಳಾ ಚಳುವಳಿಯನ್ನು ವಿಶಾಲವಾದ ಅರ್ಥದಲ್ಲಿ ವ್ಯಾಖ್ಯಾನಿಸುವುದು ಮುಖ್ಯ.

**ಹೊಸತು** : ಸಮಾನ ಸಿವಿಲ್ ಸಂಹಿತೆಯ ಅಗತ್ಯವನ್ನು ಕುರಿತಂತೆ ಹಲವಾರು ಭಿನ್ನಾಭಿಪ್ರಾಯಗಳಿವೆ. ಇದರ ಬಗ್ಗೆ ನಿಮಗೇನನ್ನಿಸತ್ತೆ ?

**ದೇವಕಿ** : ನಾನು ಸಮಾನ ಸಿವಿಲ್ ಸಂಹಿತೆ ಅಗತ್ಯವಾದುದು ಎಂದು ನಂಬಿದವಳು. ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಭಾರತೀಯ ಸ್ವಾತಂತ್ರ್ಯ ಹೋರಾಟ ಕುರಿತಂತೆ ಪುಸ್ತಕ ಬರೆದಿದ್ದಾರೆ. ಅದರಲ್ಲಿ ಅವರೂ ಸಮಾನ ಸಿವಿಲ್ ಸಂಹಿತೆ ಬೇಕೆಂದು ಆ ಕಾಲದಲ್ಲೇ ನಂಬಿ ಹೋರಾಟ ಮಾಡಿದವರು. ಸಾಂಸ್ಕೃತಿಕ, ಧಾರ್ಮಿಕ ವೈಶಿಷ್ಟ್ಯತೆ ಉಳಿಸಿಕೊಳ್ಳಬೇಕು, ಎಂದು ಹೇಳುತ್ತಾ ಮಾನವ ಹಕ್ಕುಗಳಿಗೆ ಧಕ್ಕೆಯಾದಾಗ ಸುಮ್ಮನೆ ನೋಡಿಕೊಂಡಿರಲಾಗದು. ಭಾರತದಲ್ಲಿ ಮಾತ್ರ ಅಲ್ಲ, ವಿಶ್ವದ ಯಾವುದೇ ಭಾಗದಲ್ಲಾದರೂ ಎಲ್ಲರಿಗೂ ಅನ್ವಯಿಸುವಂತಹ ಸಮಾನ ಸಂಹಿತೆ ಬೇಕೆಂದು ನಾನು ಪ್ರತಿಪಾದಿಸುತ್ತೇನೆ. ಹಾಗೆಂದಾಗ ಇದನ್ನು ಪಾಶ್ಚಾತ್ಯೀಕರಣದ ಹೇರುವಿಕೆ ಎಂದು ಕರೆಯಬಹುದು. ಏನಾದರೂ ಕರೆಯಲಿ, ಸಮಾನ ಸಿವಿಲ್ ಸಂಹಿತೆ ವಿಶೇಷವಾಗಿ ಮಹಿಳೆಯರ ಹಿತಕ್ಕಾಗಿ ಬೇಕು. ಶಾ ಬಾನೋ ಪ್ರಕರಣದಲ್ಲಿ ಏನಾಯಿತು ? ಮಾರ್ಗರೇಟ್ ಆಳ್ವ ಕೂಡ ಮುಸ್ಲಿಂ ಮಹಿಳೆಯರ ಪರವಾಗಿ ನಿಲ್ಲುವುದಕ್ಕಿಂತ ಮುಲ್ಲಾಗಳನ್ನು ಮತ್ತು ಮುಸ್ಲಿಂ ನಾಯಕರನ್ನು ಬೆಂಬಲಿಸಿದರು. ಅದೂ ಶರೀಯತ್ ರಕ್ಷಣೆಯ ಹೆಸರಿನಲ್ಲಿ. ಇಂತಹ ವೈಪರೀತ್ಯಗಳು ಇಲ್ಲವಾಗಬೇಕಾದರೆ ಸಮಾನ ನಾಗರಿಕ ಸಂಹಿತೆ ಅಗತ್ಯವಾಗಿ ಬೇಕು.

**ಹೊಸತು** : ರಾಜಕೀಯ ಮೀಸಲಾತಿಯಿಂದ ಮಹಿಳೆಯರು ಆಡಳಿತಾತ್ಮಕವಾಗಿ ಕ್ರಿಯಾಶೀಲವಾಗುವ ಸಾಧ್ಯತೆಗಳು ಹೆಚ್ಚುತ್ತವೆಯೆಂದು ನಿಮಗನಿಸುತ್ತದೆಯೇ ?

**ದೇವಕಿ :** ಸಂವಿಧಾನದ ತಿದ್ದುಪಡಿಯಿಂದ ಕೆಳಸ್ತರದ ಚುನಾವಣೆಗಳಲ್ಲಿ ಮಹಿಳೆಯರಿಗೆ ಸಿಕ್ಕಿದ ಪ್ರಾತಿನಿಧ್ಯ ಬಹಳಷ್ಟು ಸಾಧನೆಗೆ ಕಾರಣವಾಗಿದೆ. ತಂದೆಯ/ಗಂಡಂದಿರ ಪ್ರಭಾವದಿಂದ ಹೊರ ಬರಲಾಗದ ಮಹಿಳೆಯರು ಶೇಕಡ ೫೦ರಷ್ಟು ಇದ್ದರೂ ಕೂಡ ಉಳಿದ ಮಹಿಳೆಯರು ಪಂಚಾಯತ್ ಚುನಾವಣೆಗಳಲ್ಲಿ ಮಹತ್ವದ್ದನ್ನು ಸಾಧಿಸಿದ್ದಾರೆ. ಈ ಮಹಿಳಾ ಮೀಸಲಾತಿಗೆ ಮುಂಚೆ ಪುರುಷರೆಲ್ಲಾ ಅಂದುಕೊಂಡಿದ್ದರು : ಚುನಾವಣೆಗೆ ನಿಂತುಕೊಳ್ಳೋದಿಕ್ಕೆ ಅಷ್ಟೊಂದು ಸಂಖ್ಯೆಯಲ್ಲಿ ಮಹಿಳೆಯರೆಲ್ಲಿ ಮುಂದೆ ಬರುತ್ತಾರೆ, ಎಂದು. ಈ ಸಂದರ್ಭದಲ್ಲಿ ನನಗೊಂದು ಸಂಗತಿ ನೆನಪಿಗೆ ಬರುತ್ತಿದೆ. ಜನತಾ ಸರ್ಕಾರದ ಕಾಲ. ಈ ಸಂವಿಧಾನ ತಿದ್ದುಪಡಿ ಆಗುವುದಕ್ಕೆ ಮುಂಚೆ, ಒಮ್ಮೆ ಏನಾಯ್ತೆಂದರೆ, ನಾನು ಮತ್ತು ಪ್ರಮೀಳಾ ದಂಡವತೆ ಇಬ್ಬರೂ ಆಗಿನ ಕೇಂದ್ರ ಸಚಿವರಾಗಿದ್ದ ಬಾಬು ಜಗಜೀವನರಾಂರವರನ್ನು ಭೇಟಿ ಮಾಡಿ 'ಬಾಬೂಜಿ ಮಹಿಳೆಯರಿಗೆ ಚುನಾವಣೆಗೆ ಸ್ಪರ್ಧಿಸಲು ಟಿಕೆಟ್ ಕೊಡಿ' ಎಂದು ಕೇಳಿದೆವು. ಅವರು 'ಟಿಕೆಟ್ ಕೊಡೋದಕ್ಕೆ ಅಷ್ಟೊಂದು ಸಂಖ್ಯೆಯಲ್ಲಿ ಮಹಿಳೆಯರು ಎಲ್ಲಿ ಇದಾರೆ ? ಮಹಿಳೆಯರು ಮನೆ ಬಿಟ್ಟು ಹೊರಗೆ ಬರಲ್ಲ, ಸಂಜೆಯ, ನಂತರ ಸಭೆಗೆ ಬರಲ್ಲ' – ಅಂತ ನೆಪಗಳನ್ನು ಹೇಳಿದರು. ನಾವಾದರೋ ನೂರು ಮಹಿಳೆಯರ ಪಟ್ಟಿಯನ್ನು ಸಿದ್ಧಮಾಡಿಕೊಂಡು ಹೋಗಿದ್ವಿ. ನಮ್ಮ ಮಾತಿಗೇನೂ ಆಗ ಪುರಸ್ಕಾರ ಸಿಗಲಿಲ್ಲ. ಆದರೂ ನಂತರದ ದಿನಗಳಲ್ಲಿ ನಡೆದ ಚುನಾವಣೆಗಳಲ್ಲಿ ಮಹಿಳೆಯರು ರಾಜಕೀಯಕ್ಕೆ ಬರಲ್ಲ ಎನ್ನುವ ಮಿಥ್‌ನ್ನು ಅವರೇ ಮುರಿದುಹಾಕಿದರು. ಅದ್ಭುತ ಸಾಧನೆಯನ್ನು ಮಾಡಿ ತೋರಿಸಿದಾರೆ.

ಆದರೆ ಅಕೆಡೆಮಿಕ್ ವಲಯದಲ್ಲಿ, ಕಾರ್ಪೊರೇಟ್ ಕ್ಷೇತ್ರದಲ್ಲಿ ಮೀಸಲಾತಿಯ ಬೇಡಿಕೆ ನನಗೆ ಅಷ್ಟೊಂದು ಸರಿ ಅಂತ ಅನ್ನಿಸುವುದಿಲ್ಲ. ಸಮಾನರಾಗಿದ್ದೇವೆ, ಎನ್ನುವ ಭಾವನೆಯನ್ನು ಮೀಸಲಾತಿ ನಾಶಮಾಡುತ್ತದೇನೋ ಎಂದು ಒಮ್ಮೊಮ್ಮೆ ಅನಿಸುತ್ತದೆ. ಕೀಳರಿಮೆಯನ್ನು ಹುಟ್ಟುಹಾಕಬಹುದು ಅಂತ ಅನ್ನಿಸತ್ತೆ.

ಪಂಚಾಯತ್ ಚುನಾವಣೆಯಲ್ಲಿ ಮಹಿಳಾ ಮೀಸಲಾತಿಯಿಂದಾಗಿರುವ ಸಾಧನೆಯನ್ನು ನಾನು ಒಪ್ಪಿದರೂ ಪಾರ್ಲಿಮೆಂಟ್, ಶಾಸನಸಭೆಯಲ್ಲಿನ ಮೀಸಲಾತಿಯನ್ನು ನಾನು ಒಪ್ಪುವುದಿಲ್ಲ. ಮುಂಚೆ ನಾನೂ ಅದನ್ನು ಬೆಂಬಲಿಸಿ ಸಾಕಷ್ಟು ಬರೆದಿದ್ದೆ. ಮಹಿಳಾ ಚಳುವಳಿಗಾರರಲ್ಲಿಯೇ ಈ ವಿಷಯ ಕುರಿತಂತೆ ಭಿನ್ನಾಭಿಪ್ರಾಯಗಳಿವೆ. ಮಧು ಕಿಶ್ವರ್ ಮತ್ತು ಉಳಿದವರು ಹೇಳುವಂತೆ ಪಾರ್ಲಿಮೆಂಟಿಗೆ ಸಂಬಂಧಿಸಿದ ಪ್ರಾತಿನಿಧ್ಯ ಕಾಯಿದೆಯೊಂದು ಜಾರಿಗೆ ಬರುವುದನ್ನು ನಾನು ಬೆಂಬಲಿಸುತ್ತೇನೆ. ಅಂದರೆ ಪಕ್ಷಗಳೇ ಮೀಸಲಾತಿಯನ್ನು ನೀಡಬೇಕು. ಇಲ್ಲದಿದ್ದರೆ ಅಂತಹ ಪಕ್ಷಗಳು ಚುನಾವಣೆಗೆ ಸ್ಪರ್ಧಿಸುವುದಕ್ಕೆ ಅನರ್ಹವಾಗುತ್ತವೆ ಎಂದು ಕಾನೂನು ಮಾಡಬೇಕು. ಇತ್ತೀಚೆಗೆ ನಾನು ಅಂತರರಾಷ್ಟ್ರೀಯ ಪಾರ್ಲಿಮೆಂಟರಿ ಯೂನಿಯನ್‌ನ ವರದಿಯನ್ನು ಓದುತ್ತಿದ್ದೆ. ಅದರಲ್ಲಿ ಮಹಿಳೆಯರನ್ನು ರಾಜಕೀಯಕ್ಕೆ ಹೇಗೆ ತರಬೇಕು ಎನ್ನುವುದನ್ನು ಕುರಿತಂತೆ ಮುನ್ನೂರು ನಲವತ್ತು ಅನುಭವಗಳನ್ನು ಚರ್ಚಿಸುತ್ತಾರೆ. ಪಕ್ಷಗಳಿಗೆ ಮೀಸಲಾತಿ ಕಡ್ಡಾಯವಾಗಿ ಕೊಡಬೇಕು ಎನ್ನುವ ಕಾಯಿದೆ ಹೆಚ್ಚು ಸತ್ವಯುತವಾಗಿ ಮಹಿಳೆಯರು ರಾಜಕೀಯಕ್ಕೆ ಬರಲು ಸಾಧ್ಯ ಎಂಬ ಉದಾಹರಣೆಯನ್ನು ಬ್ರಿಟನ್‌ನ ಚುನಾವಣೆ ನೋಡಿದಾಗ ಗೊತ್ತಾಗುತ್ತೆ. ಹಿಂದಿನ ಚುನಾವಣೆಯಲ್ಲಿ ಅಲ್ಲಿ ಹತ್ತು ಮಹಿಳೆಯರಿದ್ದವರು ಮೀಸಲಾತಿಯ ನಂತರ ನೂರು ಮಂದಿ ಆಗಿದ್ದಾರೆ.

* * *

ಸುಮಾರು ಎರಡು ಗಂಟೆಗಳ ಮಾತುಕತೆಯ ನಂತರವೂ ಕೊಂಚವೂ ದಣಿವರಿಯದೆ ಮಾತನಾಡುತ್ತಿದ್ದ ದೇವಕಿ ಜೈನ್‌ರವರ ಉತ್ಸಾಹವನ್ನು ಕಂಡು ಬೆರಗಾದೆ. ಅಂತೂ ಮಾತಿಗೆ ಇತಿಶ್ರೀ ಹಾಡಿ ಅವರ ಮನೆಯನ್ನು ಬಿಟ್ಟು ಹೊರಬಂದಾಗ ಮನಸ್ಸು ಅವರ ಮಾತನ್ನು ಮೆಲುಕು ಹಾಕುತ್ತಿತ್ತು. "ಜ್ಞಾನ ಒಂದು ಶಕ್ತಿ. ಆ ಶಕ್ತಿ ಒಂದು ಅಸ್ತ್ರವಷ್ಟೇ. ಅದನ್ನು ಬಳಸಿಕೊಂಡು ಹೋರಾಟ ಮಾಡಬೇಕು. ಮಹಿಳಾ ಅಧ್ಯಯನಗಳು, ಸಮ್ಮೇಳನಗಳು ಇಂತಹ ಶಕ್ತಿಯ ಉತ್ಪಾದಕ ತಾಣಗಳಾಗಬೇಕು. ಅಧ್ಯಯನ ಮತ್ತು ಕ್ರಿಯೆ ಒಟ್ಟಾಗಿ ಸೇರಿದರೆ ಮಾತ್ರ ಮಹಿಳಾ ಚಳುವಳಿಗೆ ಅರ್ಥ ಬರುತ್ತದೆ" ಎಂಬ ಮಾತುಗಳು ಮಹಿಳಾ ಹೋರಾಟದ ಹಾದಿಯಲ್ಲಿ ಮಾರ್ಗದರ್ಶಕವಾದುವು.

**ಡಾ|| ಎನ್. ಗಾಯತ್ರಿ**
ನಂ. ೧೦೮, 'ಸ್ಕೈಲೈನ್ ಸುರಭಿ' ೧೪ಪಿ
ವಿದ್ಯಾಪೀಠ ರಸ್ತೆ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫




# ನವಕರ್ನಾಟಕ ಪ್ರಕಾಶನದ ಕೆಲವು ಪ್ರಶಸ್ತಿ ಪುರಸ್ಕೃತ ಕೃತಿಗಳು

ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (5ನೇ ಮುದ್ರಣ) — ಡಾ|| ಎಸ್. ಬಾಲಚಂದ್ರರಾವ್ — 28.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1988-89)**

ವೈಜ್ಞಾನಿಕ ಮನೋಧರ್ಮ (6ನೇ ಮುದ್ರಣ) — ಜಿ. ಟಿ. ನಾರಾಯಣ ರಾವ್ — 80.00
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ 1990; ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1992)**

ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು (3ನೇ ಮುದ್ರಣ) — ಎನ್. ಪಿ. ಶಂಕರನಾರಾಯಣ ರಾವ್ — 60.00
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ 1991)**

ಪ್ರೀತಿಯ ಗುಟ್ಟು (3ನೇ ಮುದ್ರಣ) **(ಕನ್ನಡ ಸಾಹಿತ್ಯ ಪರಿಷತ್ತಿನ 'ಮಕ್ಕಳ ಪುಸ್ತಕ ಪ್ರಶಸ್ತಿ' 1992)** — ಪ. ರಾಮಕೃಷ್ಣ ಶಾಸ್ತ್ರಿ — 12.00

ಮಹಿಳೆ-ಬಿಡುಗಡೆಯ ಹಾದಿಯಲ್ಲಿ (3ನೇ ಮುದ್ರಣ) — ಎನ್. ಗಾಯತ್ರಿ — 55.00
**(ಬಿ.ಎಂ.ಶ್ರೀ. ಪ್ರತಿಷ್ಠಾನದ 'ಸಾವಿತ್ರಮ್ಮ ದತ್ತಿನಿಧಿ' ಪ್ರಶಸ್ತಿ 1992)**

ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ (5ನೇ ಮುದ್ರಣ)
**(ವರ್ಧಮಾನ ಪ್ರಶಸ್ತಿ 1993)** — ಡಾ|| ಮೀನಗುಂಡಿ ಸುಬ್ರಮಣ್ಯ — 160.00

ಬಳ್ಳಿ ತರಕಾರಿಗಳು (4ನೇ ಮುದ್ರಣ) — ಡಾ|| ಪಿ. ನಾರಾಯಣಸ್ವಾಮಿ, ಡಾ|| ಎಲ್. ವಸಂತ — 18.00
**(ಧಾರವಾಡ ಕೃಷಿ ವಿ.ವಿ. ಕನ್ನಡ ಸಂಘದ ಪಂಚವಾರ್ಷಿಕ 'ಕೃಷಿ ಸಾಹಿತ್ಯ ಶ್ರೀ' ಪ್ರಶಸ್ತಿ 1994-99)**

ಶಬ್ದಲೋಕ (5ನೇ ಮುದ್ರಣ) (ಎನ್.ಸಿ.ಇ.ಆರ್.ಟಿ. ಪ್ರಶಸ್ತಿ 1996) — ಗಾಯತ್ರಿ ಮೂರ್ತಿ — 25.00

ಮನೋರೋಗ ಗೆಲ್ಲಬಹುದೇ ?(ಮನೋರೋಗಿಯ ಆತ್ಮಕಥೆ. 2ನೇ ಮುದ್ರಣ) — ಸ್ನೇಹಾ — 75.00
**(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1996; ಕರ್ನಾಟಕ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1996)**

ಚಕ್ರ (ಜನಪ್ರಿಯ ವಿಜ್ಞಾನ ಲೇಖನಗಳು. 3ನೇ ಮು.) **(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1996)** — ಜೆ. ಆರ್. ಲಕ್ಷ್ಮಣ ರಾವ್ — 50.00

ಕುಂಭಕರ್ಣನ ನಿದ್ದೆ **(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1996-97)** — ಎನ್. ಶ್ರೀನಿವಾಸ ಉಡುಪ — 12.00

ಕ್ಯಾನ್ಸರ್ ಲೋಕ (2ನೇ ಮು.) **(ಕನ್ನಡ ವೈದ್ಯಸಾಹಿತ್ಯ ಪರಿಷತ್ತಿನ 'ಕುವೆಂಪು ಪ್ರಶಸ್ತಿ' 1997)** — ಡಾ|| ಎಚ್. ಡಿ. ಚಂದ್ರಪ್ಪಗೌಡ — 65.00

ಭಗವದ್ಗೀತೆ. ಒಂದು ವೈಚಾರಿಕ ಒಳನೋಟ (2ನೇ ಮುದ್ರಣ) — ಪ್ರೊ|| ಬಿ. ವಿ. ವೀರಭದ್ರಪ್ಪ — 50.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1997)**

ಶ್ರೀ ಸಾಮಾನ್ಯ ಮತ್ತು ವೈದ್ಯ — ಡಾ|| ಸ. ಜ. ನಾಗಲೋಟಿಮಠ — 18.00
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998; ಕನ್ನಡ ವೈದ್ಯಸಾಹಿತ್ಯ ಪರಿಷತ್ತಿನ 'ಕುವೆಂಪು ಪ್ರಶಸ್ತಿ' 1998)**

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ (4 ಸಂಪುಟಗಳ ಸೆಟ್. 2ನೇ ಮು.) — (ಪ್ರ. ಸಂ. :ಎಂ. ಎ. ಸೇತುರಾವ್, ಕೆ.ಎಲ್. ಗೋಪಾಲಕೃಷ್ಣ ರಾವ್) — 1800.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1998)**
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 2000)**

ಪ್ರಾಚೀನ ಭಾರತ (3ನೇ ಮುದ್ರಣ) — ಅನು : ಎನ್. ಪಿ. ಶಂಕರನಾರಾಯಣ ರಾವ್ — 160.00
**(ಉತ್ತಮ ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998)**
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998)**

ಪ್ರತಿಬಿಂಬ (ಮಕ್ಕಳಿಗಾಗಿ ಮನೋರಂಜಕ ವೈಜ್ಞಾನಿಕ ಚಟುವಟಿಕೆಗಳು) — ಪ್ರೊ|| ಡಿ. ಆರ್. ಬಳೂರಗಿ — 35.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999)**

ಕಲಾವಿದ ಹೆಬ್ಬಾರರ ರೇಖಾಲಾವಣ್ಯ — ವ್ಯಾಸರಾಯ ಬಲ್ಲಾಳ — 80.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999)**

ನೀವು ಬಳಸುವ ಔಷಧಗಳು (3ನೇ ಮುದ್ರಣ) — ಡಾ|| ಸಿ. ಆರ್. ಚಂದ್ರಶೇಖರ್ — 75.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2000)**

ಫಲಜ್ಯೋತಿಷ ನಂಬುವಿರಾ ? — ಡಾ|| ಎಸ್. ಬಾಲಚಂದ್ರರಾವ್ — 40.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 2000)**

ಯಶವಂತನ ಯಶೋಗೀತ (ಮಕ್ಕಳ ಕಾದಂಬರಿ) — ಆರ್. ವಿ. ಭಂಡಾರಿ — 50.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಸಿಸು ಸಂಗಮೇಶ' ಪ್ರಶಸ್ತಿ 2002; ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2002)**

ತೆಂಗು. ಸಸ್ಯ-ಸಂರಕ್ಷಣೆ (2ನೇ ಮುದ್ರಣ) **(ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಪ್ರಶಸ್ತಿ)** — ಬಿ. ಮಹಂತೇಶ್ — 50.00

ಮಡದಿ ಮತ್ತೊಬ್ಬ ಚೆಲುವಗೆ — ಡಾ|| ಮೀನಗುಂಡಿ ಸುಬ್ರಮಣ್ಯ — 50.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ವಿಶೇಷ ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)**

ಹಿತ-ಅಹಿತ. ವೃತ್ತಿ ಜೀವನದ 25 ವರ್ಷಗಳು — ಡಾ|| ಸಿ. ಆರ್. ಚಂದ್ರಶೇಖರ್ — 125.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಹಾ.ಮಾ.ನಾ. ಪ್ರಶಸ್ತಿ' 2002)**

ನನಗೆ 'ಬೈ-ಪಾಸ್' ಆಯಿತು (ಸ್ವಾನುಭವದ ಕಥನ) — ಡಾ|| ಎಚ್. ಡಿ. ಚಂದ್ರಪ್ಪಗೌಡ — 65.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)**

ಜಾಗತೀಕರಣ. ದಕ್ಷಿಣದ ದೃಷ್ಟಿಯಲ್ಲಿ **(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2002)** — ಮ. ಮಹೇಶನ್ — 95.00

ಮುಂಬೈ ಡೈರಿ **(ಕನ್ನಡ ಸಾಹಿತ್ಯ ಪರಿಷತ್ತಿನ ಅಂತರರಾಷ್ಟ್ರೀಯ ಮಹಿಳಾ ವರ್ಷ ಪ್ರಶಸ್ತಿ 2002)** — ಉಮಾ ರಾವ್ — 60.00

ಅಂಡಮಾನ್ ಕನಸು **(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2002)** — ಡಾ|| ರಹಮತ್ ತರೀಕೆರೆ — 60.00

ಬೇಡಿ ಕಳಚಿತು ದೇಶ ಒಡೆಯಿತು (ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ ರೋಮಾಂಚನಕಾರಿ ಬೃಹತ್ ಕಾದಂಬರಿ)
**(ಉಗ್ರಾಣ ಪ್ರಶಸ್ತಿ 2003)** — ಕೋ. ಚೆನ್ನಬಸಪ್ಪ — 600.00

**ಹೊಸತು** ಮೂರು ವರ್ಷದ ಚಂದಾದಾರರಿಗೆ 20% ರಿಯಾಯಿತಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್,11, ಕ್ರೆಸೆಂಟ್ ರಸ್ತೆ, ಅಂಚೆಪೆಟ್ಟಿಗೆ 5159
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001

# ವಿಶೇಷಾಂಕದ ಜಾಹಿರಾತುದಾರರು

**HOSATHU** Kannada Monthly / January 2004 Rs.25
RNI Regn. No. KARKAN/1999/614 REGD. CPMG / KA / BGE-7 / 2003-05 Licenced to post without prepayment. Licence No. WPP-14



Printed by R.S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna